# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಸಭಾಪರ್ವ
ವನಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೩

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 3**

*ಮುದ್ರಕರು:*

**ಭಾರತ ದರ್ಶನ ಮುದ್ರಣಾಲಯ**

163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ॥ ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್, M.A. B.Com., B.L.,
ಕೋಶಾಧ್ಯಕ್ಷರು

## ವಿನಮ್ರವಚನಗಳು

ಗುರುಭಗವಂತನ ಅನುಗ್ರಹದಿಂದಲೂ, ಭಗವಂತನ ಕೃಪೆಯಿಂದಲೂ, ಸತ್ಪುರುಷರ ಸಹಕಾರದಿಂದಲೂ ಈ ಮೂರನೆಯ ಸಂಪುಟವನ್ನು ವಾಚಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ. ನಾಲ್ಕು ತಿಂಗಳೊಳಗಾಗಿ ಈ ಸಂಪುಟವನ್ನು ಹೊರತರಬೇಕೆಂಬ ಆಶಯವಿದ್ದಿತು. ವಿದ್ಯುಚ್ಛಕ್ತಿಯ ತೊಂದರೆಯಿಂದಾಗಿ ಸ್ವಲ್ಪ ಸಾವಕಾಶವಾಯಿತು. ಈ ಸಂಪುಟದಲ್ಲಿ ಆದಿಪರ್ವವು ಮುಗಿದು, ಸಭಾಪರ್ವದಲ್ಲಿ ಅರುವತ್ತು ಅಧ್ಯಾಯಗಳು ಮುಗಿದಿವೆ. ದ್ಯೂತವು ಆರಂಭವಾಗಿದೆ.

ನಾವು ಮಧ್ಯ-ಮಧ್ಯದಲ್ಲಿ ಉಪಯುಕ್ತವಾದ ಶ್ಲೋಕಗಳನ್ನು ಕೊಡುತ್ತಿರುವುದಕ್ಕೆ ಅನೇಕರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿರುತ್ತಾರೆ. ಸಂಪಾದಕರ ಟೀಕೆಯ ವಿಷಯವಾಗಿ ಬೇಕೆನ್ನುವವರೂ ಇದ್ದಾರೆ; ಬೇಡವೆನ್ನುವವರೂ ಇದ್ದಾರೆ. ಅತ್ಯವಶ್ಯವೆನಿಸಿದ ಕಡೆಗಳಲ್ಲಿ ಮಾತ್ರ ಎರಡು ಮಾತುಗಳನ್ನು ಸಂದರ್ಭಾನುಸಾರವಾಗಿ ಬರೆಯಲಾಗುತ್ತಿದೆ. ವಿಶೇಷ ವಿಷಯಗಳನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

ಕಾಗದದ ಬೆಲೆಯು ದಿನ-ದಿನಕ್ಕೂ ಏರುತ್ತಿದೆ. ಮೊದಲನೆಯ ಸಂಪುಟದಿಂದ ಮೂರನೆಯ ಸಂಪುಟದ ವೇಳೆಗೆ ರೀಮಿಗೆ ಐದು ರೂ.ಗಳು ಹೆಚ್ಚಾಗಿದೆ. ಇದರ ಜೊತೆಗೆ ಉತ್ಪನ್ನದ ಬೆಲೆ (Production Cost) ಹೆಚ್ಚುತ್ತಿದೆ. ಆದರೂ ಸಹ ಸದ್ಯದಲ್ಲಿ ಬೆಲೆಯನ್ನು ಹೆಚ್ಚಿಸಕೂಡದೆಂದು ನಿರ್ಧರಿಸಲಾಗಿದೆ.

ದ್ವಿತೀಯಸಂಪುಟದ ಪ್ರಕಾಶನಸಮಾರಂಭವು ವಿದ್ವಾನ್ ಎನ್.ಎಸ್. ಅನಂತರಂಗಾಚಾರ್ಯರ ಅಧ್ಯಕ್ಷತೆಯಲ್ಲಿ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ೧೪-೧-೧೯೭೩ರಂದು ನಡೆಯಿತು. ನಮ್ಮ ಸಂಸ್ಥೆಯ ಅಧ್ಯಕ್ಷರಾದ ವಿದ್ವಾನ್ ವರದದೇಶಿಕಾಚಾರ್ಯರಂಗಪ್ರಿಯರೂ ಮತ್ತು ಮಹಾಭಾರತದ ಅರ್ಥಾತ್ ಭಾರತ ದರ್ಶನದ ಜನ್ಮಕ್ಕೆ ಕಾರಣರಾದ ಮತ್ತು 'ವಿಕ್ರಮ' ಪತ್ರಿಕೆಯ ಸಂಪಾದಕರಾದ ಶ್ರೀ ಸು.ನಾ. ಮಲ್ಯರೂ ಉತ್ಸವದಲ್ಲಿ ಭಾಗವಹಿಸಿ ಸಮಾರಂಭವು ಯಶಸ್ವಿಯಾಗಿ ನಡೆಯಲು ಸಹಕರಿಸಿದರು.

೧೦-೨-೧೯೭೩ರಂದು ಶಿವಮೊಗ್ಗೆಯಲ್ಲಿ ಶೃಂಗೇರಿಯ ಶಾರದಾಪೀಠಾಧಿಪತಿಗಳಾದ ಪರಮಹಂಸಪರಿವ್ರಾಜಕಾಚಾರ್ಯ ಶ್ರೀ ಶ್ರೀ ಜಗದ್ಗುರು ಶ್ರೀಮದಭಿನವವಿದ್ಯಾತೀರ್ಥಸ್ವಾಮಿಗಳವರ ದಿವ್ಯಸನ್ನಿಧಾನದಲ್ಲಿ ದ್ವಿತೀಯಸಂಪುಟದ ಪ್ರಕಾಶನವಾಯಿತು. ಜಗದ್ಗುರುಗಳವರು ಅನುಗ್ರಹ ಭಾಷಣದಲ್ಲಿ ಮಹಾಭಾರತದ ಮಹತ್ತ್ವವನ್ನು ವಿವರಿಸಿ ಹೇಳಿದರಲ್ಲದೇ- ಈ ಸಂಪುಟಗಳನ್ನು ಕೊಂಡು ಮಹಾಜನರು ಪ್ರೋತ್ಸಾಹಿಸಬೇಕೆಂದೂ

ಅರ್ಪಣೆಕೊಡಿಸಿದರು. ಜಗದ್ಗುರುಗಳ ಮಹತ್ತ್ವಪೂರಿತ ವಾಣಿಯ ಪರಿಣಾಮವಾಗಿ ಇನ್ನೂರಕ್ಕೂ ಹೆಚ್ಚು ಮಂದಿ ಸ್ಥಳದಲ್ಲಿಯೇ ಗ್ರಾಹಕರಾದರು. ಈ ಉತ್ಸವಸಮಾರಂಭವು ಯಶಸ್ವಿಯಾಗಲು ಹಾಸನದ ವಕೀಲರಾದ ಶ್ರೀ ಸಿ.ಎಸ್. ಕೃಷ್ಣಪ್ಪನವರೂ, ಪ್ರೊ॥ ಕೆ. ಮಂಜುನಾಥಯ್ಯನವರೂ, ವಿದ್ವಾನ್ ಟಿ. ನಾರಾಯಣಶಾಸ್ತ್ರಿಗಳೂ ಮತ್ತು ಶ್ರೀ ಶಿವಶಂಕರಮೂರ್ತಿಯವರೂ ಬಹುವಾಗಿ ಶ್ರಮಿಸಿದರು.

ಶ್ರೀರಾಮಚಂದ್ರಾಪುರಮಠದ ಪರಮಹಂಸಪರಿವ್ರಾಜಕಾಚಾರ್ಯ ಶ್ರೀ ಶ್ರೀ ಜಗದ್ಗುರು ಶ್ರೀರಾಘವೇಂದ್ರಭಾರತೀಸ್ವಾಮಿಗಳೂ ಸಹ ತಮ್ಮ ಶಿಷ್ಯವರ್ಗದವರೆಲ್ಲರೂ ಈ ಸಂಪುಟಗಳನ್ನು ತೆಗೆದುಕೊಳ್ಳುವಂತೆ ಕರೆನೀಡಿ ಅನುಗ್ರಹಿಸಿರುತ್ತಾರೆ.

ನಮ್ಮ ಸ್ವಯಂಪ್ರಚಾರಕರ ತಂಡವು ದಿನ-ದಿನಕ್ಕೂ ಬೆಳೆಯುತ್ತಿದೆ. ನಮ್ಮ ಹಲವು ಗೆಳೆಯರು ಈ ಸಂಪುಟಗಳನ್ನು ಮನೆ-ಮನೆಗೂ ತಲುಪಿಸಲು ಉತ್ಸುಕರಾಗಿದ್ದಾರೆ. ಇವರೆಲ್ಲರ ಸಂಪೂರ್ಣಸಹಕಾರದಿಂದಾಗಿ ಈ ಮಹಾ ಕಾರ್ಯವು ಸುಗಮವಾಗಿ ನಡೆಯುತ್ತಿದೆ. ಇದು ಒಬ್ಬೊಬ್ಬರು ಮಾಡಿ ಮುಗಿಸುವ ಕಾರ್ಯವಲ್ಲ. ಅದರಲ್ಲಿಯೂ ಬಡಪಾಯಿಗಳು ಈ ಮಹಾ ಕಾರ್ಯವನ್ನು ಕೈಗೊಳ್ಳುವ ಸಾಧ್ಯತೆಯೇ ಇಲ್ಲ. ಆದರೂ ದಯಾಮಯನಾದ ಪರಮಾತ್ಮನು ಈ ಮಹಾಕಾರ್ಯವನ್ನು ಸಾಧಾರಣಮನುಷ್ಯರ ಮೂಲಕ ಮಾಡಿತೋರಿಸಿ ತನ್ನ ಮಹಾಶಕ್ತಿಯು ಎಷ್ಟೆಂಬುದನ್ನು ಪ್ರಪಂಚಕ್ಕೆ ತೋರಿಸುತ್ತಿದ್ದಾನೆ.

ಗ್ರಂಥದ ಸಿದ್ಧತೆಗೆ ನೆರವು ನೀಡುತ್ತಿರುವ ಸಂಪಾದಕಮಂಡಲಿಯವರ ವಿಷಯವಾಗಿ ಎಷ್ಟು ಬರೆದರೂ ಅಲ್ಪವೇ. ಅವರ ಉತ್ಸಾಹವು ಅಪರಿಮಿತವಾದುದು. ಅವರ ನಿಃಸ್ವಾರ್ಥಸೇವೆಯು ಅನ್ಯಾದೃಶವಾದುದು.

ತೃತೀಯಸಂಪುಟಕ್ಕೆ ಮುನ್ನುಡಿಯನ್ನು, ಸುಪ್ರಸಿದ್ಧ ಹಿರಿಯ ಪತ್ರಿಕೋದ್ಯಮಿಗಳಾದ ಶ್ರೀ ತಿ.ತಾ. ಶರ್ಮರು ಬರೆದುಕೊಟ್ಟು ಉಪಕರಿಸಿದ್ದಾರೆ. ಪರಮಾತ್ಮನ ದಯೆಯಿಂದಲೂ, ಪರಮಗುರುಗಳ ಆಶೀರ್ವಾದಗಳಿಂದಲೂ ಸುಹೃದರ ಸಹಕಾರದಿಂದಲೂ ನಾಲ್ಕನೆಯ ಸಂಪುಟವನ್ನು ಸಾಧ್ಯವಾದಷ್ಟು ಬೇಗ ನಮ್ಮ ವಾಚಕರಿಗೆ ಅರ್ಪಿಸುವ ಆಶಯವಿದೆ.

–ಪ್ರಕಾಶಕರು.

## ಮುನ್ನುಡಿ

ವೇದೋಪನಿಷತ್ತುಗಳನ್ನು ಸಾಂಗವಾಗಿ ಅಧ್ಯಯನಮಾಡಿ, ಗುರುಮುಖವಾಗಿ ಉಪದೇಶಪಡೆದು, ಜೀವನವನ್ನು ಧನ್ಯತೆಯ ಹಂತಕ್ಕೇರಿಸ ಬಲ್ಲವರ ಕಾಲವಾಗಿಹೋಯಿತು. ಕಾರಣ: ಇಂದಿನ ಕಾಲಧರ್ಮ ಅಂತಹ ಸಾಧನೆಗೆ ಅನುಕೂಲವಾಗಿಲ್ಲ. ರಾಮಾಯಣ-ಭಾರತಾದಿ ಇತಿಹಾಸ ಮತ್ತು ಅಷ್ಟಾದಶಪುರಾಣಗಳ ರಚನೆಯಾದ ಕಾಲದಲ್ಲೇ ನಮ್ಮವರು ಈ ಲೋಪವನ್ನು ಕಂಡುಕೊಂಡರು. ವೇದಾಧ್ಯಯನವನ್ನು ಮಾಡುವುದರಿಂದ ಏನು 'ಪುಣ್ಯ' ಲಭ್ಯವಾಗುವುದೋ ಅದೇ 'ಪುಣ್ಯ' ರಾಮಾಯಣ-ಮಹಾಭಾರತಗಳ ಪಾರಾಯಣದಿಂದಲೂ ಜನರಿಗೆ ಲಭ್ಯವಾಗುವುದೆಂದರು. ಮಹಾಭಾರತಕ್ಕೆ 'ಪಂಚಮವೇದ'ವೆಂದೇ ಹೆಸರನ್ನು ಕೊಟ್ಟರು.

ಮಹಾಭಾರತದಲ್ಲಿ ಎಲ್ಲ ಇದೆ; ಅದರಿಂದ ಹೊರಗೆ ಏನೂ ಉಳಿದಿಲ್ಲ; ಒಂದು ವೇಳೆ ಅಲ್ಪ-ಸಲ್ಪ ಉಳಿದಿದ್ದರೆ ಅದಕ್ಕೇನೇನೂ ಬೆಲೆ ಇಲ್ಲ-ಇದು ಪಂಚಮವೇದದ ಸ್ಥಾನ, ಕೀರ್ತಿ. ಗೀತೆಯನ್ನು ಶ್ರೀಕೃಷ್ಣ ಪರಮಾತ್ಮನೇ ಹೇಳಿದನೆಂಬುದು ನಮ್ಮೆಲ್ಲರ ನಂಬಿಕೆ. ಗೀತೆಯನ್ನು ತನ್ನ ಗರ್ಭವಾಸದಲ್ಲಿಟ್ಟುಕೊಂಡಿರುವ ಮಹಾಭಾರತದ ಕರ್ತೃಗಳಾದ ಮಹರ್ಷಿ ವ್ಯಾಸರೂ ಸಹ ಶ್ರೀಕೃಷ್ಣಪರಮಾತ್ಮನೇ ಎಂದು ಭಾವಿಸುವುದರಲ್ಲಿ ಏನಿದೆ ತಪ್ಪು?

ಜಗತ್ತಿನ ಜೀವನದಲ್ಲಿ ಅರ್ಥ-ಕಾಮಗಳಿಗೆ ಜಯವಿಲ್ಲ. ಧರ್ಮಕ್ಕೇ ಜಯ ಎಂಬುದಾಗಿ ವ್ಯಾಸರು ಎರಡು ಕೈಗಳನ್ನೂ ಮೇಲಕ್ಕೆತ್ತಿ–"ಧರ್ಮ ಧರ್ಮ–ಎಂದು ಒಂದೇ ಸಮನಾಗಿ ಸಾರುತ್ತಿದ್ದೇನೆ. ಆ ಮಾತನ್ನು ಒಬ್ಬರೂ ಕಿವಿಗೆ ಹಾಕಿಕೊಳ್ಳುವವರಿಲ್ಲ"–ಎಂಬ ಕೊರಗಿನಿಂದ ಮಹಾಭಾರತವನ್ನು ಬರೆದು ಮುಗಿಸುತ್ತಾರೆ. ಮಾನವಜೀವನವನ್ನು ನಡೆಸಬೇಕಾದದ್ದು ಧರ್ಮದಿಂದ, ಧರ್ಮಕ್ಕಾಗಿ. ಆಗ ಧರ್ಮವೇ ಅವನನ್ನು ಕಾಪಾಡುತ್ತದೆ. ಇದೇ ಮಹಾಭಾರತ ಸಾರುತ್ತಿರುವ ಅಮರಸಂದೇಶ.

ಸಂಸ್ಕೃತ ಬಲ್ಲವರಿಗೂ, ವಿಶೇಷವಾಗಿ ಸಂಸ್ಕೃತಜ್ಞಾನವಿಲ್ಲದ ಕನ್ನಡಿಗರಿಗೂ, ಎಲ್ಲ ಹಂತಗಳ ಸಂಸ್ಕಾರ ಉಳ್ಳವರಿಗೂ-ಮಹಾಭಾರತದ ಪರಿಚಯಮಾಡಿಕೊಡುವ ಉದ್ದೇಶದಿಂದ 'ಭಾರತ ದರ್ಶನ' ಎಂಬ

ಮಾಸಪತ್ರಿಕೆಯೊಂದನ್ನು ಅದರ ವ್ಯವಸ್ಥಾಪಕರು ಹದಿನೆಂಟು ವರ್ಷಗಳಿಂದ ನಡೆಸುತ್ತಿದ್ದಾರೆ. ಅದರಲ್ಲಿ ಪರ್ವ-ಪರ್ವಗಳಾಗಿ, ಸಂಚಿಕೆಗೆ ಮೂರು-ನಾಲ್ಕು ಅಧ್ಯಾಯಗಳಂತೆ, ಸರಳ ಕನ್ನಡದಲ್ಲಿ ಅನುವಾದಮಾಡಿಕೊಡುತ್ತಿದ್ದಾರೆ. ಅವುಗಳನ್ನೆಲ್ಲ ಸೇರಿಸಿ ಸುಮಾರು ೬೦೦ ಪುಟಗಳಿಗೊಂದು ಸಂಪುಟದಂತೆ ಎರಡು ಸಂಪುಟಗಳು ಹೊರಬಿದ್ದಿವೆ. ಈಗ ಹೊರಬರುತ್ತಿರುವುದು ಮೂರನೆಯ ಸಂಪುಟ. ೧೧೭೩ನೆಯ ಪುಟದಿಂದ ೧೭೩೨ನೆಯ ಪುಟದವರೆಗೂ ಸಾಗಿದೆ. ಆದಿಪರ್ವ ಮುಗಿದು ಸಭಾಪರ್ವ ಆರಂಭವಾಗಿ ೬೦ ಅಧ್ಯಾಯಗಳು ಮುಗಿದಿವೆ; ಮುಂದುವರಿದಿದೆ. ಹೀಗೆಯೇ ನಡೆಯುತ್ತದೆ ಪರ್ವ-ಪರ್ವವಾಗಿ ಕನ್ನಡದಲ್ಲಿ ಸಂಪೂರ್ಣಮಹಾಭಾರತ.

ಇಂತಹ ಮಹತ್ಕಾರ್ಯ ಭಗವಂತನ ಅನುಗ್ರಹದಿಂದ ಮಾತ್ರ ಸಾಧ್ಯ. ಆದರೂ 'ನಿಮಿತ್ತಮಾತ್ರ'ದ ವಾಚಕರೂ ಬಹಳ ಮಟ್ಟಿಗೆ ಕಾರಣರೆಂಬುದು ಲೋಕವ್ಯವಹಾರ ಬಲ್ಲವರಿಗೆ ಗೊತ್ತು. 'ಅಗೋಚರ' ಅನುಗ್ರಹಕ್ಕಾಗಿ ದೇವರಲ್ಲಿ ಪ್ರಾರ್ಥನೆ ಮಾಡೋಣ. 'ದೃಗ್ಗೋಚರ' ಉದಾರ ಪ್ರೋತ್ಸಾಹಕ್ಕಾಗಿ ವಾಚಕರಲ್ಲಿ ಪ್ರಾರ್ಥನೆ ಮಾಡೋಣ.

'ಭಾರತ ದರ್ಶನ' ವ್ಯವಸ್ಥಾಪಕಗಣದವರ ಶ್ರದ್ಧೆ ಮತ್ತು ಉತ್ಸಾಹಗಳು ತಲೆದೂಗಿಸುವಂತಹವು. ಅವರ ಮನೋದಾರ್ಢ್ಯ ಮೆಚ್ಚತಕ್ಕದ್ದು. ಅವರು ಕೈಗೊಂಡ ಕೆಲಸದಲ್ಲಿ ಅವರಿಟ್ಟಿರುವ ಭಕ್ತಿ-ದೈವಭಕ್ತಿಗೆ ಸಮನಾದದ್ದು. ಅವರ ಈ ಪವಿತ್ರವಾದ ಕೆಲಸ ನಿರಾಪದವಾಗಿ ಮುಂದುವರಿಯಲಿ ; ಕೈಗೊಂಡ ಕೆಲಸವನ್ನು ತೃಪ್ತಿಕರವಾಗಿ ಮಾಡಿಮುಗಿಸಿ – 'ಕೃತಾರ್ಥರಾದೆವು'–ಎಂಬ ಮಾತು ಅವರ ಹೃದಯಮೂಲಕವಾಗಿ ಬರಲಿ ; ಕನ್ನಡ ನಾಡಿನ ಪ್ರಭುತ್ವದ, ಪ್ರಜೆಯ ಪ್ರೋತ್ಸಾಹ ಅವರ ಕೆಲಸಕ್ಕೆ ಹೆಚ್ಚು ಹೆಚ್ಚಾಗಿ ಸಿಗುವಂತಾಗಲಿ–ಇದಿಷ್ಟೇ ನಾನು ಶ್ರೀಕೃಷ್ಣಪರಮಾತ್ಮನಲ್ಲಿ ಮಾಡುವ ಪ್ರಾರ್ಥನೆ.

ಜ್ಯೇಷ್ಠ ಶುದ್ಧ ಚತುರ್ಥೀ, ಸೋಮವಾರ — -ತಿ.ತಾ. ಶರ್ಮ.

ಶಂಕರವನ, ಬೆಂಗಳೂರು-೪. — ೪-೬-೭೩

## ಎರಡನೆಯ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನು ತನ್ನದೇ ಆದ ಕಾರ್ಯವನ್ನು ಒಂದು ವಿಶಿಷ್ಟರೀತಿಯಲ್ಲಿ ಆಗುಮಾಡಿಸುತ್ತಿದ್ದಾನೆ. ಒಂದು ಮತ್ತು ಎರಡನೆಯ ಸಂಪುಟಗಳ ಪುನರ್ಮುದ್ರಣವು ಮುಗಿದು ಮೂರನೆಯ ಸಂಪುಟದ ಪುನರ್ಮುದ್ರಣಕಾರ್ಯವೂ ಮುಗಿದಿದೆ. ನಾಲ್ಕನೆಯ ಸಂಪುಟದ ಪುನರ್ಮುದ್ರಣದ ಕಾರ್ಯವು ಇಲ್ಲಿಗೇ ನಿಲ್ಲುವಂತೆ ಕಾಣುತ್ತಿಲ್ಲ. ಪುನರ್ಮುದ್ರಣಕಾರ್ಯವು ಶ್ರಮಸಾಧ್ಯವೆನಿಸಿದರೂ ವಾಚಕರ ಸಂಖ್ಯೆಯು ನಾನಾ ಮುಖೇನ ಹೆಚ್ಚುತ್ತಿರುವುದು ಸಂತಸದ ವಿಷಯ. ವಾಚಕರ ಸಂಖ್ಯೆಯೂ ಹೆಚ್ಚಿ ಸಂಪುಟಗಳನ್ನು ಪುನರ್ಮುದ್ರಣಮಾಡುವ ಮತ್ತು ಶೇಖರಿಸಿಡುವ ಸಾಮರ್ಥ್ಯವನ್ನೂ ದಯಾಮಯನಾದ ಪರಮಾತ್ಮನು ದಯಪಾಲಿಸಲಿ.

ಪುನರ್ಮುದ್ರಣವನ್ನೂ ಸಂಪಾದಕಮಂಡಲಿಯವರು ಶ್ರಮಪಟ್ಟು ಪರಿಶೀಲಿಸಿರುತ್ತಾರೆ. ಸಂಪುಟಗಳಲ್ಲಿ ಅಕ್ಷರಸ್ಖಾಲಿತ್ಯವಾಗಲೀ, ಭಾಷಾಂತರದಲ್ಲಿ ನ್ಯೂನತೆಯಾಗಲೀ-ಇರಕೂಡದೆಂಬುದು ಇವರ ಆಶಯ. ಇವರ ಶ್ರಮಕ್ಕೆ ಪರಮಾತ್ಮನ ಕರುಣೆಯೊಂದೇ ಫಲ. ಇಂತಹವರ ಬೆಂಬಲ ಪಡೆದಿರುವ ಪ್ರಕಾಶನವು ನಿಶ್ಚಯವಾಗಿಯೂ ಧನ್ಯ.

ಕೆನರಾ ಮತ್ತು ಸಿಂಡಿಕೇಟ್ ಬ್ಯಾಂಕುಗಳ ನೆರವಿನಿಂದ ನೂರಾರು ಮಂದಿ ಗ್ರಾಹಕರಾಗುತ್ತಿದ್ದಾರೆ. ಇದೇ ವಿಧವಾದ ಸಾಲದ ಸೌಲಭ್ಯವನ್ನು ಮಾಡಿಕೊಡಬೇಕೆಂದು ವಿಜಯಾ ಬ್ಯಾಂಕಿನವರನ್ನೂ ಪ್ರಾರ್ಥಿಸಲಾಗಿದೆ. ಅವರೂ ಸಹ ಈ ಮಹಾಕಾರ್ಯಕ್ಕೆ ನೆರವು ನೀಡುವರೆಂಬ ಭರವಸೆಯಿದೆ. ಈ ಪ್ರಚಾರಕಾರ್ಯಕ್ಕೆ ನಾವು ಪದೇ-ಪದೇ ಪ್ರಾರ್ಥಿಸುತ್ತಿರುವಂತೆ ನಮ್ಮ ಗ್ರಾಹಕರು ಸಂಪೂರ್ಣ ಬೆಂಬಲ ನೀಡಬೇಕು. ತಮ್ಮ ಬಂಧು-ಮಿತ್ರರನ್ನೂ ಗ್ರಾಹಕರನ್ನಾಗಿ ಮಾಡಲು ಸತತಪ್ರಯತ್ನವನ್ನು ಮಾಡಬೇಕು. ಪ್ರಯತ್ನಿಸಿದರೆ ಹತ್ತರಲ್ಲೊಂದಾದರೂ ಫಲಿಸುತ್ತದೆ. ಮಹಾಭಾರತದ ಮೂಲಕವಾಗಿ ಆಗುವ ವಿದ್ಯಾಪ್ರಚಾರ ಮತ್ತು ಧರ್ಮಪ್ರಚಾರಗಳ ಫಲವೂ ಸಿಕ್ಕಿಯೇ ಸಿಕ್ಕುತ್ತದೆ. ದಯಮಾಡಿ ಸಹಕರಿಸಬೇಕಾಗಿ ವಿನಂತಿಸುತ್ತೇವೆ.

ದಯಾಮಯನಾದ ಪರಮಾತ್ಮನು ನಮ್ಮೆಲ್ಲ ಗ್ರಾಹಕರಿಗೂ, ಪ್ರಚಾರಕರಿಗೂ, ಪ್ರಕಾಶನದ ಬಂಧುಗಳಿಗೂ ಮಂಗಳದಾಯಕನಾಗಲಿ.

–ಪ್ರಕಾಶಕರು

## ಮೂರನೆಯ ಮುದ್ರಣದ ಪ್ರಸ್ತಾವನೆ

ಭಗವಂತನ ದಯೆಯಿಂದ ಮೂರನೆಯ ಸಂಪುಟದ ಮೂರನೆಯ ಮುದ್ರಣವನ್ನು ಮುಗಿಸಿರುತ್ತೇವೆ. 'ಪುನರ್ಮುದ್ರಣಕಾರ್ಯವು ಮುಗಿಯಿತು'-ಎಂದು ಸಮಾಧಾನದ ನಿಟ್ಟುಸಿರುಬಿಡುವಂತಿಲ್ಲ. ಈ ಸಂಪುಟವು ಸಿದ್ಧವಾಗುವ ವೇಳೆಗೆ ೧-೪-೭-೮-೯-೧೦-೧೧-೧೨ ಇವಿಷ್ಟು ಸಂಪುಟಗಳೂ ಮುಗಿದಿವೆ. ೫-೬-೧೩-೧೪-೧೫-೧೬ ಈ ಸಂಪುಟಗಳು ಮುಗಿದುಹೋಗುವ ಹಂತದಲ್ಲಿವೆ. ಮಹಾಭಾರತದ ಪ್ರತಿಗಳು ಹೀಗೆ ಖರ್ಚಾಗುತ್ತಿರುವುದು ಅತ್ಯಂತಸಂತಸದ ವಿಷಯವೇ ಸರಿ. ಆದರೆ ಪುನರ್ಮುದ್ರಣದ ಸಮಸ್ಯೆಯನ್ನು ಹೇಗೆ ಬಗೆಹರಿಸುವುದು? ಎಂಬ ಬಗೆಗೆ ತಲೆಕೆಡಿಸಿಕೊಳ್ಳುತ್ತಿದ್ದೇವೆ. ಬೇರೆಯ ಕಡೆಯಲ್ಲಿ ಮುದ್ರಣಮಾಡಿಸುವ ಸಾಧ್ಯತೆ ಕಡಿಮೆ. ವೆಚ್ಚವು ಅತಿಯಾಗುತ್ತದೆ. ಅಭಿಮಾನಶಾಲಿಗಳಾದ ಮುದ್ರಣಕಾರರು ಸಿಕ್ಕಿದರೆ ಪ್ರಯತ್ನಿಸಬಹುದು. ಸದ್ಯಕ್ಕಂತೂ ಒಂದು ಹೊಸಸಂಪುಟವನ್ನೂ ಮತ್ತು ಒಂದು ಹಳೆಯ ಸಂಪುಟವನ್ನೂ ಮುದ್ರಣ ಮಾಡುವ ಕಾರ್ಯಕ್ರಮವನ್ನಿಟ್ಟುಕೊಂಡಿರುತ್ತೇವೆ. ನೂತನಗ್ರಾಹಕರು ದಯಮಾಡಿ ಸಹಕರಿಸಬೇಕು. ಭಗವಂತನು ಬೇರಾವುದಾದರೂ ಹಾದಿಯನ್ನು ತೋರಿದಲ್ಲಿ ಶೀಘ್ರವೇ ಮಾಡಿಕೊಡುತ್ತೇವೆ. ಪ್ರತಿಯೊಬ್ಬ ಗ್ರಾಹಕರಿಗೂ ಸ್ವಲ್ಪ ತಡವಾಗಿಯೇ ಆದರೂ ಸಂಪುಟಗಳನ್ನು ಒದಗಿಸುವುದಂತೂ ನಿಶ್ಚಯ. ಅರ್ಥಂಬರ್ಧ ಗ್ರಂಥವನ್ನು ಒದಗಿಸಿ ಸುಮ್ಮನಿರುವುದಿಲ್ಲ. ಈ ಭರವಸೆಯನ್ನು ಮಾತ್ರ ಕೊಡಬಲ್ಲೆವು.

ಈ ಸಂಪುಟದ ತಪ್ಪು-ಒಪ್ಪುಗಳನ್ನು ಸಂಪಾದಕಮಂಡಲಿಯ ವಿದ್ವಾಂಸರು ಪರಿಶೀಲಿಸಿಕೊಟ್ಟು ಉಪಕರಿಸಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕವಾದ ವಂದನೆಗಳು. ಪರಮಾತ್ಮನು ಎಲ್ಲರಿಗೂ ಸುಖ-ಶಾಂತಿಗಳನ್ನು ದಯಪಾಲಿಸಲಿ.

**–ಪ್ರಕಾಶಕರು.**

---

## ನಾಲ್ಕನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದಲೂ ಸತ್ಪುರುಷರ ಸಹಕಾರ-ಸದಾಶಯಗಳಿಂದಲೂ ೩ನೆಯ ಸಂಪುಟದ ನಾಲ್ಕನೆಯ ಸಂಸ್ಕರಣವು ಇದೀಗ ಮುಗಿದಿದೆ. ಹೊಸವಾಚಕರಿಗೆ, ಮೊದಲ ಸಂಪುಟಗಳೇ ಇಲ್ಲವಲ್ಲಾ!–ಎಂಬ ಕೊರತೆಯನ್ನು ಸಾಕಷ್ಟು ಮಟ್ಟಿಗೆ ನಿವಾರಿಸಲಾಗಿದೆ. ಇದೀಗ ಶ್ರೀಮದ್ವಾಲ್ಮೀಕಿರಾಮಾಯಣದ ಮೊದಲನೆಯ ಸಂಪುಟದ ಮುದ್ರಣವು ಪ್ರಾರಂಭವಾಗಿದೆ. ಅಕ್ಷಯ ಸಂವತ್ಸರದ ಶ್ರೀರಾಮನವಮಿಯ ಪವಿತ್ರದಿನದಂದು ಮೊದಲನೆಯ ಸಂಪುಟವನ್ನು ಪ್ರಕಾಶನಗೊಳಿಸುವ ಆಶೆಯಿದೆ. ಪರಮಾತ್ಮನ ಇಚ್ಛೆ ಹೇಗಿರುವುದೋ ತಿಳಿಯದು. ಪ್ರಯತ್ನವು ನಮ್ಮದು. ಕಾರ್ಯವನ್ನು ಆಗುಮಾಡಿಸಿ ಕೊಡುವ ಹೊಣೆಯು ಅವನದು. ಕರುಣಾಮಯನ ದಿವ್ಯಾನುಗ್ರಹವಿಲ್ಲದೆ ಯಾವುದು ತಾನೇ ನಡೆದೀತು!

ಪುನರ್ಮುದ್ರಣದ ಕಾರ್ಯವನ್ನು ಪೂರೈಸಲು ಸಾಧ್ಯವಾಗದೇ ಇರುವುದರಿಂದ ಮೈಸೂರಿನ ಮುದ್ರಣಾಲಯವೊಂದರಲ್ಲಿ ಪುನರ್ಮುದ್ರಣಮಾಡಿಸುತ್ತಿದ್ದುದು ವಾಚಕರಲ್ಲಿ ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ೧೮ನೆಯ ಸಂಪುಟದ ಪುನರ್ಮುದ್ರಣವು ಈ ವೇಳೆಗೆ ಮುಗಿದು ೧೯-೨೦ನೆಯ ಸಂಪುಟಗಳು ಮುಗಿಯಬೇಕಾಗಿದ್ದಿತು. ಆದರೆ ಮೈಸೂರಿನ ಮುದ್ರಣಾಲಯದವರು ಸ್ವಲ್ಪ ಹಾದಿ ತಪ್ಪಿ ನಡೆದ ಕಾರಣ ೧೮ನೆಯ ಸಂಪುಟದ ಮುದ್ರಣವೂ ಮುಗಿಯಲಿಲ್ಲ. ಮುದ್ರಣಕ್ಕಾಗಿ ಕೊಟ್ಟಿದ್ದ ಕಾಗದವೂ ಪತ್ತೆಯಿಲ್ಲ. ಪರಸ್ವಾಪಹರಣವೆಂದರೆ ಎಲ್ಲರೂ ಬಹಳವಾಗಿ ಭಯಪಡುತ್ತಿದ್ದರು. ಆದರೆ ಈಗ ಪರಸ್ವಾಪಹರಣದಲ್ಲಿ ಮನುಷ್ಯರಿಗೆ ಯಾವ ವಿಧವಾದ ಪಾಪಭೀತಿಯೂ ಇಲ್ಲವಾಗಿದೆ. ಈ ಪ್ರಕರಣವು ನಿಶ್ಚಯವಾಗಿಯೂ ಮನಸ್ಸಿಗೆ ಬಹಳ ಆಘಾತವನ್ನೇ ಉಂಟುಮಾಡಿದೆ. ಮುಂದೆ ಇಂತಹ ಜನರೊಡನೆ ಯಾವ ರೀತಿ ವರ್ತಿಸಬೇಕೆಂಬುದೇ ತಿಳಿಯದಾಗಿದೆ. ಇವರಿಗೆ ದಯಾಮಯನಾದ ಆ ಪರಮಾತ್ಮನೇ ಸದ್ಬುದ್ಧಿಯನ್ನು ಕೊಡಬೇಕು.

ಈ ಮುದ್ರಣದ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟ ಸಂಪಾದಕ

ಮಂಡಲಿಯ ವಿದ್ವಾಂಸರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳು. ಈ ಮೊದಲು ಸಿಂಡಿಕೇಟ್ ಬ್ಯಾಂಕಿನವರು ಸಾಲದ ಯೋಜನೆಯನ್ನು ನವೀಕರಿಸಿದ್ದು ಈಗ ಕೆನರಾಬ್ಯಾಂಕಿನವರೂ ಸಾಲದ ಯೋಜನೆಯನ್ನು ನವೀಕರಿಸಿರುವರೆಂದು ತಿಳಿಸಲು ಹರ್ಷಿಸುತ್ತೇವೆ. ಬ್ಯಾಂಕಿನ ಸೌಲಭ್ಯವನ್ನು ಪಡೆದು ಸಾವಿರಾರು ಸಂಖ್ಯೆಯಲ್ಲಿ ಮಹಾಭಾರತಕ್ಕೆ ಗ್ರಾಹಕರಾಗುವುದರ ಮೂಲಕ ಕೃತಕೃತ್ಯರಾಗಬೇಕಾಗಿ ವಿನಂತಿಸುತ್ತೇವೆ.

–ಪ್ರಕಾಶಕರು

# ಮಹಾಭಾರತ-ಮೂರನೆಯ ಸಂಪುಟದ ವಿಷಯಾನುಕ್ರಮಣಿಕೆ

## ಆದಿಪರ್ವ


| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ಸ್ವಯಂವರಪರ್ವ | | | |
| ೧೮೪ | ಪಾಂಚಾಲನಗರಿಗೆ ಪಾಂಡವರ ಪ್ರಯಾಣ: ದಾರಿಯಲ್ಲಿ ಬ್ರಾಹ್ಮಣರೊಡನೆ ಸಂಭಾಷಣೆ | .... | 1173 |
| ೧೮೫ | ಪಾಂಚಾಲರಾಜಧಾನಿಗೆ ಪಾಂಡವರ ಆಗಮನ: ಕುಂಬಾರನ ಮನೆಯಲ್ಲಿ ವಾಸ: ಸ್ವಯಂವರಸಭಾವರ್ಣನೆ : ಧೃಷ್ಟದ್ಯುಮ್ನನ ಘೋಷಣೆ | .... | 1177 |
| ೧೮೬ | ಧೃಷ್ಟದ್ಯುಮ್ನನು ದ್ರೌಪದಿಗೆ ಅಲ್ಲಿ ನೆರೆದಿದ್ದ ರಾಜರ ಪರಿಚಯಮಾಡಿಕೊಟ್ಟುದು | .... | 1183 |
| ೧೮೭ | ಲಕ್ಷ್ಯಭೇದನಕ್ಕೆ ರಾಜಕುಮಾರರ ಪ್ರಯತ್ನ ಮತ್ತು ವಿಫಲತೆ | .... | 1185 |
| ೧೮೮ | ಅರ್ಜುನನು ಲಕ್ಷ್ಯವನ್ನು ಭೇದಿಸಿ ದ್ರೌಪದಿಯನ್ನು ಪಡೆದುದು | .... | 1191 |
| ೧೮೯ | ದ್ರುಪದನ ಮೇಲೆ ರಾಜರ ದಾಳಿ: ಶ್ರೀಕೃಷ್ಣ-ಬಲರಾಮರ ಸಂಭಾಷಣೆ | .... | 1197 |
| ೧೯೦ | ಯುದ್ಧದಲ್ಲಿ ಭೀಮಾರ್ಜುನರಿಂದ ಕರ್ಣ-ಶಲ್ಯರ ಪರಾಜಯ | .... | 1202 |
| ೧೯೧ | ಕುಂತೀ-ಧರ್ಮಾರ್ಜುನರಲ್ಲಿ ಪರಸ್ಪರ ಸಂಭಾಷಣೆ : ವಿವಾಹವಿಷಯದಲ್ಲಿ ಜಿಜ್ಞಾಸೆ: ಬಲರಾಮ-ಶ್ರೀಕೃಷ್ಣರ ಆಗಮನ | .... | 1209 |
| ೧೯೨ | ಗುಪ್ತರೂಪದಿಂದ ತಾನು ತಿಳಿದ ದ್ರೌಪದಿಯ ಮತ್ತು ಪಾಂಡವರ ಸಮಾಚಾರವನ್ನು ಧೃಷ್ಟದ್ಯುಮ್ನನು ತಂದೆಗೆ ತಿಳಿಸಿದುದು: ದ್ರುಪದನ ಕಾತರತೆ | .... | 1216 |
| ೧೯೩ | ಧೃಷ್ಟದ್ಯುಮ್ನನಿಂದ ಸಮಸ್ತವಿಚಾರಗಳನ್ನೂ ತಿಳಿದು ದ್ರುಪದನು ಪಾಂಡವರ ಬಳಿಗೆ ಪುರೋಹಿತರನ್ನು ಕಳುಹಿಸಿದುದು: ಪುರೋಹಿತ-ಯುಧಿಷ್ಠಿರರ ಸಂಭಾಷಣೆ | .... | 1219 |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೧೯೪ | ದ್ರುಪದನ ಅರಮನೆಯಲ್ಲಿ ಕುಂತಿಗೂ-ಪಾಂಡು ಕುಮಾರರಿಗೂ ಸನ್ಮಾನ : ದ್ರುಪದನಿಂದ ಪಾಂಡವರ ಶೀಲ-ಸ್ವಭಾವಗಳ ಪರೀಕ್ಷೆ | .... | 1225 |
| ೧೯೫ | ದ್ರುಪದ-ಯುಧಿಷ್ಠಿರರ ಸಂಭಾಷಣೆ : ವ್ಯಾಸರ ಆಗಮನ | .... | 1227 |
| ೧೯೬ | ವ್ಯಾಸರ ಸಮ್ಮುಖದಲ್ಲಿ ಬಹುಪತಿತ್ವದ ವಿಷಯ ವಾಗಿ ದ್ರುಪದಾದಿಗಳಿಂದ ಅಭಿಪ್ರಾಯಮಂಡನೆ | .... | 1232 |
| ೧೯೭ | ವ್ಯಾಸರು ದ್ರುಪದನಿಗೆ ಪಾಂಡವರ ಮತ್ತು ದ್ರೌಪದಿಯ ಪೂರ್ವಜನ್ಮವೃತ್ತಾಂತವನ್ನು ತಿಳಿಸಿ ದುದು : ದ್ರುಪದನು ದಿವ್ಯದೃಷ್ಟಿಯಿಂದ ಪಾಂಡ ವರ ದಿವ್ಯರೂಪಗಳನ್ನು ನೋಡಿದುದು | .... | 1237 |
| ೧೯೮ | ಪಾಂಡವರೊಡನೆ ದ್ರೌಪದಿಯ ವಿವಾಹ | .... | 1247 |
| ೧೯೯ | ದ್ರೌಪದಿಗೆ ಕುಂತಿಯ ಉಪದೇಶ : ಶ್ರೀಕೃಷ್ಣನು ಪಾಂಡವರಿಗೆ ಬಹುಮಾನಗಳನ್ನು ಕಳುಹಿಸಿ ದುದು | .... | 1250 |
| ವಿದುರಾಗಮನರಾಜ್ಯಲಮ್ಭಪರ್ವ | | | |
| ೨೦೦ | ಪಾಂಡವರ ವಿವಾಹದಿಂದಾಗಿ ದುರ್ಯೋಧ ನಾದಿಗಳಿಗೆ ಚಿಂತೆ | .... | 1253 |
| ೨೦೧ | ಧೃತರಾಷ್ಟ್ರ ಮತ್ತು ದುರ್ಯೋಧನಾದಿಗಳ ಸಮಾಲೋಚನೆ | .... | 1257 |
| ೨೦೨ | ಪರಾಕ್ರಮದಿಂದಲೇ ಪಾಂಡವರನ್ನು ಗೆಲ್ಲ ಬೇಕೆಂದು ಕರ್ಣನ ಸಲಹೆ | .... | 1260 |
| ೨೦೩ | ಪಾಂಡವರಿಗೆ ಅರ್ಧರಾಜ್ಯವನ್ನೇ ಕೊಡ ಬೇಕೆಂದು ಭೀಷ್ಮನ ಸಲಹೆ | .... | 1264 |
| ೨೦೪ | ದ್ರೋಣರ ಅಭಿಪ್ರಾಯ : ಕರ್ಣನ ವಿರೋಧ | .... | 1267 |
| ೨೦೫ | ವಿದುರನ ಅಭಿಪ್ರಾಯ : ದ್ರೋಣ-ಭೀಷ್ಮರ ಸಲಹೆಗೆ ಸಮ್ಮತಿ | .... | 1272 |
| ೨೦೬ | ಧೃತರಾಷ್ಟ್ರನ ಆಜ್ಞೆಯಂತೆ ಪಾಂಡವರನ್ನು ಕರೆ ತರುವ ಸಲುವಾಗಿ ವಿದುರನ ಪ್ರಯಾಣ : ದ್ರುಪದ-ಪಾಂಡವರ ಪ್ರಸ್ತಾಪ | .... | 1275 |

| | | | |
|---|---|---|---|
| ೨೦೭ | ಹಸ್ತಿನಾಪುರಕ್ಕೆ ಪಾಂಡವರ ಆಗಮನ : ಇಂದ್ರ ಪ್ರಸ್ಥನಗರ ನಿರ್ಮಾಣ : ಬಲರಾಮ-ಕೃಷ್ಣರ ದ್ವಾರಕಾಗಮನ | .... | 1279 |
| ೨೦೮ | ನಾರದರ ಆಗಮನ : ಸುಂದೋಪಸುಂದರ ಉಪಾಖ್ಯಾನ | .... | 1286 |
| ೨೦೯ | ಸುಂದೋಪಸುಂದರ ತಪಶ್ಚರಣೆ : ಬ್ರಹ್ಮನಿಂದ ವರಪ್ರದಾನ : ರಾಕ್ಷಸರ ಆನಂದೋತ್ಸಾಹ | .... | 1291 |
| ೨೧೦ | ಸುಂದೋಪಸುಂದರ ತ್ರೈಲೋಕ್ಯವಿಜಯ | .... | 1296 |
| ೨೧೧ | ತಿಲೋತ್ತಮೆಯ ಉತ್ಪತ್ತಿ : ರೂಪಸೌಂದರ್ಯ ದಿಂದ ಸುಂದೋಪಸುಂದರನ್ನು ಆಕರ್ಷಿಸಲು ರಾಕ್ಷಸರ ಬಳಿಗೆ ತಿಲೋತ್ತಮೆಯ ಪ್ರಸ್ಥಾನ | .... | 1300 |
| ೨೧೨ | ತಿಲೋತ್ತಮೆಯನ್ನು ಹೊಂದಲು ಸುಂದೋಪ ಸುಂದರಲ್ಲಿ ಕಲಹ : ಅವರಿಬ್ಬರ ಮರಣ : ಬ್ರಹ್ಮನಿಂದ ತಿಲೋತ್ತಮೆಗೆ ವರದಾನ : ದ್ರೌಪದಿಯ ವಿಷಯದಲ್ಲಿ ಪಾಂಡವರ ನಿಯಮನಿರ್ಧಾರ | .... | 1305 |
| ಅರ್ಜುನವನವಾಸಪರ್ವ | | | |
| ೨೧೩ | ಬ್ರಾಹ್ಮಣನ ಗೋರಕ್ಷಣೆಗಾಗಿ ಅರ್ಜುನನಿಂದ ನಿಯಮಭಂಗ ಮತ್ತು ವನಪ್ರಸ್ಥಾನ | .... | 1310 |
| ೨೧೪ | ಅರ್ಜುನನ ಗಂಗಾದ್ವಾರಪ್ರಯಾಣ : ಉಲೂಪಿ ಯೊಡನೆ ಸಮಾಗಮ | .... | 1317 |
| ೨೧೫ | ಅರ್ಜುನನ ಪೂರ್ವದಿಕ್ಕಿನ ತೀರ್ಥಗಳ ಪ್ರವಾಸ : ಮಣಿಪೂರದಲ್ಲಿ ಚಿತ್ರಾಂಗದೆಯ ಪಾಣಿಗ್ರಹಣ | .... | 1322 |
| ೨೧೬ | ಅರ್ಜುನನಿಂದ ವರ್ಗಾ ಎಂಬ ಅಪ್ಸರೆಯ ಶಾಪವಿಮೋಚನೆ : ವರ್ಗಾಳ ಆತ್ಮಕಥೆ | .... | 1326 |
| ೨೧೭ | ವರ್ಗಾಳ ಪ್ರಾರ್ಥನೆಯಂತೆ ಅರ್ಜುನನಿಂದ ಇತರ ನಾಲ್ವರು ಅಪ್ಸರೆಯರ ಶಾಪ ವಿಮೋಚನೆ : ಮಣಿಪೂರದಲ್ಲಿ ಚಿತ್ರಾಂಗದೆ ಯನ್ನು ಪುನಃ ಕಂಡು ಗೋಕರ್ಣತೀರ್ಥಕ್ಕೆ ಪ್ರಯಾಣ | .... | 1329 |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೨೧೮ | ಪ್ರಭಾಸಕ್ಷೇತ್ರದಲ್ಲಿ ಪಾರ್ಥ-ಕೃಷ್ಣರ ಸಮಾಗಮ : ದ್ವಾರಕೆಗೆ ಪ್ರಯಾಣ | .... | 1334 |
| ಸುಭದ್ರಾಹರಣಪರ್ವ | | | |
| ೨೧೯ | ರೈವತಕಪರ್ವತದ ಉತ್ಸವ : ಸುಭದ್ರೆಯನ್ನು ಕಂಡು ಅರ್ಜುನನು ಮೋಹವಶನಾದುದು : ಸುಭದ್ರಾಹರಣಕ್ಕಾಗಿ ಯುಧಿಷ್ಠಿರನ ಸಮ್ಮತಿ | .... | 1337 |
| ೨೨೦ | ಅರ್ಜುನನ ಮೇಲೆ ಯಾದವರ ಯುದ್ಧ ಸಿದ್ಧತೆ : ಬಲರಾಮನ ಕೋಪೋದ್ಗಾರ | .... | 1342 |
| ಹರಣಾಹರಣಪರ್ವ | | | |
| ೨೨೧ | ದ್ವಾರವತಿಯಲ್ಲಿ ಅರ್ಜುನ ಮತ್ತು ಸುಭದ್ರೆಯರ ವಿವಾಹ : ಇಂದ್ರಪ್ರಸ್ಥಕ್ಕೆ ಪುನರಾಗಮನ : ಅಭಿಮನ್ಯುವಿನ ಜನನ : ಜಾತಕರ್ಮಾದಿ ಸಂಸ್ಕಾರ : ಬಾಲ್ಯಶಿಕ್ಷಣ | .... | 1346 |
| ಖಾಂಡವದಾಹಪರ್ವ | | | |
| ೨೨೨ | ಯುಧಿಷ್ಠಿರನ ರಾಜ್ಯಭಾರ : ಖಾಂಡವವನ ಪ್ರದೇಶಕ್ಕೆ ಪಾರ್ಥ-ಕೃಷ್ಣರ ಆಗಮನ : ಬ್ರಾಹ್ಮಣವೇಷಧಾರಿಯಾದ ಅಗ್ನಿಯೊಡನೆ ಸಮಾಗಮ | .... | 1359 |
| ೨೨೩ | ಖಾಂಡವದಹನಕಾರ್ಯದಲ್ಲಿ ಸಹಾಯಮಾಡುವಂತೆ ಕೃಷ್ಣಾರ್ಜುನರಲ್ಲಿ ಅಗ್ನಿಯ ಪ್ರಾರ್ಥನೆ : ಖಾಂಡವದಹನಕ್ಕೆ ಕಾರಣ : ಶ್ವೇತಕಿಯ ಕಥಾಪ್ರಸಂಗ | .... | 1364 |
| ೨೨೪ | ಅರ್ಜುನನು ಅಗ್ನಿದೇವನ ಪ್ರಾರ್ಥನೆಯನ್ನು ಅಂಗೀಕರಿಸಿ, ದಿವ್ಯಾಯುಧಗಳನ್ನು ಅನುಗ್ರಹಿಸುವಂತೆ ಅಗ್ನಿಯನ್ನು ಕೇಳಿದುದು | .... | 1373 |
| ೨೨೫ | ಅಗ್ನಿಯಿಂದ ಅರ್ಜುನನಿಗೆ ಗಾಂಡೀವಧನುಸ್ಸು ಮತ್ತು ಅಕ್ಷಯತೂಣೀರಗಳ ಪ್ರದಾನ : ಶ್ರೀಕೃಷ್ಣನಿಗೆ ಚಕ್ರಪ್ರದಾನ : ಖಾಂಡವದಹನ | .... | 1376 |

| ಅಧ್ಯಾಯ | ವಿಷಯಗಳು | | ಪುಟಸಂಖೆ |
|---|---|---|---|
| ೨೨೬ | ಖಾಂಡವದಹನದ ಸಮಯದಲ್ಲಿ ಅಲ್ಲಿದ್ದ ಪ್ರಾಣಿಗಳ ಚಿಂತಾಜನಕಸ್ಥಿತಿ : ಮಳೆಗರೆದು ಯಜ್ಞೇಶ್ವರನನ್ನು ಶಾಂತಗೊಳಿಸಲು ಇಂದ್ರನ ಪ್ರಯತ್ನ | .... | 1381 |
| ೨೨೭ | ಅಶ್ವಸೇನನ ಪಲಾಯನ : ಮಗನಿಗಾಗಿ ಮಾತೆಯ ಪ್ರಾಣತ್ಯಾಗ : ದೇವತೆಗಳೊಡನೆ ಕೃಷ್ಣಾರ್ಜುನರ ಯುದ್ಧ | .... | 1384 |
| ಮಯದರ್ಶನಪರ್ವ | | | |
| ೨೨೮ | ದೇವತೆಗಳ ಪರಾಜಯ : ಖಾಂಡವವನ ವಿನಾಶ : ಮಯಾಸುರನ ರಕ್ಷಣೆ | .... | 1390 |
| ೨೨೯ | ಶಾರ್ಙ್ಗೋಪಾಖ್ಯಾನ : ಮಂದಪಾಲಮುನಿಯಿಂದ ಜರಿತೆಯಲ್ಲಿ ಪುತ್ರೋತ್ಪತ್ತಿ : ಸಂತಾನ ರಕ್ಷಣೆಗಾಗಿ ಮಂದಪಾಲನಿಂದ ಅಗ್ನಿಸ್ತುತಿ | .... | 1396 |
| ೨೩೦ | ಜರಿತೆಯ ಮತ್ತು ಮಂದಪಾಲನ ಮಕ್ಕಳ ಪ್ರಲಾಪ | .... | 1402 |
| ೨೩೧ | ತಾಯಿ-ಮಕ್ಕಳ ಸಂವಾದ | .... | 1405 |
| ೨೩೨ | ಋಷಿಕುಮಾರರಿಂದ ಅಗ್ನಿಯ ಪ್ರಾರ್ಥನೆ : ಅಗ್ನಿಯಿಂದ ಅಭಯಪ್ರದಾನ | .... | 1408 |
| ೨೩೩ | ಪತ್ನೀ-ಪುತ್ರರೊಡನೆ ಮಂದಪಾಲನ ಪುನರ್ಮಿಲನ | .... | 1414 |
| ೨೩೪ | ಇಂದ್ರನಿಂದ ಕೃಷ್ಣಾರ್ಜುನರಿಗೆ ವರಪ್ರದಾನ : ಕೃಷ್ಣಾರ್ಜುನರೂ ಮತ್ತು ಮಯಾಸುರನೂ ಅಗ್ನಿಯಿಂದ ಬೀಳ್ಕೊಂಡವರಾಗಿ ಯಮುನಾ ನದಿಯ ದಂಡೆಗೆ ಬಂದುದು | .... | 1420 |
| | ಸಭಾಪರ್ವ | | |
| ಸಭಾಕ್ರಿಯಾಪರ್ವ | | | |
| ೧ | ಶ್ರೀಕೃಷ್ಣನ ಆಜ್ಞೆಯಂತೆ ಮಯನಿಂದ ಸಭಾ ಭವನ ನಿರ್ಮಾಣ | .... | 1423 |
| ೨. | ಶ್ರೀಕೃಷ್ಣನ ದ್ವಾರಕಾಪ್ರಯಾಣ | .... | 1425 |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೩ | ಮಯಾಸುರನು ಭೀಮನಿಗೆ ಗದೆಯನ್ನೂ ಮತ್ತು ಅರ್ಜುನನಿಗೆ ಶಂಖವನ್ನೂ ತಂದು ಕೊಟ್ಟುದು : ಅದ್ಭುತಸಭಾಭವನದ ನಿರ್ಮಾಣ | .... | 1430 |
| ೪ | ಸಭಾಭವನಕ್ಕೆ ಧರ್ಮರಾಜನ ಪ್ರವೇಶ : ಸಭೆಯಲ್ಲಿದ್ದ ಮಹರ್ಷಿಗಳ ಮತ್ತು ರಾಜರ ಪರಿಚಯ | .... | 1435 |
| ೫ | ಯುಧಿಷ್ಠಿರನ ಸಭೆಗೆ ನಾರದರ ಆಗಮನ : ಪ್ರಶ್ನೆಗಳ ರೂಪದಲ್ಲಿ ರಾಜನೀತಿಯ ಉಪದೇಶ | .... | 1438 |
| ೬ | ದಿವ್ಯಸಭೆಯ ವಿಷಯದಲ್ಲಿ ಯುಧಿಷ್ಠಿರನ ಜಿಜ್ಞಾಸೆ | .... | 1474 |
| ೭ | ಇಂದ್ರಸಭೆಯ ವರ್ಣನೆ | .... | 1476 |
| ೮ | ವೈವಸ್ವತನ ಸಭಾವರ್ಣನೆ | .... | 1479 |
| ೯ | ವರುಣಸಭಾವರ್ಣನೆ | .... | 1483 |
| ೧೦ | ಕುಬೇರಸಭಾವರ್ಣನೆ | .... | 1485 |
| ೧೧ | ಬ್ರಹ್ಮಸಭಾವರ್ಣನೆ | .... | 1489 |
| ೧೨ | ಹರಿಶ್ಚಂದ್ರನ ಮಹಿಮೆ : ಯುಧಿಷ್ಠಿರನಿಗೆ ಪಾಂಡುವಿನ ಸಂದೇಶ | .... | 1494 |
| ೧೩ | ಯುಧಿಷ್ಠಿರನಿಂದ ರಾಜಸೂಯಯಾಗದ ಸಂಕಲ್ಪ : ಅದಕ್ಕಾಗಿ ಅನುಜರೊಡನೆ, ಮಂತ್ರಿಗಳೊಡನೆ, ಋಷಿ-ಮಹರ್ಷಿಗಳೊಡನೆ ಮತ್ತು ಶ್ರೀಕೃಷ್ಣನೊಡನೆ ಸಮಾಲೋಚನೆ | .... | 1499 |
| ೧೪ | ಶ್ರೀಕೃಷ್ಣನು ರಾಜಸೂಯಯಾಗಕ್ಕೆ ಸಮ್ಮತಿಸಿದುದು | .... | 1508 |
| ೧೫ | ಜರಾಸಂಧನ ವಿಷಯದಲ್ಲಿ ಯುಧಿಷ್ಠಿರ-ಭೀಮ-ಕೃಷ್ಣರ ಸಂಭಾಷಣೆ | .... | 1516 |
| ೧೬ | ಜರಾಸಂಧನ ಪರಾಕ್ರಮವನ್ನು ಕೇಳಿದ ಯುಧಿಷ್ಠಿರನಿಗೆ ರಾಜಸೂಯಯಾಗಮಾಡುವ ವಿಷಯದಲ್ಲಿ ನಿರುತ್ಸಾಹ : ರಾಜಸೂಯಯಾಗ ಮಾಡಲು ಅರ್ಜುನನಿಂದ ಪ್ರೋತ್ಸಾಹ | .... | 1522 |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೧೭ | ಶ್ರೀಕೃಷ್ಣನ ಸಲಹೆಯಂತೆ ಯುಧಿಷ್ಠಿರನು ಅರ್ಜುನನ ಅಭಿಪ್ರಾಯಕ್ಕೆ ಮನ್ನಣೆಯನ್ನಿತ್ತುದು : ಶ್ರೀಕೃಷ್ಣನಿಂದ ಜರಾಸಂಧೋಪಾಖ್ಯಾನಕಥನ | .... | 1525 |
| ೧೮ | ಜರೆಯು ರಾಜನಿಗೆ ತನ್ನ ಪರಿಚಯವನ್ನು ಮಾಡಿ ಕೊಟ್ಟುದು: ರಾಜನು ಅವಳ ಸ್ಮರಣಾರ್ಥವಾಗಿ ಶಿಶುವಿಗೆ ಜರಾಸಂಧನೆಂದು ನಾಮಕರಣ ಮಾಡಿದುದು | .... | 1535 |
| ೧೯ | ಚಂಡಕೌಶಿಕಮುನಿಯಿಂದ ಜರಾಸಂಧನ ಭವಿಷ್ಯಕಥನ : ಜರಾಸಂಧನ ರಾಜ್ಯಾಭಿಷೇಕ: ಬೃಹದ್ರಥನು ಅರಣ್ಯಕ್ಕೆ ತೆರಳಿದುದು | .... | 1538 |
| ೨೦ | ಯುಧಿಷ್ಠಿರನ ಅನುಮತಿಯನ್ನು ಪಡೆದು ಮಗಧ ರಾಜ್ಯಕ್ಕೆ ಕೃಷ್ಣಾರ್ಜುನ-ಭೀಮರ ಪ್ರಯಾಣ | .... | 1542 |
| ೨೧ | ಶ್ರೀಕೃಷ್ಣನಿಂದ ಮಗಧರಾಜಧಾನಿಯ ಪ್ರಶಂಸೆ: ಕೃಷ್ಣಾರ್ಜುನ-ಭೀಮರಿಂದ ರಾಜಸಭಾಭವನ ಪ್ರವೇಶ : ಶ್ರೀಕೃಷ್ಣ-ಜರಾಸಂಧರ ಸಂವಾದ | .... | 1547 |
| ೨೨ | ಜರಾಸಂಧ-ಕೃಷ್ಣರ ಸಂವಾದ : ಜರಾಸಂಧನ ಯುದ್ಧಸಿದ್ಧತೆ : ಜರಾಸಂಧನೊಡನೆ ಶ್ರೀಕೃಷ್ಣನ ವೈರದ ಮೂಲಕಾರಣದ ಕಥನ | .... | 1556 |
| ೨೩ | ಭೀಮಸೇನನೊಡನೆ ಯುದ್ಧಮಾಡಲು ಜರಾ ಸಂಧನ ನಿಶ್ಚಯ : ಭೀಮ-ಜರಾಸಂಧರ ದ್ವಂದ್ವ ಯುದ್ಧ : ಜರಾಸಂಧನ ಪರಾಜಯ | .... | 1562 |
| ೨೪ | ಭೀಮನಿಂದ ಜರಾಸಂಧನ ವಧೆ : ರಾಜರ ವಿಮುಕ್ತಿ : ಇಂದ್ರಪ್ರಸ್ಥಕ್ಕೆ ಕೃಷ್ಣಾರ್ಜುನ-ಭೀಮರ ಪುನರಾಗಮನ : ಶ್ರೀಕೃಷ್ಣನ ದ್ವಾರಕಾಪ್ರಯಾಣ | .... | 1567 |
| ೨೫ | ದಿಗ್ವಿಜಯಕ್ಕಾಗಿ ಅರ್ಜುನ-ಭೀಮ-ನಕುಲ-ಸಹ ದೇವರ ಪ್ರಯಾಣ | .... | 1574 |
| ೨೬ | ಉತ್ತರದಿಕ್ಕಿನ ದಿಗ್ವಿಜಯಕ್ಕಾಗಿ ಅರ್ಜುನನ ಪ್ರಯಾಣ: ಭಗದತ್ತನೇ ಮೊದಲಾದ ಸಕಲರಾಜರ ಪರಾಜಯ | ... | 1576 |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೨೭ | ಅರ್ಜುನನು ಪರ್ವತಪ್ರದೇಶದ ಅನೇಕರಾಜರನ್ನು ಗೆದ್ದುದು | .... | 1578 |
| ೨೮ | ಅರ್ಜುನನು ಕಿಂಪುರುಷ, ಹಾಟಕ, ಉತ್ತರ ಕುರುಗಳನ್ನೂ ಗೆದ್ದು ಇಂದ್ರಪ್ರಸ್ಥಕ್ಕೆ ಹಿಂದಿರುಗಿದುದು | .... | 1581 |
| ೨೯ | ಪೂರ್ವದಿಕ್ಕಿನ ವಿಜಯಕ್ಕಾಗಿ ಭೀಮನ ಪ್ರಯಾಣ : ಅನೇಕರಾಜರ ಪರಾಭವ | .... | 1583 |
| ೩೦ | ಭೀಮನು ಪೂರ್ವದಿಕ್ಕಿನ ರಾಜರನ್ನೆಲ್ಲಾ ಗೆದ್ದು ಇಂದ್ರಪ್ರಸ್ಥಕ್ಕೆ ಹಿಂದಿರುಗಿದುದು | .... | 1585 |
| ೩೧ | ಸಹದೇವನಿಂದ ದಕ್ಷಿಣದಿಗ್ವಿಜಯ | .... | 1587 |
| ೩೨ | ನಕುಲನಿಂದ ಪಶ್ಚಿಮದಿಗ್ವಿಜಯ | .... | 1598 |
| ರಾಜಸೂಯಪರ್ವ | | | |
| ೩೩ | ಯುಧಿಷ್ಠಿರನ ರಾಜ್ಯಭಾರದ ಹಿರಿಮೆ : ಶ್ರೀಕೃಷ್ಣನ ಆಜ್ಞೆಯಂತೆ ಯುಧಿಷ್ಠಿರನು ಯಜ್ಞ ದೀಕ್ಷಿತನಾದುದು : ಸಮಸ್ತಬ್ರಾಹ್ಮಣರ, ರಾಜರ ಮತ್ತು ಸಂಬಂಧಿಗಳ ಆಗಮನಕ್ಕಾಗಿ ಆಮಂತ್ರಣ | .... | 1601 |
| ೩೪ | ರಾಜಸೂಯಯಾಗಕ್ಕೆ ದೇಶ-ವಿದೇಶಗಳಿಂದ ರಾಜರ ಆಗಮನ: ಕುರು-ಯದುಪ್ರಮುಖರ ಆಗಮನ: ಎಲ್ಲರಿಗೂ ಭೋಜನಾದಿಗಳ ವ್ಯವಸ್ಥೆ | .... | 1608 |
| ೩೫ | ರಾಜಸೂಯಯಾಗದ ವರ್ಣನೆ | .... | 1610 |
| ಅರ್ಘಾಭಿಹರಣಪರ್ವ | | | |
| ೩೬ | ರಾಜಸೂಯಮಹಾಯಾಗದಲ್ಲಿ ಬ್ರಾಹ್ಮಣರ ಮತ್ತು ಕ್ಷತ್ರಿಯರ ಸಮಾಗಮ : ನಾರದರಿಂದ ಶ್ರೀಕೃಷ್ಣನ ಮಹಿಮೆಯ ಕಥನ : ಭೀಷ್ಮನ ಸಲಹೆಯಂತೆ ಶ್ರೀಕೃಷ್ಣನಿಗೆ ಅಗ್ರಪೂಜೆ | .... | 1613 |
| ೩೭ | ಶ್ರೀಕೃಷ್ಣನಿಗೆ ಪ್ರಥಮಾರ್ಘ್ಯವನ್ನು ಸಮರ್ಪಿಸಿದುದಕ್ಕಾಗಿ ಶಿಶುಪಾಲನ ಆಕ್ಷೇಪ | .... | 1619 |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೩೮ | ಶಿಶುಪಾಲನಿಗೆ ಯುಧಿಷ್ಠಿರನು ಸಮಾಧಾನ ಹೇಳಿದುದು : ಭೀಷ್ಮನು ಶಿಶುಪಾಲನ ಪ್ರಶ್ನೆಗಳಿಗೆ ಉತ್ತರಿಸಿದುದು | .... | 1625 |
| ೩೯ | ಸಹದೇವನ ಧಾರ್ಷ್ಟ್ಯದ ಮಾತು : ಶಿಶುಪಾಲಾದಿಗಳ ಯುದ್ಧಸಿದ್ಧತೆ | .... | 1631 |
| ಶಿಶುಪಾಲವಧಪರ್ವ | | | |
| ೪೦ | ಯುಧಿಷ್ಠಿರನ ಚಿಂತೆ : ಭೀಷ್ಮನು ಧರ್ಮಜನನ್ನು ಸಂತೈಸಿದುದು | .... | 1633 |
| ೪೧ | ಶಿಶುಪಾಲನು ಭೀಷ್ಮನನ್ನು ನಿಂದಿಸಿದುದು | .... | 1635 |
| ೪೨ | ಶಿಶುಪಾಲನ ಮಾತನ್ನು ಕೇಳಿ ಭೀಮನು ಕುಪಿತನಾದುದು : ಭೀಷ್ಮನು ಭೀಮನನ್ನು ಸಾಂತ್ವನಗೊಳಿಸಿದುದು | .... | 1642 |
| ೪೩ | ಭೀಷ್ಮನಿಂದ ಶಿಶುಪಾಲನ ಜನ್ಮವೃತ್ತಾಂತಕಥನ | .... | 1644 |
| ೪೪ | ಭೀಷ್ಮನ ಮಾತಿನಿಂದ ಶಿಶುಪಾಲನು ಮತ್ತಷ್ಟು ಕುಪಿತನಾದುದು : ಭೀಷ್ಮನನ್ನು ಕೊಲ್ಲಲು ಸಕಲ ರಾಜರ ಸನ್ನಾಹ : ಶ್ರೀಕೃಷ್ಣನೊಡನೆ ಯುದ್ಧ ಮಾಡಲು ಭೀಷ್ಮನಿಂದ ರಾಜರಿಗೆ ಆಹ್ವಾನ | .... | 1649 |
| ೪೫ | ಶ್ರೀಕೃಷ್ಣನಿಂದ ಶಿಶುಪಾಲನ ವಧೆ : ಯಾಗದ ಪರಿಸಮಾಪ್ತಿ : ಬ್ರಾಹ್ಮಣರೇ ಆದಿಯಾಗಿ ಎಲ್ಲರೂ ತಮ್ಮ-ತಮ್ಮ ದೇಶಗಳಿಗೆ ಪ್ರಯಾಣಮಾಡಿದುದು | .... | 1654 |
| ದ್ಯೂತಪರ್ವ | | | |
| ೪೬ | ವ್ಯಾಸರ ಭವಿಷ್ಯವಾಣಿಯಿಂದ ಯುಧಿಷ್ಠಿರನ ಚಿಂತೆ : ಸಮತ್ವಪೂರ್ವಕವಾದ ರಾಜ್ಯಭಾರ ಮಾಡಲು ಪ್ರತಿಜ್ಞೆ | .... | 1662 |
| ೪೭ | ದುರ್ಯೋಧನನು ಮಯನಿರ್ಮಿತಸಭಾಭವನವನ್ನು ಸಂದರ್ಶಿಸಿದುದು : ಕೆಲವು ಕಡೆಗಳಲ್ಲಿ ಭ್ರಮೆಯಿಂದ ಅವನು ಅಪಹಾಸ್ಯಕ್ಕೀಡಾದುದು : ಯುಧಿಷ್ಠಿರನ ವೈಭವವನ್ನು ಕಂಡು ದುರ್ಯೋಧನನ ಚಿಂತೆ | .... | 1668 |

| ಅಧ್ಯಾಯ | ವಿಷಯಗಳು | | ಪುಟಸಂಖ್ಯೆ |
|---|---|---|---|
| ೪೮ | ಪಾಂಡವರನ್ನು ಜಯಿಸಲು ಶಕುನಿ-ದುರ್ಯೋಧನರ ಸಮಾಲೋಚನೆ | .... | 1675 |
| ೪೯ | ಧೃತರಾಷ್ಟ್ರನು ಪ್ರಶ್ನಿಸಿದನಂತರ ದುರ್ಯೋಧನನು ತನ್ನ ಚಿಂತೆಯನ್ನು ತಂದೆಯೊಡನೆ ಹೇಳಿದುದು : ದ್ಯೂತಕ್ಕಾಗಿ ಧೃತರಾಷ್ಟ್ರನ ಅನುಮತಿ : ಇಂದ್ರಪ್ರಸ್ಥಕ್ಕೆ ವಿದುರನ ಪ್ರಯಾಣ | .... | 1678 |
| ೫೦ | ದುರ್ಯೋಧನನು ಧೃತರಾಷ್ಟ್ರನಿಗೆ ತನ್ನ ದುಃಖದ ಕಾರಣವನ್ನು ವಿವರಿಸಿ ಹೇಳಿದುದು | .... | 1687 |
| ೫೧ | ರಾಜರಿಂದ ಯುಧಿಷ್ಠಿರನಿಗೆ ಬಂದ ಅಪೂರ್ವ ವಸ್ತುಗಳ ವರ್ಣನೆ | .... | 1692 |
| ೫೨ | ಯುಧಿಷ್ಠಿರನಿಗೆ ತಂದೊಪ್ಪಿಸಿದ ಕಪ್ಪ-ಕಾಣಿಕೆಗಳ ವರ್ಣನೆ | .... | 1695 |
| ೫೩ | ದುರ್ಯೋಧನನಿಂದ ಯುಧಿಷ್ಠಿರನ ಸಾಮ್ರಾಜ್ಯ ಪಟ್ಟಾಭಿಷೇಕದ ವರ್ಣನೆ | .... | 1703 |
| ೫೪ | ಧೃತರಾಷ್ಟ್ರನು ದುರ್ಯೋಧನನಿಗೆ ಸಮಾಧಾನ ಹೇಳಿದುದು | .... | 1706 |
| ೫೫ | ಧೃತರಾಷ್ಟ್ರನ ಹಿತೋಕ್ತಿಗೆ ದುರ್ಯೋಧನನ ತಿರಸ್ಕಾರ | .... | 1709 |
| ೫೬ | ಧೃತರಾಷ್ಟ್ರ-ದುರ್ಯೋಧನರ ಸಂಭಾಷಣೆ : ದ್ಯೂತಸಭಾನಿರ್ಮಾಣ : ಯುಧಿಷ್ಠಿರನನ್ನು ಕರೆತರಲು ವಿದುರನಿಗೆ ಧೃತರಾಷ್ಟ್ರನ ಆಜ್ಞೆ | .... | 1714 |
| ೫೭ | ವಿದುರ-ಧೃತರಾಷ್ಟ್ರರ ಮಾತುಕತೆ | .... | 1718 |
| ೫೮ | ವಿದುರ-ಯುಧಿಷ್ಠಿರರ ಸಂಭಾಷಣೆ : ವಿದುರನ ಜೊತೆಯಲ್ಲಿ ಹಸ್ತಿನಾಪುರಕ್ಕೆ ಧರ್ಮಾದಿಗಳ ಆಗಮನ | .... | 1719 |
| ೫೯ | ಜೂಜಿನ ವಿಷಯವಾಗಿ ಶಕುನಿ-ಯುಧಿಷ್ಠಿರರ ಸಂವಾದ | .... | 1726 |
| ೬೦ | ದ್ಯೂತಕ್ರೀಡೆಯ ಆರಂಭ | .... | 1730 |
| | ಪರಿಶಿಷ್ಟ | .... | 1-16 |

## ಐದನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದಲೂ ಗುರುಭಗವಂತನ ಕೃಪಾಕಟಾಕ್ಷದಿಂದಲೂ ಸತ್ಪುರುಷರ ಸಹಕಾರ-ಸದಾಶಯಗಳಿಂದಲೂ ಮಹಾಭಾರತ ೩ನೇ ಸಂಪುಟದ ಐದನೆಯ ಪುನರ್ಮುದ್ರಣವನ್ನು ಮುಗಿಸುತ್ತಿದ್ದೇವೆ.

ಈಗ ಹೊಸ ಗ್ರಾಹಕರಿಗೆ ೧ ರಿಂದ ೧೪ನೇ ಸಂಪುಟದವರೆಗೂ ೨೧ ರಿಂದ ೨೬ನೇ ಸಂಪುಟದವರೆಗೂ ಒಟ್ಟು ೨೦ ಸಂಪುಟಗಳು ಸಿಗುವಂತಾಗಿದೆ. ೧೫ ಮತ್ತು ೨೯ನೇ ಸಂಪುಟಗಳನ್ನು ಹೆಚ್ಚು ಸದಸ್ಯರಿಗೆ ಕೊಡಬೇಕಾಗಿದೆ. ಮುಂದೆ ೧೫ನೇ ಸಂಪುಟವನ್ನು ಪುನರ್ಮುದ್ರಣಕ್ಕೆ ತೆಗೆದುಕೊಳ್ಳಲಾಗುವುದು. ಬೆಲೆಗಳು ದಿನದಿನಕ್ಕೂ ಅಧಿಕವಾಗುತ್ತಿರುವುದರಿಂದ ಹಣದ ಬಿಕ್ಕಟ್ಟು ತಲೆದೋರಿದೆ. ಇದು ನಿವಾರಣೆಯಾಗಬೇಕಾದರೆ ಹೊಸ ಗ್ರಾಹಕರ ಸಂಗ್ರಹವಾಗಬೇಕು. ಹೊಸ ಗ್ರಾಹಕರ ಸಂಗ್ರಹ ನಿಮ್ಮಿಂದಲೇ ಆಗಬೇಕು. ಒಬ್ಬರು ಇಬ್ಬರು ಗ್ರಾಹಕರನ್ನು ಮಾಡಿಕೊಟ್ಟರೂ ಸಾಕು. ಭಾರತೀಯ ಧರ್ಮದ ಪ್ರಚಾರ, ನಮ್ಮ ಹಣದ ಬಿಕ್ಕಟ್ಟಿನ ಪರಿಹಾರ ಮತ್ತು ಗ್ರಾಹಕರನ್ನು ಕೂಡಿಸಿಕೊಟ್ಟ ಆತ್ಮತೃಪ್ತಿ-ಎಲ್ಲವೂ ದೊರಕುತ್ತದೆ. ಪರಮಾತ್ಮನು ತಮ್ಮೆಲ್ಲರ ಸಹಕಾರದಿಂದ ಮುಂದಿನ ಸಂಪುಟಗಳನ್ನೂ ಸಾಧ್ಯವಾದಷ್ಟು ಬೇಗ ಪುನರ್ಮುದ್ರಣಮಾಡುವ ಚೈತನ್ಯವನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.

## ಆರನೆಯ ಮುದ್ರಣದ ಪ್ರಸ್ತಾವನೆ

ಪುನರ್ಮುದ್ರಣವಾಗಬೇಕಾಗಿರುವ ೨೪ ಸಂಪುಟಗಳಲ್ಲಿ ೨ನೆಯದಾಗಿ ೩ನೆಯ ಸಂಪುಟದ ಮುದ್ರಣವು ಪರಮಾತ್ಮನ ದಯೆಯಿಂದ ಮುಗಿದಿರುತ್ತದೆ. ಈ ಸಂಪುಟವು ಮೇ ತಿಂಗಳ ಕಡೆಯ ವೇಳೆಗೆ ವಿತರಣೆಗೆ ಸಿದ್ಧವಾಗಬಹುದು. ಮುಂದಿನ ೬-೭-೧೦ ಈ ಮೂರು ಸಂಪುಟಗಳು ಮುದ್ರಣಕ್ಕೆ ಸಿದ್ಧವಾಗುತ್ತಿವೆ. ಗ್ರಾಹಕರು ತಿಂಗಳಿಗೆ ಒಂದು ಸಂಪುಟ ಅಥವಾ $1^1/_2$ ತಿಂಗಳಿಗೆ ಒಂದು ಸಂಪುಟವನ್ನಾದರೂ ನಿರೀಕ್ಷಿಸಬಹುದು. ಪುನರ್ಮುದ್ರಣದ ಕಾರ್ಯವು ವೇಗವಾಗಿ ಸಾಗಬೇಕಾದರೆ ಭಗವಂತನ ಅನುಗ್ರಹವಾಗಬೇಕು. ಗ್ರಾಹಕರು ಬೆಂಬಲಿಸಬೇಕು. ಕಡೆಯಪಕ್ಷ ಒಬ್ಬ ಗ್ರಾಹಕರು ಇಬ್ಬರು ಗ್ರಾಹಕರನ್ನಾದರೂ ಮಾಡಿಕೊಡಬೇಕು. ಸಂಪುಟಗಳ ಮುದ್ರಣಕ್ಕೆ ಆಢ್ಯರಾದವರು ಧನಸಹಾಯ ಮಾಡಬಹುದು. ಇದಕ್ಕಿಂತಲೂ ಪುಣ್ಯತಮವಾದ ಕಾರ್ಯ ಮತ್ತೊಂದಿಲ್ಲ. ಈ ಮುದ್ರಣಕಾರ್ಯವು ಸುಗಮವಾಗಿ ನಡೆಯುವಂತೆ ಎಲ್ಲರೂ ಪರಮಾತ್ಮನನ್ನು ಪ್ರಾರ್ಥಿಸೋಣ.

–ಪ್ರಕಾಶಕರು.

ಶ್ರೀ ಮಹಾಗಣಪತಯೇ ನಮ ಃ ಶ್ರೀ ಮಹಾಸರಸ್ವತ್ಯೈ ನಮಃ ಶ್ರೀ ಸದ್ಗುರವೇ ನಮಃ



**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥**

# ಶ್ರೀಮನ್ಮಹಾಭಾರತ–ಆದಿಪರ್ವ ; ಮೂರನೆಯ ಸಂಪುಟ

೧೮೪ನೆಯ ಅಧ್ಯಾಯ ಸ್ವಯಂವರಪರ್ವ

## ಪಾಂಚಾಲನಗರಿಗೆ ಪಾಂಡವರ ಪ್ರಯಾಣ : ದಾರಿಯಲ್ಲಿ ಬ್ರಾಹ್ಮಣರೊಡನೆ ಸಂಭಾಷಣೆ

ವೈಶಂಪಾಯನರು ಪ್ರವಚನವನ್ನು ಮುಂದುವರಿಸಿ ಹೇಳುತ್ತಾರೆ :

**ತತಸ್ತೇ ನರಶಾರ್ದೂಲಾ ಭ್ರಾತರಃ ಪಞ್ಚಪಾಣ್ಡವಾಃ ।**
**ಪ್ರಯಯುರ್ದ್ರೌಪದೀಂ ದ್ರಷ್ಟುಂ ತಂ ಚ ದೇಶಂ ಮಹೋತ್ಸವಮ್ ॥೧॥**

“ಜನಮೇಜಯ! ಅನಂತರದಲ್ಲಿ ನರಶಾರ್ದೂಲರಾದ ಆ ಐವರು ಪಾಂಡವಸೋದರರೂ ದ್ರೌಪದಿಯನ್ನು ನೋಡುವ ಸಲುವಾಗಿಯೂ, ಪಾಂಚಾಲದೇಶವನ್ನು ನೋಡುವ ಸಲುವಾಗಿಯೂ ಮತ್ತು ಅಲ್ಲಿ ನಡೆಯಲಿದ್ದ ಸ್ವಯಂವರಮಹೋತ್ಸವವನ್ನು ನೋಡುವ ಸಲುವಾಗಿಯೂ ಪ್ರಯಾಣಮಾಡಿದರು.

ತಾಯಿಯೊಡನೆ ಪಾಂಚಾಲನಗರಿಗೆ ಪ್ರಯಾಣಮಾಡುತ್ತಿದ್ದಾಗ ಪಾಂಡವರು-ಹಾದಿಯಲ್ಲಿ ನೂರಾರು ಮಂದಿ ಬ್ರಾಹ್ಮಣರು ಗುಂಪು-ಗುಂಪಾಗಿ ಪಾಂಚಾಲನಗರಾಭಿಮುಖವಾಗಿಯೇ ಹೋಗುತ್ತಿರುವುದನ್ನು ಕಂಡರು. ಬ್ರಹ್ಮಚಾರಿಗಳಾದ ಪಾಂಡವರನ್ನು ಬ್ರಾಹ್ಮಣರು ಪ್ರಶ್ನಿಸಿದರು :

"ಮಹಾನುಭಾವರೇ! ನೀವೆಲ್ಲರೂ ಯಾವ ದೇಶದ ಕಡೆಯಿಂದ ಬರುತ್ತಿರುವಿರಿ ಮತ್ತು ಯಾವ ದೇಶಕ್ಕೆ ಪ್ರಯಾಣಮಾಡುತ್ತಿರುವಿರಿ?"

ಅವರ ಪ್ರಶ್ನೆಗಳಿಗೆ ಯುಧಿಷ್ಠಿರನು ಉತ್ತರವನ್ನಿತ್ತನು :

"ಬ್ರಾಹ್ಮಣೋತ್ತಮರೇ! ನಾವೈವರೂ ಸಹೋದರರು; ಜೊತೆಯಾಗಿಯೇ ಇರತಕ್ಕವರು. ನಮ್ಮ ತಾಯಿಯೊಡನೆ ಪ್ರಯಾಣ ಮಾಡುತ್ತಿರುವೆವು. ನಾವು ಏಕಚಕ್ರನಗರಿಯಿಂದ ಬರುತ್ತಿದ್ದೇವೆ."

ತಮಗೆ ತಿಳಿದಿದ್ದ ವಾರ್ತೆಯನ್ನು ಬ್ರಾಹ್ಮಣರು ಸಂಭ್ರಮದಿಂದ ಹೇಳತೊಡಗಿದರು :

"ನೀವು ಇಂದೇ ಶೀಘ್ರವಾಗಿ ದ್ರುಪದನಗರಿಗೆ ಹೋಗಿರಿ. ಅಲ್ಲಿ ಒಂದು ದೊಡ್ಡ ಸ್ವಯಂವರವು ನಡೆಯಲಿದೆ. ಆ ಸ್ವಯಂವರಕ್ಕಾಗಿ ಅಗಣಿತವಾಗಿ ದ್ರವ್ಯವನ್ನು ವೆಚ್ಚಮಾಡುವರು. ನಾವೂ ಅಲ್ಲಿಗೇ ಒಟ್ಟಿಗೆ ಹೋಗುತ್ತಿರುವೆವು. ನಮ್ಮ ಸಂಗಡವೇ ನೀವಲ್ಲಿಗೆ ಬರಬಹುದು."

ಪಾಂಡವರು ವಾರ್ತೆಯನ್ನು ಕೇಳಲು ಔತ್ಸುಕ್ಯದಿಂದ ಕೂಡಿದ ಮುಖ ಭಾವಗಳನ್ನು ತೋರುತ್ತಾ ಬ್ರಾಹ್ಮಣರೊಡನೆ ನಡೆದುಹೋಗುತ್ತಿದ್ದರು. ಮತ್ತೊಬ್ಬ ಬ್ರಾಹ್ಮಣನು ಹೇಳತೊಡಗಿದನು :

"ಅಲ್ಲೊಂದು ದೊಡ್ಡ ಹಬ್ಬವೇ ನಡೆಯುವುದು. ಮಹಾತ್ಮನಾದ ಯಜ್ಞಸೇನನೆಂಬುವನ ಬಗೆಗೆ ಕೇಳಿರುವಿರಾ? ಅವನನ್ನು ದ್ರುಪದನೆಂದೂ ಕರೆಯುವರು. ಅವನಿಗೆ ಒಬ್ಬಳು ಮಗಳಿರುವಳು. ಅವಳೇನೂ ಸಾಮಾನ್ಯಳಲ್ಲ. ಯಜ್ಞೇಶ್ವರನ ಮಧ್ಯದಿಂದ ಹೊರಬಂದವಳು. ಕಮಲದ ಎಸಳುಗಳಂತಿರುವ ಕಣ್ಣುಗಳು ; ಮಾಲಿನ್ಯವಿಲ್ಲದ (ಶುಭಲಕ್ಷಣಗಳುಳ್ಳ) ಶರೀರದ ಕಾಂತಿ ; ಎಷ್ಟು ನೋಡಿದರೂ ಮತ್ತೊಮ್ಮೆ ನೋಡಬೇಕೆನ್ನುವ ಆಕರ್ಷಣೀಯವಾದ ಸೌಂದರ್ಯ-ಇವುಗಳುಳ್ಳ ಆ ದ್ರೌಪದಿಯು ಕೋಮಲಾಂಗಿಯಾಗಿಯೂ, ಮನನಶೀಲಳಾಗಿಯೂ ಇರುವಳು. ನಿಶ್ಚಯವಾಗಿಯೂ ಅವಳು ಚೆಲುವಿನ ರಾಣಿಯೇ ಆಗಿರುವಳು.

ಅವಳ ಅಣ್ಣನ ಹೆಸರು ಧೃಷ್ಟದ್ಯುಮ್ನ. ಅವನು ಬಾಹುಬಲಪರಾ

ಕ್ರಮವುಳ್ಳವನು. ದ್ರೋಣನನ್ನು ಸಂಹಾರಮಾಡುವುದಕ್ಕಾಗಿಯೇ ಅವನು ಹುಟ್ಟಿರುವನೆಂದೂ ಹೇಳುತ್ತಾರೆ. ಆತನು ಧನುರ್ಬಾಣಗಳನ್ನೂ, ಕತ್ತಿ-ಕವಚಗಳನ್ನೂ ಧರಿಸಿ ಎರಡನೆಯ ಯಜ್ಞೇಶ್ವರನಂತೆಯೇ ಯಜ್ಞಮಂಟಪವನ್ನು ಬೆಳಗುತ್ತಾ ಅಗ್ನಿಕುಂಡದ ಮಧ್ಯಭಾಗದಿಂದ ಹೊರಗೆ ಬಂದವನು. ಅವನ ತಂಗಿಯಾದ, ಕೃಶಮಧ್ಯೆಯಾದ, ಕಳಂಕರಹಿತಳಾದ ದ್ರೌಪದಿಯ ಶರೀರದಿಂದ ಹೊರಸೂಸುವ ಸುಗಂಧವು ಒಂದು ಹರಿದಾರಿಯವರೆಗೂ ಪ್ರಸರಿಸುವುದು."

ಮತ್ತೊಬ್ಬ ಬ್ರಾಹ್ಮಣನು ಮಾತನ್ನು ಮುಂದುವರಿಸಿದನು :

"ಸ್ವಯಂವರದ ಮೂಲಕವಾಗಿ ವಿವಾಹವಾಗಲಿರುವ ದ್ರುಪದನ ಪುತ್ರಿಯನ್ನು ನೋಡುವ ಸಲುವಾಗಿಯೂ, ದೇವಲೋಕದಲ್ಲಿ ನಡೆಯುವ ವೈಭವಪೂರ್ಣವಾದ ಮಹೋತ್ಸವಕ್ಕೆ ಸದೃಶವಾದ ಉತ್ಸವವನ್ನು ನೋಡುವ ಸಲುವಾಗಿಯೂ ನಾವಲ್ಲಿಗೆ ಪ್ರಯಾಣಮಾಡುತ್ತಿದ್ದೇವೆ."

ಮತ್ತೊಬ್ಬ ಬ್ರಾಹ್ಮಣನು ತಮಗಾಗುವ ಪ್ರಯೋಜನವನ್ನೂ ವಿವರಿಸಿ ಹೇಳಿದನು :

"ಯಜ್ಞಶೀಲರೂ, ದಾನಶೀಲರೂ, ಭೂರಿದಕ್ಷಿಣೆಗಳನ್ನು ಕೊಡುವವರೂ, ವೇದಾಧ್ಯಯನಸಂಪನ್ನರೂ, ಶುದ್ಧರೂ, ಮಹಾತ್ಮರೂ, ವ್ರತನಿಷ್ಠರೂ, ತರುಣರೂ, ದರ್ಶನೀಯರೂ, ಅತಿರಥ-ಮಹಾರಥರೂ, ಅಸ್ತ್ರವಿದ್ಯಾನಿಪುಣರೂ ಆದ ರಾಜರೂ ಮತ್ತು ರಾಜಪುತ್ರರೂ ನಾನಾದೇಶ ಗಳಿಂದ ಸ್ವಯಂವರಕ್ಕಾಗಿ ಅಲ್ಲಿಗೆ ಬರುತ್ತಾರೆ. ಅಲ್ಲಿಗೆ ಬರುವ ರಾಜಕುಮಾರ ರೆಲ್ಲರಿಗೂ ದ್ರೌಪದಿಯನ್ನು ಪಡೆಯುವ ಆಶಯವಿದ್ದೇ ಇರುತ್ತದೆ. ತಾವು ವಿಜಯಗಳಿಸುವ ಸಲುವಾಗಿ (ದ್ರೌಪದಿಯನ್ನು ಪಡೆಯುವ ಸಲುವಾಗಿ) ಆ ರಾಜರೆಲ್ಲರೂ ನಾನಾವಿಧವಾದ, ದಾನಯೋಗ್ಯವಾದ ವಸ್ತುಗಳನ್ನು ಕೊಡುತ್ತಾರೆ. ಧನ-ಕನಕವಸ್ತುಗಳನ್ನೂ, ಗೋವುಗಳನ್ನೂ ದಾನಕೊಡುವ ರಲ್ಲದೇ ಭಕ್ಷ್ಯ-ಭೋಜ್ಯಾದಿಗಳಿಂದ ಕೂಡಿದ ಮೃಷ್ಟಾನ್ನವನ್ನೂ ನೀಡು ತ್ತಾರೆ. ಅವರು ಕೊಡುವ ಧನ-ಧಾನ್ಯಾದಿ ದಾನಗಳನ್ನು ಪಡೆದು, ವೈಭವ

ಪೂರ್ಣವಾಗಿ ನಡೆಯುವ ಸ್ವಯಂವರವನ್ನೂ ನೋಡಿ ಆನಂದಿಸಿ, ಮುಂದೆ ನಾವು ನಮ್ಮ ಇಚ್ಛೆಬಂದಲ್ಲಿಗೆ ಹೊರಟುಹೋಗುವೆವು."

ಮತ್ತೊಬ್ಬನು ಹೇಳಿದನು :

"ಇಷ್ಟು ಮಾತ್ರವಲ್ಲ. ನಾನಾದೇಶಗಳಿಂದ ಬರುವ ರಾಜಕುಮಾರರ ಜೊತೆಯಲ್ಲಿ ಸಂಗೀತಗಾರರು, ವಾದ್ಯಗಾರರು, ನರ್ತಕರು, ಸೂತ-ಮಾಗಧರು ಮತ್ತು ಮಲ್ಲಯುದ್ಧಮಾಡುವ ಮಹಾಬಲರಾದ ಜಟ್ಟಿಗಳು ಎಲ್ಲರೂ ಬರುತ್ತಾರೆ. ಅವರಿಂದ ಕಲಾಪ್ರದರ್ಶನದ ವ್ಯವಸ್ಥೆಯನ್ನೂ ಏರ್ಪಡಿಸಲಾಗಿದೆ. ರಾಜಕುಮಾರರು ಕೊಡುವ ಭೂರಿದಕ್ಷಿಣೆಗಳನ್ನು ತೆಗೆದುಕೊಂಡು, ನೇತ್ರಾನಂದಕರವಾಗುವ ಸ್ವಯಂವರವನ್ನೂ ನೋಡಿ, ನೃತ್ಯ-ನಾಟಕಗಳ ಪ್ರದರ್ಶನವನ್ನೂ ಸಂದರ್ಶಿಸಿ, ಮಹಾತ್ಮರಾದ ನೀವೂ ನಮ್ಮ ಜೊತೆಯಲ್ಲಿಯೇ ಹಿಂದಿರುಗಬಹುದು."

ಆ ಮಧ್ಯದಲ್ಲಿ ಬೇರೊಬ್ಬನು ಒಂದು ಉದ್ಗಾರವನ್ನು ತೆಗೆದನು :

"ನೀವೆಲ್ಲರೂ ದೇವತೆಗಳಂತೆಯೇ ಸ್ಫುರದ್ರೂಪಿಗಳಾಗಿರುವಿರಿ. ಅದೃಷ್ಟವಶದಿಂದ ನಿಮ್ಮ ಮೇಲೆ ರಾಜಕುಮಾರಿಯ ದೃಷ್ಟಿಯು ಬಿದ್ದು ನಿಮ್ಮ ಐವರಲ್ಲಿ ಯಾರೊಬ್ಬರ ಕೊರಳಿಗಾದರೂ ಸ್ವಯಂವರಮಾಲೆಯನ್ನು ಹಾಕಿದರೂ ಹಾಕಬಹುದು."

ಇನ್ನೊಬ್ಬನು ಭೀಮನ ಕಡೆಗೆ ತಿರುಗಿ ಹೇಳಿದನು :

"ಅದು ಹೇಗಾದರೂ ಆಗಲಿ ; ಇವನು ಇತರ ದೇಶಗಳಿಂದ ಬರುವ ಮಲ್ಲರೊಡನೆ ಕುಸ್ತಿಗೆ ನಿಂತರೆ ಜಯಗಳಿಸುವುದಂತೂ ನಿಶ್ಚಯ. ಅದರಿಂದ ಯಥೇಚ್ಛವಾಗಿ ಹಣವನ್ನೂ ಗಳಿಸುತ್ತಾನೆ. ನಿಮ್ಮ ಸಂತೋಷವನ್ನು ಹೆಚ್ಚಿಸುತ್ತಾನೆ."

ಬ್ರಾಹ್ಮಣರ ಮಾತುಗಳೆಲ್ಲವನ್ನೂ ಕೇಳಿ ಯುಧಿಷ್ಠಿರನು ಮುಗುಳ್ನಗೆಯನ್ನು ಬೀರುತ್ತಾ ಹೇಳಿದನು :

"ಬ್ರಾಹ್ಮಣೋತ್ತಮರೇ! ನಾವೆಲ್ಲರೂ ನಿಮ್ಮೊಡನೆ ಮಹಾಸಂಭ್ರಮ

ದಿಂದ ನಡೆಯಲಿರುವ ಸ್ವಯಂವರಮಹೋತ್ಸವವನ್ನು ನೋಡುವುದಕ್ಕಾಗಿಯೇ ಬರುತ್ತೇವೆ. ನಡೆಯಿರಿ, ಹೋಗೋಣ."

ಗಲಳನೆಯ ಅಧ್ಯಾಯವು ಮುಗಿಯಿತು.

ಗಲಜನೆಯ ಅಧ್ಯಾಯ ಸ್ವಯಂವರಪರ್ವ (ಮುಂದುವರಿದಿದೆ.)

**ಪಾಂಚಾಲರಾಜಧಾನಿಗೆ ಪಾಂಡವರ ಆಗಮನ:**
**ಕುಂಬಾರನ ಮನೆಯಲ್ಲಿ ವಾಸ:**
**ಸ್ವಯಂವರಸಭಾವರ್ಣನೆ: ಧೃಷ್ಟದ್ಯುಮ್ನನ ಘೋಷಣೆ**

ವೈಶಂಪಾಯನರು ಹೇಳುತ್ತಾರೆ :

**ಏವಮುಕ್ತಾಃ ಪ್ರಯಾತಾಸ್ತೇ ಪಾಣ್ಡವಾ ಜನಮೇಜಯ ।**
**ರಾಜ್ಞಾ ದಕ್ಷಿಣಪಞ್ಚಾಲಾನ್ದ್ರುಪದೇನಾಭಿರಕ್ಷಿತಾನ್ ॥೧॥**

"ಜನಮೇಜಯ! ಬ್ರಾಹ್ಮಣರಿಂದ ಹೀಗೆ ಹೇಳಲ್ಪಟ್ಟ ಪಾಂಡವರು ದ್ರುಪದನಿಂದ ರಕ್ಷಿಸಲ್ಪಡುತ್ತಿದ್ದ ದಕ್ಷಿಣಪಾಂಚಾಲದೇಶದ ಕಡೆಗೆ ಬ್ರಾಹ್ಮಣರೊಡನೆ ಪ್ರಯಾಣವನ್ನು ಮುಂದುವರಿಸಿದರು.

ನಡುದಾರಿಯಲ್ಲಿ ಪಾಂಡವವೀರರು ಮಹಾತ್ಮರಾದ, ಶುದ್ಧಾತ್ಮರಾದ, ಕಲ್ಮಶರಹಿತರಾದ, ಪೂಜ್ಯರಾದ ಕೃಷ್ಣದ್ವೈಪಾಯನರನ್ನು ಸಂದರ್ಶಿಸಿದರು.

ಮಹರ್ಷಿಗಳನ್ನು ಯಥೋಚಿತವಾಗಿ ಸತ್ಕರಿಸಿ, ಆಶೀರ್ವಾದಗಳನ್ನು ಪಡೆಯುವುದರ ಮೂಲಕ ಮಹರ್ಷಿಗಳಿಂದ ಅನುಗೃಹೀತರಾಗಿ, ಸಮಯೋಚಿತವಾದ ಸಂಭಾಷಣೆಗಳು ನಡೆದನಂತರ ವ್ಯಾಸರ ಅನುಜ್ಞೆಯನ್ನು ಪಡೆದು ಮುಂದೆ ನಡೆದರು.

ಸುಂದರವಾದ ವನಗಳನ್ನೂ, ರಮಣೀಯವಾದ ಸರೋವರಗಳನ್ನೂ ನೋಡುತ್ತಾ, ಅಲ್ಲಲ್ಲಿ ವಿಶ್ರಾಂತಿಯನ್ನು ಪಡೆಯುತ್ತಾ, ಸ್ವಾಧ್ಯಾಯನಿರತರಾದ, ಶುಚಿಗಳಾದ, ವಿನೀತರಾದ, ಪ್ರಿಯಭಾಷಿಗಳಾದ, ಮಹಾರಥರಾದ ಪಾಂಡವರು ನದೀ-ನದ-ಸರೋವರಗಳನ್ನೂ ಗಿರಿ-ದುರ್ಗ-ಪರ್ವತಗಳನ್ನೂ ದಾಟಿ ದ್ರುಪದನ ಪಟ್ಟಣವನ್ನು ಪ್ರವೇಶಿಸಿದರು. ಪಟ್ಟಣವನ್ನೂ,

ಅದರ ಕೋಟೆಯನ್ನೂ ವೀಕ್ಷಿಸಿದನಂತರ ಅವರು ಒಬ್ಬ ಕುಂಬಾರನ ಮನೆಯಲ್ಲಿ ಬಿಡಾರಮಾಡಿದರು.

ಅವರ ಜೊತೆಯಲ್ಲಿ ನಡೆದುಬರುತ್ತಿದ್ದ ಬ್ರಾಹ್ಮಣರು ತಮಗಿಚ್ಛೆ ಬಂದಲ್ಲಿಗೆ ಹೊರಟುಹೋದರು. ಪಾಂಡವರು ಹಿಂದಿನಂತೆ ಬ್ರಾಹ್ಮಣವೇಷ ದಲ್ಲಿಯೇ ಇದ್ದು ಭಿಕ್ಷಾಟನೆಯಿಂದಲೇ ಜೀವಿಸತೊಡಗಿದರು. ದ್ರುಪದನ ರಾಜಧಾನಿಯಲ್ಲಿ ಅವರಾರೆಂಬುದು ಯಾರೊಬ್ಬರಿಗೂ ಗೋಚರವಾಗಲಿಲ್ಲ.

ದ್ರುಪದನಿಗೆ ಮೊದಲಿನಿಂದಲೂ ಮಗಳಾದ ದ್ರೌಪದಿಯನ್ನು ಅರ್ಜುನನಿಗೇ ಕೊಟ್ಟು ವಿವಾಹಮಾಡಬೇಕೆಂಬ ಅಭಿಲಾಷೆಯಿದ್ದಿತು. ಆದರೆ ದ್ರುಪದನು ತನ್ನ ಮನಸ್ಸಿನಲ್ಲಿದ್ದ ಅಭಿಲಾಷೆಯನ್ನು ಯಾರಲ್ಲಿಯೂ ಬಹಿರಂಗಪಡಿಸಿರಲಿಲ್ಲ. ಅರ್ಜುನನನ್ನೇ ಅಳಿಯನನ್ನಾಗಿ ಪಡೆಯಬೇಕೆಂಬ ತನ್ನ ಅಭಿಲಾಷೆಯನ್ನು ಸಾಧಿಸಿಕೊಳ್ಳಲು ದ್ರುಪದನು ಆಲೋಚಿಸಿ, ಅರ್ಜುನನೊಬ್ಬನ ಹೊರತಾಗಿ ಮತ್ತಾರಿಂದಲೂ ಬಗ್ಗಿಸಿ ಹೆದೆಯೇರಿಸಲು ಸಾಧ್ಯವಾಗದಂತಹ ಮಹಾಧನುಸ್ಸೊಂದನ್ನು ಸಿದ್ಧಪಡಿಸಿದನು. ಅಷ್ಟು ಮಾತ್ರವಲ್ಲ ; ಚಕ್ರಾಕಾರವಾಗಿ ಸುತ್ತುತ್ತಿದ್ದ ಯಂತ್ರವೊಂದನ್ನು ಅಂತರಿಕ್ಷದಲ್ಲಿ ನಿರ್ಮಿಸಿ, ಆ ಯಂತ್ರದ ಮೇಲೆ 'ಲಕ್ಷ್ಯ'ವನ್ನಿಟ್ಟಿದ್ದನು. ತಾನು ಮಾಡಿಸಿರುವ ಮಹಾಧನುಸ್ಸನ್ನು ಎತ್ತಿ ಬಗ್ಗಿಸಿ ಹೆದೆಯೇರಿಸುವ ಶಕ್ತಿಯೂ ಮತ್ತು ಸುತ್ತುವ ಚಕ್ರದ ಮೂಲಕವಾಗಿ ಲಕ್ಷ್ಯವನ್ನು ಭೇದಿಸುವ ನೈಪುಣ್ಯವೂ ಅರ್ಜುನನೊಬ್ಬನಿಗಲ್ಲದೆ ಮತ್ತಾರಿಗೂ ಇಲ್ಲವೆಂಬ ದೃಢವಿಶ್ವಾಸವೂ ದ್ರುಪದನಿಗಿದ್ದಿತು.

"ಸ್ವಯಂವರಮಂಟಪದಲ್ಲಿ ಸಿದ್ಧಪಡಿಸಿರುವ ಮಹಾಧನುಸ್ಸನ್ನು ಮೇಲೆತ್ತಿ-ಹೆದೆಯೇರಿಸಿ, ಇಲ್ಲಿಯೇ ಇರುವ ಬಾಣಗಳಿಂದ ಅಂತರಿಕ್ಷದಲ್ಲಿ ಚಲಿಸುತ್ತಿರುವ ಯಂತ್ರದ ಮೂಲಕವಾಗಿ ಲಕ್ಷ್ಯಕ್ಕೆ ಗುರಿಯಿಟ್ಟು ಹೊಡೆದು, ಲಕ್ಷ್ಯವನ್ನು ಭೇದಿಸುವವನು ತನ್ನ ಮಗಳ ಕೈಹಿಡಿಯುವನು"– ಎಂಬುದಾಗಿ ದ್ರುಪದನು ಘೋಷಿಸಿದನು.

ಜನಮೇಜಯ! ದ್ರುಪದನು ಈ ರೀತಿಯಲ್ಲಿ ಸ್ವಯಂವರನಿಯಮ ವನ್ನು ಉದ್ಘೋಷಿಸಿದನಂತರ – ರಾಜದೂತರ ಮೂಲಕ ದ್ರುಪದನ

ಘೋಷಣೆಯನ್ನು ಕೇಳಿದ ನಾನಾದೇಶಗಳ ರಾಜರು ದ್ರುಪದನಗರಿಗೆ ಧಾವಿಸಿದರು. ಸ್ವಯಂವರವನ್ನು ನೋಡಲು ಋಷಿಗಳೂ ಆಗಮಿಸಿದರು. ಕರ್ಣನೊಡನೆ ದುರ್ಯೋಧನಾದಿ ಕುರುಗಳೂ ಬಂದರು. ಮಹಾಭಾಗರಾದ ಬ್ರಾಹ್ಮಣರು ನಾನಾದೇಶಗಳಿಂದ ಆಗಮಿಸಿದರು. ದ್ರೌಪದಿಯ ಕೈಹಿಡಿಯಬೇಕೆಂದು ಬಂದ ರಾಜರಿಗೂ, ಸ್ವಯಂವರವನ್ನು ನೋಡಲೆಂದೇ ಬಂದವರಿಗೂ ದ್ರುಪದನಿಂದ ಯಥೋಚಿತವಾದ ಸತ್ಕಾರವು ಸಿಕ್ಕಿತು.

ಪಟ್ಟಣಿಗರ ಆನಂದಕ್ಕಂತೂ ಪಾರವೇ ಇಲ್ಲವಾಯಿತು. ಒಳ್ಳೊಳ್ಳೆಯ ವಸ್ತ್ರಾಭರಣಗಳನ್ನು ಧರಿಸಿ, ಸಮುದ್ರದ ಅಲೆಗಳೋಪಾದಿಯಲ್ಲಿ ಶಬ್ದ ಮಾಡುತ್ತಾ ಪೌರರು ಸಾಲು-ಸಾಲಾಗಿ ಸ್ವಯಂವರಮಂಟಪದೊಳಗೆ ಧಾವಿಸುತ್ತಿದ್ದರು. ಸ್ವಯಂವರಮಂಟಪದಲ್ಲಿ ಪ್ರೇಕ್ಷಕರಿಗಾಗಿಯೇ ಪ್ರತ್ಯೇಕ ಸ್ಥಳವನ್ನು ಏರ್ಪಡಿಸಲಾಗಿತ್ತು. ನಾಗರಿಕರೆಲ್ಲರೂ ಪ್ರೇಕ್ಷಕರಿಗೆ ಏರ್ಪಡಿಸಿದ್ದ ಆಸನಗಳಲ್ಲಿ ಕುಳಿತರು.

ಸ್ವಯಂವರಮಂಟಪದಲ್ಲಿ ಕಡಲಬೆಕ್ಕಿನ ಆಕಾರದಲ್ಲಿ ಆಸನಗಳನ್ನು ಸಜ್ಜುಗೊಳಿಸಲಾಗಿದ್ದಿತು. ಅದರ ಶಿರಃಪ್ರದೇಶವು ಈಶಾನ್ಯದಿಕ್ಕಿಗಿದ್ದಿತು. ಈಶಾನ್ಯದಿಕ್ಕಿಗೆ ಅಪರಾಜಿತದಿಕ್ಕೆಂದೂ ಹೇಳುವರು. ವಿಜಯೇಚ್ಛುಗಳಾದ ರಾಜರು ಈ ಕಾರಣದಿಂದಾಗಿ ಶಿರಃಪ್ರದೇಶದಲ್ಲಿದ್ದ ಆಸನಗಳಲ್ಲಿಯೇ ಕುಳಿತರು.

ಸ್ವಯಂವರಮಂಟಪದ ಅಂದವನ್ನು ವರ್ಣಿಸಲಸದಳ. ನಗರಕ್ಕೆ ಈಶಾನ್ಯದಿಕ್ಕಿನಲ್ಲಿ ಹಳ್ಳ-ತಿಟ್ಟುಗಳಿಲ್ಲದ ಸಮನೆಲದಲ್ಲಿ ಸ್ವಯಂವರ ಮಂಟಪವು ಕಟ್ಟಲ್ಪಟ್ಟಿದ್ದಿತು. ಸ್ವಯಂವರಮಂಟಪದ ಸುತ್ತಲೂ ಸ್ವಯಂವರ ಕ್ಕಾಗಿ ಬಂದಿದ್ದ ರಾಜರಿಗಾಗಿ ತಂಗಲು ದೊಡ್ಡ-ದೊಡ್ಡ ಸೌಧಗಳು ನಿರ್ಮಿತ ವಾದುವು. ಸೌಧಗಳನ್ನು ಆವರಿಸಿ ಎತ್ತರವಾದ ಆವರಣಭಿತ್ತಿಗಳಿದ್ದುವು. ಸುತ್ತಲೂ ಕಂದಕವಿದ್ದಿತು. ಸೌಧಗಳ ಸುತ್ತಲೂ ನಾಲ್ಕಾರು ಬಾಗಿಲುಗಳಿದ್ದುವು. ಅವು ತಳಿರುತೋರಣಗಳಿಂದ ಅಲಂಕೃತವಾಗಿದ್ದುವು.

ಸಮಾಜವಾಟವನ್ನು (ಸ್ವಯಂವರಮಂಟಪವನ್ನು) ಬಗೆ-ಬಗೆಯ ಬಣ್ಣದ ಬಟ್ಟೆಗಳ ಮೇಲ್ಕಟ್ಟುಗಳಿಂದ ಅಲಂಕರಿಸಿದ್ದರು. ನೂರಾರು ಮಂಗಳ

ವಾದ್ಯಗಳು ಮೊಳಗುತ್ತಿದ್ದುವು. ಚಂದನಮಿಶ್ರವಾದ ಪರಿಮಳೋದಕವನ್ನು ಸಮಾಜವಾಟದೊಳಗೆ ಸೇಚನೆಮಾಡಿದ್ದರು. ಮಲ್ಲಿಗೆ, ಸೇವಂತಿಗೆ, ಜಾಜಿ, ಕೇದಿಗೆ, ಸಂಪಿಗೆ ಮುಂತಾದ ಸುಗಂಧಪುಷ್ಪಗಳ ಗುಚ್ಛಗಳಿಂದಲೂ ಅಲಂಕರಿಸಿದ್ದರು. ಅಗುರುವಿನ ಧೂಪವನ್ನು ಹಾಕಿದ್ದರು. ಕೈಲಾಸಪರ್ವತದ ಶಿಖರದಂತೆ ಶುಭ್ರವಾದ ಮತ್ತು ಗಗನಚುಂಬಿಗಳಾದ ಉನ್ನತ ಸೌಧಗಳಿಂದ ಪರಿವೃತವಾಗಿದ್ದ ಸಮಾಜವಾಟವು ಆ ಸಮಯದಲ್ಲಿ ಬಹಳ ಸುಂದರವಾಗಿ ಪ್ರಕಾಶಿಸುತ್ತಿದ್ದಿತು.

ಆ ದಿವ್ಯಸೌಧಗಳ ಗವಾಕ್ಷಗಳ ಬಾಗಿಲುಗಳಿಗೆ ಚಿನ್ನದ ಜಾಲರಿಗಳನ್ನು ಹಾಕಿದ್ದರು. ಜಗಲಿಗಳನ್ನು ವಜ್ರ-ವೈಢೂರ್ಯಾದಿಗಳಿಂದ ಅಲಂಕರಿಸಲಾಗಿತ್ತು. ಸೌಧಗಳ ಮಹಡಿಗಳ ಮೇಲೆ ಹೋಗಲು ಸುಂದರವಾದ, ಸುಲಭವಾಗಿ ಹತ್ತಲು ಸಾಧ್ಯವಾಗಬಹುದಾದ ಮೆಟ್ಟಲುಗಳನ್ನು ಮಾಡಿಸಿದ್ದರು. ನೆಲದ ಮೇಲೆ ಅತಿಶ್ರೇಷ್ಠವಾದ ರತ್ನಗಂಬಳಿಯನ್ನು ಹಾಕಿಸಿದ್ದರು. ಸೌಧಗಳ ಒಳಭಾಗವನ್ನೂ, ಹೊರಭಾಗವನ್ನೂ ಸುಗಂಧಮಯವಾದ ಪುಷ್ಪಹಾರಗಳಿಂದ ಅಲಂಕರಿಸಿದ್ದರು. ಧೂಪವನ್ನು ಹಾಕಿದ್ದರು. ಹೂವಿನ ಮಧುರಸುಗಂಧವು ಒಂದು ಯೋಜನದವರೆಗೂ ಪ್ರಸರಿಸಿದ್ದಿತು.

ಹಂಸಗಳಂತೆಯೂ, ಕಿರಣಗಳಂತೆಯೂ ಬಿಳುಪಾಗಿದ್ದ ಆ ಬಿಡಾರಗಳು ಶುಭ್ರವಾಗಿದ್ದುವು. ಪ್ರತಿಯೊಂದು ಸೌಧಕ್ಕೂ ಬಹಳ ದೊಡ್ಡದಾದ ಹಲವಾರು ಬಾಗಿಲುಗಳಿದ್ದುವು. ಪ್ರತಿಯೊಂದು ಸೌಧದಲ್ಲಿಯೂ ಹಂಸತೂಲಿಕಾತಲ್ಪಗಳಿದ್ದುವು. ಅಮೂಲ್ಯವಾದ ರತ್ನಗಳಿಂದ ಸುಶೋಭಿತವಾಗಿದ್ದ ಆ ಮನೆಗಳು ಗೈರಿಕಾದಿ ಧಾತುಪೂರ್ಣವಾದ ಹಿಮವತ್ಪರ್ವತದ ಶಿಖರಗಳಂತೆಯೇ ಕಾಣುತ್ತಿದ್ದುವು. ಒಂದೊಂದು ಸೌಧಕ್ಕೂ ಏಳೇಳು ಅಂತಸ್ತುಗಳಿದ್ದುವು. ದ್ರುಪದನಿಂದ ಆಹ್ವಾನಿತರಾಗಿದ್ದ ರಾಜರೆಲ್ಲರೂ ಆ ದಿವ್ಯಸೌಧಗಳಲ್ಲಿ ತಂಗಿದ್ದರು.

'ಅನ್ಯರಿಗಿಂತಲೂ ತಾನು ಸುಂದರನಾಗಿ ಕಾಣಬೇಕು' – ಎಂಬ ಅಭಿಲಾಷೆಯಿಂದ ಎಲ್ಲ ರಾಜಕುಮಾರರೂ ದಿವ್ಯಾಭರಣಗಳಿಂದಲೂ, ದಿವ್ಯಾಂಬರಗಳಿಂದಲೂ, ಚಂದನ ಮತ್ತು ಕಪ್ಪಾದ ಅಗುರುಗಳ ಲೇಪನಗಳಿಂದಲೂ

ತಮ್ಮ ಶರೀರಕಾಂತಿಯನ್ನು ಹೆಚ್ಚಿಸಿಕೊಂಡು, ತಮಗೆ ಮೀಸಲಾಗಿದ್ದ ಸಿಂಹಾಸನಗಳಲ್ಲಿ ಠೀವಿಯಿಂದ ಕುಳಿತಿದ್ದರು. ಕೃಷ್ಣೆಯ ಸ್ವಯಂವರವನ್ನು ನೋಡಲು ಬಂದು ಸಮಾಜವಾಟದಲ್ಲಿ ಕುಳಿತಿದ್ದ ಪ್ರಜೆಗಳು ಮಹಾಸತ್ತ್ವರಾದ, ಪರಾಕ್ರಮಿಗಳಾದ ಠೀವಿಯಿಂದ ಕುಳಿತಿದ್ದ ರಾಜಕುಮಾರರನ್ನು ಕಂಡರು.

ರಾಜಕುಮಾರರೆಲ್ಲರೂ ಬ್ರಹ್ಮನಿಷ್ಠರಾಗಿ, ದಯಾರ್ದ್ರಹೃದಯರಾಗಿ, ದಾನಶೀಲರಾಗಿ, ಶತ್ರುಗಳಿಂದ ತಮ್ಮ ದೇಶವನ್ನು ರಕ್ಷಿಸುವವರಾಗಿ, ಸುಚರಿತ್ರರಾಗಿ ಇದ್ದುದರಿಂದ ತಮ್ಮ ದೇಶದ ಪ್ರಜೆಗಳ ಪ್ರೀತಿಗೆ ಪಾತ್ರರಾಗಿದ್ದರು.

ಪಾಂಡವರೂ ಸಹ ಪಾಂಚಾಲರಾಜನ ವೈಭವವನ್ನು ವೀಕ್ಷಿಸುತ್ತಾ ಸಮಾಜವಾಟದೊಳಗೆ ಪ್ರವೇಶಿಸಿ ಬ್ರಾಹ್ಮಣರ ಮಧ್ಯದಲ್ಲಿ ಕುಳಿತರು.

ರಾಜಕುಮಾರರ, ನಟ-ನರ್ತಕರ, ಸಂಗೀತಗಾರರ ಮತ್ತು ಬ್ರಾಹ್ಮಣರ ಸಂಖ್ಯೆಯು ದಿನ-ದಿನಕ್ಕೂ ಹೆಚ್ಚುತ್ತಿದ್ದು ಹದಿನಾರನೆಯ ದಿನಕ್ಕೆ ಸಮಾಜವಾಟವು ಹಿಡಿಸದಷ್ಟು ಜನಸಂದಣಿಯು ಸೇರಿತು.

ಸ್ವಯಂವರಮಂಟಪವು ಉಕ್ಕಿಬಂದ ಸಮುದ್ರದೋಪಾದಿಯಲ್ಲಿ ಜನಸ್ತೋಮದಿಂದ ತುಂಬಿಹೋಗಿದ್ದಿತು. ದ್ರೌಪದಿಯು ಮಂಗಳಸ್ನಾನವನ್ನು ಮಾಡಿ, ಸರ್ವಾಭರಣಗಳನ್ನೂ ಧರಿಸಿ, ಸ್ವರ್ಣಮಯವಾದ ಸೆರಗಿನಿಂದ ಶೋಭಿಸುತ್ತಿದ್ದ ಪೀತಾಂಬರವನ್ನುಟ್ಟು, ಸ್ವರ್ಣಮಯವಾದ ವರಣಮಾಲೆಯನ್ನು ಕೈಯಲ್ಲಿ ಹಿಡಿದುಕೊಂಡು ಮಂದಗಾಮಿನಿಯಾಗಿ ಅಣ್ಣನಾದ ಧೃಷ್ಟದ್ಯುಮ್ನನೊಡನೆ ಸಮಾಜವಾಟವನ್ನು ಪ್ರವೇಶಿಸಿದಳು.

ಮಂಗಳವಾದ್ಯಗಳು ಸುತ್ತಲೂ ಮೊಳಗುತ್ತಿದ್ದುವು. ಸೋಮಕವಂಶದ ಪುರೋಹಿತರು ಯಥಾವಿಧಿಯಾಗಿ ಯಜ್ಞೇಶ್ವರನನ್ನು ಪ್ರತಿಷ್ಠಾಪಿಸಿ (ಪರಿಸ್ತರಣಗಳನ್ನು ಹಾಕಿ), ಪೀಡಾಪರಿಹಾರಕಗಳಾದ ಮಹಾಮಂತ್ರಗಳಿಂದ ಆಜ್ಯಾಹುತಿಗಳನ್ನು ಅರ್ಪಿಸಿದರು. ನೆರೆದಿದ್ದ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿದರು. ಅನಂತರ ಧೃಷ್ಟದ್ಯುಮ್ನನು ಮಂಗಳವಾದ್ಯಗಳನ್ನು ನಿಲ್ಲಿಸುವಂತೆ ಸಂಜ್ಞೆಮಾಡಿ, ಅಲ್ಲಿ ನೆರೆದಿದ್ದ ರಾಜಕುಮಾರರನ್ನು ಕುರಿತು ಮೇಘನಾದದಂತೆ ಗಂಭೀರವಾದ ಧ್ವನಿಯಲ್ಲಿ ಹೇಳತೊಡಗಿದನು :

"ರಾಜಕುಮಾರರೇ! ನಾನು ಹೇಳುವ ಮಾತುಗಳನ್ನು ಆಲಿಸಿರಿ."

ಧೃಷ್ಟದ್ಯುಮ್ನನು ಮಾತನಾಡಲು ಪ್ರಾರಂಭಿಸಿದೊಡನೆಯೇ ಸಭೆಯು ನಿಶ್ಶಬ್ದವಾಯಿತು. ರಾಜಕುಮಾರರು ಕಡೆದ ಪುತ್ಥಳಿಯಂತಿದ್ದ ದ್ರೌಪದಿಯನ್ನೇ ನೋಡುತ್ತಾ ಧೃಷ್ಟದ್ಯುಮ್ನನು ಹೇಳುತ್ತಿರುವುದನ್ನು ಕುತೂಹಲಾವಿಷ್ಟರಾಗಿ ಕೇಳುತ್ತಾ ಕುಳಿತರು.



ಧೃಷ್ಟದ್ಯುಮ್ನನು ಧನುಸ್ಸಿನ ಕಡೆಗೆ ಕೈ ತೋರುತ್ತಾ ಹೇಳಿದನು :

ಇದಂ ಧನುರ್ಲಕ್ಷ್ಯಮಿಮೇ ಚ ಬಾಣಾಃ
ಶೃಣ್ವನ್ತು ಮೇ ಭೂಪತಯಃ ಸಮೇತಾಃ ।
ಛಿದ್ರೇಣ ಯನ್ತ್ರಸ್ಯ ಸಮರ್ಪಯಧ್ವಂ
ಶರೈಃ ಶಿತೈರ್ವ್ಯೋಮಚರೈರ್ದಶಾರ್ಧೈಃ ॥೩೫॥

ಏತನ್ಮಹತ್ಕರ್ಮ ಕರೋತಿ ಯೋ ವೈ
ಕುಲೇನ ರೂಪೇಣ ಬಲೇನ ಯುಕ್ತಃ।
ತಸ್ಯಾದ್ಯ ಭಾರ್ಯಾ ಭಗಿನೀ ಮಮೇಯಂ
ಕೃಷ್ಣಾ ಭವಿತ್ರೀ ನ ಮೃಷಾ ಬ್ರವೀಮಿ ॥೩೬॥

"ಇದೇ ಧನುಸ್ಸು. ಇವೇ ಬಾಣಗಳು. ಈ ಮಧ್ಯದಲ್ಲಿಟ್ಟಿರುವ ಚಲನ ಯಂತ್ರದ ಮೇಲ್ಭಾಗದಲ್ಲಿ ಲಕ್ಷ್ಯವಿದೆ. ಈ ಮಹಾಧನುಸ್ಸಿಗೆ ಹೆದೆಯೇರಿಸಿ, ಇಲ್ಲಿರುವ ಐದು ಬಾಣಗಳನ್ನೂ ಧನುಸ್ಸಿನಲ್ಲಿ ಯೋಜಿಸಿ ಚಲನಯಂತ್ರದ ರಂಧ್ರದ ಮೂಲಕ ಯಾವಾತನು ಲಕ್ಷ್ಯವನ್ನು ಭೇದಿಸುವನೋ – ಪರಾಕ್ರಮಿಯಾದ, ರೂಪವಂತನಾದ, ಸುಶೀಲನಾದ, ಸದ್ವಂಶದಲ್ಲಿ ಜನಿಸಿರುವ ಅಂತಹ ರಾಜಕುಮಾರನಿಗೆ ನನ್ನ ತಂಗಿಯು ಭಾರ್ಯೆಯಾಗುವಳು. ಸತ್ಯಸಂಗತಿಯನ್ನು ತಿಳಿಸುತ್ತಿದ್ದೇನೆ."

ಧೃಷ್ಟದ್ಯುಮ್ನನು ಹೀಗೆ ಹೇಳಿ ತನ್ನ ತಂಗಿಗೆ ಅಲ್ಲಿ ನೆರೆದಿದ್ದ ರಾಜಕುಮಾರರ ಹೆಸರು, ಕುಲ-ಗೋತ್ರಗಳನ್ನು ತಿಳಿಸಿ ಎಲ್ಲರ ಪರಿಚಯವನ್ನೂ ಮಾಡಿಸಿಕೊಟ್ಟನು."

ಒಂದುನೂರಎಂಭತ್ತೈದನೆಯ ಅಧ್ಯಾಯವು ಮುಗಿಯಿತು.

೧೮೬ನೆಯ ಅಧ್ಯಾಯ ಸ್ವಯಂವರಪರ್ವ (ಮುಂದುವರಿದಿದೆ.)

## ಧೃಷ್ಟದ್ಯುಮ್ನನು ದ್ರೌಪದಿಗೆ ಅಲ್ಲಿ ನೆರೆದಿದ್ದ ರಾಜರ ಪರಿಚಯವನ್ನು ಮಾಡಿಕೊಟ್ಟುದು

ಧೃಷ್ಟದ್ಯುಮ್ನನು ಹೇಳುತ್ತಾನೆ :

"ತಂಗಿ! ಇತ್ತ ನೋಡು! ದುರ್ಯೋಧನ, ದುರ್ವಿಷಹ, ದುರ್ಮುಖ, ದುಷ್ಪ್ರಧರ್ಷಣ, ವಿವಿಂಶತಿ, ವಿಕರ್ಣ, ಸಹ, ದುಃಶಾಸನ, ಯುಯುತ್ಸು, ವಾಯುವೇಗ, ಭೀಮವೇಗರವ, ಉಗ್ರಾಯುಧ, ಬಲಾಕೀ, ಕರಕಾಯು, ವಿರೋಚನ, ಕುಂಡಕ, ಚಿತ್ರಸೇನ, ಸುವರ್ಚಸ, ಕನಕಧ್ವಜ, ನಂದಕ, ಬಾಹುಶಾಲಿ, ತುಹುಂಡ, ವಿಕಟ-ಇವರೇ ಮುಂತಾದ ನೂರು ಮಂದಿ ಧೃತರಾಷ್ಟ್ರನ ಮಕ್ಕಳು ಕರ್ಣಸಮೇತರಾಗಿ ನಿನ್ನ ಕೈಹಿಡಿಯಲು ಬಂದಿರುವರು.

ಇವರಲ್ಲದೇ ಅಗಣಿತಸಂಖ್ಯೆಯ ರಾಜಕುಮಾರರೂ ನಾನಾದೇಶಗಳಿಂದ ನಿನಗಾಗಿ ಬಂದಿರುವರು.

(ಸಮಾಜವಾಟದ ಮತ್ತೊಂದು ಕಡೆ ಕೈ ತೋರುತ್ತಾ) ಅತ್ತ ನೋಡು ; ದ್ರೌಪದಿ! ಅಲ್ಲಿ ಕುಳಿತಿರುವವರು ಸೌಬಲನಾದ ಶಕುನಿ, ವೃಷಕ ಮತ್ತು ಬೃಹದ್ಬಲರು. ಅವರೆಲ್ಲರೂ ಗಾಂಧಾರದೇಶದ ರಾಜಪುತ್ರರು. ಅವರ ಸಮೀಪದಲ್ಲಿರುವವರು ಧನುರ್ವಿದ್ಯೆಯಲ್ಲಿ ನಿಷ್ಣಾತರಾದ ಅಶ್ವತ್ಥಾಮಾ, ಭೋಜ ಮುಂತಾದವರು. ಅವರನ್ನೇ ಅನುಸರಿಸಿ ಕುಳಿತಿರುವವರು ಬೃಹಂತ, ಮಣಿಮಂತ, ದಂಡಧಾರ, ಸಹದೇವ, ಜಯತ್ಸೇನ, ಮೇಘಸಂಧಿ, ವಿರಾಟ ಮತ್ತು ಅವನ ಇಬ್ಬರು ಮಕ್ಕಳು ಶಂಖ ಮತ್ತು ಉತ್ತರ. ಅವರ ಪಕ್ಕದಲ್ಲಿಯೇ ವಾರ್ಧಕ್ಷೇಮೀ, ಸುಶರ್ಮಾ, ಸೇನಾಬಿಂದು, ಸುಕೇತು, ಸುಕೇತುವಿನ ಇಬ್ಬರು ಮಕ್ಕಳು ಸುನಾಮ ಮತ್ತು ಸುವರ್ಚಸರು ಕುಳಿತಿದ್ದಾರೆ. ಅವರಾದನಂತರ ಸುಚಿತ್ರ, ಸುಕುಮಾರ, ವೃಕ, ಸತ್ಯಧೃತಿ, ಸೂರ್ಯಧ್ವಜ, ರೋಚಮಾನ, ನೀಲ, ಚಿತ್ರಾಯುಧ, ಅಂಶುಮಂತ, ಚೇಕಿತಾನ, ಶ್ರೇಣಿಮಂತ, ಸಮುದ್ರಸೇನನ ಮಗನಾದ ಚಂದ್ರಸೇನ, ಜಲಸಂಧ, ವಿದಂಡ ಮತ್ತು ಅವನ ಮಗ ದಂಡ, ಪೌಂಡ್ರಕವಾಸುದೇವ, ಭಗದತ್ತ, ಕಳಿಂಗಾಧಿಪತಿ, ತಾಮ್ರಲಿಪ್ತಾಧಿಪತಿ, ಪತ್ತನಾಧಿಪತಿ, ಮದ್ರದೇಶದ ಅಧಿಪತಿಯಾದ ಶಲ್ಯ ಮತ್ತು ಅವನ ಇಬ್ಬರು ಮಕ್ಕಳು ರುಕ್ಮಾಂಗದ ಮತ್ತು ರುಕ್ಮರಥ - ಇವರೆಲ್ಲರೂ ಕುಳಿತಿದ್ದಾರೆ. ಅವರಾದ ನಂತರ ಕುರುವಂಶಸಂಭೂತನಾದ ಸೋಮದತ್ತ ಮತ್ತು ಅವನ ಮೂವರು ಮಕ್ಕಳು ಭೂರಿ, ಭೂರಿಶ್ರವ ಮತ್ತು ಶಲ ಎಂಬುವರು ಕುಳಿತಿದ್ದಾರೆ. ಅವರನ್ನನುಸರಿಸಿ ಕುಳಿತಿರುವವರು ಕಾಂಭೋಜದೇಶದ ಸುದಕ್ಷಿಣ ಮತ್ತು ಪುರುವಂಶದ ದೃಢಧನ್ವಾ ಎಂಬುವರು. ಅವರಾದನಂತರ ಬೃಹದ್ಬಲನಾದ ಸುಷೇಣ ಮತ್ತು ಉಶೀನರನ ಮಗನಾದ ಶಿಬಿ ಇವರುಗಳು ಕುಳಿತಿದ್ದಾರೆ. ಅವರ ಪಕ್ಕದಲ್ಲಿರುವವನೇ ಪಟಚ್ಚರವಿನಾಶಕನಾದ ಕಾರೂಷಾಧಿಪತಿ. ಅವನನಂತರ ಕುಳಿತಿರುವವರು ಬಲರಾಮ-ಕೃಷ್ಣರು. ಅವರ ಪಕ್ಕದಲ್ಲಿ ಪ್ರದ್ಯುಮ್ನ, ಸಾಂಬ, ಚಾರುದೇಷ್ಣ, ಅನಿರುದ್ಧ ಇವರು ಕುಳಿತಿರುವರು. ಅವರನ್ನನುಸರಿಸಿ ಗದ, ಅಕ್ರೂರ, ಸಾತ್ಯಕಿ, ಮಹಾಮತಿಯಾದ ಉದ್ಧವ, ಕೃತವರ್ಮಾ, ಪೃಥು ಮತ್ತು

ವಿಪೃಥು – ಇವರು ಕುಳಿತಿದ್ದಾರೆ. ಅವರ ಪಕ್ಕದಲ್ಲಿ ವಿದೂರಥ, ಕಂಕ, ಶಂಕು ಮತ್ತು ಗವೇಷಣರು ಕುಳಿತಿರುವರು. ಅವರನಂತರ ಆಶಾವಹ, ಅನಿರುದ್ಧ, ಶಮೀಕ, ಸಾರಿಮೇಜಯ, ವೀರ, ವಾತಪತಿ, ಝಿಲ್ಲೀ ಪಿಂಡಾರಕ, ಉಶೀನರ, ವಿಕ್ರಾಂತ-ಮುಂತಾದ ವೃಷ್ಣಿವಂಶಸಂಭೂತರಾದ ರಾಜಕುಮಾರರು ಕುಳಿತಿರುವರು. ಅತ್ತಕಡೆಯಲ್ಲಿ ಭಗೀರಥವಂಶಜನಾದ ಬೃಹತ್ಕ್ಷತ್ರ, ಸೈಂಧವನಾದ ಜಯದ್ರಥ, ಬೃಹದ್ರಥ, ಬಾಹ್ಲಿಕ, ಶ್ರುತಾಯು, ಮಹಾರಥನಾದ ಉಲೂಕ, ಕೈತವ, ಚಿತ್ರಾಂಗದ, ಶುಭಾಂಗದ, ಬುದ್ಧಿಶಾಲಿಯಾದ ವತ್ಸರಾಜ, ಕೋಸಲಾಧಿಪತಿಗಳೂ, ಅವರ ಪಕ್ಕದಲ್ಲಿ ಶಿಶುಪಾಲ ಮತ್ತು ಮಹಾಪರಾಕ್ರಮಿಯಾದ ಜರಾಸಂಧರೂ ಕುಳಿತಿದ್ದಾರೆ. ಭದ್ರೇ! ಇವರೇ ಅಲ್ಲದೇ ಗುಂಪು-ಗುಂಪಾಗಿ ಅನೇಕ ರಾಜಕುಮಾರರು ನಿನ್ನ ಪಾಣಿಗ್ರಹಣಕ್ಕಾಗಿ ಬಂದಿರುವರು.

ಮಹಾಪರಾಕ್ರಮಿಗಳಾದ ಇವರೆಲ್ಲರೂ ಇಲ್ಲಿಟ್ಟಿರುವ ಲಕ್ಷ್ಯವನ್ನು ಭೇದಿಸಲು ಸಮರ್ಥರಾಗಿರುವರು. ಇವರಲ್ಲಿ ಯಾರು ಮೊದಲು ಈ ಲಕ್ಷ್ಯವನ್ನು ಭೇದಿಸುವರೋ–ಅವರನ್ನು ನೀನು ನಿನ್ನ ಪತಿಯೆಂದು ಪರಿಗ್ರಹಿಸು; ತಂಗಿ!"

ಧೃಷ್ಟದ್ಯುಮ್ನನು ಮಾತು ಮುಗಿಸಿ ಹಿಂದೆ ಸರಿದು ನಿಂತನು.

೧೮೬ನೆಯ ಅಧ್ಯಾಯವು ಮುಗಿಯಿತು.

೧೮೭ನೆಯ ಅಧ್ಯಾಯ ಸ್ವಯಂವರಪರ್ವ (ಮುಂದುವರಿದಿದೆ.)

**ಲಕ್ಷ್ಯಭೇದನಕ್ಕೆ ರಾಜಕುಮಾರರ ಪ್ರಯತ್ನ ಮತ್ತು ವಿಫಲತೆ**

ವೈಶಂಪಾಯನರು ಹೇಳುತ್ತಾರೆ :

**ತೇಽಲಂಕೃತಾಃ ಕುಣ್ಡಲಿನೋ ಯುವಾನಃ**
**ಪರಸ್ಪರಂ ಸ್ಪರ್ಧಮಾನಾ ನರೇನ್ದ್ರಾಃ ।**
**ಅಸ್ತ್ರಂ ಬಲಂ ಚಾತ್ಮನಿ ಮನ್ಯಮಾನಾಃ**
**ಸರ್ವೇ ಸಮುತ್ಪೇತುರುದಾಯುಧಾಸ್ತೇ ॥೧॥**

"ಜನಮೇಜಯ! ಮರುಕ್ಷಣದಲ್ಲಿಯೇ ಅಲ್ಲಿ ನೆರೆದಿದ್ದ ರಾಜಕುಮಾರ

ರೆಲ್ಲರೂ ಕತ್ತಿಗಳನ್ನು ಝಳಪಿಸುತ್ತಾ ಮೇಲೆದ್ದು ನಿಂತರು. ಕರ್ಣಕುಂಡಲಗಳನ್ನು ಧರಿಸಿದ್ದ ಆ ರಾಜಕುಮಾರರಲ್ಲಿ ಪ್ರತಿಯೊಬ್ಬನಲ್ಲಿಯೂ ತಾನೊಬ್ಬನೇ ಪಣವಾಗಿಟ್ಟಿರುವ ಯಂತ್ರವನ್ನು ಭೇದಿಸಲು ಸಮರ್ಥನೆಂಬ ಮತ್ತು ತಾನೊಬ್ಬನೇ ಧನುರ್ವಿದ್ಯೆಯಲ್ಲಿ ನಿಷ್ಣಾತನೆಂಬ ಭಾವನೆಯು ಮೂಡಿದ್ದಿತು.

ರೂಪ, ವೀರ್ಯ, ಕುಲ, ಶೀಲ, ವಿತ್ತ ಮತ್ತು ಯೌವನ – ಇವುಗಳಿಂದ ಮತ್ತರಾಗಿದ್ದ ಆ ರಾಜಕುಮಾರರು – ಮದೋದಕವನ್ನು ಸುರಿಸುತ್ತಾ ಸೊಂಡಿಲನ್ನು ಮೇಲೆತ್ತಿ ಹಿಮವತ್ಪರ್ವತದ ತಪ್ಪಲಿನಲ್ಲಿ ಸಂಚರಿಸುತ್ತಿರುವ ಗಜೇಂದ್ರಗಳಂತೆ–ಪರಿಶೋಭಿಸಿದರು. ಕಾಮದೇವನ ಬಾಣಗಳಿಂದ ಪೀಡಿತರಾಗಿದ್ದ ರಾಜಕುಮಾರರೆಲ್ಲರೂ ಪರಸ್ಪರವಾಗಿ ಈರ್ಷ್ಯೆಯನ್ನು ಹೊಂದಿ– 'ಕೃಷ್ಣೆಯು ನನ್ನವಳು! ನಾನೀ ಯಂತ್ರವನ್ನು ಭೇದಿಸುವೆನು!' – ಎಂದು ಏಕಪ್ರಕಾರವಾಗಿ ಕೂಗುತ್ತಾ ಎದ್ದುನಿಂತರು.

ಹಿಂದೆ ಹಿಮವತ್ಪರ್ವತದಲ್ಲಿ ಉಮೆಯ ವಿವಾಹಸಮಯದಲ್ಲಿ ಅವಳ ಸುತ್ತಲೂ ದೇವತೆಗಳು ಸುತ್ತುವರಿದು ನಿಂತಿದ್ದಂತೆ – ರಾಜಕುಮಾರರು ಸಮಾಜವಾಟದ ಮಧ್ಯದಲ್ಲಿದ್ದ ದ್ರೌಪದಿಯನ್ನು ಸುತ್ತುವರಿದು ನಿಂತಿದ್ದರು. ಸುಮಶರನ ಪಂಚಬಾಣಗಳಿಗೆ ತುತ್ತಾಗಿ ದ್ರೌಪದಿಯ ಮೇಲೆ ಅತಿಯಾದ ವ್ಯಾಮೋಹವನ್ನು ಹೊಂದಿದ್ದ ಆ ರಾಜಕುಮಾರರು ತಮ್ಮ ಸುಹೃದರ ಮೇಲೆಯೂ ಈರ್ಷ್ಯೆಯನ್ನು ತಾಳಿದರು.

ಆ ಅದ್ಭುತವಾದ ಸ್ವಯಂವರವನ್ನು ವೀಕ್ಷಿಸಲು ಮಾನವರು ಮಾತ್ರವೇ ಅಲ್ಲ ; ರುದ್ರರು, ಆದಿತ್ಯರು, ವಸುಗಳು, ಅಶ್ವಿನೀದೇವತೆಗಳು, ಮರುತ್ತುಗಳು, ಸಾಧ್ಯರು – ಇವರೆಲ್ಲರೂ ಕುಬೇರ ಮತ್ತು ಯಮಧರ್ಮರನ್ನು ಮುಂದೆಮಾಡಿಕೊಂಡು ದಿವ್ಯರಥಾರೂಢರಾಗಿ ಆಗಮಿಸಿ ಅಂತರಿಕ್ಷದಲ್ಲಿ ಕುಳಿತು ನೋಡುತ್ತಿದ್ದರು. ಅವರನ್ನನುಸರಿಸಿ ದೈತ್ಯರು, ಸುಪರ್ಣರು, ನಾಗಶ್ರೇಷ್ಠರು, ದೇವರ್ಷಿಗಳು, ಗುಹ್ಯಕರು, ಚಾರಣರು, ವಿಶ್ವಾವಸು, ನಾರದ-ಪರ್ವತರು, ಗಂಧರ್ವಶ್ರೇಷ್ಠರು ಮತ್ತು ಅಪ್ಸರೆಯರು ಆಗಮಿಸಿದ್ದರು. ದಿವ್ಯಸುಮಪರಿಮಳವು ಅಂತರಿಕ್ಷವನ್ನೆಲ್ಲಾ ಪ್ರಸರಿಸಿತು.

ಬಲರಾಮ, ಶ್ರೀಕೃಷ್ಣ, ವೃಷ್ಣಿಪ್ರಮುಖರು, ಅಂಧಕರು – ಇವರೆಲ್ಲರೂ ಅನುಕ್ರಮವಾಗಿ ಸ್ವಯಂವರಮಂಟಪದಲ್ಲಿ ಕುಳಿತಿದ್ದರು. ಶ್ರೀಕೃಷ್ಣನ ಅಭಿಮತದಂತೆ ನಡೆದುಕೊಳ್ಳುತ್ತಿದ್ದ ಮಹಾತ್ಮರಾದ ಆ ಯದುಪುಂಗವರು ಸ್ವಯಂವರಮಂಟಪದಲ್ಲಿ ಕೇವಲ ಪ್ರೇಕ್ಷಕರಾಗಿ ಕುಳಿತಿದ್ದರು.

ದ್ರೌಪದಿಯಲ್ಲಿಯೇ ನೆಟ್ಟದೃಷ್ಟಿಯುಳ್ಳವರಾಗಿ ಕುಳಿತಿದ್ದ, ಮದಿಸಿದ ಆನೆಗಳಂತಿದ್ದ, ಸರ್ವಾಂಗಸುಂದರರಾದ, ಬೂದಿಮುಚ್ಚಿದ ಕೆಂಡದಂತಿದ್ದ ಆ ಐವರು ಪಾಂಡವರಾಜಕುಮಾರರನ್ನೂ ಶ್ರೀಕೃಷ್ಣನು ವೀಕ್ಷಿಸಿ ಬಲರಾಮನ ಕಿವಿಯಲ್ಲಿ ಹೇಳಿದನು :

"ಅಣ್ಣ! ಅದೋ ನೋಡು. ಅಲ್ಲಿ ಬ್ರಾಹ್ಮಣವೇಷದಲ್ಲಿ ಯುಧಿಷ್ಠಿರನು ಕುಳಿತಿರುವನು. ಅವನ ಹಿಂದೆಯೇ ಭೀಮಾರ್ಜುನ-ನಕುಲ-ಸಹದೇವರೂ ಬ್ರಾಹ್ಮಣರ ವೇಷವನ್ನು ಧರಿಸಿ ಕುಳಿತಿರುವರು." ಆ ಐವರನ್ನೂ ನೋಡಿ ಬಲರಾಮನೂ ಸಂತುಷ್ಟಚಿತ್ತನಾಗಿ ಶ್ರೀಕೃಷ್ಣನ ಮುಖಾರವಿಂದವನ್ನು ಸಸ್ಮಿತಭಾವದಿಂದ ನೋಡಿ, ತನ್ನ ಆಂತರ್ಯದ ಪ್ರೇಮವನ್ನು ಪ್ರಕಟಿಸಿದನು.

ರಾಜಕುಮಾರರೆಲ್ಲರೂ ದ್ರೌಪದಿಯಲ್ಲಿಯೇ ನೆಟ್ಟ ಮನಸ್ಸು ಮತ್ತು ದೃಷ್ಟಿಯುಳ್ಳವರಾಗಿದ್ದುದರಿಂದಲೂ ಮತ್ತು ಆ ಕಾರಣದಿಂದಲೇ ಸಭೆಯಲ್ಲಿದ್ದ ಇತರ ರಾಜಕುಮಾರರನ್ನು ಈರ್ಷ್ಯೆಯಿಂದ ಕಾಣುತ್ತಾ ಕೋಪಾವಿಷ್ಟರಾಗಿ ತುಟಿಗಳನ್ನು ಕಚ್ಚಿಕೊಳ್ಳುತ್ತಾ ಕುಳಿತಿದ್ದುದರಿಂದಲೂ ಸಮಾಜವಾಟದಲ್ಲಿದ್ದ ಪಾಂಡವರನ್ನು ಅವರಾರೂ ಗಮನಿಸಲಿಲ್ಲ.

ಇತರ ರಾಜಕುಮಾರರಂತೆಯೇ ಮಹಾಬಾಹುಗಳಾದ, ಕುಂತಿಯ ಪುತ್ರರಾದ ಯುಧಿಷ್ಠಿರ-ಭೀಮಾರ್ಜುನರೂ, ನಕುಲ-ಸಹದೇವರೂ ತ್ರಿಲೋಕಸುಂದರಿಯಾದ ದ್ರೌಪದಿಯನ್ನು ನೋಡಿ ಮನ್ಮಥನ ತೀಕ್ಷ್ಣವಾದ ಬಾಣಗಳಿಂದ ಪೀಡಿತರಾದರು.

ಜನಮೇಜಯ! ನಾನು ಹಿಂದೆಯೇ ಹೇಳಿದಂತೆ ಸ್ವಯಂವರಸಭಾ ಮಂಟಪದ ಮೇಲ್ಭಾಗದಲ್ಲಿ ಆಕಾಶದಲ್ಲಿ ದೇವರ್ಷಿ-ಗಂಧರ್ವರೂ, ಸುಪರ್ಣರೂ, ಅಸುರ-ಸಿದ್ಧರೂ ಉಪಸ್ಥಿತರಾಗಿದ್ದರು. ದಿವ್ಯವಾದ ಗಂಧದಿಂದ

ಆಕಾಶವು ವ್ಯಾಪ್ತವಾಗಿದ್ದಿತು. ಸುಗಂಧಯುಕ್ತವಾದ ದೇವಕುಸುಮಗಳು ಸಭಾಮಂದಿರದ ಸುತ್ತಲೂ ವಿಸ್ತೃತವಾಗಿ ಬಿದ್ದಿದ್ದುವು. ದುಂದುಭಿಗಳ ತಾಡನಗಳಿಂದ ಹೊರಟ ಮಹಾಶಬ್ದವು ನಭೋಮಂಡಲವನ್ನೇ ವ್ಯಾಪಿಸಿತು. ಆಕಾಶವು ದೇವತೆಗಳ ವಿಮಾನಗಳಿಂದ ತುಂಬಿಹೋಗಿದ್ದು ಆ ವಿಮಾನಗಳಿಗೆ ಪರಸ್ಪರ ಸಂಘರ್ಷಣೆಯೂ ಕೆಲವು ಸಮಯಗಳಲ್ಲುಂಟಾಗುತ್ತಿದ್ದಿತು. ಮತ್ತೊಂದೆಡೆಯಲ್ಲಿ ಅಪ್ಸರೆಯರು ನುಡಿಸುತ್ತಿದ್ದ ವೇಣು-ವೀಣಾ-ಮೃದಂಗಗಳ ಸುಮಧುರನಿನಾದಗಳೂ ನಭೋಮಂಡಲವನ್ನು ವ್ಯಾಪಿಸಿದ್ದುವು.

ಅನಂತರದಲ್ಲಿ ಅನುಕ್ರಮವಾಗಿ ರಾಜಕುಮಾರರೆಲ್ಲರೂ ಕೃಷ್ಣೆಯನ್ನು ಪಡೆಯುವ ಆಶಯದಿಂದ ತಮ್ಮ ತಮ್ಮ ಪರಾಕ್ರಮವನ್ನು ತೋರಲು ಉಪಕ್ರಮಿಸಿದರು.

ಕಿರೀಟ, ಹಾರ, ಅಂಗದ, ಚಕ್ರಪಾಲ – ಇವೇ ಮುಂತಾದ ಆಭರಣ ಗಳಿಂದ ತಮ್ಮ ಶರೀರಗಳನ್ನು ಸಿಂಗರಿಸಿಕೊಂಡಿದ್ದ, ಕಮಲಪತ್ರಗಳಂತೆ ವಿಶಾಲವಾದ ಕಣ್ಣುಗಳಿಂದ ಕೂಡಿದ್ದ, ಮಹಾಬಾಹುಗಳಾದ, ವಿಕ್ರಮಸತ್ತ್ವಯುಕ್ತರಾದ, ಬಲ ಮತ್ತು ವೀರ್ಯಗಳಿಂದ ಕೂಡಿ ಗರ್ಜಿಸುತ್ತಿದ್ದ ಕರ್ಣ, ದುರ್ಯೋಧನ, ಶಾಲ್ವ, ಶಲ್ಯ, ಅಶ್ವತ್ಥಾಮಾ, ಕ್ರಾಥ, ಸುನೀಥ, ಕಳಿಂಗಾಧಿಪತಿ, ವಕ್ರ, ವಂಗ, ಪಾಂಡ್ಯ, ವಿದೇಹಾಧಿಪತಿ, ಪೌಂಡ್ರ, ಯವನಾಧಿಪತಿ ಮತ್ತು ಇನ್ನೂ ಅನೇಕ ರಾಜಕುಮಾರರು ಅನುಕ್ರಮವಾಗಿ ತಮ್ಮ ತಮ್ಮ ಪರಾಕ್ರಮವನ್ನು ತೋರಲು ಪ್ರಾರಂಭಿಸಿದರು.

ಲಕ್ಷ್ಯಭೇದನವು ಅಷ್ಟು ಸುಲಭವಾದ ಕ್ರಿಯೆಯಾಗಿರಲಿಲ್ಲ. ದ್ರುಪದನಿಟ್ಟಿದ್ದ ಧನುಸ್ಸಿನ ಮಹಿಮೆಯು ಅಷ್ಟು ಅಪಾರವಾಗಿತ್ತು. ಅರ್ಜುನನ ಶಕ್ತಿಗೆ ಅನುಗುಣವಾಗಿ ಮಾಡಿಸಿಟ್ಟ ಧನುಸ್ಸಲ್ಲವೇ? ಅರ್ಜುನನಿಗಿಂತಲೂ ಮಿಗಿಲಾದ ಅಥವಾ ಅರ್ಜುನನಿಗೆ ಸದೃಶವಾದ ಶಕ್ತಿಯು ಯಾರಿಗಾದರೂ ಇದ್ದಿದ್ದರೆ ಆ ಧನುಸ್ಸನ್ನು ಹೆದೆಯೇರಿಸಲು ಸಾಧ್ಯವಾಗುತ್ತಿತ್ತು. ಅಲ್ಲಿ ನೆರೆದಿದ್ದ ರಾಜಕುಮಾರರು ಚಲನಯಂತ್ರದ ಮೂಲಕವಾಗಿ ಲಕ್ಷ್ಯವನ್ನು ಭೇದಿಸುವುದು ಒತ್ತಟ್ಟಿಗಿರಲಿ, ಕೆಳಗಿಟ್ಟಿದ್ದ ಧನುಸ್ಸನ್ನೇ ಅನೇಕರು ಮೇಲಕ್ಕೆ ಎತ್ತಲಾರದೇ ಹೋದರು.

ಮುಕ್ಕರಿದು ಮೇಲೆತ್ತುವಾಗ ತತ್ತರಿಸಿ ಬೀಳುತ್ತಿದ್ದರು. ಅವರ ಜೊತೆಯಲ್ಲೇ ಅವರು ಧರಿಸಿದ್ದ ರತ್ನಹಾರಗಳೆಲ್ಲವೂ ಹರಿದು ಕೆಳಗೆ ಬೀಳುತ್ತಿದ್ದುವು. ಮೊಣಕಾಲು ತರಿದು ರಕ್ತವು ಹೊರಬರುತ್ತಿತ್ತು. ಮಹಾಪರಾಕ್ರಮಶಾಲಿಗಳಾಗಿದ್ದ ಒಬ್ಬಿಬ್ಬರು ಧನುಸ್ಸನ್ನು ಮೇಲೆತ್ತಿ ಹೆದೆಯೇರಿಸಲು ಹೋದಾಗ ಧನುಸ್ಸು ಚಿಮ್ಮಿದೊಡನೆಯೇ ಕಂಗೆಟ್ಟು ಕೆಳಗೆ ಬೀಳುತ್ತಿದ್ದರು. ಅವರ ಶಿರಸ್ತ್ರಾಣ, ಅಂಗದ-ಕೇಯೂರಗಳೆಲ್ಲವೂ ನುಚ್ಚುನೂರಾಗುತ್ತಿದ್ದುವು.

ಕೆಲವರು 'ಅಯ್ಯೋ!' ಎಂದು ಅರಚುತ್ತಿದ್ದರು. ಅವರನ್ನು ಹಿಡಿದೆತ್ತಿ ಕುಳ್ಳಿರಿಸಲು ರಾಜಭಟರು ತಮ್ಮ ಬಳಿಗೆ ಬಂದರೂ ಮರ್ಯಾದೆಯನ್ನುಳಿಸಿಕೊಳ್ಳಲು ಕೆಲವು ರಾಜಕುಮಾರರು ಕುಂಟುತ್ತಲೇ ತಮ್ಮ ಸಿಂಹಾಸನದ ಬಳಿಗೆ ಹೋಗುತ್ತಿದ್ದರು. ಕೆಲವರು ಮುಖವನ್ನು ಮೇಲೆತ್ತದೆ ಸಮಾಜವಾಟದಿಂದಲೇ ಹೊರಬೀಳುತ್ತಿದ್ದರು.

ಅವರ ಅವಸ್ಥೆಯನ್ನು ಕಂಡು ಸಮಾಜವಾಟದಲ್ಲಿದ್ದ ಪ್ರೇಕ್ಷಕರು 'ಘೊಳ್' ಎಂದು ನಕ್ಕು ಅಪಹಾಸ್ಯಮಾಡುತ್ತಿದ್ದರು. ರಾಜಭಟರು ಕೆಳಗೆ ಬಿದ್ದವರನ್ನು ಮೆಲ್ಲಮೆಲ್ಲನೆ ಮೇಲೆತ್ತಿ ಅವರನ್ನು ಉಪಚರಿಸಿ, ಕನಕಾಂಗದ-ಕೇಯೂರ-ಶಿರಸ್ತ್ರಾಣಗಳನ್ನು ಪುನಃ ತೊಡಿಸಿ ಅವರವರ ಆಸನಗಳಲ್ಲಿ ಕುಳ್ಳಿರಿಸುತ್ತಿದ್ದರು.

'ಕೃಷ್ಣೆಯು ನನ್ನವಳು. ನಾನೀ ಯಂತ್ರವನ್ನು ಭೇದಿಸುವೆನು' – ಎಂದು ಒಮ್ಮೆಯೇ ಎದ್ದುನಿಂತ ಸಾವಿರಾರು ಸ್ಪರ್ಧಿಗಳಲ್ಲಿ-ಮಹಾಪರಾಕ್ರಮಿ ಗಳೆಂದು ಪ್ರಸಿದ್ಧರಾಗಿದ್ದ ರಾಜಕುಮಾರರ ದುರವಸ್ಥೆಯನ್ನು ಕಂಡು ಇತರ ರಾಜಕುಮಾರರು ಆಸನಗಳಿಂದ ಮೇಲೇಳಲೇ ಇಲ್ಲ. ಪರಾಕ್ರಮವನ್ನು ಪ್ರದರ್ಶಿಸಿ ದ್ರೌಪದಿಯನ್ನು ಪಡೆಯುವ ಆಶಯವು ಉಡುಗಿಹೋಯಿತು. 'ತಮಗೆ ಸಾಧ್ಯವಾಗದಿರುವುದು ಮತ್ತಾರಿಂದಲೂ ಸಾಧ್ಯವೇ ಇಲ್ಲ' – ಎಂದು ಎಲ್ಲರೂ ಬಗೆದರು. ಬೇರಾವ ವಿಧದಿಂದಲಾದರೂ ಸ್ವಯಂವರವಾದರೆ ಆಗಲಾದರೂ ತಮಗೊಂದು ಸದವಕಾಶವು ಸಿಕ್ಕಬಹುದೆಂದು ಹಲವಾರು ರಾಜಕುಮಾರರು ಲೆಕ್ಕಹಾಕುತ್ತಿದ್ದರು.

ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಕರ್ಣನು ರಾಜಕುಮಾರರ ದುರವಸ್ಥೆಯನ್ನು ಕಂಡು ಧನುಸ್ಸಿನ ಬಳಿಗೆ ಹೋಗಿ ಕ್ಷಣಮಾತ್ರದಲ್ಲಿ ಮೇಲೆತ್ತಿ ಹೆದೆಯೇರಿಸಿ, ಅಲ್ಲಿದ್ದ ಐದು ಬಾಣಗಳನ್ನೂ ಬಿಲ್ಲಿನಲ್ಲಿ ಯೋಜಿಸಿದನು. ಸೂರ್ಯ-ಚಂದ್ರಾಗ್ನಿಗಳಿಗಿಂತಲೂ ಮಿಗಿಲಾದ ತೇಜಸ್ಸಿನಿಂದ ಕೂಡಿದ್ದ, ಸೂರ್ಯನ ಮಗನಾದ, ಸೂತಪುತ್ರನಾದ ಕರ್ಣನನ್ನು ಕಂಡೊಡನೆಯೇ ಪಾಂಡವರು – 'ಲಕ್ಷ್ಯವು ಕೆಳಗೆ ಬಿದ್ದುಹೋಯಿತು' – ಎಂದೇ ಭಾವಿಸಿದರು.

ಆದರೆ ವಿಧಿಯ ನಿಯಮವನ್ನು ಮೀರಲು ಯಾರಿಂದ ತಾನೇ ಸಾಧ್ಯವಾದೀತು? ಅಲ್ಲಿ ನೆರೆದಿದ್ದ ಸಾವಿರಾರು ಮಂದಿ ರಾಜಕುಮಾರರೂ ಮತ್ತು ಪುರಜನರೂ ಎವೆಯಿಕ್ಕದೇ ಕರ್ಣನ ಕೌಶಲವನ್ನು ನೋಡುತ್ತಾ ಬೊಂಬೆಗಳಂತೆ ಸ್ತಬ್ಧರಾಗಿ ಕುಳಿತಿದ್ದರು. ಆ ಸಮಯದಲ್ಲಿ ಗಂಭೀರವಾದ ವಾಣಿಯು ಸಭೆಯಲ್ಲಿ ಕೇಳಿಬಂದಿತು :

'ನಾಹಂ ವರಯಾಮಿ ಸೂತಮ್' - 'ಸೂತಜಾತಿಯವನನ್ನು ನಾನು ವರಿಸುವುದಿಲ್ಲ'– ಎಂದು ದ್ರೌಪದಿಯು ಸ್ಪಷ್ಟವಾಗಿಯೇ ಹೇಳಿಬಿಟ್ಟಳು. ಕರ್ಣನು ದ್ರೌಪದಿಯ ಕಡೆಗೊಮ್ಮೆನೋಡಿ, ಪ್ರಕಾಶಮಾನವಾಗಿದ್ದ ಧನುಸ್ಸನ್ನು ಕೆಳಗಿಟ್ಟು, ಕೋಪದಿಂದ ಕೂಡಿದ ಮಂದಹಾಸದಿಂದ ಸೂರ್ಯನನ್ನೊಮ್ಮೆ ನೋಡಿ, ನಿಟ್ಟುಸಿರುಬಿಡುತ್ತಾ ತನ್ನ ಆಸನದಲ್ಲಿ ಕುಳಿತುಕೊಂಡನು.

ಕರ್ಣನು ಆಸನದಲ್ಲಿ ಕುಳಿತನಂತರ ಯಮನಿಗೆ ಸದೃಶವಾದ ಪರಾಕ್ರಮವನ್ನು ಹೊಂದಿದ್ದ, ಚೇದಿಯ ರಾಜನಾದ, ದಮಘೋಷನ ಮಗನಾದ ಶಿಶುಪಾಲನು ಧನುಸ್ಸನ್ನು ಮೇಲೆತ್ತಿ ಶಿಂಜಿನಿಯನ್ನು ಸೇರಿಸುವುದರೊಳಗಾಗಿ ಧನುಸ್ಸಿನೊಡನೆ ಕೆಳಗೆ ಬಿದ್ದು ಮಂಡಿಯೂರಿ ಕುಳಿತನು.

ಮಹಾಪರಾಕ್ರಮಿಯೆನಿಸಿದ್ದ ಜರಾಸಂಧನ ಅವಸ್ಥೆಯೂ ಹೀಗೆಯೇ ಆಯಿತು. ಜರಾಸಂಧನು ಬಿದ್ದೊಡನೆಯೇ ಮೇಲೆದ್ದು, ಅಲ್ಲಿ ಒಂದರೆಕ್ಷಣವೂ ನಿಲ್ಲದೇ ಸಮಾಜವಾಟವನ್ನೇ ಬಿಟ್ಟು ಹೊರಟುಹೋದನು. ಮದ್ರರಾಜನಾದ ಶಲ್ಯನೂ ಪೆಟ್ಟನ್ನು ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಮಹಾಪರಾಕ್ರಮಿಗಳೆನಿಸಿದವರೆಲ್ಲರೂ ಅಲ್ಲಿ ನೆರೆದಿದ್ದ ಪುರಜನರ ಅಪಹಾಸ್ಯಕ್ಕೀಡಾದರು.

ಜರಾಸಂಧ-ಶಲ್ಯರೇ ಮೊದಲಾದ ಅತಿರಥ-ಮಹಾರಥರಲ್ಲಿ ಯಾರೂ ಲಕ್ಷ್ಯವನ್ನು ಭೇದಿಸಲಾರದೇ ಪರಾಭವವನ್ನು ಹೊಂದಿದಬಳಿಕ ಉಳಿದಿದ್ದ ರಾಜಕುಮಾರರು ಮೇಲೆದ್ದು ನಿಲ್ಲುವ ಸಾಹಸವನ್ನೂ ಮಾಡಲಿಲ್ಲ. ಪ್ರೇಕ್ಷಕ ಜನರು ಮುಂದೇನಾಗುವುದೆಂಬುದನ್ನು ತಿಳಿಯದೆ ಸಂಭ್ರಾಂತರಾದರು. ಆ ಸಮಯದಲ್ಲಿ ಅರ್ಜುನನಿಗೆ ಅಲ್ಲಿಟ್ಟಿರುವ ಲಕ್ಷ್ಯವನ್ನು ಭೇದಿಸಬೇಕೆಂಬ ಅಭಿಲಾಷೆಯುಂಟಾಯಿತು.

೧೮೭ನೆಯ ಅಧ್ಯಾಯವು ಮುಗಿಯಿತು.

೧೮೮ನೆಯ ಅಧ್ಯಾಯ ಸ್ವಯಂವರಪರ್ವ (ಮುಂದುವರಿದಿದೆ.)

## ಅರ್ಜುನನು ಲಕ್ಷ್ಯವನ್ನು ಭೇದಿಸಿ ದ್ರೌಪದಿಯನ್ನು ಪಡೆದುದು

ವೈಶಂಪಾಯನರು ಹೇಳುತ್ತಾರೆ :

**ಯದಾ ನಿವೃತ್ತಾ ರಾಜಾನೋ ಧನುಷಃ ಸಜ್ಯಕರ್ಮಣಃ ।**
**ಅಥೋದತಿಷ್ಠದ್ವಿಪ್ರಾಣಾಂ ಮಧ್ಯಾಜ್ಜಿಷ್ಣುರುದಾರಧೀಃ ॥೧॥**

ಜನಮೇಜಯ! ಯಾವಾಗ ರಾಜಕುಮಾರರೆಲ್ಲರೂ ಮಹಾಧನುಸ್ಸನ್ನು ಮೇಲೆತ್ತಲೂ ಕೂಡ ಸಮರ್ಥರಾಗದೇ ನಾಚಿಕೆಯಿಂದ ತಲೆತಗ್ಗಿಸಿ ತಮ್ಮ-ತಮ್ಮ ಆಸನಗಳಲ್ಲಿ ಹೋಗಿ ಕುಳಿತರೋ – ಆಗ ಬ್ರಾಹ್ಮಣರ ಮಧ್ಯದಿಂದ ಉದಾರವಾದ ಬುದ್ಧಿಯುಳ್ಳ ಅರ್ಜುನನು ಮೇಲೆದ್ದನು.

ಇಂದ್ರನ ಧ್ವಜದಂತೆ ದೀರ್ಘಕಾಯನಾದ ಅರ್ಜುನನು ಧನುಸ್ಸಿನ ಬಳಿಗೆ ಬರುವುದನ್ನು ಕಂಡು ಅಲ್ಲಿ ನೆರೆದಿದ್ದ ಬ್ರಾಹ್ಮಣರಲ್ಲಿ ಕೆಲವರು ವಿಷಣ್ಣಚಿತ್ತರಾಗಿ ಮೇಲೆದ್ದು ಮೈಮೇಲಿದ್ದ ಕೃಷ್ಣಾಜಿನಗಳನ್ನು ಮೇಲೆತ್ತಿ ಅಳ್ಳಾಡಿಸುತ್ತಾ ಕೂಗಾಡಲು ಪ್ರಾರಂಭಿಸಿದರು. ಕೆಲವು ಬ್ರಾಹ್ಮಣರಿಗೆ ಅರ್ಜುನನು ಧನುಸ್ಸಿನ ಬಳಿಗೆ ಹೋದದ್ದೇ 'ಸರಿ' ಎನಿಸಲಿಲ್ಲ. ಮತ್ತೆ ಕೆಲವರು - 'ತಮ್ಮಲ್ಲಿ ಒಬ್ಬನಾದರೂ ರಾಜಾಧಿರಾಜರುಗಳಿಂದಲೂ ಅಸಾಧ್ಯವೆನಿಸಿದ ಕಾರ್ಯವನ್ನು ಸಾಧಿಸಲು ಮುಂದೆ ಬಂದನಲ್ಲಾ!' ಎಂದು ಸಂತಸಗೊಂಡರು. ಅವರಲ್ಲಿಯೇ ಪರಸ್ಪರವಾಗಿ ವಾಗ್ವಾದಗಳು ಪ್ರಾರಂಭವಾದುವು:

**ಯತ್ಕರ್ಣಶಲ್ಯಪ್ರಮುಖೈಃ ಕ್ಷತ್ರಿಯೈರ್ಲೋಕವಿಶ್ರುತೈಃ ।**
**ನಾನತಂ ಬಲವದ್ಭಿರ್ಹಿ ಧನುರ್ವೇದಪರಾಯಣೈಃ ॥೨॥**

ತತ್ಕಥಂ ತ್ವಕೃತಾಸ್ತ್ರೇಣ ಪ್ರಾಣತೋ ದುರ್ಬಲೀಯಸಾ ।
ವಟುಮಾತ್ರೇಣ ಶಕ್ಯಂ ಹಿ ಸಜ್ಯಂ ಕರ್ತುಂ ಧನುರ್ದ್ವಿಜಾಃ ॥೫॥
ಅವಹಾಸ್ಯಾ ಭವಿಷ್ಯನ್ತಿ ಬ್ರಾಹ್ಮಣಾಃ ಸರ್ವರಾಜಸು ।
ಕರ್ಮಣ್ಯಸ್ಮಿನ್ನಸಂಸಿದ್ಧೇ ಚಾಪಲಾದಪರೀಕ್ಷಿತೇ ॥೬॥

ಯದ್ಯೇಷ ದರ್ಪಾದ್ಧರ್ಷಾದ್ವಾಪ್ಯಥ ಬ್ರಾಹ್ಮಣಚಾಪಲಾತ್ ।
ಪ್ರಸ್ಥಿತೋ ಧನುರಾಯನ್ತುಂ ವಾರ್ಯತಾಂ ಸಾಧು ಮಾ ಗಮತ್ ॥೭॥

"ಒಬ್ಬ ಬ್ರಾಹ್ಮಣವಟು! ಶಸ್ತ್ರಾಸ್ತ್ರಗಳ ಗಂಧವೇ ತಿಳಿಯದು! ಶಕ್ತಿಯು ಮೊದಲೇ ಇಲ್ಲ! ಇಂತಹವನು ಮಹಾಪರಾಕ್ರಮಿಗಳಾದ, ಧನುರ್ವಿದ್ಯಾ ವಿಶಾರದರಾದ, ಕ್ಷತ್ರಿಯವೀರರಾದ ಕರ್ಣ-ಶಲ್ಯ-ಜರಾಸಂಧಾದಿಗಳಿಂದಲೂ ಬಗ್ಗಿಸಲು ಅಸಾಧ್ಯವಾಗಿರುವ ಈ ಧನುಸ್ಸನ್ನು ಮೇಲೆತ್ತಿ ಲಕ್ಷ್ಯವನ್ನು ಭೇದಿಸಲು ಸಮರ್ಥನೇ? ದರ್ಪದಿಂದಲೋ, ಸಂತೋಷ-ಮದಗಳಿಂದಲೋ ಅಥವಾ ಬ್ರಾಹ್ಮಣಚಾಪಲ್ಯದಿಂದಲೋ ಸಾಧ್ಯಾಸಾಧ್ಯತೆಗಳನ್ನು ವಿವೇಚಿಸದೇ ಕಾರ್ಯೋನ್ಮುಖನಾಗಿರುವ ಈ ವಟುವು ಪರಾಜಿತನಾದರೆ – ನಮ್ಮ ಬ್ರಾಹ್ಮಣಸಮೂಹವೇ ಕ್ಷತ್ರಿಯರಿಂದ ಅಪಹಾಸ್ಯಕ್ರೀಡಾಗಬೇಕಾಗುತ್ತದೆ. ಆದುದರಿಂದ ಬ್ರಾಹ್ಮಣಸಹಜವಾದ ಚಾಪಲ್ಯದಿಂದ ಮುನ್ನುಗ್ಗುತ್ತಿರುವ ಈ ವಟುವನ್ನು ಧನುಸ್ಸಿನ ಬಳಿಗೆ ಹೋಗದಂತೆ ತಡೆಯುವುದೇ ಸೂಕ್ತವೆನಿಸುತ್ತದೆ."

ಮತ್ತೊಂದು ಬ್ರಾಹ್ಮಣಸಮೂಹದಿಂದ ಒಡನೆಯೇ ಉತ್ತರವು ಬಂದಿತು :

ನಾವಹಾಸ್ಯಾ ಭವಿಷ್ಯಾಮೋ ನ ಚ ಲಾಘವಮಾಸ್ಥಿತಾಃ ।
ನ ಚ ವಿದ್ವಿಷ್ಟತಾಂ ಲೋಕೇ ಗಮಿಷ್ಯಾಮೋ ಮಹೀಕ್ಷಿತಾಮ್ ॥೮॥

"ನಾವೇಕೆ ಅಪಹಾಸ್ಯಕ್ಕೆ ಗುರಿಯಾಗುತ್ತೇವೆ? ಅಗೌರವವನ್ನು ತಾನೇ ಏಕೆ ಹೊಂದುತ್ತೇವೆ ಅಥವಾ ಮಹೀಕ್ಷಿತರು ನಮ್ಮ ಮೇಲೆ ದ್ವೇಷವನ್ನೇಕೆ ಎಣಿಸುವರು?

ಈ ಸುಂದರಯುವಕನು ದಷ್ಟಪುಷ್ಟನಾಗಿದ್ದಾನೆ. ಇವನಿಗೆ ಆನೆಯ ಸೊಂಡಿಲಿನಂತಹ ನೀಳವಾದ ತೋಳುಗಳೂ, ತೊಡೆಗಳೂ, ತುಂಬಿದ

ಹೆಗಲುಗಳೂ ವೀರನಿಗಿರುವಂತೆಯೇ ಇವೆ. ಧೈರ್ಯದಲ್ಲಿ ಹಿಮವಂತ ನಂತಿದ್ದಾನೆ. ಇವನ ಗಮನವು ಸಿಂಹದ ಗಮನವನ್ನು ಅನುಕರಿಸುತ್ತದೆ. ಪರಾಕ್ರಮದಲ್ಲಿ ಮದಿಸಿದ ಆನೆಯಂತೆ ಕಾಣುತ್ತಾನೆ. ಆದುದರಿಂದ ಇವನು ಈ ಲಕ್ಷ್ಯವನ್ನು ಭೇದಿಸಲೂಬಹುದು. ಈ ಸತ್ತ್ವವು ಇವನಲ್ಲಿಲ್ಲದಿದ್ದರೆ ಇವನು ಧನುಸ್ಸಿನ ಸಮೀಪಕ್ಕೆ ಹೋಗುತ್ತಿದ್ದನೇಕೆ? ಇವನಿಗಿರುವ ಉತ್ಸಾಹದಿಂದಲೇ ಇವನು ಲಕ್ಷ್ಯವನ್ನು ಭೇದಿಸಲು ಸಮರ್ಥನೆಂಬುದನ್ನು ನಾವೆಲ್ಲರೂ ಊಹಿಸಬಹುದಾಗಿದೆ.

**ಶಕ್ತಿರಸ್ಯ ಮಹೋತ್ಸಾಹಾ ನ ಹ್ಯಶಕ್ತಃ ಸ್ವಯಂ ವ್ರಜೇತ್ ॥೧೧॥**

ಇವನಲ್ಲಿ ಶಕ್ತಿಯೂ ಇದೆ ; ಉತ್ಸಾಹವೂ ಇದೆ. ಅಶಕ್ತನಾಗಿದ್ದರೆ ಖಂಡಿತವಾಗಿಯೂ ತನಗಸಾಧ್ಯವೆನಿಸುವ ಕಾರ್ಯಮಾಡಲು ತಾನಾಗಿಯೇ ಪ್ರಯತ್ನಿಸುತ್ತಿರಲಿಲ್ಲ.

**ನ ಚ ತದ್ವಿದ್ಯತೇ ಕಿಂಚಿತ್ಕರ್ಮ ಲೋಕೇಷು ಯದ್ಭವೇತ್ ।**
**ಬ್ರಾಹ್ಮಣಾನಾಮಸಾಧ್ಯಂ ಚ ನೃಷು ಸಂಸ್ಥಾನಚಾರಿಷು ॥೧೨॥**

ಸಮಸ್ತಲೋಕಗಳಲ್ಲಿಯೂ ದೇವ-ಗಂಧರ್ವ-ಮಾನವರಿಂದಲೂ ಸಾಧಿಸಲಾಗದ ಕಾರ್ಯವನ್ನು ಬ್ರಾಹ್ಮಣರು ಸಾಧಿಸಬಲ್ಲರು. ಬ್ರಾಹ್ಮಣರಿಂದ ಸಾಧಿಸಲಾಗದ ಕಾರ್ಯವು ಸಪ್ತಲೋಕಗಳಲ್ಲಿಯೂ ಇರಲಾರದು.

ದೃಢವ್ರತರಾದ ಕೆಲವರು ಬ್ರಾಹ್ಮಣರು ನೀರನ್ನೇ ಆಹಾರವನ್ನಾಗಿ ಸೇವಿಸುವರು. ಮತ್ತೆ ಕೆಲವರು ಗಾಳಿಯನ್ನೇ ಆಹಾರವನ್ನಾಗಿ ಸೇವಿಸುವರು. ಮತ್ತೆ ಕೆಲವರು ಫಲಾಹಾರದಿಂದಲೇ ಕಾಲಕಳೆಯುವರು. ಅದರಿಂದವರು ದೈಹಿಕವಾಗಿ ದುರ್ಬಲರಾಗಿರುವುದೇನೋ ನಿಜ. ಆದರೆ ತಪಸ್ಸಿನಿಂದ ಆರ್ಜಿಸಿದ ತೇಜಸ್ಸಿನಿಂದಲೇ ಬಹಳ ಬಲಿಷ್ಠರಾಗಿರುವರೆಂಬುದನ್ನು ನಾವು ಮರೆಯಬಾರದು.

**ಬ್ರಾಹ್ಮಣೋ ನಾವಮನ್ತವ್ಯಃ ಸದಸದ್ವಾ ಸಮಾಚರನ್ ।**
**ಸುಖಂ ದುಃಖಂ ಮಹದ್ಧ್ರಸ್ವಂ ಕರ್ಮ ಯತ್ಸಮುಪಾಗತಮ್ ॥೧೩॥**

ಆದುದರಿಂದ ಬ್ರಾಹ್ಮಣನಾದವನು ವಿವೇಕಪೂರ್ಣವಾದ ಕಾರ್ಯ ವನ್ನೇ ಮಾಡಲು ಪ್ರಯತ್ನಿಸಿದರೂ, ಮತ್ತೊಬ್ಬರ ದೃಷ್ಟಿಯಿಂದ ಅವಿವೇಕ

ವೆನಿಸಿದ ಕಾರ್ಯಮಾಡಲು ಪ್ರಯತ್ನಿಸಿದರೂ ಅವನನ್ನು ಅಪಮಾನಗೊಳಿಸಲು ಯತ್ನಿಸಬಾರದು. ಸುಖಪ್ರದವಾದ ಅಥವಾ ದುಃಖಪ್ರದವಾದ ಕಾರ್ಯಮಾಡಿದರೂ ಮತ್ತು ಮಹತ್ತಾದ ಅಥವಾ ಅಲ್ಪವಾದ ಕಾರ್ಯವನ್ನೇ ಮಾಡಿದರೂ ಬ್ರಾಹ್ಮಣನು ಸರ್ವಥಾ ನಿಂದ್ಯನಲ್ಲ.

(ಬ್ರಾಹ್ಮಣನು ಯಾವ ವಿಧವಾದ ಸಾಹಸಕ್ಕೆ ಕೈಹಾಕಿದರೂ ಅವನನ್ನು ಅವಮಾನಗೊಳಿಸಬಾರದು. ಏಕೆಂದರೆ : ಆ ಕಾರ್ಯವು ಕೊನೆಯಲ್ಲಿ ಎಲ್ಲರಿಗೂ ಹಿತಕರವೇ ಆಗುವುದು.)

ಆದುದರಿಂದ ಲಕ್ಷ್ಯವನ್ನು ಭೇದಿಸಲು ಹೊರಟಿರುವ ಈ ವಟುವು ವಿಫಲನಾಗುವನೆಂಬ ಭಾವನೆಯಿಂದ ನಾವಿವನನ್ನು ಪ್ರತಿಬಂಧಿಸುವ ಅಥವಾ ಅವಹೇಳನಮಾಡುವ ಕಾರಣವಿಲ್ಲ.

**ಜಾಮದಗ್ನ್ಯೇನ ರಾಮೇಣ ನಿರ್ಜಿತಾಃ ಕ್ಷತ್ರಿಯಾ ಯುಧಿ।**
**ಪೀತಃ ಸಮುದ್ರೋಽಗಸ್ತ್ಯೇನ ಹ್ಯಗಾಧೋ ಬ್ರಹ್ಮತೇಜಸಾ ॥೧೪॥**

ಪರಶುರಾಮನು ಬ್ರಾಹ್ಮಣನೇ ಅಲ್ಲವೇ? ಅವನು ಪೃಥ್ವಿಯಲ್ಲಿರುವ ಸಮಸ್ತಕ್ಷತ್ರಿಯರನ್ನೂ ಸೋಲಿಸಿಬಿಡಲಿಲ್ಲವೇ? ಅಗಸ್ತ್ಯನು ತನ್ನ ಬ್ರಹ್ಮ ತೇಜಸ್ಸಿನ ಶಕ್ತಿಯಿಂದ ಅಗಾಧವಾದ ಸಮುದ್ರವನ್ನೇ ಆಪೋಶನವನ್ನಾಗಿ ತೆಗೆದುಕೊಳ್ಳಲಿಲ್ಲವೇ?

ಹಾಗೆಯೇ – 'ಈ ಬ್ರಾಹ್ಮಣವಟುವೂ ಹೋಗಿ ಪ್ರಯತ್ನಿಸಲಿ. ಧನುಸ್ಸಿಗೆ ಹೆದೆಯೇರಿಸಿ ಬಹುಶೀಘ್ರವಾಗಿ ಲಕ್ಷ್ಯವನ್ನು ಭೇದಿಸಲಿ.' – ಎಂಬುದಾಗಿ ನೀವೆಲ್ಲರೂ ಏಕಕಂಠದಿಂದ ಹೇಳಿರಿ."

ಆ ಮಾತುಗಳನ್ನು ಕೇಳಿ ಆ ಗುಂಪಿನಲ್ಲಿದ್ದವರೆಲ್ಲರೂ '**ತಥಾಸ್ತು**' 'ಹಾಗೆಯೇ ಆಗಲಿ' ಎಂದು ಕೂಗಿದರು.

ಬ್ರಾಹ್ಮಣರೆಲ್ಲರೂ ತಮ-ತಮಗೆ ತೋರಿದಂತೆ ಮಾತನಾಡಿಕೊಳ್ಳು ತ್ತಿರುವಾಗ – ಅರ್ಜುನನು ಧನುಸ್ಸನ್ನು ಸಮೀಪಿಸಿ ಅದರ ಮುಂದೆ ಪರ್ವ ತೋಪಮನಾಗಿ ನಿಂತನು. ಮಹಾಧನುಸ್ಸನ್ನೊಂದುಬಾರಿ ಪ್ರದಕ್ಷಿಣೆಮಾಡಿ ನಮಿಸಿದನು. ವರದನಾದ, ಪ್ರಭುವಾದ ಈಶಾನಮೂರ್ತಿಯನ್ನು ಪ್ರಣಮಿಸಿ,

ಶ್ರೀಕೃಷ್ಣನನ್ನು ಮನದಲ್ಲಿಯೇ ಸ್ಮರಿಸಿ, ಕ್ಷಣಮಾತ್ರದಲ್ಲಿ ಅಲ್ಲಿದ್ದ ಧನುಸ್ಸನ್ನು ಮೇಲೆತ್ತಿದನು. ಧನುರ್ವಿದ್ಯಾಪಾರಂಗತರಾದ, ನೃಸಿಂಹರಾದ ರುಕ್ಮ, ಸುನೀಥ, ವಕ್ರ, ರಾಧೇಯ, ದುರ್ಯೋಧನ, ಶಲ್ಯ, ಶಾಲ್ವ – ಮುಂತಾದವರಿಂದ ಮಹತ್ತರವಾದ ಪ್ರಯತ್ನದಿಂದಲೂ ಹೆದೆಯೇರಿಸಲು ದುಸ್ಸಾಧ್ಯವೆನಿಸಿದ್ದ ಧನುಸ್ಸನ್ನು ಇಂದ್ರನ ಮಗನಾದ, ಇಂದ್ರನ ತಮ್ಮನಾದ ವಿಷ್ಣುವಿನಂತೆ ಪ್ರಭಾವಶಾಲಿಯಾದ, ವೀರ್ಯವಂತರಲ್ಲಿ ಶ್ರೇಷ್ಠನಾದ ಅರ್ಜುನನು ಕ್ಷಣಮಾತ್ರದಲ್ಲಿ ಮೇಲೆತ್ತಿ ಹೆದೆಯೇರಿಸಿ, ಐದು ಬಾಣಗಳನ್ನೂ ಧನುಸ್ಸಿನಲ್ಲಿ ಆರೋಪಿಸಿ, ಚಲನಯಂತ್ರದ ಮೇಲಿದ್ದ ಲಕ್ಷ್ಯಕ್ಕೆ ಗುರಿಯಿಟ್ಟು ಹೊಡೆದು ಲಕ್ಷ್ಯವನ್ನು ಭೇದಿಸಿದನು. ಲಕ್ಷ್ಯವು ಛಿನ್ನ-ಭಿನ್ನವಾಗಿ ಕೆಳಕ್ಕೆ ಬಿದ್ದಿತು. ಒಡನೆಯೇ ಅಂತರಿಕ್ಷದಲ್ಲಿಯೂ ಸ್ವಯಂವರಮಂಟಪದಲ್ಲಿಯೂ ಕೋಲಾಹಲಶಬ್ದವುಂಟಾಯಿತು. ಮಂಗಳವಾದ್ಯಗಳು ಮೊಳಗಿದುವು. ಬ್ರಾಹ್ಮಣಸಮೂಹದಿಂದ ಮಾಡಲ್ಪಟ್ಟ ಜಯಘೋಷಗಳು ನಭೋಮಂಡಲವನ್ನೇ ಭೇದಿಸಿದುವು. ದೇವದುಂದುಭಿಗಳು ಮೊಳಗಿದುವು. ದೇವತೆಗಳು ಶತ್ರುಹಂತಕನಾದ ಅರ್ಜುನನ ಮೇಲೆ ಪುಷ್ಪವೃಷ್ಟಿಯನ್ನು ಕರೆದರು. ಸಾವಿರಾರು ಬ್ರಾಹ್ಮಣರು ತಮ್ಮ ಉತ್ತರೀಯಗಳನ್ನೂ, ಕೃಷ್ಣಾಜಿನಗಳನ್ನೂ ಮೇಲಕ್ಕೆ ಹಾರಿಸುತ್ತಾ ಆನಂದಘೋಷಗಳನ್ನು ಮಾಡಿದರು. ಪರಾಜಿತರಾಗಿದ್ದ ರಾಜಕುಮಾರರೆಲ್ಲರೂ ಆಶ್ಚರ್ಯಪಟ್ಟು ಹತಾಶರಾಗಿ ಹಾಹಾಕಾರಗಳನ್ನು ಮಾಡಿದರು. ಹೊಗಳುಭಟರು ಅರ್ಜುನನಿಗೆ ಸುಶ್ರಾವ್ಯವಾಗಿ ಪರಾಕುಗಳನ್ನು ಹೇಳಿದರು. ಲಕ್ಷ್ಯವನ್ನು ಭೇದಿಸಿದ, ಬ್ರಾಹ್ಮಣವಟುವಿನ ವೇಷದಲ್ಲಿದ್ದ ಅರ್ಜುನನನ್ನು ನೋಡಿ ದ್ರುಪದನು ಸಂತಸಗೊಂಡನು. ಮುಂದಾಗಬಹುದಾದ ಅಪಾಯವನ್ನು ತಿಳಿದು ತನ್ನ ಸೈನಿಕರನ್ನು ಅರ್ಜುನನ ನೆರವಿಗೆ ಕಳುಹಿಸಲು ಯೋಚಿಸುತ್ತಿದ್ದನು. ಒಂದೆಡೆಯಲ್ಲಿ ರಾಜರ ಹಾಹಾಕಾರ, ಮತ್ತೊಂದೆಡೆಯಲ್ಲಿ ಬ್ರಾಹ್ಮಣರ ಜಯಘೋಷ–ಇದರಿಂದಾಗಿ ದೊಡ್ಡ ಕೋಲಾಹಲದ ವಾತಾವರಣವೇರ್ಪಟ್ಟಿತು. ಬ್ರಾಹ್ಮಣರ ಮಧ್ಯದಲ್ಲಿದ್ದ ಯುಧಿಷ್ಠಿರನು ಅಲ್ಲಿ ನಿಲ್ಲುವುದು ಯುಕ್ತವಲ್ಲವೆಂದೆಣಿಸಿ ಅನುಜರಾದ ನಕುಲ-ಸಹದೇವರಿಂದೊಡಗೂಡಿ ಒಡನೆಯೇ ಸಮಾಜವಾಟವನ್ನು ಬಿಟ್ಟು ತಮ್ಮ ನಿವಾಸಸ್ಥಳಕ್ಕೆ ಹೊರಟುಹೋದನು. ಪೀತಾಂಬರಧಾರಿಣಿಯಾದ

ಕೃಷ್ಣೆಯು–ಲಕ್ಷ್ಯವು ಕೆಳಗುರುಳಿದುದನ್ನು ಕಂಡು, ಇಂದ್ರಸದೃಶನಾಗಿ ನಿಂತಿದ್ದ ಲಕ್ಷ್ಯಭೇದಕನಾದ ಪಾರ್ಥನನ್ನು ನೋಡಿ ಆನಂದಭರಿತಳಾಗಿ, ಪುಷ್ಪಹಾರ ದೊಡನೆ ಅರ್ಜುನನನ್ನು ಸಮೀಪಿಸಿ, ಅವನ ಕಂಬುಕಂಠಕ್ಕೆ ಸ್ವಯಂವರ ಮಾಲೆಯನ್ನು ಹಾಕಿದಳು. ಮಂಗಳವಾದ್ಯಗಳು ಮಂಗಳಸ್ವನಮಾಡಿದುವು. ದೇವತೆಗಳು ಪುಷ್ಪವೃಷ್ಟಿಗರೆದರು. ಬ್ರಾಹ್ಮಣರು ಸ್ವಸ್ತಿವಾಚನಮಾಡಿದರು.

ಅಪ್ರತಿಮಸಾಹಸಿಯಾದ ಅರ್ಜುನನು ಲಕ್ಷ್ಯಭೇದನದಿಂದ ದ್ರೌಪದಿ ಯನ್ನು ಹೊಂದಿದವನಾಗಿ, ಬ್ರಾಹ್ಮಣರಿಗೆ ನಮಸ್ಕರಿಸಿ, ಅವರಿಂದಲೂ ಪುರಸ್ಕೃತನಾಗಿ, ಪತ್ನಿಯಿಂದ ಅನುಸೃತನಾಗಿ ಸಮಾಜವಾಟವನ್ನು ಬಿಟ್ಟು ಹೊರಟನು.

ಗಿ೮೮ನೆಯ ಅಧ್ಯಾಯವು ಮುಗಿಯಿತು.

೧೯೯ನೆಯ ಅಧ್ಯಾಯ ಸ್ವಯಂವರಪರ್ವ (ಮುಂದುವರಿದಿದೆ.)

## ದ್ರುಪದನ ಮೇಲೆ ರಾಜರ ದಾಳಿ : ಭೀಮಾರ್ಜುನರ ಸಾಹಸ : ಶ್ರೀಕೃಷ್ಣ–ಬಲರಾಮರ ಸಂಭಾಷಣೆ

ವೈಶಂಪಾಯನರು ಹೇಳುತ್ತಾರೆ :

**ತಸ್ಮೈ ದಿತ್ಸತಿ ಕನ್ಯಾಂ ತು ಬ್ರಾಹ್ಮಣಾಯ ತದಾ ನೃಪೇ।**
**ಕೋಪ ಆಸೀನ್ಮಹೀಪಾನಾಮಾಲೋಕ್ಯಾನ್ಯೋನ್ಯಮನ್ತಿಕಾತ್ ॥೧॥**

ಜನಮೇಜಯ! ತಾನಿಟ್ಟಿದ್ದ ಪಣದಂತೆ ಬ್ರಾಹ್ಮಣನೊಬ್ಬನು ಲಕ್ಷ್ಯ ಭೇದನವನ್ನು ಮಾಡಿದುದರಿಂದ ದ್ರುಪದನು ಅವನಿಗೇ ತನ್ನ ಮಗಳಾದ ದ್ರೌಪದಿಯನ್ನು ಮದುವೆಮಾಡಿಕೊಡಲು ನಿಶ್ಚಯಿಸಿದನು. ಆದರೆ ಹತಾಶ ರಾಗಿದ್ದ ರಾಜಕುಮಾರರಿಗೆ ಅದು ಸಹ್ಯವಾಗಲಿಲ್ಲ. ಅವರನ್ನು ಕೋಪವು ಆವರಿಸಿತು. ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ವೀಕ್ಷಿಸುತ್ತಾ ಎಲ್ಲರೂ ಮಿಳಿತರಾಗಿ ಹೀಗೆ ಮಾತನಾಡಿಕೊಂಡರು. ತಾವು ಲಕ್ಷ್ಯಭೇದಮಾಡಲು ಸಮರ್ಥರಾಗಲಿಲ್ಲವೆಂಬ ಅರಿವೇ ಅವರ ಸ್ಮರಣೆಗೆ ಬರಲಿಲ್ಲ. “ಈ ದ್ರುಪದನು ಇಲ್ಲಿ ನೆರೆದಿರುವ ಸಾವಿರಾರು ಮಂದಿ ರಾಜಕುಮಾರ ರನ್ನೂ ಹುಲ್ಲಿನಂತೆ ಪರಿಗಣಿಸಿ, ಸ್ತ್ರೀಯರಲ್ಲಿ ಶ್ರೇಷ್ಠಳಾದ ದ್ರೌಪದಿಯನ್ನು

ಬ್ರಾಹ್ಮಣನೊಬ್ಬನಿಗೆ ಮದುವೆಮಾಡಿಕೊಡಲು ಇಚ್ಛಿಸಿದನಲ್ಲವೇ?" ಎಂದು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಾ ಹಲ್ಲುಕಡಿಯಲು ಪ್ರಾರಂಭಿಸಿದರು. ಕೋಪಾವಿಷ್ಟರಾಗಿದ್ದ ಅವರ ಕೈಗಳು ಒರೆಯಲ್ಲಿದ್ದ ಕತ್ತಿಯನ್ನು ಹೊರತೆಗೆಯಲು ಹೋದುವು.

**ಅವರೋಪ್ಯೇಹ ವೃಕ್ಷಂ ತು ಫಲಕಾಲೇ ನಿಪಾತ್ಯತೇ।**
**ನಿಹನ್ಮೈನಂ ದುರಾತ್ಮಾನಂ ಯೋಽಯಮಸ್ಮಾನ್ನ ಮನ್ಯತೇ ॥೩॥**

ಮರವನ್ನು ಬೆಳೆಸಿ ಫಲವು ಬಿಡುವ ಸಮಯದಲ್ಲಿ ಕಡಿದು ಕೆಳಕ್ಕೆ ಬೀಳಿಸುವಂತೆ– ಈ ದ್ರುಪದನು ಈ ಸಮಯದಲ್ಲಿ ನಮ್ಮೆಲ್ಲರನ್ನೂ ಮೆಟ್ಟಿ ಅವಮಾನಿಸಿದ್ದಾನೆ. ಇವನಿಗೆ ಮಹಾಪರಾಕ್ರಮಿಗಳಾದ ನಮ್ಮ ಲಕ್ಷ್ಯವೇ ಇದ್ದಂತಿಲ್ಲ. ಎಲ್ಲರೂ ಸೇರಿ ಇವನನ್ನು ಸಂಹರಿಸಿಬಿಡೋಣ, ನಡೆಯಿರಿ."

ಮತ್ತೊಬ್ಬ ರಾಜಕುಮಾರನು ಮತ್ತಷ್ಟು ಕೋಪಾವಿಷ್ಟನಾಗಿ ಹೇಳಿದನು:

"ಈ ದುಷ್ಟನು ನಿಶ್ಚಯವಾಗಿಯೂ ನಮ್ಮಿಂದ ಸಮ್ಮಾನಹೊಂದಲು ಸರ್ವಥಾಯೋಗ್ಯನಾಗಿಲ್ಲ. ವಯಸ್ಸುಕಳೆದಿದ್ದರೂ ವೃದ್ಧರಿಗಿರಬೇಕಾದ ಸದಾಚಾರಸಂಪನ್ನತೆಯೂ ಇವನಲ್ಲಿರುವುದಿಲ್ಲ. ವೃದ್ಧರಿಗೆ ಸಲ್ಲಿಸಬೇಕಾದ ಗೌರವಕ್ಕೂ ಇವನು ಅರ್ಹನಲ್ಲ. ಈ ಕಾರಣದಿಂದ ಸಕಲರಾಜರನ್ನೂ ತಿರಸ್ಕರಿಸಿರುವ, ದುರಾಚಾರಿಯಾದ ಈ ದ್ರುಪದನನ್ನು ಪುತ್ರಸಮೇತನಾಗಿ ಕತ್ತರಿಸಿಬಿಡೋಣ."

ಮತ್ತೊಬ್ಬ ರಾಜಕುಮಾರನು ಬಹಳ ಖೇದದಿಂದ ಹೇಳಿದನು :

"ಎಲ್ಲ ರಾಜಕುಮಾರರಿಗೂ ಆಹ್ವಾನವನ್ನಿತ್ತು ಕರೆಸಿಕೊಂಡು, ಎಲ್ಲರನ್ನೂ ಒಳ್ಳೊಳ್ಳೆಯ ಲೇಹ್ಯ-ಚೋಷ್ಯ-ಪಾನೀಯಾದಿಗಳಿಂದ ಸತ್ಕರಿಸಿ, ಕಟ್ಟಕಡೆಗೆ ಎಲ್ಲರನ್ನೂ ತಿರಸ್ಕರಿಸಿಬಿಟ್ಟನಲ್ಲಾ! ದೇವತೆಗಳಂತೆ ಸ್ಫುರದ್ರೂಪಿಗಳಾಗಿರುವ ಈ ರಾಜಕುಮಾರರ ಸಮೂಹದಲ್ಲಿ ಇವನ ಮಗಳಿಗೆ ಗಂಡನಾಗಲು ಅರ್ಹತೆಯುಳ್ಳ ಒಬ್ಬ ರಾಜಕುಮಾರನೂ ಸಿಕ್ಕಲಿಲ್ಲವೇ?"

ಬೇರೊಬ್ಬ ರಾಜಪುತ್ರನು ಮಧ್ಯದಲ್ಲಿ ಪ್ರವೇಶಿಸಿ ಹೇಳಿದನು :

"ಸ್ವಯಂವರಸಂಪ್ರದಾಯವು ಕ್ಷತ್ರಿಯರಿಗೆ ಮಾತ್ರವೇ ಉಕ್ತವಾಗಿದೆ.

ಕ್ಷತ್ರಿಯಕನ್ಯೆಯನ್ನು ಸ್ವಯಂವರಸಂಪ್ರದಾಯಾನುಸಾರವಾಗಿ ಮದುವೆ ಮಾಡಿಕೊಳ್ಳುವ ಅರ್ಹತೆಯೇ ಬ್ರಾಹ್ಮಣನಿಗೆ ಇರುವುದಿಲ್ಲ. ಈ ವಿಷಯವು ಸರ್ವತ್ರ ಶ್ರುತಿಪ್ರಸಿದ್ಧವಾಗಿಯೇ ಇದೆ.

ಒಂದು ವೇಳೆ ಈ ರಾಜಪುತ್ರಿಯು ಇಲ್ಲಿ ನೆರೆದಿರುವ ರಾಜಕುಮಾರರಲ್ಲಿ ಯಾರೊಬ್ಬನನ್ನೂ ತನ್ನ ಗಂಡನನ್ನಾಗಿ ವರಿಸಲು ಇಚ್ಛೆಪಡದಿದ್ದರೆ ಇವಳನ್ನು ಇಲ್ಲಿಯೇ ಪ್ರಜ್ವಲಿಸುತ್ತಿರುವ ಅಗ್ನಿಯಲ್ಲಿ ಹಾಕಿ ನಮ್ಮ ದೇಶಗಳಿಗೆ ತೆರಳೋಣ."

"ಚಾಪಲ್ಯದಿಂದಲೋ, ಲೋಭದಿಂದಲೋ ಈ ಬ್ರಾಹ್ಮಣನು ರಾಜರೆಲ್ಲರನ್ನೂ ಅವಮಾನಿಸಿ ಈ ಕಾರ್ಯವನ್ನು ಮಾಡಿಬಿಟ್ಟಿರುವನು. ಆದರೂ ಇವನನ್ನು ನಾವು ಕೊಲ್ಲಬಾರದು. ಏಕೆಂದರೆ :

**ಬ್ರಾಹ್ಮಣಾರ್ಥಂ ಹಿ ನೋ ರಾಜ್ಯಂ ಜೀವಿತಂ ಚ ವಸೂನಿ ಚ।**
**ಪುತ್ರಪೌತ್ರಂ ಚ ಯಚ್ಚಾನ್ಯದಸ್ಮಾಕಂ ವಿದ್ಯತೇ ಧನಮ್ ॥೧೦॥**

ನಮ್ಮ ರಾಜ್ಯ, ಜೀವನ, ಐಶ್ವರ್ಯ, ಪುತ್ರ-ಪೌತ್ರಾದಿಗಳು, ನಮ್ಮಲ್ಲಿರುವ ಯಾವುದೇ ವಿಧವಾದ ಧನ–ಎಲ್ಲವೂ ಬ್ರಾಹ್ಮಣರ ಸಲುವಾಗಿಯೇ ಇರುವುವು.

ಆದುದರಿಂದ ಮತ್ತೊಮ್ಮೆ ನಮಗೆ ಅವಮಾನವುಂಟಾಗದಿರುವುದಕ್ಕಾಗಿಯೂ, ಕ್ಷತ್ರಿಯಧರ್ಮದ ರಕ್ಷಣೆಗಾಗಿಯೂ, ಮುಂದೆ ನಡೆಯುವ ಸ್ವಯಂವರಗಳಲ್ಲಿ ಹೀಗಾಗದಿರುವುದಕ್ಕಾಗಿಯೂ ಈ ದ್ರುಪದನನ್ನು ನಾವು ಶಿಕ್ಷಿಸೋಣ."

ಪರಿಘದಂತಿರುವ ತೋಳುಗಳುಳ್ಳ, ಮಹಾಪರಾಕ್ರಮಿಗಳಾದ ರಾಜಕುಮಾರರು ಈ ರೀತಿಯಾಗಿ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಾ ಶಸ್ತ್ರಪಾಣಿಗಳಾಗಿ ದ್ರುಪದನನ್ನು ಅಲ್ಲಿಯೇ ಕೊಂದುಬಿಡುವ ಉದ್ದೇಶದಿಂದ ಮುನ್ನುಗ್ಗಿದರು.

ಆ ಸಮಯದಲ್ಲಿ ದ್ರುಪದನಿಗೆ ರಕ್ಷಕರಾರು? ದ್ರುಪದನು, ಮೇಲೆ ಬೀಳಲು ಬರುತ್ತಿರುವ ಶಸ್ತ್ರಪಾಣಿಗಳಾದ ರಾಜಕುಮಾರರನ್ನು ಕಂಡು ಭೀತನಾಗಿ ಬ್ರಾಹ್ಮಣರನ್ನೇ ಮರೆಹೊಕ್ಕನು. ಸ್ವಯಂವರಮಂಟಪದಿಂದ

ದ್ರೌಪದೀಸಮೇತನಾಗಿ ಬಿಡಾರಕ್ಕೆ ಹೊರಡಲು ಸಿದ್ಧನಾಗಿದ್ದ ಅರ್ಜುನನೂ ಮತ್ತು ಭೀಮನೂ ಹಿಂದಿರುಗಿ, ಮದಿಸಿದ ಆನೆಗಳಂತೆ ಮುನ್ನುಗ್ಗಿ ಬರುತ್ತಿದ್ದ ರಾಜಕುಮಾರರಿಗೆ ಎದುರಾಗಿ ನಿಂತರು.

ಬ್ರಾಹ್ಮಣರೇ ತಮ್ಮನ್ನು ಎದುರಿಸಲು ಬಂದರೆಂದು ತಿಳಿದು ರಾಜಕುಮಾರರು ಕೋಪದಿಂದ ಕಿಡಿ-ಕಿಡಿಯಾದರು. ಬಾಣಪ್ರಯೋಗ ಮಾಡಲು ಗೋಧಾಂಗುಲಿತ್ರಾಣಗಳನ್ನು ಧರಿಸಿದವರಾಗಿ, ಕತ್ತಿಗಳನ್ನು ಝಳಪಿಸುತ್ತಾ ಕುರುರಾಜಪುತ್ರರನ್ನು ಪ್ರಹರಿಸುವ ಆಶಯದಿಂದ ಎಲ್ಲರೂ ಏಕಮುಖವಾಗಿ ಭೀಮಾರ್ಜುನರ ಮೇಲೆ ದಾಳಿಮಾಡಲು ಉಪಕ್ರಮಿಸಿದರು.



ಇಂತಹ ಪರಾಕ್ರಮಶಾಲಿಗಳಾದವರು ಬ್ರಾಹ್ಮಣರಲ್ಲಿ ಯಾರಿದ್ದಾರೆಂಬ ವಿವೇಚನೆಯು ಆ ಸಮಯದಲ್ಲಿ ರಾಜಕುಮಾರರಿಗೆ ಹೇಗೆತಾನೇ ಉಂಟಾದೀತು?

ಅವರಿಬ್ಬರನ್ನೂ ಕೊಲ್ಲಬೇಕೆಂದೇ ನಿಶ್ಚಯಿಸಿ ರಾಜಕುಮಾರರೆಲ್ಲರೂ ಇಬ್ಬರನ್ನೂ ಸುತ್ತುವರಿದು ಯುದ್ಧಸನ್ನದ್ಧರಾದರು.

ಭೀಮನು ಆಯುಧಕ್ಕಾಗಿ ಹೆಚ್ಚುಕಾಲ ಯೋಚಿಸಲಿಲ್ಲ. ಹತ್ತಿರದಲ್ಲಿಯೇ ಇದ್ದ ವೃಕ್ಷವೊಂದನ್ನು ಬೇರುಸಹಿತವಾಗಿ ಕಿತ್ತು ನಾಲ್ಕಾರು ಬಾರಿ ನೆಲಕ್ಕಪ್ಪಳಿಸಿ ಪತ್ರರಹಿತವನ್ನಾಗಿ ಮಾಡಿದನು. ಆ ವೃಕ್ಷವನ್ನೇ ಹಿಡಿದುಕೊಂಡು – ದಂಡವನ್ನು ಹಿಡಿದು ನಿಂತಿರುವ ಯಮರಾಜನಂತೆ ಶೋಭಿಸುತ್ತಾ ಅರ್ಜುನನ ಸಮೀಪದಲ್ಲಿ ನಿಂತನು. ಅವನ ಮಹಾ ಕಾರ್ಯವು ತಮ್ಮನಾದ ಅರ್ಜುನನಿಗೇ ಆಶ್ಚರ್ಯವನ್ನುಂಟುಮಾಡಿತೆಂದ ಮೇಲೆ ಉಳಿದ ರಾಜಕುಮಾರರ ಹೃದಯಗಳಲ್ಲಿ ಯಾವವಿಧವಾದ ಭಯೋತ್ಪಾದನೆಯನ್ನುಂಟುಮಾಡಿತೆಂಬುದನ್ನು ಹೇಳಬೇಕಾಗಿಯೇ ಇಲ್ಲ.

ಇಂದ್ರನಿಭನಾದ ಅರ್ಜುನನೂ ಭಯವನ್ನು ಬದಿಗೊತ್ತರಿಸಿ, ಧನುರ್ಧರನಾಗಿ, ಮೇಲೆ ಬೀಳುತ್ತಿದ್ದ ರಾಜಕುಮಾರರನ್ನು ತಡೆದು ನಿಂತನು.

ಅವರಿಬ್ಬರ ಅತಿಮಾನುಷವಾದ ಸಾಹಸಕಾರ್ಯವನ್ನು ಸೂಕ್ಷ್ಮವಾಗಿ ವೀಕ್ಷಿಸುತ್ತಿದ್ದ ಮಹಾಮಹಿಮನಾದ ಶ್ರೀಕೃಷ್ಣನು ಉಗ್ರವೀರ್ಯನಾದ ಬಲರಾಮನಿಗೆ ಹೇಳಿದನು :

“ಅಣ್ಣ! ಸಂಕರ್ಷಣ! ಸಿಂಹರಾಜನಂತೆ ಗಮನವುಳ್ಳ, ಮಹಾಧನುಸ್ಸನ್ನು ಧರಿಸಿರುವ ಅವನೇ ಅರ್ಜುನನು. ಇದರಲ್ಲಿ ಸಂಶಯಲೇಶವಾದರೂ ಇಲ್ಲ. ನಿನ್ನೊಡನೆ ಮಾತನಾಡುತ್ತಿರುವ ನಾನು ವಾಸುದೇವನೇ ಆಗಿದ್ದರೆ ಅಲ್ಲಿರುವ ಮಹಾಪುರುಷನೂ ಅರ್ಜುನನೇ ಆಗಿರುತ್ತಾನೆ. ಮೇಲೆಬೀಳುತ್ತಿರುವ ರಾಜರನ್ನು ತಡೆಯಲು ವೃಕ್ಷವನ್ನೇ ಕಿತ್ತು ತಂದು ಯುದ್ಧಸನ್ನದ್ಧನಾಗಿ ನಿಂತಿರುವ ನಲ್ಲಾ – ಅವನೇ ಭೀಮಸೇನ. ಯುದ್ಧರಂಗದಲ್ಲಿ ಇಂತಹ ಅಮಾನುಷ ಕೃತ್ಯಗಳನ್ನು ಮಾಡಲು ಪ್ರಪಂಚದಲ್ಲಿ ಭೀಮಸೇನನಿಗಲ್ಲದೇ ಮತ್ತಾರಿಗೂ ಸಾಧ್ಯವೇ ಇಲ್ಲ. ಅಣ್ಣ! ಆ ಜಾಗದಲ್ಲಿ ಮೊದಲೊಬ್ಬನು ಕುಳಿತಿರಲಿಲ್ಲವೇ? ಆಗಲೇ ತೋರಿಸಿದೆನಲ್ಲಾ! ಕಮಲಪತ್ರಾಕ್ಷನಾಗಿ, ದೀರ್ಘಕಾಯನಾಗಿ, ಸಿಂಹದಂತೆ ಗತಿಯುಳ್ಳವನಾಗಿ, ಬಹಳ ವಿನೀತನಾಗಿ, ಬೆಳ್ಳಗೆ, ನೀಳವಾದ ಮತ್ತು ಸುಂದರವಾದ ಮೂಗಿನಿಂದ ಕೂಡಿದವನಾಗಿ, ಅಲ್ಲಿಯೇ ಕುಳಿತಿದ್ದು ಸ್ವಲ್ಪ ಹೊತ್ತಿಗೆ ಮುಂಚೆ ಎದ್ದುಹೋದನಲ್ಲಾ! – ಅವನೇ ಯುಧಿಷ್ಠಿರ ನೆಂಬುದರಲ್ಲಿ ಸಂಶಯವೇ ಇಲ್ಲ. ಅವನನ್ನು ಹಿಂಬಾಲಿಸಿ ಹೋದ

ಇಬ್ಬರು ಕಾರ್ತಿಕೇಯರಂತಿದ್ದ ತರುಣರು ನಕುಲ-ಸಹದೇವರೇ ಇರಬಹುದೆಂದು ನಾನು ಊಹಿಸಿದ್ದೇನೆ. ಕುಂತೀಸಮೇತರಾಗಿ ಪಾಂಡವರು ಲಾಕ್ಷಾಗೃಹದಿಂದ ಪಾರಾಗಿ ಜೀವಂತರಾಗಿರುವರೆಂಬ ವಾರ್ತೆಯನ್ನು ನಾನು ಬಹಳ ಹಿಂದೆಯೇ ಕೇಳಿದ್ದೆನು."

ನೀರಿಲ್ಲದಿರುವ ಬಿಳಿಯ ಮೋಡದಂತೆ ಶುಭ್ರವರ್ಣನಾಗಿ ಪ್ರಕಾಶಿಸುತ್ತಿದ್ದ ಬಲದೇವನು ಶ್ರೀಕೃಷ್ಣನ ಮಾತುಗಳನ್ನು ಕೇಳಿ ಸಂತೋಷಭರಿತನಾಗಿ ಹೇಳಿದನು : "ಕೃಷ್ಣ! ನಿನ್ನ ಮಾತುಗಳನ್ನು ಕೇಳಿ ನನಗೆ ಬಹಳ ಸಂತೋಷವಾಯಿತು. ಏಕೆಂದರೆ : ನಮ್ಮ ಸೋದರತ್ತೆಯು (ತಂದೆಯ ತಂಗಿಯು) ಪುತ್ರರೊಡನೆ ಮೃತ್ಯುವಿನಿಂದ ಪಾರಾದಳೆಂಬ ವಾರ್ತೆಯನ್ನು ಅದೃಷ್ಟವಿಶೇಷದಿಂದಲೇ ನಾನಿಂದು ಕೇಳಿದೆನು."

೧೮೯ನೆಯ ಅಧ್ಯಾಯವು ಮುಗಿಯಿತು.

೧೯೦ನೆಯ ಅಧ್ಯಾಯ ಸ್ವಯಂವರಪರ್ವ (ಮುಂದುವರಿದಿದೆ.)

## ಯುದ್ಧದಲ್ಲಿ ಭೀಮಾರ್ಜುನರಿಂದ ಕರ್ಣ-ಶಲ್ಯರ ಪರಾಜಯ

ವೈಶಂಪಾಯನರು ಹೇಳುತ್ತಾರೆ :

**ಅಜಿನಾನಿ ವಿಧುನ್ವನ್ತಃ ಕರಕಾಂಶ್ಚ ದ್ವಿಜರ್ಷಭಾಃ।**
**ಊಚುಸ್ತೇ ಭೀರ್ನ ಕರ್ತವ್ಯಾ ವಯಂ ಯೋತ್ಸ್ಯಾಮಹೇ ಪರಾನ್ ॥೧॥**

ಪಾರಿಕ್ಷಿತ! ರಾಜಕುಮಾರರು ಮಾಡುತ್ತಿದ್ದ ಕೋಲಾಹಲವನ್ನು ಕಂಡು ಅಲ್ಲಿದ್ದ ಬ್ರಾಹ್ಮಣರಿಗೆ ಸುಮ್ಮನೆ ಕುಳಿತುಕೊಳ್ಳಲು ಸಾಧ್ಯವಾಗಲಿಲ್ಲ. ಕೃಷ್ಣಾಜಿನಗಳನ್ನೂ, ಕಮಂಡಲುಗಳನ್ನೂ ಅಳ್ಳಾಡಿಸುತ್ತಾ ರಭಸದಿಂದ ಮೇಲೆದ್ದು ಅರ್ಜುನನಿಗೆ ಹೇಳಿದರು :

"ವೀರಬ್ರಾಹ್ಮಣನೇ! ನೀನು ಹೆದರುವ ಕಾರಣವಿಲ್ಲ. ನಾವೂ ನಿನ್ನೊಡನೆ ಸೇರಿಕೊಂಡು ಶತ್ರುಗಳ ಮೇಲೆ ಯುದ್ಧಮಾಡುತ್ತೇವೆ."

ಅರ್ಜುನನು, ಉತ್ಸಾಹದಿಂದೆದ್ದುನಿಂತ ಬ್ರಾಹ್ಮಣರನ್ನು ನೋಡಿ ನಸುನಕ್ಕು ವಿನೀತನಾಗಿ ಹೇಳಿದನು : "ನೀವು ಪಕ್ಕಕ್ಕೆ ಸರಿದು ಪ್ರೇಕ್ಷಕರಾಗಿ

ನಿಂತು ನೋಡುತ್ತಿರಿ. ಮಂತ್ರಪುನಶ್ಚರಣೆಯನ್ನು ಮಾಡಿ ಹಾವುಗಳನ್ನು ಬಂಧಿಸುವಂತೆ ನಾನೊಬ್ಬನೇ ಈ ರಾಜಕುಮಾರರ ಮೇಲೆ ತೀಕ್ಷ್ಣವಾದ ನೂರಾರು ಬಾಣಗಳನ್ನು ಪ್ರಯೋಗಿಸಿ ಇವರನ್ನು ಪ್ರತಿಬಂಧಿಸುತ್ತೇನೆ.”

ಪಾರ್ಥನು ಹೀಗೆ ಹೇಳಿ ಸ್ವಯಂವರಕ್ಕೆ ಪಣವನ್ನಾಗಿಟ್ಟಿದ್ದ ಧನುಸ್ಸನ್ನೇ ತೆಗೆದುಕೊಂಡು ಹೆದೆಯೇರಿಸಿ, ಸೋದರನಾದ ಭೀಮನೊಡನೆ ಮೇಲೆ ಬೀಳಲು ಬರುತ್ತಿದ್ದ ರಾಜಕುಮಾರರಿಗೆ ಎದುರಾಗಿ ಪರ್ವತೋಪಮನಾಗಿ ನಿಂತನು.

ಭೀಮಾರ್ಜುನರು ಯುದ್ಧದುರ್ಮದರಾಗಿದ್ದ, ಕರ್ಣಪ್ರಮುಖರಾದ ಕ್ಷತ್ರಿಯರಾಜರನ್ನು ಕಂಡು–ಮದಿಸಿದ ಎರಡು ಸಲಗಗಳು ಇದಿರುಪಕ್ಷದ ಆನೆಗಳನ್ನು ಎದುರಿಸಿ ನಿಲ್ಲುವಂತೆ – ಆ ಕ್ಷತ್ರಿಯರಾಜಕುಮಾರರನ್ನು ಎದುರಿಸಿ ನಿಂತರು. ಮುನ್ನುಗ್ಗಿಬಂದ ಭೀಮಾರ್ಜುನರನ್ನು ಕಂಡು– ‘ಯುದ್ಧಮಾಡುವ ಇಚ್ಛೆಯಿಂದ ಯುದ್ಧಸನ್ನದ್ಧನಾಗಿ ಬರುವವನು ಬ್ರಾಹ್ಮಣನೇ ಆದರೂ ಯುದ್ಧದಲ್ಲಿ ಅವರನ್ನು ಕೊಲ್ಲಬಹುದು. ಮುನ್ನುಗ್ಗಿ ನಡೆದು ಬಾಣಗಳನ್ನು ಪ್ರಯೋಗಿಸಿರಿ!’–ಎಂದು ಘೋಷಿಸುತ್ತಾ ರಾಜಕುಮಾರರೂ ಬ್ರಾಹ್ಮಣರ ಮೇಲೆ ನುಗ್ಗಿದರು.

ಮಹಾಪರಾಕ್ರಮಿಯಾದ ಕರ್ಣನು ಅರ್ಜುನನಿಗೆ ಎದುರಾಗಿ ನಿಂತನು. ಹೆಣ್ಣಾನೆಗೋಸ್ಕರ ಸೆಣೆಸಾಡುತ್ತಿರುವ ಗಂಡಾನೆಯು ಪ್ರತಿಸ್ಪರ್ಧಿಯಾದ ಆನೆಯನ್ನು ಎದುರಿಸುವಂತೆ–ಮದ್ರೇಶ್ವರನಾದ, ಬಲಿಷ್ಠನಾದ ಶಲ್ಯನು ಭೀಮಸೇನನೊಡನೆ ಯುದ್ಧಮಾಡಲು ಉಪಕ್ರಮಿಸಿದನು.

ದುರ್ಯೋಧನಪ್ರಮುಖರಾದ ಇತರ ರಾಜರು–ದರ್ಭೆಯ ಕಟ್ಟನ್ನು ಮೇಲೆತ್ತಿ ಮುನ್ನುಗ್ಗಿ ಬರುತ್ತಿದ್ದ ಬ್ರಾಹ್ಮಣರ ಅಬ್ಬರವನ್ನು ತಡೆಯಲು, ಬ್ರಾಹ್ಮಣರಿಗೆ ಹೆಚ್ಚು ನೋವಾಗದ ರೀತಿಯಲ್ಲಿ–ಅಲಕ್ಷ್ಯದಿಂದಲೇ ಬಾಣಗಳನ್ನು ಪ್ರಯೋಗಿಸುತ್ತಿದ್ದರು.

ಕರ್ಣನು ತನ್ನ ಎದುರಿನಲ್ಲೇ ಬಾಣಗಳನ್ನು ಪ್ರಯೋಗಿಸುತ್ತಾ ಬರುತ್ತಿರುವುದನ್ನು ಕಂಡು ಅರ್ಜುನನು ಒಡನೆಯೇ ಅತಿತೀಕ್ಷ್ಣವಾದ ನೂರು

ಬಾಣಗಳನ್ನು ಧನುಸ್ಸಿಗೆ ಯೋಜಿಸಿ, ಹೆದೆಯನ್ನು ಆಕರ್ಣಾಂತವಾಗಿ ಸೆಳೆದು, ಕರ್ಣನ ಮೇಲೆ ಪ್ರಯೋಗಿಸಿದನು. ತೇಜಸ್ಸಿನಿಂದ ಕೂಡಿದ್ದ ನೂರು ಬಾಣಗಳೂ ಕರ್ಣನ ಶರೀರವನ್ನು ಹೊಕ್ಕೊಡನೆಯೇ ಅವನು ಮೂರ್ಛಿತನಾದನು. ಒಂದೆರಡು ಕ್ಷಣಗಳಲ್ಲಿಯೇ ಪ್ರಜ್ಞೆಯನ್ನು ಹೊಂದಿ, ಒಡನೆಯೇ ಮೇಲೆದ್ದು, ಎದುರಿನಲ್ಲಿ ನಿಂತಿರುವವನು ಕೇವಲ ಬ್ರಾಹ್ಮಣನೆಂಬ ಔದಾಸೀನ್ಯವನ್ನು ತೊರೆದು, ಅರ್ಜುನನ ಮೇಲೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಲು ಮೊದಲಿಟ್ಟನು. ಅನಂತರ ಕರ್ಣಾರ್ಜುನರ ಭಯಂಕರ ಯುದ್ಧವು ಪ್ರಾರಂಭವಾಯಿತು. ತಮ್ಮ ಬಾಣಪ್ರಯೋಗಕೌಶಲದಿಂದ ಕರ್ಣಾರ್ಜುನರು ಪರಸ್ಪರವಾಗಿ ಬಾಣಗಳಿಂದಲೇ ಆಚ್ಛಾದಿತರಾದರು. ಪ್ರೇಕ್ಷಕರಿಗೆ ಬಾಣಗಳು ಮಾತ್ರ ಕಾಣುತ್ತಿದ್ದುವೇ ಹೊರತು ಕರ್ಣಾರ್ಜುನರು ಕಾಣುತ್ತಲೇ ಇರಲಿಲ್ಲ. 'ನನ್ನ ಬಾಹುಬಲ-ಪರಾಕ್ರಮಗಳನ್ನು ನೋಡು!'– 'ನೀನು ಬಿಟ್ಟ ಬಾಣಗಳನ್ನು ಹೇಗೆ ತುಂಡರಿಸಿದೆನು ಕಂಡೆಯಾ?' ಇತ್ಯಾದಿ ಪರಸ್ಪರವಾಗಿ ಹೇಳುತ್ತಿದ್ದ ರಣಘೋಷಗಳು ಮಾತ್ರವೇ ಪ್ರೇಕ್ಷಕರಿಗೆ ಕೇಳುತ್ತಿದ್ದುವು.

ಅರ್ಜುನನ ಅಸಾಧಾರಣವಾದ ಧನುರ್ವಿದ್ಯಾಕೌಶಲವನ್ನು ಕಂಡು ಸೂರ್ಯತನಯನು ತೀಕ್ಷ್ಣತಮವಾದ ಬಾಣಗಳನ್ನು ದೀರ್ಘವಾಗಿ ಸೆಳೆದು ಗುರಿಯಿಟ್ಟು ಅರ್ಜುನನ ಕಡೆಗೆ ಬಿಡುತ್ತಿದ್ದನು. ಅರ್ಜುನನು ಬಿಡುತ್ತಿದ್ದ ಬಾಣಗಳೆಲ್ಲವನ್ನೂ ತಡೆದು ಕರ್ಣನು ಗಟ್ಟಿಯಾಗಿ ರಣಘೋಷಮಾಡು ತ್ತಿದ್ದನು. ಕರ್ಣನ ಕೈಚಳಕವನ್ನು ರಾಜಕುಮಾರರೆಲ್ಲರೂ ಶ್ಲಾಘಿಸುತ್ತಿದ್ದರು.

ಆದರೆ ಕರ್ಣನಿಗೆ–ಎದುರಿನಲ್ಲಿ ನಿಂತಿರುವ ಬ್ರಾಹ್ಮಣನ ಕೈಚಳಕವನ್ನೂ ಬಾಣಪ್ರಯೋಗಕೌಶಲವನ್ನೂ ಕಂಡು ವಿಸ್ಮಯವಾಯಿತು. ಅರ್ಜುನನನ್ನು ಕುರಿತು ಹೇಳಿದನು :

**ತುಷ್ಯಾಮಿ ತೇ ವಿಪ್ರಮುಖ್ಯ ಭುಜವೀರ್ಯಸ್ಯ ಸಂಯುಗೇ।**
**ಅವಿಷಾದಸ್ಯ ಸೈವಾಸ್ಯ ಶಸ್ತ್ರಾಸ್ತ್ರವಿಜಯಸ್ಯ ಚ ॥೧೬॥**

"ಬ್ರಾಹ್ಮಣಶ್ರೇಷ್ಠನೇ! ನಿನ್ನ ಬಾಣಪ್ರಯೋಗಕೌಶಲವನ್ನು ಕಂಡು ಸಂತುಷ್ಟನಾಗಿದ್ದೇನೆ. ಅನೇಕಮಹಾವೀರರೊಡನೆ ಹೋರಾಡುವಾಗಲೂ

ವಿಷಾದಪಡದಿರುವಿಕೆಯೂ ಮತ್ತು ಬಾಣಪ್ರಯೋಗದಲ್ಲಿ ನಿನಗಿರುವ ಶಸ್ತ್ರಾಸ್ತ್ರವಿಜಯಸಾಧನೆಯೂ ನಿಶ್ಚಯವಾಗಿಯೂ ಪ್ರಶಂಸಾರ್ಹವಾಗಿವೆ.

**ಕಿಂ ತ್ವಂ ಸಾಕ್ಷಾದ್ಧನುರ್ವೇದೋ ರಾಮೋ ವಾ ವಿಪ್ರಸತ್ತಮ।**
**ಅಥ ಸಾಕ್ಷಾದ್ಧರಿಹಯಃ ಸಾಕ್ಷಾದ್ವಾ ವಿಷ್ಣುರಚ್ಯುತಃ ॥೧೭॥**

ಬ್ರಾಹ್ಮಣೋತ್ತಮ! ಶರಸಂಧಾನ, ಆಕರ್ಷಣೆ, ಲಕ್ಷ್ಯಭೇದ – ಇವುಗಳನ್ನು ನೋಡಿದರೆ ಧನುರ್ವೇದವೇ ನಿನ್ನ ರೂಪದಲ್ಲಿ ಬಂದು ನನ್ನ ಎದುರಿನಲ್ಲಿ ನಿಂತಿದೆಯೋ ಎಂಬ ಭಾವನೆಯನ್ನು ಉಂಟುಮಾಡುತ್ತಿದೆ ಅಥವಾ ಬ್ರಾಹ್ಮಣಶ್ರೇಷ್ಠನಾದ ಪರಶುರಾಮನೇ ನೀನಿರಬಹುದೇ? ಅಲ್ಲದಿದ್ದರೆ ಇಂದ್ರನೋ ಅಥವಾ ಅಚ್ಯುತನಾದ ಸಾಕ್ಷಾದ್ವಿಷ್ಣುವೋ ನೀನಾಗಿರಬಹುದು.

**ಆತ್ಮಪ್ರಚ್ಛಾದನಾರ್ಥಂ ವೈ ಬಾಹುವೀರ್ಯಮುಪಾಶ್ರಿತಃ।**
**ವಿಪ್ರರೂಪಂ ವಿಧಾಯೇದಂ ಮನ್ಯೇ ಮಾಂ ಪ್ರತಿಯುಧ್ಯಸೇ ॥೧೮॥**

ನಿನ್ನ ನಿಜಸ್ವರೂಪವನ್ನು ತಿಳಿಸಕೂಡದೆಂಬ ಇಚ್ಛೆಯಿಂದ ನೀನು ಬ್ರಾಹ್ಮಣನ ವೇಷವನ್ನು ಧರಿಸಿ ಬಾಹುಬಲದ ಆಶ್ರಯವನ್ನು ಹೊಂದಿದವನಾಗಿ ನನ್ನೊಡನೆ ಯುದ್ಧಮಾಡುತ್ತಿರುವೆಯೆಂದು ನಾನು ಭಾವಿಸುತ್ತೇನೆ.

**ನ ಹಿ ಮಾಮಾಹವೇ ಕ್ರುದ್ಧಮನ್ಯಃ ಸಾಕ್ಷಾಚ್ಛಚೀಪತೇಃ।**
**ಪುಮಾನ್ಯೋಧಯಿತುಂ ಶಕ್ತಃ ಪಾಣ್ಡವಾದ್ವಾ ಕಿರೀಟಿನಃ ॥೧೯॥**

ಏಕೆಂದರೆ : ಕ್ರುದ್ಧನಾದ ನನ್ನನ್ನು ರಣಾಂಗಣದಲ್ಲಿ ಎದುರಿಸಿ ನಿಲ್ಲುವ ಸಾಮರ್ಥ್ಯವುಳ್ಳವನೆಂದರೆ ಶಚೀಪತಿಯಾದ ಇಂದ್ರನೊಬ್ಬನು ; ಪಾಂಡುಪುತ್ರನಾದ ಅರ್ಜುನನೊಬ್ಬನು – ಇವರಿಬ್ಬರ ಹೊರತಾಗಿ ಮತ್ತಾರೂ ನನ್ನ ಮುಂದೆ ನಿಂತು ಯುದ್ಧಮಾಡುವ ಧೈರ್ಯಮಾಡಲಾರರು."

ಅರ್ಜುನನು ಕರ್ಣನ ಮಾತುಗಳನ್ನು ಕೇಳಿ ನಸುನಗುತ್ತಾ ಹೇಳಿದನು :

**ನಾಸ್ಮಿ ಕರ್ಣ ಧನುರ್ವೇದೋ ನಾಸ್ಮಿ ರಾಮಃ ಪ್ರತಾಪವಾನ್।**
**ಬ್ರಾಹ್ಮಣೋಽಸ್ಮಿ ಯುಧಾಂ ಶ್ರೇಷ್ಠಃ ಸರ್ವಶಸ್ತ್ರಭೃತಾಂ ವರಃ ॥೨೦॥**

**ಬ್ರಾಹ್ಮೇ ಪೌರನ್ದರೇ ಚಾಸ್ತ್ರೇ ನಿಷ್ಠಿತೋ ಗುರುಶಾಸನಾತ್।**
**ಸ್ಥಿತೋಽಸ್ಮ್ಯದ್ಯ ರಣೇ ಜೇತುಂ ತ್ವಾಂ ವೈ ವೀರ ಸ್ಥಿರೋ ಭವ ॥೨೧॥**

"ಕರ್ಣ! ನಾನು ಧನುರ್ವೇದಸ್ವರೂಪನೂ ಅಲ್ಲ; ಮಹಾಪ್ರತಾಪಶಾಲಿಯಾದ ಪರಶುರಾಮನು ಮೊದಲೇ ಅಲ್ಲ. ಸಕಲಶಾಸ್ತ್ರಗಳನ್ನೂ ಅಧ್ಯಯನಮಾಡಿರುವ, ಯುದ್ಧಪ್ರಕ್ರಿಯೆಗಳಲ್ಲಿ ಹೆಚ್ಚು ನೈಪುಣ್ಯವನ್ನು ಹೊಂದಿರುವ, ಶಸ್ತ್ರಾಸ್ತ್ರಗಳ ವಿಜ್ಞಾನವನ್ನು ಸಂಪೂರ್ಣವಾಗಿ ತಿಳಿದಿರುವ ಬ್ರಾಹ್ಮಣನಾಗಿದ್ದೇನೆ. ಗುರುದೇವನ ಅನುಗ್ರಹದಿಂದ ಬ್ರಹ್ಮಾಸ್ತ್ರ ಮತ್ತು ಐಂದ್ರಾಸ್ತ್ರಗಳ ಸಾಧನೆಯನ್ನೂ ಮಾಡಿರುತ್ತೇನೆ. ವೀರಕರ್ಣ! ನಾನು ನಿನ್ನನ್ನು ಈಗಲೇ ಯುದ್ಧದಲ್ಲಿ ಪರಾಜಿತನನ್ನಾಗಿ ಮಾಡಲು ಸಿದ್ಧನಾಗಿ ನಿಂತಿರುವೆನು. ಓಡಿಹೋಗಲು ಯತ್ನಿಸದೇ ಸ್ಥಿರವಾಗಿ ನಿಲ್ಲು."

ಜನಮೇಜಯ! ಅರ್ಜುನನ ಮಾತುಗಳನ್ನು ಕೇಳಿದೊಡನೆಯೇ ಮಹಾರಥನಾದ ರಾಧೇಯನು ಬ್ರಹ್ಮತೇಜಸ್ಸನ್ನು ಪರಾಭವಗೊಳಿಸಲು ಸಾಧ್ಯವಿಲ್ಲವೆಂದು ಭಾವಿಸಿ ಯುದ್ಧದಿಂದ ಪರಾಙ್ಮುಖನಾದನು.

ಮತ್ತೊಂದು ಕಡೆಯಲ್ಲಿ ಮಹಾಶೂರರಾದ, ಬಲಿಷ್ಠರಾದ, ಯುದ್ಧ ವಿದ್ಯೆಯಲ್ಲಿಯೂ ಮತ್ತು ಬಲದಲ್ಲಿಯೂ ಸಂಪನ್ನರಾದ ಶಲ್ಯ-ವೃಕೋದರರು ಮದಿಸಿದ ಎರಡು ಆನೆಗಳಂತೆ ದ್ವಂದ್ವಯುದ್ಧದಲ್ಲಿ ನಿರತರಾಗಿದ್ದರು. ಮುಷ್ಟಿಗಳಿಂದ ಒಬ್ಬರನ್ನು ಮತ್ತೊಬ್ಬರು ಅಪ್ಪಳಿಸುತ್ತಿದ್ದರು. ಕೆಲವು ವೇಳೆ ಒಬ್ಬರನ್ನು ಮತ್ತೊಬ್ಬರು ಬಹಳ ದೂರದವರೆಗೆ ತಳ್ಳಿಕೊಂಡು ಹೋಗುತ್ತಿದ್ದರು. ಮತ್ತೊಂದು ವೇಳೆ ದರ-ದರನೆ ಸೆಳೆದುಕೊಂಡು ಬರುತ್ತಿದ್ದರು. ಕೆಲವು ವೇಳೆ ಒಬ್ಬರನ್ನು ಮತ್ತೊಬ್ಬರು ನೆಲಕ್ಕೆ ಅಪ್ಪಳಿಸಿ ಮುಖಕ್ಕೆ ಮಣ್ಣು ಮುಕ್ಕಿಸುತ್ತಿದ್ದರು. ವಜ್ರಮುಷ್ಟಿಗಳಿಂದ ಒಬ್ಬರನ್ನು ಮತ್ತೊಬ್ಬರು ಗುದ್ದಿದ ಚಟ-ಚಟಾ ಶಬ್ದವು ಎರಡು ಕಲ್ಲುಗಳನ್ನು ಪರಸ್ಪರ ಕುಟ್ಟಿದರೆ ಉಂಟಾಗುವ ಶಬ್ದಕ್ಕೆ ಸಮನಾಗಿರುತ್ತಿದ್ದಿತು. ವೀರಗರ್ಜನೆಗಳೊಡನೆ ಅವರು ಮಾಡುತ್ತಿದ್ದ ದ್ವಂದ್ವಯುದ್ಧವು ಭಯಂಕರವಾಗಿದ್ದಿತು. ಆ ವಿಧವಾದ ದ್ವಂದ್ವಯುದ್ಧವು ಒಂದು ಮುಹೂರ್ತಕಾಲ ನಡೆಯಿತು. ಭೀಮನು ಸಮಯವನ್ನು ನೋಡಿ ಶಲ್ಯನನ್ನು ಪಟ್ಟುಹಿಡಿದು ಮೇಲೆತ್ತಿ ನೆಲದ ಮೇಲೆ

ಅಪ್ಪಳಿಸಿದನು. ಅವನ ದ್ವಂದ್ವಯುದ್ಧಕೌಶಲವು ಅಲ್ಲಿದ್ದವರೆಲ್ಲರಿಗೂ ಬಹಳ ಆಶ್ಚರ್ಯವನ್ನುಂಟುಮಾಡಿತು. ಬ್ರಾಹ್ಮಣರೆಲ್ಲರೂ ಭೀಮನನ್ನು ಪ್ರಶಂಸಿಸುತ್ತಾ ಶಲ್ಯನನ್ನು ನೋಡಿ ನಗುತ್ತಿದ್ದರು. ನಿಶ್ಚೇಷ್ಟನಾಗಿ ಬಿದ್ದಿದ್ದರೂ ಶಲ್ಯನನ್ನು ಪುರುಷಶ್ರೇಷ್ಠನಾದ ಭೀಮನು ಕೊಲ್ಲಲಿಲ್ಲ.

ಶಲ್ಯ-ಕರ್ಣರ ಪರಾಭವವೂ ಆದನಂತರ ಉಳಿದ ರಾಜಕುಮಾರರು ಮುನ್ನುಗ್ಗಲು ಶಂಕಿಸಿದರು. ಭೀಮಾರ್ಜುನರನ್ನು ಎಲ್ಲರೂ ಸುತ್ತುಗಟ್ಟಿ ಹೇಳಿದರು : "ನಿಶ್ಚಯವಾಗಿಯೂ ಈ ಬ್ರಾಹ್ಮಣಕುಮಾರರು ಒಳ್ಳೆಯ ಪರಾಕ್ರಮಶಾಲಿಗಳಾಗಿದ್ದಾರೆ. ಇವರು ಯಾವ ವಂಶಕ್ಕೆ ಸೇರಿದವರು ಮತ್ತು ಇವರು ವಾಸಮಾಡುತ್ತಿರುವುದೆಲ್ಲಿ? – ಎಂಬುದನ್ನು ತಿಳಿಯಿರಿ. ಏಕೆಂದರೆ : ಪರಶುರಾಮ, ದ್ರೋಣ ಮತ್ತು ಅರ್ಜುನ – ಇವರ ಹೊರತಾಗಿ ರಾಧೇಯನೊಡನೆ ಯುದ್ಧಮಾಡಲು ಮತ್ತಾರಿಗೆ ತಾನೇ ಸಾಮರ್ಥ್ಯವಿದೆ? ದುರ್ಯೋಧನನನ್ನು ಪರಾಜಯಗೊಳಿಸಲು ಶ್ರೀಕೃಷ್ಣ ಮತ್ತು ಕೃಪರಿಂದ ಮಾತ್ರವೇ ಸಾಧ್ಯ. ಇವೆಲ್ಲಕ್ಕಿಂತಲೂ ಮಿಗಿಲಾಗಿ ಮಹಾಪರಾಕ್ರಮಿಯಾದ ಶಲ್ಯನೊಡನೆ ಯುದ್ಧಮಾಡಲು ಬಲರಾಮ, ವೃಕೋದರ ಮತ್ತು ದುರ್ಯೋಧನ – ಇವರು ಸಮರ್ಥರೇ ಹೊರತು ಮತ್ತಾರೂ ಇವನ ಮುಂದೆ ನಿಲ್ಲಲಾರರು. ಆದುದರಿಂದ ಮಹಾಪರಾಕ್ರಮಿಗಳಾದ ಈ ಬ್ರಾಹ್ಮಣರ ಕುಲ-ಗೋತ್ರಗಳನ್ನು ಅವಶ್ಯವಾಗಿ ತಿಳಿಯಬೇಕಾಗಿದೆ. ಬ್ರಾಹ್ಮಣರೊಡನೆ ನಮಗಿನ್ನು ಯುದ್ಧವು ಸಾಕು ; ನಿಲ್ಲಿಸಿರಿ. ಬ್ರಾಹ್ಮಣನಾದವನು ಅಪರಾಧವನ್ನು ಮಾಡಿದ್ದರೂ ಅವನನ್ನು ರಕ್ಷಿಸುವುದು ನಮ್ಮ ಕರ್ತವ್ಯ. ಮೊಟ್ಟಮೊದಲು ಇವರಾರೆಂಬುದನ್ನು ತಿಳಿಯೋಣ. ಒಂದು ವೇಳೆ ಯುದ್ಧವನ್ನೇ ಮಾಡಬೇಕೆನ್ನಿಸಿದರೆ ಇವರ ಕುಲ-ಗೋತ್ರಗಳನ್ನು ತಿಳಿದನಂತರ ಸಂತೋಷದಿಂದ ಯುದ್ಧಮಾಡೋಣ."

ಶ್ರೀಕೃಷ್ಣನಿಗೆ ಬ್ರಾಹ್ಮಣವೇಷದಲ್ಲಿರುವವರು ಭೀಮಾರ್ಜುನರೆಂಬುದರಲ್ಲಿ ಸಂಶಯವು ಉಳಿಯಲಿಲ್ಲ. ಶ್ರೀಕೃಷ್ಣನು ಭೀಮಾರ್ಜುನರನ್ನು ಸುತ್ತುವರಿದು ನಿಂತಿದ್ದ ರಾಜಕುಮಾರರನ್ನು ಸಂಬೋಧಿಸಿ–"ರಾಜಕುಮಾರರೇ! ಈ ಬ್ರಾಹ್ಮಣನು ರಾಜಕುಮಾರಿಯನ್ನು ಧರ್ಮದಿಂದ ಪಡೆದಿರುತ್ತಾನೆ.

ಇವನ ಸಂಗಡ ಯುದ್ಧಮಾಡುವುದು ಧರ್ಮನಿಷ್ಠರಾದ ನಿಮಗೆ ಉಚಿತವೆನಿಸಲಾರದು"–ಎಂದು ನಯವಾದ ಮಾತುಗಳಿಂದ ರಾಜಕುಮಾರರನ್ನು ಯುದ್ಧದಿಂದ ಪರಾಙ್ಮುಖರಾಗುವಂತೆ ಮಾಡಿದನು.

ರಾಜಕುಮಾರರು–ಬ್ರಾಹ್ಮಣನೊಬ್ಬನು ಬಂದು ಕ್ಷತ್ರಿಯರಿಗೂ ಅಸಾಧ್ಯವಾದ ಸಾಹಸವನ್ನು ತೋರಿ ದ್ರೌಪದಿಯನ್ನು ಪಡೆದುದಕ್ಕಾಗಿ–ತಮ್ಮಲ್ಲಿಯೇ ಆಶ್ಚರ್ಯಪಡುತ್ತಾ ತಮ್ಮ ದೇಶಗಳಿಗೆ ತೆರಳಿದರು.

ವೃತ್ತೋ ಬ್ರಹ್ಮೋತ್ತರೋ ರಙ್ಗಃ
ಪಾಞ್ಚಾಲೀ ಬ್ರಾಹ್ಮಣೈರ್ವೃತಾ ॥೪೦॥

"ಬ್ರಾಹ್ಮಣರ ಪಕ್ಷವೇ ಜಯಿಸಿತು. ಪಾಂಚಾಲರಾಜಕುಮಾರಿಯು ಬ್ರಾಹ್ಮಣನ ಪತ್ನಿಯಾದಳು"– ಎಂದು ಸಭಾಸದರೆಲ್ಲರೂ ಹೇಳಿಕೊಳ್ಳುತ್ತಾ ತಮ್ಮ-ತಮ್ಮ ಮನೆಗಳಿಗೆ ತೆರಳಿದರು.

ರಾಜಕುಮಾರರನ್ನು ಪರಾಭವಗೊಳಿಸಿ ನಿಂತಿದ್ದ ಭೀಮಾರ್ಜುನರನ್ನು ಬ್ರಾಹ್ಮಣಸಮೂಹವು ಸುತ್ತುವರಿದು ನಿಂತಿದ್ದಿತು. ಆ ಸಮೂಹದಿಂದ ಹೊರಬರಲು ಭೀಮಾರ್ಜುನರಿಗೆ ಸ್ವಲ್ಪ ಕಷ್ಟವೇ ಆಯಿತು.

ಭೀಮಾರ್ಜುನರು ಜನಸಮ್ಮರ್ದದಿಂದ ಬಿಡುಗಡೆ ಹೊಂದಿ, ಶತ್ರುರಾಜರ ದೃಷ್ಟಿಪಥಕ್ಕೆ ಗೋಚರಿಸುತ್ತಾ, ರಾಜಕುಮಾರಿಯಾದ ಕೃಷ್ಣೆಯಿಂದ ಅನುಸೃತರಾಗಿ–ಮೋಡಗಳಿಂದ ಹೊರಬಂದ ಚಂದ್ರ-ಸೂರ್ಯರಂತೆ ಪ್ರಕಾಶಿಸುತ್ತಾ–ಮನೆಯ ಕಡೆಗೆ ಧಾವಿಸಿದರು.

ಆ ಮಧ್ಯದಲ್ಲಿ ತನ್ನ ಮಕ್ಕಳು ಬಹಳ ಹೊತ್ತಿನವರೆಗೂ ಭಿಕ್ಷಾಟನೆಯಿಂದ ಮನೆಗೆ ಬಾರದಿದ್ದುದರಿಂದ ಕುಂತಿಯು ಬಹಳ ದುಃಖಿತಳಾದಳು. ತನ್ನ ಮಕ್ಕಳಿಗೆ ಯಾವುದಾದರೂ ಅಪಾಯವು ಒದಗಿರಬಹುದೆಂದು ಪರಿತಪಿಸಿದಳು.

"ಧೃತರಾಷ್ಟ್ರನ ಮಕ್ಕಳು ಬ್ರಾಹ್ಮಣವೇಷದಲ್ಲಿರುವ ನನ್ನ ಮಕ್ಕಳನ್ನು ಯುಧಿಷ್ಠಿರಾದಿಗಳೆಂದು ಗೂಢಚಾರರ ಮೂಲಕ ತಿಳಿದು ಕೊಲ್ಲಿಸಿಬಿಟ್ಟಿರ

ಬಹುದೇ? ಅಥವಾ ಯಾವನಾದರೂ ರಾಕ್ಷಸನು ತನ್ನ ಮಾಯಾವಿದ್ಯೆಯಿಂದ ನನ್ನ ಮಕ್ಕಳನ್ನು ಮೋಸಗೊಳಿಸಿ ಕೊಂದುಬಿಟ್ಟಿರುವನೇ? ಮಹರ್ಷಿಗಳಾದ ವ್ಯಾಸರ ಆಶ್ವಾಸನೆಯೂ ವಿಪರೀತವಾಗಿ ಪರಿಣಮಿಸಿತೇ?" – ಇವೇ ಮುಂತಾಗಿ ಪುತ್ರಪ್ರೇಮದ ಕಾರಣದಿಂದ ಮಹಾಮಾತೆಯಾದ ಕುಂತಿಯು ಯೋಚಿಸತೊಡಗಿದಳು.

ಕುಂತಿಗಾದರೂ ಸೂರ್ಯಸಮಾನರಾದ ತನ್ನ ಮಕ್ಕಳನ್ನು ಕಾಣದ ಆ ದಿನವು ದುರ್ದಿನಪ್ರಾಯವಾಗಿದ್ದಿತು.* ದುರ್ದಿನದ ಅಪರಾಹ್ಣಕಾಲದಲ್ಲಿ ಮೋಡಗಳಿಂದ ಆವೃತನಾದ ಸೂರ್ಯನು ಅಲ್ಪ-ಸ್ವಲ್ಪ ಕಾಣಿಸಿಕೊಂಡು ಪ್ರಪಂಚದ ಜನರ ಮನಸ್ಸಿನಲ್ಲಿ ಆಹ್ಲಾದವನ್ನುಂಟುಮಾಡುವಂತೆ– ಅರ್ಜುನನು ಮೇಘಮಂಡಲಸದೃಶವಾದ ಬ್ರಾಹ್ಮಣಸಮೂಹದಿಂದ ಪರಿವೃತನಾಗಿ ಕುಂತಿಗೆ ಆನಂದವನ್ನುಂಟುಮಾಡುತ್ತಾ ಕುಂಬಾರನ ಮನೆಯನ್ನು ಪ್ರವೇಶಿಸಿದನು.

ಲ೯೦ನೆಯ ಅಧ್ಯಾಯವು ಮುಗಿಯಿತು.

೧೯೧ನೆಯ ಅಧ್ಯಾಯ — ಸ್ವಯಂವರಪರ್ವ (ಮುಂದುವರಿದಿದೆ.)

## ಕುಂತೀ–ಧರ್ಮಾರ್ಜುನರಲ್ಲಿ ಪರಸ್ಪರಸಂಭಾಷಣೆ : ವಿವಾಹವಿಷಯದಲ್ಲಿ ಜಿಜ್ಞಾಸೆ : ಬಲರಾಮ–ಶ್ರೀಕೃಷ್ಣರ ಆಗಮನ

ವೈಶಂಪಾಯನರು ಹೇಳುತ್ತಾರೆ :

**ಗತ್ವಾ ತು ತಾಂ ಭಾರ್ಗವಕರ್ಮಶಾಲಾಂ**
**ಪಾರ್ಥೌ ಪೃಥಾಂ ಪ್ರಾಪ್ಯ ಮಹಾನುಭಾವೌ।**

---

* ದಿನಪೂರ್ತಿಯಾಗಿ ಆಕಾಶದಲ್ಲಿ ಮೋಡವು ಮುಚ್ಚಿಕೊಂಡು ಸೂರ್ಯನು ಕಾಣದಿದ್ದರೆ ಆ ದಿನವನ್ನು ದುರ್ದಿನವೆನ್ನುತ್ತಾರೆ. 'ಮೇಘಚ್ಛನ್ನೇಽಹ್ನಿ ದುರ್ದಿನಮ್' ಸೂರ್ಯಸಮಾನ ವರ್ಚಸ್ವಿಗಳಾದ ಮಕ್ಕಳನ್ನು ಕಾಣದಿದ್ದ ಆ ದಿನವು ಕುಂತಿಗೆ ದುರ್ದಿನವಾಗಿ ಕಂಡಿತು. ಅಂತಹ ದುರ್ದಿನಗಳಲ್ಲಿ ಯಾರೂ ಯಾವುದೊಂದು ಕೆಲಸವನ್ನೂ ಮಾಡಲು ಹೋಗದೇ ಮನೆಗಳಲ್ಲಿಯೇ ಇದ್ದುಬಿಡುತ್ತಾರೆ. ಆಗ ಹಗಲಾಗಿದ್ದರೂ ಪ್ರಪಂಚವೆಲ್ಲವೂ ಮಲಗಿರುವಂತೆಯೇ ಕಾಣುತ್ತದೆ.

ತಾಂ ಯಾಜ್ಞಸೇನೀಂ ಪರಮಪ್ರತೀತೌ
ಭಿಕ್ಷೇತ್ಯಥಾವೇದಯತಾಂ ನರಾಗ್ರ್ಯೌ ॥೧॥

ಜನಮೇಜಯ! ಮಹಾನುಭಾವರಾದ ಭೀಮಾರ್ಜುನರು ದ್ರೌಪದಿಯಿಂದ ಅನುಸೃತರಾಗಿ ತಾವು ತಂಗಿದ್ದ ಕುಂಬಾರನ ಮನೆಯನ್ನು ಪ್ರವೇಶಿಸುತ್ತಿದ್ದಾಗಲೇ 'ಅಮ್ಮಾ!' ಎಂದು ಕುಂತಿಯನ್ನು ಕೂಗಿ – 'ನಾವಿಂದು ತಂದಿರುವ ಭಿಕ್ಷೆ ಇದಮ್ಮಾ!' – ಎಂದು ಹೇಳುತ್ತಾ ಒಳಹೊಕ್ಕರು.

ಮಕ್ಕಳು ಅದುವರೆಗೂ ಬರಲಿಲ್ಲವೆಂಬ ಚಿಂತೆಯು ಕುಂತಿಯ ಮನಸ್ಸಿನಲ್ಲಿದ್ದಿತು. ಭೀಮಾರ್ಜುನರ ಧ್ವನಿಯನ್ನು ಕೇಳುತ್ತಲೇ ಸಂತಸಗೊಂಡ ಕುಂತಿಯು –'ತಂದಿರುವ ಭಿಕ್ಷೆಯನ್ನು ಎಲ್ಲರೂ ಸೇರಿ ಹಂಚಿಕೊಂಡು ತಿನ್ನಿರಿ!' –ಎಂದೆನ್ನುತ್ತಾ ಹೊರಗಣ ಅಂಗಣಕ್ಕೆ ಬಂದು ಭೀಮಾರ್ಜುನರ ಜೊತೆಯಲ್ಲಿದ್ದ ಕೃಷ್ಣೆಯನ್ನು ಕಂಡಳು. ಅವಳನ್ನು ನೋಡಿದನಂತರವೇ ಕುಂತಿಗೆ ಅಂದಿನದು ಹೆಣ್ಣಿನ ಭಿಕ್ಷೆ ಎಂಬುದರ ಅರಿವುಂಟಾಗಿ–'ನಾನು ಎಂತಹ ಅನುಚಿತವಾದ ಮಾತುಗಳನ್ನಾಡಿಬಿಟ್ಟೆನು!'–ಎಂದುಕೊಂಡಳು. ಮಹಾಮಾತೆಯಾದ ಕುಂತೀದೇವಿಯು ಧರ್ಮಭೀರುವಾಗಿದ್ದಳು. ತನ್ನ ಮಾತು ನಿಜವಾಗಬೇಕಾದರೆ ಪಾಂಡವರೈವರೂ ದ್ರೌಪದಿಯನ್ನು ಪರಿಣಯಮಾಡಿಕೊಳ್ಳಲೇಬೇಕು. ಅದು ಧರ್ಮಸಮ್ಮತವಾಗದಿದ್ದರೆ ತಾನು ಹೇಳಿದ ಮಾತು ಅಸತ್ಯವಾಗಿ ಪರಿಣಮಿಸುವುದು. ಅದನ್ನೇ ಕುಂತಿಯು ಬಹುವಾಗಿ ಚಿಂತಿಸತೊಡಗಿದಳು. ಕುಂತೀದೇವಿಯ ಮನಸ್ಸಿನ ಚಿಂತೆಯು ದ್ರೌಪದಿಗೆ ತಿಳಿಯುವ ಕಾರಣವಿರಲಿಲ್ಲ. ಮಹಾಶೂರನಾದ ಪತಿಯನ್ನು ಪಡೆದುದಕ್ಕಾಗಿ ದ್ರೌಪದಿಯು ಪ್ರಸನ್ನಚಿತ್ತಳಾಗಿದ್ದಳು. ಕುಂತಿಯು ದ್ರೌಪದಿಯ ಕೈಹಿಡಿದುಕೊಂಡು ಧರ್ಮಸ್ವರೂಪನಾದ ಧರ್ಮಜನ ಬಳಿಗೆ ಬಂದು ಹೇಳಿದಳು :

ಇಯಂ ತು ಕನ್ಯಾ ದ್ರುಪದಸ್ಯ ರಾಜ್ಞಃ
ತವಾನುಜಾಭ್ಯಾಂ ಮಯಿ ಸಂನಿವಿಷ್ಟಾ।
ಯಥೋಚಿತಂ ಪುತ್ರ ಮಯಾಪಿ ಚೋಕ್ತಂ
ಸಮೇತ್ಯ ಭುಙ್ಕ್ತೇತಿ ನೃಪ ಪ್ರಮಾದಾತ್ ॥೪॥

ಮಯಾ ಕಥಂ ನಾನೃತಮುಕ್ತಮದ್ಯ
ಭವೇತ್ಕುರೂಣಾಮೃಷಭ ಬ್ರವೀಹಿ।
ಪಾಞ್ಚಾಲರಾಜಸ್ಯ ಸುತಾಮಧರ್ಮೋ
ನ ಚೋಪವರ್ತೇತ ನ ವಿಭ್ರಮೇಚ್ಚ ॥೫॥



"ಮಗು! ಇವಳು ದ್ರುಪದರಾಜನ ಮಗಳು. ನಿನ್ನ ತಮ್ಮಂದಿರಾದ ಭೀಮಾರ್ಜುನರು 'ಇದೇ ಇಂದಿನ ಭಿಕ್ಷೆಯಮ್ಮಾ' ಎಂದು ಹೇಳಿ ಇವಳನ್ನು ನನ್ನ ಬಳಿಗೆ ಕರೆತಂದರು. ತಂದಿರುವ ಭಿಕ್ಷೆಯು ಕನ್ಯಾಭಿಕ್ಷೆಯೆಂಬುದು ಮನೆಯ ಒಳಗಿದ್ದ ನನಗೆ ತಿಳಿಯದೇ ಇದ್ದುದರಿಂದ ನಿತ್ಯದ ಭಿಕ್ಷೆಯೆಂದೇ ಭಾವಿಸಿ– 'ಎಲ್ಲರೂ ಸೇರಿ ಹಂಚಿಕೊಂಡು ತಿನ್ನಿರಿ–ಎಂದು' ಪ್ರಮಾದದಿಂದ ಹೇಳಿಬಿಟ್ಟೆನು. ಕುರುಪ್ರವೀರನೇ! ಈ ಸಮಯದಲ್ಲಿ ನಾನು ಹೇಳಿದ ಮಾತು ಸುಳ್ಳಾಗಲೂಕೂಡದು. ನಾನು ಹೇಳಿದಂತೆ ವರ್ತಿಸುವುದರಿಂದ ಪಾಂಚಾಲ ಪುತ್ರಿಗೂ ಅಧರ್ಮವೆಂಬುದು ಸೋಂಕಬಾರದು. ಇವಳು ಧರ್ಮಭ್ರಷ್ಟಳೂ

ಆಗಬಾರದು. ಹೀಗಾಗಲು ಸಾಧ್ಯವೇ? ಎಂಬುದನ್ನು ಪರಿಶೀಲಿಸಬೇಕಾಗಿದೆ."

ಮಹಾಮೇಧಾವಿಯಾದ, ನೃಪಶ್ರೇಷ್ಠನಾದ ಯುಧಿಷ್ಠಿರನು ತಾಯಿಯ ಮಾತುಗಳನ್ನು ಕೇಳಿ ಕ್ಷಣಕಾಲ ಯೋಚಿಸಿ, ಕುಂತಿಯನ್ನು ಸಂತೈಸಿ, ಅರ್ಜುನನಿಗೆ ಹೇಳಿದನು :

**ತ್ವಯಾ ಜಿತಾ ಫಾಲ್ಗುನ ಯಾಜ್ಞಸೇನೀ**
**ತ್ವಯೈವ ಶೋಭಿಷ್ಯತಿ ರಾಜಪುತ್ರೀ ।**
**ಪ್ರಜ್ವಾಲ್ಯತಾಮಗ್ನಿರಮಿತ್ರಸಾಹ**
**ಗೃಹಾಣ ಪಾಣಿಂ ವಿಧಿವತ್ತ್ವಮಸ್ಯಾಃ ॥೭॥**

"ಫಾಲ್ಗುಣ! ನೀನು ವೀರ್ಯಶುಲ್ಕವನ್ನಿತ್ತು ಯಾಜ್ಞಸೇನಿಯನ್ನು ಪಡೆದಿರುವೆಯಾದ ಕಾರಣ ನೀನೇ ಇವಳನ್ನು ವಿವಾಹವಾಗುವುದು ಸೂಕ್ತವಾಗಿದೆ. ನಿನ್ನನ್ನು ಸೇರುವುದರಿಂದಲೇ ಇವಳು ವಿಶೇಷವಾಗಿ ಶೋಭಿಸುವಳು. ಆದುದರಿಂದ ಶಾಸ್ತ್ರೋಕ್ತವಾದ ರೀತಿಯಲ್ಲಿ ವಿವಾಹಾಗ್ನಿಯನ್ನು ಪ್ರತಿಷ್ಠಾಪಿಸಿ ಇವಳನ್ನು ಮದುವೆಯಾಗು, ಅರ್ಜುನ!"

ಅರ್ಜುನನಿಂದ ಒಡನೆಯೇ ಉತ್ತರ ಬಂದಿತು :

**ಮಾ ಮಾಂ ನರೇನ್ದ್ರ ತ್ವಮಧರ್ಮಭಾಜಂ**
**ಕೃಥಾ ನ ಧರ್ಮೋಽಯಮಶಿಷ್ಟದೃಷ್ಟಃ ।**
**ಭವಾನ್ನಿವೇಶ್ಯ ಪ್ರಥಮಂ ತತೋಽಯಂ**
**ಭೀಮೋ ಮಹಾಬಾಹುರಚಿನ್ತ್ಯಕರ್ಮಾ ॥೮॥**
**ಅಹಂ ತತೋ ನಕುಲೋಽನನ್ತರಂ ಮೇ**
**ಪಶ್ಚಾದಯಂ ಸಹದೇವಸ್ತರಸ್ವೀ ।**
**ವೃಕೋದರೋಽಹಂ ಚ ಯಮೌ ಚ ರಾಜ-**
**ನ್ನಿಯಂ ಚ ಕನ್ಯಾ ಭವತೋ ನಿಯೋಜ್ಯಾಃ ॥೯॥**

"ಅಣ್ಣ! ನನ್ನನ್ನು ಅಧರ್ಮಕಾರ್ಯದಲ್ಲಿ ಪ್ರವರ್ತಿಸಲು ಪ್ರಚೋದನೆಯನ್ನು ಮಾಡಬೇಡ. ನಿನ್ನ ನಿರ್ದೇಶನವು ಧರ್ಮಸಮ್ಮತವೂ, ಶಿಷ್ಟ

ಸಮ್ಮತವೂ ಆಗಿರುವುದಿಲ್ಲ. ತಾಯಿಯ ಮಾತಿನಂತೆ ನೀನು ಮೊದಲು ಇವಳನ್ನು ಮದುವೆಯಾಗಬೇಕು. ಅನಂತರದಲ್ಲಿ ಭೀಮನು, ಅವನಾದ ಮೇಲೆ ನಾನು, ನಾನಾದ ಮೇಲೆ ನಕುಲ-ಸಹದೇವರು ಯಥಾಕ್ರಮವಾಗಿ ದ್ರೌಪದಿಯನ್ನು ಮದುವೆಯಾಗುವುದು ಸೂಕ್ತವೆನಿಸುತ್ತದೆ.

ನಾವು ನಾಲ್ವರೂ ಮತ್ತು ಈ ಕನ್ಯೆಯೂ ನಿನ್ನ ಆಜ್ಞಾನುವರ್ತಿಗಳಾಗಿರುವೆವು. ಇವೆಲ್ಲವನ್ನೂ ಸಂಪೂರ್ಣವಾಗಿ ಪರ್ಯಾಲೋಚಿಸಿ ಯಾವುದು ಯುಕ್ತವೋ, ಯಾವ ಕಾರ್ಯವು ಧರ್ಮಸಮ್ಮತವೆನಿಸುವುದೋ, ಯಾವುದು ನಮಗೆ ಶ್ರೇಯಸ್ಸನ್ನುಂಟುಮಾಡುವುದೋ ಮತ್ತು ಪಾಂಚಾಲರಾಜನಿಗೂ ಹಿತವೆನಿಸುವುದೋ–ಅಂತಹ ಕಾರ್ಯವನ್ನು ನಮಗೆ ನಿಯೋಜಿಸು. ನಾವು ಸರ್ವದಾ ನಿನ್ನ ಆಜ್ಞೆಯನ್ನು ಶಿರಸಾವಹಿಸಿ ನಡೆಸಲು ಸಿದ್ಧರಾಗಿರುವೆವು."

ಭಕ್ತಿಭಾವ ಮತ್ತು ಸ್ನೇಹಭಾವಗಳಿಂದ ಕೂಡಿದ ಅರ್ಜುನನ ಮಾತುಗಳನ್ನು ಕೇಳಿ ಪಾಂಡವರ ಕಣ್ಣುಗಳು ದ್ರೌಪದಿಯೆಡೆಗೆ ಚಲಿಸಿದುವು. ಸ್ತ್ರೀಸಹಜವಾದ ಲಜ್ಜೆಯಿಂದ ಕುಳಿತಿದ್ದ ದ್ರೌಪದಿಯು ಪಾಂಡವರ ಮಾತುಗಳನ್ನು ಕೇಳಿ ಕುತೂಹಲಾವಿಷ್ಟಳಾಗಿ ಯುಧಿಷ್ಠಿರಾದಿಗಳನ್ನು ಓರೆಗಣ್ಣಿನಿಂದ ನೋಡಿದಳು. ಪಾಂಡವರೈವರ ದೃಷ್ಟಿಗಳೂ ದ್ರೌಪದಿಯ ಕಟಾಕ್ಷವೀಕ್ಷಣೆಯೊಡನೆ ಕ್ಷಣಕಾಲ ಸೇರಿಕೊಂಡುವು. ಆ ನಿಮಿಷದಲ್ಲಿ ಅವರ ಮನಸ್ಸಿನಲ್ಲುಂಟಾದ ಪ್ರೇಮಭಾವದ ಉದ್ರೇಕವನ್ನು ವರ್ಣಿಸಲು ಸಾಧ್ಯವೇ ಇಲ್ಲ. ದ್ರೌಪದಿಯು ಐವರ ಮೇಲೆಯೂ ಒಂದೊಂದು ಬಾರಿ ಕಾಮಬಾಣದಂತಿದ್ದ ಕಟಾಕ್ಷವೀಕ್ಷಣೆಯನ್ನು ಬೀರಿ, ಅವರೈವರ ಸೌಂದರ್ಯದ ಸೊಬಗನ್ನೂ ಮನಸ್ಸಿನಲ್ಲಿಯೇ ಅನುಭವಿಸುತ್ತಾ ಕುಳಿತಳು. ಕ್ಷಣಿಕವಾದ, ಆದರೂ ಮಹತ್ತ್ವಪೂರ್ಣವಾದ ಪರಸ್ಪರದೃಕ್ಪಥಗಳ ಸಮಾಗಮವು ತಪ್ಪಿದೊಡನೆಯೇ ಪಾಂಡವರು ತಮ್ಮ-ತಮ್ಮಲ್ಲಿಯೇ ಒಬ್ಬರನ್ನೊಬ್ಬರು ವೀಕ್ಷಿಸಿ, ಎಲ್ಲರ ಮನೋಭಾವಗಳನ್ನೂ ಎಲ್ಲರೂ ಅರಿತವರಾಗಿ, ದ್ರೌಪದಿಯನ್ನೇ ಚಿಂತಿಸುತ್ತಾ ಕುಳಿತರು. ದ್ರೌಪದಿಯ ಕಟಾಕ್ಷವೀಕ್ಷಣೆಯೆಂಬ ಮನ್ಮಥಬಾಣಗಳ ಆಘಾತವು ಪಾಂಡವರ ಶರೀರವನ್ನು ಕ್ಷತಮಾಡದೆಯೇ ಹೃದಯದೊಳಗೆ ಪ್ರವೇಶಿಸಿ ಅಲ್ಲಿದ್ದ ಶುಭ್ರವಾಗಿದ್ದ ಸತ್ತ್ವಗುಣವನ್ನು ಕೆಂಪಾಗಿ ಮಾಡಿಬಿಟ್ಟಿತು.

ನಿಜ! ಪಾಂಚಾಲಿಯ ರೂಪವೂ ಹಾಗೆಯೇ ಇದ್ದಿತು. ಪಾಂಚಾಲಿಯ ಕಮನೀಯವಾದ ರೂಪ ಮತ್ತು ಸೌಂದರ್ಯಗಳು ಬ್ರಹ್ಮನು ತನ್ನ ಕೈಗಳಿಂದಲೇ ರಚಿಸಿದಂತಿತ್ತು. ಪಾಂಡವರು ಮಾತ್ರವಲ್ಲ ; ಸಕಲಪ್ರಾಣಿಗಳೂ ದ್ರೌಪದಿಯ ಸೌಂದರ್ಯವನ್ನು ನೋಡಿ ಮುಗ್ಧವಾಗುತ್ತಿದ್ದುವು.

ಯುಧಿಷ್ಠಿರನು ತನ್ನ ಅನುಜರ ಮಾನಸಿಕಪರಿಸ್ಥಿತಿಯನ್ನು ತಿಳಿದನು. ಕೃಷ್ಣದ್ವೈಪಾಯನರು ಹೇಳಿದ್ದ ಮಾತುಗಳೂ ಸ್ಮರಣೆಗೆ ಬಂದುವು. ಆ ಸನ್ನಿವೇಶದಲ್ಲಿ ದ್ರೌಪದಿಯು ತಮ್ಮ ಐವರಲ್ಲಿ ಒಬ್ಬನನ್ನು ವರಿಸಿದರೆ ಪರಸ್ಪರ ಕಲಹಕ್ಕೆ ಕಾರಣವಾಗುವುದೆಂಬ ಭಯವೂ ಉಂಟಾಯಿತು. ಒಡನೆಯೇ ಅನುಜರೊಡನೆ ಹೇಳಿದನು :

**ಸರ್ವೇಷಾಂ ದ್ರೌಪದೀ ಭಾರ್ಯಾ ಭವಿಷ್ಯತಿ ಹಿ ನಃ ಶುಭಾ ॥೬॥**

"ಶುಭಾಂಗಿಯಾದ ಈ ದ್ರೌಪದಿಯು ನಮ್ಮೈವರ ಪತ್ನಿಯೂ ಆಗುವಳು."

ಅಣ್ಣನು ಹೇಳಿದ ಮಾತನ್ನು ಕೇಳಿ ಮಹಾಪರಾಕ್ರಮಿಗಳಾದ ಪಾಂಡುವಿನ ಇತರ ನಾಲ್ವರು ಮಕ್ಕಳೂ ಯುಧಿಷ್ಠಿರನು ಹೇಳಿದ ಮಾತಿನ ಅರ್ಥವನ್ನು ಮನಸ್ಸಿನಲ್ಲಿಯೇ ಸ್ಮರಿಸುತ್ತಾ ಏನೊಂದನ್ನೂ ಮಾತನಾಡದೇ ಕುಳಿತಿದ್ದರು.

ಇತ್ತಲಾಗಿ ಶ್ರೀಕೃಷ್ಣನು ಬಲರಾಮನಿಂದೊಡಗೂಡಿ ಕುರುಪ್ರವೀರರಾದ ಪಾಂಡವರನ್ನು ಕಂಡುಹಿಡಿಯಬೇಕೆಂಬ ಆಶಯದಿಂದ ಪುರುಷಪ್ರವೀರರಾದ ಪಾಂಡವರು ತಂಗಿದ್ದ ಕುಂಬಾರನ ಮನೆಗೆ ಆಗಮಿಸಿದನು. ಮನೆಯನ್ನು ಪ್ರವೇಶಿಸುತ್ತಲೇ ಬಲರಾಮಸಹಿತನಾದ ಶ್ರೀಕೃಷ್ಣನು ದಪ್ಪವಾಗಿಯೂ, ದೀರ್ಘವಾಗಿಯೂ ಇದ್ದ ತೋಳುಗಳಿಂದ ಕೂಡಿರುವ ಅಜಾತಶತ್ರುವು ಅಲ್ಲಿ ಕುಳಿತಿರುವುದನ್ನೂ, ಅವನ ಸುತ್ತಲೂ ಯಜ್ಞೇಶ್ವರನಿಗೆ ಸದೃಶವಾದ ತೇಜಸ್ಸಿನಿಂದ ಬೆಳಗುತ್ತಿದ್ದ ಅವನ ನಾಲ್ವರು ತಮ್ಮಂದಿರು ಕುಳಿತಿರುವುದನ್ನೂ ನೋಡಿದನು. ಶ್ರೀಕೃಷ್ಣನ ಆನಂದಕ್ಕೆ ಪಾರವೇ ಇಲ್ಲವಾಯಿತು. ಒಡನೆಯೇ ವಾಸುದೇವನು ಕುಂತೀಪುತ್ರನ ಸಮೀಪಕ್ಕೆ ಹೋಗಿ, ಧರ್ಮಾತ್ಮರಲ್ಲಿ ಶ್ರೇಷ್ಠನಾದ ಯುಧಿಷ್ಠಿರನನ್ನು ಕುರಿತು **'ಕೃಷ್ಣೋಽಹಂ-**

ನಾನು ಕೃಷ್ಣನು' ಎಂದು ಹೇಳುತ್ತಾ ಅಜಮೀಢವಂಶೀಯನಾದ ಯುಧಿಷ್ಠಿರರಾಜನ ಎರಡು ಕಾಲುಗಳನ್ನೂ ಮುಟ್ಟಿ ನಮಸ್ಕರಿಸಿದನು.

ಕೃಷ್ಣನನ್ನನುಸರಿಸಿ ಬಲರಾಮನೂ ಯುಧಿಷ್ಠಿರನಿಗೆ ಅಭಿವಾದನ ಮಾಡಿದನು. ಪಾಂಡವರೆಲ್ಲರೂ ಬಲರಾಮ-ಶ್ರೀಕೃಷ್ಣರನ್ನು ನೋಡಿ ಅತ್ಯಂತ ಪ್ರಸನ್ನರಾದರು.

ರಾಮ-ಕೃಷ್ಣರು ಸೋದರತ್ತೆಯಾದ ಕುಂತಿಯ ಕಾಲುಗಳನ್ನು ಮುಟ್ಟಿ ನಮಿಸಿದರು. ಪರಸ್ಪರಸಮಾಗಮದಿಂದ ಸಕಲರೂ ಸಂತೋಷಭರಿತರಾದರು.



ಯುಧಿಷ್ಠಿರನು ಶ್ರೀಕೃಷ್ಣನ ಯೋಗ-ಕ್ಷೇಮಗಳನ್ನು ವಿಚಾರಿಸಿದನಂತರ ವಿಸ್ಮಿತಮುಖಭಾವದಿಂದ ಶ್ರೀಕೃಷ್ಣನನ್ನು ಕೇಳಿದನು : "ವಾಸುದೇವ! ಬ್ರಾಹ್ಮಣವೇಷದಲ್ಲಿರುವ ನಮ್ಮನ್ನು ಕಂಡುಹಿಡಿಯಲು ನಿನಗೆ ಹೇಗೆ ಸಾಧ್ಯವಾಯಿತು?"

ಶ್ರೀಕೃಷ್ಣನು ಮಂದಹಾಸದಿಂದ ಉತ್ತರಿಸಿದನು :

"ಯುಧಿಷ್ಠಿರ! ಬೆಂಕಿಗೆ ಬೂದಿಮುಚ್ಚಿದ್ದರೂ ಸಹಜವಾದ ದಾಹ

ಶಕ್ತಿಯಿಂದ ಬೆಂಕಿಯ ಅರಿವಾಗುವುದಲ್ಲವೇ? ಸ್ವಯಂವರಮಂಟಪದಲ್ಲಿ ತೋರಿದ ಪರಾಕ್ರಮವನ್ನು ಪಾಂಡುಸುತರಲ್ಲದೇ ಮತ್ತಾರು ತಾನೇ ತೋರಿಸ ಬಲ್ಲರು? ಅದೃಷ್ಟವಿಶೇಷದಿಂದ ನೀವೆಲ್ಲರೂ ಜತುಗೃಹದಿಂದ ಪಾರಾದಿರಿ. ಅದೃಷ್ಟದ ಕಾರಣದಿಂದಲೇ ದುರ್ಯೋಧನನು ತನ್ನ ಅಮಾತ್ಯರೊಡನೆ ಮಾಡಿದ ಕುತಂತ್ರಗಳೆಲ್ಲವೂ ನಿಷ್ಫಲವಾದುವು. ನನ್ನ ಅಂತಃಕರಣದಲ್ಲಿರುವ ಎಲ್ಲ ಶುಭಾಶಂಸನೆಗಳೂ ನಿಮಗೆ ಲಭಿಸಲಿ. ಪ್ರಜ್ವಲಿಸುವ ಅಗ್ನಿಯಂತೆ ನೀವು ಅಭಿವೃದ್ಧಿಹೊಂದಿರಿ. ನಾವಿನ್ನು ನಮ್ಮ ಬಿಡಾರಕ್ಕೆ ಹೋಗಿಬರುವೆವು. ನೀವಾರೆಂಬುದು ಈಗಲೇ ಇತರ ರಾಜಕುಮಾರರಿಗೆ ತಿಳಿಯಬಾರದು."

ಅಪಾರಮಹಿಮನಾದ, ನಾಶವಿಲ್ಲದಂತಹ ಕಾಂತಿಯುಳ್ಳ ಶ್ರೀಕೃಷ್ಣನು ಹೀಗೆ ಹೇಳಿ ಯುಧಿಷ್ಠಿರನ ಅನುಜ್ಞೆಯನ್ನು ಪಡೆದು ಅಣ್ಣನಾದ ಬಲರಾಮನೊಡನೆ ತನ್ನ ಬಿಡಾರಕ್ಕೆ ಹೊರಟುಹೋದನು.

೧೯೧ನೆಯ ಅಧ್ಯಾಯವು ಮುಗಿಯಿತು.

೧೯೨ನೆಯ ಅಧ್ಯಾಯ ಸ್ವಯಂವರಪರ್ವ (ಮುಂದುವರೆದಿದೆ.)

## ಗುಪ್ತರೂಪದಿಂದ ತಾನು ತಿಳಿದ ಪಾಂಡವರ ಸಮಾಚಾರವನ್ನು ಧೃಷ್ಟದ್ಯುಮ್ನನು ತಂದೆಗೆ ತಿಳಿಸಿದುದು : ದ್ರುಪದನ ಕಾತರತೆ

ಜನಮೇಜಯ! ಭೀಮಾರ್ಜುನರನ್ನು ಅನುಸರಿಸಿ ಕೃಷ್ಣೆಯು ಸಮಾಜವಾಟದಿಂದ ಹೊರಟುಬಿಟ್ಟಳಲ್ಲವೇ? ಧೃಷ್ಟದ್ಯುಮ್ನನಿಗೆ ತನ್ನ ತಂಗಿಯ ಕೈಹಿಡಿದವರಾರೆಂಬ ವಿಷಯವನ್ನು ತಿಳಿಯಬೇಕೆಂಬ ಕುತೂಹಲ ವುಂಟಾಯಿತು. ಬ್ರಾಹ್ಮಣನೊಬ್ಬನು ಕ್ಷತ್ರಿಯರಿಂದಲೂ ಅಸಾಧ್ಯವೆನಿಸಿದ್ದ ಸ್ಪರ್ಧೆಯಲ್ಲಿ ಗೆದ್ದು ಕೃಷ್ಣೆಯನ್ನು ಪಡೆದನೆಂಬುದು ಸರ್ವವಿದಿತವಾಗಿದ್ದರೂ ಅನೇಕರ ಮನಸ್ಸಿನಲ್ಲಿ – 'ಪಣವನ್ನು ಗೆದ್ದವನು ನಿಶ್ಚಯವಾಗಿಯೂ ಬ್ರಾಹ್ಮಣನೇ?' – ಎಂಬ ಸಂಶಯವು ಇದ್ದೇ ಇದ್ದಿತು. ಧೃಷ್ಟದ್ಯುಮ್ನನು ತನ್ನ ಹಿಂದೆಯೇ ಬರುತ್ತಿದ್ದ ರಾಜಭಟರಿಗೆ ಸುತ್ತಲೂ ಗಮನಿಸುತ್ತಿರುವಂತೆ ಆಜ್ಞಾಪಿಸಿ, ತಾನೂ ಪಾಂಡವರಿಗೆ ಕಾಣದಂತೆ ಕುಂಬಾರನ ಮನೆಯಲ್ಲಿ ಮರೆಯಲ್ಲಿ ನಿಂತು ಒಳಗೆ ನಡೆಯುವ ವಿದ್ಯಮಾನಗಳೆಲ್ಲವನ್ನೂ ಪರಿಶೀಲಿಸುತ್ತಿದ್ದನು.

ಸಾಯಂಕಾಲವಾಗುತ್ತಲೇ ಮಹಾನುಭಾವರಾದ, ಪರಾಕ್ರಮಿಗಳಾದ, ಶತ್ರುಮರ್ದನರಾದ ಭೀಮಸೇನಾರ್ಜುನ-ನಕುಲ-ಸಹದೇವರು ಭಿಕ್ಷಾಟನೆಯನ್ನು ಮಾಡಿಕೊಂಡು ಬಂದು, ತಂದಿದ್ದ ಭಿಕ್ಷೆಯನ್ನು ಅಗ್ರಜನಾದ ಯುಧಿಷ್ಠಿರನಿಗೆ ಒಪ್ಪಿಸಿದರು. ಅನಂತರದಲ್ಲಿ ಉದಾರಹೃದಯಳಾದ ಕುಂತಿಯು ದ್ರೌಪದಿಯನ್ನು ಕುರಿತು ಸಮಯೋಚಿತವಾದ ಈ ಮಾತುಗಳನ್ನು ಹೇಳಿದಳು :

ಯೇ ಚಾನ್ನಮಿಚ್ಛನ್ತಿ ದದಸ್ವ ತೇಭ್ಯಃ
ಪರಿಶ್ರಿತಾ ಯೇ ಪರಿತೋ ಮನುಷ್ಯಾಃ।
ತತಶ್ಚ ಶೇಷಂ ಪ್ರವಿಭಜ್ಯ ಶೀಘ್ರ-
ಮರ್ಧಂ ಚತುರ್ಧಾ ಮಮ ಚಾತ್ಮನಶ್ಚ ॥೫॥
ಅರ್ಧಂ ತು ಭೀಮಾಯ ಚ ದೇಹಿ ಭದ್ರೇ
ಯ ಏಷ ನಾಗರ್ಷಭತುಲ್ಯರೂಪಃ।
ಗೌರೋ ಯುವಾ ಸಂಹನನೋಪಪನ್ನ
ಏಷೋ ಹಿ ವೀರೋ ಬಹುಭುಕ್ಸದೈವ ॥೬॥

"ಶುಭಾಂಗಿಯೇ! ಇವರು ತಂದಿಟ್ಟಿರುವ ಭಿಕ್ಷಾನ್ನವನ್ನೆಲ್ಲ ಒಟ್ಟಾಗಿ ಸೇರಿಸು. ಅನಂತರದಲ್ಲಿ ದೇವತೆಗಳಿಗೆ ಬಲಿಯಿಡು. ಬ್ರಾಹ್ಮಣರಿಗೆ ಭಿಕ್ಷೆಯನ್ನು ನೀಡು. ಮತ್ತಾರಾದರೂ ಅತಿಥಿಗಳು ಬಂದು ಊಟಮಾಡಲು ಇಚ್ಛಿಸಿದರೆ ಅವರಿಗೆ ಭೋಜನಮಾಡಿಸು. ಇವೆಲ್ಲವೂ ಆದನಂತರ ಉಳಿದ ಭಿಕ್ಷೆಯನ್ನು ಎರಡು ಭಾಗಗಳನ್ನಾಗಿ ಮಾಡಿ, ಅದರಲ್ಲಿ ಒಂದು ಭಾಗವನ್ನು ಮದಗಜದಂತೆ ಪುಷ್ಟನಾಗಿಯೂ, ಸುಂದರಕಾಯನಾಗಿಯೂ, ಗೌರಾಂಗನಾಗಿಯೂ ಇರುವ ನನ್ನ ಎರಡನೆಯ ಮಗನಿಗೆ ಕೊಡು. ಇವನು ಯಾವಾಗಲೂ ಚೆನ್ನಾಗಿ (ಹೆಚ್ಚಾಗಿ) ಊಟಮಾಡುವವನು. ಉಳಿದ ಭಾಗವನ್ನು ಆರು ಭಾಗಗಳನ್ನಾಗಿ ಮಾಡು. ಅದನ್ನು ನಾವು ಆರು ಮಂದಿಯೂ ತೆಗೆದುಕೊಳ್ಳೋಣ."

ಅತ್ತೆಯಾದ ಕುಂತಿಯ ಮಾತಿನಂತೆ ಪ್ರಹೃಷ್ಟಳಾದ ದ್ರೌಪದಿಯು ಭಿಕ್ಷೆಯನ್ನು ವಿಭಾಗಿಸಿ ಎಲ್ಲರಿಗೂ ಹಂಚಿದಳು. 'ರಾಜಕುಮಾರಿಯಾದ

ತಾನು ಭಿಕ್ಷಾನ್ನವನ್ನು ಊಟಮಾಡಬೇಕಾಯಿತಲ್ಲಾ!' – ಎಂಬ ವ್ಯಾಕುಲಲೇಶವಾದರೂ ಅವಳಿಗೆ ಉಂಟಾಗಲಿಲ್ಲ. ಅತ್ತೆಯು ಹೇಳಿದ ಕಾರ್ಯವನ್ನು ನಗು-ನಗುತ್ತಲೇ ಮಾಡಿದಳು. ಕೃಷ್ಣೆಯಿತ್ತ ಅನ್ನವನ್ನು ಯುಧಿಷ್ಠಿರಾದಿಗಳೆಲ್ಲರೂ ಭೋಜನಮಾಡಿದರು.

ಭೋಜನಾನಂತರ ಸಹದೇವನು ಎಲ್ಲರಿಗೂ ದರ್ಭೆಯ ಹಾಸಿಗೆಯನ್ನು ಹಾಸಿದನು. ದರ್ಭೆಯ ಹಾಸಿಗೆಯ ಮೇಲೆ ತಮ್ಮ-ತಮ್ಮ ಕೃಷ್ಣಾಜಿನಗಳನ್ನು ಹಾಸಿ ಯುಧಿಷ್ಠಿರ-ಭೀಮಾರ್ಜುನ-ನಕುಲ-ಸಹದೇವರು ಮಲಗಿ ನಿದ್ರಿಸಿದರು. ಅವರೆಲ್ಲರೂ ದಕ್ಷಿಣದಿಕ್ಕಿಗೆ ತಲೆಮಾಡಿ ಮಲಗಿದ್ದರು. ಕುಂತಿಯು ಅವರ ತಲೆಯ ಮೇಲ್ಭಾಗದಲ್ಲಿಯೂ, ಕೃಷ್ಣೆಯು ಅವರ ಪಾದಗಳ ಕಡೆಯೂ ಮಲಗಿದರು. ಯುಧಿಷ್ಠಿರಾದಿಗಳ ಕಾಲಿಗೆ ದಿಂಬಿನ ರೀತಿಯಲ್ಲಿ ದರ್ಭೆಯ ಹಾಸಿಗೆಯ ಮೇಲೆ ಮಲಗಿದ್ದಕ್ಕಾಗಿ ದ್ರೌಪದಿಯು ಮನಸ್ಸಿನಲ್ಲೂ ದುಃಖಿಸಲಿಲ್ಲ ಮತ್ತು ಕುರುಪುಂಗವರ ವಿಷಯದಲ್ಲಿ ತಾತ್ಸಾರಭಾವವನ್ನೂ ಹೊಂದಲಿಲ್ಲ.

ಯುಧಿಷ್ಠಿರಾದಿಗಳು ಆಗ ಸೈನ್ಯವನ್ನು ಕಟ್ಟುವ ರೀತಿ, ದಿವ್ಯಾಸ್ತ್ರಗಳ ಆರೋಪ-ಉಪಸಂಹಾರಗಳು, ರಥ-ತುರಗ-ಗಜ-ಪದಾತಿಗಳು, ಕತ್ತಿ-ಗದೆ-ಗಂಡುಗೊಡಲಿಗಳು–ಇವುಗಳ ವಿಷಯವಾಗಿಯೇ ನಿದ್ದೆಯು ಬರುವವರೆಗೂ ಮಾತನಾಡಿಕೊಳ್ಳುತ್ತಿದ್ದರು.

ಆ ವಿಷಯಗಳೆಲ್ಲವನ್ನೂ ಮರೆಯಲ್ಲಿ ನಿಂತಿದ್ದ ಧೃಷ್ಟದ್ಯುಮ್ನನು ಆಲಿಸಿ ಕೇಳಿದನು. ಇತರ ಬ್ರಾಹ್ಮಣಕುಮಾರರೊಡನೆ ರಾಜಕುಮಾರಿಯಾದ ದ್ರೌಪದಿಯೂ ದರ್ಭೆಯ ಹಾಸಿಗೆಯ ಮೇಲೆ ಮಲಗಿರುವುದನ್ನೂ ನೋಡಿದನು. ಬೆಳಗಾಗುತ್ತಲೇ ಧೃಷ್ಟದ್ಯುಮ್ನನು ಬಚ್ಚಿಟ್ಟುಕೊಂಡಿದ್ದ ಸ್ಥಳದಿಂದ ಹೊರಕ್ಕೆ ಬಂದು, ಅರಮನೆಗೆ ಹೋಗಿ ತಾನು ಹಿಂದಿನ ರಾತ್ರಿ ಕುಂಬಾರನ ಮನೆಯಲ್ಲಿ ಕಂಡು-ಕೇಳಿದ ಸಮಾಚಾರಗಳನ್ನು ವಿಶದವಾಗಿ ತಿಳಿಸಲು ತಂದೆಯ ಬಳಿಗೆ ಹೋದನು.

ದ್ರುಪದನು ಬ್ರಾಹ್ಮಣವೇಷದಲ್ಲಿದ್ದವನು ಯಾರೆಂಬುದನ್ನು ತಿಳಿಯಲು ಸಾಧ್ಯವಾಗದೇ ಬಹಳ ಖಿನ್ನನಾಗಿದ್ದನು. ಮಗನನ್ನು ಕಂಡೊಡನೆಯೇ

ದ್ರುಪದನು ಕಾತರನಾಗಿ ಕೇಳಿದನು : "ಧೃಷ್ಟದ್ಯುಮ್ನ! ಕೃಷ್ಣೆಯು ಎಲ್ಲಿ ಹೋದಳು? ಅವಳನ್ನು ಕರೆದೊಯ್ದವರಾರು? ನೀಚವರ್ಣದವರಾಗಲೀ, ಹೀನಕುಲದವರಾಗಲೀ ನನ್ನ ಮಗಳ ಕೈಹಿಡಿದು ಅವರ ಪಂಕಭೂಯಿಷ್ಠವಾದ ಪಾದವನ್ನು ನನ್ನ ತಲೆಯ ಮೇಲಿಟ್ಟಿಲ್ಲ ತಾನೇ! ಪವಿತ್ರವಾದ ಸ್ವಯಂವರಮಾಲೆಯು ಸ್ಮಶಾನದಲ್ಲಿ ಬೀಳಲಿಲ್ಲವೆಂದು ಭಾವಿಸಲೇ? ಮಗು! ಸತ್ಕುಲಪ್ರಸೂತನಾದ ಕ್ಷತ್ರಿಯನಾಗಲೀ, ನಮಗಿಂತಲೂ ಉತ್ತಮ ವರ್ಣದವನಾದ ಬ್ರಾಹ್ಮಣನಾಗಲೀ ನನ್ನ ಮಗಳ ಕೈಹಿಡಿದಿರುವನೇ? ನಿಮ್ನವರ್ಣದವನೊಬ್ಬನು ರಾಜಪುತ್ರಿಯಾದ ಕೃಷ್ಣೆಯನ್ನು ಸ್ಪರ್ಶಮಾಡಿ ತನ್ಮೂಲಕವಾಗಿ ತನ್ನ ಎಡಗಾಲನ್ನು ನನ್ನ ತಲೆಯ ಮೇಲಿಟ್ಟಿಲ್ಲ ತಾನೇ? ನನ್ನ ಮಗಳು ಪಾರ್ಥನನ್ನೇ ವರಿಸಿದಳೆಂದು ತಿಳಿದರೆ ನನಗೆ ನಿಶ್ಚಯವಾಗಿಯೂ ಅಮಿತಾನಂದವಾಗುವುದು. ಮಗು! ಆದುದರಿಂದ ನನ್ನ ಮಗಳು ಯಾರನ್ನು ವರಿಸಿರುವಳೆಂಬುದನ್ನು ಸ್ಪಷ್ಟವಾಗಿ ಹೇಳು. ಕುರುಪ್ರವೀರರಾದ ವಿಚಿತ್ರವೀರ್ಯನ ಮೊಮ್ಮಕ್ಕಳಿನ್ನೂ ಬದುಕಿರುವರೇ? ಕುಂತಿಯ ಮಕ್ಕಳಲ್ಲಿ ಕನಿಷ್ಠನಾದ ಅರ್ಜುನನೇ ನಾನಿಟ್ಟಿದ್ದ ಮಹಾಧನುಸ್ಸನ್ನು ಮೇಲೆತ್ತಿ ಇತರರಿಂದ ಅಭೇದ್ಯವಾದ ಲಕ್ಷ್ಯವನ್ನು ಭೇದಿಸಿದನೇ?"

೧೯೨ನೆಯ ಅಧ್ಯಾಯವು ಮುಗಿಯಿತು.

೧೯೩ನೆಯ ಅಧ್ಯಾಯ ವೈವಾಹಿಕಪರ್ವ

## ಧೃಷ್ಟದ್ಯುಮ್ನನಿಂದ ಸಮಸ್ತವಿಚಾರಗಳನ್ನೂ ತಿಳಿದು ದ್ರುಪದನು ಪಾಂಡವರ ಬಳಿಗೆ ಪುರೋಹಿತರನ್ನು ಕಳುಹಿಸಿದುದು : ಪುರೋಹಿತ–ಯುಧಿಷ್ಠಿರರ ಸಂಭಾಷಣೆ

ಜನಮೇಜಯ! ದ್ರುಪದನು ಅತ್ಯಂತಕಾತರದಿಂದ ಧೃಷ್ಟದ್ಯುಮ್ನನನ್ನು ಈ ರೀತಿಯಲ್ಲಿ ಪ್ರಶ್ನಿಸಲಾಗಿ–ಸೋಮಕಶಿರೋಮಣಿಯಾದ, ರಾಜಪುತ್ರನಾದ ಧೃಷ್ಟದ್ಯುಮ್ನನು, ದ್ರೌಪದಿಯು ಯಾರಿಗೆ ಸೇರಿದಳೆಂಬ ವಿಷಯವು ತಿಳಿದಿದ್ದುದರಿಂದ ಬಹಳ ಹರ್ಷಾನ್ವಿತನಾಗಿ ಕುಂಬಾರನ ಮನೆಯಲ್ಲಿ ನಡೆದ ವೃತ್ತಾಂತವನ್ನೂ, ಕೃಷ್ಣೆಯು ಯಾರ ಸಂಗಡ ಹೋದಳೆಂಬುದನ್ನೂ ದ್ರುಪದರಾಜನಿಗೆ ವಿಶದವಾಗಿ ತಿಳಿಸಿದನು.

"ತಂದೆಯೇ! ಯಾವನು ಯುವಕನಾಗಿದ್ದನೋ, ವಿಶಾಲವಾದ ಮತ್ತು ಕೆಂಪಾದ ಕಣ್ಣುಗಳಿಂದ ಕೂಡಿದ್ದನೋ, ಕೃಷ್ಣಾಜಿನವನ್ನು ಧರಿಸಿದ್ದನೋ, ದೇವತೆಗಳಿಗೆ ಸಮಾನವಾದ ರೂಪಿನಿಂದ ಪರಿಶೋಭಿಸುತ್ತಿದ್ದನೋ ಯಾವನು ಮಹಾಧನುಸ್ಸಿಗೆ ಶಿಂಜಿನಿಯನ್ನು ಕಟ್ಟಿ, ಐದು ಬಾಣಗಳನ್ನೂ ನಿಯೋಜಿಸಿ ಹೆದೆಯೇರಿಸಿ ಲಕ್ಷ್ಯವನ್ನು ಭೇದಿಸಿ ಭೂಮಿಯ ಮೇಲೆ ಕೆಡುಹಿದನೋ, ತಾನು ಮಾಡಿದ ಆ ಮಹಾಕಾರ್ಯದಿಂದ ಯಾವನು ಶ್ರೇಷ್ಠಬ್ರಾಹ್ಮಣರಿಂದ ಸಂಪೂಜಿತನಾದನೋ, ಯುದ್ಧಕ್ಕೆ ಸಿದ್ಧನಾಗಿರದಿದ್ದರೂ ತನಗೆದುರಾಗಿ ಬಂದ ರಾಜಕುಮಾರರನ್ನು – ದೇವರ್ಷಿಗಳಿಂದ ಸಂಪೂಜಿತನಾದ ಇಂದ್ರನು ದಿತಿಯ ಮಕ್ಕಳಾದ ದೈತ್ಯರನ್ನು ಎದುರಿಸಿದಂತೆ – ಬಹುರಭಸದಿಂದಲೇ ಎದುರಿಸಿ ನಿಂತನೋ – ಅವನು ಯಾರೆಂಬುದನ್ನು ಹೇಳುವೆನು ; ಕೇಳು. ಲಕ್ಷ್ಯವನ್ನು ಭೇದಿಸಿದೊಡನೆಯೇ ಕೃಷ್ಣೆಯು ಆ ಯುವಕನ ಕೊರಳಿಗೆ ಹಾರ ಹಾಕಿ ಅವನು ಧರಿಸಿದ್ದ ಕೃಷ್ಣಾಜಿನದ ಅಂಚನ್ನು ಹಿಡಿದು – ಹೆಣ್ಣಾನೆಯು ಸಲಗವನ್ನು ಅನುಸರಿಸಿ ಹೋಗುವಂತೆ – ಆ ಯುವಕನ ಹಿಂದೆಯೇ ನಡೆದುಹೋದಳು. ಕೃಷ್ಣಾಜಿನವನ್ನು ಧರಿಸಿರುವವನೊಬ್ಬನ ಹಿಂದೆ ಚೆಲುವೆಯಾದ ಕೃಷ್ಣೆಯು ಹೋಗುತ್ತಿರುವುದನ್ನು ಕಂಡು ಸ್ವಯಂವರಕ್ಕೆ ಆಗಮಿಸಿದ್ದ ರಾಜರೆಲ್ಲರೂ ಬಹಳ ಕುಪಿತರಾದರು. ಅಸಹನೆಯಿಂದ ಕೂಡಿದ್ದ ಬಹುಕ್ರುದ್ಧರಾದ ರಾಜರು ತಮ್ಮ ಮೇಲೆ ಬೀಳುತ್ತಿರಲಾಗಿ, ಮತ್ತೊಬ್ಬ ವೀರನು ವೃಕ್ಷವನ್ನೇ ಕಿತ್ತು ಆಯುಧವನ್ನಾಗಿ ಮಾಡಿಕೊಂಡು – ಕೋಪಗೊಂಡ ಯಮನು ಪ್ರಾಣಿಗಳ ಪ್ರಾಣಗಳನ್ನು ಹೀರಿಬಿಡುವಂತೆ ರಾಜರನ್ನು ಸದೆಬಡಿದನು. ಅವನನ್ನೆದುರಿಸಿ ಬಂದ ಅನೇಕ ಮಹಾವೀರರು ಪರಾಜಿತರಾಗಿಹೋದರು. ಅಸಮರ್ಥರಾದ ಆ ರಾಜಕುಮಾರರು ನೋಡುತ್ತಿದ್ದಂತೆಯೇ ಸೂರ್ಯ-ಚಂದ್ರರಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಆ ಇಬ್ಬರು ಯುವಕರೂ ದ್ರೌಪದಿಯನ್ನು ಕರೆದುಕೊಂಡು ಪಟ್ಟಣದ ಹೊರವಲಯದಲ್ಲಿದ್ದ ಕುಂಬಾರನ ಮನೆಗೆ ತೆರಳಿದರು.

ಆ ಮನೆಯಲ್ಲಿ ಅಗ್ನಿಯ ಜ್ವಾಲೆಗೆ ಸಮಾನವಾದ ಶೋಭೆಯಿಂದ ಕೂಡಿದ ಸ್ತ್ರೀಯೊಬ್ಬಳಿದ್ದಳು. ಅವಳು ಆ ಯುವಕರ ತಾಯಿಯೇ ಆಗಿರಬೇಕೆಂಬುದು ನನ್ನ ಊಹೆಯಾಗಿದೆ. ಅವಳ ಸಮೀಪದಲ್ಲಿ ಆ ಇಬ್ಬರು

ಯುವಕರಂತೆಯೇ ರೂಪವಂತರಾಗಿಯೂ, ಅಗ್ನಿಸದೃಶರಾಗಿಯೂ ಇದ್ದ ಮತ್ತೂ ಮೂವರು ಯುವಕರು ಕುಳಿತಿದ್ದರು. ದ್ರೌಪದಿಯನ್ನು ಕರೆದೊಯ್ದ ಇಬ್ಬರು ಯುವಕರು ಗೃಹವನ್ನು ಪ್ರವೇಶಿಸಿದೊಡನೆಯೇ ಆ ವೃದ್ಧೆಗೆ ಕಾಲುಮುಟ್ಟಿ ನಮಿಸಿದರು. ಜೊತೆಯಲ್ಲಿದ್ದ ದ್ರೌಪದಿಗೂ ನಮಸ್ಕರಿಸುವಂತೆ ಹೇಳಿದರು. ಅನಂತರದಲ್ಲಿ ಆ ಇಬ್ಬರು ಯುವಕರು ದ್ರೌಪದಿಯನ್ನು ಆ ವೃದ್ಧೆಗೊಪ್ಪಿಸಿದರು. ಬಳಿಕ ಐವರೂ ಭಿಕ್ಷಾಟನೆಗೆ ಹೊರಟುಹೋದರು. ಅವರು ತಂದ ಭಿಕ್ಷೆಯನ್ನು ವೃದ್ಧೆಯ ನಿರ್ದೇಶನದಂತೆ ಕೃಷ್ಣೆಯು ತೆಗೆದುಕೊಂಡು ಒಟ್ಟುಗೂಡಿಸಿ, ಮೊದಲು ದೇವತೆಗಳಿಗೆ ಬಲಿಹರಣವಿಟ್ಟು, ಬ್ರಾಹ್ಮಣನೊಬ್ಬನಿಗೆ ಭೋಜನಮಾಡಿಸಿ, ಅನಂತರದಲ್ಲಿ ವೃದ್ಧೆಗೂ ಮತ್ತು ಐವರು ಯುವಕರಿಗೂ ಭೋಜನಮಾಡಿಸಿದನಂತರ ತಾನೂ ಊಟಮಾಡಿದಳು. ಊಟವಾದ ಬಳಿಕ ಎಲ್ಲರೂ ಮಲಗಿದರು. ಕೃಷ್ಣೆಯೂ ಅವರ ಕಾಲುಗಳ ಬಳಿಯಲ್ಲಿ ಮಲಗಿದಳು. ಅವರು ನೆಲದ ಮೇಲೆಯೇ ಮಲಗಿದ್ದರು. ದರ್ಭೆಯ ಆಸ್ತರಣವನ್ನು ಹಾಕಿ ಅದರ ಮೇಲೆ ಕೃಷ್ಣಾಜಿನಗಳನ್ನೇ ಹಾಸಿಕೊಂಡಿದ್ದರು. ಮಲಗಿದನಂತರದಲ್ಲಿ ಅವರು ಒಡನೆಯೇ ನಿದ್ದೆಮಾಡಲಿಲ್ಲ. ಕಾಲಮೇಘಗಳ ಧ್ವನಿಯಂತೆ ಬಹಳ ಗಂಭೀರವಾದ ಧ್ವನಿಯಿಂದಲೇ ಮಾತನಾಡತೊಡಗಿದರು. ಆದುದರಿಂದ ಅವರಾಡಿದ ಮಾತುಗಳು ನನಗೆ ಬಹಳ ಸ್ಪಷ್ಟವಾಗಿ ಕೇಳುತ್ತಿದ್ದುವು. ಅವರಾಡುತ್ತಿದ್ದ ಮಾತುಗಳು ಬ್ರಾಹ್ಮಣರಾಗಲೀ, ವೈಶ್ಯರಾಗಲೀ, ಶೂದ್ರರಾಗಲೀ ಆಡುವ ಮಾತುಗಳಾಗಿರಲಿಲ್ಲ. ಕ್ಷತ್ರಿಯರಿಗೆ ಉಚಿತವಾದ ಮಾತುಗಳನ್ನೇ ಅವರು ಆಡುತ್ತಿದ್ದರು. ಅವರ ಮಾತುಗಳೆಲ್ಲವೂ ಯುದ್ಧಕ್ಕೆ ಶಸ್ತ್ರಾಸ್ತ್ರಗಳಿಗೆ ಸಂಬಂಧಿಸಿದುವುಗಳೇ ಆಗಿದ್ದುವು. ಆದುದರಿಂದ ಅವರು ಕ್ಷತ್ರಿಯಶ್ರೇಷ್ಠರೇ ಆಗಿರಬೇಕು.

ತಂದೆಯೇ! ನಾವು ಈ ಹಿಂದೆಯೇ ಕುಂತಿಯ ಮಕ್ಕಳು ಲಾಕ್ಷಾಗೃಹ ದಿಂದ ಪಾರಾದರೆಂಬ ವಾರ್ತೆಯನ್ನು ಕೇಳಿದ್ದೆವಲ್ಲವೇ? ಅವರಾಡಿದ ಮಾತುಕತೆಗಳನ್ನು ಕೇಳಿದನಂತರ ಪಾಂಡುಪುತ್ರರೊಡನೆ ಸಂಬಂಧವನ್ನು ಬೆಳೆಸಬೇಕೆಂದಿದ್ದ ನಮ್ಮ ಆಶೆಯು ಫಲಿಸಿತೆಂದೇ ಭಾವಿಸಿರುವೆನಪ್ಪ! ಆ ಯುವಕನು ಚಲನಯಂತ್ರದ ಮಧ್ಯದಲ್ಲಿದ್ದ ಲಕ್ಷ್ಯವನ್ನು ಭೇದಿಸಿ ಕೆಳಗುರುಳಿಸಿ

ದುದು ; ಮಹಾಧನುಸ್ಸನ್ನು ಬಗ್ಗಿಸಿ ಶಿಂಜಿನಿಯನ್ನು ಬಿಗಿದುದು ; ರಾತ್ರಿಯಲ್ಲಿ ಆ ಐವರೂ ಪರಸ್ಪರವಾಗಿ ಮಾತನಾಡಿಕೊಂಡುದು – ಇವೆಲ್ಲವನ್ನೂ ನೋಡಿದರೆ ಕುಂತಿಯ ಮಕ್ಕಳಾದ ಪಾಂಡವರೇ ಯಾವುದೋ ಕಾರಣದಿಂದ ಬ್ರಾಹ್ಮಣವೇಷದಿಂದ ಪ್ರಚ್ಛನ್ನರಾಗಿ ತಿರುಗಾಡುತ್ತಿರುವುದು ನಿಶ್ಚಯವೆಂದು ನನಗೆ ಭಾಸವಾಗುತ್ತಿದೆ.”

ಜನಮೇಜಯ! ಮಗನು ಹೇಳಿದ ಮಾತುಗಳನ್ನು ಕೇಳಿ ಬಹಳ ಸಂತೋಷಗೊಂಡ ದ್ರುಪದನು ಪುರೋಹಿತರನ್ನು ಕರೆದು ಹೇಳಿದನು :

“ನೀವೀಗಲೇ ಕುಂಬಾರನ ಮನೆಗೆ ಹೋಗಿ, ಬ್ರಾಹ್ಮಣಕುಮಾರರನ್ನು ಕಂಡು ಅವರಾರೆಂಬುದನ್ನು ತಿಳಿದುಕೊಳ್ಳಲು ದ್ರುಪದನಿಂದ ಪ್ರೇಷಿತರಾಗಿ ಬಂದಿರುವೆವೆಂದು ಹೇಳಬೇಕು. ಮಾತಿನ ಮಧ್ಯದಲ್ಲಿ – ‘ನೀವು ಮಹಾತ್ಮರಾದ ಪಾಂಡವರೇ ಆಗಿರುವಿರಲ್ಲವೇ?’ – ಎಂದೂ ಅವರನ್ನು ಪ್ರಶ್ನಿಸಬೇಕು.”

ಪುರೋಹಿತರು ದ್ರುಪದನ ಮಾತನ್ನು ಗ್ರಹಿಸಿದವರಾಗಿ, ಕುಂಬಾರನ ಮನೆಗೆ ಹೋಗಿ ಯುಧಿಷ್ಠಿರಾದಿಗಳನ್ನು ಕಂಡು, ಅವರ ಪರಾಕ್ರಮಗಳನ್ನು ಯಥೋಚಿತವಾಗಿ ಶ್ಲಾಘನೆಮಾಡುತ್ತಾ ದ್ರುಪದನು ಹೇಳಿಕಳುಹಿಸಿರುವ ವಿಷಯವನ್ನು ಪ್ರಸ್ತಾಪಿಸಿದರು.

“ಸಮ್ಮಾನ್ಯರೇ! ವರದನಾದ ದ್ರುಪದನು ನೀವಾರೆಂಬುದನ್ನು ತಿಳಿಯಲು ಕುತೂಹಲಾವಿಷ್ಟನಾಗಿರುವನು. ಮಹಾಪರಾಕ್ರಮಿಗಳಿಂದಲೂ ಅಭೇದ್ಯ ವಾಗಿದ್ದ ಲಕ್ಷ್ಯವನ್ನು ಭೇದಿಸಿದ ಈ ಯುವಕನನ್ನು ನೋಡಿ ದ್ರುಪದನ ಸಂತೋಷಕ್ಕೆ ಪಾರವೇ ಇಲ್ಲವಾಗಿದೆ. ಆದುದರಿಂದ ನಿಮ್ಮ ಕುಲ-ಗೋತ್ರ ಗಳನ್ನು ವಿವರವಾಗಿ ತಿಳಿಸಿರಿ. ಶತ್ರುಗಳ ತಲೆಯನ್ನು ಮೆಟ್ಟಿ –ನನಗೂ, ಪಾಂಚಾಲರಾಜನಿಗೂ, ಅವನ ಅನುಯಾಯಿಗಳಿಗೂ ಹೆಚ್ಚು ಆನಂದವನ್ನು ಉಂಟುಮಾಡಿರುವಿರಿ. ಪಾಂಡುರಾಜನು ನಮ್ಮ ರಾಜನಿಗೆ ಪ್ರಿಯಮಿತ್ರ ನಾಗಿದ್ದನು. ಅವರಿಬ್ಬರೂ ಏಕದೇಹನ್ಯಾಯದಿಂದಲೇ ಇರುತ್ತಿದ್ದರು. ಈ ಕಾರಣದಿಂದ ದ್ರುಪದನು ತನ್ನ ಮಗಳನ್ನು ಪಾಂಡುವಿನ ಸೊಸೆಯನ್ನಾಗಿ ಮಾಡಬೇಕೆಂದು ಬಹಳ ದಿನಗಳಿಂದಲೂ ಆಶಿಸುತ್ತಿದ್ದನು. ಅದರಲ್ಲೂ ಪಾಂಡವರಲ್ಲಿ ಮಧ್ಯಮನಾದ ಅರ್ಜುನನಿಗೇ ತನ್ನ ಮಗಳನ್ನು ಕೊಟ್ಟು ಮದುವೆಮಾಡಬೇಕೆಂಬುದು ದ್ರುಪದನ ಇಚ್ಛೆಯಾಗಿದೆ. ಇದರ ಸಾಧ್ಯತೆ

ಯೇನಾದರೂ ಇದ್ದರೆ ದ್ರುಪದನಿಗೆ ಇದಕ್ಕಿಂತಲೂ ಹೆಚ್ಚಿನ ಪುಣ್ಯವೂ, ಹಿತವೂ ಮತ್ತು ಯಶಸ್ಸೂ ಬೇರೊಂದಿರುವುದಿಲ್ಲ. ನನ್ನ ಕಾರ್ಯಕ್ಕೆ ಒಳ್ಳೆಯ ಫಲವುಂಟಾಗುತ್ತದೆ.”



ಹೀಗೆ ಹೇಳಿ ಪುರೋಹಿತರು ಯುಧಿಷ್ಠಿರನಿಂದ ಬರುವ ಉತ್ತರವನ್ನೇ ನಿರೀಕ್ಷಿಸುತ್ತಾ ಕುಳಿತರು.

ಯುಧಿಷ್ಠಿರನು ಪುರೋಹಿತರ ಮಾತುಗಳನ್ನು ಕೇಳಿದನಂತರ ತನ್ನ ಪಕ್ಕದಲ್ಲಿ ಕುಳಿತಿದ್ದ ಭೀಮಸೇನನಿಗೆ ಹೇಳಿದನು :

“ಭೀಮ! ಈ ಪುರೋಹಿತರು ದ್ರುಪದನಿಂದ ಕಳುಹಿಸಲ್ಪಟ್ಟಿರುವರು. ಆದುದರಿಂದ ಇವರನ್ನು ವಿಶೇಷವಾದ ರೀತಿಯಲ್ಲಿ ಸತ್ಕರಿಸುವುದು ನಮ್ಮ ಕರ್ತವ್ಯವಾಗಿದೆ. ನೀನೀಗಲೇ ಹೋಗಿ ಕಾಲುಗಳನ್ನು ತೊಳೆಯಲು ನೀರನ್ನೂ ಅರ್ಘ್ಯವನ್ನೂ ತೆಗೆದುಕೊಂಡು ಬಂದು ಇವರನ್ನು ಯಥಾವಿಧಿಯಾಗಿ ಸತ್ಕರಿಸು.”

ಅಣ್ಣನು ಹೇಳಿದಂತೆಯೇ ಭೀಮನು ಪುರೋಹಿತರನ್ನು ಯಥಾವಿಧಿಯಾಗಿ ಸತ್ಕರಿಸಿದನು. ಪುರೋಹಿತರೂ ಸಂತುಷ್ಟರಾಗಿ ಸುಖಾಸನದಲ್ಲಿ ಕುಳಿತನಂತರ ಯುಧಿಷ್ಠಿರನು ಪುರೋಹಿತರನ್ನು ಕುರಿತು ಹೇಳಿದನು :

ಪಾಞ್ಚಾಲರಾಜೇನ ಸುತಾ ನಿಸೃಷ್ಟಾ
ಸ್ವಧರ್ಮದೃಷ್ಟೇನ ಪಥಾ ನ ಕಾಮಾತ್ ।
ಪ್ರದಿಷ್ಟಶುಲ್ಕಾ ದ್ರುಪದೇನ ರಾಜ್ಞಾ
ಸಾ ತೇನ ವೀರೇಣ ತಥಾನುವೃತ್ತಾ ॥೨೩॥

ನ ತತ್ರ ವರ್ಣೇಷು ಕೃತಾ ವಿವಕ್ಷಾ
ನ ಚಾಪಿ ಶೀಲೇ ನ ಕುಲೇ ನ ಗೋತ್ರೇ ।
ಕೃತೇನ ಸಜ್ಯೇನ ಹಿ ಕಾರ್ಮುಕೇಣ
ವಿದ್ಧೇನ ಲಕ್ಷ್ಯೇಣ ಹಿ ಸಾ ವಿಸೃಷ್ಟಾ ॥೨೪॥

ಸೇಯಂ ತಥಾನೇನ ಮಹಾತ್ಮನೇಹ
ಕೃಷ್ಣಾ ಜಿತಾ ಪಾರ್ಥಿವಸಙ್ಘಮಧ್ಯೇ ।
ನೈವಂಗತೇ ಸೌಮಕಿರದ್ಯ ರಾಜಾ
ಸಂತಾಪಮರ್ಹತ್ಯಸುಖಾಯ ಕರ್ತುಮ್ ॥೨೫॥

"ಬ್ರಾಹ್ಮಣೋತ್ತಮರೇ! ದ್ರುಪದರಾಜನು ದ್ರೌಪದಿಯನ್ನು ವೀರ್ಯಶುಲ್ಕದಿಂದ ಕೊಟ್ಟಿರುವನಲ್ಲವೇ? ಹಾಗೆಯೇ ಕೊಟ್ಟುಬಿಡಲಿಲ್ಲವಲ್ಲಾ! ಈ ವೀರನು ಅವನಿಟ್ಟಿದ್ದ ಪಣವನ್ನು ಗೆದ್ದು ರಾಜಕುಮಾರಿಯನ್ನು ಕರೆತಂದಿರುವನು. ಮೊದಲು ಲಕ್ಷ್ಯವನ್ನು ಭೇದಿಸುವವನ ವರ್ಣದ ವಿಷಯವನ್ನಾಗಲೀ, ಶೀಲ-ಕುಲ-ಗೋತ್ರಗಳ ವಿಷಯವನ್ನಾಗಲೀ ಗೊತ್ತುಮಾಡಿರಲಿಲ್ಲ. ಬಿಲ್ಲಿಗೆ ಹೆದೆಯನ್ನು ಕಟ್ಟಿ ಲಕ್ಷ್ಯವನ್ನು ಭೇದಿಸಿದವನಿಗೆ ಮಗಳನ್ನು ಕೊಡಲಾಗುವುದೆಂದು ಘೋಷಿಸಲಾಗಿತ್ತು. ಅದರಂತೆಯೇ ಈ ಮಹಾತ್ಮನು ರಾಜಸಮೂಹದ ಮಧ್ಯದಲ್ಲಿ ಲಕ್ಷ್ಯವನ್ನು ಭೇದಿಸಿ ಕೃಷ್ಣೆಯನ್ನು ಗೆದ್ದುತಂದಿರುವನು. ಆದುದರಿಂದ ಈ ಸಂದರ್ಭದಲ್ಲಿ ಸೋಮಕವಂಶಸಂಭೂತನಾದ ದ್ರುಪದನು ಈ ವಿಷಯದಲ್ಲಿ ಯೋಚಿಸುವುದು ಅಥವಾ ದುಃಖಿಸುವುದು ಸರ್ವಥಾ ಯುಕ್ತವಲ್ಲ. ಒಂದು ವೇಳೆ ದ್ರುಪದನ ಇಚ್ಛೆಯು ನೆರ

ವೇರಲೂಬಹುದು. ಏಕೆಂದರೆ : ರಾಜಕುಮಾರಿಯನ್ನು ಪರಿಗ್ರಹಿಸಲು ನಾವು ಸರ್ವಥಾ ಯೋಗ್ಯರೆಂಬುದು ನಿಶ್ಚಿತವಾಗಿದೆ. ಬ್ರಾಹ್ಮಣೋತ್ತಮರೇ! ಇಷ್ಟುಮಾತ್ರ ನಿಶ್ಚಯ. ದುರ್ಬಲನಾದವನು, ನೀಚಕುಲದವನು, ಧನುರ್ವಿದ್ಯೆಯಲ್ಲಿ ನಿಷ್ಣಾತನಲ್ಲದವನು – ದ್ರುಪದನಿಟ್ಟಿದ್ದ ಲಕ್ಷ್ಯವನ್ನು ಭೇದಿಸಿರಲಾರನು. ಆದುದರಿಂದ ದ್ರುಪದರಾಜನು ತನ್ನ ಮಗಳ ವಿಷಯವಾಗಿ ದುಃಖಿಸುವ ಕಾರಣವಿಲ್ಲ. ಒಂದು ವೇಳೆ ದ್ರುಪದನಿಗೆ ವರನು ಇಷ್ಟನಾಗಿರದಿದ್ದರೂ ಲಕ್ಷ್ಯಭೇದದಿಂದ ಪಡೆದಿರುವುದನ್ನು ನಿರಸನಮಾಡಲು ಪ್ರಪಂಚದಲ್ಲಿ ಯಾರಿಂದಲೂ ಸಾಧ್ಯವಿಲ್ಲ."

ಹೀಗೆಂದು ಯುಧಿಷ್ಠಿರನು ಹೇಳುತ್ತಿರುವಾಗಲೇ ದ್ರುಪದರಾಜನ ದೂತನೊಬ್ಬನು ಅವಸರವಾಗಿ ಬಂದು – 'ಭೋಜನಕ್ಕೆ ಮೃಷ್ಟಾನ್ನವು ಸಿದ್ಧವಾಗಿದೆ. ಕೂಡಲೇ ದಯಮಾಡಿಸಿರಿ' – ಎಂದು ಹೇಳಿದನು.

ಇ೯೩ನೆಯ ಅಧ್ಯಾಯವು ಮುಗಿಯಿತು.

೧೯೪ನೆಯ ಅಧ್ಯಾಯ ವೈವಾಹಿಕಪರ್ವ (ಮುಂದುವರಿದಿದೆ.)

## ದ್ರುಪದನ ಅರಮನೆಯಲ್ಲಿ ಕುಂತಿಗೂ ಪಾಂಡುಕುಮಾರರಿಗೂ ಸಮ್ಮಾನ: ದ್ರುಪದನಿಂದ ಪಾಂಡವರ ಶೀಲ-ಸ್ವಭಾವಗಳ ಪರೀಕ್ಷೆ

ಜನಮೇಜಯ! ದೂತನು ಪಾಂಡವರನ್ನು ಕುರಿತು ಹೇಳಿದನು :

" ದ್ರುಪದಮಹಾರಾಜರು ತಮ್ಮ ಮಗಳಾದ ದ್ರೌಪದಿಯ ವಿವಾಹದ ಅಂಗವಾಗಿ ಒಳ್ಳೆಯ ಭೋಜನಕೂಟವನ್ನೇರ್ಪಡಿಸಿರುವರು. ನೀವು ನಿಮ್ಮ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಒಡನೆಯೇ ಬನ್ನಿರಿ. ದಯೆಯಿಟ್ಟು ಸಾವಕಾಶ ಮಾಡಬೇಡಿರಿ. ಕೃಷ್ಣೆಯ ಪಾಣಿಗ್ರಹಣಮಹೋತ್ಸವವೂ ಅಲ್ಲಿಯೇ ವಿಧಿವತ್ತಾಗಿ ನಡೆಯಬೇಕಾಗಿದೆ. ಈ ವಿಷಯದಲ್ಲಿ ವಿಳಂಬಕ್ಕೆ ಅವಕಾಶವಿಲ್ಲ. ಸುವರ್ಣಮಯವಾದ ಕಮಲಚಿತ್ರಗಳಿಂದಲೂ, ಉತ್ತಮವಾದ ವಾಜಿಗಳಿಂದಲೂ ಶೋಭಿಸುತ್ತಿರುವ ರಾಜಯೋಗ್ಯವಾದ ಈ ರಥಗಳು ನಿಮಗಾಗಿಯೇ ಸಿದ್ಧಮಾಡಲ್ಪಟ್ಟಿವೆ. ನೀವೆಲ್ಲರೂ ರಥಗಳನ್ನು ಆರೋಹಣಮಾಡಿ ಪಾಂಚಾಲದರಸರಾದ ದ್ರುಪದಮಹಾರಾಜರ ಅರಮನೆಗೆ ದಯಮಾಡಿಸಿರಿ."

ಯುಧಿಷ್ಠಿರನು ತನ್ನೊಡನೆ ಮಾತನಾಡುತ್ತಿದ್ದ ಪುರೋಹಿತರನ್ನು

ಆದರಪೂರ್ವಕವಾಗಿ ಕಳುಹಿಸಿಕೊಟ್ಟನು. ದ್ರೌಪದೀ-ಕುಂತಿಯರು ಒಂದು ರಥದಲ್ಲಿಯೂ, ಯುಧಿಷ್ಠಿರಾದಿಗಳು ಬೇರೆಯ ರಥಗಳಲ್ಲಿಯೂ ಕುಳಿತು ದ್ರುಪದನ ಅರಮನೆಗೆ ಹೊರಟರು.

ಮೊದಲೇ ಹೊರಟಿದ್ದ ಪುರೋಹಿತರು ಪಾಂಡವರು ಅರಮನೆಯನ್ನು ಸೇರುವುದರೊಳಗಾಗಿ ದ್ರುಪದನ ಬಳಿಗೆ ಬಂದು, ತಮಗೂ ಯುಧಿಷ್ಠಿರನಿಗೂ ನಡೆದ ಸಂಭಾಷಣೆಗಳೆಲ್ಲವನ್ನೂ ವಿವರವಾಗಿ ತಿಳಿಸಿದರು. ದ್ರುಪದನ ಸಮಸ್ಯೆಯು ಹಾಗೆಯೇ ಉಳಿಯಿತು. ಪಣದಲ್ಲಿ ಗೆದ್ದನಂತರ ಕುಲ-ಶೀಲಗಳ ವಿವೇಚನೆಯು ಸಾಧುವಲ್ಲವೆಂದು ದ್ರುಪದನಿಗೂ ಅರಿವಾಯಿತು. ಮುಂದೆ ಮಾಡುವುದೇನು? ಯಾವ ವರ್ಣದವರೆಂದು ತಿಳಿಯುವ ಇಚ್ಛೆಯಿಂದ ಹಣ್ಣು-ಹಂಪಲುಗಳು, ಹೂಮಾಲೆಗಳು, ಕವಚಗಳು, ದೊಡ್ಡ-ದೊಡ್ಡ ಕತ್ತಿ-ಗುರಾಣಿಗಳು, ರತ್ನಗಂಬಳಿಗಳು, ಹಸುಗಳು, ಬೀಜಗಳು, ಹಗ್ಗಗಳು, ನೇಗಿಲುಗಳು, ಉತ್ತಮಶಿಲ್ಪಿಗಳಿಂದ ನಿರ್ಮಿತವಾದ ಕಲಾಕೃತಿಗಳು, ಆಟಕ್ಕೆ ಉಪಯುಕ್ತವಾದ ಪದಾರ್ಥಗಳು, ಉತ್ತಮವಾದ ಮತ್ತು ಚಿತ್ರಿತವಾದ ಧನುಸ್ಸುಗಳು, ಬಾಣಗಳು, ಶಸ್ತ್ರಾಸ್ತ್ರಗಳು, ಸುವರ್ಣಭೂಷಿತವಾದ ಶಕ್ತ್ಯಾಯುಧಗಳು, ಋಷ್ಟಿಗಳು, ಪ್ರಾಸ-ಭುಶುಂಡಿ-ಪರಶ್ವಧಗಳೇ ಮೊದಲಾದ ಯುದ್ಧೋಪಯೋಗಿಗಳಾದ ಆಯುಧಗಳು, ಹಂಸತೂಲಿಕಾತಲ್ಪಗಳು, ಪರಮೋತ್ಕೃಷ್ಟವಾದ ವಸ್ತ್ರಾಭರಣಗಳು – ಇವೇ ಮುಂತಾದ ಅನೇಕ ವಸ್ತುಗಳನ್ನು ದ್ರುಪದನು ಸಿದ್ಧಪಡಿಸಿದನು.

ಆ ವೇಳೆಗೆ ಕುಂಬಾರನ ಮನೆಯಿಂದ ಹೊರಟ ರಥಗಳು ದ್ರುಪದನ ಅರಮನೆಯನ್ನು ಸೇರಿದುವು. ಕುಂತಿಯು ದ್ರೌಪದಿಯೊಡನೆ ರಥದಿಂದಿಳಿದು ಅಂತಃಪುರವನ್ನು ಸೇರಿದಳು. ಕುರುವಂಶದ ರಾಣಿಯಾದ ಕುಂತಿಯನ್ನು ದ್ರುಪದನ ಅಂತಃಪುರದ ಮಹಿಳೆಯರು ಆದರದಿಂದ ಸ್ವಾಗತಿಸಿ ಸತ್ಕರಿಸಿದರು. ಸಿಂಹದಂತೆ ಗತಿಯುಳ್ಳವರಾಗಿದ್ದ, ಕೃಷ್ಣಾಜಿನಗಳನ್ನೇ ಉತ್ತರೀಯಗಳನ್ನಾಗಿ ಧರಿಸಿದ್ದ, ಎತ್ತಿನ ಕಣ್ಣುಗಳಂತೆ ವಿಶಾಲವಾದ ಕಣ್ಣುಗಳುಳ್ಳವರಾಗಿದ್ದ, ತುಂಬಿದ ಹೆಗಲುಗಳಿಂದ ಶೋಭಿಸುತ್ತಿದ್ದ, ಹಾವಿನಂತೆ ದೀರ್ಘಬಾಹುಗಳನ್ನು ಹೊಂದಿದ್ದ ಐವರು ಯುವಕರನ್ನೂ ನೋಡಿದ ದ್ರುಪದನೂ ಅವನ ಅಮಾತ್ಯ - ಪುರೋಹಿತರೂ, ಪುತ್ರ-ಬಂಧು-ಮಿತ್ರರೂ, ಪರಿಜನರೂ ಅಮಿತಾ

ನಂದವನ್ನು ಹೊಂದಿದರು. ಯುಧಿಷ್ಠಿರಾದಿಗಳು ಅರಮನೆಯೊಳಗೆ ಪ್ರವೇಶಿಸಿ, ಪಾದಪೀಠದಿಂದ ಕೂಡಿದ್ದ ನವರತ್ನಖಚಿತವಾಗಿದ್ದ ಶ್ರೇಷ್ಠವಾದ ಸಿಂಹಾಸನಗಳಲ್ಲಿ ಸ್ವಲ್ಪವಾದರೂ ಶಂಕಿಸದೇ ಅಥವಾ ವಿಸ್ಮಯವನ್ನೂ ಹೊಂದದೇ ಜ್ಯೇಷ್ಠಾನುಕ್ರಮವಾಗಿ ಕುಳಿತರು.

ಅವರು ಆಸನಾರೂಢರಾದೊಡನೆಯೇ ಒಳ್ಳೊಳ್ಳೆಯ ವಸ್ತ್ರಾಭರಣಗಳನ್ನು ಧರಿಸಿದ್ದ ದಾಸ-ದಾಸಿಯರು ರಾಜಯೋಗ್ಯವಾದ ನಾನಾವಿಧವಾದ ಭಕ್ಷ್ಯಗಳನ್ನೂ, ಫಲಗಳನ್ನೂ ಚಿನ್ನದ ಮತ್ತು ಬೆಳ್ಳಿಯ ತಟ್ಟೆಗಳಲ್ಲಿಟ್ಟು ಯುಧಿಷ್ಠಿರಾದಿಗಳ ಮುಂದೆ ತಂದಿಟ್ಟರು.

ಐವರೂ ಭಕ್ಷ್ಯ-ಭೋಜ್ಯಾದಿಗಳನ್ನೂ, ಲೇಹ್ಯ-ಚೋಷ್ಯ-ಪಾನೀಯಾದಿಗಳನ್ನೂ, ಸವಿದು ತೃಪ್ತಿಹೊಂದಿ, ದ್ರುಪದನನ್ನನುಸರಿಸಿ ಹೊರಟು ಪ್ರದರ್ಶನಕ್ಕಾಗಿ ಸಿದ್ಧಪಡಿಸಿದ್ದ ವಸ್ತುಗಳನ್ನು ನೋಡಿದರು. ಅವರೈವರಿಗೂ ಯುದ್ಧೋಪಯೋಗಿಗಳಾದ ವಸ್ತುಗಳ ಮೇಲೆಯೇ ಹೆಚ್ಚಿನ ಆಸಕ್ತಿಯಿದ್ದುದನ್ನು ಕಂಡು ದ್ರುಪದನೂ, ಅವನ ಸುತಾಮಾತ್ಯರೂ–ಇವರು ಕುಂತಿಯ ಮಕ್ಕಳಾದ ಪಾಂಡುಕುಮಾರರೇ ಆಗಿರುವರೆಂಬುದನ್ನು ನಿಶ್ಚಯಿಸಿ–ಪರಸ್ಪರವಾಗಿ ಸಂತೋಷವನ್ನು ವ್ಯಕ್ತಪಡಿಸಿದರು.

೧೯೪ನೆಯ ಅಧ್ಯಾಯವು ಮುಗಿಯಿತು.

೧೯೫ನೆಯ ಅಧ್ಯಾಯ ವೈವಾಹಿಕಪರ್ವ (ಮುಂದುವರಿದಿದೆ.)

## ದ್ರುಪದ-ಯುಧಿಷ್ಠಿರರ ಸಂಭಾಷಣೆ : ವ್ಯಾಸರ ಆಗಮನ

ಜನಮೇಜಯ! ದ್ರುಪದನು ಯುಧಿಷ್ಠಿರಾದಿಗಳನ್ನು ಬೇರೊಂದು ಪ್ರಾಂಗಣಕ್ಕೆ ಕರೆದೊಯ್ದು ಕುಳ್ಳಿರಿಸಿ, ಬ್ರಾಹ್ಮಣರನ್ನು ಸಂಬೋಧಿಸುವ ರೀತಿಯಲ್ಲಿಯೇ ಯುಧಿಷ್ಠಿರನನ್ನು ಸಂಬೋಧಿಸಿ ಪ್ರಶ್ನಿಸಿದನು :

"ಬ್ರಾಹ್ಮಣೋತ್ತಮರೇ! ನಾವು ನಿಮ್ಮನ್ನು ಕ್ಷತ್ರಿಯರೆಂದು ತಿಳಿಯೋಣವೇ? ಅಥವಾ ಬ್ರಾಹ್ಮಣರೆಂದೇ ಭಾವಿಸಬಹುದೇ? ಗುಣಸಂಪನ್ನರಾದ ವೈಶ್ಯರೆಂದು ಭಾವಿಸೋಣವೇ? ಅಥವಾ ಶೂದ್ರವರ್ಣದವರೆಂದು ತಿಳಿಯೋಣವೇ? ಅಥವಾ ಮಾಯೆಯನ್ನು ಆಶ್ರಯಿಸಿ (ತಾವು ಯಾರೆಂಬು

ದನ್ನು ವ್ಯಕ್ತಪಡಿಸದೆ) ಸಂಚರಿಸುತ್ತಿರುವ ಬ್ರಾಹ್ಮಣರೇ? ಅಥವಾ ದೇವತೆಗಳು ಬ್ರಾಹ್ಮಣರ ವೇಷಗಳನ್ನು ಧರಿಸಿ ದ್ರೌಪದಿಯ ಕೈಹಿಡಿಯಲು ಬಂದಿರಬಹುದೆಂದು ಊಹಿಸಿದರೆ ತಪ್ಪಾದೀತೇ? ನಿಶ್ಚಯವಾಗಿ ಹೇಳಿರಿ. ಏಕೆಂದರೆ : ನಿಮ್ಮ ಕುಲ-ಗೋತ್ರಗಳ ವಿಷಯವಾಗಿ ನಮಗೆ ಸಂಶಯ ವುಂಟಾಗಿದೆ. ನಾವು ಸಂಶಯವನ್ನು ನಿವಾರಿಸಿಕೊಂಡು ಆನಂದಪಡು ವಂತಾದೀತೇ? ನಮ್ಮ ಅದೃಷ್ಟವು ಶುಭಫಲಗಳನ್ನು ಕೊಡುವುದಾಗಿದೆಯೇ ಎಂಬುದನ್ನು ನಾವು ತಿಳಿಯಬೇಡವೇ? ಸ್ವೇಚ್ಛೆಯಿಂದಲೇ ಸತ್ಯಹೇಳಿರಿ. ಸತ್ಯವು ರಾಜರಿಗೆ ಇಷ್ಟ ಮತ್ತು ಪೂರ್ತಗಳಿಗಿಂತಲೂ ಹೆಚ್ಚಿನದು. ಅಸತ್ಯವನ್ನೆಂದಿಗೂ ಹೇಳಬಾರದು. ದೇವಸಂಕಾಶರೇ! ಅಮೃತಧಾರೆಗೆ ಸಮಾನವಾದ ನಿಮ್ಮ ಮುಖದಿಂದ ಚ್ಯುತವಾಗಲಿರುವ ಸುಮಧುರ ವಾಣಿಯನ್ನು ಕೇಳಿದನಂತರ ನನ್ನ ಮಗಳ ವಿವಾಹಕ್ಕೆ ತಮ್ಮ ವರ್ಣಾನುಗುಣವಾದ ಸಂಭಾರಗಳನ್ನು ಸಿದ್ಧಪಡಿಸುವೆನು."

"ಮಹಾರಾಜ! ಖಿನ್ನನಾಗಬೇಡ. ನಿನ್ನ ಹೃದಯಕಮಲವು ಸಂತೋಷವೆಂಬ ಸೂರ್ಯನಿಂದ ವಿಕಸಿತವಾಗುವುದು. ನೀನು ಸಂಕಲ್ಪಿಸಿರುವುದು ನೆರವೇರುವುದು."

ಯುಧಿಷ್ಠಿರನ ಮಾತುಗಳನ್ನು ಕೇಳುತ್ತಲಿದ್ದಾಗ ದ್ರುಪದನ ಮತ್ತು ಅವನ ಪರಿವಾರದವರ ಮುಖಾರವಿಂದಗಳು ವಿಕಸಿತವಾಗುತ್ತಿದ್ದುವು. ಯುಧಿಷ್ಠಿರನು ಮುಂದುವರಿದು ಹೇಳಿದನು :

"ನಾವು ಕ್ಷತ್ರಿಯರು, ಮಹಾತ್ಮನಾದ ಪಾಂಡುವಿನ ಮಕ್ಕಳು. ನಾನೇ ಹಿರಿಯ ಮಗನು. ಇವರು ನನ್ನನ್ನನುಸರಿಸಿ ಹುಟ್ಟಿದ ಭೀಮಾರ್ಜುನರು. ಇವರಿಬ್ಬರೇ ರಾಜರನ್ನೆಲ್ಲಾ ಪರಾಜಿತರನ್ನಾಗಿ ಮಾಡಿ, ಸಮಾಜವಾಟದಿಂದ ದ್ರೌಪದಿಯನ್ನು ಕರೆತಂದರು. ಇವರೀರ್ವರೂ ನಕುಲ-ಸಹದೇವರು. ಕೃಷ್ಣೆ ಯೊಡನೆ ಅಂತಃಪುರದಲ್ಲಿರುವವಳು ನಮ್ಮೈವರ ತಾಯಿಯಾದ ಕುಂತೀ ದೇವಿಯು. ನಾವು ಕ್ಷತ್ರಿಯರೆಂದು ತಿಳಿದ ಮೇಲಾದರೂ ನಿನ್ನ ಹೃದಯದ ಆತಂಕವು ಪರಿಹಾರವಾಗಲಿ. ಕಮಲದ ಬಳ್ಳಿಯು ಒಂದು ಸರೋವರದಿಂದ ಮತ್ತೊಂದು ಸರೋವರಕ್ಕೆ ಒಯ್ಯಲ್ಪಡುವಂತೆ–ಕಮಲಲೋಚನೆಯಾದ ನಿನ್ನ

ಮಗಳು ಪಾಂಚಾಲವಂಶದಿಂದ ಕುರುವಂಶಕ್ಕೆ ಒಯ್ಯಲ್ಪಟ್ಟಿದ್ದಾಳೆ. ಮಹಾರಾಜ! ನೀನು ಅಪೇಕ್ಷಿಸಿದಂತೆ ನಾನು ಸತ್ಯವನ್ನೇ ಹೇಳಿರುತ್ತೇನೆ. ಇನ್ನು ಮುಂದೆ ನೀನೇ ನಮಗೆ ಗುರುವೂ, ರಕ್ಷಕನೂ ಆಗಿರುವೆ."

ದ್ರುಪದನಿಗೆ ಅಮಿತಾನಂದವಾಯಿತು. ಆನಂದಬಾಷ್ಪಗಳಿಂದ ಕಣ್ಣುಗಳು ವ್ಯಾಕುಲಿತವಾದುವು. ಒಂದೆರಡು ನಿಮಿಷಗಳು ದ್ರುಪದನ ಬಾಯಿಂದ ಮಾತುಗಳೇ ಹೊರಡಲಿಲ್ಲ. ಮುಹೂರ್ತಕಾಲ ಕಳೆದನಂತರ ಸಂತೋಷಾಧಿಕ್ಯದಿಂದುಂಟಾದ ಉದ್ರೇಕವನ್ನು ಹತೋಟಿಗೆ ತಂದುಕೊಂಡು ಸಮಯಕ್ಕೆ ತಕ್ಕಂತೆ ಉತ್ತರಿಸಿದನು :

"ಪಾಂಡುಪುತ್ರ! ಇಂದು ನಾನು ಧನ್ಯನಾದೆನು. ನನ್ನ ಸಂಕಲ್ಪವು ನಿಶ್ಚಯವಾಗಿಯೂ ನೆರವೇರಿತು. ನೀವು ನಿಮಗೊದಗಿದ ಅನೇಕವಾದ ಅಪಾಯಗಳಿಂದ ಮತ್ತು ಅರಗಿನ ಮನೆಯಿಂದ ಪಾರಾದ ರೀತಿಯನ್ನು ತಿಳಿಯಲು ಮನಸ್ಸು ತವಕಿಸುತ್ತಿದೆ."

ಯುಧಿಷ್ಠಿರನು ಅರಗಿನ ಮನೆಯಿಂದ ಪಾರಾದ ವಿವರಗಳನ್ನು ವಿಶದವಾಗಿ ಹೇಳಿದನು. ದ್ರುಪದನು ಎಲ್ಲವನ್ನೂ ಕೇಳಿ ಧೃತರಾಷ್ಟ್ರನನ್ನೂ ಅವನ ಮಕ್ಕಳನ್ನೂ ನಿಂದಿಸಿದನು ಮತ್ತು ಯುಧಿಷ್ಠಿರನಿಗೆ ರಾಜ್ಯವನ್ನು ಕೊಡಿಸಿಕೊಡುವ ಪ್ರತಿಜ್ಞೆಯನ್ನೂ ಮಾಡಿದನು.

ಅಲ್ಲಿಂದ ಮುಂದೆ ಯುಧಿಷ್ಠಿರಾದಿಗಳು ಕುಂತೀಸಮೇತರಾಗಿ ದ್ರುಪದ ನಿಂದ ನಿರ್ದಿಷ್ಟವಾದ ಅರಮನೆಯಲ್ಲಿ ದ್ರುಪದನ ಸತ್ಕಾರವನ್ನು ಕೈಗೊಳ್ಳುತ್ತಾ ವಾಸಿಸುತ್ತಿದ್ದರು. ನಾಲ್ಕಾರು ದಿನಗಳು ಕಳೆದನಂತರ ದ್ರುಪದನು ಯುಧಿ ಷ್ಠಿರನ ಬಳಿಗೆ ಬಂದು ಸುಖಾಸನದಲ್ಲಿ ಕುಳಿತು ಹೇಳಿದನು : "ಯುಧಿಷ್ಠಿರ! ಕುರುವಂಶಸಂಭೂತನಾದ ಅರ್ಜುನನು ಇಂದಿನ ದಿವಸ ಪಾಣಿಗ್ರಹಣವನ್ನು ಮಾಡಿಕೊಳ್ಳಬಹುದಲ್ಲವೇ? ವಿವಾಹಕ್ಕೆ ಮೊದಲು ಮಾಡಬೇಕಾದ ವಿಧ್ಯುಕ್ತಕರ್ಮಗಳನ್ನು ಅವನು ನೆರವೇರಿಸಲಿ."

ದ್ರುಪದನ ಮಾತುಗಳನ್ನು ಕೇಳಿ ಯುಧಿಷ್ಠಿರನು ಸ್ಪಷ್ಟವಾಗಿಯೇ ಹೇಳಿದನು :

"ಮಹಾರಾಜ! ದ್ರೌಪದಿಯೊಡನೆ ನನಗೂ ವಿವಾಹವಾಗಬೇಕು."

ಯುಧಿಷ್ಠಿರನ ಮಾತನ್ನು ಕೇಳಿ ದ್ರುಪದನಿಗೆ ವಿಸ್ಮಯವುಂಟಾದರೂ

ಸಾವಧಾನಚಿತ್ತನಾಗಿ ಹೇಳಿದನು : "ಯುಧಿಷ್ಠಿರ! ನೀನಾದರೂ ನನ್ನ ಮಗಳ ಪಾಣಿಗ್ರಹಣಮಾಡಿಕೊಳ್ಳಬಹುದು ಅಥವಾ ನಿಮ್ಮೈವರಲ್ಲಿ ಯಾರಾದರೂ ನಿನ್ನ ಇಚ್ಛೆಯಂತೆ ನನ್ನ ಮಗಳ ಪಾಣಿಗ್ರಹಣಮಾಡಿಕೊಳ್ಳಲಿ."

ಯುಧಿಷ್ಠಿರನು ಮತ್ತಷ್ಟು ಸ್ಪಷ್ಟವಾಗಿ ಹೇಳಿದನು :

**ಸರ್ವೇಷಾಂ ಮಹಿಷೀ ರಾಜನ್ದ್ರೌಪದೀ ನೋ ಭವಿಷ್ಯತಿ ।**
**ಏವಂ ಪ್ರವ್ಯಾಹೃತಂ ಪೂರ್ವಂ ಮಮ ಮಾತ್ರಾ ವಿಶಾಂಪತೇ ॥೨೫॥**

"ನಮ್ಮೈವರಿಗೂ ದ್ರೌಪದಿಯು ಪಟ್ಟಮಹಿಷಿಯಾಗುತ್ತಾಳೆ. ಹೀಗಾಗ ಬೇಕೆಂಬುದು ನಮ್ಮ ತಾಯಿಯ ಆಜ್ಞೆ. ನಮ್ಮಲ್ಲಿ ಯಾರಿಗೂ ವಿವಾಹ ವಾಗಿಲ್ಲ. ಈ ಕನ್ಯಾರತ್ನವನ್ನು ಅರ್ಜುನನು ಗೆದ್ದುತಂದನು. ನಮ್ಮೈವರಲ್ಲಿ ಯಾರು ಏನನ್ನು ಸಂಪಾದಿಸಿದರೂ ಐವರೂ ಸಮನಾಗಿ ಉಪಭೋಗಿಸ ಬೇಕೆಂಬ ನಿಯಮವನ್ನು ಮಾಡಿಕೊಂಡಿರುತ್ತೇವೆ. ಆ ನಿಯಮವನ್ನು ಈಗ ಬಿಡಲಾರೆವು. ಆದುದರಿಂದ ಸ್ತ್ರೀರತ್ನಳಾದ ಕೃಷ್ಣೆಯು ನಮ್ಮೈವರಿಗೂ ವಿವಾ ಹಿತಪತ್ನಿಯಾಗಲಿ. ಇವಳು ಅನುಕ್ರಮವಾಗಿ ನಮ್ಮೈವರ ಕೈಗಳನ್ನೂ ಹಿಡಿ ಯಲಿ."

ದ್ರುಪದನು ಹೇಳುತ್ತಾನೆ :

**ಏಕಸ್ಯ ಬಹ್ವ್ಯೋ ವಿಹಿತಾ ಮಹಿಷ್ಯಃ ಕುರುನನ್ದನ ।**
**ನೈಕಸ್ಯಾ ಬಹವಃ ಪುಂಸಃ ಶ್ರೂಯನ್ತೇ ಪತಯಃ ಕ್ವಚಿತ್ ॥೨೭॥**

"ಕುರುನಂದನ! ಒಬ್ಬ ಪುರುಷನು ಅನೇಕಯುವತಿಯರನ್ನು ವಿವಾಹ ಮಾಡಿಕೊಳ್ಳುವುದು ವಿಧಿವಿಹಿತವಾಗಿದೆ. ಆದರೆ ಒಬ್ಬ ಹೆಂಗಸು ಬಹುಪತಿಗಳನ್ನು ಹೊಂದಬಹುದೆಂಬ ವಿಷಯವನ್ನು ನಾನಿದುವರೆಗೂ ಎಲ್ಲಿಯೂ ಕಂಡೂ ಇಲ್ಲ; ಕೇಳಿಯೂ ಇಲ್ಲ.

**ಲೋಕವೇದವಿರುದ್ಧಂ ತ್ವಂ ನಾಧರ್ಮಂ ಧರ್ಮವಿಚ್ಛುಚಿಃ ।**
**ಕರ್ತುಮರ್ಹಸಿ ಕೌನ್ತೇಯ ಕಸ್ಮಾತ್ತೇ ಬುದ್ಧಿರೀದೃಶೀ ॥೨೮॥**

ಕುಂತೀಪುತ್ರ! ನೀನು ಧರ್ಮವಿದನೂ, ಶುದ್ಧನೂ ಆಗಿರುವೆ. ಹೀಗಿದ್ದೂ–ಆಚಾರದಲ್ಲಿಲ್ಲದ, ಸಂಪ್ರದಾಯವಿರುದ್ಧವಾದ ಮತ್ತು ವೇದ ವಿಹಿತವಲ್ಲದ, ಲೋಕವಿರುದ್ಧವಾದ, ಪಾಪಕರವಾದ ಕಾರ್ಯಮಾಡುವುದು

ಅಥವಾ ಅದನ್ನು ಪ್ರಚೋದಿಸುವುದು ನಿನಗೆ ಸರ್ವಥಾ ಯುಕ್ತವಲ್ಲ. ನಿನಗೆ ಈ ವಿಧವಾದ ಬುದ್ಧಿಯು ಹೇಗುಂಟಾಯಿತು?"

ಧರ್ಮರಾಜನು ಹೇಳುತ್ತಾನೆ :

**ಸೂಕ್ಷ್ಮೋ ಧರ್ಮೋ ಮಹಾರಾಜ ನಾಸ್ಯ ವಿದ್ಮೋ ವಯಂ ಗತಿಮ್ ।**
**ಪೂರ್ವೇಷಾಮಾನುಪೂರ್ವ್ಯೇಣ ಯಾತಂ ವರ್ತ್ಮಾನುಯಾಮಹೇ ॥**

"ಧರ್ಮವು ಅತಿಸೂಕ್ಷ್ಮವಾದುದು, ಮಹಾರಾಜ! ಧರ್ಮಸೂಕ್ಷ್ಮವನ್ನು ಮತ್ತು ಧರ್ಮಮಾರ್ಗವು ಯಾವುದೆಂಬುದನ್ನು ನಾವು ಯಾರೂ ತಿಳಿಯಲಾರೆವು. ಮಹಾನುಭಾವರಾದ, ಮಹಾತ್ಮರಾದ, ಜ್ಞಾನಿಗಳಾದ ನಮ್ಮ ಹಿರಿಯರು ಯಾವ ಮಾರ್ಗವನ್ನು ಅನುಸರಿಸಿ ನಡೆದರೋ– ಆ ಮಾರ್ಗವನ್ನೇ ಅನುಸರಿಸಿ ನಡೆಯುತ್ತಾ ನಾವೂ ಮುಂದೆ ಸಾಗುತ್ತಿದ್ದೇವೆ.

**ನ ಮೇ ವಾಗನೃತಂ ಪ್ರಾಹ ನಾಧರ್ಮೇ ಧೀಯತೇ ಮತಿಃ ।**
**ಏವಂ ಚೈವ ವದತ್ಯಮ್ಬಾ ಮಮ ಚೈತನ್ಮನೋಗತಮ್ ॥೩೦॥**

ನನ್ನ ನಾಲಿಗೆಯು ಇದುವರೆಗೂ ಒಂದು ಸುಳ್ಳನ್ನಾದರೂ ಹೇಳಿಲ್ಲ. ಅಥವಾ ನನ್ನ ನಾಲಿಗೆಯಿಂದ ಸುಳ್ಳೇ ಹೊರಬರಲಾರದು. ನನ್ನ ಬುದ್ಧಿಯು ಪಾಪಕರ್ಮವನ್ನೆಂದಿಗೂ ಪ್ರಚೋದಿಸಲಾರದು. ಅಥವಾ ಪಾಪಕಾರ್ಯಕ್ಕೆ ಒಪ್ಪಲಾರದು. ನನ್ನ ಮನಸ್ಸು ಒಪ್ಪಬೇಕಾದರೆ ಆ ಕಾರ್ಯವು ಧರ್ಮಸಮ್ಮತವೇ ಆಗಿರಬೇಕು. ಪ್ರಸಕ್ತವಿಷಯದಲ್ಲಿ ನಮ್ಮ ತಾಯಿಯು– 'ಐವರೂ ಈ ಕನ್ಯಾರತ್ನವನ್ನು ಹಂಚಿಕೊಳ್ಳಿರಿ' – ಎಂದೂ ಹೇಳಿಬಿಟ್ಟಿದ್ದಾಳೆ. ನನ್ನ ಮನಸ್ಸೂ ಈ ಕಾರ್ಯವನ್ನು ಸಮ್ಮತಿಸಿದೆ. ಈ ಕಾರಣಗಳಿಂದ:

**ಏಷ ಧರ್ಮೋ ಧ್ರುವೋ ರಾಜಂಶ್ಚರೈನಮವಿಚಾರಯನ್ ।**
**ಮಾ ಚ ಶಙ್ಕಾ ತತ್ರ ತೇ ಸ್ಯಾತ್ಕಥಂಚಿದಪಿ ಪಾರ್ಥಿವ ॥೩೧॥**

ದ್ರುಪದರಾಜನೇ! ನಮ್ಮೈವರಿಗೂ ದ್ರೌಪದಿಯನ್ನು ಪಾಣಿಗ್ರಹಣ ಮಾಡಿಕೊಡುವುದು ಧರ್ಮಸಮ್ಮತವಾಗಿದೆ. ಸ್ವಲ್ಪವಾದರೂ ವಿಚಾರ ಮಾಡದೇ ನಾನು ಹೇಳಿದಂತೆ ಮಾಡು. ಶಂಕಿಸಬೇಡ ಅಥವಾ ಭಯಪಡಬೇಡ."

ಯುಧಿಷ್ಠಿರನ ಮಾತುಗಳು ಅಸ್ಖಲಿತವಾಗಿದ್ದುವು ಮತ್ತು ದೃಢವಾಗಿ

ದ್ದುವು. ದ್ರುಪದನಿಗೆ ಮುಂದೇನು ಹೇಳಬೇಕೆಂಬುದೇ ತೋರಲಿಲ್ಲ. ಧರ್ಮ ಸೂಕ್ಷ್ಮವನ್ನು ಪರ್ಯಾಲೋಚಿಸಲು ಸ್ವಲ್ಪ ಕಾಲಾವಕಾಶಬೇಕಲ್ಲವೇ? ಅದಕ್ಕಾಗಿ ದ್ರುಪದನು ಯುಧಿಷ್ಠಿರನಿಗೆ ಹೇಳಿದನು :

"ಪಾಂಡುಪುತ್ರ! ಕುಂತೀದೇವೀ, ನೀನು ಮತ್ತು ನನ್ನ ಮಗನಾದ ಧೃಷ್ಟದ್ಯುಮ್ನ–ಈ ಮೂವರೂ ಕಲೆತು ಏನು ಮಾಡಬೇಕೆಂಬುದನ್ನು ನಿಶ್ಚಯಮಾಡಿ ಹೇಳಿರಿ. ಅನಂತರ ನಾಳೆ ನಾವು ಸೂಕ್ತವೆನಿಸುವ ರೀತಿಯಲ್ಲಿ ಕಾರ್ಯವನ್ನು ಮಾಡುವೆವು" –ಎಂದು ಹೇಳಿದನು.

ದ್ರುಪದರಾಜನ ಅಭಿಮತದಂತೆ ಯುಧಿಷ್ಠಿರ-ಕುಂತೀ- ಧೃಷ್ಟದ್ಯುಮ್ನರು ಬಹುಪತಿತ್ವದ ವಿಷಯದಲ್ಲಿ ಸಮಾಲೋಚನೆಯನ್ನು ನಡೆಸುತ್ತಿದ್ದರು. ಆ ವೇಳೆಗೆ ಸರಿಯಾಗಿ ಮಹಾಮಹಿಮರಾದ ಕೃಷ್ಣದ್ವೈಪಾಯನರು ಸ್ವೇಚ್ಛೆಯಿಂದ ಅರಮನೆಗೆ ಬಂದರು.

೧೯೫ನೆಯ ಅಧ್ಯಾಯವು ಮುಗಿಯಿತು.

೧೯೬ನೆಯ ಅಧ್ಯಾಯ ವೈವಾಹಿಕಪರ್ವ (ಮುಂದುವರಿದಿದೆ.)

## ವ್ಯಾಸರ ಸಮ್ಮುಖದಲ್ಲಿ ಬಹುಪತಿತ್ವದ ವಿಷಯವಾಗಿ ದ್ರುಪದಾದಿಗಳಿಂದ ಅಭಿಪ್ರಾಯಮಂಡನೆ

ಜನಮೇಜಯ! ದ್ರುಪದ-ಯುಧಿಷ್ಠಿರಾದಿಗಳು ಪ್ರತ್ಯುತ್ಥಾನಮಾಡಿ ಪ್ರಣಮಿಸಿ, ಮಹರ್ಷಿಗಳನ್ನು ಸ್ವಾಗತಿಸಿದರು. ವ್ಯಾಸರೂ ಎಲ್ಲರನ್ನೂ ಆಶೀರ್ವದಿಸಿ, ಯೋಗ-ಕ್ಷೇಮಗಳನ್ನು ವಿಚಾರಿಸಿ, ಸ್ವರ್ಣಮಯಪೀಠದಲ್ಲಿ ಕುಳಿತರು. ಮಹರ್ಷಿಗಳ ಅನುಜ್ಞೆಯನ್ನು ಪಡೆದು ದ್ರುಪದ-ಯುಧಿಷ್ಠಿರಾದಿಗಳೂ ಅನರ್ಘವಾದ ಆಸನಗಳಲ್ಲಿ ಉಪವಿಷ್ಟರಾದರು. ಕೆಲವು ಕ್ಷಣಗಳು ಕಳೆದನಂತರ ದ್ರುಪದನು ಸುಮಧುರವಾಣಿಯಿಂದ ವ್ಯಾಸರನ್ನು ಪ್ರಶ್ನಿಸಿದನು:

**ಕಥಮೇಕಾ ಬಹೂನಾಂ ಸ್ಯಾದ್ಧರ್ಮಪತ್ನೀ ನ ಸಂಕರಃ ।**
**ಏತನ್ಮೇ ಭಗವಾನ್ಸರ್ವಂ ಪ್ರಬ್ರವೀತು ಯಥಾತಥಮ್ ॥೫॥**

"ಮಹರ್ಷಿಗಳೇ! ಸಾಂಕರ್ಯದೋಷವಿಲ್ಲದಂತೆ ಒಬ್ಬ ಯುವತಿಯು ಬಹುಪತಿಗಳನ್ನು ಪಡೆಯಲು ಸಾಧ್ಯವಾಗುವುದೇ? ಇದರ ನಿಶ್ಚಯಾಂಶವನ್ನು ದಯೆಯಿಟ್ಟು ತಿಳಿಸಿರಿ."

ವ್ಯಾಸರು ಉತ್ತರಿಸಿದರು :

"ಲೋಕಕ್ಕೂ-ವೇದಕ್ಕೂ ವಿರುದ್ಧವೆಂದು ತೋರುವ, ಆಚರಣೆಯಲ್ಲಿಯೂ ಇಲ್ಲದ ಈ ಅಂಶವು ಬಹಳ ಗಹನವಾದುದು, ದ್ರುಪದ! ಈ ವಿಷಯದಲ್ಲಿ ಮೊದಲು ನಿಮ್ಮೆಲ್ಲರ ಸ್ಪಷ್ಟವಾದ ಅಭಿಪ್ರಾಯವನ್ನು ತಿಳಿಯಲು ಇಚ್ಛಿಸುತ್ತೇನೆ."



ದ್ರುಪದನು ತನ್ನ ಅಭಿಪ್ರಾಯವನ್ನು ಮಹರ್ಷಿಗಳ ಮುಂದಿಟ್ಟನು :

**ಅಧರ್ಮೋಽಯಂ ಮಮ ಮತೋ ವಿರುದ್ಧೋ ಲೋಕವೇದಯೋಃ ।**
**ನ ಹ್ಯೇಕಾ ವಿದ್ಯತೇ ಪತ್ನೀ ಬಹೂನಾಂ ದ್ವಿಜಸತ್ತಮ ॥೭॥**

**ನ ಚಾಪ್ಯಾಚರಿತಃ ಪೂರ್ವೈರಯಂ ಧರ್ಮೋ ಮಹಾತ್ಮಭಿಃ ।**
**ನ ಚಾಪ್ಯಧರ್ಮೋ ವಿದ್ವದ್ಭಿಶ್ಚರಿತವ್ಯಃ ಕಥಂಚನ ॥೮॥**

**ತತೋಽಹಂ ನ ಕರೋಮ್ಯೇನಂ ವ್ಯವಸಾಯಂ ಕ್ರಿಯಾಂ ಪ್ರತಿ ।**
**ಧರ್ಮಃ ಸದೈವ ಸಂದಿಗ್ಧಃ ಪ್ರತಿಭಾತಿ ಹಿ ಮೇ ತ್ವಯಮ್ ॥೯॥**

"ಮಹರ್ಷಿಗಳೇ! ಆಚಾರಕ್ಕೂ, ಸಂಪ್ರದಾಯಕ್ಕೂ, ಲೋಕಕ್ಕೂ ಮತ್ತು ವೇದಕ್ಕೂ ವಿರುದ್ಧವೆನಿಸುವ 'ಬಹುಪತಿತ್ವವು' ಪಾಪಹೇತುವೆಂದು ನನಗನಿಸುತ್ತದೆ. ಬ್ರಾಹ್ಮಣೋತ್ತಮರೇ! ಪ್ರಪಂಚದಲ್ಲಿ ಎಲ್ಲಿಯೂ ಒಬ್ಬ ಹೆಂಗಸು ಬಹುಪತಿಗಳನ್ನು ಹೊಂದಿರುವ ವಿಷಯವನ್ನು ಇದುವರೆಗೂ ನಾನು ಕಂಡೂ ಇಲ್ಲ; ಕೇಳಿಯೂ ಇಲ್ಲ. ಬಹುಪತಿತ್ವದ ಈ ಧರ್ಮವು ಮಹಾತ್ಮರಾದ ನಮ್ಮ ಪೂರ್ವಜರಿಂದಲೂ ಆಚರಿಸಲ್ಪಟ್ಟಿಲ್ಲ. ಧರ್ಮಾಧರ್ಮಗಳ ವಿವೇಚನಾಶಕ್ತಿಯನ್ನು ಪಡೆದಿರುವ ನಾವು ಅಧರ್ಮಾಚರಣೆಯನ್ನು ಖಂಡಿತವಾಗಿಯೂ ಮಾಡಬಾರದು. ಆದುದರಿಂದ ಈ ವಿಷಯಕ್ಕೆ ನನ್ನ ಮನಸ್ಸು ಒಪ್ಪಲಾರದು. ಬಹುಪತಿತ್ವವು ಧರ್ಮವೆಂಬುದರಲ್ಲಿ ನನಗೆ ಸಂಪೂರ್ಣವಾಗಿ ಸಂಶಯವಿದೆ."

ದ್ರುಪದನು ತನ್ನ ಅಭಿಪ್ರಾಯವನ್ನು ಹೇಳಿ ಮುಗಿಸಿದನಂತರ ಧೃಷ್ಟದ್ಯುಮ್ನನು ತನ್ನ ಅಭಿಪ್ರಾಯವನ್ನು ಹೇಳತೊಡಗಿದನು :

**ಯವೀಯಸಃ ಕಥಂ ಭಾರ್ಯಾಂ ಜ್ಯೇಷ್ಠೋ ಭ್ರಾತಾ ದ್ವಿಜರ್ಷಭ ।**
**ಬ್ರಹ್ಮನ್ಸಮಭಿವರ್ತೇತ ಸವೃತ್ತಃ ಸಂಸ್ತಪೋಧನ ॥೧೦॥**

**ನ ತು ಧರ್ಮಸ್ಯ ಸೂಕ್ಷ್ಮತ್ವಾದ್ಗತಿಂ ವಿದ್ಮ ಕಥಂಚನ ।**
**ಅಧರ್ಮೋ ಧರ್ಮ ಇತಿ ವಾ ವ್ಯವಸಾಯೋ ನ ಶಕ್ಯತೇ ॥೧೧॥**

**ಕರ್ತುಮಸ್ಮದ್ವಿಧೈರ್ಬ್ರಹ್ಮಂಸ್ತತೋಽಯಂ ನ ವ್ಯವಸ್ಯತೇ ।**
**ಪಞ್ಚಾನಾಂ ಮಹಿಷೀ ಕೃಷ್ಣಾ ಭವತ್ವಿತಿ ಕಥಂಚನ ॥೧೨॥**

"ಬ್ರಾಹ್ಮಣೋತ್ತಮರೇ! ತಪೋಧನರೇ! ಸದ್ವೃತ್ತನಾದ ಜ್ಯೇಷ್ಠ ಭ್ರಾತೃವು ತನ್ನ ತಮ್ಮನ ಪತ್ನಿಯ ಬಳಿಗೆ ಹೋಗಲು ಹೇಗೆತಾನೇ ಸಾಧ್ಯವಾದೀತು? ಧರ್ಮಾಧರ್ಮಗಳ ವಿಷಯವು ಬಹಳ ಸೂಕ್ಷ್ಮವಾದುದರಿಂದ ನಾವು ಅದರ ಸೂಕ್ಷ್ಮಗತಿಯನ್ನು ತಿಳಿದವರಾಗಿಲ್ಲ. ಆದುದರಿಂದ ಧರ್ಮವಿಹಿತವಾದ ಮತ್ತು ಧರ್ಮಕ್ಕೆ ವಿರುದ್ಧವಾದ ಕಾರ್ಯಗಳು ಯಾವುವೆಂಬುದನ್ನು ನಿರ್ಣಯಿಸಲು ಅಸಮರ್ಥರಾಗಿದ್ದೇವೆ. ಆದುದರಿಂದ ಈ ಕಾರ್ಯಕ್ಕೆ ನಾನು ಮನಃಪೂರ್ವಕವಾಗಿ ಒಪ್ಪಲಾರೆನು. ಆದುದರಿಂದಲೇ ನಾನು 'ದ್ರೌಪದಿಯು ಐವರಿಗೆ ಪತ್ನಿಯಾಗಲಿ' ಎಂದು ಹೇಳಲಾರೆನು."

ಧೃಷ್ಟದ್ಯುಮ್ನನ ಮಾತು ಮುಗಿಯಿತು. ಯುಧಿಷ್ಠಿರನು ತನ್ನ ಅಭಿಪ್ರಾಯವನ್ನು ಮಹರ್ಷಿಗಳ ಮುಂದಿಟ್ಟನು :

**ನ ಮೇ ವಾಗನೃತಂ ಪ್ರಾಹ ನಾಧರ್ಮೇ ಧೀಯತೇ ಮತಿಃ।**
**ವರ್ತತೇ ಹಿ ಮನೋ ಮೇऽತ್ರ ನೈಷೋऽಧರ್ಮಃ ಕಥಂಚನ ॥೧೩॥**

"ಋಷಿಸತ್ತಮರೇ! ನನ್ನ ನಾಲಿಗೆಯು ಇದುವರೆಗೂ ಒಂದು ಅಸತ್ಯವನ್ನೂ ನುಡಿದಿರುವುದಿಲ್ಲ ಮತ್ತು ಬುದ್ಧಿಯೂ ಎಂದಿಗೂ ಪಾಪಕಾರ್ಯದೆಡೆಗೆ ಪ್ರವಹಿಸಲಾರದು. ಯಾವಾಗ ನನ್ನ ಮನಸ್ಸು ಈ ಕಾರ್ಯಕ್ಕೆ ಸಮ್ಮತಿಸಿತೋ – ಆಗ ಈ ಕಾರ್ಯವು ಧರ್ಮವಾಗಿದೆಯೆಂಬುದೇ ನನ್ನ ದೃಢನಿಶ್ಚಯವಾಗಿದೆ. ಇದರಲ್ಲಿ ಸಂಶಯಲೇಶವೂ ಇಲ್ಲ. ಸಂಪ್ರದಾಯ, ಆಚಾರ, ಪದ್ಧತಿ–ಇವುಗಳ ವಿಷಯವಾಗಿ ಪರಿಶೀಲಿಸಿದರೂ ಪುರಾಣಗಳಲ್ಲಿ ಬಹುಪತಿತ್ವಕ್ಕೆ ಅನೇಕವಾದ ನಿದರ್ಶನಗಳಿವೆ. ಗೌತಮವಂಶಸಂಭೂತೆಯಾದ ಧರ್ಮಿಷ್ಠಳಾದ ಜಟಿಲೆಯು ಸಪ್ತರ್ಷಿಗಳನ್ನು ಮದುವೆಯಾಗಿದ್ದಳು. ಅದರಂತೆಯೇ ಕಂಡುಮುನಿಯ ಪುತ್ರಿಯಾದ 'ವಾರ್ಕ್ಷೀ' ಎಂಬುವಳು ಪ್ರಚೇತಸರೆಂಬ ಏಕನಾಮಧೇಯವುಳ್ಳ ತಪೋನಿಷ್ಠರಾದ ಹತ್ತುಮಂದಿ ಋಷಿಕುಮಾರರನ್ನು ವರಿಸಿದ್ದಳು.

**ಗುರೋರ್ಹಿ ವಚನಂ ಪ್ರಾಹುರ್ಧರ್ಮ್ಯಂ ಧರ್ಮಜ್ಞಸತ್ತಮ।**
**ಗುರೂಣಾಂ ಚೈವ ಸರ್ವೇಷಾಂ ಮಾತಾ ಪರಮಕೋ ಗುರುಃ ॥೧೬॥**

**ಸಾ ಚಾಪ್ಯುಕ್ತವತೀ ವಾಚಂ ಭೈಕ್ಷವದ್ಭುಜ್ಯತಾಮಿತಿ।**
**ತಸ್ಮಾದೇತದಹಂ ಮನ್ಯೇ ಪರಂ ಧರ್ಮಂ ದ್ವಿಜೋತ್ತಮ ॥೧೭॥**

ಧರ್ಮಜ್ಞರೇ! ಗುರುವಿನ ಆಜ್ಞೆಯು ಸರ್ವಥಾ ಮಾನ್ಯವೆಂದೂ, ಗುರ್ವಾಜ್ಞೆಯಂತೆ ನಡೆಯುವುದೇ ಧರ್ಮವೆಂದೂ ಧರ್ಮಜ್ಞರಾದವರು ಹೇಳುತ್ತಾರೆ. ತಾಯಿಯು ಗುರುಗಳಲ್ಲಿ ಶ್ರೇಷ್ಠಳೆಂದು ಶ್ರುತಿ-ಸ್ಮೃತಿಗಳು ಸಾರುತ್ತವೆ. ತಾಯಿಯೇ ಪರಮಗುರು ಅಥವಾ ಶ್ರೇಷ್ಠದೈವ. ಅವಳಾಡಿದ ಮಾತುಗಳನ್ನು ಪರಿಪಾಲಿಸುವುದೇ ಧರ್ಮ. ಭಿಕ್ಷಾನ್ನದಂತೆ ದ್ರೌಪದಿಯನ್ನೂ ಐವರೂ ಹಂಚಿಕೊಳ್ಳಿರೆಂದು ನಮ್ಮ ತಾಯಿಯೇ ಹೇಳಿರುವಳು. ಆದುದರಿಂದ

ದ್ರೌಪದಿಯು ನಮ್ಮೈವರ ಸಮಾನಪತ್ನಿಯಾಗಿರಬೇಕೆಂಬುದು ಶ್ರೇಷ್ಠ ಧರ್ಮವಾಗಿದೆಯೆಂಬುದರಲ್ಲಿ ನನಗೆ ಸಂಶಯವೇ ಇಲ್ಲ."

**ಏವಮೇತದ್ಯಥಾ ಪ್ರಾಹ ಧರ್ಮಚಾರೀ ಯುಧಿಷ್ಠಿರಃ।**
**ಅನೃತಾನ್ಮೇ ಭಯಂ ತೀವ್ರಂ ಮುಚ್ಯೇऽಹಮನೃತಾತ್ಕಥಮ್ ॥೧೮॥**

"ಮಹರ್ಷಿಗಳೇ! ಧರ್ಮಚಾರಿಯಾದ ಯುಧಿಷ್ಠಿರನ ಅಭಿಪ್ರಾಯವೇ ನನ್ನ ಅಭಿಪ್ರಾಯವೂ ಆಗಿದೆ. ಹಾಗಾಗದಿದ್ದರೆ ನನ್ನ ಬಾಯಿಂದ ಅನೃತವು ಹೊರಟಂತಾಗುವುದು. ಇದರಿಂದ ನನಗೆ ಅತಿಯಾದ ಭಯವುಂಟಾಗಿದೆ. ಅನೃತಭಾಷಣದ ಪಾಪವನ್ನು ತಪ್ಪಿಸಿಕೊಳ್ಳಲು ಹೇಗೆತಾನೇ ಸಾಧ್ಯವಾದೀತು?"–ಎಂದು ಹೇಳಿ ಕುಂತಿಯೂ ತನ್ನ ಅಭಿಪ್ರಾಯವನ್ನು ಮಹರ್ಷಿಗಳ ಮುಂದಿಟ್ಟಳು.

ಎಲ್ಲರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ಹೇಳಿದನಂತರ ಭಗವಾನ್ ವ್ಯಾಸರು ಕುಂತಿಯನ್ನು ಕುರಿತು ಹೇಳಿದರು :

**ಅನೃತಾನ್ಮೋಕ್ಷ್ಯಸೇ ಭದ್ರೇ ಧರ್ಮಶ್ಚೈಷ ಸನಾತನಃ।**
**ನ ತು ವಕ್ಷ್ಯಾಮಿ ಸರ್ವೇಷಾಂ ಪಾಞ್ಚಾಲ ಶೃಣು ಮೇ ಸ್ವಯಮ್ ॥೧೯॥**

"ಭದ್ರೇ! 'ಅನೃತಭಾಷಿಣೀ' ಎಂಬ ಅಪವಾದವು ನಿನಗೆ ಖಂಡಿತವಾಗಿಯೂ ಬರಲಾರದು. ನಿನಗೆ ಆ ಅಪವಾದವು ಬಾರದಂತೆ ನಿನ್ನ ಮಕ್ಕಳು ನೋಡಿಕೊಳ್ಳುವುದೇ ಸನಾತನಧರ್ಮ.

ದ್ರುಪದ! ಯುಧಿಷ್ಠಿರನು ಹೇಳಿದ ಮಾತುಗಳು ಧರ್ಮ ಸಮ್ಮತವಾಗಿವೆಯೆಂಬುದರಲ್ಲಿ ಸಂಶಯಲೇಶವೂ ಇರುವುದಿಲ್ಲ. ಆದರೆ ಎಲ್ಲರ ಮುಂದೆ ನಾನೀ ವಿಷಯವನ್ನು ಪ್ರಸ್ತಾಪಿಸಲು ಇಚ್ಛಿಪಡುವುದಿಲ್ಲ. ಬಹುಪತಿತ್ವವು ಹೇಗೆ ಧರ್ಮಸಮ್ಮತವೆನಿಸುವುದು? ಮತ್ತು ಇದು ಹೇಗೆ ಸನಾತನಧರ್ಮವಾಗುವುದು?–ಈ ವಿಷಯಗಳೆಲ್ಲವನ್ನೂ ನಿನಗೆ ಏಕಾಂತದಲ್ಲಿ ಹೇಳುವೆನು."

ಹೀಗೆಂದು ಹೇಳಿ ವ್ಯಾಸರು ಆಸನದಿಂದ ಮೇಲೆದ್ದು, ದ್ರುಪದನನ್ನು

ಕೈಹಿಡಿದುಕೊಂಡು ರಾಜಭವನಕ್ಕೆ ಕರೆದುಕೊಂಡು ಹೋದರು. ಪಾಂಡವರೂ, ಕುಂತಿಯೂ ಮತ್ತು ಧೃಷ್ಟದ್ಯುಮ್ನನೂ ವ್ಯಾಸ-ದ್ರುಪದರ ಪ್ರತ್ಯಾಗಮನವನ್ನೂ, ನಿರ್ಧಾರವನ್ನೂ ನಿರೀಕ್ಷಿಸುತ್ತಾ ಅಲ್ಲಿಯೇ ಕುಳಿತಿದ್ದರು.

ಏಕಾಂತಮಂದಿರಕ್ಕೆ ತೆರಳಿದ ಕೃಷ್ಣದ್ವೈಪಾಯನರು ಬಹುಪತಿತ್ವವು ಪ್ರಸಕ್ತಸಂದರ್ಭದಲ್ಲಿ ಹೇಗೆ ಧರ್ಮವಾಗಿ ಪರಿಣಮಿಸಿದೆಯೆಂಬುದನ್ನು ಮಹಾತ್ಮನಾದ ದ್ರುಪದನರೇಂದ್ರನಿಗೆ ವಿವರಿಸಿ ಹೇಳತೊಡಗಿದರು.

೧೯೬ನೆಯ ಅಧ್ಯಾಯವು ಮುಗಿಯಿತು.

೧೯೭ನೆಯ ಅಧ್ಯಾಯ ವೈವಾಹಿಕಪರ್ವ (ಮುಂದುವರಿದಿದೆ.)

## ವ್ಯಾಸರು ದ್ರುಪದನಿಗೆ ಪಾಂಡವರ ಮತ್ತು ದ್ರೌಪದಿಯ ಪೂರ್ವಜನ್ಮವೃತ್ತಾಂತವನ್ನು ತಿಳಿಸಿದುದು : ದ್ರುಪದನು ದಿವ್ಯದೃಷ್ಟಿಯಿಂದ ಪಾಂಡವರ ದಿವ್ಯರೂಪಗಳನ್ನು ನೋಡಿದುದು

ಜನಮೇಜಯ! ವ್ಯಾಸ-ದ್ರುಪದರಿಬ್ಬರೂ ಏಕಾಂತದಲ್ಲಿ ಕುಳಿತು ಸಂಭಾಷಣೆಯನ್ನು ಆರಂಭಿಸಿದರು. ವ್ಯಾಸರು ದ್ರುಪದನನ್ನು ಕುರಿತು ಹೇಳಿದರು :

“ದ್ರುಪದ! ಪೂರ್ವದಲ್ಲಿ ನೈಮಿಷಾರಣ್ಯದಲ್ಲಿ ದೇವತೆಗಳು ಒಂದು ಮಹಾಸತ್ರವನ್ನು ಆರಂಭಿಸಿದರು. ಆ ಮಹಾಯಾಗಕ್ಕೆ ಎಲ್ಲ ಪ್ರಾಣಿಗಳನ್ನೂ ಸಂಹರಿಸುವ ಯಮನೇ ಶಾಮಿತ್ರ (ಯಜ್ಞದಲ್ಲಿ ಯಜ್ಞಪಶುವನ್ನು ವಿಶಸನ ಮಾಡುವವನು) ನಾಗಿದ್ದನು. ಅವನು ಯಜ್ಞದೀಕ್ಷಿತನಾಗಿದ್ದುದರಿಂದ ಮಾನವರನ್ನು ಪರಲೋಕಕ್ಕೊಯ್ಯುವ ಕಾರ್ಯವೇ ನಿಂತುಹೋಯಿತು. ಯಾವಾಗ ಸಾವೆಂಬುದೇ ನಿಂತುಹೋಯಿತೋ ಆಗ ಜನಸಂಖ್ಯೆಯೂ ಬಹಳ ಬೇಗ ಹೆಚ್ಚಿಹೋಯಿತು. ಅದನ್ನು ಕಂಡು ಗಾಬರಿಗೊಂಡ ಸೋಮ, ಶಕ್ರ, ವರುಣ, ಕುಬೇರ, ಸಾಧ್ಯರು, ರುದ್ರರು, ವಸುಗಳು, ಅಶ್ವಿನೀದೇವತೆಗಳು ಮತ್ತು ಇತರ ದೇವತೆಗಳು–ಎಲ್ಲರೂ ಒಟ್ಟಾಗಿ ಸೇರಿ ಬ್ರಹ್ಮನ ಬಳಿಗೆ ಹೋಗಿ ಪ್ರಾರ್ಥನೆಮಾಡಿ ಹೇಳಿದರು : “ದೇವದೇವ! ಭೂಲೋಕದಲ್ಲಿ

ಜನಸಂಖ್ಯೆಯು ಬಹಳವಾಗಿ ಹೆಚ್ಚಿಹೋಗಿದೆ. ಅದರಿಂದ ಭೀತರಾದ ನಾವು ನಿನ್ನಿಂದ ರಕ್ಷಣೆಯನ್ನು ಪಡೆಯಲು ಬಂದಿರುವೆವು."

"ಮಹಾಭಾಗರೇ! ಭೂಲೋಕದಲ್ಲಿ ಜನಸಂಖ್ಯೆಯು ಹೆಚ್ಚಾಗಿರುವುದರಿಂದ ನೀವು ಭಯಪಡಬೇಕಾದ ಕಾರಣವಿಲ್ಲ. ನೀವು ಅಮರರಲ್ಲವೇ? ಮರ್ತ್ಯರಿಂದ ನಿಮಗೆ ಅಪಾಯವು ಹೇಗೆತಾನೇ ಉಂಟಾದೀತು?"

"ದೇವದೇವ! ಹಾಗೆನ್ನಬೇಡ. ಇಂದು ಮಾನವರೆಲ್ಲರೂ ದೇವತೆಗಳಂತೆಯೇ ಆಗಿಬಿಟ್ಟಿರುವರು. ಅವರಿಗೂ ನಮ್ಮಂತೆಯೇ ಮರಣವೆಂಬುದೇ ಇಲ್ಲವಾಗಿದೆ. ದೇವ-ಮಾನವರಲ್ಲಿದ್ದ ಅಂತರವೇ ಈಗ ಅಳಿದುಹೋಗಿದೆ. ಯಾವುದಾದರೂ ಒಂದು ವಿಧದಲ್ಲಿ ದೇವ-ಮಾನವರಲ್ಲಿ ತಾರತಮ್ಯವನ್ನು ಕಲ್ಪಿಸಬೇಕೆಂದು ಕೇಳಿಕೊಳ್ಳಲು ನಿನ್ನಲ್ಲಿಗೆ ಬಂದಿರುವೆವು."

"ನೀವು ಹೇಳುತ್ತಿರುವುದೂ ನಿಜ. ಆದರೆ ಇದು ತಾತ್ಕಾಲಿಕವಾದುದು. ನೈಮಿಷಾರಣ್ಯದಲ್ಲಿ ನಡೆಯುತ್ತಿರುವ ಯಜ್ಞದಲ್ಲಿ ಯಮನು ದೀಕ್ಷಿತನಾಗಿ ಕುಳಿತಿದ್ದಾನೆ. ಆ ಮಹಾಯಜ್ಞವು ಮುಗಿದೊಡನೆಯೇ ಮಾನವರಿಗೆ ಯಥಾಪೂರ್ವವಾಗಿ ಮರಣವು ಸಂಭವಿಸುವುದು. ಆ ಸಮಯದಲ್ಲಿ ಸೂರ್ಯಪುತ್ರನಾದ ಯಮದೇವನು ನಿಮ್ಮ ಶಕ್ತಿಗಳನ್ನೇ ಸಾಧನವನ್ನಾಗಿಟ್ಟುಕೊಂಡು ಭೂಲೋಕದ ಜನಸ್ತೋಮವನ್ನು ತೊಡೆದುಬಿಡುವನು. ಆ ವೇಳೆಗೆ ಸರಿಯಾಗಿ ಮಾನವರೂ ಶಕ್ತಿಹೀನರಾಗುವರು. ಆದುದರಿಂದ ನೀವು ನಿರ್ಭೀತರಾಗಿ ಹೋಗಿಬನ್ನಿರಿ."

ಪೂರ್ವಜದೇವನಾದ ಬ್ರಹ್ಮನ ಮಾತುಗಳನ್ನು ಕೇಳಿ ದೇವತೆಗಳು ಅಲ್ಲಿಂದ ಹೊರಟು ಮಹಾಯಾಗವು ನಡೆಯುತ್ತಿದ್ದ ನೈಮಿಷಾರಣ್ಯಕ್ಕೆ ಬಂದರು.

ಯಜ್ಞಶಾಲೆಯ ಪಕ್ಕದಲ್ಲಿಯೇ ಭಾಗೀರಥಿಯು ಪ್ರವಹಿಸುತ್ತಿದ್ದಳು. ಇಂದ್ರಾದಿ ದೇವತೆಗಳು ನದಿಯ ದಂಡೆಯ ಮೇಲೆ ಕುಳಿತಿದ್ದರು. ನದಿಯಲ್ಲೊಂದು ಸ್ವರ್ಣಕಮಲವು ತೇಲಿಬರುತ್ತಿದ್ದುದನ್ನು ಕಂಡು ಎಲ್ಲರೂ ಆಶ್ಚರ್ಯಭರಿತರಾದರು. ಇಂದ್ರನಿಗೆ ಸ್ವರ್ಣಕಮಲವು ಎಲ್ಲಿಂದ ಬರುತ್ತಿದೆಯೆಂಬುದನ್ನು ತಿಳಿಯಬೇಕೆನ್ನುವ ಕುತೂಹಲವುಂಟಾಯಿತು. ನದಿಯ

ದಂಡೆಯಲ್ಲಿಯೇ ಪ್ರವಾಹಕ್ಕೆ ಅಭಿಮುಖವಾಗಿ ನಡೆದು ಗಂಗೆಯ ಮೂಲದವರೆಗೂ ಹೋದನು. ಅಗ್ನಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಸ್ತ್ರೀಯೊಬ್ಬಳು ಜಲಾಹರಣಕ್ಕಾಗಿ ಬಂದು ಗಂಗೆಯ ಮಧ್ಯದಲ್ಲಿ ನಿಂತು ರೋದನಮಾಡುತ್ತಿದ್ದಳು. ಅವಳ ಅಶ್ರುಬಿಂದುಗಳು ನೀರಿನಲ್ಲಿ ಬಿದ್ದೊಡನೆಯೇ ಅವು ಸ್ವರ್ಣಕಮಲಗಳಾಗಿ ಮಾರ್ಪಟ್ಟು ಗಂಗೆಯಲ್ಲಿ ತೇಲಿಹೋಗುತ್ತಿದ್ದುವು. ಇಂದ್ರನು ಅಂತಹ ಪರಮಾಶ್ಚರ್ಯಕರವಾದ ದೃಶ್ಯವನ್ನು ಕಂಡು ಆ ಶುಭಾಂಗಿಯ ಸಮೀಪಕ್ಕೆ ಹೋಗಿ ಕೇಳಿದನು :

"ಭದ್ರೇ! ನೀನು ಯಾರು? ಏಕಳುವೆ? ನಿಶ್ಚಯವನ್ನು ತಿಳಿಯುವ ಅಪೇಕ್ಷೆಯಿಂದಿರುತ್ತೇನೆ. ಎಲ್ಲವನ್ನೂ ಸತ್ಯವಾಗಿ ವಿಶದವಾಗಿ ಹೇಳು."

"ಶಕ್ರ! ನಾನಾರು? ನಾನೇಕೆ ನಿರ್ಭಾಗ್ಯಳು? ನಾನಳುತ್ತಿರುವುದೇಕೆ? ಇವೆಲ್ಲವನ್ನೂ ತಿಳಿಯಬೇಕಾದರೆ ನೀನು ನನ್ನನ್ನೇ ಅನುಸರಿಸಿ ಬರಬೇಕು. ನಾನು ಮುಂದೆಹೋಗುತ್ತೇನೆ. ನೀನು ನನ್ನ ಹಿಂದೆಯೇ ಆಗಮಿಸು. ಯಾವ ಕಾರಣದಿಂದ ಮತ್ತು ಯಾರಿಗೋಸ್ಕರವಾಗಿ ನಾನು ಅಳುತ್ತಿರುವೆನೆಂಬುದು ನಿನಗೇ ತಿಳಿಯುತ್ತದೆ."

ತರುಣಿಯ ಮಾತುಗಳನ್ನು ಕೇಳಿ ಇಂದ್ರನು ಅವಳನ್ನೇ ಅನುಸರಿಸಿ ಹೊರಟನು. ಅನತಿದೂರದಲ್ಲಿಯೇ ಹಿಮವತ್ಪರ್ವತದ ಶಿಖರದ ಮೇಲೆ ಸುಂದರನಾದ ತರುಣನೊಬ್ಬನು ಸಿದ್ಧಾಸನದಲ್ಲಿ ಕುಳಿತು ತರುಣಿ ಯೊಬ್ಬಳೊಡನೆ ಕ್ರೀಡಾವಿನೋದದಲ್ಲಿದ್ದುದನ್ನು ಇಂದ್ರನು ನೋಡಿದನು. ಕ್ರೀಡಾವಿನೋದದಲ್ಲಿ ಆಸಕ್ತರಾಗಿದ್ದ ಯುವ-ಯುವತಿಯರು ತಮ್ಮ ಸಮೀಪದಲ್ಲಿಯೇ ದೇವರಾಜನು ನಿಂತಿರುವನೆಂಬುದನ್ನೂ ಗಮನಿಸಲಿಲ್ಲ. ಇಂದ್ರನಿಗೆ ಸ್ವಲ್ಪ ಕೋಪವೇ ಬಂದಿತು.

ಇಂದ್ರನು ಸ್ವಲ್ಪ ಗಡುಸಾದ ಧ್ವನಿಯಲ್ಲಿ ಯುವಕನನ್ನು ಕೇಳಿದನು :

"ಹೇ ವಿದ್ವನ್! ಈ ತ್ರಿಭುವನಗಳೆಲ್ಲವೂ ನನ್ನ ಆಡಳಿತಕ್ಕೆ ಒಳಪಟ್ಟಿವೆಯೆಂಬುದನ್ನು ತಿಳಿಯೆಯಾ?"

ಕ್ರೀಡಾವಿನೋದದಲ್ಲಿಯೇ ನಿರತನಾಗಿದ್ದ ಯುವಕನು ಇಂದ್ರನನ್ನು

ಕಡೆಗಣ್ಣಿನಿಂದಲೂ ನೋಡಲಿಲ್ಲ. ಇಂದ್ರನ ಮಾತುಗಳು ತಮ್ಮ ಕಿವಿಗಳಲ್ಲಿ ಬೀಳಲೇ ಇಲ್ಲವೆಂಬ ರೀತಿಯಲ್ಲಿಯೇ ಅವರಿಬ್ಬರ ಕ್ರೀಡಾವಿಲಾಸಗಳು ಮುಂದುವರಿಯುತ್ತಿದ್ದುವು. ಅದನ್ನು ಕಂಡ ತ್ರಿಲೋಕಾಧಿಪತಿಗೆ ಕೋಪವು ಮತ್ತಷ್ಟು ಹೆಚ್ಚಿತು.

"ಯುವಕನೇ! ತ್ರಿಲೋಕಾಧಿಪತಿಯಾದ ನಾನಿಲ್ಲಿ ಬಂದಿರುವೆನು"– ಎಂದು ಮತ್ತೊಮ್ಮೆ ಗದರಿಸಿ ಹೇಳಿದನು.

ದೇವಪುರುಷನು ಕುಪಿತನಾದ ಇಂದ್ರನನ್ನು ಒಮ್ಮೆ ತೀಕ್ಷ್ಣವಾಗಿ ನೋಡಿ ನಕ್ಕನು.

ತ್ರಿಲೋಕಾಧಿಪತಿಯಾದ, ಮಹಾಪರಾಕ್ರಮಿಯಾದ ಇಂದ್ರನು ಮಹಾದೇವನ ಕಟಾಕ್ಷವೀಕ್ಷಣೆಯು ಬಿದ್ದೊಡನೆಯೇ ಸ್ಥಾಣುವಿನಂತೆ ನಿಶ್ಚೇಷ್ಟನಾಗಿ ನಿಂತಲ್ಲಿಯೇ ನಿಂತುಬಿಟ್ಟನು. ಮುಂದೆ ಒಂದು ಮಾತು ಕೂಡ ಇಂದ್ರನ ಬಾಯಿಂದ ಹೊರಡದಾಯಿತು. ಕ್ರೀಡೆಯು ಮುಗಿಯಿತು. ಪರಶಿವನು ರೋದಿಸುತ್ತಿದ್ದ ಸ್ತ್ರೀಯನ್ನು ಹತ್ತಿರ ಕರೆದು ಹೇಳಿದನು : "ಇಂದ್ರನನ್ನು ಇತ್ತ ಕರೆದುಕೊಂಡು ಬಾ! ಅವನ ಹೃದಯದಲ್ಲಿ ಅಹಂಕಾರದ ಕುರುಹೇ ಇಲ್ಲದಂತೆ ಮಾಡಬೇಕಾಗಿದೆ."

ಸ್ತ್ರೀಯು ಇಂದ್ರನನ್ನು ಸ್ಪರ್ಶಿಸಿದೊಡನೆಯೇ ಅವನ ಕೈ-ಕಾಲುಗಳು ಕುಸಿದು ನೆಲದ ಮೇಲುರುಳಿದನು. ಅವನು ಬಿದ್ದಿದ್ದ ಸ್ಥಳಕ್ಕೆ ಈಶಾನನೂ ಬಂದು ಇಂದ್ರನನ್ನು ಕುರಿತು ಹೇಳಿದನು : "ಮಹೇಂದ್ರ! ಇನ್ನು ಮುಂದೆ ಹೀಗೆ ವರ್ತಿಸಬೇಡ. ನಿನ್ನ ಬಲ-ವೀರ್ಯಗಳಿಂದ ಈ ಬಂಡೆಯನ್ನು ಪಕ್ಕಕ್ಕುರುಳಿಸು. ಅಲ್ಲೊಂದು ಗುಹೆಯಿದೆ. ಒಳಗೆ ಪ್ರವೇಶಿಸು. ಅಲ್ಲಿ ನಿನ್ನಂತೆಯೇ ಪರಾಕ್ರಮವುಳ್ಳ, ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ ಇನ್ನೂ ಕೆಲವರು ಇಂದ್ರರಿದ್ದಾರೆ."

ಈಶಾನನ ಆಜ್ಞಾನುಸಾರವಾಗಿ ಇಂದ್ರನು ಪುನಶ್ಚೇತನವನ್ನು ಪಡೆದು ಬಂಡೆಯನ್ನುರುಳಿಸಿ ಗುಹೆಯೊಳಗೆ ನೋಡಿದನು. ಇಂದ್ರನ (ತನ್ನ) ಸಮಾನ ರೂಪವನ್ನೇ ಹೊಂದಿದ್ದ ನಾಲ್ವರು ಆ ಗುಹೆಯೊಳಗಿದ್ದರು. ಅವರ ದುರವಸ್ಥೆಯನ್ನು ನೋಡಿ ಇಂದ್ರನು ದುಃಖದಿಂದ ಕೂಡಿದವನಾಗಿ ಆರ್ತನಾದ ಮಾಡಿದನು – "ನಾನೂ ಇವರಂತೆಯೇ ಈ ಗುಹೆಯೊಳಗಿರಬೇಕೇ?"

ಗಿರೀಶನು ಕುಪಿತನಾಗಿ ತೀಕ್ಷ್ಣವಾದ ಕಣ್ಣುಗಳಿಂದ ಇಂದ್ರನನ್ನೇ ನೋಡುತ್ತಾ ಹೇಳಿದನು : "ಶತಕ್ರತುವೇ! ತಡಮಾಡದೇ ಈ ಗುಹೆಯನ್ನು ಪ್ರವೇಶಿಸು. ದುರಹಂಕಾರದಿಂದ ಮದಿಸಿದ ನೀನು ನನ್ನೆದುರಿನಲ್ಲಿಯೇ ನನ್ನನ್ನು ಅವಮಾನಿಸಿದೆಯಲ್ಲವೇ?"

ಇಂದ್ರನಿಗೆ ಬಹಳ ವ್ಯಥೆಯಾಯಿತು. ಪರ್ವತದ ಮೇಲಿರುವ ಅಶ್ವತ್ಥ ವೃಕ್ಷದ ಎಲೆಗಳು ಬಿರುಗಾಳಿಯ ಹೊಡೆತದಿಂದ ತರಗುಟ್ಟುವಂತೆ–ಮಹಾದೇವನ ಮಾತೆಂಬ ಬಿರುಗಾಳಿಯಿಂದ ಇಂದ್ರನು ನಡುಗಿದನು. ವ್ಯಸನಪೀಡಿತನೂ ಆದನು. ಇಂದ್ರನಿಗದು ಅನಿರೀಕ್ಷಿತವಾಗಿ ಒದಗಿದ ಶಾಪ. ತರತರನೆ ನಡುಗುತ್ತಾ ಎರಡು ಕೈಗಳನ್ನೂ ಬಹಳ ಕಷ್ಟದಿಂದ ಜೋಡಿಸಿಕೊಂಡು ಬಹುರೂಪನಾದ, ಉಗ್ರನಾದ ಮಹಾದೇವನನ್ನು ಪ್ರಾರ್ಥಿಸಿದನು : "ಈಶನೇ! ತ್ರಿಭುವನಗಳ ಸೃಷ್ಟಿಕರ್ತನೂ, ಆದಿಪುರುಷನೂ, ರಕ್ಷಕನೂ ನೀನೇ ಆಗಿರುವೆ. ನನ್ನಲ್ಲಿ ಕ್ಷಮೆದೋರು, ದೇವ!"

"ಮಹೇಂದ್ರ! ದುಃಶೀಲರಾಗಿರುವವರು ನನ್ನ ಅನುಗ್ರಹಕ್ಕೆ ಪಾತ್ರರಾಗಲಾರರು. ಈ ಗುಹೆಯಲ್ಲಿರುವ ನಾಲ್ವರೂ ಒಂದಾನೊಂದು ಕಾಲದಲ್ಲಿ ದುರಹಂಕಾರದಿಂದ ವರ್ತಿಸುತ್ತಿದ್ದರು. ಆದುದರಿಂದ ನೀನೂ ಈ ಗುಹೆಯನ್ನು ಪ್ರವೇಶಿಸಿ ಸ್ವಲ್ಪಕಾಲ ಇಲ್ಲಿಯೇ ಇರಬೇಕು. ನಿಮ್ಮೈವರ ವಿಧಿಯೂ ಒಂದೇ ಸಮನಾಗಿರುವುದು. ಮುಂದೆಯೂ ನೀವೈವರೂ ಒಂದೇ ರೀತಿಯ ಫಲವನ್ನು ಅನುಭವಿಸುವಿರಿ. ನೀವೆಲ್ಲರೂ ಮರ್ತ್ಯಲೋಕದಲ್ಲಿ ಜನ್ಮವನ್ನು ಪಡೆದು ಅದ್ಭುತವಾದ ಕಾರ್ಯಗಳನ್ನು ಸಾಧಿಸಿ ಲಕ್ಷೋಪಲಕ್ಷ ದುಷ್ಟರನ್ನು ಸಂಹರಿಸಿ, ಸತ್ಕರ್ಮಗಳನ್ನು ಮಾಡಿ, ಸುಕೃತವನ್ನು ಗಳಿಸಿ ಪುನಃ ನಿಮ್ಮ ಲೋಕಗಳನ್ನು ಸೇರುವಿರಿ. ಇಷ್ಟು ಮಾತ್ರವಲ್ಲದೇ ಇನ್ನೂ ಅನೇಕವಿಧವಾದ ಮಹಾಕಾರ್ಯಗಳನ್ನೆಸಗಿ ಹಿಂದಿರುಗುವಿರಿ."

ಮಹೇಶ್ವರನ ಮಾತುಗಳನ್ನು ಕೇಳಿ ಗುಹೆಯಲ್ಲಿದ್ದ ನಾಲ್ವರು ಇಂದ್ರರೂ ಬದ್ಧಾಂಜಲಿಗಳಾಗಿ ಹೇಳಿದರು :

"ಮಹಾದೇವ! ನಿನ್ನ ಮಾತಿನಂತೆಯೇ ನಡೆಯುವೆವು. ದುರ್ಲಭ ವಾದ ಮೋಕ್ಷದ ಸಾಧನೆಗೂ ಸಾಧಕವಾದ ಮರ್ತ್ಯಲೋಕಕ್ಕೆ ಹೋಗುವೆವು.

ದಿವ್ಯಾಸ್ತ್ರಗಳಿಂದಲೂ, ಶಸ್ತ್ರಗಳಿಂದಲೂ ಮಾನವಲೋಕದಲ್ಲಿರುವ ದುಷ್ಟರನ್ನು ನಾಶಮಾಡಿ ನಮ್ಮ ಲೋಕಕ್ಕೆ ಹಿಂದಿರುಗುವೆವು. ಆದರೆ ನಮ್ಮ ಜನ್ಮಕ್ಕೆ ಯಮಧರ್ಮ, ವಾಯು, ಇಂದ್ರ, ಅಶ್ವಿನೀದೇವತೆಗಳು ಕಾರಣರಾಗಲಿ, ಪಶುಪತೇ!"

ಆ ನಾಲ್ವರೂ ಹೇಳಿದ ಮಾತುಗಳನ್ನು ಕೇಳಿ, ಇಂದ್ರಪದವಿಯಲ್ಲಿದ್ದ ದೇವೇಂದ್ರನು ಮಹೇಶನನ್ನು ಪುನಃ ಪ್ರಾರ್ಥಿಸಿ ಹೇಳಿದನು : "ದೇವದೇವ! ನಾನೇ ಭೂಲೋಕಕ್ಕೆ ಹೋಗುವುದಕ್ಕೆ ಬದಲಾಗಿ ನನ್ನ ಪ್ರತಿಕೃತಿಯೊಂದನ್ನು ನಿರ್ಮಾಣಮಾಡಿ ಇವರೊಡನೆ ಕಳುಹಿಸಿಕೊಡುವೆನು. ಪ್ರತಿಕೃತಿಯಲ್ಲಿಯೂ ನನ್ನಲ್ಲಿರುವ ಸಕಲಶಕ್ತಿಗಳೂ ಅಡಗಿರುವುವು. ಹೀಗೆ ಮಾಡಲು ನಿನ್ನ ಅನುಗ್ರಹವಿರುವುದೇ? ಮಹಾದೇವ!"

ದಯಾಮಯನಾದ ಮಹೇಶನು ಮಹೇಂದ್ರನ ಮಾತಿಗೆ ಸಮ್ಮತಿಸಿ, ಉಳಿದ ಇಂದ್ರರಿಗೂ ಮಹೇಂದ್ರನು ಕೇಳಿಕೊಂಡಂತೆಯೇ ಮಾಡಲು ಆದೇಶವನ್ನಿತ್ತನು. ವಿಶ್ವಭುಕ್, ಭೂತಧಾಮಾ, ಶಿಬಿ, ಶಾಂತಿ, ತೇಜಸ್ವೀ-ಈ ಐದು ಪ್ರತಿಕೃತಿಗಳು ಐದು ಜನ ಇಂದ್ರರ ಶರೀರಗಳಿಂದ ಹೊರಬಂದುವು. ಮಹೇಶ್ವರನ ಆದೇಶದಂತೆ ಸರ್ವಾಂಗಸುಂದರಿಯಾದ ದಿವ್ಯಶ್ರೀಯು ಆ ಐವರಿಗೂ ಸಮಾನಪತ್ನಿಯಾಗಲು ಒಪ್ಪಿದಳು.

ಮಹಾದೇವನು ಆ ಐವರು ಇಂದ್ರರೊಡನೆ ಅಪ್ರಮೇಯನಾದ ಅನಂತನಾದ, ಅವ್ಯಯನಾದ, ಜನ್ಮರಹಿತನಾದ, ಪುರಾಣಪುರುಷನಾದ, ಸನಾತನನಾದ, ಅನಂತಾನಂತರೂಪಿಯಾದ, ವಿಶ್ವರೂಪಿಯಾದ ಶ್ರೀಮನ್ನಾರಾಯಣನ ಬಳಿಗೆ ತೆರಳಿ ವಿಷಯಗಳೆಲ್ಲವನ್ನೂ ನಿವೇದಿಸಿದನು :

ಸ ಚಾಪಿ ತದ್ವ್ಯದಧಾತ್ಸರ್ವಮೇವ
ತತಃ ಸರ್ವೇ ಸಮ್ಬಭೂವುರ್ಧರಣ್ಯಾಮ್ ।

ಸ ಚಾಪಿ ಕೇಶೌ ಹರಿರುದ್ವಬರ್ಹ
ಶುಕ್ಲಮೇಕಮಪರಂ ಚಾಪಿ ಕೃಷ್ಣಮ್ ॥೩೨॥

ತೌ ಚಾಪಿ ಕೇಶೌ ನಿವಿಶೇತಾಂ ಯದೂನಾಂ
ಕುಲೇ ಸ್ತ್ರಿಯೌ ದೇವಕೀಂ ರೋಹಿಣೀಂ ಚ ।

**ತಯೋರೇಕೋ ಬಲದೇವೋ ಬಭೂವ**
**ಯೋಽಸೌ ಶ್ವೇತಸ್ತಸ್ಯ ದೇವಸ್ಯ ಕೇಶಃ।**
**ಕೃಷ್ಣೋ ದ್ವಿತೀಯಃ ಕೇಶವಃ ಸಮ್ಬಭೂವ**
**ಕೇಶೋ ಯೋಽಸೌ ವರ್ಣತಃ ಕೃಷ್ಣ ಉಕ್ತಃ ॥೩೩॥**

ವಿಶ್ವಕ್ಕೇ ಸೂತ್ರಧಾರನಾದ ಮಹಾವಿಷ್ಣುವು ಮಹೇಶನ ಮಾತಿಗೆ ತನ್ನ ಒಪ್ಪಿಗೆಯನ್ನಿತ್ತುದಲ್ಲದೇ, ತನ್ನ ತಲೆಯಿಂದ ಎರಡು ಕೂದಲುಗಳನ್ನು ಕಿತ್ತು ತೆಗೆದನು. ಅದರಲ್ಲಿ ಒಂದು ಕೇಶವು ಬಿಳುಪಾಗಿಯೂ ಮತ್ತೊಂದು ಕಪ್ಪಾಗಿಯೂ ಇದ್ದಿತು. ಶ್ರೀಮನ್ನಾರಾಯಣನ ಇಚ್ಛೆಯಂತೆ ಆ ಎರಡು ಕೇಶಗಳೂ ಯದುವಂಶಕ್ಕೆ ಸೇರಿದ ದೇವಕೀ ಮತ್ತು ರೋಹಿಣಿಯರ ಗರ್ಭಾಂಬುಧಿಗಳನ್ನು ಸೇರಿದುವು. ಪರಮಾತ್ಮನ ಸಕಲಗುಣಗಳನ್ನೂ ಹೊಂದಿದ್ದ ಆ ಕೇಶಗಳೇ ಮುಂದೆ ಬಲರಾಮ-ಶ್ರೀಕೃಷ್ಣರಾಗಿ ಆವಿರ್ಭವಿಸಿದುವು.

ಶ್ರೀಮನ್ನಾರಾಯಣನ ಬಿಳಿಯ ಕೂದಲಿನಿಂದ ರೋಹಿಣಿಯ ಹೊಟ್ಟೆಯಲ್ಲಿ ಬಲರಾಮನು ಹುಟ್ಟಿದನು. ಅವನು ಬಿಳಿಯ ಕೂದಲಿನಂತೆಯೇ ಬಿಳಿಯ ಛಾಯೆಯಿಂದ ಕೂಡಿದ್ದನು. ಎರಡನೆಯ ಕೃಷ್ಣಕೇಶವು ದೇವಕಿಯ ಗರ್ಭಾಂಬುಧಿಯನ್ನು ಸೇರಿದ ಕಾರಣ ಶ್ರೀಕೃಷ್ಣನು ಹುಟ್ಟಿದನು. ಅವನು ತನ್ನ ಹೆಸರಿಗೆ ಅನ್ವರ್ಥವಾಗಿ ಶ್ರೀಮನ್ನಾರಾಯಣನಿತ್ತ ಕೃಷ್ಣಕೇಶಕ್ಕೆ ಅನುರೂಪವಾಗಿ ಕಪ್ಪಾಗಿಯೇ ಹುಟ್ಟಿದನು.

ಹಿಮವತ್ಪರ್ವತದ ಗುಹೆಯಲ್ಲಿದ್ದ ಆ ಐವರು ಇಂದ್ರರೇ ಇಂದು ಪಂಚಪಾಂಡವರಾಗಿ ಅವತರಿಸಿರುವರು. ಅವರಲ್ಲಿ ಮೂರನೆಯವನಾದ ಸವ್ಯಸಾಚಿಯು ಮಹೇಂದ್ರನ ಪ್ರತಿಕೃತಿಯಾಗಿರುವನು. ಸ್ವರ್ಗಶ್ರೀಯೇ ದ್ರೌಪದಿಯಾಗಿ ಅವತರಿಸಿರುವಳು. ಚಂದ್ರ-ಸೂರ್ಯರ ಕಾಂತಿಗಳಿಗಿಂತಲೂ ಮಿಗಿಲಾದ ಕಾಂತಿಯುಳ್ಳ, ಸುಮಾರು ಎರಡು ಹರಿದಾರಿಗಳ ವರೆಗೂ ತನ್ನ ಶರೀರದ ಸೌಗಂಧವನ್ನು ಬೀರುವ ಆ ಸ್ತ್ರೀರತ್ನವು ಮನುಷ್ಯ ಯೋನಿಯಲ್ಲಿ ಜನ್ಮಪಡೆಯಲು ಇಚ್ಛಿಸದೇ ಯಜ್ಞೇಶ್ವರನಿಂದ ಜನ್ಮಪಡೆದಳು.

ದ್ರುಪದರಾಜ! ನಿನ್ನ ಮೇಲಿನ ಅಪಾರವಾದ ಪ್ರೀತಿಯಿಂದ ನಾನು

ನಿನಗೆ ಪರಮಾದ್ಭುತವಾದ ಮತ್ತೊಂದು ವರವನ್ನೂ ಕೊಡುವೆನು. ಈ ವರದ ಫಲವಾಗಿ ನೀನು ಸ್ವಲ್ಪ ಹೊತ್ತಿನವರೆಗೆ ದಿವ್ಯದೃಷ್ಟಿಯನ್ನು ಪಡೆಯುವೆ. ಆ ದಿವ್ಯದೃಷ್ಟಿಯಿಂದ ಕುಂತಿಯ ಮಕ್ಕಳನ್ನು ಪುಣ್ಯತಮವಾದ ಮತ್ತು ದಿವ್ಯವಾದ ಅವರ ಪೂರ್ವದೇಹಗಳಲ್ಲಿಯೇ ಕಾಣುವೆ."

ಜನಮೇಜಯ! ದ್ರುಪದನಿಗೆ ಹೀಗೆ ಹೇಳಿದನಂತರ ಉದಾರಕರ್ಮಗಳನ್ನು ಮಾಡುವುದರಲ್ಲಿ ಪರಮಶ್ರೇಷ್ಠರಾದ, ಶುಚೀಭೂತರಾದ, ವಿಪ್ರಶ್ರೇಷ್ಠರಾದ ವ್ಯಾಸರು ತಮ್ಮ ತಪಃಪ್ರಭಾವದಿಂದ ದ್ರುಪದರಾಜನಿಗೆ ದಿವ್ಯದೃಷ್ಟಿಯನ್ನು ದಯಪಾಲಿಸಿದರು. ದ್ರುಪದರಾಜನು ಆ ದಿವ್ಯದೃಷ್ಟಿಯಿಂದ ತಮ್ಮ ಹಿಂದಿನ ದೇಹಗಳಿಂದ ಪ್ರಕಾಶಿಸುತ್ತಿದ್ದ ಪಾಂಡವರನ್ನು ಯಥಾವತ್ತಾಗಿ ಸಂದರ್ಶಿಸಿದನು.

ದಿವ್ಯವಾದ ವಸ್ತ್ರಗಳಿಂದಲೂ, ಪರಿಮಳಯುಕ್ತವಾದ ಸುಗಂಧದ್ರವ್ಯ ಗಳಿಂದಲೂ, ಶ್ರೇಷ್ಠವಾದ ದೇವಸುಮಮಾಲೆಗಳಿಂದಲೂ ಅಲಂಕೃತರಾಗಿ ಬಹಳ ಶೋಭಾಯಮಾನರಾಗಿ ಕಾಣುತ್ತಿದ್ದ ಪಾಂಡವರನ್ನು ದ್ರುಪದನು ಮುಕ್ಕಣ್ಣರನ್ನಾಗಿಯೂ, ವಸುಗಳನ್ನಾಗಿಯೂ, ರುದ್ರರನ್ನಾಗಿಯೂ, ಆದಿತ್ಯ ರನ್ನಾಗಿಯೂ ಮತ್ತು ಸಕಲಗುಣಗಳಿಂದ ವಿಶಿಷ್ಟರಾದವರನ್ನಾಗಿಯೂ ಭಾವಿಸಿದನು.

ಅತ್ಯಂತಸುಂದರಕಾಯರಾಗಿದ್ದ ನಾಲ್ವರು ಹಿಂದಿನ ಇಂದ್ರರನ್ನೂ, ಇಂದ್ರರೂಪನಾದ ಶಕ್ರನ ಮಗನನ್ನೂ ನೋಡಿ ದ್ರುಪದರಾಜನು ವಿಸ್ಮಿತನೂ, ಪರಮಪ್ರೀತನೂ ಆದನು. ಇಂದ್ರರನ್ನು ನೋಡಿದನಂತರದಲ್ಲಿ ದ್ರುಪದನು ಅವರ ಸಮೀಪದಲ್ಲಿದ್ದ ಅಪ್ರಮೇಯಳಾದ, ದೇವಮಾಯೆಯಾದ, ಕಡುಚೆಲುವೆಯಾದ, ಸರ್ವಶ್ರೇಷ್ಠಳಾದ, ಚಂದ್ರನಂತೆ ಮತ್ತು ಯಜ್ಞೇಶ್ವರನಂತೆ ಪ್ರಕಾಶಮಾನಳಾಗಿದ್ದ ದೇವಕನ್ಯೆಯನ್ನೂ ನೋಡಿದನು. ರೂಪ, ತೇಜಸ್ಸು ಮತ್ತು ಯಶಸ್ಸುಗಳಿಂದ ಅವಳು ಪಂಚೇಂದ್ರರಿಗೆ ಅನುರೂಪಳಾದ ಪತ್ನಿಯೆಂದು ದ್ರಪದನು ಭಾವಿಸಿ ಸಂತುಷ್ಟನಾದನು.

ವ್ಯಾಸರಿತ್ತ ದಿವ್ಯದೃಷ್ಟಿಯಿಂದ ಮಹಾದ್ಭುತವಾದ ರೂಪರಾಶಿಯಿಂದ ಕೂಡಿದ್ದ ಪಂಚೇಂದ್ರರನ್ನೂ, ಅವರಿಗೆ ಅನುರೂಪಳಾದ ದೇವಕನ್ಯೆಯನ್ನೂ

ನೋಡಿದನಂತರ ದ್ರುಪದನು ಸತ್ಯವತೀಪುತ್ರರಾದ ವ್ಯಾಸರ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಹೇಳಿದನು :

"ತಾಪಸಶ್ರೇಷ್ಠರಾದ ತಮ್ಮಲ್ಲಿ ಇಂತಹ ಪರಮಾದ್ಭುತವಾದ ಶಕ್ತಿಯಿರುವುದರಲ್ಲಿ ಆಶ್ಚರ್ಯವೇನಿಲ್ಲ."

ವ್ಯಾಸರು ಮುಗುಳ್ನಗೆಯನ್ನು ಬೀರುತ್ತಾ ದ್ರುಪದನನ್ನು ಕುರಿತು ಹೇಳಿದರು : "ದ್ರೌಪದಿಯು ಐವರಿಗೂ ಪತ್ನಿಯಾಗಲು ಮತ್ತೊಂದು ಕಾರಣವೂ ಇರುವುದು, ದ್ರುಪದ! ತಪೋವನದಲ್ಲಿದ್ದ ಒಬ್ಬಾನೊಬ್ಬ ಋಷಿಗೆ ಓರ್ವ ಪುತ್ರಿಯಿದ್ದಳು. ಅವಳು ಸರ್ವಾಂಗಸುಂದರಿಯಾಗಿದ್ದರೂ ಬಹಳ ದಿನಗಳವರೆಗೆ ಯಾರೊಬ್ಬರೂ ಅವಳ ಕೈಹಿಡಿಯಲು ಮುಂದೆ ಬರಲಿಲ್ಲ. ಸದ್ಗುಣಸಂಪನ್ನನಾದ ಪತಿಯನ್ನು ಪಡೆಯಬೇಕೆಂಬ ಏಕೈಕವಾದ ಅಭಿಲಾಷೆಯಿಂದ ಋಷಿಪುತ್ರಿಯು ಉಗ್ರವಾದ ತಪಸ್ಸನ್ನು ಆಚರಿಸಿ ಮಹಾದೇವನನ್ನು ಒಲಿಸಿಕೊಂಡಳು. ಅವಳ ಭಕ್ತಿಗೂ, ತಪಸ್ಸಿಗೂ ಸುಪ್ರೀತನಾದ ಮಹಾದೇವನು ಇಷ್ಟವಾದ ವರವನ್ನು ಕೇಳಿಕೊಳ್ಳುವಂತೆ ತರುಣಿಗೆ ನಿರ್ದೇಶಿಸಿದನು. ಮೋಹನಾಂಗಿಯು ಯೋಗ್ಯಪತಿಯು ಸಿಕ್ಕಬೇಕೆಂಬ ಆತುರದಿಂದ – 'ಸರ್ವಗುಣೋಪೇತನಾದ ಪತಿಯನ್ನಿಚ್ಛಿಸುತ್ತೇನೆ' – ಎಂದು ಮಹೇಶನನ್ನು ಪುನಃ ಪುನಃ ಕೇಳಿಕೊಂಡಳು.

ದೇವೇಶನು ಪ್ರೀತಾಂತರಂಗನಾಗಿ ಕನ್ಯೆಯು ಕೇಳಿದ ವರವನ್ನು ದಯಪಾಲಿಸಿದನು.

'ಪಞ್ಚ ತೇ ಪತಯೋ ಭದ್ರೇ ಭವಿಷ್ಯನ್ತಿ'

'ಮಂಗಳಾಂಗಿಯೇ! ನಿನಗೆ ಐವರು ಗಂಡಂದಿರಾಗುತ್ತಾರೆ'– ಎಂದು ಶಂಕರನು ಹೇಳಿದನು. ಆ ಕನ್ಯೆಯು ಚಕಿತಳಾಗಿ ದೇವದೇವನಾದ ಶಂಕರನನ್ನು ಪ್ರಸನ್ನಗೊಳಿಸುತ್ತಾ ಪುನಃ ಪ್ರಾರ್ಥಿಸಿದಳು :

**ಏಕಂ ಪತಿಂ ಗುಣೋಪೇತಂ ತ್ವತ್ತೋಽರ್ಹಾಮೀತಿ ಶಂಕರ ॥೪೮॥**

"ಶಂಕರ! ಸಕಲಗುಣೋಪೇತನಾದ ಒಬ್ಬನೇ ಒಬ್ಬ ಪತಿಯನ್ನು ನಾನು ನಿನ್ನಿಂದ ಪಡೆಯಲು ಅಭಿಲಾಷಿಸುತ್ತೇನೆ."

ದೇವದೇವನಾದ ಪ್ರೀತಾತ್ಮನಾದ ಶಂಕರನು ಶುಭಪ್ರದವಾದ ಈ ಮಾತುಗಳನ್ನು ಹೇಳಿದನು :

**ಪಞ್ಚಕೃತ್ವಸ್ತ್ವಯೋಕ್ತೋऽಹಂ ಪತಿಂ ದೇಹೀತಿ ವೈ ಪುನಃ।**
**ತತ್ತಥಾ ಭವಿತಾ ಭದ್ರೇ ವಚಸ್ತದ್ಭದ್ರಮಸ್ತು ತೇ।**
**ದೇಹಮನ್ಯಂ ಗತಾಯಾಸ್ತೇ ಸರ್ವಮೇತದ್ಭವಿಷ್ಯತಿ ॥೫೦॥**

"ಭದ್ರೇ! ನೀನು ಐದು ಬಾರಿ–'ಸರ್ವಗುಣೋಪೇತನಾದ ಪತಿಯನ್ನು ದಯಪಾಲಿಸು'–ಎಂದು ಯಾಚಿಸಿದೆ. ನಿನ್ನ ಪ್ರಾರ್ಥನೆಯಂತೆಯೇ ನಿನಗೆ ಐವರು ಪತಿಗಳಾಗುವರು. ಆದರೆ ಈ ವರದ ಫಲವು ಮತ್ತೊಂದು ದೇಹವನ್ನು ಪಡೆದಾಗಲೇ ನಿನಗೆ ಸಿದ್ಧಿಸುವುದು"–ಎಂದು ಹೇಳಿ ಮಹಾದೇವನು ಅದೃಶ್ಯನಾದನು.

ದ್ರುಪದ! ಆ ಋಷಿಪುತ್ರಿಯೇ ಇಂದು ದ್ರೌಪದಿಯಾಗಿರುವಳು. ಸ್ವರ್ಗಶ್ರೀಯು ಋಷಿಪುತ್ರಿಯಾಗಿ ಜನ್ಮತಾಳಿ ಪಾಂಡವರ ಪತ್ನಿಯಾಗಲು ಅನೇಕವರ್ಷಗಳಕಾಲ ತಪಸ್ಸನ್ನು ಮಾಡಿ ತತ್ಫಲವಾಗಿ ಈಗ 'ಕೃಷ್ಣಾ' ಎಂಬ ಅಭಿಧಾನದಿಂದ ಯಜ್ಞಕುಂಡದಲ್ಲಿ ಹುಟ್ಟಿ ನಿನ್ನ ಮಗಳೆನಿಸಿಕೊಂಡಿರುವಳು. ದೇವಾದಿದೇವತೆಗಳಿಂದಲೂ ಪರಿಚರ್ಯೆಯನ್ನು ಪಡೆಯುತ್ತಲಿದ್ದ ಸ್ವರ್ಗಶ್ರೀಯು ಸ್ವೇಚ್ಛೆಯಿಂದಲೇ ಪಂಚಪಾಂಡವರ ಪತ್ನಿಯಾಗಲು ಇಲ್ಲಿ ಅವತರಿಸಿರುವಳು. ದೇವಪತ್ನಿಯಾಗಿದ್ದ ಇವಳನ್ನು ದೇವಾಂಶಸಂಭೂತರಾದ ಪಾಂಡವರ ಪತ್ನಿಯಾಗಲು ಸ್ವಯಂ ಚತುರ್ಮುಖನೇ ಸೃಷ್ಟಿಸಿರುವನು.

ಮಹಾರಾಜ! ದೇವರಹಸ್ಯವನ್ನು ನಿನಗೆ ವಿಶದವಾಗಿ ತಿಳಿಸಿರುವೆನು. ಇವರ ನಿಜಸ್ವರೂಪಗಳನ್ನೂ ತೋರಿಸಿಕೊಟ್ಟಿರುವೆನು. ಮುಂದೆ ಇವೆಲ್ಲವನ್ನೂ ಕೂಲಂಕಷವಾಗಿ ಪರ್ಯಾಲೋಚಿಸಿ ಸೂಕ್ತತೋರಿದಂತೆ ಮಾಡಬಹುದಾಗಿದೆ."

೧೯೭ನೆಯ ಅಧ್ಯಾಯವು ಮುಗಿಯಿತು.

೧೯೮ನೆಯ ಅಧ್ಯಾಯ ವೈವಾಹಿಕಪರ್ವ (ಮುಂದುವರಿದಿದೆ.)

## ಪಾಂಡವರೈವರೊಡನೆ ದ್ರೌಪದಿಯ ವಿವಾಹ

ಜನಮೇಜಯ! ದ್ರುಪದನು ಕೈಗಳೆರಡನ್ನೂ ಜೋಡಿಸಿ ಹೇಳಿದನು:

"ಮಹರ್ಷಿಗಳೇ! ನಿಮ್ಮಿಂದ ಈ ಮಹಾನುಭಾವರ ಪೂರ್ವವೃತ್ತಾಂತಗಳನ್ನು ತಿಳಿಯುವ ಮೊದಲು ನಾನು ದ್ರೌಪದಿಯನ್ನು ಐವರಿಗೂ ಕೊಟ್ಟು ಮದುವೆಮಾಡುವುದು ಅಧರ್ಮವೆಂದೂ, ಅನಾಚಾರವೆಂದೂ ಭಾವಿಸಿದ್ದೆನು. ತಮ್ಮ ಅಮೃತರೂಪವಾದ ವಾಣಿಯನ್ನು ಕೇಳಿದನಂತರ ಈ ವಿಷಯದಲ್ಲಿ ಔದಾಸೀನ್ಯದಿಂದ ಇರಲಾರೆನು. ಏಕೆಂದರೆ: ಎಲ್ಲವೂ ವಿಧಿನಿಯಮದಂತೆಯೇ ನಡೆಯುವುದು. ವಿಧಿಯ ಗಂಟನ್ನು ಬಿಡಿಸಲು ಯಾರಿಂದಲೂ ಸಾಧ್ಯವಾಗಲಾರದು. ನಮ್ಮ ಪ್ರಯತ್ನಾನುಗುಣವಾದ ಫಲವೇ ಸಿಕ್ಕುವುದೆಂದು ತಿಳಿಯುವುದು ಕೇವಲ ಭ್ರಾಂತಿಯೇ ಸರಿ. ನನ್ನ ಮಗಳಿಗೆ ಒಬ್ಬ ಗಂಡನನ್ನು ಆರಿಸಬೇಕೆಂದು ಮಾಡಿದ ಕಾರ್ಯದ ಫಲವಾಗಿ ಐವರು ಪತಿಗಳು ಸಿಕ್ಕಿದರು.

ತಾವು ಹೇಳಿದಂತೆಯೇ ಕೃಷ್ಣೆಯು ಹಿಂದಿನ ಜನ್ಮದಲ್ಲಿ– 'ಪತಿಂ ದೇಹಿ, ಪತಿಂ ದೇಹಿ' – ಎಂದು ಐದು ಬಾರಿ ಪರಶಿವನನ್ನು ಪ್ರಾರ್ಥಿಸಿದಳು. ಪರಶಿವನೂ ಅವಳ ಪ್ರಾರ್ಥನೆಯಂತೆ ಐವರು ಪತಿಯರು ಸಿಕ್ಕುವರೆಂದು ಅನುಗ್ರಹಿಸಿದನು. ದ್ರೌಪದಿಯ ವಿಷಯದಲ್ಲಿ ಶ್ರೇಷ್ಠವಾದ ವರವಾವುದೆಂಬುದನ್ನು ಶಂಕರನು ತಿಳಿದೇ ದಯಪಾಲಿಸಿದ್ದಾನೆ. ಶಂಕರನೇ ಇವಳಿಗೆ ಪಂಚಪತಿಗಳೆಂದು ನಿಶ್ಚಯಿಸಿದಾಗ ಇದು ಧರ್ಮವೋ-ಅಧರ್ಮವೋ ಎಂದು ವಿವೇಚಿಸುವ ಸಂಭವವೇ ಇರುವುದಿಲ್ಲ. ಈ ವಿಷಯದಲ್ಲಿ ನನ್ನದೇನೂ ಅಪರಾಧವಾಗುವುದಿಲ್ಲ. ಈ ಐವರೂ ಸಂತೋಷಚಿತ್ತರಾಗಿ ವಿಧಿವತ್ತಾಗಿ ನನ್ನ ಮಗಳ ಕೈಹಿಡಿಯಲಿ. ಬ್ರಹ್ಮನಂತೂ ಇವಳಿಗೆ ಐವರು ಪತಿಗಳೆಂಬುದನ್ನು ಮೊದಲೇ ನಿರ್ಧರಿಸಿಬಿಟ್ಟಿದ್ದಾನೆ."

ದ್ರುಪದನ ಮಾತನ್ನು ಕೇಳಿ ವ್ಯಾಸರು ಸಂತುಷ್ಟರಾಗಿ ಏಕಾಂತಗೃಹದಿಂದ ಹೊರಗೆ ಬಂದು ಯುಧಿಷ್ಠಿರನನ್ನು ಕುರಿತು ಹೇಳಿದರು : "ಯುಧಿಷ್ಠಿರ! ಇಂದು ಶುಭದಿನವಾಗಿದೆ. ಚಂದ್ರನು ಪೋಷಣಕಾರಕವಾದ ಪುಷ್ಯನಕ್ಷತ್ರಕ್ಕೆ ಪ್ರವೇಶಿಸುತ್ತಾನೆ. ಇಂದು ನೀನು ಕೃಷ್ಣೆಯ ಪಾಣಿಗ್ರಹಣವನ್ನು

ಮಾಡು. ನೀನು ಪಾಣಿಗ್ರಹಣಮಾಡಿದನಂತರ ನಿನ್ನ ಅನುಜರೂ ಅನುಕ್ರಮವಾಗಿ ಇವಳನ್ನು ಪಾಣಿಗ್ರಹಣಮಾಡಿಕೊಳ್ಳಲಿ."

ದ್ರುಪದನೂ, ಧೃಷ್ಟದ್ಯುಮ್ನನೂ ವಿಧ್ಯುಕ್ತವಾದ ವಿವಾಹಕ್ಕೆ ಬೇಕಾಗುವ ಸಕಲಸಂಭಾರಗಳನ್ನೂ ಒಡನೆಯೇ ಸಿದ್ಧಪಡಿಸಿದರು. ದ್ರುಪದನು ತನ್ನ ಐವರು ಅಳಿಯಂದಿರಿಗೂ ಬಳುವಳಿಕೊಡಲು ಅನೇಕವಿಧವಾದ ಅನರ್ಘ ವಸ್ತುಗಳನ್ನು ಸಿದ್ಧಪಡಿಸಿದನು. ಪುರೋಹಿತರು ಸ್ವಸ್ತಿವಾಚನವನ್ನು ಮಾಡಿದರು. ಮಂಗಳಸ್ನಾನಮಾಡಿಸಿ, ನವರತ್ನಗಳ ಹಾರಗಳಿಂದಲೂ, ಮುತ್ತಿನ ಹಾರಗಳಿಂದಲೂ, ಪೀತಾಂಬರಗಳಿಂದಲೂ ಅಲಂಕರಿಸಿ, ಅವಳನ್ನು ಸುಮಂಗಲಿಯರೊಡನೆ ವಿವಾಹಮಂಟಪಕ್ಕೆ ದ್ರುಪದನು ಕರೆತಂದನು. ರಾಜನ ಬಂಧು-ಬಳಗದವರೂ, ದೇಶದ ಉನ್ನತಾಧಿಕಾರಿಗಳೂ, ಬ್ರಾಹ್ಮಣರೂ ಮತ್ತು ಸಕಲಪ್ರಜೆಗಳೂ ರಾಜಕುಮಾರಿಯ ವಿವಾಹವನ್ನು ನೋಡಲು ಸಾಲು-ಸಾಲಾಗಿ ಅರಮನೆಗೆ ಬಂದು, ತಮಗಾಗಿ ಸಿದ್ಧಪಡಿಸಿದ್ದ ಆಸನಗಳಲ್ಲಿ ಕುಳಿತರು. ಅರಮನೆಯು ಬಹಳ ಸುಂದರವಾಗಿ ಅಲಂಕರಿಸಲ್ಪಟ್ಟಿದ್ದಿತು. ತಾವರೆ, ಕನ್ನೈದಿಲೆ ಮುಂತಾದ ಪುಷ್ಪಗಳ ಮಾಲೆಗಳನ್ನು ತೋರಣರೂಪದಲ್ಲಿ ಕಟ್ಟಿದ್ದರು.

ಅರಮನೆಯ ಸೈನಿಕರು ಸಾಲಾಗಿ ಶಿಸ್ತಿನಿಂದ ನಿಂತಿದ್ದರು. ಮುತ್ತಿನ ಮತ್ತು ವಜ್ರ-ವೈಡೂರ್ಯಗಳ ಗುಚ್ಛವನ್ನು ಅಲ್ಲಲ್ಲಿ ಕಟ್ಟಿ ಅರಮನೆಯನ್ನು ಅಲಂಕರಿಸಲಾಗಿತ್ತು. ಹೀಗೆ ಅಲಂಕೃತವಾದ ಅರಮನೆಯು ಸ್ವಚ್ಛವಾಗಿರುವ ನಕ್ಷತ್ರಗಳಿಂದ ಕೂಡಿರುವ ಆಕಾಶದಂತೆಯೇ ಶೋಭಿಸುತ್ತಿದ್ದಿತು.

ವ್ಯಾಸರ ಅನುಜ್ಞೆಯನ್ನು ಪಡೆದು ಪಾಂಡವರೈವರೂ ಮಂಗಳಸ್ನಾನ ಮಾಡಿ, ಕರ್ಣಾಭರಣಗಳನ್ನು ಧರಿಸಿ, ಅನರ್ಘವಾದ ವಸ್ತ್ರಗಳನ್ನುಟ್ಟು, ಗಂಧವನ್ನು ಲೇಪನಮಾಡಿಕೊಂಡವರಾಗಿ, ವಿವಾಹಪೂರ್ವದ ವಿಧ್ಯುಕ್ತವಾದ ಕರ್ಮಗಳೆಲ್ಲವನ್ನೂ ಮುಗಿಸಿಕೊಂಡು, ಯಜ್ಞೇಶ್ವರನಿಗೆ ಸಮಾನವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ ಧೌಮ್ಯರೊಡನೆ–ಮದಿಸಿದ ವೃಷಭಗಳು ಗೋಶಾಲೆಯನ್ನು ಪ್ರವೇಶಿಸುವಂತೆ–ಸಂತುಷ್ಟಹೃದಯರಾಗಿ ವಿವಾಹ ಮಂಟಪವನ್ನು ಪ್ರವೇಶಿಸಿದರು.

ವೇದ-ವೇದಾಂಗಪಾರಂಗತರಾದ ಧೌಮ್ಯರು ಯಥಾವಿಧಿಯಾಗಿ ವಿವಾಹಾಗ್ನಿಯನ್ನು ಪ್ರತಿಷ್ಠಾಪನೆಮಾಡಿ, ಮಂತ್ರಪುರಸ್ಸರವಾಗಿ ಹೋಮ ಮಾಡಿದನಂತರ ಯುಧಿಷ್ಠಿರನನ್ನು ಕರೆದು ದ್ರೌಪದಿಯೊಡನೆ ಕುಳ್ಳಿರಿಸಿ ವಿವಾಹಸಂಬಂಧವಾದ ಹೋಮವನ್ನು ಅವನಿಂದ ಮಾಡಿಸಿ, ದ್ರೌಪದಿಯ ಪಾಣಿಗ್ರಹಣವನ್ನು ಮಾಡಿಸಿ, ಯಜ್ಞೇಶ್ವರನ ಪ್ರದಕ್ಷಿಣೆಗಳೊಡನೆ ವಿವಾಹಕರ್ಮವನ್ನು ಪರಿಸಮಾಪ್ತಿಗೊಳಿಸಿ ಯುಧಿಷ್ಠಿರನ ಅಪ್ಪಣೆಯನ್ನು ಪಡೆದು ರಾಜಗೃಹದಿಂದ ಹೊರಟರು.

ಮರುದಿನ ಭೀಮನೂ ಧೌಮ್ಯರ ಆದೇಶದಂತೆ ಮಂತ್ರಪುರಸ್ಸರವಾಗಿ ಅಗ್ನಿಯ ಸಮ್ಮುಖದಲ್ಲಿ ದ್ರೌಪದಿಯನ್ನು ಪಾಣಿಗ್ರಹಣಮಾಡಿಕೊಂಡನು. ಹೀಗೆಯೇ ಅರ್ಜುನ-ನಕುಲ-ಸಹದೇವರೂ ಒಂದೊಂದು ದಿನ ಒಬ್ಬೊಬ್ಬರು ದ್ರೌಪದಿಯನ್ನು ಪಾಣಿಗ್ರಹಣಮಾಡಿಕೊಂಡರು.

ಜನಮೇಜಯ! ಆ ಸಂದರ್ಭದಲ್ಲಿ ನಡೆದ ಒಂದು ಅದ್ಭುತವನ್ನು ದೇವರ್ಷಿಗಳೊಬ್ಬರಿಂದ ತಿಳಿದೆನು. ಮೊದಲನೆಯ ದಿನ ಯುಧಿಷ್ಠಿರ ನೊಡನೆ ವಿವಾಹಿತೆಯಾದ ದ್ರೌಪದಿಯು ಮರುದಿನ ಭೀಮನೊಡನೆ ವಿವಾಹವಾಗುವ ವೇಳೆಗೆ ಪುನಃ ಕನ್ಯಾವಸ್ಥೆಯನ್ನು ಪಡೆದಿದ್ದಳಂತೆ. ಐವರನ್ನು ವಿವಾಹವಾಗುವ ಸಮಯದಲ್ಲಿಯೂ ವಿವಾಹಪೂರ್ವದಲ್ಲಿ ಮಹಾನುಭಾವ ಳಾದ ದ್ರೌಪದಿಗೆ ಕನ್ಯಾವಸ್ಥೆಯೇ ಉಂಟಾಗುತ್ತಿತ್ತೆಂದು ವಿವಾಹಕ್ಕೆ ತೆರಳಿದ್ದ ದೇವರ್ಷಿಗಳೊಬ್ಬರು ನನಗೆ ತಿಳಿಸಿದರು. ಇದು ಅತ್ಯದ್ಭುತವಲ್ಲವೇ?"

ವೈಶಂಪಾಯನರು ಮುಂದುವರಿದು ಹೇಳಿದರು :

"ಐವರೂ ದ್ರೌಪದಿಯನ್ನು ಪಾಣಿಗ್ರಹಣಮಾಡಿಕೊಂಡನಂತರ ದ್ರುಪದನು ಐವರಿಗೂ ಅತುಲೈಶ್ವರ್ಯವನ್ನು ಕೊಟ್ಟನು. ಒಬ್ಬೊಬ್ಬರಿಗೂ ಸ್ವರ್ಣಮಾಲೆಗಳಿಂದ ಅಲಂಕೃತವಾಗಿದ್ದ ನೂರು ನೂರು ರಥಗಳನ್ನು ಕೊಟ್ಟನು. ಪ್ರತಿಯೊಂದು ರಥವೂ ಚಿನ್ನದ ಕಡಿವಾಣಗಳನ್ನು ಧರಿಸಿದ್ದ ನಾಲ್ಕು-ನಾಲ್ಕು ಕುದುರೆಗಳಿಂದ ಸಜ್ಜಾಗಿದ್ದಿತು. ಪದ್ಮವೇ ಮೊದಲಾದ ಒಳ್ಳೆಯ ಲಕ್ಷಣಗಳನ್ನು ಹೊಂದಿದ್ದ, ಪರ್ವತೋಪಮಗಳಾಗಿದ್ದ, ಸ್ವರ್ಣಮಯವಾದ ಅಂಬಾರಿಗಳನ್ನು ಹೊಂದಿದ್ದ, ನೂರು ನೂರು ಆನೆಗಳನ್ನು ಒಬ್ಬೊಬ್ಬರಿಗೂ ಕೊಟ್ಟನು.

ಒಬ್ಬೊಬ್ಬರ ಸೇವೆಗೆಂದು ಪ್ರೌಢೆಯರಾಗಿದ್ದ, ಸರ್ವಾಲಂಕಾರಭೂಷಿತೆಯರಾಗಿದ್ದ ಮೂರು ನೂರು ಮಂದಿ ದಾಸಿಯರನ್ನೂ ಕಳುಹಿಸಿದನು. ಸೋಮಕವಂಶದಲ್ಲಿ ಜನಿಸಿದ ಮಹಾನುಭಾವನಾದ ದ್ರುಪದನು ಶುಭದರ್ಶನರಾದ ಪಾಂಡವರೈವರಿಗೂ ಅಗ್ನಿಸಾಕ್ಷಿಕವಾಗಿ ಕನ್ಯಾದಾನಮಾಡಿ ಧನ-ಕನಕ-ವಸ್ತ್ರ-ವಾಹನಾದಿಗಳನ್ನೂ ಪ್ರಭಾಯುಕ್ತವಾದ ದಿವ್ಯಾಭರಣಗಳನ್ನೂ ಅಪಾರಸಂಖ್ಯೆಯಲ್ಲಿ ಕೊಟ್ಟನು. ದ್ರೌಪದಿಯನ್ನು ವಿವಾಹವಾದ ನಂತರದಲ್ಲಿ ಇಂದ್ರಸಮಾನವರ್ಚಸ್ವಿಗಳಾದ, ಮಹಾಬಲರಾದ ಪಾಂಡವರು ಅಮೂಲ್ಯವಾದ ರತ್ನರಾಶಿಯೊಡನೆ ಶ್ರೀಸ್ವರೂಪಳಾದ ದ್ರುಪದರಾಜನ ಕುವರಿಯನ್ನು ಪಡೆದುಕೊಂಡವರಾಗಿ ದ್ರುಪದರಾಜನ ಪಟ್ಟಣದಲ್ಲಿಯೇ ಸುಖ-ಸಂತೋಷಗಳಿಂದ ವಿಹರಿಸುತ್ತಿದ್ದರು.

೧೯೮ನೆಯ ಅಧ್ಯಾಯವು ಮುಗಿಯಿತು.

೧೯೯ನೆಯ ಅಧ್ಯಾಯ ವೈವಾಹಿಕಪರ್ವ (ಮುಂದುವರಿದಿದೆ.)

## ದ್ರೌಪದಿಗೆ ಕುಂತಿಯ ಉಪದೇಶ: ಶ್ರೀಕೃಷ್ಣನು ಪಾಂಡವರಿಗೆ ಬಹುಮಾನಗಳನ್ನು ಕಳುಹಿಸಿದುದು

ಜನಮೇಜಯ! ಪಾಂಡವರೊಡನೆ ಬಾಂಧವ್ಯವುಂಟಾದ ಮೇಲೆ ದ್ರುಪದನಿಗೆ ಶತ್ರುಬಾಧೆಯ ಭಯವಿರಲಿಲ್ಲ. ದೇವತೆಗಳಿಗೂ ಕೂಡ ಹೆದರುವ ಕಾರಣವಿರಲಿಲ್ಲ.

ದ್ರುಪದನ ಅಂತಃಪುರದ ಸ್ತ್ರೀಯರೆಲ್ಲರೂ ಕುಂತಿಯ ಬಳಿಗೆ ಬಂದು ಮಹಾಮಾತೆಯ ಕಾಲುಮುಟ್ಟಿ ನಮಸ್ಕರಿಸಿ ತಮ್ಮ ತಮ್ಮ ಪರಿಚಯವನ್ನು ಕುಂತಿಗೆ ಮಾಡಿಕೊಟ್ಟರು. ಕುಂತಿಯೂ ಅವರೆಲ್ಲರ ತಲೆಗಳನ್ನು ಮುಟ್ಟಿ ಆಶೀರ್ವದಿಸುತ್ತಿದ್ದಳು. ಪಾಂಡವರೈವರ ಪತ್ನಿಯಾದ ಕೃಷ್ಣೆಯು ಪೀತಾಂಬರವನ್ನು ಧರಿಸಿದವಳಾಗಿ ವಿವಾಹಕಂಕಣದೊಡನೆ ಅತ್ತೆಯ ಬಳಿಗೆ ಬಂದು ಕಾಲುಮುಟ್ಟಿ ನಮಸ್ಕರಿಸಿ, ಕೈಜೋಡಿಸಿ ನಿಂತಳು. ಸೌಂದರ್ಯದ ಖನಿಯಂತಿದ್ದ, ಸರ್ವಲಕ್ಷಣಸಂಪನ್ನೆಯಾದ, ಸುಶೀಲೆಯಾದ, ಸದಾಚಾರಸಂಪನ್ನೆಯಾದ ದ್ರೌಪದಿಯನ್ನು ಪ್ರೇಮಪುರಸ್ಸರವಾಗಿ ಹತ್ತಿರ ಕುಳ್ಳಿರಿಸಿಕೊಂಡು ಕುಂತಿಯು ಆಶೀರ್ವದಿಸಿದಳು :

**ಯಥೇನ್ದ್ರಾಣೀ ಹರಿಹಯೇ ಸ್ವಾಹಾ ಚೈವ ವಿಭಾವಸೌ।**
**ರೋಹಿಣೀ ಚ ಯಥಾ ಸೋಮೇ ದಮಯನ್ತೀ ಯಥಾ ನಲೇ ॥೫॥**
**ಯಥಾ ವೈಶ್ರವಣೇ ಭದ್ರಾ ವಸಿಷ್ಠೇ ಚಾಪ್ಯರುನ್ಧತೀ।**
**ಯಥಾ ನಾರಾಯಣೇ ಲಕ್ಷ್ಮೀಸ್ತಥಾ ತ್ವಂ ಭವ ಭರ್ತೃಷು ॥೬॥**

"ಭದ್ರೇ! ಶಚಿಯು ಇಂದ್ರನೊಡನೆ ಇರುವಂತೆಯೂ, ಸ್ವಾಹಾದೇವಿಯು ವಿಭಾವಸುವಿನೊಡನೆ (ಅಗ್ನಿಯೊಡನೆ) ಇರುವಂತೆಯೂ, ರೋಹಿಣಿಯು ಚಂದ್ರನೊಡನೆ ಇರುವಂತೆಯೂ, ದಮಯಂತಿಯು ನಳನೊಡನೆ ಇರುವಂತೆಯೂ, ಭದ್ರೆಯು ವೈಶ್ರವಣ(ಕುಬೇರ)ನೊಡನೆ ಇರುವಂತೆಯೂ, ಅರುಂಧತಿಯು ವಸಿಷ್ಠರೊಡನೆ ಇರುವಂತೆಯೂ, ಲಕ್ಷ್ಮೀದೇವಿಯು ನಾರಾಯಣ ನೊಡನೆ ಇರುವಂತೆಯೂ–ನೀನು ನಿನ್ನ ಪತಿಗಳೊಡನೆ ಇರಬೇಕಮ್ಮಾ! ಶಚೀ, ಸ್ವಾಹಾ, ರೋಹಿಣೀ, ದಮಯಂತೀ, ಭದ್ರಾ, ಅರುಂಧತೀ ಮತ್ತು ಲಕ್ಷ್ಮೀ–ಇವರೇ ನಿನಗೆ ಆದರ್ಶಸ್ತ್ರೀರತ್ನಗಳು. ನೀನು ದೀರ್ಘಾಯುಗಳಾದ, ಪರಾಕ್ರಮಶಾಲಿಗಳಾದ ಮಕ್ಕಳಿಗೆ ವೀರಮಾತೆಯಾಗು. ಅಷ್ಟೈಶ್ವರ್ಯಗಳೂ ನಿನ್ನನ್ನು ಬಂದು ಸೇವಿಸಲಿ. ಯಜ್ಞ-ಯಾಗಾದಿಗಳಲ್ಲಿ ನಿರತರಾದ ನಿನ್ನ ಪತಿ ಗಳ ಸೇವೆಯಲ್ಲಿ ಸರ್ವದಾ ಆಸಕ್ತಳಾಗಿರು. ಯಜ್ಞದ ಯಜಮಾನಿಯಾಗು. ಪತಿಸೇವೆಯೇ ನಿನ್ನ ಮುಖ್ಯಕರ್ತವ್ಯವಾಗಿರಲಿ.

**ಅತಿಥೀನಾಗತಾನ್ಸಾಧೂನ್ವೃದ್ಧಾನ್ಬಾಲಾಂಸ್ತಥಾ ಗುರೂನ್।**
**ಪೂಜಯನ್ತ್ಯಾ ಯಥಾನ್ಯಾಯಂ ಶಶ್ವದ್ಗಚ್ಛನ್ತು ತೇ ಸಮಾಃ ॥೮॥**

ಅತಿಥಿಗಳನ್ನೂ, ಅಭ್ಯಾಗತರನ್ನೂ, ಸಾಧುಗಳನ್ನೂ, ವೃದ್ಧರನ್ನೂ, ಮಕ್ಕಳನ್ನೂ, ಗುರುಜನರನ್ನೂ ಯಥಾಯೋಗ್ಯವಾಗಿ ಸತ್ಕರಿಸುವುದರಲ್ಲಿಯೇ ನಿನ್ನ ಕಾಲವೆಲ್ಲವೂ ಕಳೆಯಲಿ. ಕುರುಜಾಂಗಲದಲ್ಲಿರುವ ಮುಖ್ಯ-ಮುಖ್ಯ ದೇಶಗಳಿಗೂ, ನಗರಗಳಿಗೂ ರಾಜನಾಗಲಿರುವ ನನ್ನ ಮಗನನ್ನು ಅನುಸರಿಸಿ ನೀನು ಮಹಾರಾಣಿಯಾಗು. ಧರ್ಮದ ವಿಷಯದಲ್ಲಿ ನಿನಗೆ ಯಾವಾಗಲೂ ಹೆಚ್ಚು ವಾತ್ಸಲ್ಯವಿರಲಿ.

ನಿನ್ನ ಪತಿಗಳು ಸಕಲರಾಜರನ್ನೂ ಸೋಲಿಸಿ ಗೆದ್ದುಕೊಂಡ ಪೃಥ್ವಿಯನ್ನು ಅಶ್ವಮೇಧಯಾಗದಲ್ಲಿ ನೀನು ಬ್ರಾಹ್ಮಣರಿಗೆ ದಾನಮಾಡಬೇಕು.

ಪ್ರಪಂಚದಲ್ಲಿರುವ ಸರ್ವೋತ್ಕೃಷ್ಟವಾದ ವಜ್ರ-ವೈಡೂರ್ಯಾದಿಗಳನ್ನು ಧರಿಸಿ, ಶತಸಂವತ್ಸರಗಳ ಕಾಲ ಸುಖದಿಂದ, ಸಂತೋಷದಿಂದ ಬಾಳುವವಳಾಗು. ದುಕೂಲವನ್ನು ಧರಿಸಿ ಬಂದಿರುವ ನಿನ್ನನ್ನು ನೋಡಿ ಬಹಳ ಸಂತೋಷಗೊಂಡಿದ್ದೇನೆ. ಮುಂದೆ ಕಂಕುಳಲ್ಲಿ ಮಗುವನ್ನೆತ್ತಿಕೊಂಡು ಇಂತಹುದೇ ಪೀತಾಂಬರವನ್ನು ಧರಿಸಿ ಬಂದಾಗ ಇನ್ನೂ ಹೆಚ್ಚು ಸಂತೋಷಪಡುತ್ತೇನೆ.”

ದ್ರೌಪದಿಯು ಪುನಃ ಅತ್ತೆಗೆ ಕಾಲುಮುಟ್ಟಿ ನಮಸ್ಕರಿಸಿದಳು. ಇಬ್ಬರ ಕಣ್ಣುಗಳಿಂದಲೂ ಆನಂದಬಾಷ್ಪಗಳು ಉದುರಿದುವು.

ಪಾಂಡವರಿಗೆ ವಿವಾಹವಾದ ವಾರ್ತೆಯು ಶ್ರೀಕೃಷ್ಣನಿಗೂ ತಿಳಿಯಿತು. ಅಮೇಯಾತ್ಮನಾದ ಮಧುಸೂದನನು ಪಾಂಡವರಿಗಾಗಿ ವಜ್ರ-ವೈಢೂರ್ಯಾದಿಗಳಿಂದ ರಚಿಸಲ್ಪಟ್ಟಿದ್ದ ಚಿತ್ರ-ವಿಚಿತ್ರವಾದ ದಿವ್ಯಾಭರಣ ಗಳನ್ನೂ, ದಿವ್ಯಾಂಬರಗಳನ್ನೂ, ರತ್ನಗಂಬಳಿಗಳನ್ನೂ, ಸುಖಸ್ಪರ್ಶ ವನ್ನುಂಟುಮಾಡುವ ಸುಖಪ್ರದವಾದ ಶಯನಗಳನ್ನೂ, ಆಸನಗಳನ್ನೂ, ಪಲ್ಲಕ್ಕಿಗಳನ್ನೂ, ಅನರ್ಘವಾದ ರತ್ನಗಳನ್ನು ಮೆಟ್ಟಿದ್ದ ಪಾತ್ರೆಗಳನ್ನೂ, ರೂಪ-ಯೌವನಸಂಪನ್ನೆಯರಾದ-ದಾಕ್ಷಿಣ್ಯಾದಿಗುಣಗಳಿಂದ ಪರಿಪೂರ್ಣ ರಾಗಿದ್ದ-ಅಲಂಕೃತೆಯರಾಗಿದ್ದ ನಾನಾದೇಶಗಳ ಸುಂದರಯುವತಿಯರನ್ನೂ ಕಳುಹಿಸಿಕೊಟ್ಟನು. ಭದ್ರ ಎಂಬ ಜಾತಿಯ ಪಳಗಿದ ನೂರಾರು ಆನೆಗಳನ್ನೂ, ತುರಗಗಳನ್ನೂ, ಸುವರ್ಣಗಳ ಮಾಲೆಗಳಿಂದಲೂ ಶುಭ್ರವಾದ ರೇಷ್ಮೆಯ ವಸ್ತ್ರಗಳಿಂದಲೂ ಅಲಂಕೃತವಾಗಿದ್ದ ಅನೇಕರಥಗಳನ್ನೂ, ಕೋಟಿಸಂಖ್ಯಾಕ ವಾದ ಸಂಖ್ಯೆಯಲ್ಲಿ ಸುವರ್ಣನಾಣ್ಯಗಳನ್ನೂ, ಚಿನ್ನದ ಗಟ್ಟಿಗಳನ್ನೂ ಸಾಲುಸಾಲಾಗಿದ್ದ ಬಂಡಿಗಳಲ್ಲಿ ತುಂಬಿಸಿ ಬಹುಮಾನದ ರೂಪದಲ್ಲಿ ಪಾಂಡವರಿಗೆ ಕಳುಹಿಸಿಕೊಟ್ಟನು. ಅವೆಲ್ಲವನ್ನೂ ಧರ್ಮರಾಜನು ಶ್ರೀಕೃಷ್ಣನಿಗೆ ಸಂತೋಷವನ್ನುಂಟುಮಾಡುವ ಇಚ್ಛೆಯಿಂದ ಪರಮಸಂತೋಷಯುಕ್ತನಾಗಿ ಸ್ವೀಕರಿಸಿದನು.

೧೯೯ನೆಯ ಅಧ್ಯಾಯವು ಮುಗಿಯಿತು.

## ಪಾಂಡವರ ವಿವಾಹದಿಂದಾಗಿ ದುರ್ಯೋಧನಾದಿಗಳಿಗೆ ಚಿಂತೆ

ವೈಶಂಪಾಯನರು ಹೇಳುತ್ತಾರೆ :

**ತತೋ ರಾಜ್ಞಾಂ ಚರೈರಾಪ್ತೈಃ ಪ್ರವೃತ್ತಿರುಪನೀಯತ ।**
**ಪಾಣ್ಡವೈರುಪಸಮ್ಪನ್ನಾ ದ್ರೌಪದೀ ಪತಿಭಿಃ ಶುಭಾ ॥೧॥**

ಜನಮೇಜಯ! ಶುಭಲಕ್ಷಣಯುಕ್ತಳಾದ ದ್ರೌಪದಿಯು ಪಾಂಡವರೈವರನ್ನೂ ಮದುವೆಯಾಗಿ ಅವರೊಡನೆ ಇರುವಳೆಂಬ ವಾರ್ತೆಯು ಆಪ್ತರಾದ ಗೂಢಚಾರರ ಮೂಲಕವಾಗಿ ಸ್ವಯಂವರಕ್ಕೆ ಬಂದಿದ್ದ ರಾಜರೆಲ್ಲರಿಗೂ ತಿಳಿಯಿತು.

ಯಾವನು ಧನುಸ್ಸನ್ನು ಎತ್ತಿ ಲಕ್ಷ್ಯವನ್ನು ಭೇದಿಸಿದನೋ-ಅವನೇ ಮಹಾಧನುರ್ಧರನಾದ, ವಿಜಯಿಗಳಲ್ಲಿ ಶ್ರೇಷ್ಠನಾದ ಅರ್ಜುನನೆಂಬ ವಾರ್ತೆಯೂ ತಿಳಿಯಿತು. ಯಾವ ಮಹಾಪುರುಷನು ಮದ್ರರಾಜನಾದ ಶಲ್ಯನನ್ನು ದ್ವಂದ್ವಯುದ್ಧದಲ್ಲಿ ಕೆಳಗೆ ಬೀಳಿಸಿದನೋ, ತನಗೆದುರಾಗಿ ಬಂದ ಕ್ಷತ್ರಿಯಯೋಧರೆಲ್ಲರನ್ನೂ ಸಂಕ್ರುದ್ಧನಾಗಿ ವೃಕ್ಷದಿಂದಲೇ ಪ್ರಹರಿಸಿ ಅವರಿಗೆ ಭಯವನ್ನುಂಟುಮಾಡಿದನೋ, ಮಹಾತ್ಮನಾದ ಯಾವನಿಗೆ ವೀರಾಧಿ ವೀರರನ್ನು ನೋಡಿಯೂ ಸ್ವಲ್ಪವಾದರೂ ಭಯವೇ ಉಂಟಾಗಲಿಲ್ಲವೋ, ಶತ್ರುಸೇನೆಯ ಅಂಗಭೂತಗಳಾದ ಆನೆ-ಕುದುರೆ ಮುಂತಾದುವುಗಳನ್ನು ಯಾವನು ಲೀಲೆಯಿಂದಲೇ ಕೆಳಗುರುಳಿಸುತ್ತಿದ್ದನೋ, ಯಾವನ ಸ್ಪರ್ಶವೂ ಭಯವನ್ನುಂಟುಮಾಡುವುದಾಗಿದ್ದಿತೋ–ಅವನೇ ಪಾಂಡವದ್ವಿತೀಯನಾದ ಭೀಮಸೇನನೆಂಬ ವಿಷಯವೂ ಎಲ್ಲ ರಾಜರಿಗೂ ತಿಳಿಯಿತು. ಬ್ರಾಹ್ಮಣರ ವೇಷವನ್ನು ಧರಿಸಿ ಸ್ವಯಂವರಮಂಟಪದಲ್ಲಿ ಯಾವ ವಿಧವಾದ ಉದ್ವಿಗ್ನತೆ ಯನ್ನೂ ತೋರದೇ ಪ್ರಶಾಂತರಾಗಿ ಕುಳಿತಿದ್ದವರು ಕುಂತೀಪುತ್ರರಾದ ಪಾಂಡವ ರೆಂಬುದನ್ನು ತಿಳಿದು ರಾಜಾಧಿರಾಜರಿಗೆ ಅತಿಶಯವಾದ ವಿಸ್ಮಯವುಂಟಾ ಯಿತು. ಪುತ್ರಸಮೇತಳಾದ ಕುಂತಿಯು ಜತುಗೃಹದಲ್ಲಿ ಸತ್ತುಹೋದ

ಳೆಂಬುದಾಗಿ ಅದುವರೆಗೂ ಆ ರಾಜರೆಲ್ಲರೂ ಭಾವಿಸಿದ್ದರು. ಮೇಲಿನ ವಾರ್ತೆಯನ್ನು ಗೂಢಚಾರರ ಮೂಲಕವಾಗಿ ತಿಳಿದನಂತರ ಆ ರಾಜರೆಲ್ಲರೂ ಸತ್ತುಹೋಗಿದ್ದ ಪಾಂಡವರು ಪುನಃ ಹುಟ್ಟಿದರೆಂದೇ ಭಾವಿಸಿದರು. ಪುರೋಚನನ ಕ್ರೂರವಾದ ಕರ್ಮವನ್ನು ಸ್ಮರಿಸಿದ ಆ ರಾಜರು ಅಂತಹ ಕ್ರೂರಕರ್ಮಕ್ಕೆ ಪ್ರೇರಕರಾಗಿ ಸಮ್ಮತಿಯನ್ನಿತ್ತು ಕಂಡೂ ಕಾಣದಂತೆ ವರ್ತಿಸುತ್ತಿದ್ದ ದುರ್ಯೋಧನ- ಧೃತರಾಷ್ಟ್ರ-ಭೀಷ್ಮಾದಿಗಳನ್ನು ಧಿಕ್ಕರಿಸಿದರು. ಸ್ವಯಂವರವು ಮುಗಿದು ಪಾಂಡವರು ದ್ರೌಪದಿಯನ್ನು ವಿವಾಹವಾದರೆಂದು ತಿಳಿದನಂತರ ಎಲ್ಲ ರಾಜರೂ ತಮ್ಮ-ತಮ್ಮ ದೇಶಗಳಿಗೆ ಪ್ರಯಾಣ ಮಾಡಿದರು.

ದ್ರುಪದರಾಜಕುಮಾರಿಯಾದ ಕೃಷ್ಣೆಯು ಅರ್ಜುನನಿಗೆ ಸ್ವಯಂವರ ಮಾಲಿಕೆಯನ್ನು ಹಾಕಿದುದನ್ನು ಪ್ರತ್ಯಕ್ಷವಾಗಿ ಕಂಡ ದುರ್ಯೋಧನನು ಖಿನ್ನವಾದ ಮನಸ್ಸಿನಿಂದ ಕೂಡಿದವನಾಗಿ ತನ್ನ ಅನುಜರೊಡನೆಯೂ– ಅಶ್ವತ್ಥಾಮಾ, ಶಕುನಿ, ಕರ್ಣ, ಕೃಪ–ಇವರುಗಳೊಡನೆಯೂ ಹಸ್ತಿನಾಪುರಕ್ಕೆ ಹಿಂದಿರುಗಿದನು. ದುಃಶಾಸನನು ಬಹುಖಿನ್ನನಾಗಿದ್ದ ದುರ್ಯೋಧನನನ್ನು ಕಂಡು ನಾಚಿಕೆಯಿಂದ ಕೂಡಿದವನಾಗಿ ಮೆಲ್ಲ-ಮೆಲ್ಲನೆ ಈ ಮಾತುಗಳನ್ನು ಹೇಳಿದನು :

“ಅಣ್ಣ! ಅರ್ಜುನನು ಬ್ರಾಹ್ಮಣವೇಷವನ್ನು ಧರಿಸಿರದಿದ್ದರೆ ಅವನು ಖಂಡಿತವಾಗಿಯೂ ದ್ರೌಪದಿಯನ್ನು ಕೈಹಿಡಿಯಲು ಸಾಧ್ಯವಾಗುತ್ತಿರಲಿಲ್ಲ. ಅವನು ವೇಷವನ್ನು ಮರೆಸಿದ್ದರಿಂದ ನಾವುಗಳಾರೂ ಅವನನ್ನು ಧನಂಜಯನೆಂದು ತಿಳಿಯಲು ಸಾಧ್ಯವಾಗಲಿಲ್ಲ.

**ದೈವಂ ಚ ಪರಮಂ ಮನ್ಯೇ ಪೌರುಷಂ ಚಾಪ್ಯನರ್ಥಕಮ್ ।**
**ಧಿಗಸ್ತು ಪೌರುಷಂ ತಾತ ಧ್ರಿಯನ್ತೇ ಯತ್ರ ಪಾಣ್ಡವಾಃ ॥೧೨॥**

ಎಲ್ಲಕ್ಕಿಂತಲೂ ಹೆಚ್ಚಾಗಿ ದೈವವೇ ಹೆಚ್ಚಿನ ಸಾಮರ್ಥ್ಯವನ್ನು ಹೊಂದಿದೆಯೆಂದು ತೋರುತ್ತದೆ. ಮನುಷ್ಯಪ್ರಯತ್ನವು ನಿಷ್ಫಲ. ಮನುಷ್ಯ ಪ್ರಯತ್ನಕ್ಕೆ ಧಿಕ್ಕಾರವಿರಲಿ! ನಮ್ಮ ಪ್ರಯತ್ನಗಳೆಲ್ಲವೂ ನಿಷ್ಫಲವಾಗಿ ಪಾಂಡವರು ಜೀವಂತರಾಗಿಯೇ ಉಳಿದು ಅಭಿವೃದ್ಧಿಯನ್ನು ಹೊಂದುತ್ತಿರುವರಲ್ಲವೇ?”

ಇವೇ ಮುಂತಾಗಿ ಹಲವು ಮಾತುಗಳನ್ನಾಡುತ್ತಾ, ನಿರ್ಭಾಗ್ಯನಾದ ಪುರೋಚನನನ್ನು ಕಟುವಾಗಿ ನಿಂದಿಸುತ್ತಾ, ದೀನರಾದ ಮತ್ತು ಅಸ್ವಸ್ಥಚಿತ್ತರಾದ ದುರ್ಯೋಧನಾದಿಗಳು ಹಸ್ತಿನೆಯನ್ನು ಸೇರಿದರು.

ಮಹೌಜಸ್ಕರಾದ ಪಾಂಡವರು ಅಗ್ನಿಬಾಧೆಯಿಂದ ಮುಕ್ತರಾದುದು, ದ್ರೌಪದಿಯ ಪರಿಣಯ, ದ್ರುಪದನೊಡನೆ ಬಾಂಧವ್ಯ, ಧೃಷ್ಟದ್ಯುಮ್ನ-ಶಿಖಂಡಿ ಮತ್ತು ಯುದ್ಧವಿಶಾರದರಾದ ದ್ರುಪದನ ಇತರ ಪುತ್ರರ ಸಾಮರ್ಥ್ಯ–ಇವೆಲ್ಲವನ್ನೂ ನೆನೆದು ದುರ್ಯೋಧನಾದಿಗಳು ಭೀತರೂ, ಹತಾಶರೂ ಆದರು.

ಪಾಂಡವರು ದ್ರೌಪದಿಯನ್ನು ಮದುವೆಯಾದುದನ್ನೂ, ಧೃತರಾಷ್ಟ್ರನ ಮಕ್ಕಳು ಹತದರ್ಪರಾಗಿ ನಾಚಿಕೆಪಟ್ಟುಕೊಂಡು ಪಾಂಚಾಲನಗರಿಯಿಂದ ಹಿಂದಿರುಗಿದುದನ್ನೂ ತಿಳಿದ ವಿದುರನು ಮನದಲ್ಲಿಯೇ ಸಂತೋಷಿಸಿ, ಧೃತರಾಷ್ಟ್ರನ ಬಳಿಗೆ ಹೋಗಿ ವಿಸ್ಮಿತನಾದವನಂತೆ ಈ ಮಾತನ್ನು ಹೇಳಿದನು : 'ದಿಷ್ಟ್ಯಾ ಕುರವೋ ವರ್ಧನ್ತೇ' "ಅದೃಷ್ಟವಶದಿಂದ ಕುರುವಂಶೀಯರು ಪ್ರವರ್ಧಮಾನಕ್ಕೆ ಬರುತ್ತಿದ್ದಾರೆ."

ವಿದುರನ ಮಾತನ್ನು ಕೇಳುತ್ತಲೇ ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನು ಪರಮಪ್ರೀತನಾಗಿ ಹೇಳಿದನು :

"ವಿದುರ! ಕುರುಗಳು ಪ್ರವರ್ಧಮಾನಕ್ಕೆ ಬರುತ್ತಿದ್ದಾರೆಂಬ ವಾರ್ತೆಯು ನಿಶ್ಚಯವಾಗಿಯೂ ಅದೃಷ್ಟಾಯತ್ತವೇ ಸರಿ. **ಅಹೋಭಾಗ್ಯ-ಮಹೋಭಾಗ್ಯಂ**"

ಪ್ರಜ್ಞಾಚಕ್ಷುವಾದ ಧೃತರಾಷ್ಟ್ರನು ದ್ರೌಪದಿಯು ದುರ್ಯೋಧನನನ್ನೇ ವರಿಸಿದಳೆಂದು ತಿಳಿದನು. ಕುರುಗಳೆಂದರೆ ಯಾರು?– ಎಂದೂ ವಿದುರನನ್ನು ಪ್ರಶ್ನಿಸಲಿಲ್ಲ. ಪಕ್ಕದಲ್ಲಿಯೇ ನಿಂತಿದ್ದ ಸೇವಕರಿಗೆ ಆಜ್ಞಾಪಿಸಿದನು : "ದ್ರೌಪದಿಗೆ ತೊಡಿಸಲು ನವರತ್ನಾಭರಣಗಳನ್ನು ತನ್ನಿರಿ. ದುರ್ಯೋಧನ ನನ್ನೂ ಮತ್ತು ದ್ರೌಪದಿಯನ್ನೂ ಸ್ವಾಗತಿಸಲು ಸರ್ವಸಿದ್ಧತೆಗಳೂ ನಡೆಯಲಿ."

ವಿದುರನು ಧೃತರಾಷ್ಟ್ರನ ಸಂಭ್ರಮವನ್ನು ಕಂಡು ನಸುನಕ್ಕು ಹೇಳಿ

ದನು : "ಮಹಾರಾಜ! ದ್ರೌಪದಿಯು ಕೌರವರಾಜಪುಂಗವರನ್ನೇನೋ ಮದುವೆಯಾಗಿರುವಳು. ಆದರೆ ದುರ್ಯೋಧನನನ್ನಲ್ಲ. ಪಾಂಡವರನ್ನು ಮದುವೆಯಾಗಿರುವಳು. ಪಾಂಡವರೈವರೂ ಜೀವಂತರಾಗಿದ್ದು ಕುಶಲಿಗಳಾಗಿರುವರು. ದ್ರುಪದನಿಂದಲೂ ಪುರಸ್ಕೃತರಾಗಿರುವರು. ದ್ರೌಪದಿಯ ಸ್ವಯಂವರದಿಂದಾಗಿ ಸೈನ್ಯಸಮೇತರಾದ ದ್ರುಪದನ ಬಂಧು-ಮಿತ್ರರೆಲ್ಲರೂ ಪಾಂಡವರ ಬಂಧು-ಮಿತ್ರರೂ ಆಗಿರುವರು."

ದ್ರೌಪದಿಯು ಪಾಂಡವರನ್ನು ಮದುವೆಯಾದಳೆಂಬ ವಾರ್ತೆಯನ್ನು ಕೇಳಿ ಧೃತರಾಷ್ಟ್ರನು ಹೃದಯದಲ್ಲಿ ವ್ಯಾಕುಲಗೊಂಡನಾದರೂ ಮುಖದಲ್ಲಿ ತೋರಿಸಿಕೊಳ್ಳಲಿಲ್ಲ. ಒಡನೆಯೇ ಉತ್ತರವನ್ನಿತ್ತನು :

**ಯಥೈವ ಪಾಣ್ಡೋಃ ಪುತ್ರಾಸ್ತು ತಥೈವಾಭ್ಯಧಿಕಾ ಮಮ ।**
**ಯಥಾ ಚಾಭ್ಯಧಿಕಾ ಬುದ್ಧಿರ್ಮಮ ತಾನ್ಪ್ರತಿ ತಚ್ಛೃಣು ॥೨೩॥**

**ಯತ್ತೇ ಕುಶಲಿನೋ ವೀರಾ ಮಿತ್ರವನ್ತಶ್ಚ ಪಾಣ್ಡವಾಃ ।**
**ತೇಷಾಂ ಸಮ್ಬನ್ಧಿನಶ್ಚಾನ್ಯೇ ಬಹವಶ್ಚ ಮಹಾಬಲಾಃ ॥೨೪॥**

**ಕೋ ಹಿ ದ್ರುಪದಮಾಸಾದ್ಯ ಮಿತ್ರಂ ಕ್ಷತ್ತಃ ಸಬಾನ್ಧವಮ್ ।**
**ನ ಬುಭೂಷೇದ್ಭವೇನಾರ್ಥೀ ಗತಶ್ರೀರಪಿ ಪಾರ್ಥಿವಃ ॥೨೫॥**

"ಇನ್ನೂ ಹೆಚ್ಚಿನ ಸುವಾರ್ತೆಯಿದು, ವಿದುರ! ಯುಧಿಷ್ಠಿರಾದಿಗಳು ನನ್ನ ತಮ್ಮ ಪಾಂಡುವಿಗೆ ಪ್ರಿಯರಾಗಿದ್ದಂತೆ ನನಗೂ ಪ್ರಿಯರಾಗಿರುವರು. ಈಗಂತೂ ನನಗೆ ಅವರ ಮೇಲೆ ಇನ್ನೂ ಹೆಚ್ಚಿನ ಮಮತೆಯುಂಟಾಗಿದೆ. ಏಕೆಂದರೆ : ಅವರಿಂದು ಕುಶಲಿಗಳಾಗಿದ್ದಾರೆ. ಅನೇಕರನ್ನು ಮಿತ್ರರನ್ನಾಗಿ ಮಾಡಿಕೊಂಡಿರುತ್ತಾರೆ. ದ್ರೌಪದಿಯ ಕೈಹಿಡಿದನಂತರ ಮಹಾಬಲರಾದ ದ್ರುಪದನ ಸಂಬಂಧಿಗಳ ಬೆಂಬಲವನ್ನೂ ಪಡೆದಿರುತ್ತಾರೆ. ಐಶ್ವರ್ಯಹೀನನೇ ಆಗಿರಲಿ, ಶ್ರೀಮಂತನೇ ಆಗಿರಲಿ–ಪ್ರಪಂಚದಲ್ಲಿರುವ ರಾಜರಲ್ಲಿ ಯಾವ ರಾಜನು ತಾನೇ ಸಬಾಂಧವನಾದ ದ್ರುಪದನ ಸಖ್ಯವನ್ನು ಅಭಿಲಾಷಿಸದೇ ಇರುವನು?"

**ನಿತ್ಯಂ ಭವತು ತೇ ಬುದ್ಧಿರೇಷಾ ರಾಜಞ್ಛತಂ ಸಮಾಃ ॥೨೬॥**

"ಈಗ ನಿನಗುಂಟಾಗಿರುವ ಮಾನಸಿಕಪರಿವರ್ತನೆಯು ನೂರು ವರ್ಷಗಳ ಕಾಲ ಶಾಶ್ವತವಾಗಿ ಉಳಿಯಲಿ, ಮಹಾರಾಜ!"–ಎಂದು ಹೇಳಿ ವಿದುರನು ಹೊರಟುಹೋದನು.

ವಿದುರನು ಹೊರಟುಹೋದೊಡನೆಯೇ ಕರ್ಣ-ದುರ್ಯೋಧನರು ಪ್ರವೇಶಿಸಿದರು. ದುರ್ಯೋಧನನು ಧೃತರಾಷ್ಟ್ರನಿಗೆ ನಮಸ್ಕರಿಸಿ ಹೇಳಿದನು :

"ಮಹಾರಾಜ! ನಿನಗೆ ವಿಷಯಗಳೆಲ್ಲವೂ ವಿದುರನ ಮೂಲಕ ತಿಳಿದಿವೆ. ಈಗ ನೀನೇನು ಮಾಡಬೇಕೆಂದಿರುವೆ? ತಾತ! ಜ್ಞಾತಿಗಳಿಗುಂಟಾಗಿರುವ ಅಭಿವೃದ್ಧಿಯನ್ನು ನಿನ್ನ ಅಭಿವೃದ್ಧಿಯೆಂದೇ ಭಾವಿಸಿ ಸಂತೋಷಿಸುವೆಯಾ? ವಿದುರನೆದುರಿನಲ್ಲಿ ನಮ್ಮ ಜ್ಞಾತಿಗಳಾದ ಪಾಂಡವರನ್ನು ಬಹಳವಾಗಿ ಪ್ರಶಂಸಿಸಿದ ಮತ್ತು ಅವರ ಅಭಿವೃದ್ಧಿಯ ವಿಷಯವಾಗಿ ಸಂತೋಷಗೊಂಡು ಆಡಿದ ಮಾತುಗಳನ್ನು ನಾವೂ ಕೇಳಿದೆವು. ನಿನ್ನ ಮಾತು ಸರಿಯಾಗಿಲ್ಲವೆಂದು ವಿದುರನೆದುರಿನಲ್ಲಿ ಹೇಳಲಾಗದೇ ಈಗ ರಹಸ್ಯದಲ್ಲಿ ಹೇಳುತ್ತೇವೆ. ನಿನ್ನ ಕರ್ತವ್ಯವು ಒಂದಾಗಿದ್ದರೆ ನೀನು ಮಾಡುತ್ತಿರುವ ಕೆಲಸವು ಮತ್ತೊಂದಾಗಿದೆ. ನಾವಾದರೋ ಇಂದಿನಿಂದಲೇ ಪಾಂಡವರ ಬಲವನ್ನು ದುರ್ಬಲಗೊಳಿಸಲು ಸಕಲಸನ್ನಾಹಗಳನ್ನೂ ಮಾಡಿಯೇ ತೀರುವೆವು. ತಂದೆಯೇ! ಪಾಂಡವರು ಪುತ್ರ-ಪೌತ್ರ-ಬಂಧು-ಬಾಂಧವಸಮೇತರಾದ ನಮ್ಮೆಲ್ಲರನ್ನೂ ನುಂಗಿಬಿಡದಂತೆ ಈ ಸಮಯದಲ್ಲಿ ಏನು ಮಾಡಬೇಕೆಂಬುದನ್ನು ನಾವೆಲ್ಲರೂ ಸೇರಿ ಮಂತ್ರಾಲೋಚನೆಯನ್ನು ಮಾಡೋಣ."

೨೦೦ನೆಯ ಅಧ್ಯಾಯವು ಮುಗಿಯಿತು.

## ಧೃತರಾಷ್ಟ್ರ ಮತ್ತು ದುರ್ಯೋಧನಾದಿಗಳ ಸಮಾಲೋಚನೆ

ಜನಮೇಜಯ! ಧೃತರಾಷ್ಟ್ರನು ದುರ್ಯೋಧನನಿಗೆ ಹೇಳುತ್ತಾನೆ :

"ನಿಜ, ಮಗು! ನನ್ನ ಆಶಯವೂ ಹಾಗೆಯೇ ಇದೆ. ಆದರೆ ಈ ವಿಷಯವನ್ನು ವಿದುರನಿಗೆ ತಿಳಿಸುವ ಇಚ್ಛೆಯುಳ್ಳವನಾಗಿಲ್ಲ. ಮುಖಭಾವದಿಂದಾಗಲೀ, ಧ್ವನಿಯಿಂದಾಗಲೀ ವಿದುರನು ನನ್ನ ಮನೋಗತವಾದ ಅಭಿಪ್ರಾಯವನ್ನು ತಿಳಿಯಕೂಡದೆಂಬುದೇ ನನ್ನ ಅಭಿಲಾಷೆ. ಈ ಕಾರಣದಿಂದಲೇ ನಾನು ವಿದುರನ ಮುಂದೆ ಪಾಂಡವರನ್ನು ಬಹುವಿಧವಾಗಿ ಪ್ರಶಂಸೆಮಾಡಿದೆನು. ಅವನಾದರೂ ನನ್ನ ಮಾತಿನಲ್ಲಿ ಸಂಶಯಪಡದೇ ಹೊರಟುಹೋದನು. ಅವನಿಲ್ಲದಿರುವಾಗಲೇ ನಾವೆಲ್ಲರೂ ಸೇರಿ ಸಮಾಲೋಚನೆಮಾಡುವುದು ಯುಕ್ತವಾಗಿದೆ. ದುರ್ಯೋಧನ! ಈ ಸಮಯದಲ್ಲಿ ಯಾವ ಕಾರ್ಯವನ್ನು ಮಾಡುವುದು ಯುಕ್ತವೆಂದು ತಿಳಿದಿರುವೆ? ಹೇಳು. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು? ರಾಧೇಯ! ಎಲ್ಲವನ್ನೂ ಸ್ಪಷ್ಟವಾಗಿ ಹೇಳಿರಿ."

ದುರ್ಯೋಧನನು ಕರ್ಣನೊಡನೆ ಬಂದಿರುವುದೂ ಸಮಾಲೋಚನೆಗಾಗಿಯೇ ಅಲ್ಲವೇ? ತಂದೆಯ ಅಭಿಪ್ರಾಯವೂ ಅದೇ ಆಗಿರುವುದನ್ನು ತಿಳಿದ ದುರ್ಯೋಧನನು ಹೆಚ್ಚಿನ ಉತ್ಸಾಹದಿಂದ ಪಾಂಡವರ ವಿನಾಶಕ್ಕೆ ಮಾರ್ಗಗಳನ್ನು ಹೇಳತೊಡಗಿದನು.

"ತಾತ! ನಿಪುಣರಾದ, ಆಪ್ತರಾದ ಮತ್ತು ನಂಬಿಕೆಗೆ ಅರ್ಹರಾದ ಬ್ರಾಹ್ಮಣರನ್ನು ಕಳುಹಿಸಿ, ಕುಂತೀಪುತ್ರರಿಗೂ, ಮಾದ್ರೀಪುತ್ರರಿಗೂ ವೈಮನಸ್ಯವುಂಟಾಗುವಂತೆ ಮಾಡಬೇಕು. ಅಥವಾ ದ್ರುಪದನಿಗೂ ಅವನ ಮಕ್ಕಳಿಗೂ ಮತ್ತು ಅವನ ಅಮಾತ್ಯ-ಪುರೋಹಿತ-ಸೇನಾಪತಿಗಳಿಗೂ ಯಥೇಚ್ಛವಾಗಿ ಐಶ್ವರ್ಯವನ್ನು ಕೊಟ್ಟು ಅವರನ್ನು ಒಲಿಸಿಕೊಂಡು, ಪಾಂಡವರನ್ನು ಕೈಬಿಡುವಂತೆ ಮಾಡಬೇಕು. ಅಥವಾ ನಮ್ಮ ಗುಪ್ತಚಾರರು ಪಾಂಡವರಲ್ಲಿಗೆ ಹೋಗಿ–ಹಸ್ತಿನಾಪುರದಲ್ಲಿ ನೆಲೆಸುವುದರಿಂದ ಅನೇಕಕಷ್ಟ

ಗಳಿಗೆ ಗುರಿಯಾಗಬೇಕಾಗುವುದೆಂದೂ, ಪಾಂಚಾಲನಗರಿಯಲ್ಲಿಯೇ ನೆಲೆಸುವುದು ಸೂಕ್ತವೆಂದೂ–ನಾನಾಕಾರಣಗಳನ್ನು ನಿರೂಪಿಸಿ ಹೇಳಿ, ಅವರು ಪಾಂಚಾಲನಗರಿಯಲ್ಲಿಯೇ ಸ್ಥಿರವಾಗಿ ನೆಲೆಸುವಂತೆ ಮಾಡಲಿ. ಅಥವಾ ಉಪಾಯನಿಪುಣರಾದ ಕುಶಲರಾದ ಗುಪ್ತಚಾರರು ಹೋಗಿ ಪಾಂಡವರಲ್ಲಿಯೇ ಪರಸ್ಪರವಾಗಿ ವೈಮನಸ್ಯವುಂಟಾಗುವಂತೆ ಮಾಡಬೇಕು. ಅಥವಾ ಕೃಷ್ಣೆಗೆ ಪಾಂಡವರನ್ನು ಕಂಡರೆ ಆಗದಂತೆ ಮಾಡಬೇಕು. ದ್ರೌಪದಿಯು ಬಹುಪತಿಗಳನ್ನು ಹೊಂದಿರುವುದರಿಂದ ಈ ಕಾರ್ಯವು ದುಸ್ಸಾಧ್ಯವೆನಿಸಲಾರದು. ಅಥವಾ ಪಾಂಡವರೇ ಕೃಷ್ಣೆಯ ವಿಷಯದಲ್ಲಿ ವೈಷಮ್ಯವನ್ನು ಹೊಂದುವಂತೆಯಾದರೂ ಮಾಡಬೇಕು. ಅಥವಾ ನಿಪುಣರಾದ, ಚತುರರಾದ ಗುಪ್ತಚಾರರು ಹೋಗಿ ಉಪಾಯಾಂತರಗಳಿಂದ ಭೀಮನಿಗೆ ಮರಣವುಂಟಾಗುವಂತೆ ಮಾಡಲಿ. ಪಾಂಡವರಲ್ಲಿ ಭೀಮನೇ ಮಹಾಪರಾಕ್ರಮಶಾಲಿಯಾಗಿರುವನು. ಅವನನ್ನೇ ಅವಲಂಬಿಸಿ ಪಾಂಡವರು ಹಿಂದೆಯೂ ನಮ್ಮನ್ನು ಅಲಕ್ಷ್ಯಮಾಡುತ್ತಿದ್ದರು. ಭೀಮನು ಭಯಂಕರನು ; ಮಹಾಪರಾಕ್ರಮೀ ; ಧೈರ್ಯಶಾಲೀ. ಉಳಿದ ನಾಲ್ವರಿಗೂ ಆಶ್ರಯಭೂತನಾಗಿರುವನು. ಅವನನ್ನೇ ಉಪಾಯಾಂತರಗಳಿಂದ ಕೊಲೆಮಾಡಿಸಿಬಿಟ್ಟರೆ ಉಳಿದವರು ಬಲಹೀನರಾಗುತ್ತಾರೆ. ಆಶ್ರಯಭೂತನಾದ ಭೀಮನೇ ಹೋಗಿಬಿಟ್ಟನೆಂದರೆ ಉಳಿದವರು ರಾಜ್ಯವನ್ನು ಪಡೆಯುವ ಪ್ರಯತ್ನವನ್ನೂ ಮಾಡಲಾರರು.

ಅರ್ಜುನನೂ ಮಹಾಪರಾಕ್ರಮಿಯೆಂಬ ಭಾವನೆಯು ನಿನ್ನಲ್ಲಿರಬಹುದಲ್ಲವೇ? ಭೀಮನು ಅರ್ಜುನನ ರಥದ ಹಿಂದೆ ನಿಂತು ರಕ್ಷಣೆಮಾಡುತ್ತಿದ್ದರೆ ಮಾತ್ರ ಅರ್ಜುನನು ಅಪ್ರತಿಮಪರಾಕ್ರಮದಿಂದ ಯುದ್ಧಮಾಡುವನು. ಭೀಮನೇ ಹೋಗಿಬಿಟ್ಟನೆಂದರೆ ನಮ್ಮ ರಾಧೇಯನಿಗಿರುವ ಪರಾಕ್ರಮದ ನಾಲ್ಕರಲ್ಲೊಂದಂಶವೂ ಅರ್ಜುನನಿಗೆ ಉಳಿಯುವುದಿಲ್ಲ. ಭೀಮನಿಲ್ಲದಿದ್ದರೆ ತಾವೆಲ್ಲರೂ ದುರ್ಬಲರೆಂಬ ವಿಷಯವು ಉಳಿದ ನಾಲ್ವರಿಗೂ ಸಂಪೂರ್ಣವಾಗಿ ತಿಳಿದಿದೆ. ಆದುದರಿಂದ ಉಳಿದ ನಾಲ್ವರು ರಾಜ್ಯವನ್ನು ನಮ್ಮಿಂದ ಕಬಳಿಸುವ ಪ್ರಯತ್ನವನ್ನು ಖಂಡಿತವಾಗಿಯೂ ಮಾಡಲಾರರು ಅಥವಾ ಒಂದು ವೇಳೆ ಮೇಲೆ ಹೇಳಿದ ವಿಷಯಗಳೆಲ್ಲವೂ ಅಸಾಧ್ಯವೆಂದು ತೋರುವುದಾದರೆ–ಜನರನ್ನು ಮೆಚ್ಚಿಸುವುದಕ್ಕಾದರೂ ಪಾಂಡವರನ್ನು

ಇಲ್ಲಿಗೆ ಕರೆಯಿಸಬೇಕೆನ್ನುವುದಾದರೆ–ನೀತಿಶಾಸ್ತ್ರಾನುಸಾರವಾಗಿ (ಕಣಿಕನ ರಾಜನೀತಿಯಂತೆ) ಪಾಂಡವರನ್ನು ಇಲ್ಲಿಯೇ ವಿನಾಶಮಾಡಬಹುದಾಗಿದೆ.

ಇಲ್ಲಿಗೆ ಬಂದು ನಿನ್ನ ಅಪ್ಪಣೆಯಂತೆ ನಡೆಯುವ ಅವರಿಗೆ ನಾವೆಲ್ಲರೂ ಹೆಚ್ಚಿನ ವಿಶ್ವಾಸವನ್ನು ತೋರಿಸಿ, ಚೆಲುವೆಯರಾದ ಅನೇಕಪ್ರಮದೆಯರನ್ನೂ, ಯಥೇಚ್ಛವಾಗಿ ಮಧುವನ್ನೂ ಒದಗಿಸಿ, ದ್ರೌಪದಿಗೆ ಪತಿಗಳ ವಿಷಯದಲ್ಲಿ ಜುಗುಪ್ಸೆಯುಂಟಾಗುವಂತೆ ಮಾಡಬಹುದು. ಅಥವಾ ಅವರನ್ನು ಕರೆತರಲು ನಮ್ಮ ರಾಧೇಯನೇ ಹೋಗಲಿ. ಇಲ್ಲಿಗೆ ಬಂದ ಮೇಲೆ ವಿಶ್ವಸನೀಯರಾಗಿರುವ ಭೃತ್ಯರ ಮೂಲಕ ಅವರನ್ನು ವಂಚಿಸಿ, ಉಪಾಯಾಂತರಗಳಿಂದ ಕೊಲೆಮಾಡಿಸಲೂಬಹುದು.

ತಂದೆಯೇ! ಮೇಲೆ ತಿಳಿಸಿದ ಮಾರ್ಗಗಳಲ್ಲಿ ನಿನಗೆ ಸೂಕ್ತವೆನಿಸಿದ ಯಾವುದಾದರೂ ಮಾರ್ಗವನ್ನು ಪಾಂಡವರ ವಿನಾಶಕ್ಕಾಗಿ ಅನುಸರಿಸಬಹುದಾಗಿದೆ. ಕಾಲವು ಮೀರದಂತೆ ನೋಡಿಕೊಳ್ಳಬೇಕು.

ದ್ರುಪದ-ಪಾಂಡವರಲ್ಲಿ ಮೈತ್ರಿಯು ಸ್ಥಿರವಾಗುವುದಕ್ಕೆ ಮೊದಲೇ ಈ ಕಾರ್ಯವನ್ನು ಮಾಡಬೇಕಾಗಿದೆ. ಅವರ ಮೈತ್ರಿಯು ದೃಢವಾಯಿತೆಂದರೆ ನಾವು ಖಂಡಿತವಾಗಿಯೂ ಪರಾಜಿತರಾಗುತ್ತೇವೆ.

ಪಾಂಡವರನ್ನು ನಾಶಮಾಡಬೇಕೆನ್ನುವುದರಲ್ಲಿ ನಾನು ಮೇಲೆ ಹೇಳಿದ ಮಾರ್ಗಗಳೇ ನಮಗೆ ಸೂಕ್ತವೆಂದು ತೋರುತ್ತವೆ. ಅವು ಸೂಕ್ತವಾದುವುಗಳೋ ಅಥವಾ ಅಲ್ಲವೋ ಎಂಬುದನ್ನು ನೀನೇ ಪರ್ಯಾಲೋಚಿಸು. ಕರ್ಣ! ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?" ಎಂದು ದುರ್ಯೋಧನನು ಕರ್ಣನನ್ನು ಪ್ರಶ್ನಿಸಿದನು.

೨೦೧ನೆಯ ಅಧ್ಯಾಯವು ಮುಗಿಯಿತು.

೨೦೨ನೆಯ ಅಧ್ಯಾಯ ವಿದುರಾಗಮನರಾಜ್ಯಲಮ್ಭಪರ್ವ (ಮುಂದುವರಿದಿದೆ.)

## ಪರಾಕ್ರಮದಿಂದಲೇ ಪಾಂಡವರನ್ನು ಗೆಲ್ಲಬೇಕೆಂಬ ಕರ್ಣನ ಸಲಹೆ

ವೈಶಂಪಾಯನರು ಹೇಳುತ್ತಾರೆ :

ಜನಮೇಜಯ! ದುರ್ಯೋಧನನು ಕರ್ಣನ ಅಭಿಪ್ರಾಯವನ್ನು ಕೇಳಿದೊಡನೆಯೇ–

**ದುರ್ಯೋಧನ ತವ ಪ್ರಜ್ಞಾ ನ ಸಮ್ಯಗಿತಿ ಮೇ ಮತಿಃ**

"ದುರ್ಯೋಧನ! ಪಾಂಡವರನ್ನು ನಾಶಮಾಡುವ ವಿಷಯದಲ್ಲಿ ನಿನ್ನ ಸಲಹೆಗಳು ಸೂಕ್ತವಲ್ಲವೆಂದೇ ನನ್ನ ಬುದ್ಧಿಗೆ ತೋರುತ್ತದೆ"–ಎಂದೇ ಕರ್ಣನು ಮಾತನ್ನು ಪ್ರಾರಂಭಿಸಿದನು.

**ನ ಹ್ಯುಪಾಯೇನ ತೇ ಶಕ್ಯಾಃ ಪಾಣ್ಡವಾಃ ಕುರುವರ್ಧನ ॥೧॥**

"ಕುರುಕುಲವರ್ಧನನೇ! ನಿನ್ನ ಯಾವುದೊಂದು ಕುಟಿಲೋಪಾಯವೂ ಪಾಂಡವರನ್ನು ವಿನಾಶಮಾಡಲು ಸಮರ್ಥವಾಗಲಾರದು. ಈ ವಿಷಯದಲ್ಲಿ ನಿನಗೂ ಸಂಪೂರ್ಣಾನುಭವವಿದೆ. ಹಿಂದೆಯೇ ನೀನು ಹಲವಾರು ಬಾರಿ ಕುಟಿಲೋಪಾಯಗಳನ್ನು ಮಾಡಿ ನಿನ್ನ ಇಚ್ಛೆಯನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸಿದೆಯಲ್ಲವೇ? ಅದರಲ್ಲಿ ನೀನು ಸಂಪೂರ್ಣಪರಾಜಯವನ್ನೇ ಹೊಂದಿದೆಯಲ್ಲವೇ? ದುರ್ಯೋಧನ! ಅಂದಿನ ಸನ್ನಿವೇಶಗಳನ್ನಾದರೂ ಪರ್ಯಾಲೋಚಿಸು. ಅಂದವರು ನಿನ್ನ ಸಮೀಪದಲ್ಲಿಯೇ ಇದ್ದರು. ಅವರಿಗೆ ರೆಕ್ಕೆ-ಪುಕ್ಕಗಳೊಂದೂ ಬೆಳೆದಿರಲಿಲ್ಲ. (ಬಂಧು-ಬಾಂಧವರಿಲ್ಲದ ತಬ್ಬಲಿ ಗಳಾಗಿದ್ದರು.) ಇನ್ನೂ ಅಪ್ರಾಪ್ತವಯಸ್ಕರಾಗಿದ್ದರು. ಹಾಗಿದ್ದಾಗಲೇ ನೀನು ಅನೇಕ ಕುಟಿಲೋಪಾಯಗಳನ್ನು ಪ್ರಯೋಗಿಸಿದರೂ ಅವರಿಗೆ ತೊಂದರೆಯನ್ನುಂಟುಮಾಡಲು ಅಥವಾ ಅವರನ್ನು ವಿನಾಶಗೊಳಿಸಲು ಸಮರ್ಥನಾಗಲಿಲ್ಲ. ಇಂದಿನ ದಿನವನ್ನು ಅಂದಿಗೆ ಹೋಲಿಸು. ಇಂದವರು ಬಹಳ ದೂರದಲ್ಲಿದ್ದಾರೆ. ಪ್ರಾಪ್ತವಯಸ್ಕರಾಗಿದ್ದಾರೆ. ರೆಕ್ಕೆ-ಪುಕ್ಕಗಳೆಲ್ಲವೂ ಪೂರ್ಣವಾಗಿ ಬೆಳೆದಿವೆ. (ಅನೇಕ ಬಂಧು-ಮಿತ್ರರಿಂದ ಕೂಡಿದವ ರಾಗಿದ್ದಾರೆ.) ಆದುದರಿಂದ ನಿನ್ನ ಯಾವವಿಧವಾದ ಕುಟಿಲೋಪಾಯ ಗಳಿಂದಲೂ ಕುಂತಿಯ ಮಕ್ಕಳು ಖಂಡಿತವಾಗಿಯೂ ವಿನಾಶಹೊಂದ ಲಾರರು. ಇದು ನನ್ನ ನಿಶ್ಚಿತವಾದ ಅಭಿಪ್ರಾಯವಾಗಿದೆ. ಎಲ್ಲಕ್ಕಿಂತಲೂ ಮುಖ್ಯವಾಗಿ ಅವರಿಗೆ ದೈವಬಲವಿದೆ. ಆದುದರಿಂದ ಆನುವಂಶಿಕವಾಗಿ ಬರಬೇಕಾಗಿರುವ ರಾಜ್ಯವನ್ನು ಪಡೆಯಲು ಬರುವ ಪಾಂಡವರನ್ನು ನಾವು ಯಾವವಿಧವಾದ ಕುಟಿಲೋಪಾಯಗಳಿಂದಲೂ ಹಿಂದಿರುಗಿಸಲು ಸಾಧ್ಯವೇ ಇಲ್ಲ. ನೀನು ಹೇಳಿದ ಉಪಾಯಗಳನ್ನೇ ವಿಮರ್ಶಿ ಸೋಣ. ಪಾಂಡವರಲ್ಲಿಯೇ ಪರಸ್ಪರವಾಗಿ ಕಲಹವುಂಟಾಗುವಂತೆ ಗೂಢ

ಚಾರರ ಮೂಲಕ ಮಾಡಿಸಬೇಕೆಂದು ನೀನು ಹೇಳುವೆಯಲ್ಲವೇ? ಅವರಲ್ಲಿ ಪರಸ್ಪರ ಭೇದಕಲ್ಪನೆ ಮಾಡಲು ಸಾಧ್ಯವೇ ಇಲ್ಲ. ಏಕೆಂದರೆ :

**ಏಕಸ್ಯಾಂ ಯೇ ರತಾಃ ಪತ್ನ್ಯಾಂ ನ ಭಿದ್ಯನ್ತೇ ಪರಸ್ಪರಮ್ ॥೬॥**

ಒಬ್ಬಳೇ ಸ್ತ್ರೀಯಲ್ಲಿ ಅನುರಕ್ತರಾಗಿರುವ ಸಹೋದರರಲ್ಲಿ ಭೇದವೆಂದಿಗೂ ಉಂಟಾಗುವುದಿಲ್ಲ. ನೀನು ಹೇಳಿದಂತೆ ಕೃಷ್ಣೆಗೆ ಪಾಂಡವರ ವಿಷಯದಲ್ಲಿ ವೈಷಮ್ಯವುಂಟಾಗುವಂತೆ ಮಾಡುವುದೂ ಆಗದ ಮಾತು. ಏಕೆಂದರೆ : ಪಾಂಡವರು ನಿರ್ಗತಿಕರಾಗಿದ್ದಾಗಲೇ ಕೃಷ್ಣೆಯು ಅವರನ್ನು ಸ್ವಯಂವರದಲ್ಲಿ ವರಿಸಿದ್ದಾಳೆ. ಈಗವರು ಸಕಲೈಶ್ವರ್ಯಸಂಪನ್ನರಾಗಿದ್ದಾರೆ. ಈ ಸಮಯದಲ್ಲಿ ಕೃಷ್ಣೆಯು ಪಾಂಡವರ ವಿಷಯದಲ್ಲಿ ವೈಷಮ್ಯವನ್ನು ತಾಳಿ ಅವರನ್ನು ಪರಿತ್ಯಜಿಸುವಳೇ? ಹೀಗೆ ಯೋಚಿಸಲು ಕೂಡ ಸಾಧ್ಯವಿದೆಯೇ? ಸುಯೋಧನ! ಮೇಲಾಗಿ :

**ಈಪ್ಸಿತಶ್ಚ ಗುಣಃ ಸ್ತ್ರೀಣಾಮೇಕಸ್ಯಾಂ ಬಹುಭರ್ತೃತಾ<br>ತಂ ಚ ಪ್ರಾಪ್ತವತೀ ಕೃಷ್ಣಾ ನ ಸಾ ಭೇದಯಿತುಂ ಕ್ಷಮಾ ॥೮॥**

ಅನೇಕ ಪುರುಷರೊಡನೆ ಸಹವಾಸೇಚ್ಛೆಯು ಸ್ತ್ರೀಯರಿಗೆ ಸ್ವಾಭಾವಿಕ ವಾಗಿ ಅಭಿಮತವೇ ಆಗಿರುತ್ತದೆ. ದ್ರೌಪದಿಗೆ ಆ ಆಶಯವು ಈಡೇರಿದೆ. ಆದುದರಿಂದ ದ್ರೌಪದಿಗೆ ಪಾಂಡವರ ವಿಷಯದಲ್ಲಿ ವೈಷಮ್ಯವುಂಟಾಗು ವಂತೆ ಮಾಡುವ ಸಾಧ್ಯತೆಯೇ ಇಲ್ಲ. ದ್ರುಪದನ ವಿಷಯವಾಗಿ ಹೇಳುವು ದಾದರೆ–ಅವನು ಪರಮಧಾರ್ಮಿಕನು. ಆರ್ಯವ್ರತನು. ಧನಪ್ರಿಯನಲ್ಲ. ಆದುದರಿಂದ ನಾವು ಅವನಿಗೆ ನಮ್ಮ ರಾಜ್ಯವನ್ನೇ ಧಾರೆಯೆರೆದುಕೊಡುವೆ ವೆಂದು ಹೇಳಿದರೂ ಅವನು ಪಾಂಡವರನ್ನು ಕೈಬಿಡಲು ಖಂಡಿತವಾಗಿಯೂ ಒಪ್ಪಲಾರನು. ಅವನ ಮಗನೂ ಸಕಲಸದ್ಗುಣಗಳನ್ನೂ ಹೊಂದಿರುತ್ತಾನೆ. ಪಾಂಡವರಲ್ಲಿ ವಿಶೇಷವಾದ ಅನುರಕ್ತಿಯನ್ನೂ ಹೊಂದಿರುತ್ತಾನೆ. ಆದುದ ರಿಂದ ಧೃಷ್ಟದ್ಯುಮ್ನನನ್ನೂ ಪಾಂಡವರಿಂದ ದೂರಮಾಡುವ ಸಾಧ್ಯತೆಯಿಲ್ಲ. ಈ ಮೇಲೆ ಹೇಳಿದ ಕಾರಣಗಳಿಂದ ಪಾಂಡವರನ್ನು ಕುಟಿಲೋಪಾಯಗಳಿಂದ ವಿನಾಶಮಾಡಲು ಸಾಧ್ಯವೇ ಇಲ್ಲವೆಂದು ನನಗನಿಸುತ್ತದೆ. ಆದರೆ ಬೇರಾವ ಮಾರ್ಗವೂ ಇಲ್ಲವೆಂದು ಚಿಂತಿಸಬೇಕಾಗಿಲ್ಲ, ದುರ್ಯೋಧನ! ಅವರನ್ನು

ವಿನಾಶಮಾಡಲು ಶೂರರಿಗೆ ಹಿತವೆನಿಸುವ ಋಜುಮಾರ್ಗವಿದೆ. ಆ ಮಾರ್ಗವು ಯಾವುದೆಂದರೆ : ಅವರನ್ನು ಈ ಕೂಡಲೇ ಆಕ್ರಮಿಸಿ ವಿನಾಶ ಹೊಂದುವವರೆಗೂ ಸದೆಬಡಿಯಬೇಕು. ಇದೊಂದೇ ಸೂಕ್ತವಾದ ಮತ್ತು ಅನುಸರಣೀಯವಾದ ಮಾರ್ಗ. ಎಂದಿನವರೆಗೆ ನಮ್ಮ ಪಕ್ಷವು ಪ್ರಬಲ ವಾಗಿದ್ದು ಪಾಂಚಾಲರಾಜನ ಪಕ್ಷವು ದುರ್ಬಲವಾಗಿರುವುದೋ– ಅಂದಿನ ವರೆಗೂ ಯಾವ ವಿಧವಾದ ಕಾರ್ಯಾಕಾರ್ಯಗಳನ್ನು ವಿವೇಚಿಸದೇ ದಾಳಿ ಮಾಡಬೇಕು. ಪಾಂಡವರು ಬಂಧು-ಮಿತ್ರರನ್ನೂ, ಅಗಣಿತವಾದ ರಥ-ತುರಗ-ಪದಾತಿಗಳನ್ನೂ ಶೇಖರಿಸಿಕೊಳ್ಳುವುದರೊಳಗಾಗಿ ಅವರನ್ನು ನಿರ್ಮೂಲನಮಾಡಬೇಕು. ಪಾಂಚಾಲರಾಜನು ತನ್ನ ಮಕ್ಕಳೊಡನೆ ಪಾಂಡವರ ಪಕ್ಷವನ್ನು ಸೇರಿ ಯುದ್ಧೋದ್ಯೋಗಮಾಡುವುದರೊಳಗಾಗಿ ನಮ್ಮ ಕಾರ್ಯವನ್ನು ಪೂರೈಸಬೇಕು. ಶ್ರೀಕೃಷ್ಣನು ಯಾದವಸೈನ್ಯದೊಡನೆ ಪಾಂಚಾಲನಗರಿಗೆ ಬಂದು ಪಾಂಡವರೊಡನೆ ಸೇರಿ ಅವರ ರಾಜ್ಯಲಾಭಕ್ಕೆ ಯತ್ನಿಸುವನೆಂಬುದನ್ನೂ ಮರೆಯಬೇಡ. ಶ್ರೀಕೃಷ್ಣನು ಪಾಂಡವರಿಗಾಗಿ ತನ್ನ ದೇಶಗಳನ್ನೂ, ಸುಖೋಪಭೋಗಗಳನ್ನೂ, ಅತುಲೈಶ್ವರ್ಯವನ್ನೂ ಪರಿ ತ್ಯಾಗಮಾಡಲೂ ಸಿದ್ಧನಿರುವನು. ಆದುದರಿಂದ ಅವನು ಸೈನ್ಯಸಮೇತನಾಗಿ ಪಾಂಚಾಲನಗರಕ್ಕೆ ಬರುವುದರೊಳಗಾಗಿ ನಾವು ಕೃತಕೃತ್ಯರಾಗಬೇಕು.

**ವಿಕ್ರಮೇಣ ಮಹೀ ಪ್ರಾಪ್ತಾ ಭರತೇನ ಮಹಾತ್ಮನಾ**
**ವಿಕ್ರಮೇಣ ಚ ಲೋಕಾಂಸ್ತ್ರೀಞ್ಜಿತವಾನ್ಪಾಕಶಾಸನಃ ॥೧೭॥**

**ವಿಕ್ರಮಂ ಚ ಪ್ರಶಂಸನ್ತಿ ಕ್ಷತ್ರಿಯಸ್ಯ ವಿಶಾಂಪತೇ**
**ಸ್ವಕೋ ಹಿ ಧರ್ಮಃ ಶೂರಾಣಾಂ ವಿಕ್ರಮಃ ಪಾರ್ಥಿವರ್ಷಭ ॥೧೮॥**

ನೃಪೋತ್ತಮನೇ! ಭರತಮಹಾರಾಜನೂ ಕೇವಲ ಪರಾಕ್ರಮದಿಂದಲೇ ಭೂಮಂಡಲಕ್ಕೆ ಅಧಿಪತಿಯಾದನು. ಇಂದ್ರನು ತ್ರೈಲೋಕ್ಯಾಧಿಪತ್ಯವನ್ನು ಗಳಿಸಿದ್ದೂ ಕೇವಲ ಪರಾಕ್ರಮದಿಂದಲೇ ಅಲ್ಲವೇ? ಪರಾಕ್ರಮವಿರುವ ಕ್ಷತ್ರಿ ಯನು ಪ್ರಶಂಸಾರ್ಹನಾಗುವನು. ಕ್ಷತ್ರಿಯವೀರರಿಗೆ ಪರಾಕ್ರಮವೇ ಮುಖ್ಯ ಧರ್ಮ. ಆದುದರಿಂದ ನಾವೀಗಲೇ ಚತುರಂಗಬಲಸಮೇತರಾಗಿ ಹೋಗಿ, ಪಾಂಚಾಲನಗರಿಗೆ ಮುತ್ತಿಗೆಹಾಕಿ ದ್ರುಪದನನ್ನೂ ಅವನ ಸೈನ್ಯಗಳನ್ನೂ

ಧ್ವಂಸಮಾಡಿ, ಪಾಂಡವರನ್ನು ಬಂಧಿಸಿ ಇಲ್ಲಿಗೆ ಸೆಳೆದುತರೋಣ. ಅವರನ್ನು ಸಾಮ-ದಾನ-ಭೇದೋಪಾಯಗಳಿಂದ ಬಗ್ಗಿಸಲು ಸಾಧ್ಯವೇ ಇಲ್ಲ. ಪರಾಕ್ರಮದಿಂದಲೇ ಅವರನ್ನು ಎದುರಿಸಬೇಕು. ಭುಜಬಲ-ಪರಾಕ್ರಮಗಳಿಂದ ಅವರನ್ನು ಸದೆಬಡಿದು ನೀನು ಅಖಂಡ ಭೂಮಂಡಲಕ್ಕೂ ರಾಜನಾಗು, ದುರ್ಯೋಧನ! ಇದೊಂದು ಮಾರ್ಗವು ಹೊರತಾಗಿ ಬೇರಾವ ಮಾರ್ಗದಿಂದಲೂ ಪಾಂಡವರನ್ನು ವಿನಾಶಗೊಳಿಸುವ ಸಾಧ್ಯತೆಯ ಅರಿವು ನನಗಿರುವುದಿಲ್ಲ."

ಜನಮೇಜಯ! ಪ್ರತಾಪವಂತನಾದ ಧೃತರಾಷ್ಟ್ರನು ಕರ್ಣನ ವೀರವಾಣಿಯನ್ನು ಕೇಳಿ ಅವನನ್ನು ಬಹುವಾಗಿ ಪ್ರಶಂಸಿಸುತ್ತಾ ಈ ಮಾತುಗಳನ್ನು ಹೇಳಿದನು : "ಭೀಷ್ಮ, ದ್ರೋಣ, ವಿದುರ, ನೀನು ಮತ್ತು ದುರ್ಯೋಧನ–ಈ ಐವರೂ ಸೇರಿ ಸಮಾಲೋಚನೆ ಮಾಡಿ ಒಂದು ನಿರ್ಧಾರಕ್ಕೆ ಬರಬೇಕೆಂಬುದು ನನ್ನ ಅಭಿಮತವಾಗಿದೆ. ಎಲ್ಲರೊಡನೆ ಮಾಡುವ ವಿಚಾರವಿನಿಮಯದಿಂದ ಯಾವುದು ನಮಗೆ ಸುಖೋದಯವಾಗಿ ಕಾಣುವುದೋ ಆ ಮಾರ್ಗವನ್ನೇ ಅನುಸರಿಸೋಣ."

ಬಳಿಕ ಧೃತರಾಷ್ಟ್ರನು ಭೀಷ್ಮ-ದ್ರೋಣ-ವಿದುರರನ್ನೂ ಕರೆಸಿದನು. ಅವರೆಲ್ಲರೂ ಸುಖಾಸನದಲ್ಲಿ ಕುಳಿತನಂತರ ಧೃತರಾಷ್ಟ್ರನು ಪಾಂಡವರ ವಿಷಯದಲ್ಲಿ ಯಾವ ನೀತಿಯನ್ನು ಅನುಸರಿಸಬೇಕೆನ್ನುವ ವಿಷಯವಾಗಿ ಪ್ರತ್ಯೇಕವಾಗಿ ಸ್ಪಷ್ಟವಾದ ಅಭಿಪ್ರಾಯವೇನೆಂಬುದನ್ನು ತಿಳಿಸಬೇಕೆಂದು ಸೂಚಿಸಿದನು. ಭೀಷ್ಮನು ತನ್ನ ಅಭಿಪ್ರಾಯವನ್ನು ರಾಜನ ಮುಂದಿಟ್ಟನು.

೨೦೨ನೆಯ ಅಧ್ಯಾಯವು ಮುಗಿಯಿತು.

೨೦೩ನೆಯ ಅಧ್ಯಾಯ ವಿದುರಾಗಮನರಾಜ್ಯಲಮ್ಭಪರ್ವ (ಮುಂದುವರಿದಿದೆ.)

## ಪಾಂಡವರಿಗೆ ಅರ್ಧರಾಜ್ಯವನ್ನೇ ಕೊಡಬೇಕೆಂದು ಭೀಷ್ಮನ ಸಲಹೆ

ಜನಮೇಜಯ! ಪಿತಾಮಹನು ಹೇಳಿದನು :

"ಪಾಂಡವರೊಡನೆ ದ್ವೇಷವನ್ನು ಬೆಳೆಸಿ ಅವರೊಡನೆ ಜಗಳವಾಡಬೇಕೆಂಬ ಅಂಶವನ್ನು ನಾನು ಸರ್ವಥಾ ಒಪ್ಪುವುದಿಲ್ಲ. ಧೃತರಾಷ್ಟ್ರನು ಹೇಗೆ ಅನುಜಪುತ್ರನೋ ಅಂತೆಯೇ ಪಾಂಡುವೂ ನನ್ನ ಅನುಜಪುತ್ರನೇ ಆಗಿದ್ದನು. ಆದುದರಿಂದ ಗಾಂಧಾರಿಯ ಮಕ್ಕಳೂ ಮತ್ತು ಕುಂತಿಯ ಮಕ್ಕಳೂ ನನಗೆ ಸಮಾನರು. ನಿನ್ನ ಮಕ್ಕಳ ರಕ್ಷಣೆಯ ಭಾರವನ್ನು ವಹಿಸಿರುವಂತೆ, ಕುಂತೀಪುತ್ರರ ರಕ್ಷಣೆಯ ಭಾರವನ್ನೂ ನಾನು ವಹಿಸಲೇಬೇಕು. ನನಗೂ ಮತ್ತು ರಾಜನಾದ ನಿನಗೂ ಪಾಂಡವರು ಸಮೀಪಬಂಧುಗಳಾಗಿರುವಂತೆ– ದುರ್ಯೋಧನನಿಗೂ ಮತ್ತು ಇತರ ಕುರುವಂಶದ ರಾಜಕುಮಾರರಿಗೂ ಸಮೀಪದ ಬಂಧುಗಳೇ ಆಗಿರುವರು. ಹೀಗಿರುವಾಗ ಅವರೊಡನೆ ಜಗಳವಾಡುವುದನ್ನು ನಾನು ಖಂಡಿತವಾಗಿಯೂ ಒಪ್ಪಲಾರೆನು. ನ್ಯಾಯವಾದ ಒಪ್ಪಂದಮಾಡಿಕೊಂಡು ಆ ಪಾಂಡುಪುತ್ರರಿಗೆ ಅರ್ಧರಾಜ್ಯವನ್ನು ವಹಿಸಿಕೊಡುವುದೇ ಸೂಕ್ತವಾಗಿ ಕಾಣುತ್ತದೆ. ಈ ರಾಜ್ಯವು ನಿಶ್ಚಯವಾಗಿಯೂ ಆನುವಂಶಿಕವಾಗಿ ಪಾಂಡವರಿಗೇ ಸೇರಬೇಕಾಗಿರುತ್ತದೆ. ದುರ್ಯೋಧನ! ನೀನು ಹೇಗೆ ಈ ರಾಜ್ಯವು ಪಿತೃ-ಪಿತಾಮಹರ ಸೊತ್ತೆಂದೂ ಮತ್ತು ನಿನಗೆ ಸಂಪೂರ್ಣವಾಗಿ ಇದರ ಮೇಲೆ ಹಕ್ಕು-ಬಾಧ್ಯತೆಗಳಿವೆಯೆಂದೂ ಭಾವಿಸಿರುವೆಯೋ–ಅಂತೆಯೇ ಪಾಂಡವರೂ ಭಾವಿಸಿರುವರು. ಅವರಿಗೆ ಈ ರಾಜ್ಯವನ್ನಾಳುವ ಅಧಿಕಾರವಿಲ್ಲವೆನ್ನುವುದಾದರೆ ನಿನಗಾಗಲೀ ಅಥವಾ ಇತರ ರಾಜಕುಮಾರರಿಗಾಗಲೀ ಈ ರಾಜ್ಯವನ್ನಾಳುವ ಅಧಿಕಾರವು ಹೇಗೆ ಪ್ರಾಪ್ತವಾಗುವುದು? ನಿನಗೆ ನ್ಯಾಯವಾದ ಹಕ್ಕಿಲ್ಲದಿದ್ದರೂ ಅಧರ್ಮದಿಂದ ರಾಜ್ಯವನ್ನಾಳುತ್ತಿರುವೆ. ನಿನಗಿಂತಲೂ ಮೊದಲು ಪಾಂಡವರಿಗೇ ಈ ರಾಜಗದ್ದುಗೆಯ ಅಧಿಕಾರವು ಸಿದ್ಧವಾಗಿದೆಯೆಂದು ನಾನು ಭಾವಿಸುತ್ತೇನೆ. ಈ ಕಾರಣಗಳಿಂದ ಇಂದು ನೀನು ಪಾಂಡವರನ್ನು ಪ್ರೀತ್ಯಾದರಗಳಿಂದ ಬರಮಾಡಿಕೊಂಡು ಅವರಿಗೆ ಅರ್ಧರಾಜ್ಯವನ್ನು ಕೊಡುವುದೇ ಸೂಕ್ತವಾಗಿದೆ. ಇದು ಸರ್ವರಿಗೂ ಹಿತಕರವಾದ

ಮಾರ್ಗ. ನೀನಿದಕ್ಕೆ ವ್ಯತಿರಿಕ್ತವಾಗಿ ನಡೆದುಕೊಂಡರೆ ನಮ್ಮೆಲ್ಲರಿಗೂ ಗಂಡಾಂತರವು ತಪ್ಪಲಾರದು. ನಿನಗೂ ಅಪಯಶಸ್ಸುಂಟಾಗುವುದು. ಇದರಲ್ಲಾವ ಸಂಶಯವೂ ಇಲ್ಲ. ದುರ್ಯೋಧನ!

**ಕೀರ್ತಿರಕ್ಷಣಮಾತಿಷ್ಠ ಕೀರ್ತಿರ್ಹಿ ಪರಮಂ ಬಲಮ್**
**ನಷ್ಟಕೀರ್ತೇರ್ಮನುಷ್ಯಸ್ಯ ಜೀವಿತಂ ಹ್ಯಫಲಂ ಸ್ಮೃತಮ್ ॥೧೦॥**

**ಯಾವತ್ಕೀರ್ತಿರ್ಮನುಷ್ಯಸ್ಯ ನ ಪ್ರಣಶ್ಯತಿ ಕೌರವ**
**ತಾವಜ್ಜೀವತಿ ಗಾನ್ಧಾರೇ ನಷ್ಟಕೀರ್ತಿಸ್ತು ನಶ್ಯತಿ ॥೧೧॥**

ಗಾಂಧಾರೀನಂದನನೇ! ಯಾವಾಗಲೂ ಕೀರ್ತಿಯನ್ನು ಉಳಿಸಿ ಕೊಳ್ಳುವ ಕಾರ್ಯಮಾಡು. 'ಕೀರ್ತಿ' ಎಂಬುದೇ ಮಾನವನಿಗೊಂದು ಬಲ. ಕೀರ್ತಿಯನ್ನು ಕಳೆದುಕೊಂಡ ಮಾನವನ ಜೀವನವು ವ್ಯರ್ಥವೇ ಸರಿ. ಕೀರ್ತಿಮಂತನಾದ ಮಾನವನಿಗೆ ಸಾವೆಂಬುದೇ ಇಲ್ಲ. ಭೌತಿಕವಾದ ಶರೀರವು ಅಳಿದುಹೋದರೂ ಅವನ ಕೀರ್ತಿಯು ಯುಗ-ಯುಗಾಂತರ ಗಳಲ್ಲಿಯೂ ಪ್ರತಿಧ್ವನಿತವಾಗುವುದು. ಆದುದರಿಂದ ಅವನು ಸತ್ತಿದ್ದರೂ ಬದುಕಿರುವಂತೆಯೇ ಆಗುವನು. ಆದರೆ ಕೀರ್ತಿಯನ್ನು ಕಳೆದುಕೊಂಡು ಮನುಷ್ಯನು ಜೀವಿಸಿದ್ದರೂ ಸತ್ತಂತೆಯೇ ಸರಿ. ಆದುದರಿಂದ ಕುರುವಂಶದ ಕೀರ್ತಿಗೆ ಕಳಂಕವನ್ನು ತರದೇ, ವಂಶಕ್ಕೆ ಉಚಿತವಾದ ಕಾರ್ಯವನ್ನು ಮಾಡು. ನಿನ್ನ ಪಿತೃ-ಪಿತಾಮಹರ ಮಾರ್ಗವನ್ನೇ ಅನುಸರಿಸು.

ಪಾಂಡವರು ನಾಶಹೊಂದದೇ ಉಳಿದಿರುವುದು ನಿಶ್ಚಯವಾಗಿಯೂ ನಮ್ಮ ಅದೃಷ್ಟವೆಂದೇ ಭಾವಿಸಬೇಕಾಗಿದೆ. ಮಹಾಮಾತೆಯಾದ ಕುಂತಿಯು ಉಳಿದಿರುವುದೂ ನಮ್ಮ ಸುಯೋಗವೇ. ತನ್ನ ದುಷ್ಟಯೋಜನೆಯನ್ನು ಸಾಧಿಸಿಕೊಳ್ಳಲಾರದೇ ಪುರೋಚನನು ಅಸುವನ್ನು ತೊರೆದುದೂ ನಮ್ಮ ಸೌಭಾಗ್ಯವೆಂದೇ ಹೇಳಬೇಕು. ಕುಂತಿಯ ಮಕ್ಕಳು ತಾಯಿಯೊಡನೆ ಜತು ಗೃಹದಲ್ಲಿ ಭಸ್ಮೀಭೂತರಾದರೆಂಬ ವಾರ್ತೆಯನ್ನು ಕೇಳಿದಂದಿನಿಂದ ನಾನು ಯಾರನ್ನೂ ತಲೆಯೆತ್ತಿ ನೋಡಲೂ ಲಜ್ಜಿತನಾಗಿದ್ದೆನು. ಕುಂತಿಗೂ-ಕುಂತಿಯ ಮಕ್ಕಳಿಗೂ ಉಂಟಾಗಿದ್ದ ಅಪಘಾತವನ್ನು ಕೇಳಿದ ಪ್ರಜೆಗಳು ಪುರೋಚನನಿಗಿಂತಲೂ ಹೆಚ್ಚಾಗಿ ನೀನೇ ಅಪರಾಧಿಯೆಂದು ಭಾವಿಸಿದ್ದರು.

ಈ ಕಾರಣದಿಂದ ಪಾಂಡವರು ಅಪಘಾತದಿಂದ ಪಾರಾಗಿರುವುದೂ ಮತ್ತು ಅವರು ಪುನಃ ಕಾಣಿಸಿಕೊಂಡಿರುವುದೂ ನಿನ್ನ ಅಪಕೀರ್ತಿಯನ್ನು ಸ್ವಲ್ಪವಾದರೂ ತೊಡೆದುಹಾಕುತ್ತದೆ. ಅಮಿತಪರಾಕ್ರಮಿಗಳಾದ ಪಾಂಡವರು ಜೀವಿಸಿರುವವರೆಗೂ ವಜ್ರಧರನಾದ ಇಂದ್ರನಿಂದಲೂ ಕೂಡ ಪಿತೃ-ಪಿತಾಮಹರಿಂದ (ಆನುವಂಶಿಕವಾಗಿ) ಪ್ರಾಪ್ತವಾಗಿರುವ ರಾಜ್ಯ ಭಾಗವನ್ನು ಅವರಿಂದ ಬಲಾತ್ಕಾರವಾಗಿ ಪಡೆಯಲು ಸಾಧ್ಯವಾಗಲಾರದು. ಇದಲ್ಲದೇ ಪಾಂಡವರು ಧಾರ್ಮಿಕರೂ ಮತ್ತು ಸುಸಂಘಟಿತರೂ ಆಗಿದ್ದಾರೆ. ನಿನ್ನ ಅಧರ್ಮದ ಕಾರಣದಿಂದಾಗಿ ಇಬ್ಬರಿಗೂ ಸಮಾನವಾಗಿ ಹಕ್ಕಿರುವ ಈ ರಾಜ್ಯದಲ್ಲಿ ಈವರೆಗೂ ತಮ್ಮ ಭಾಗವನ್ನು ಪಡೆದಿರುವುದಿಲ್ಲ.

**ಯದಿ ಧರ್ಮಸ್ತ್ವಯಾ ಕಾರ್ಯೋ ಯದಿ ಕಾರ್ಯಂ ಪ್ರಿಯಂ ಚ ಮೇ।**
**ಕ್ಷೇಮಂ ಚ ಯದಿ ಕರ್ತವ್ಯಂ ತೇಷಾಮರ್ಧಂ ಪ್ರದೀಯತಾಮ್॥**

ನೀನು ಧರ್ಮಮಾರ್ಗದಲ್ಲಿಯೇ ಇರಬೇಕೆನ್ನುವ ಇಚ್ಛೆಯುಳ್ಳವನಾಗಿದ್ದರೆ, ನನಗೆ ಪ್ರಿಯವನ್ನುಂಟುಮಾಡುವ ಅಭಿಲಾಷೆಯು ನಿನಗಿದ್ದರೆ, ಸರ್ವರೂ ಸುಖ-ಶಾಂತಿಗಳಿಂದಿರಬೇಕೆನ್ನುವ ಆಶಯವಿದ್ದರೆ–ನಾನು ಹೇಳಿದಂತೆ ಅರ್ಧರಾಜ್ಯವನ್ನು ಈ ಕೂಡಲೇ ಪಾಂಡವರಿಗೆ ವಹಿಸಿಕೊಡು.”

ಽ೦೩ನೆಯ ಅಧ್ಯಾಯವು ಮುಗಿಯಿತು.

೨೦೪ನೆಯ ಅಧ್ಯಾಯ ವಿದುರಾಗಮನರಾಜ್ಯಲಮ್ಭಪರ್ವ (ಮುಂದುವರಿದಿದೆ.)

## ದ್ರೋಣರ ಅಭಿಪ್ರಾಯ : ಕರ್ಣನ ವಿರೋಧ

ಜನಮೇಜಯ! ಭೀಷ್ಮನು ತನ್ನ ಅಭಿಪ್ರಾಯವನ್ನು ಹೇಳಿ ಮುಗಿಸಿದನಂತರ ದ್ರೋಣರು ಮಾತನಾಡಲು ಉಪಕ್ರಮಿಸಿದರು :

**ಮನ್ತ್ರಾಯ ಸಮುಪಾನೀತೈರ್ಧೃತರಾಷ್ಟ್ರಹಿತೈರ್ನೃಪ।**
**ಧರ್ಮ್ಯಮರ್ಥ್ಯಂ ಯಶಸ್ಯಂ ಚ ವಾಚ್ಯಮಿತ್ಯನುಶುಶ್ರುಮ ॥೧॥**

“ಮಹಾರಾಜ! ಮಿತ್ರರನ್ನೂ-ಬಂಧುಗಳನ್ನೂ ಸಮಾಲೋಚನೆಗೆ ಆಹ್ವಾನಿಸಿದಾಗ ಸಲಹೆಗಳನ್ನು ಕೊಡಲು ಬರುವ ಬಂಧು-ಮಿತ್ರರು ಧರ್ಮ

ವಿಹಿತವಾದ, ಸತ್ಯವಾದ, ಅರ್ಥಾನುಗುಣವಾದ, ಯಶಸ್ಕರವಾದ ಸಲಹೆಗಳನ್ನೇ ಕೊಡಬೇಕೆಂದು ಹಿರಿಯರು ಹೇಳುತ್ತಿದ್ದುದನ್ನು ಕೇಳಿರುತ್ತೇವೆ. ಈಗ ನೀನು ಜಿಜ್ಞಾಸೆಮಾಡುತ್ತಿರುವ ವಿಷಯದಲ್ಲಿ ಭೀಷ್ಮನು ಯಾವ ಅಭಿಪ್ರಾಯವನ್ನು ನಿನ್ನ ಮುಂದಿಟ್ಟಿರುವನೋ ಅದೇ ಅಭಿಪ್ರಾಯಕ್ಕೆ ನನ್ನ ಸಂಪೂರ್ಣವಾದ ಸಮ್ಮತಿಯಿದೆ. ಸರಿಯಾಗಿ ವಿಭಾಗಿಸಿದ ಅರ್ಧರಾಜ್ಯವನ್ನು ಕುಂತೀಪುತ್ರರು ಪಡೆಯಲಿ. ಇದೇ ಸನಾತನಧರ್ಮ. ಪ್ರಿಯೋಕ್ತಿಗಳನ್ನಾಡಲು ಚತುರನಾದ ದೂತನೊಬ್ಬನು ಈ ಕೂಡಲೇ ಧನ-ಕನಕ-ವಸ್ತುಗಳೊಡನೆ ಪಾಂಡವರನ್ನು ಕಾಣಲು ಪಾಂಚಾಲನಗರಿಗೆ ಹೋಗಲಿ. ಆ ದೂತನು ದ್ರುಪದನ ಬಳಿಗೆ ಹೋಗಿ ಅವನ ಮಗಳಿಗೂ ಅಳಿಯಂದಿರಿಗೂ ನೀನು ಕಳುಹಿಸುವ ಬಳುವಳಿಗಳನ್ನು ಅರ್ಪಿಸಲಿ. 'ನಿನ್ನ ಬಾಂಧವ್ಯದಿಂದ ನಮ್ಮ ಕೀರ್ತಿಯೂ, ಸ್ಥಾನ-ಮಾನಗಳೂ ಹೆಚ್ಚಿರುವುದೆಂದು ಧೃತರಾಷ್ಟ್ರನು ಅಭಿಪ್ರಾಯಪಡುತ್ತಾನೆ'–ಎಂದು ದ್ರುಪದನಿಗೆ ಹೇಳಲಿ. ಧೃತರಾಷ್ಟ್ರ-ದುರ್ಯೋಧನರು ಈಗುಂಟಾಗಿರುವ ನೂತನಬಾಂಧವ್ಯದಿಂದ ಹೆಚ್ಚು ಸಂತಸಗೊಂಡಿದ್ದಾರೆಂದು ಬಾರಿ-ಬಾರಿಗೂ ಹೇಳಲಿ. ಇದೇ ಮಾತುಗಳನ್ನು ನಮ್ಮ ದೂತನು ಧೃಷ್ಟದ್ಯುಮ್ನನೊಡನೆಯೂ ಹೇಳಬೇಕು. ಪಾಂಡವರಲ್ಲಿಗೆ ಹೋಗಿ ನಮ್ಮ ದೂತನು ಕುಂತೀಸುತರನ್ನೂ, ಮಾದ್ರೀಸುತರನ್ನೂ ಪ್ರಿಯೋಕ್ತಿಗಳಿಂದ ಸಂತೈಸಬೇಕು.

ನಿನ್ನ ಆಜ್ಞಾನುಸಾರವಾಗಿ ಶುಭ್ರವಾದ, ಸ್ವರ್ಣಮಯವಾದ ಆಭರಣಗಳನ್ನು ನಿನ್ನ ದೂತನು ದ್ರೌಪದಿಗೆ ಪಾರಿತೋಷಿಕಗಳನ್ನಾಗಿ ಕೊಡಲಿ. ದ್ರುಪದನ ಮಕ್ಕಳೆಲ್ಲರಿಗೂ ಯಥಾಯೋಗ್ಯವಾದ ಬಹುಮಾನಗಳನ್ನೂ ಕೊಡಲಿ. ಪಾಂಡವರಿಗೂ ಮತ್ತು ಕುಂತಿಗೂ ಯಥೋಚಿತವಾದ ಪಾರಿತೋಷಿಕಗಳನ್ನು ಕೊಡಲಿ. ಈ ರೀತಿಯಾಗಿ ದ್ರುಪದನಿಗೂ, ದ್ರುಪದಪುತ್ರರಿಗೂ, ದ್ರೌಪದಿಗೂ, ಪಾಂಡವರಿಗೂ ಮತ್ತು ಕುಂತಿಗೂ ಪಾರಿತೋಷಿಕಗಳನ್ನು ಕೊಟ್ಟು, ಅವರೊಡನೆ ಸಾಂತ್ವವಚನಗಳನ್ನಾಡಿದ ನಂತರ ಅವರನ್ನು ಹಸ್ತಿನಾಪುರಕ್ಕೆ ಕರೆತರುವ ಪ್ರಸ್ತಾಪವನ್ನೆತ್ತಬೇಕು.

ದ್ರುಪದನ ಅನುಮತಿಯನ್ನು ಪಡೆದು ಪಾಂಡವರು ಪಾಂಚಾಲನಗರಿಯನ್ನು ಬಿಟ್ಟು ಹೊರಟನಂತರ ದುಃಶಾಸನ-ವಿಕರ್ಣರು ಮಂಗಳವಾದ್ಯ

ಸಮೇತರಾಗಿ ಚತುರಂಗಬಲದೊಡನೆ ಹೋಗಿ ಪಾಂಡವರನ್ನು ಸ್ವಾಗತಿಸಲಿ. ಅವರು ಹಸ್ತಿನಾಪುರಕ್ಕೆ ಬಂದೊಡನೆಯೇ ಅವರನ್ನು ಪ್ರೀತ್ಯಾದರಗಳಿಂದ ಬರಮಾಡಿಕೊಳ್ಳುವುದು ನಿನ್ನ ಕರ್ತವ್ಯವಾಗಿದೆ. ಅವರು ಬಂದ ಸ್ವಲ್ಪ ದಿನಗಳಲ್ಲಿಯೇ ಪ್ರಜೆಗಳ ಅಪೇಕ್ಷೆಯಂತೆ ರಾಜ್ಯಭಾರದಲ್ಲಿ ನಿಯುಕ್ತರಾಗಲಿ. ನಿನ್ನ ಮಕ್ಕಳಿಗೂ ಮತ್ತು ಪಾಂಡುಪುತ್ರರಿಗೂ ನೀನು ಮಾಡಬೇಕಾಗಿರುವ ಮುಖ್ಯಕರ್ತವ್ಯವೇ ಇದು. ಮಹಾರಾಜ! ಭೀಷ್ಮನ ಅಭಿಪ್ರಾಯವನ್ನೇ ನಾನೂ ಸಂಪೂರ್ಣವಾಗಿ ಅನುಮೋದಿಸುತ್ತೇನೆ. ಭೀಷ್ಮನು ಹೇಳಿದಂತೆ ಆಚರಿಸಿ ಪಾಂಡವರಿಗೆ ಅರ್ಧರಾಜ್ಯವನ್ನು ಕೊಡುವುದು ಸತ್ಪುರುಷನಾದ ನಿನಗೆ ಯೋಗ್ಯವಾಗಿ ಕಾಣುತ್ತದೆ."

ಭೀಷ್ಮ-ದ್ರೋಣರು ತಮ್ಮ ಸಲಹೆಗಳನ್ನು ಕೊಟ್ಟನಂತರ ಕರ್ಣನು ತನ್ನ ಅಭಿಪ್ರಾಯವನ್ನು ಧೃತರಾಷ್ಟ್ರನ ಮುಂದಿಟ್ಟನು :

"ಮಹಾರಾಜ! ಭೀಷ್ಮ-ದ್ರೋಣರಿಬ್ಬರಿಗೂ ನೀನು ಯಥೇಚ್ಛವಾಗಿ ಐಶ್ವರ್ಯವನ್ನಿತ್ತು ಒಳ್ಳೊಳ್ಳೆಯ ಸ್ಥಾನ-ಮಾನಗಳನ್ನಿತ್ತು ಗೌರವಿಸಿರುವೆ. ಇದೂ ಅಲ್ಲದೇ ಇವರನ್ನು ನೀನು ನಿನ್ನ ಆಪ್ತಮಿತ್ರರೆಂದೂ ಭಾವಿಸಿರುವೆ. ಹೀಗಿರುವಾಗ ಇವರು ನೀನಿಟ್ಟಿರುವ ಅಪಾರವಾದ ಶ್ರದ್ಧಾ-ವಿಶ್ವಾಸಗಳನ್ನು ದುರುಪಯೋಗಪಡಿಸಿಕೊಂಡು ನಿನಗೆ ಅಹಿತವಾದ ಸಲಹೆಯನ್ನೇ ಕೊಡುತ್ತಿದ್ದಾರೆ. ಶ್ರೇಯಸ್ಕರವಾದ ಸಲಹೆಯನ್ನು ಕೊಡುತ್ತಿಲ್ಲ. ಇದಕ್ಕಿಂತಲೂ ಹೆಚ್ಚಿನ ಆಶ್ಚರ್ಯವೇನಿದೆ?

**ದುಷ್ಟೇನ ಮನಸಾ ಯೋ ವೈ ಪ್ರಚ್ಛನ್ನೇನಾನ್ತರಾತ್ಮನಾ**
**ಬ್ರೂಯಾನ್ನಿಃಶ್ರೇಯಸಂ ನಾಮ ಕಥಂ ಕುರ್ಯಾತ್ಸತಾಂ**
**ಮತಮ್ ॥೧೪॥**

ಮನಸ್ಸಿನಲ್ಲಿ ದುರ್ಭಾವನೆಗಳನ್ನು ತುಂಬಿಕೊಂಡು ಅಂತರಂಗದ ಅಭಿಪ್ರಾಯವನ್ನು ಮರೆಮಾಚಿ, ಶ್ರೇಯಸ್ಕರವಾದ ಸಲಹೆಗಳನ್ನೇ ಕೊಡುತ್ತಿದ್ದೇವೆಂದು ಬಡಾಯಿಕೊಚ್ಚಿಕೊಳ್ಳುವವರು ಹಿತವನ್ನು ಹೇಳಬಲ್ಲರೇ? ಅವರ ಮಾತುಗಳನ್ನು ಸತ್ಪುರುಷರು ಸಮ್ಮತಿಸುವರೇ? ಮನಸಾ, ವಾಚಾ,

ಕಾಯೇನ, ಕರ್ಮಣಾ–ಏಕರೂಪವಾಗಿರುವ ಸತ್ಪುರುಷರ ಅಭಿಪ್ರಾಯವು ಇಂತಹವರ ಅಭಿಪ್ರಾಯದೊಡನೆ ಹೊಂದಿಕೊಳ್ಳಲು ಹೇಗೆ ತಾನೇ ಸಾಧ್ಯವಾಗುವುದು? ಇಂತಹ ಸಲಹೆಗಳನ್ನು ಕಾರ್ಯರೂಪಕ್ಕೆ ತರುವುದಾದರೂ ಹೇಗೆ?

**ನ ಮಿತ್ರಾಣ್ಯರ್ಥಕೃಚ್ಛ್ರೇಷು ಶ್ರೇಯಸೇ ಚೇತರಾಯ ಚ।**
**ವಿಧಿಪೂರ್ವಂ ಹಿ ಸರ್ವಸ್ಯ ದುಃಖಂ ವಾ ಯದಿ ವಾ ಸುಖಮ್॥**

**ಕೃತಪ್ರಜ್ಞೋಽಕೃತಪ್ರಜ್ಞೋ ಬಾಲೋ ವೃದ್ಧಶ್ಚ ಮಾನವಃ।**
**ಸಸಹಾಯೋಽಸಹಾಯಶ್ಚ ಸರ್ವಂ ಸರ್ವತ್ರ ವಿನ್ದತಿ ॥೧೬॥**

ಕಷ್ಟವು ಬಂದೊದಗಿತೆಂದರೆ ಎಂತಹ ಮಿತ್ರರೇ ಆಗಲಿ ಏನನ್ನೂ ಮಾಡಲಾರರು. ಶ್ರೇಯಸ್ಸಿಗೂ ಕಾರಣರಾಗಲಾರರು; ಅಶ್ರೇಯಸ್ಸಿಗೂ ಕಾರಣರಾಗಲಾರರು. ಸುಖ-ದುಃಖಗಳು ಮನುಷ್ಯನ ಲಲಾಟಲಿಖಿತವನ್ನು ಅನುಸರಿಸಿಯೇ ಬರುವುವು. ಬುದ್ಧಿವಂತನೇ ಆಗಲಿ; ದಡ್ಡನೇ ಆಗಲಿ; ಯುವಕನೇ ಆಗಲಿ; ಮುದುಕನೇ ಆಗಲಿ; ಸಹಾಯಯುಕ್ತನಾಗಿರಲಿ; ಸಹಾಯಶೂನ್ಯನೇ ಆಗಿರಲಿ–ಸುಖ-ದುಃಖಗಳು ವಿಧಿನಿಯಮಾನುಸಾರವಾಗಿ ಆಯಾಕಾಲಕ್ಕೆ ಸರಿಯಾಗಿ ಒದಗಿಯೇ ತೀರುವುವು. ಇದು ಅನಿವಾರ್ಯ. ಈ ವಿಷಯದಲ್ಲಿ ಹಿಂದೆ ನಡೆದ ಒಂದು ಇತಿಹಾಸವನ್ನು ಹೇಳುವೆನು, ಕೇಳು. ಮಹಾರಾಜ! ಮಗಧರಾಜ್ಯಕ್ಕೆ ಅಧಿಪತಿಯಾದ ಅಂಬುವೀಚನೆಂಬ ರಾಜನು ರಾಜಗೃಹವೆಂಬ ರಾಜಧಾನಿಯಲ್ಲಿ ವಾಸವಾಗಿದ್ದನು. ಅವನು ಎಂದೂ ತನ್ನ ರಾಜಕಾರ್ಯಗಳಲ್ಲಿ ಆಸಕ್ತಿಯುಳ್ಳವನಾಗಿರಲಿಲ್ಲ. ಇಂದ್ರಿಯಗಳ ಸ್ವಾಧೀನತೆಯನ್ನು ಕಳೆದುಕೊಂಡು ಶ್ವಾಸರೋಗಪೀಡಿತನಾಗಿದ್ದನು. ಈ ಕಾರಣದಿಂದ ಅವನ ರಾಜ್ಯಾಧಿಕಾರವೆಲ್ಲವೂ ಮಂತ್ರಿಯ ಹಸ್ತಗತವಾಗಿದ್ದಿತು. ಮಹಾಕರ್ಣಿಯೆಂಬ ಮುಖ್ಯಮಂತ್ರಿಯು ದೇಶದ ಅಧಿಕಾರಸೂತ್ರವನ್ನು ವಹಿಸಿದ್ದನು. ರಾಜನು ನಿರ್ವೀರ್ಯನೆಂದೂ, ನಿರಾಸಕ್ತನೆಂದೂ ತಿಳಿದೊಡನೆಯೇ ಮಂತ್ರಿಗೆ ಸ್ವಯಂಪ್ರಭುತ್ವದ ಭಾವನೆಯು ಬಂದು, ರಾಜನನ್ನು ತಿರಸ್ಕಾರಮಾಡಲು ಪ್ರಾರಂಭಿಸಿದನು. ಅಷ್ಟು ಮಾತ್ರವಲ್ಲ; ರಾಜನ ಮಡದಿಯರು, ಬೊಕ್ಕಸ ಇತ್ಯಾದಿಗಳನ್ನೂ ಆ ದುಷ್ಟಮಂತ್ರಿಯು ಅನುಭವಿಸಲು

ಪ್ರಾರಂಭಿಸಿದನು. ಅಷ್ಟರಿಂದಲೂ ಅವನಿಗೆ ತೃಪ್ತಿಯುಂಟಾಗಲಿಲ್ಲ. ಅವನ ದುಷ್ಟವಾದ ಆಶಯಗಳು ಒಂದೊಂದಾಗಿ ನೆರವೇರುತ್ತಿದ್ದಂತೆಲ್ಲಾ ಮತ್ತೊಂದು ಆಶಯವು ಅವನ ಮನದಲ್ಲಿ ಉದ್ಭವಿಸುತ್ತಿದ್ದಿತು. ಕಟ್ಟಕಡೆಗೆ ರಾಜ್ಯಸಿಂಹಾಸನದ ಮೇಲೂ ಕುಳಿತುಬಿಡಬೇಕೆಂದು ನಿಶ್ಚಯಮಾಡಿದನು.

ಆದರೆ ದುಷ್ಟಮಂತ್ರಿಯ ಆ ಒಂದು ಪ್ರಯತ್ನವು ಮಾತ್ರ ಕೈಗೂಡಲಿಲ್ಲವೆಂದು ಹಿರಿಯರು ಹೇಳುತ್ತಾರೆ. ರಾಜನು ಎಷ್ಟೇ ಆಲಸ್ಯದಿಂದಿದ್ದರೂ, ರಾಜಕಾರ್ಯಗಳಲ್ಲಿ ಆಸಕ್ತಿಯನ್ನು ವಹಿಸದಿದ್ದರೂ, ಶ್ವಾಸರೋಗದಿಂದ ಪೀಡಿತನಾಗಿದ್ದರೂ ದುಷ್ಟಮಂತ್ರಿಗೆ ರಾಜ್ಯವನ್ನು ಕಬಳಿಸಲು ಸಾಧ್ಯವಾಗಲಿಲ್ಲ. ಅಂಬುವೀಚನಿಗೆ ರಾಜಗದ್ದುಗೆಯು ಹೇಗೆ ಉಳಿಯಿತು? ಮಹಾರಾಜ! ಕೇವಲ ಅದೃಷ್ಟಬಲದಿಂದಲೇ ಅಲ್ಲವೇ? ಅದೃಷ್ಟವಶದಿಂದ ಈ ರಾಜ್ಯವಿಂದು ನಿನ್ನ ಸಾರ್ವಭೌಮತ್ವಕ್ಕೆ ಸೇರಿದೆ. ಮುಂದೆಯೂ ಅದೇ ಅದೃಷ್ಟವಶದಿಂದಲೇ ಅಖಂಡಸಾಮ್ರಾಜ್ಯವೂ ನಿನ್ನ ಅಧೀನದಲ್ಲಿಯೇ ಇರುವುದು. ಪ್ರಪಂಚದ ರಾಜರೆಲ್ಲರೂ ನಿನಗೆ ಶತ್ರುಗಳಾಗಿ ಪರಿಣಮಿಸಿದರೂ ಅದೃಷ್ಟಾಯತ್ತವಾದ ರಾಜ್ಯವನ್ನು ನಿನ್ನಿಂದ ಕಬಳಿಸಲು ಖಂಡಿತವಾಗಿಯೂ ಸಾಧ್ಯವಾಗಲಾರದು. ಒಂದು ವೇಳೆ ರಾಜ್ಯವು ನಿನ್ನ ಕೈಬಿಟ್ಟುಹೋಗಬೇಕೆಂದು ವಿಧಿಯೇ ನಿಶ್ಚಯಿಸಿರುವುದಾದರೆ–ಆಗಲೂ ನಿನ್ನ ಯಾವ ಪ್ರಯತ್ನಗಳೂ ಸಫಲವಾಗಲಾರವು. ಇವೆಲ್ಲವನ್ನೂ ಮನಸ್ಸಿಗೆ ತಂದುಕೊಂಡು ಬಂದಿರುವ ಸಲಹೆಗಳ ಯುಕ್ತಾಯುಕ್ತತೆಗಳನ್ನೂ ಮತ್ತು ಸಲಹೆನೀಡಿದವರ ಸದಸತ್ತ್ವಭಾವಗಳನ್ನೂ ಪೂರ್ಣವಾಗಿ ಪರಿಶೀಲಿಸಿ ಕಾರ್ಯಮಾಡು, ಮಹಾರಾಜ!"

ಕರ್ಣನು ಭೀಷ್ಮ-ದ್ರೋಣರನ್ನೇ ಉದ್ದೇಶಿಸಿ ಮೇಲೆ ಹೇಳಿದ ಕಥೆಯನ್ನು ನಿರೂಪಣೆಮಾಡಿದನು. ತಮ್ಮೆದುರಿನಲ್ಲಿಯೇ ಆಡಿದ ಆ ಮಾತುಗಳನ್ನು ಸತ್ಯಸಂಧರಾದ, ಧರ್ಮಿಷ್ಠರಾದ ಭೀಷ್ಮ-ದ್ರೋಣರು ಸಹಿಸಿಕೊಳ್ಳಲಿಲ್ಲ. ಕರ್ಣನ ಮಾತುಗಳು ಮುಗಿದೊಡನೆಯೇ ದ್ರೋಣರು ಹೇಳಿದರು :

"ಕರ್ಣ! ನೀನು ಬಹಳ ದುಷ್ಟನು ಮತ್ತು ಕೃತ್ರಿಮಿಯು. ನೀನು ಯಾವುದೋ ದುರುದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು ಈ ರೀತಿಯಲ್ಲಿ ಮಾತನಾಡುತ್ತಿರುವೆಯೆಂಬುದು ಸ್ಪಷ್ಟವಾಗಿ ತೋರುತ್ತದೆ. ಪಾಂಡವರಿಗೆ

ಕೇಡನ್ನು ಮಾಡುವ ಉದ್ದೇಶವು ನಿನ್ನಲ್ಲಿರುವುದರಿಂದಲೇ ಆ ದುರುದ್ದೇಶಕ್ಕೆ ನಮ್ಮ ಸಲಹೆಯು ವಿರುದ್ಧವೆಂದು ಭಾವಿಸಿ, ನಮ್ಮ ಮೇಲೆ ದೋಷಾರೋಪಣೆಯನ್ನು ಮಾಡುತ್ತಿರುವೆ. ರಾಧೇಯ! ನೀನೇನಾದರೂ ಹೇಳು. ನಾನು ಹೇಳಿರುವುದು ಸರ್ವರ ಹಿತಕ್ಕೆಂಬುದೂ ಮತ್ತು ಕುರುವಂಶದ ಅಭಿವೃದ್ಧಿಗೆಂಬುದೂ ನೆನಪಿರಲಿ. ನಾನು ನೀಡಿರುವ ಸಲಹೆಗಳು ಅಯುಕ್ತವೆನಿಸುವುದಾದರೆ–ಆ ಸಲಹೆಗಳಿಂದ ಕೆಟ್ಟ ಪರಿಣಾಮಗಳಾಗುವುವೆಂದು ತಿಳಿದರೆ–ನಮ್ಮೆಲ್ಲರಿಗೂ ಮಂಗಳಕರವಾದ ಮಾರ್ಗವನ್ನು ನೀನೇ ಸೂಚಿಸು. ಆದರೆ ಇಷ್ಟುಮಾತ್ರ ನಿಶ್ಚಯ :

**ಅತೋಽನ್ಯಥಾ ಚೇತ್ಕ್ರಿಯತೇ ಯದ್ಬ್ರವೀಮಿ ಪರಂ ಹಿತಮ್।**
**ಕುರವೋ ವೈ ವಿನಂಕ್ಷ್ಯನ್ತಿ ನಚಿರೇಣೈವ ಮೇ ಮತಿಃ ॥೨೮॥**

ನಾನು ಕುರು-ಪಾಂಡವರಿಬ್ಬರಿಗೂ ಪರಮಹಿತಕರವಾದ ಸಲಹೆಯನ್ನೇ ಕೊಟ್ಟಿದ್ದೇನೆ. ನಾನಿತ್ತಿರುವ ಸಲಹೆಯಂತೆ ನಡೆಯದಿದ್ದರೆ ಪ್ರಾಯಶಃ ಸ್ವಲ್ಪಕಾಲದಲ್ಲಿಯೇ ಕುರುವಂಶವು ವಿನಾಶವಾಗಿಬಿಡಬಹುದೆಂದು ನನಗೆ ತೋರುತ್ತದೆ.”

೨೦೪ನೆಯ ಅಧ್ಯಾಯವು ಮುಗಿಯಿತು.

೨೦೫ನೆಯ ಅಧ್ಯಾಯ ವಿದುರಾಗಮನರಾಜ್ಯಲಮ್ಭಪರ್ವ (ಮುಂದುವರಿದಿದೆ.)

**ವಿದುರನ ಅಭಿಪ್ರಾಯ : ದ್ರೋಣ-ಭೀಷ್ಮರ ಸಲಹೆಗೆ ಸಮ್ಮತಿ**

ಜನಮೇಜಯ! ಭೀಷ್ಮ-ದ್ರೋಣ-ಕರ್ಣರು ಮಾತನಾಡಿದನಂತರ ವಿದುರನು ಮಾತನಾಡಲು ಪ್ರಾರಂಭಿಸಿದನು :

“ಮಹಾರಾಜ! ನಿನ್ನ ಬಂಧು-ಮಿತ್ರರು ನಿನಗೆ ಈಗ ಶ್ರೇಯಸ್ಕರವಾದ ಮಾರ್ಗವನ್ನೇ ಹೇಳಬೇಕಾಗಿದೆ. ಆದರೆ ನೀನು ಅವರ ಮಾತನ್ನು ಕೇಳದಿದ್ದರೆ ನಿನಗೆ ಶ್ರೇಯಸ್ಸು ಹೇಗೆತಾನೇ ಲಭಿಸೀತು? ಶಾಂತನುವಿನ ಮಗನಾದ ಭೀಷ್ಮನು ಹೇಳಿರುವುದು ನಿನ್ನ ಸಂಪೂರ್ಣಹಿತಕ್ಕಾಗಿಯೇ. ಆದರೆ ನೀನದನ್ನು ಅಂಗೀಕರಿಸಲು ಸಿದ್ಧನಾಗಿಲ್ಲ. ಆಚಾರ್ಯರಾದ ದ್ರೋಣರೂ ನಿನಗೆ ಹಿತವನ್ನೇ ಹೇಳಿರುತ್ತಾರೆ. ಆದರೆ ರಾಧಾಸುತನಾದ ಕರ್ಣನೇನೋ ದ್ರೋಣರ ಮಾತುಗಳು ನಿನಗೆ ಹಿತಸಾಧಕಗಳೆಂಬುದನ್ನು ಒಪ್ಪಲಾರನು.

ಈ ಮೂವರ ಮಾತುಗಳನ್ನೂ ಕೇಳಿ ಈ ವಿಷಯವನ್ನು ನನ್ನಲ್ಲಿಯೇ ಮಥನಮಾಡಿ ಪರ್ಯಾಲೋಚಿಸಿದನಂತರ ಭೀಷ್ಮ-ದ್ರೋಣರಿಗಿಂತಲೂ ಉತ್ತಮರಾದ ಹೆಚ್ಚು ಬುದ್ಧಿವಂತರಾದ ಬಂಧು-ಮಿತ್ರರೂ, ಹಿತಚಿಂತಕರೂ ನಿನಗೆ ಮತ್ತಾರೂ ಇಲ್ಲವೆಂಬ ನಿರ್ಧಾರಕ್ಕೆ ಬಂದಿರುತ್ತೇನೆ. ವಯೋವೃದ್ಧರಾದ, ಜ್ಞಾನವೃದ್ಧರಾದ, ಪ್ರಾಜ್ಞರಾದ ಇವರು ನಿನ್ನನ್ನೂ ಪಾಂಡವರನ್ನೂ ಸಮದೃಷ್ಟಿಯಿಂದ ನೋಡುವವರಾಗಿರುತ್ತಾರೆ. ಧರ್ಮನಿಷ್ಠೆಯಲ್ಲಿ, ಸತ್ಯಪ್ರಿಯತೆಯಲ್ಲಿ ಇವರಿಬ್ಬರೂ ದಶರಥನ ಮಗನಾದ ಶ್ರೀರಾಮನಿಗಾಗಲೀ, ಮಹಾಮಹಿಮನಾದ ಗಯನಿಗಾಗಲೀ ಕಡಿಮೆಯವರಾಗಿಲ್ಲ. ಹಿಂದೆಯೂ ಇವರು ನಿನಗೆ ಯಾವಾಗಲೂ ಅಹಿತವಾದ ಸಲಹೆಗಳನ್ನು ಕೊಟ್ಟಿರುವುದಿಲ್ಲ. ನಿನ್ನ ವಿಷಯದಲ್ಲಿ ಯಾವ ವಿಧವಾದ ಅಪರಾಧವನ್ನೂ ಇವರು ಮಾಡಿರುವುದಿಲ್ಲ, ಅಲ್ಲವೇ? ನಿನಗೆ ಅಹಿತವಾದುದನ್ನು ಹೇಳಲು ತಾನೇ ಕಾರಣವೇನಿದೆ? ನೀನಾದರೂ ಇದುವರೆಗೂ ಇವರಿಗೆ ಯಾವ ವಿಧವಾದ ತೊಂದರೆಯನ್ನೂ ಉಂಟುಮಾಡಿರುವುದಿಲ್ಲ. ಹೀಗಿರುವಾಗ ಪುರುಷವ್ಯಾಘ್ರರಾದ, ಪ್ರಜ್ಞಾವಂತರಾದ, ಸತ್ಯಪರಾಕ್ರಮರಾದ ಇವರು ನಿನಗೆ ಅಶ್ರೇಯಸ್ಸುಂಟಾಗುವ ಸಲಹೆಯನ್ನು ಹೇಗೆತಾನೇ ಕೊಟ್ಟಾರು? ಭೂಲೋಕದಲ್ಲಿಯೇ ಪ್ರಜ್ಞಾವಂತರೆಂದೂ, ಪುರುಷಶ್ರೇಷ್ಠರೆಂದೂ ಪ್ರಸಿದ್ಧರಾಗಿರುವ ಭೀಷ್ಮ-ದ್ರೋಣರು ನಿನ್ನ ಸಮ್ಮುಖದಲ್ಲಿ ಕುಟಿಲತೆಯಿಂದ ಕೂಡಿದ ಮಾತುಗಳನ್ನು ಖಂಡಿತವಾಗಿಯೂ ಆಡುವವರಲ್ಲ.

ಧರ್ಮಜ್ಞರಾದ ಇವರು ಹಣದಾಸೆಗಾಗಿ ಪಕ್ಷಪಾತವನ್ನು ವಹಿಸಿ ಮಾತನಾಡುವುದಿಲ್ಲವೆಂಬುದು ನನಗೆ ದೃಢವಾಗಿದೆ. ಇವರು ಹೇಳಿರುವ ಮಾತುಗಳು ನಿಶ್ಚಯವಾಗಿಯೂ ನಿನಗೆ ಶುಭವನ್ನೇ ಉಂಟು ಮಾಡುತ್ತವೆಯೆಂದು ನಾನು ಭಾವಿಸಿರುತ್ತೇನೆ.

ಮಹಾರಾಜ! ದುರ್ಯೋಧನಾದಿಗಳು ನಿನಗೆ ಹೇಗೆ ಮಕ್ಕಳಾಗಿರುವರೋ–ಹಾಗೆಯೇ ಪಾಂಡವರೂ ನಿನ್ನ ಮಕ್ಕಳೇ ಅಲ್ಲವೇ? ಆದುದರಿಂದ ಪಾಂಡವರಿಗೆ (ನಿನ್ನ ಮಕ್ಕಳಿಗೆ) ಅಹಿತವನ್ನು ಬಯಸಿ ಸಲಹೆನೀಡುವ ನಿನ್ನ ಸಲಹೆಗಾರರು ನಿಶ್ಚಯವಾಗಿಯೂ ನಿನ್ನ ಹಿತಚಿಂತಕರಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿ. ನಿನ್ನ ಮಕ್ಕಳಲ್ಲಿಯೇ ನಿನಗೆ ಪಕ್ಷಪಾತವನ್ನು ಹುಟ್ಟಿಸಲು

ಪ್ರಯತ್ನಿಸುವ ಸಲಹೆಗಾರರು ನಿನಗೆ ಖಂಡಿತವಾಗಿಯೂ ಒಳ್ಳೆಯದನ್ನು ಮಾಡಲಾರರು. ಈ ಕಾರಣಗಳಿಂದ ಮಹಾನುಭಾವರಾದ ಭೀಷ್ಮ-ದ್ರೋಣರು ಇತ್ತಿರುವ ಸಲಹೆಗಳು ನಿನಗೆ ಯಾವ ವಿಧವಾದ ಆಪತ್ತನ್ನೂ ಉಂಟುಮಾಡುವುದಿಲ್ಲ. ನಿನಗೆ ನಿನ್ನ ಸ್ವಂತಮಕ್ಕಳಲ್ಲಿ ಪಾಂಡವರಿಗಿಂತಲೂ ವಿಶೇಷವಾದ ಪಕ್ಷಪಾತವಿದ್ದರೆ ಅದನ್ನು ಹೆಚ್ಚಿಸಲು ಯತ್ನಿಸುವವರು ನಿನಗೆ ಹಿತಚಿಂತಕರಲ್ಲ. ಅದಕ್ಕೋಸ್ಕರವೇ ಈ ಮಹನೀಯರು ಅಂತಹ ಸಲಹೆಯನ್ನು ಕೊಡಲಿಲ್ಲ. ಆದರೆ ನಿನಗಿದು ಈಗಲೇ ಅರ್ಥವಾಗಲಾರದು. ಪಾಂಡವರ ಅಜೇಯತ್ವದ ವಿಷಯವಾಗಿ ಇವರು ಹೇಳಿರುವುದು ನೂರುಪಾಲು ಸತ್ಯ. ನಿನಗೆ ಒಳ್ಳೆಯದಾಗಲಿ. ಮಹಾರಾಜ! ಸವ್ಯಸಾಚಿಯಾದ ಅರ್ಜುನನನ್ನು ಯುದ್ಧದಲ್ಲಿ ಪರಾಭವಗೊಳಿಸಲು ಮಹೇಂದ್ರನೇ ಎದುರಾಗಿ ನಿಂತರೂ ಸಾಧ್ಯವಾಗಲಾರದು. ಹತ್ತು ಸಾವಿರ ಆನೆಗಳ ಬಲವುಳ್ಳ ಭೀಮಸೇನನನ್ನು ಪರಾಭವಗೊಳಿಸಲು ದೇವತೆಗಳಿಗಾದರೂ ಸಾಧ್ಯವಿರುವುದೇ? ಯಮನ ಪುತ್ರರಿಗೆ ಸಮಾನರಾದ, ಯುದ್ಧವಿಶಾರದರಾದ, ನಕುಲ-ಸಹದೇವರನ್ನು–ಜೀವಿಸಿರಲು ಇಚ್ಛಿಸುವ ಯಾವನು ತಾನೇ ಯುದ್ಧಕ್ಕೆ ಆಹ್ವಾನಿಸುವನು?

**ಯಸ್ಮಿನ್ಧೃತಿರನುಕ್ರೋಶಃ ಕ್ಷಮಾ ಸತ್ಯಂ ಪರಾಕ್ರಮಃ**
**ನಿತ್ಯಾನಿ ಪಾಣ್ಡವೇ ಜ್ಯೇಷ್ಠೇ ಸ ಜೀಯೇತ ರಣೇ ಕಥಮ್ ॥೧೯॥**

**ಯೇಷಾಂ ಪಕ್ಷಧರೋ ರಾಮೋ ಯೇಷಾಂ ಮನ್ತ್ರೀ ಜನಾರ್ದನಃ**
**ಕಿಂ ನು ತೈರಜಿತಂ ಸಂಖ್ಯೇ ಯೇಷಾಂ ಪಕ್ಷೇ ಚ ಸಾತ್ಯಕಿಃ ॥೨೦॥**

ಕ್ಷಮೆ, ಸತ್ಯ, ಪರಾಕ್ರಮ, ಧೈರ್ಯ, ದಯೆ–ಇವೆಲ್ಲಕ್ಕೂ ಆಕರನಾಗಿರುವ ಪಾಂಡವಜ್ಯೇಷ್ಠನಾದ ಯುಧಿಷ್ಠಿರನನ್ನು ಪರಾಭವಗೊಳಿಸಲು ಹೇಗೆತಾನೇ ಸಾಧ್ಯವಾದೀತು? ಯಾರ ಪಕ್ಷದಲ್ಲಿ ಬಲರಾಮನಿರುವನೋ, ಯಾರಿಗೆ ಶ್ರೀಕೃಷ್ಣನೇ ಮಂತ್ರಿಯಾಗಿರುವನೋ, ಯಾರ ಪಕ್ಷವನ್ನು ವಹಿಸಿ ಸಾತ್ಯಕಿಯು ಯುದ್ಧ ಮಾಡಲು ಸಿದ್ಧನಿರುವನೋ–ಅಂತಹ ಪಾಂಡವರ ಪಕ್ಷವನ್ನು ಪರಾಜಯಗೊಳಿಸಲು ಸಾಧ್ಯವಿದೆಯೇ? ದ್ರುಪದನು ಯಾರಿಗೆ ಮಾವನಾಗಿರುವನೋ, ಧೃಷ್ಟದ್ಯುಮ್ನಾದಿ ದ್ರುಪದಪುತ್ರರು ಯಾರಿಗೆ ಭಾವಮೈದುನರಾಗಿರುವರೋ–ಅಂತಹವರನ್ನು ಯುದ್ಧದಲ್ಲಿ ಪರಾಜಯ

ಗೊಳಿಸಲು ಖಂಡಿತವಾಗಿಯೂ ಯಾರಿಂದಲೂ ಸಾಧ್ಯವಿಲ್ಲ. ಇವೆಲ್ಲವನ್ನೂ ಸಮಾಲೋಚಿಸಿ, ಈ ರಾಜ್ಯವು ನಿನಗಿಂತಲೂ ಮೊದಲು ಪಾಂಡವರಿಗೇ ಸಲ್ಲಬೇಕಾಗಿತ್ತೆಂಬುದನ್ನೂ ನೆನೆದು, ಧರ್ಮವಿಹಿತವಾದ ಮಾರ್ಗವನ್ನು ಅನುಸರಣೆಮಾಡು.

ಪುರೋಚನನೆಸಗಿದ ದುಷ್ಟಕಾರ್ಯದ ಕಳಂಕವು ನಿನ್ನ ಮೇಲಿದೆಯೆಂಬುದನ್ನೂ ಮರೆಯಬೇಡ. ಈಗಲಾದರೂ ಪಾಂಡವರನ್ನು ಪ್ರೀತ್ಯಾದರಗಳಿಂದ ಕಂಡು ಆ ಕಳಂಕವನ್ನು ತೊಡೆದುಹಾಕು. ಪಾಂಡವರ ಸಲುವಾಗಿ ನೀನು ಪ್ರೀತ್ಯಾದರಗಳನ್ನು ತೋರಬೇಕಾಗಿರುವುದು ಅವರನ್ನು ಉದ್ಧರಿಸುವ ಅಭಿಪ್ರಾಯದಿಂದಲ್ಲ. ನಮ್ಮ ಹಿತಕ್ಕಾಗಿ, ನಮ್ಮ ರಕ್ಷಣೆಗಾಗಿ, ಕುರುವಂಶದ ರಕ್ಷಣೆಗಾಗಿ, ಮೇಲಾಗಿ ಕ್ಷತ್ರಿಯರ ಅಭಿವೃದ್ಧಿಗಾಗಿ ನೀನು ಪಾಂಡವರನ್ನು ಪ್ರೀತ್ಯಾದರಗಳಿಂದ ಕಾಣಲೇಬೇಕಾಗಿದೆ. ನಾವು ಈ ಹಿಂದೆ ದ್ರುಪದನೊಡನೆ ಯುದ್ಧಮಾಡಿ ಅವನೊಡನೆ ಹಗೆತನವನ್ನು ಕಟ್ಟಿಕೊಂಡಿದ್ದೇವೆ. ನೂತನಬಾಂಧವ್ಯದ ಮೂಲಕ ನಾವು ಅವನನ್ನು ಮಿತ್ರನನ್ನಾಗಿ ಮಾಡಿಕೊಂಡರೆ ನಮ್ಮ ಪಕ್ಷದ ಬಲವು ಹೆಚ್ಚುವುದು.

**ಬಲವನ್ತಶ್ಚ ದಾಶಾರ್ಹಾ ಬಹವಶ್ಚ ವಿಶಾಂಪತೇ।**
**ಯತಃ ಕೃಷ್ಣಸ್ತತಃ ಸರ್ವೇ ಯತಃ ಕೃಷ್ಣಸ್ತತೋ ಜಯಃ ॥೨೬॥**

ದಾಶಾರ್ಹರು ಬಹುಸಂಖ್ಯಾತರೂ, ಮಹಾಪರಾಕ್ರಮಿಗಳೂ ಆಗಿರುವರು. ಶ್ರೀಕೃಷ್ಣನಿದ್ದೆಡೆಯಲ್ಲಿ ದಾಶಾರ್ಹರಿದ್ದೇ ಇರುತ್ತಾರೆ. ಶ್ರೀಕೃಷ್ಣನಿರುವ ಕಡೆಗೇ ಜಯವುಂಟಾಗುವುದೂ ನಿಶ್ಚಯ. ಸಾಮೋಪಾಯದಿಂದ ಸಾಧಿತವಾಗುವ ಕಾರ್ಯವನ್ನು ದೇವತೆಗಳ ಶಾಪಕ್ಕೆ ಸಿಕ್ಕದ ಯಾವನು ತಾನೇ ಯುದ್ಧದಿಂದ ಸಾಧಿಸಿಕೊಳ್ಳಲು ಯತ್ನಿಸುತ್ತಾನೆ? ಪಾಂಡವರು ಜೀವಂತರಾಗಿರುವರೆಂಬುದನ್ನು ತಿಳಿದೊಡನೆಯೇ ನಮ್ಮ ರಾಜ್ಯದ ಪ್ರಜೆಗಳೆಲ್ಲರೂ ಸಂತೋಷಭರಿತರಾಗಿ ಅವರ ಸಂದರ್ಶನಕ್ಕೆ ಕುತೂಹಲಿಗಳಾಗಿರುವರು. ಮಹಾರಾಜ! ಪ್ರಜೆಗಳಿಗೆ ಒಪ್ಪಿಗೆಯಾಗುವ ರೀತಿಯಲ್ಲಿ ನಡೆಯುವುದೂ ನಿನ್ನ ಧರ್ಮವಲ್ಲವೇ? ದುರ್ಯೋಧನ, ಕರ್ಣ, ಶಕುನಿ–ಇವರಿನ್ನೂ ಎಳೆಯ ಪ್ರಾಯದವರು. ಏನೂ ತಿಳಿಯದ ಮೂರ್ಖರು ಮತ್ತು ಪಾಪಿಷ್ಠರು. ಅವರ ಮಾತನ್ನು ಖಂಡಿತವಾಗಿಯೂ ಕೇಳಬೇಡ. ಮೂರ್ಖನಾದ

ದುರ್ಯೋಧನನ ಅಪರಾಧದಿಂದಾಗಿ ನಮ್ಮ ರಾಜ್ಯವು ಸಂಪೂರ್ಣವಾಗಿ ವಿನಾಶಹೊಂದುವುದೆಂಬುದನ್ನು ನಾನು ನಿನಗೆ ಹಿಂದೆಯೇ ಹೇಳಿರುವೆನಲ್ಲವೇ?"

೨೦೫ನೆಯ ಅಧ್ಯಾಯವು ಮುಗಿಯಿತು.

೨೦೬ನೆಯ ಅಧ್ಯಾಯ ವಿದುರಾಗಮನರಾಜ್ಯಲಮ್ಭಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ಆಜ್ಞೆಯಂತೆ ಪಾಂಡವರನ್ನು ಕರೆತರುವ ಸಲುವಾಗಿ ವಿದುರನ ಪ್ರಯಾಣ: ದ್ರುಪದ-ಪಾಂಡವರಲ್ಲಿ ಪ್ರಸ್ತಾಪ

ಪಾರಿಕ್ಷಿತ! ಧೃತರಾಷ್ಟ್ರನು ಎಲ್ಲರ ಮಾತುಗಳನ್ನೂ ಕೇಳಿದನು. ಭೀಷ್ಮ-ದ್ರೋಣ-ವಿದುರರು ಹೇಳುತ್ತಿರುವುದು ಅಧರ್ಮವೆಂದೂ, ಅಹಿತ ವೆಂದೂ ಹೇಳಲು ಸಾಧ್ಯವೇ ಇಲ್ಲ. ಆಂತರ್ಯದಲ್ಲಿ ಇಚ್ಛೆಯಿಲ್ಲದಿದ್ದರೂ ಅವರೆಲ್ಲರ ಮಾತಿನಂತೆ ನಡೆಯಬೇಕಾದುದು ಧೃತರಾಷ್ಟ್ರನಿಗೆ ಅನಿವಾರ್ಯವಾಗಿದ್ದಿತು. ಧೃತರಾಷ್ಟ್ರನು ವಿದುರನಿಗೆ ಹೇಳಿದನು :

"ವಿದುರ! ಶಾಂತನುವಿನ ಪುತ್ರನಾದ, ಪ್ರಾಜ್ಞನಾದ ಭೀಷ್ಮನೂ, ಮಹರ್ಷಿಗಳಾದ ದ್ರೋಣರೂ ಮತ್ತು ನೀನೂ ಸತ್ಯವನ್ನೇ ಹೇಳಿರುವಿರಿ. ಮಹಾಪರಾಕ್ರಮಿಗಳಾಗಿರುವ ಪಾಂಡುವಿನ ಮಕ್ಕಳು ನನಗೂ ಮಕ್ಕಳೆಂಬುದು ಧರ್ಮಸಮ್ಮತವಾದ ಮಾತಾಗಿದೆ. ನನ್ನ ಮಕ್ಕಳಿಗೆ ಈ ರಾಜ್ಯಸಿಂಹಾಸನದ ಮೇಲೆ ಹಕ್ಕಿರುವಂತೆ ಪಾಂಡುಪುತ್ರರಿಗೂ ಈ ಸಿಂಹಾಸನದ ಮೇಲೆ ಹಕ್ಕಿದೆಯೆಂಬುದರಲ್ಲಿ ಸಂಶಯಲೇಶವೂ ಇರುವುದಿಲ್ಲ. ಆದುದರಿಂದ ನೀನು ಈಗಲೇ ಹೋಗಿ ಪಾಂಡವರನ್ನೂ, ಅವರ ತಾಯಿಯಾದ ಕುಂತಿಯನ್ನೂ ಮತ್ತು ದೇವರೂಪಿಣಿಯೂ, ಸೊಸೆಯೂ ಆದ ದ್ರೌಪದಿಯನ್ನೂ ಪ್ರೀತ್ಯಾದರಗಳಿಂದ ಕರೆದುಕೊಂಡು ಬಾ. ನಿಶ್ಚಯವಾಗಿಯೂ ಅದೃಷ್ಟಬಲದಿಂದ ಕುಂತಿಯೂ ಮತ್ತು ಅವಳ ಮಕ್ಕಳೂ ಜೀವಂತರಾಗಿ ಉಳಿದುಕೊಂಡರು. ಅದೃಷ್ಟಬಲದಿಂದಲೇ ಮಹಾರಥಿಗಳಾದ ಪಾಂಡವರು ದ್ರೌಪದಿಯ ಕೈಹಿಡಿದಿರುವರು. ಇದರಿಂದಾಗಿ ನಮ್ಮ ಬಲವೂ ಹೆಚ್ಚಿತು. ಅದೃಷ್ಟವಶದಿಂದ ಪಾಪಿಯಾದ ಪುರೋಚನನೂ ವಿನಾಶಹೊಂದಿದನು. ಅದೃಷ್ಟದ ಕಾರಣದಿಂದಲೇ ನನ್ನ ಮಹತ್ತರವಾದ ದುಃಖವೂ ದೂರವಾಯಿತು."

ಧೃತರಾಷ್ಟ್ರನು ಇಷ್ಟು ಹೇಳಿದನಂತರ ಅಂದಿನ ಸಭೆಯು ಭೀಷ್ಮ-ದ್ರೋಣ-ವಿದುರರ ಹರ್ಷಧ್ವನಿಗಳೊಂದಿಗೆ ಮುಕ್ತಾಯವಾಯಿತು.

ವಿದುರನು ಧೃತರಾಷ್ಟ್ರನ ಅನುಜ್ಞೆಯನ್ನು ಪಡೆದು ಪಾಂಡವರ ಮತ್ತು ದ್ರುಪದನ ಸಮೀಪಕ್ಕೆ (ಪಾಂಚಾಲನಗರಿಗೆ) ಪ್ರಯಾಣಮಾಡಿದನು.

ವಿದುರನು ಹೋಗುವಾಗ ದ್ರೌಪದಿಗೂ, ಪಾಂಡವರಿಗೂ, ದ್ರುಪದನಿಗೂ ಪಾರಿತೋಷಕರೂಪವಾಗಿ ಕೊಡಲು ಯಥೇಚ್ಛವಾಗಿ ರತ್ನಾಭರಣಗಳನ್ನು ತೆಗೆಸಿಕೊಂಡು ಹೋಗಿದ್ದನು. ಧರ್ಮಜ್ಞನಾದ, ಸರ್ವಶಾಸ್ತ್ರವಿಶಾರದನಾದ ವಿದುರನು ದ್ರುಪದರಾಜಸಭೆಯನ್ನು ಪ್ರವೇಶಿಸಿ ದೊಡ್ಡವರಿಂದ ಹಿಡಿದು ಚಿಕ್ಕವರ ಪರ್ಯಂತವಾಗಿ ಯಥಾನುಕ್ರಮವಾಗಿ ರಾಜನನ್ನೂ, ರಾಜಕುಮಾರರನ್ನೂ ಆದರದ ಆಲಿಂಗನಗಳಿಂದಲೂ ನಮಸ್ಕಾರಾದಿಗಳಿಂದಲೂ ಗೌರವಿಸಿದನು.



ದ್ರುಪದನೂ ಸಹ ಸಿಂಹಾಸನದಿಂದ ಮೇಲೆದ್ದು, ವಿದುರನನ್ನು ಆದರದಿಂದ ಸ್ವಾಗತಿಸಿ, ರತ್ನಖಚಿತವಾದ ಪೀಠದಲ್ಲಿ ಕುಳ್ಳಿರಿಸಿ, ಯೋಗ-ಕ್ಷೇಮ

ಗಳನ್ನು ವಿಚಾರಿಸಿದನು. ಆ ಸಭೆಯಲ್ಲಿಯೇ ವಿದುರನು ಪಾಂಡವರನ್ನು ನೋಡಿ ಅಮಿತಸ್ನೇಹದಿಂದ ಅವರನ್ನು ಬಿಗಿದಪ್ಪಿ, ಯೋಗ-ಕ್ಷೇಮಗಳನ್ನೂ ವಿಚಾರಿಸಿದನು. ಆನಂದಬಾಷ್ಪಗಳು ಎಲ್ಲರ ಕಣ್ಣುಗಳಿಂದಲೂ ಧಾರಾವಾಹಿ ಯಾಗಿ ಪ್ರವಹಿಸುತ್ತಿದ್ದುವು. ಯುಧಿಷ್ಠಿರಾದಿಗಳೂ ವಿದುರನನ್ನು ಯಥಾನು ಕ್ರಮವಾಗಿ ನಮಸ್ಕರಿಸಿ ಹಸ್ತಿನಾಪುರದ ವೃತ್ತಾಂತವನ್ನು ವಿಚಾರಿಸಿದರು.

ಧೃತರಾಷ್ಟ್ರನ ಮಾತಿನಂತೆ ವಿದುರನು ಪಾಂಡುನಂದನರ ಯೋಗ-ಕ್ಷೇಮಗಳನ್ನು ಪುನಃ ವಿಚಾರಿಸಿದನು. ಹಸ್ತಿನಾಪುರದಿಂದ ಕೌರವರು ಕೊಟ್ಟು ಕಳುಹಿಸಿದ್ದ ಅಮೂಲ್ಯವಾದ ವಿಧ-ವಿಧವಾದ ರತ್ನಗಳನ್ನೂ, ಸುವರ್ಣ ನಾಣ್ಯಗಳನ್ನೂ ಪಾಂಡವರಿಗೂ, ಕುಂತಿಗೂ, ದ್ರೌಪದಿಗೂ, ದ್ರುಪದನಿಗೂ ಮತ್ತು ಅವನ ಮಕ್ಕಳಿಗೂ ಯಥಾಯೋಗ್ಯವಾಗಿ ವಿದುರನು ಹಂಚಿ ಕೊಟ್ಟನು. ಅನಂತರದಲ್ಲಿ ಮಹಾಮತಿಯಾದ, ವಿನಯಶೀಲನಾದ ವಿದುರನು ಶ್ರೀಕೃಷ್ಣನ ಸನ್ನಿಧಿಯಲ್ಲಿದ್ದ ಪಾಂಡವರನ್ನೂ ಮತ್ತು ದ್ರುಪದನನ್ನೂ ಕುರಿತು ಈ ಮಾತುಗಳನ್ನು ವಿನಯಪೂರ್ವಕವಾಗಿ ಹೇಳಿದನು :

ಮೊದಲು ದ್ರುಪದನನ್ನುದ್ದೇಶಿಸಿ ಹೀಗೆಂದನು : "ಮಹಾರಾಜ! ಮಕ್ಕಳೊಡನೆಯೂ, ಬಾಂಧವರೊಡನೆಯೂ, ಮಂತ್ರಿ-ಪುರೋಹಿತ-ಸೇನಾಪತಿಗಳೊಡನೆಯೂ ಉಪವಿಷ್ಟನಾಗಿರುವ ನೀನು ನಾನು ಹೇಳಲಿರುವ ಈ ಮಾತುಗಳನ್ನು ಆಲಿಸು. ಸಪುತ್ರನಾದ, ಸಾಮಾತ್ಯನಾದ, ಸಬಾಂಧವನಾದ ಧೃತರಾಷ್ಟ್ರನು ನಿನ್ನ ವಿಷಯದಲ್ಲಿ ಪ್ರೀತಮನಸ್ಕನಾಗಿ ನಿನ್ನ ಯೋಗ-ಕ್ಷೇಮಗಳನ್ನು ಪ್ರಶ್ನಿಸಬೇಕೆಂದು ಬಾರಿ-ಬಾರಿಗೂ ಹೇಳಿರುವನು. ನಿನ್ನೊಡನೆ ಆಗಿರುವ ಈ ನೂತನಸಂಬಂಧದಿಂದ ಮೊದಲೇ ನಿನ್ನ ಮೇಲಿದ್ದ ಅವನ ಪ್ರೀತಿಯು ಮತ್ತಷ್ಟು ದೃಢವಾಗಿದೆ.

ಶಾಂತನುವಿನ ಮಗನಾದ, ಮಹಾಪ್ರಾಜ್ಞನಾದ ಭೀಷ್ಮನೂ ಸಕಲ ಕೌರವರ ಪರವಾಗಿ ನಿನ್ನ ಕುಶಲವನ್ನು ವಿಚಾರಿಸಲು ಹೇಳಿರುವನು. ನಿನ್ನ ಪ್ರಿಯಮಿತ್ರರಾದ, ಪ್ರಾಜ್ಞರಾದ ದ್ರೋಣರು ನಿನ್ನನ್ನು ಮನದಲ್ಲಿಯೇ ಆಲಿಂಗಿಸಿ, ನಿನ್ನ ಈಗಿನ ಸುಖ-ಸಂತೋಷಗಳ ವಿಷಯವಾಗಿ ವಿಚಾರಿಸಲು ಹೇಳಿರುವರು. ನಿನ್ನೊಡನೆ ಉಂಟಾಗಿರುವ ಬಾಂಧವ್ಯದಿಂದ ನಿಶ್ಚಯ ವಾಗಿಯೂ ಧೃತರಾಷ್ಟ್ರನು, ತಾನು ಕೃತಕೃತ್ಯನಾದೆನೆಂದೇ ಭಾವಿಸಿರುತ್ತಾನೆ.

ಎಲ್ಲ ಕೌರವರಿಗೂ ಇದೇ ವಿಧವಾದ ಭಾವನೆಯುಂಟಾಗಿದೆ. ಹೆಚ್ಚೇನು ಹೇಳಲಿ, ದ್ರುಪದರಾಜ! ನೂತನರಾಜ್ಯವೊಂದು ಧೃತರಾಷ್ಟ್ರನ ಚಕ್ರಾಧಿಪತ್ಯಕ್ಕೆ ಹೊಸದಾಗಿ ಸೇರಿದ್ದರೂ ಇಷ್ಟೊಂದು ಆನಂದವು ಅವನಿಗುಂಟಾಗುತ್ತಿರಲಿಲ್ಲ. ನೂತನರಾಜ್ಯಲಾಭದಿಂದುಂಟಾಗುವ ಆನಂದಕ್ಕಿಂತಲೂ ನೂರುಪಾಲು ಹೆಚ್ಚಿನ ಆನಂದವು ನಿನ್ನೊಡನೆ ಪ್ರಾಪ್ತವಾಗಿರುವ ಬಂಧುತ್ವದಿಂದ ಧೃತರಾಷ್ಟ್ರನಿಗೆ ಉಂಟಾಗಿರುವುದು. ಈ ಸಂದರ್ಭದಲ್ಲಿ ಪಾಂಡವರು ಪಿತೃ-ಪಿತಾಮಹರ ರಾಜಧಾನಿಯಾದ ಹಸ್ತಿನಾಪುರವನ್ನು ಸಂದರ್ಶಿಸಲು ನೀನು ಅನುಮತಿಯನ್ನು ಕೊಡಬೇಕು. ಕುರುವಂಶೀಯರು ಪಾಂಡವರನ್ನು ನೋಡಲು ಬಹಳ ಉತ್ಸುಕರಾಗಿದ್ದಾರೆ. ಪಾಂಡವರೂ ಹಸ್ತಿನಾಪುರವನ್ನು ಬಿಟ್ಟು ಬಹಳ ವರ್ಷಗಳಾದುವು. ಆದುದರಿಂದ ಪಾಂಡವರಿಗೂ, ಕುಂತೀದೇವಿಗೂ ಹಸ್ತಿನಾಪುರವನ್ನು ನೋಡುವ ಅಭಿಲಾಷೆಯಿದ್ದೇ ಇರುವುದು. ಇದಕ್ಕಿಂತಲೂ ಹೆಚ್ಚಾಗಿ ಹಸ್ತಿನಾಪುರದ ಪೌರರೂ ಮತ್ತು ಕೌರವಸ್ತ್ರೀಯರೂ ಪಾಂಚಾಲಿಯನ್ನು ನೋಡಲು ಹೆಚ್ಚಿನ ಆಸಕ್ತಿಯುಳ್ಳವರಾಗಿರುವರು. ಆದುದರಿಂದ ಸ್ವಲ್ಪವೂ ತಡಮಾಡದೇ ಈ ಕೂಡಲೇ ನೀನು ಪತ್ನೀಸಮೇತರಾದ ಪಾಂಡವರನ್ನು ಹಸ್ತಿನಾಪುರಕ್ಕೆ ಕಳುಹಿಸುವುದು ಯುಕ್ತವೆಂಬುದು ನನ್ನ ಅಭಿಪ್ರಾಯವಾಗಿದೆ. ನೀನು ಹಸ್ತಿನಾಪುರಕ್ಕೆ ಪ್ರಯಾಣಮಾಡಲು ಅವರಿಗೆ ಅನುಜ್ಞೆಯನ್ನಿತ್ತೊಡನೆಯೇ ಕುಂತೀ-ದ್ರೌಪದಿಯರೊಡನೆ ಪಾಂಡವರು ಆಗಮಿಸುತ್ತಿರುವರೆಂಬ ಶುಭವಾರ್ತೆಯನ್ನು ಧೃತರಾಷ್ಟ್ರನಿಗೆ ಹೇಳಿಕಳುಹಿಸುತ್ತೇನೆ. ಶೀಘ್ರಗಾಮಿಗಳಾದ ವಾರ್ತಾವಾಹಿಗಳನ್ನು ಧೃತರಾಷ್ಟ್ರನಲ್ಲಿಗೆ ಕೂಡಲೇ ಕಳುಹಿಸಿಕೊಡುತ್ತೇನೆ.”

೨೦೬ನೆಯ ಅಧ್ಯಾಯವು ಮುಗಿಯಿತು.

೨೦೭ನೆಯ ಅಧ್ಯಾಯ ವಿದುರಾಗಮನರಾಜ್ಯಲಮ್ಭಪರ್ವ (ಮುಂದುವರಿದಿದೆ.)

## ಹಸ್ತಿನಾಪುರಕ್ಕೆ ಪಾಂಡವರ ಆಗಮನ : ಇಂದ್ರಪ್ರಸ್ಥನಗರ ನಿರ್ಮಾಣ : ಬಲರಾಮ-ಕೃಷ್ಣರ ದ್ವಾರಕಾಗಮನ

ಜನಮೇಜಯ! ದ್ರುಪದನು ವಿದುರನಿಗೆ ಉತ್ತರವನ್ನಿತ್ತನು :

“ಮಹಾಪ್ರಾಜ್ಞನೇ! ನೀನು ಹೇಳಿದುದೆಲ್ಲವೂ ನಿಶ್ಚಯ. ನನಗೂ

ಈ ಬಾಂಧವ್ಯದಿಂದ ಹೆಚ್ಚಿನ ಸಂತೋಷವೇ ಆಗಿರುವುದು. ನೀನು ಹೇಳಿದಂತೆ ಈ ಮಹಾನುಭಾವರು ತಮ್ಮ ದೇಶಕ್ಕೆ ಹಿಂದಿರುಗುವುದು ಯುಕ್ತವಾಗಿಯೇ ಇದೆ. ಆದರೆ 'ನೀವು ಇಲ್ಲಿಂದ ಹೊರಟುಹೋಗಿ' ಎಂದು ನಾನು ಹೇಳಲಾರೆನು. ಹಾಗೆ ಹೇಳುವುದು ಯುಕ್ತವಲ್ಲವೆಂದೇ ನಾನು ಭಾವಿಸುತ್ತೇನೆ.

ಮಹಾಪರಾಕ್ರಮಿಗಳಾದ, ಧರ್ಮಿಷ್ಠರಾದ ಯುಧಿಷ್ಠಿರ-ಭೀಮಾರ್ಜುನ-ನಕುಲ-ಸಹದೇವರು ಹಸ್ತಿನಾಪುರಕ್ಕೆ ಹೋಗಲಿಚ್ಛಿಸುವುದಾದರೆ – ಧರ್ಮಸೂಕ್ಷ್ಮವನ್ನು ತಿಳಿದಿರುವ ಈ ರಾಮ-ಕೃಷ್ಣರೂ ಇದನ್ನು ಒಪ್ಪುವುದಾದರೆ – ಪಾಂಡವರು ಹೋಗಿಬರಬಹುದಾಗಿದೆ. ರಾಮ-ಕೃಷ್ಣರು ಯಾವಾಗಲೂ ಕುಂತೀಪುತ್ರರ ಹಿತಚಿಂತನೆಯಲ್ಲಿಯೇ ಸಂಪೂರ್ಣವಾದ ಆಸಕ್ತಿಯುಳ್ಳವರಾಗಿರುವರು."

ದ್ರುಪದನ ಈ ಮಾತುಗಳನ್ನು ಕೇಳಿ ಯುಧಿಷ್ಠಿರನು ಹೇಳಿದನು :

"ಮಹಾರಾಜ! ನಾವು ಪರಾಧೀನದಲ್ಲಿರತಕ್ಕವರು. ನಿನ್ನನ್ನೇ ಅವಲಂಬಿಸಿ ನಿನ್ನ ಆಶ್ರಯದಲ್ಲಿಯೇ ಇರತಕ್ಕವರು. ನೀನು ವಿಶ್ವಾಸಪೂರ್ವಕವಾಗಿ ಏನನ್ನು ಹೇಳುವೆಯೋ ಅದನ್ನೇ ಮಾಡುತ್ತೇವೆ."

ಯುಧಿಷ್ಠಿರನ ಆ ಸವಿನುಡಿಗಳನ್ನು ಕೇಳಿದನಂತರ ಶ್ರೀಕೃಷ್ಣನು ದ್ರುಪದನಿಗೆ ಹೇಳಿದನು : "ಪಾಂಡವರು ಹಸ್ತಿನೆಗೆ ಹಿಂದಿರುಗುವುದು ಸಮೀಚೀನವಾಗಿದೆಯೆಂದು ನಾನೂ ಅಭಿಪ್ರಾಯಪಡುತ್ತೇನೆ. ಆದರೆ ನಾವೆಲ್ಲರೂ ಯುಧಿಷ್ಠಿರನು ಹೇಳಿದಂತೆ ಧರ್ಮಿಷ್ಠನಾದ ದ್ರುಪದನ ನಿರ್ದೇಶವನ್ನು ಅನುಸರಿಸಿ ನಡೆಯುವುದೇ ಯುಕ್ತವಾಗಿದೆ."

ಅದಕ್ಕೆ ದ್ರುಪದನು ಹೇಳಿದನು :

"ಕಾಲ-ದೇಶ-ವರ್ತಮಾನಗಳಿಗೆ ಅನುಸಾರವಾಗಿ ಶ್ರೀಕೃಷ್ಣನು ಹೇಳಿರುವ ಮಾತುಗಳನ್ನು ನಾನೂ ಖಂಡಿತವಾಗಿಯೂ ಒಪ್ಪುವೆನು. ಪಾಂಡವರಲ್ಲಿ ನನಗೆಷ್ಟು ಪ್ರೀತಿ-ವಿಶ್ವಾಸಗಳಿವೆಯೋ ಶ್ರೀಕೃಷ್ಣನಿಗೂ ಅಷ್ಟೇ ಪ್ರೀತಿ – ವಿಶ್ವಾಸಗಳು ಪಾಂಡವರ ವಿಷಯದಲ್ಲಿವೆ. ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ :

**ನ ತದ್ಧ್ಯಾಯತಿ ಕೌನ್ತೇಯಃ ಪಾಣ್ಡುಪುತ್ರೋ ಯುಧಿಷ್ಠಿರಃ**
**ಯಥೈಷಾಂ ಪುರುಷವ್ಯಾಘ್ರಃ ಶ್ರೇಯೋ ಧ್ಯಾಯತಿ ಕೇಶವಃ ॥೯॥**

ಪಾಂಡವರ ಶ್ರೇಯಸ್ಸಿನಲ್ಲಿ ಶ್ರೀಕೃಷ್ಣನಿಗಿರುವಷ್ಟು ಆಸಕ್ತಿಯು ಪಾಂಡುಪುತ್ರನಾದ ಯುಧಿಷ್ಠಿರನಿಗೇ ಇಲ್ಲವೆಂದು ಹೇಳಬಹುದು."

ದ್ರುಪದನ ನಿರ್ದೇಶನದಂತೆ ಪಾಂಡವರೂ, ಶ್ರೀಕೃಷ್ಣ-ವಿದುರರೂ, ಕೃಷ್ಣೆಯಿಂದಲೂ ಮತ್ತು ಮಹಾಮಾತೆಯಾದ ಕುಂತಿಯಿಂದಲೂ ಕೂಡಿದವರಾಗಿ, ಪಾಂಚಾಲನಗರವನ್ನು ಬಿಟ್ಟು ಹಸ್ತಿನಾಪುರಕ್ಕೆ ಹೊರಟರು. ಬರುವ ದಾರಿಯಲ್ಲಿ ಹಲವಾರು ಸ್ಥಳಗಳಲ್ಲಿ ಬಿಡಾರಮಾಡಿ, ಅಲ್ಲಲ್ಲಿನ ಪ್ರಕೃತಿಸೌಂದರ್ಯದ ಸೊಬಗನ್ನು ವೀಕ್ಷಿಸುತ್ತಾ, ಸಂತೋಷಭರಿತರಾಗಿ ಪಾಂಡವರು ಮುಂದೆ ನಡೆಯುತ್ತಿದ್ದರು.

ಪಾಂಡವರು ಹಸ್ತಿನಾಪಟ್ಟಣದ ಸಮೀಪವರ್ತಿಗಳಾಗಿದ್ದಾರೆಂದು ತಿಳಿದೊಡನೆಯೇ ಧೃತರಾಷ್ಟ್ರನು ವಿಕರ್ಣ, ಚಿತ್ರಸೇನ ಮುಂತಾದ ಕೌರವ ಮುಖ್ಯರನ್ನೂ, ದ್ರೋಣ-ಕೃಪರನ್ನೂ–ಪಾಂಡವರನ್ನು ಆದರದಿಂದ ಸ್ವಾಗತಿಸುವ ಸಲುವಾಗಿ ಪಟ್ಟಣದ ಎಲ್ಲೆಗೆ ಕಳುಹಿಸಿಕೊಟ್ಟನು. ಪಾಂಡವರು ಹಸ್ತಿನಾಪುರದ ಎಲ್ಲೆಯೊಳಗೆ ಪ್ರವೇಶಿಸಿದೊಡನೆಯೇ ಕೌರವಮುಖ್ಯರು ಬ್ರಾಹ್ಮಣಪುರಸ್ಸರರಾಗಿ ಪಾಂಡವರಿಗೆ ಸ್ವಾಗತನೀಡಿ, ಯೋಗ-ಕ್ಷೇಮಗಳನ್ನು ವಿಚಾರಿಸಿ, ಅವರಿಗಾಗಿ ಸಜ್ಜುಗೊಳಿಸಿದ್ದ ದಿವ್ಯವಾದ ರಥಗಳಲ್ಲಿ ಕುಳ್ಳಿರಿಸಿಕೊಂಡು ಪಟ್ಟಣದೊಳಗೆ ಕರೆತಂದರು. ಅವರನ್ನು ಕಾಣಲು ರಾಜಬೀದಿಯ ಎರಡು ಕಡೆಗಳಲ್ಲಿಯೂ ಜನಸ್ತೋಮವು ಕಿಕ್ಕಿರಿದು ತುಂಬಿದ್ದಿತು. ಪಾಂಡವರು ಕುಳಿತಿದ್ದ ರಥಗಳು ಮಂಗಳವಾದ್ಯಪುರಸ್ಸರವಾಗಿ ರಾಜಬೀದಿಗಳಲ್ಲಿ ನಿಧಾನವಾಗಿ ಬರುತ್ತಿದ್ದುವು. ರಥಗಳು ತಮ್ಮ ಸಮೀಪಕ್ಕೆ ಬಂದೊಡನೆಯೇ ಆನಂದೋತ್ಸಾಹಗಳಿಂದ ಕೂಡಿದ್ದ ಪ್ರಜೆಗಳು ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸುವಂತೆ ಪ್ರಶಂಸಾತ್ಮಕವಾದ ಪ್ರಾಸಬದ್ಧವಾದ ವಾಕ್ಯಗಳಲ್ಲಿ ಜಯಘೋಷಗಳನ್ನು ಮಾಡುತ್ತಿದ್ದರು.

ಅಂತೆಯೇ ಹಸ್ತಿನಾಪುರದ ನಾಗರೀಕರೂ ಹೆಚ್ಚಿನ ಉತ್ಸಾಹದಿಂದ–

**ಅಯಂ ಸ ಪುರುಷವ್ಯಾಘ್ರಃ ಪುನರಾಯಾತಿ ಧರ್ಮವಿತ್**
**ಯೋ ನಃ ಸ್ವಾನಿವ ದಾಯಾದಾನ್ಧರ್ಮೇಣ ಪರಿರಕ್ಷತಿ ॥೧೭॥**

"ಪುರುಷವ್ಯಾಘ್ರನು ಪುನಃ ನಮ್ಮ ಪಟ್ಟಣಕ್ಕೆ ಬರುತ್ತಿದ್ದಾನೆ! ಧರ್ಮವಿದನು ಬರುತ್ತಿದ್ದಾನೆ! ಯಾವಾತನು ನಮ್ಮೆಲ್ಲರನ್ನೂ ತನ್ನವರೆಂದೇ ಭಾವಿಸಿ ರಕ್ಷಣೆಮಾಡುವನೋ– ಆ ಮಹಾನುಭಾವನು ಬರುತ್ತಿದ್ದಾನೆ."

**ಅದ್ಯ ಪಾಂಡುರ್ಮಹಾರಾಜೋ ವನಾದಿವ ಜನಪ್ರಿಯಃ**
**ಆಗತಃ ಪ್ರಿಯಮಸ್ಮಾಕಂ ಚಿಕೀರ್ಷುರ್ನಾತ್ರ ಸಂಶಯಃ ॥೧೮॥**

"ಜನಪ್ರಿಯನಾದ ಪಾಂಡುಮಹಾರಾಜನೇ ನಮಗೆ ಹಿತವನ್ನುಂಟು ಮಾಡಲು ಅರಣ್ಯದಿಂದ ಬರುತ್ತಿರುವನೋ – ಎಂಬಂತೆ ಯುಧಿಷ್ಠಿರನು ಬರುತ್ತಿದ್ದಾನೆ. ಇದರಲ್ಲಾವ ಸಂಶಯವೂ ಇಲ್ಲ" – ಎಂದು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು.

ಯುಧಿಷ್ಠಿರನನ್ನು ನೋಡಿ ಆನಂದಬಾಷ್ಪಗಳನ್ನು ಸುರಿಸುತ್ತಾ ಕೆಲವರು ವೃದ್ಧರು ತಮ್ಮ-ತಮ್ಮಲ್ಲಿಯೇ ಮಾತನಾಡಿಕೊಂಡರು : "ಕುಂತೀಸುತರು ಪುನಃ ನಮ್ಮ ಪಟ್ಟಣಕ್ಕೆ ಪ್ರವೇಶಿಸಿದರು. ನಾವೂ ಧನ್ಯರಾದೆವು. ಇವರ ಆಗಮನದಿಂದ ನಮಗುಂಟಾಗಿರುವ ಈ ಆನಂದವು ಮತ್ತಾವುದರಿಂದಲೂ ಆಗುತ್ತಿರಲಿಲ್ಲ. ನಾವಿದುವರೆಗೆ ಕೊಟ್ಟಿರುವ ದಾನದ ಫಲವೇನಾದರೂ ಇರುವುದಾದರೆ, ಯಜ್ಞ - ಯಾಗಾದಿಗಳನ್ನು ಮಾಡಿದ ಫಲವೇನಾದರೂ ಉಳಿದಿದ್ದರೆ, ಆ ಫಲದ ಪ್ರಭಾವದಿಂದ ಪಾಂಡವರು ನಮ್ಮ ಈ ಹಸ್ತಿನಾಪುರದಲ್ಲಿ ನೂರು ವರ್ಷಗಳನ್ನು ಕಳೆಯಲಿ."

ಕಟ್ಟಕಡೆಗೆ ಪಾಂಡವರ ರಥಗಳು ಅರಮನೆಯ ಮುಂದೆ ನಿಂತುವು. ಪಾಂಡವರು ರಥದಿಂದಿಳಿದು ಅರಮನೆಯನ್ನು ಪ್ರವೇಶಿಸಿದರು. ಸಿಂಹಾಸನಾ ರೂಢನಾಗಿ ಕುಳಿತಿದ್ದ ಧೃತರಾಷ್ಟ್ರನ ಕಾಲುಗಳನ್ನು ಮುಟ್ಟಿ ಪಾಂಡವರೆಲ್ಲರೂ ನಮಸ್ಕರಿಸಿದರು. ಅಂತೆಯೇ ಪಕ್ಕದಲ್ಲಿ ಕುಳಿತಿದ್ದ ಭೀಷ್ಮನಿಗೂ ನಮಸ್ಕರಿಸಿ ದರು. ತಮಗಿಂತಲೂ ಕಿರಿಯರ ಯೋಗ-ಕ್ಷೇಮಗಳನ್ನು ವಿಚಾರಿಸಿದರು. ಸಂಭ್ರಮದಿಂದ ಸ್ವಾಗತಿಸಲು ಬಂದಿದ್ದ ಪಟ್ಟಣದ ಮುಖ್ಯಸ್ಥರನ್ನು

ಪ್ರಿಯೋಕ್ತಿಗಳಿಂದ ಮಾತನಾಡಿಸಿದರು. ಅನಂತರ ಧೃತರಾಷ್ಟ್ರನ ನಿರ್ದೇಶನದಂತೆ ತಮಗಾಗಿ ಸಿದ್ಧಪಡಿಸಿದ್ದ ಸೌಧಗಳಿಗೆ ಹೋಗಿ ವಿಶ್ರಾಂತಿಯನ್ನು ಪಡೆದರು.

ಪಾಂಡವರು ಕೆಲವು ದಿನಗಳು ಹಸ್ತಿನಾಪುರದಲ್ಲಿ ಸುಖವಾಗಿಯೇ ಕಾಲಕಳೆದರು. ಬಳಿಕ ಒಂದು ದಿನ ಧೃತರಾಷ್ಟ್ರ-ಭೀಷ್ಮರು ಯುಧಿಷ್ಠಿರಾದಿಗಳನ್ನು ಕರೆಯಿಸಿದರು.

ಔಪಚಾರಿಕವಾದ ಮಾತುಗಳು ಮುಗಿದನಂತರ ಧೃತರಾಷ್ಟ್ರನು ಯುಧಿಷ್ಠಿರನನ್ನು ಕುರಿತು ಹೇಳಿದನು : "ಕುಂತೀಪುತ್ರ! ನಿಮ್ಮ ಮತ್ತು ದುರ್ಯೋಧನಾದಿಗಳ ನಡುವೆ ಇನ್ನು ಮುಂದೆ ಯಾವ ವಿಧವಾದ ವೈಮನಸ್ಯವೂ ಉಂಟಾಗಬಾರದೆಂಬುದೇ ನನ್ನ ಆಶಯವಾಗಿದೆ. ಆದುದರಿಂದ ನೀನು ನಿನ್ನ ಅನುಜರಿಂದೊಡಗೂಡಿ ಖಾಂಡವಪ್ರಸ್ಥನಗರಿಗೆ ಹೋಗಿ ಆ ಪಟ್ಟಣವನ್ನು ನಿನ್ನ ರಾಜಧಾನಿಯನ್ನಾಗಿ ಮಾಡಿಕೋ. ನೀನಲ್ಲಿ ನೆಲೆಸುವುದರಿಂದ ದಾಯಾದರಲ್ಲಿ ಯಾವ ವಿಧವಾದ ಕಲಹವುಂಟಾಗಲೂ ಅವಕಾಶವಿರಲಾರದು. ನಿಮಗೆ ಯಾರೂ ಯಾವ ಉಪದ್ರವವನ್ನೂ ಕೊಡಲಾರರು. ಇಂದ್ರನಿಂದ ದೇವತೆಗಳು ಸಂರಕ್ಷಿಸಲ್ಪಡುವಂತೆ – ನೀವು ಅರ್ಜುನನಿಂದ ಸಂರಕ್ಷಿಸಲ್ಪಡುವಿರಿ. ಖಾಂಡವಪ್ರಸ್ಥಕ್ಕೆ ಹೋಗಿ, ಅಲ್ಲಿ ನೀನು ಅರ್ಧರಾಜ್ಯದ ಆಡಳಿತಾಧಿಕಾರವನ್ನು ವಹಿಸು."

ಯುಧಿಷ್ಠಿರನು ಒಡನೆಯೇ ಅನುಜರೊಡನೆ ಮೇಲೆದ್ದು ಧೃತರಾಷ್ಟ್ರ, ಭೀಷ್ಮರಿಗೆ ನಮಿಸಿ 'ತಮ್ಮ ಆಜ್ಞೆಯನ್ನು ಶಿರಸಾ ವಹಿಸುವೆನು, ತಾತ!' ಎಂದು ಹೇಳಿ ತನ್ನ ಅರಮನೆಗೆ ಬಂದು ಕುಂತಿಗೂ-ದ್ರೌಪದಿಗೂ ರಾಜನು ಹೇಳಿದ ವಿಷಯವನ್ನು ತಿಳಿಸಿ ಪ್ರಯಾಣಸನ್ನದ್ಧನಾದನು.

ಪಾಂಡವರು ಶ್ರೀಕೃಷ್ಣನನ್ನು ಮುಂದುಮಾಡಿಕೊಂಡು ಹಸ್ತಿನಾಪುರ ದಿಂದ ಹೊರಟು ಅರಣ್ಯಮಧ್ಯದಲ್ಲಿದ್ದ ಖಾಂಡವಪ್ರಸ್ಥವನ್ನು ಸ್ವಲ್ಪದಿನಗಳ ಲ್ಲಿಯೇ ಸೇರಿದರು. ಖಾಂಡವಪ್ರಸ್ಥಕ್ಕೆ ಬಂದ ಸ್ವಲ್ಪದಿನಗಳಲ್ಲಿಯೇ ಆ ಪಟ್ಟಣ ವನ್ನು ಎರಡನೆಯ ಸ್ವರ್ಗವೋ ಎಂಬಂತೆ ಮಾರ್ಪಡಿಸಿದರು. ನಗರದ ಪುನರ್ನಿರ್ಮಾಣಮಾಡುವ ಮೊದಲು ವ್ಯಾಸರ ಆದೇಶದಂತೆ ವೃಕ್ಷಗಳಿಂದ ರಹಿತವಾಗಿದ್ದ ವಿಶಾಲಪ್ರದೇಶವೊಂದನ್ನು ನಗರಕ್ಕೆ ಸಮೀಪದಲ್ಲಿಯೇ ಆರಿಸಿ

ಕೊಂಡು ಆ ಸ್ಥಳದಲ್ಲಿ ವಿಧ್ಯುಕ್ತವಾಗಿ ಖನನಕರ್ಮವನ್ನು (ಗುದ್ದಲಿಪೂಜೆಯನ್ನು) ಮಾಡಿ, ನಗರದ ವಿಸ್ತೀರ್ಣವನ್ನು ಯಥಾಶಾಸ್ತ್ರೀಯವಾಗಿ ನಿರ್ಧರಿಸಿ ನಗರವನ್ನು ನಿರ್ಮಿಸಲು ಪ್ರಾರಂಭಿಸಿದರು. ನಗರದ ಸುತ್ತಲೂ ಸಮುದ್ರದಂತೆ ಆಳವಾಗಿ ಕಂದಕಗಳು ತೋಡಲ್ಪಟ್ಟುವು. ದೋಣಿಗಳ ದಂಡೆಯಲ್ಲಿ ಗಗನಚುಂಬಿಯಾದ ಕೋಟೆಯು ನಿರ್ಮಿತವಾಯಿತು.

ಬಿಳಿಯ ಮೋಡದಂತೆಯೂ, ಬೆಳದಿಂಗಳಿನಂತೆಯೂ ಪ್ರಕಾಶಮಾನವಾಗಿದ್ದ ಆ ಕೋಟೆಯಿಂದ ಖಾಂಡವಪ್ರಸ್ಥವು – ಸರ್ಪಗಳಿಂದ ಭೋಗವತೀಪಟ್ಟಣವು ಪ್ರಕಾಶಿಸುವಂತೆಯೇ – ಪ್ರಕಾಶಿಸಿತು. ಆ ಕೋಟೆಗೆ ಅನೇಕ ಮಹಾದ್ವಾರಗಳಿದ್ದು ಪ್ರತಿಯೊಂದು ಮಹಾದ್ವಾರವೂ ಎರಡು ರೆಕ್ಕೆಗಳನ್ನು ಹರಡಿಕೊಂಡ ಗರುಡನಂತಿದ್ದಿತು.

ಆ ಮಹಾದ್ವಾರಗಳಿಗೆ ಮಂದರಪರ್ವತಕ್ಕೆ ಸಮಾನವಾದ ಬಾಗಿಲುಗಳಿದ್ದುವು. ಆ ಬಾಗಿಲುಗಳ ಪಕ್ಕದಲ್ಲಿ ಅನೇಕವಿಧವಾದ ಆಯುಧಗಳು ಇಡಲ್ಪಟ್ಟಿದ್ದುವು. ಶತ್ರುಸೇನೆಯು ತನ್ನ ಸಂಪೂರ್ಣಬಲವನ್ನೆಲ್ಲಾ ಪ್ರಯೋಗಿಸಿದರೂ ಅಲ್ಲಿದ್ದ ಯಾವ ಬಾಗಿಲನ್ನೂ ಕದಲಿಸಲೂ ಸಾಧ್ಯವಾಗುತ್ತಿರಲಿಲ್ಲ. ಅನೇಕವಿಧವಾದ ಶಕ್ತ್ಯಾಯುಧಗಳಿಂದಲೂ, ನಾಗರಹಾವಿನಂತಹ ಅತಿತೀಕ್ಷ್ಣವಾದ ಈಟಿಗಳಿಂದಲೂ ಆ ಬಾಗಿಲುಗಳು ಆವರಿಸಲ್ಪಟ್ಟಿದ್ದುವು. ಕೋಟೆಯೊಳಗಿನ ಗುಪ್ತಸ್ಥಳಗಳಲ್ಲಿ ಸೈನ್ಯವನ್ನು ಇರಿಸಿ, ಸೈನಿಕರಿಗೆ ಪ್ರತಿನಿತ್ಯವೂ ಯಥೋಚಿತವಾದ ಶಿಕ್ಷಣವನ್ನು ಕೊಡಲಾಗುತ್ತಿತ್ತು. ಕೋಟೆಯ ಸುತ್ತಲೂ ಚತುರಂಗಬಲವನ್ನು ಯಾವಾಗಲೂ ಸುಸಜ್ಜಿತವಾಗಿಡಲಾಗಿತ್ತು. ಮುಖ್ಯವಾದೆಡೆಗಳಲ್ಲಿ ಶತಘ್ನಿಗಳನ್ನೂ (ಫಿರಂಗಿಗಳನ್ನೂ), ಅಂಕುಶಗಳನ್ನೂ, ಇತರ ಯುದ್ಧೋಪಯೋಗಿಗಳಾದ ಯಂತ್ರಗಳನ್ನೂ ಇಡಲಾಗಿತ್ತು. ಲೋಹನಿರ್ಮಿತವಾದ ಮಹಾಚಕ್ರಗಳೂ, ಸುವಿಭಕ್ತವಾದ ರಾಜಮಾರ್ಗಗಳೂ ಆ ಪಟ್ಟಣಕ್ಕೆ ಹೆಚ್ಚು ಶೋಭೆಯನ್ನು ಕೊಡುತ್ತಿದ್ದುವು. ದೈವಿಕವಾದ ಆಪತ್ತೆಂಬುದೇ ಅಲ್ಲಿರಲಿಲ್ಲ.

ಅಂತಹ ಅಗಾಧವಾದ ಕೋಟೆಯೊಳಗಿದ್ದ ನಗರಿಯ ಸೌಂದರ್ಯವನ್ನೇನೆಂದು ವರ್ಣಿಸಲಿ, ಜನಮೇಜಯ!”

ವೈಶಂಪಾಯನರು ಖಾಂಡವಪ್ರಸ್ಥವನ್ನು ತಾವೇ ಕಣ್ಣಿನಿಂದ ನೋಡುತ್ತಿರುವಂತೆಯೇ ವರ್ಣಿಸತೊಡಗಿದರು :

"ನಗರದ ಬೀದಿಗಳು ಬಹಳ ವಿಶಾಲವಾಗಿದ್ದುವು. ಆಧಿದೈವಿಕವಾದ ಯಾವ ಅಪಘಾತಗಳೂ ಅಲ್ಲಿ ಸಂಭವಿಸುತ್ತಿರಲಿಲ್ಲ. ಬೀದಿಗಳ ಪಕ್ಕಗಳಲ್ಲಿ ಸಾಲು-ಸಾಲಾಗಿ ಬಿಳಿಯ ಬಣ್ಣದ ಎತ್ತರವಾದ ಸೌಧಗಳು ನಿರ್ಮಿಸಲ್ಪಟ್ಟಿದ್ದುವು. ಅದರಿಂದ ಇಂದ್ರಪ್ರಸ್ಥವು – ಮಿಂಚುಗಳಿಂದ ಪ್ರದೀಪ್ತವಾದ ಆಕಾಶದಲ್ಲಿ ಒಟ್ಟಾಗಿ ಸೇರಿರುವ ಮೋಡಗಳ ಸಮೂಹದಂತೆ– ಶೋಭಿಸುತ್ತಿತ್ತು. ಪಟ್ಟಣದ ಶೋಭೆಯು ಅಮರಾವತಿಗೆ ಸಮಾನವಾಗಿದ್ದುದರಿಂದ ಅದಕ್ಕೆ ಇಂದ್ರಪ್ರಸ್ಥವೆಂದೇ ಹೆಸರಿಡಲಾಗಿತ್ತು. ಆ ಪಟ್ಟಣದಲ್ಲಿ, ಮನೋಹರವಾದ ಮಂಗಲಪ್ರದೇಶದಲ್ಲಿ ನಿರ್ಮಿತವಾದ ಧರ್ಮರಾಜನ ಅರಮನೆಯು–ಧನಸಂಪೂರ್ಣವಾದ ಧನಪತಿಯಾದ ಕುಬೇರನ ಅರಮನೆಯಂತೆಯೇ – ಕಂಗೊಳಿಸುತ್ತಿತ್ತು.

ಅಂತಹ ಸುಂದರವಾದ ನಗರಿಯ ನಿರ್ಮಾಣವಾದೊಡನೆಯೇ ವೇದ-ವೇದಾಂಗಪಾರಂಗತರಾದ ಬ್ರಾಹ್ಮಣರೂ, ನಾನಾಭಾಷಾಭಿಜ್ಞರೂ ಇಂದ್ರಪ್ರಸ್ಥದಲ್ಲಿ ನೆಲೆಸುವ ಅಭಿಲಾಷೆಯಿಂದ ಅಲ್ಲಿಗೆ ಬಂದರು. ವರ್ತಕರು ವ್ಯಾಪಾರಮಾಡಿ ಹಣವನ್ನು ಗಳಿಸುವ ಉದ್ದೇಶದಿಂದ ಅಗಣಿತಸಂಖ್ಯೆಯಲ್ಲಿ ನಗರಿಗೆ ಬಂದು ಸೇರಿದರು. ಗೀತ, ನೃತ್ಯ, ಶಿಲ್ಪ–ಇತ್ಯಾದಿ ಕಲೆಗಳಲ್ಲಿ ನಿಷ್ಣಾತರಾದ ಕಲಾವಿದರೂ ನಿವಾಸಮಾಡುವ ಸಲುವಾಗಿ ಆ ಸುಂದರನಗರಿಗೆ ಆಗಮಿಸಿದರು.

ನಗರದ ಸುತ್ತಲೂ ಜನರ ಮತ್ತು ರಾಜಕುಮಾರರ ವಿಹಾರಕ್ಕಾಗಿ ಹಲವು ಉದ್ಯಾನವನಗಳಾದುವು. ಆ ಉದ್ಯಾನಗಳು ಆಮ್ರ, ಆಮ್ರಾತಕ, ನೀಪ, ಅಶೋಕ, ಚಂಪಕ, ಪುನ್ನಾಗ, ನಾಗ, ಲಕುಚ, ಪನಸ, ಶಾಲ, ತಾಲ, ತಮಾಲ, ವಕುಲ, ಕೇತಕ, ಪ್ರಾಚೀನಾಮಲಕ, ಲೋಧ್ರ, ಅಂಕೋಲ, ಜಂಬೂ, ಪಾಟಲ, ಕುಬ್ಜಕ, ಅತಿಮುಕ್ತಕ, ಕರವೀರ, ಪಾರಿಜಾತ– ಮುಂತಾದ ಸಾವಿರಾರು ಫಲ-ಪುಷ್ಪಭರಿತವಾದ ಲತಾ-ವೃಕ್ಷ-ಗುಲ್ಮಗಳಿಂದ

ಕೂಡಿದ್ದು, ವಿಹಾರಿಗಳಿಗೆ ಹೆಚ್ಚಿನ ಆನಂದವನ್ನುಂಟುಮಾಡುತ್ತಿದ್ದುವು. ಮರಗಳ ಮೇಲೆ ನೂರಾರು ಬಗೆಯ ಪಕ್ಷಿಗಳು ವಾಸಮಾಡುತ್ತಿದ್ದುವು. ಮದಿಸಿದ ಕೋಗಿಲೆಗಳು ವಿಹಾರಿಗಳ ಕಿವಿಗಳಿಗಿಂಪಾಗುವಂತೆ ಧ್ವನಿಮಾಡುತ್ತಿದ್ದುವು. ಉನ್ಮತ್ತವಾದ ನವಿಲುಗಳು ಕೇಕಾಧ್ವನಿಮಾಡುತ್ತಾ ಜಾಗರವಾಡುತ್ತಿದ್ದುವು. ಉದ್ಯಾನವನಗಳಲ್ಲಿ ಕನ್ನಡಿಯಂತೆ ಶುಭ್ರವಾದ ವಿಶ್ರಾಂತಿಗೃಹಗಳೂ ಇದ್ದುವು. ಅಗಣಿತವಾದ ಲತಾಗೃಹಗಳಿದ್ದುವು. ಕೃತಕವಾದ ಪರ್ವತಗಳಿದ್ದುವು. ಸ್ಫಟಿಕದಂತೆ ಸ್ವಚ್ಛವಾದ ಜಲದಿಂದ ಕೂಡಿದ್ದ ನೂರಾರು ಕೊಳಗಳಿದ್ದುವು. ಸರೋವರಗಳಿದ್ದುವು. ಕಮಲಗಳಿಂದಲೂ, ಕನ್ನೈದಿಲೆಗಳಿಂದಲೂ, ರಾಜಹಂಸ-ಚಕ್ರವಾಕ-ಕಾರಂಡವ ಇವೇ ಮುಂತಾದ ಪಕ್ಷಿಗಳಿಂದಲೂ ಶೋಭಿಸುತ್ತಿದ್ದ ಅನೇಕತಟಾಕಗಳು ಆ ಉದ್ಯಾನವನ ಗಳಲ್ಲಿದ್ದುವು. ಕೆಲವೆಡೆಗಳಲ್ಲಿ ಸರೋವರಗಳಿದ್ದು ಅವುಗಳ ಮೇಲೆ ಹಚ್ಚನೆಯ ಬಳ್ಳಿಗಳು ಬೆಳೆದಿರುತ್ತಿದ್ದುವು. ಕೆಲವೆಡೆಗಳಲ್ಲಿ ವಿಸ್ತಾರವಾದ ಮತ್ತು ಆಳವಾದ ಈಜುವ ಕೊಳಗಳನ್ನು ನಿರ್ಮಿಸಲಾಗಿತ್ತು. ಅಂತಹ ಪರಮಸುಂದರವಾದ ನಗರಿಯಲ್ಲಿ ಪುಣ್ಯಪುರುಷರ ಮಧ್ಯದಲ್ಲಿ ವಾಸಮಾಡುತ್ತಿದ್ದ ಪಾಂಡವರ ಸಂತೋಷಕ್ಕೆ ಪಾರವೇ ಇರಲಿಲ್ಲ.

ಭೀಷ್ಮನೂ ಮತ್ತು ಧೃತರಾಷ್ಟ್ರನೂ ಅನುಸರಿಸಿದ ಧರ್ಮನೀತಿಯ ಕಾರಣದಿಂದ ಅರ್ಧರಾಜ್ಯವನ್ನು ಪಡೆದ ಇಂದ್ರಸಮರಾದ ಪಂಚಪಾಂಡವರಿಂದ ಕೂಡಿದ ಇಂದ್ರಪ್ರಸ್ಥವು ಮಹಾನಾಗಗಳಿಂದ ಕೂಡಿದ ಭೋಗವತಿಯಂತೆ ಪ್ರಕಾಶಿಸಿತು. ನಗರರಚನೆ, ಆಡಳಿತ ಇತ್ಯಾದಿಗಳೆಲ್ಲವೂ ವ್ಯವಸ್ಥಿತವಾದನಂತರ ಶ್ರೀಕೃಷ್ಣನು ಪಾಂಡವರ ಅನುಜ್ಞೆಯನ್ನು ಪಡೆದು ಸಂತುಷ್ಟಹೃದಯನಾಗಿ ಬಲರಾಮನೊಡನೆ ದ್ವಾರವತಿಗೆ ಹಿಂದಿರುಗಿದನು."

೨೦೭ನೆಯ ಅಧ್ಯಾಯವು ಮುಗಿಯಿತು.

## ಪಾಂಡವರ ಬಳಿಗೆ ನಾರದರ ಆಗಮನ: ಸುಂದೋಪಸುಂದರ ಉಪಾಖ್ಯಾನ

ಜನಮೇಜಯನು ಪ್ರಶ್ನಿಸುತ್ತಾನೆ :

**ಏವಂ ಸಮ್ಪ್ರಾಪ್ಯ ರಾಜ್ಯಂ ತದಿನ್ದ್ರಪ್ರಸ್ಥಂ ತಪೋಧನ।**
**ಅತ ಊರ್ಧ್ವಂ ಮಹಾತ್ಮಾನಃ ಕಿಮಕುರ್ವತ ಪಾಣ್ಡವಾಃ ॥೧॥**

"ತಪೋಧನರೇ! ಹೀಗೆ ಇಂದ್ರಪ್ರಸ್ಥವೆಂಬ ರಾಜ್ಯವನ್ನು ಪಡೆದನಂತರ ಮಹಾತ್ಮರಾದ ಪಾಂಡವರು ಮುಂದೇನು ಮಾಡಿದರು? ಹಿಂದಿನ ಆ ನನ್ನ ಪಿತಾಮಹರೆಲ್ಲರೂ ಮಹಾಸತ್ತ್ವಶಾಲಿಗಳಾಗಿದ್ದರು. ಐವರ ಧರ್ಮಪತ್ನಿಯೂ ಆಗಿದ್ದ ದ್ರೌಪದಿಯು ಆ ಎಲ್ಲ ಪತಿಗಳ ಆಜ್ಞೆಯನ್ನೂ ಐವರಿಗೂ ಹಿತವೆನಿಸುವ ರೀತಿಯಲ್ಲಿ ಹೇಗೆ ನಿರ್ವಹಿಸುತ್ತಿದ್ದಳು? ಒಬ್ಬಳೇ ಸ್ತ್ರೀಯಲ್ಲಿ ಅನುರಕ್ತರಾಗಿದ್ದ ನಮ್ಮ ತಾತಂದಿರಲ್ಲಿ ಪರಸ್ಪರವಾಗಿ ಭೇದಭಾವವು ಉಂಟಾಗಲಿಲ್ಲವೇ? ಅಣ್ಣ-ತಮ್ಮಂದಿರು ಯಾವ ರೀತಿಯಲ್ಲಿ ಅನ್ಯೋನ್ಯವಾಗಿ ವರ್ತಿಸುತ್ತಿದ್ದರು?– ಇವೆಲ್ಲವನ್ನೂ ವಿವರವಾಗಿ ಕೇಳಬೇಕೆನ್ನುವ ಅಭಿಲಾಷೆಯಿದೆ. ದಯೆಯಿಟ್ಟು ಹೇಳಿರಿ."

ವೈಶಂಪಾಯನರು ಹೇಳುತ್ತಾರೆ :

"ಮಹಾರಾಜ! ಎಲ್ಲವನ್ನೂ ವಿವರವಾಗಿಯೇ ಹೇಳುವೆನು. ಧೃತರಾಷ್ಟ್ರನ ಅನುಜ್ಞೆಯನ್ನು ಪಡೆದು ಶತ್ರುನಿಬರ್ಹಣರಾದ ಪಾಂಡವರು ಇಂದ್ರಪ್ರಸ್ಥಕ್ಕೆ ಹೋಗಿ ಅಲ್ಲಿ ದ್ರೌಪದಿಯೊಡನೆ ಸುಖ-ಸಂತೋಷಗಳಿಂದ ಅನೇಕ ದಿನಗಳನ್ನು ಕಳೆದರು. ಮಹಾತೇಜಸ್ವಿಯಾದ, ಸತ್ಯಸಂಧನಾದ ಯುಧಿಷ್ಠಿರನು ತಮ್ಮಂದಿರಿಂದೊಡಗೂಡಿ ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದನು.

ಪಾಂಡುಪುತ್ರರು ಸತ್ಯ-ಧರ್ಮನಿಷ್ಠರಾಗಿದ್ದುಕೊಂಡು, ದೇಶಕ್ಕೆ ಪದೇ-ಪದೇ ಕಿರುಕುಳಕೊಡುತ್ತಿದ್ದ ಶತ್ರುಸಮೂಹವನ್ನು ನಿರ್ಮೂಲಮಾಡಿ, ಸುಖ-ಸಂತೋಷಗಳಿಂದ ಅಲ್ಲಿ ವಾಸಿಸುತ್ತಿದ್ದರು. ಅವರು ಅಧಿಕಾರಾರೂಢರಾಗಿ

ದಿವ್ಯಸಿಂಹಾಸನಗಳಲ್ಲಿ ಕುಳಿತು ದೇಶದ ಆಡಳಿತವನ್ನು ಬಹಳ ದಕ್ಷತೆಯಿಂದ ನಿರ್ವಹಿಸುತ್ತಿದ್ದರು.

ಹೀಗಿರಲೊಂದುದಿನ ಅವರೆಲ್ಲರೂ ಸಿಂಹಾಸನಾರೂಢರಾಗಿ ಕುಳಿತಿದ್ದಾಗ ದೇವರ್ಷಿಗಳಾದ ನಾರದರು ದೇಶ-ವಿದೇಶಗಳನ್ನು ಪರ್ಯಟನ ಮಾಡುತ್ತಾ ಸ್ವೇಚ್ಛೆಯಿಂದ ಇಂದ್ರಪ್ರಸ್ಥದಲ್ಲಿದ್ದ ಪಾಂಡವರ ಅರಮನೆಗೆ ಆಗಮಿಸಿದರು. ದೇವರ್ಷಿಗಳು ಬಂದೊಡನೆಯೇ ಯುಧಿಷ್ಠಿರನು ಮೇಲೆದ್ದು, ತಾನು ಕುಳಿತಿದ್ದ ಸಿಂಹಾಸನವನ್ನೇ ನಾರದರಿಗೆ ಬಿಟ್ಟುಕೊಟ್ಟು, ಅವರು ಸಿಂಹಾಸನಾರೂಢರಾಗಿ ಕುಳಿತನಂತರ ದೇವರ್ಷಿಗಳಿಗೆ ಅರ್ಘ್ಯ-ಪಾದ್ಯಾಚಮನೀಯಾದಿಗಳನ್ನು ಕೊಟ್ಟು ಸತ್ಕರಿಸಿ ರಾಜ್ಯವನ್ನೂ (ಔಪಚಾರಿಕವಾಗಿ) ಅರ್ಪಿಸಿದನು.

ಯುಧಿಷ್ಠಿರನಿತ್ತ ಸತ್ಕಾರಕ್ಕೆ ಮಹರ್ಷಿಗಳು ತೃಪ್ತಿಹೊಂದಿ, ಪಾಂಡು ನಂದನನನ್ನು ಶ್ಲಾಘಿಸಿ ಆಶೀರ್ವದಿಸಿ, ಸಮೀಪದಲ್ಲಿದ್ದ ಆಸನದಲ್ಲಿ ಕುಳಿತುಕೊಳ್ಳುವಂತೆ ನಿರ್ದೇಶಿಸಿದರು.

ನಾರದರ ಅನುಜ್ಞೆಯನ್ನು ಪಡೆದು ಯುಧಿಷ್ಠಿರನು ಪೀಠಾರೂಢನಾದ ಬಳಿಕ ಅಂತಃಪುರದಲ್ಲಿದ್ದ ದ್ರೌಪದಿಗೆ ನಾರದರು ಬಂದಿರುವರೆಂಬ ವಾರ್ತೆಯನ್ನು ಹೇಳಿಕಳುಹಿಸಿದನು. ದ್ರೌಪದಿಯು ಪಾಂಡವರೊಡನೆ ಕುಳಿತಿದ್ದ ಮಹರ್ಷಿಗಳ ಸಮೀಪಕ್ಕೆ ಪರಿಶುದ್ಧಳಾಗಿ ಬಂದು, ವಿನಯಪೂರ್ವಕವಾಗಿ ಮಹರ್ಷಿಗಳ ಎರಡು ಪಾದಕಮಲಗಳನ್ನೂ ಮುಟ್ಟಿ ನಮಸ್ಕರಿಸಿ, ಬದ್ಧಾಂಜಲಿಯಾಗಿ ಅನತಿದೂರದಲ್ಲಿ ಮಹರ್ಷಿಗಳ ಆಜ್ಞೆಯನ್ನು ನಿರೀಕ್ಷಿಸುತ್ತಾ ನಿಂತಳು.

ನಾರದರು ಆಶೀರ್ವಾದಗಳನ್ನು ಮಾಡಿದನಂತರ – 'ನೀನಿನ್ನು ಹೋಗಿ ಬಾ, ಮಗಳೇ!' – ಎಂದು ಹೇಳಿ ದ್ರೌಪದಿಯನ್ನು ಕಳುಹಿಸಿಕೊಟ್ಟು, ಪಾಂಡವರೊಡನೆ ವಿಜನವಾದ ಸಭೆಯಲ್ಲಿ ಏಕಾಂತವಾಗಿ ಮಾತನಾಡಲು ಸೂಚಿಸಿದರು. ಸಭಾಮಂಟಪದಲ್ಲಿದ್ದ ಪ್ರಹರಿಗಳೆಲ್ಲರೂ ಯುಧಿಷ್ಠಿರನ ಮುಖ ಭಾವದಿಂದಲೇ ಅವನ ಇಂಗಿತವೇನೆಂಬುದನ್ನು ತಿಳಿದುಕೊಂಡು ಸಭಾ

ಮಂದಿರದ ಹೊರಗಡೆಗೆ ಹೋಗಿ ನಿಂತರು. ವಾತಾವರಣವು ಪ್ರಶಾಂತವಾಗಿದ್ದಿತು. ನಾರದರು ಹೇಳತೊಡಗಿದರು.

**ಪಾಞ್ಚಾಲೀ ಭವತಾಮೇಕಾ ಧರ್ಮಪತ್ನೀ ಯಶಸ್ವಿನೀ।**
**ಯಥಾ ವೋ ನಾತ್ರ ಭೇದಃ ಸ್ಯಾತ್ತಥಾ ನೀತಿರ್ವಿಧೀಯತಾಮ್॥**

"ಯುಧಿಷ್ಠಿರ! ಪಾಂಚಾಲರಾಜಪುತ್ರಿಯು ನಿಮ್ಮೈವರನ್ನೂ ಮದುವೆಯಾಗಿರುವಳು. ಐವರಿಗೂ ಅವಳು ಸಹಧರ್ಮಿಣಿಯಾಗಿದ್ದಾಳೆ. ನೀವೈವರೂ ಅವಳೊಡನೆ ಸುಖೋಪಭೋಗಗಳನ್ನೂ ಪಡೆಯಬೇಕಾಗಿದೆ. ಆದುದರಿಂದ ನೀವೈವರೂ ದ್ರೌಪದಿಯೊಡನೆ ವ್ಯವಹರಿಸಲು ಒಂದು ನಿಯಮವನ್ನು ಮಾಡಿಕೊಳ್ಳಿರಿ. ಹೀಗೆ ನಿಯಮವನ್ನು ಮಾಡಿಕೊಳ್ಳು ವುದರಿಂದ ನಿಮ್ಮಲ್ಲಿ ಪರಸ್ಪರವಾಗಿ ವೈಮನಸ್ಯವುಂಟಾಗುವುದಿಲ್ಲ.

ಈ ಹಿಂದೆಯೇ ಇದಕ್ಕೆ ಅನುರೂಪವಾದ ಎಂದರೆ – ಒಬ್ಬ ಸ್ತ್ರೀಯನ್ನು ಅನೇಕರು ಕಾಮಿಸಿದರೆ ಆಗುವ ಅನರ್ಥಗಳಿಗೆ ನಿರೂಪಣೆಯಾಗಿ – ಒಂದು ಇತಿಹಾಸವು ನಡೆದಿರುವುದು. ಸ್ವರ್ಗ, ಮರ್ತ್ಯ, ಪಾತಾಳ – ಈ ಮೂರು ಲೋಕಗಳಲ್ಲಿಯೂ ಪ್ರಖ್ಯಾತರಾಗಿದ್ದ 'ಸುಂದ-ಉಪಸುಂದ' – ಎಂಬಿಬ್ಬರು ಸಹೋದರರು ಯಾವಾಗಲೂ ಒಬ್ಬರನ್ನು ಮತ್ತೊಬ್ಬರು ಅಗಲದೇ ಅತಿಶಯವಾದ ಪ್ರೀತಿ-ವಿಶ್ವಾಸವುಳ್ಳವರಾಗಿದ್ದರು. ಅವರನ್ನು ಸಂಹರಿಸಲು ತ್ರಿಭುವನಗಳಲ್ಲಿ ಯಾರೂ ಸಮರ್ಥರಾಗಿರಲಿಲ್ಲ. ಆದರೆ ಅವರಲ್ಲಿಯೇ ಒಬ್ಬರು ಮತ್ತೊಬ್ಬರ ಸಾವಿಗೆ ಕಾರಣರಾಗಬಹುದೆಂಬ ವರವನ್ನವರು ಸ್ವೇಚ್ಛೆಯಿಂದಲೇ ಪಡೆದಿದ್ದರು. ಇಬ್ಬರೂ ಒಂದೇ ರಾಜ್ಯಕ್ಕೆ ಅಧಿಪತಿ ಗಳಾಗಿದ್ದರು. ಒಂದೇ ಅರಮನೆಯಲ್ಲಿ ವಾಸವಾಗಿದ್ದರು. ಒಂದೇ ಹಾಸಿಗೆ ಯಲ್ಲಿ ಮಲಗುತ್ತಿದ್ದರು. ಒಂದೇ ಸಿಂಹಾಸನದಲ್ಲಿ ಇಬ್ಬರೂ ಕೂಡುತ್ತಿದ್ದರು. ಒಂದೇ ವಿಧವಾದ ಊಟಮಾಡುತ್ತಿದ್ದರು. ಅವರಲ್ಲಿ ಪರಸ್ಪರ ಪ್ರೀತಿ-ವಿಶ್ವಾಸಗಳು ಅಷ್ಟೊಂದು ಗಾಢವಾಗಿದ್ದುವು. ಆದರೂ ತಿಲೋತ್ತಮೆಯೆಂಬ ಚೆಲುವೆಯ ಕಾರಣದಿಂದಾಗಿ ಇಬ್ಬರೂ ವಿನಾಶಹೊಂದಿದರು.

ಹೆಂಗಸಿನ ಕಾರಣಕ್ಕಾಗಿ ಎಂತಹ ಮೈತ್ರಿಯೂ, ಪ್ರೀತಿ-ವಿಶ್ವಾಸಗಳೂ ವಿನಾಶಹೊಂದುವುದು ಸಹಜ. ಆದರೆ ನೀವು ಮಾತ್ರ ಆ ವಿಧವಾದ

ವೈಮನಸ್ಯಕ್ಕೆ ಅವಕಾಶವಾಗದ ರೀತಿಯಲ್ಲಿ, ನಿಮ್ಮೈವರಲ್ಲಿ ಪರಸ್ಪರಭೇದಭಾವವುಂಟಾಗದ ರೀತಿಯಲ್ಲಿ–ಒಂದು ವ್ಯವಸ್ಥೆಯನ್ನು ಮಾಡಿಕೊಳ್ಳುವುದು ಸೂಕ್ತವಾಗಿದೆ."

ನಾರದರ ಮಾತುಗಳನ್ನು ಕೇಳಿದನಂತರ ಪಾಂಡವರ ಮುಖಗಳಲ್ಲಿ ಸುಂದೋಪಸುಂದರ ಕಥೆಯನ್ನು ವಿಸ್ತಾರವಾಗಿಯೇ ಕೇಳಬೇಕೆನ್ನುವ ಉತ್ಸುಕತೆಯು ಮೂಡಿತು. ಯುಧಿಷ್ಠಿರನು ನಾರದರನ್ನು ಕೇಳಿದನು :

**ಸುನ್ದೋಪಸುನ್ದಾವಸುರೌ ಕಸ್ಯ ಪುತ್ರೌ ಮಹಾಮುನೇ**
**ಉತ್ಪನ್ನಶ್ಚ ಕಥಂ ಭೇದಃ ಕಥಂ ಚಾನ್ಯೋನ್ಯಮಘ್ನತಾಮ್ ॥೨೨॥**

**ಅಪ್ಸರಾ ದೇವಕನ್ಯಾ ವಾ ಕಸ್ಯ ಚೈಷಾ ತಿಲೋತ್ತಮಾ**
**ಯಸ್ಯಾಃ ಕಾಮೇನ ಸಮ್ಮತ್ತೌ ಜಘ್ನತುಸ್ತೌ ಪರಸ್ಪರಮ್ ॥೨೩॥**

**ಏತತ್ಸರ್ವಂ ಯಥಾವೃತ್ತಂ ವಿಸ್ತರೇಣ ತಪೋಧನ**
**ಶ್ರೋತುಮಿಚ್ಛಾಮಹೇ ಬ್ರಹ್ಮನ್ಪರಂ ಕೌತೂಹಲಂ ಹಿ ನಃ ॥೨೪॥**

"ಮಹರ್ಷಿಗಳೇ! ಸುಂದೋಪಸುಂದರೆಂಬುವರು ಯಾರು? ಯಾರ ಮಕ್ಕಳು? ಅವರಿಬ್ಬರಲ್ಲಿ ಭೇದಭಾವನೆಯು ಹೇಗೆ ಉಂಟಾಯಿತು? ಒಬ್ಬರನ್ನು ಮತ್ತೊಬ್ಬರು ಸಂಹಾರಮಾಡಿದ್ದೇಕೆ? ಯಾವಳ ಕಾರಣಕ್ಕಾಗಿ ಆ ಸಹೋದರರು ಪ್ರಾಣತೊರೆದರೋ – ಆ 'ತಿಲೋತ್ತಮೆ' ಎಂಬುವಳು ಯಾರ ಮಗಳು? ಅವಳೇನಾದರೂ ಅಪ್ಸರೆಯೇ? ಅಥವಾ ದೇವಕನ್ಯೆಯೇ? – ಈ ವಿಷಯಗಳೆಲ್ಲವನ್ನೂ ವಿವರವಾಗಿ ಕೇಳಬೇಕೆಂಬ ಅಭಿಲಾಷೆಯುಳ್ಳವರಾಗಿದ್ದೇವೆ. ದಯೆಯಿಟ್ಟು ಹೇಳಿರಿ."

೨೦೮ನೆಯ ಅಧ್ಯಾಯವು ಮುಗಿಯಿತು.

೨೦೯ನೆಯ ಅಧ್ಯಾಯ ವಿದುರಾಗಮನರಾಜ್ಯಲಮ್ಭಪರ್ವ (ಮುಂದುವರಿದಿದೆ.)

## ಸುಂದೋಪಸುಂದರ ತಪಶ್ಚರಣೆ : ಬ್ರಹ್ಮನಿಂದ ವರಪ್ರದಾನ : ರಾಕ್ಷಸರ ಆನಂದೋತ್ಸಾಹ

ಯುಧಿಷ್ಠಿರನ ಮಾತುಗಳನ್ನು ಕೇಳಿ ಮಹರ್ಷಿಗಳು ಮುಗುಳ್ನಗೆಯನ್ನು ಬೀರುತ್ತಾ ಹೇಳತೊಡಗಿದರು :

**ಶೃಣು ಮೇ ವಿಸ್ತರೇಣೇಮಮಿತಿಹಾಸಂ ಪುರಾತನಮ್**
**ಭ್ರಾತೃಭಿಃ ಸಹಿತಃ ಪಾರ್ಥ ಯಥಾವೃತ್ತಂ ಯುಧಿಷ್ಠಿರ ॥೧॥**

"ಯುಧಿಷ್ಠಿರ! ನಿನ್ನ ಅನುಜರಿಂದೊಡಗೂಡಿ ಸುಂದೋಪಸುಂದರ ಉಪಾಖ್ಯಾನವನ್ನು ಕೇಳು. ಬಹುಪುರಾತನವಾದ ಆ ಇತಿಹಾಸವನ್ನು ಹೇಗೆ ನಡೆಯಿತೋ ಹಾಗೆಯೇ ವಿವರಿಸಿ ಹೇಳುವೆನು.

ಹಿರಣ್ಯಕಶಿಪು ಎಂಬ ರಾಕ್ಷಸನ ವಂಶದಲ್ಲಿ ಮಹಾಪರಾಕ್ರಮಿಯಾದ ಮಹಾತೇಜಸ್ವಿಯಾದ ಮತ್ತು ಬಲಿಷ್ಠನಾದ ನಿಕುಂಭನೆಂಬ ರಾಕ್ಷಸನು ಜನ್ಮತಾಳಿದನು. ಅವನಿಗೆ ಸುಂದ, ಉಪಸುಂದ ಎಂಬ ಇಬ್ಬರು ಮಕ್ಕಳಿದ್ದರು. ಆ ಇಬ್ಬರು ಸಹೋದರರೂ ಬಹಳ ಪರಾಕ್ರಮಿಗಳಾಗಿಯೂ ಭಯಂಕರಸ್ವರೂಪರಾಗಿಯೂ, ಕ್ರೂರಕರ್ಮಿಗಳಾಗಿಯೂ ಇದ್ದರು. ಅವರಿಬ್ಬರ ಧ್ಯೇಯೋದ್ದೇಶ-ಸಾಧನೆಗಳೆಲ್ಲವೂ ಒಂದೇ ಆಗಿದ್ದುವು. ಸುಖವನ್ನೇ ಆಗಲೀ, ಕಷ್ಟವನ್ನೇ ಆಗಲೀ – ಇಬ್ಬರೂ ಒಂದೇ ಸಮನಾಗಿ ಅನುಭವಿಸುತ್ತಿದ್ದರು. ಒಬ್ಬನಿಲ್ಲದಾಗ ಮತ್ತೊಬ್ಬನು ಊಟ ಮಾಡುತ್ತಿರಲಿಲ್ಲ. ಒಬ್ಬನಿಲ್ಲದಾಗ ಮತ್ತೊಬ್ಬನು ಬೇರೆಯವರೊಡನೆ ಮಾತನ್ನೂ ಆಡುತ್ತಿರಲಿಲ್ಲ. ಯಾವಾಗಲೂ ಪರಸ್ಪರವಾಗಿ ಹಿತವೆನಿಸುವ ಪ್ರಿಯೋಕ್ತಿಗಳನ್ನೇ ಆಡುತ್ತಿದ್ದರು.

ಒಬ್ಬನಿಲ್ಲದಾಗ ಮತ್ತೊಬ್ಬನು ಯಾವ ಕಾರ್ಯಕ್ಕೂ ಹೊರಡುತ್ತಲೇ ಇರಲಿಲ್ಲ. ಅವರಿಬ್ಬರ ನುಡಿ-ನಡತೆಗಳೆಲ್ಲವೂ ಒಂದೇ ಆಗಿರುತ್ತಿದ್ದುವು. ಹೆಚ್ಚೇನು ಹೇಳಲಿ, ಯುಧಿಷ್ಠಿರ! ಒಂದೇ ಆತ್ಮವು ಎರಡು ಶರೀರಗಳಲ್ಲಿ ವಿಭಕ್ತವಾಗಿರುವಂತೆ ಸುಂದೋಪಸುಂದರು ಏಕರೀತಿಯಲ್ಲಿ ನಡೆದುಕೊಳ್ಳುತ್ತಿದ್ದರು. ಕಾರ್ಯನಿರ್ವಹಣೆಯಲ್ಲಿ ಏಕನಿಶ್ಚಯವುಳ್ಳ, ಮಹಾಪರಾಕ್ರಮಿಗಳಾದ ಅವರು ಕ್ರಮೇಣ ಪ್ರವರ್ಧಮಾನಕ್ಕೂ ಬಂದರು. ಪ್ರಾಪ್ತವಯಸ್ಕರಾದಂತೆಲ್ಲಾ ಅವರ ಆಕಾಂಕ್ಷೆಗಳೂ ಹೆಚ್ಚಾದುವು. ತ್ರಿಲೋಕಗಳನ್ನೂ ಜಯಿಸಲು ಇಬ್ಬರೂ ಸಂಕಲ್ಪಿಸಿ ತಪಶ್ಚರಣೆಯಿಂದ ಅದನ್ನು ಸಾಧಿಸಲು ವಿಂಧ್ಯಪರ್ವತಕ್ಕೆ ಹೋದರು. ಕಷ್ಟಸಾಧ್ಯಗಳಾದ ವಿಧಿಗಳನ್ನು ಅನುಸರಿಸಿ ತಪಶ್ಚರಣೆಮಾಡಲು ಮೊದಲಿಟ್ಟರು. ಅನ್ನಾಹಾರಗಳನ್ನು ವರ್ಜಿಸಿ,

ಜಟಾವಲ್ಕಲಧಾರಿಗಳಾಗಿ ಅನೇಕವರ್ಷಗಳ ಕಾಲ ಘೋರವಾದ ತಪಸ್ಸನ್ನು ಆಚರಿಸಿದರು. ಧೂಳಿನಿಂದ ವ್ಯಾಪ್ತವಾದ ಸರ್ವಾಂಗವುಳ್ಳವರಾಗಿ, ವಾಯು ಭಕ್ಷರಾಗಿ, ಹೆಬ್ಬೆಟ್ಟಿನ ತುದಿಯಲ್ಲಿ ನಿಂತು ತಪಸ್ಸನ್ನು ಮಾಡುತ್ತಿದ್ದರು. ತಮ್ಮ ಶರೀರಗಳ ಮಾಂಸಖಂಡಗಳನ್ನೇ ಕತ್ತರಿಸಿ ಯಜ್ಞೇಶ್ವರನಲ್ಲಿ ಅರ್ಪಿಸುತ್ತಿದ್ದರು. ಕೈಗಳನ್ನು ಮೇಲೆತ್ತಿ ಏಕದೃಷ್ಟಿಯಿಂದ ಅನೇಕ ವರ್ಷಗಳವರೆಗೆ ಧ್ಯಾನಾಸಕ್ತರಾಗಿರುತ್ತಿದ್ದರು. ಆ ಸಮಯದಲ್ಲಿ ಒಂದು ಅದ್ಭುತವು ನಡೆಯಿತು. ಅವರು ಮಾಡುತ್ತಿದ್ದ ತಪಸ್ಸಿನ ಪ್ರಭಾವದಿಂದ ವಿಂಧ್ಯಪರ್ವತವೇ ಕಾದು ಪರ್ವತದ ಎಲ್ಲೆಡೆಗಳಲ್ಲಿಯೂ ಧೂಮವು ಕಾಣಿಸಿಕೊಂಡಿತು. ಅವರ ಉಗ್ರವಾದ ತಪಸ್ಸನ್ನು ಕಂಡು ದೇವತೆಗಳು ಭೀತರಾದರು. ಅವರ ತಪಸ್ಸನ್ನು ಹೇಗಾದರೂ ಮಾಡಿ ತಡೆಯಬೇಕೆನ್ನುವ ಅಭಿಲಾಷೆಯಿಂದ ದೇವತೆಗಳು ಅನೇಕವಿಧವಾದ ವಿಘ್ನಗಳನ್ನು ತಂದೊಡ್ಡಿದರು. ನಾನಾವಿಧವಾದ ಸುಖೋಪಭೋಗವಸ್ತುಗಳನ್ನೂ, ಅನರ್ಘವಾದ ರತ್ನರಾಶಿಗಳನ್ನೂ, ಚೆಲುವೆಯರಾದ ಯುವತಿಯರನ್ನೂ ಕಳುಹಿಸಿ ತಪಸ್ಸಿನಿಂದ ಇಬ್ಬರೂ ವಿಮುಖರಾಗುವಂತೆ ಮಾಡಲು ಬಹುವಾಗಿ ಪ್ರಯತ್ನಿಸಿದರು. ಆದರೆ ರಾಕ್ಷಸರು ಮಾತ್ರ ತಮ್ಮ ತಪಸ್ಸಿನಿಂದ ವಿಮುಖರಾಗಲಿಲ್ಲ. ಮಾಯಾವಿದ್ಯೆಯನ್ನು ಪ್ರಯೋಗಿಸಿಯಾದರೂ ಅವರ ಮನಸ್ಸನ್ನು ಚಾಂಚಲ್ಯಗೊಳಿಸಬೇಕೆಂದು ದೇವತೆಗಳು ನಿಶ್ಚಯಿಸಿದರು.

ಸುಂದೋಪಸುಂದರ ಭಗಿನಿಯರು, ತಾಯಿ, ಹೆಂಡತಿಯರು, ಬಂಧುಗಳು – ಇವರೆಲ್ಲರೂ ಕೆದರಿದ ತಲೆಗಳಿಂದಲೂ, ಜಾರಿಬೀಳುವುದರಲ್ಲಿದ್ದ ವಸ್ತ್ರಾಭರಣಗಳಿಂದಲೂ ಸುಂದೋಪಸುಂದರ ಸಮೀಪಕ್ಕೆ ಬಂದು ಭಯದಿಂದ ನಡುಗುತ್ತಾ – 'ಓ ಮಗನೇ! ನನ್ನನ್ನು ರಕ್ಷಿಸು'; 'ಅಣ್ಣಾ! ನನ್ನನ್ನು ಕಾಪಾಡು'; 'ಪತಿಯೇ! ನಿನ್ನೆದುರಿನಲ್ಲಿಯೇ ನಮ್ಮ ಮಾನಭಂಗವಾಗುತ್ತಿದೆಯಲ್ಲಾ!' ಇವೇ ಮುಂತಾಗಿ ಆರ್ತನಾದ-ಪ್ರಲಾಪಗಳನ್ನು ಮಾಡುತ್ತಾ ನೆಲದ ಮೇಲೆ ಬೀಳುತ್ತಿದ್ದರು. ಅವರನ್ನು ಅಟ್ಟಿಸಿಕೊಂಡು ಬಂದ ಶೂಲಹಸ್ತನಾದ ರಾಕ್ಷಸನು ಸುಂದೋಪಸುಂದರ ಎದುರಿನಲ್ಲಿಯೇ ಅವರ ಮುಂದೆಲೆಗಳನ್ನು ಹಿಡಿದು ದರ-ದರನೆ ಸೆಳೆದೊಯ್ಯುತ್ತಿದ್ದನು.

ಆದರೆ ಸುಂದೋಪಸುಂದರ ಮನಸ್ಸಿನ ಮೇಲೆ ಆ ಘೋರದೃಶ್ಯಗಳು

ಯಾವವಿಧವಾದ ಪರಿಣಾಮವನ್ನೂ ಉಂಟುಮಾಡಲಿಲ್ಲ. ಅವರು ತಮ್ಮ ತಪಸ್ಸಿಗೆ ಭಂಗವನ್ನು ತಂದುಕೊಳ್ಳಲಿಲ್ಲ. ಯಥಾಪೂರ್ವವಾಗಿ ಅವರ ತಪಸ್ಸೂ, ವ್ರತಾಚರಣೆಗಳೂ ಮುಂದೆ ಸಾಗಿದುವು.

ಮಾಯಾಕಲ್ಪಿತನಾದ ರಾಕ್ಷಸನೂ ಮತ್ತು ಸ್ತ್ರೀಯರೂ ಮಾಯೆಯ ಕಾಲಾವಧಿಯು ಕಳೆದನಂತರ ಕಣ್ಣಿಗೆ ಕಾಣದಂತಾದರು. ವ್ರತವನ್ನು ಕೆಡಿಸಲು ಸಾಧ್ಯವಾಗದಿರಲು ವ್ರತಕ್ಕೆ ತಕ್ಕ ಫಲವನ್ನಾದರೂ ಕೊಟ್ಟು ಸುಂದೋಪಸುಂದರನ್ನು ಘೋರತಪಸ್ಸಿನಿಂದ ವಿಮುಖರನ್ನಾಗಿ ಮಾಡಬೇಕಾಯಿತು.

ಸರ್ವಲೋಕಗಳಿಗೂ ಹಿತಕಾಮನಾದ, ಮಹಾಪುರುಷನಾದ ಚತುರ್ಮುಖನೇ ಸಾಕ್ಷಾತ್ತಾಗಿ ಸುಂದೋಪಸುಂದರ ಮುಂದೆ ಬಂದು ಹೇಳಿದನು :

"ಅಸುರರೇ! ನಿಮ್ಮ ತಪಸ್ಸಿನಿಂದ ಸಂತುಷ್ಟನಾಗಿದ್ದೇನೆ. ನಿಮಗೆ ಇಷ್ಟವಾದ ವರಗಳನ್ನು ಕೊಡಲು ಬಂದಿದ್ದೇನೆ. ಕೇಳಿರಿ."

ಚತುರ್ಮುಖನನ್ನು ನೋಡಿದೊಡನೆಯೇ ಸುಂದೋಪಸುಂದರು ಮೇಲೆದ್ದು ಬ್ರಹ್ಮನನ್ನು ಸ್ವಾಗತಿಸಿ, ಅರ್ಘ್ಯ-ಪಾದ್ಯಾದಿಗಳನ್ನಿತ್ತು ಸತ್ಕರಿಸಿ, ಬದ್ಧಾಂಜಲಿಗಳಾಗಿ ನಿಂತು ಪ್ರಾರ್ಥಿಸಿದರು : "ಪಿತಾಮಹನೇ! ನಾವು ನಿನ್ನ ಅನುಗ್ರಹಕ್ಕಾಗಿ ಮಾಡಿದ ತಪಸ್ಸಿನಿಂದಲೂ, ವ್ರತ-ನಿಯಮಾದಿಗಳಿಂದಲೂ ನೀನು ಸುಪ್ರೀತನಾಗಿರುವುದಾದರೆ – ನಾವು ಸಕಲವಿಧವಾದ ಅಸ್ತ್ರಗಳ ಲ್ಲಿಯೂ ಪ್ರವೀಣರಾಗುವಂತೆಯೂ, ಮಾಯಾವಿದ್ಯೆಗಳಲ್ಲಿ ನಿಪುಣರಾಗು ವಂತೆಯೂ ಅನುಗ್ರಹಿಸು. ನಾವು ಮಹಾಪರಾಕ್ರಮಿಗಳಾಗುವಂತೆಯೂ, ಕಾಮರೂಪಿಗಳಾಗುವಂತೆಯೂ (ಇಷ್ಟಬಂದಂತೆ ಶರೀರದ ಸ್ವರೂಪವನ್ನು ಬದಲಾಯಿಸಿಕೊಳ್ಳುವುದು) ವರದಾನಮಾಡು. ನೀನು ನಿಶ್ಚಯವಾಗಿಯೂ ಪ್ರಸನ್ನನಾಗಿರುವೆಯಾದರೆ ನಮಗೆ ಅಮರತ್ವವನ್ನೂ ದಯಪಾಲಿಸು, ಮಹಾನುಭಾವ!"

**ಋತೇಽಮರತ್ವಂ ಯುವಯೋಃ ಸರ್ವಮುಕ್ತಂ ಭವಿಷ್ಯತಿ**
**ಅನ್ಯದ್ವೃಣೀತಂ ಮೃತ್ಯೋಶ್ಚ ವಿಧಾನಮಮರೈಃ ಸಮಮ್ ॥೨೧॥**

"ಕಡೆಯಲ್ಲಿ ಕೇಳಿದ ಅಮರತ್ವವನ್ನುಳಿದು ಉಳಿದೆಲ್ಲ ವರಗಳೂ

ನಿಮಗೆ ಸಿದ್ಧಿಸುವುವು. ದೇವತೆಗಳಂತೆಯೇ ಶಾಶ್ವತವಾಗಿರಲು ಸಾಧ್ಯವಾಗುವಂತೆ ನೀವು ಯಾವುದಾದರೊಂದು ರೀತಿಯಲ್ಲಿ ಮರಣವನ್ನು ಕೇಳಿರಿ.

**ಪ್ರಭವಿಷ್ಯಾವ ಇತಿ ಯನ್ಮಹದಭ್ಯುದ್ಯತಂ ತಪಃ**
**ಯುವಯೋರ್ಹೇತುನಾನೇನ ನಾಮರತ್ವಂ ವಿಧೀಯತೇ ॥೨೨॥**

'ಮೂರು ಲೋಕಗಳಿಗೂ ಅಧಿಪತಿಗಳಾಗಬೇಕು' – ಎಂಬ ಸಂಕಲ್ಪದಿಂದ ನೀವು ತಪಸ್ಸನ್ನು ಮಾಡಿರುವಿರಿ. ಅಮರತ್ವವು ನಿಮ್ಮ ತಪಸ್ಸಿನ ಉದ್ದೇಶವಾಗಿರಲಿಲ್ಲ. ಈ ಕಾರಣದಿಂದ ನಿಮಗೆ ಅಮರತ್ವವು ಲಭಿಸುವುದಿಲ್ಲ.



**ತ್ರೈಲೋಕ್ಯವಿಜಯಾರ್ಥಾಯ ಭವದ್ಭ್ಯಾಮಾಸ್ಥಿತಂ ತಪಃ**
**ಹೇತುನಾನೇನ ದೈತ್ಯೇನ್ದ್ರೌ ನ ವಾ ಕಾಮಂ ಕರೋಮ್ಯಹಮ್॥೨೩॥**

ಇದೂ ಅಲ್ಲದೇ ತ್ರಿಲೋಕಗಳನ್ನೂ ಜಯಿಸುವುದಕ್ಕಾಗಿ ನೀವು ತಪಸ್ಸನ್ನಾಚರಿಸಿದ್ದೀರಿ. ದೈತ್ಯೇಂದ್ರರೇ! ಈ ಕಾರಣದಿಂದಲೂ ನಾನು ಅಮರತ್ವವು ಬೇಕೆಂಬ ನಿಮ್ಮ ಇಚ್ಛೆಯನ್ನು ಪೂರೈಸಿಕೊಡುವುದಿಲ್ಲ."

ರಾಕ್ಷಸರು ಹೇಳಿದರು :

"ವಿಧಾತನೇ! ಪ್ರಪಂಚದಲ್ಲಿ ಉತ್ಪನ್ನವಾಗಿರುವ-ಉತ್ಪನ್ನವಾಗಬಹುದಾದ ಚರಾಚರವಸ್ತುಗಳಾವುದರಿಂದಲೂ ನಮಗೆ ಮರಣವುಂಟಾಗಕೂಡದು. ನಮ್ಮಿಂದಲೇ ನಮಗೆ ಮರಣವುಂಟಾಗಬಹುದು."

"ನೀವಿಚ್ಛಿಸಿರುವಂತೆಯೇ ಆಗಲಿ. ಈ ವರವನ್ನೂ ನಿಮಗೆ ಕೊಟ್ಟಿರುವೆನು. ನಿಮಗೆ ಮರಣವೂ ನೀವು ಹೇಳಿದಂತೆಯೇ ಆಗುವುದು. ನಿಮಗೆ ನೀವೇ ಪರಸ್ಪರವಾಗಿ ಮೃತ್ಯುಗಳಾಗುವಿರಿ" – ಎಂದು ಹೇಳಿ ಪಿತಾಮಹನು ಅಂತರ್ಹಿತನಾದನು.

ಮಹಾವರಪ್ರಸಾದದ ಫಲವಾಗಿ ಸುಂದೋಪಸುಂದರು ಪೃಥ್ವಿಯಲ್ಲಿ ಅಜಯ್ಯರಾದರು. ಅವರನ್ನು ವಿನಾಶಮಾಡಲು ಯಾರಿಂದಲೂ ಸಾಧ್ಯವೇ ಇರಲಿಲ್ಲ. ಅಂತಹ ಮಹಾವರವನ್ನು ಪಿತಾಮಹನಿಂದ ಪಡೆದುಕೊಂಡ ಸುಂದೋಪಸುಂದರು ತಮ್ಮ ನಗರಿಗೆ ಹಿಂದಿರುಗಿದರು. ಅವರು ಮಹಾವರಗಳನ್ನು ಪಡೆದು ಹಿಂದಿರುಗಿರುವುದನ್ನು ತಿಳಿದು ಬಂಧು-ಮಿತ್ರರೆಲ್ಲರೂ ಅಮಿತಾನಂದವನ್ನು ಹೊಂದಿದರು.

ಸುಂದೋಪಸುಂದರು ಅನೇಕವರ್ಷಗಳಿಂದ ಕಟ್ಟಿದ್ದ ಜಟೆಯನ್ನು ತೆಗೆಸಿ ರತ್ನಖಚಿತವಾದ ಕಿರೀಟಗಳನ್ನು ಧಾರಣೆಮಾಡಿಕೊಂಡರು. ಥಳ-ಥಳಿಸುವ ವಸ್ತ್ರಾಭರಣಗಳನ್ನೂ ಧರಿಸಿ, ತಮ್ಮ ಶರೀರಕಾಂತಿಯಿಂದ ಯಾವಾಗಲೂ ಬೆಳದಿಂಗಳನ್ನು ಪ್ರಸರಿಸುತ್ತಿರುವರೋ – ಎಂಬಂತೆ ಕಾಣುತ್ತಿದ್ದರು. ಅವರ ಬಂಧು-ಮಿತ್ರರ ಆನಂದಕ್ಕಂತೂ ಪಾರವೇ ಇರಲಿಲ್ಲ.

**ಭಕ್ಷ್ಯತಾಂ ಭುಜ್ಯತಾಂ ನಿತ್ಯಂ ದೀಯತಾಂ ರಮ್ಯತಾಮಿತಿ**
**ಗೀಯತಾಂ ಪೀಯತಾಂ ಚೇತಿ ಶಬ್ದಶ್ಚಾಸೀದ್ಗೃಹೇ ಗೃಹೇ ॥೩೧॥**

'ತಿನ್ನಿರಿ! ಭೋಗಿಸಿರಿ! ಯಥೇಚ್ಛವಾಗಿ ಕೊಡಿರಿ! ಆನಂದಿಸಿರಿ! ಗಾನಮಾಡಿರಿ! ಕುಡಿಯಿರಿ!' – ಮುಂತಾದ ಘೋಷಣೆಗಳು ಪ್ರತಿನಿತ್ಯವೂ ಪ್ರತಿಯೊಬ್ಬರ ಮನೆಯಲ್ಲೂ ಕೇಳಿಬರುತ್ತಿದ್ದುವು.

ನಗರದ ಅನೇಕಭಾಗಗಳಲ್ಲಿ ಯಾವುದಾದರೊಂದು ಕಾರಣದಿಂದ ಪ್ರತಿ

ದಿನವೂ ಸಂತೋಷಕೂಟಗಳು ನಡೆಯುತ್ತಿದ್ದು ರಾಕ್ಷಸರ ಚಪ್ಪಾಳೆಗಳಿಂದ ಕೂಡಿದ ಜಯಘೋಷಗಳು ನಾಲ್ಕುದಿಕ್ಕುಗಳಲ್ಲಿಯೂ ಪ್ರತಿಧ್ವನಿತ ವಾಗುತ್ತಿದ್ದುವು. ಕಾಮರೂಪಿಗಳಾದ ಆ ರಾಕ್ಷಸರು ಅನೇಕರೀತಿಯ ವಿಹಾರಗಳಲ್ಲಿ – ಕ್ರೀಡಾವಿನೋದಗಳಲ್ಲಿ ಆಸಕ್ತರಾಗಿದ್ದುಕೊಂಡು ಕಾಲದ ಪರಿವೆಯೇ ಇಲ್ಲದೇ ವರ್ಷಗಳನ್ನು ಒಂದೊಂದು ದಿನದಂತೆ ಕಳೆಯುತ್ತಿದ್ದರು.”

೨೦೯ನೆಯ ಅಧ್ಯಾಯವು ಮುಗಿಯಿತು.

೨೧೦ನೆಯ ಅಧ್ಯಾಯ ವಿದುರಾಗಮನರಾಜ್ಯಲಮ್ಭಪರ್ವ (ಮುಂದುವರಿದಿದೆ.)

## ಸುಂದೋಪಸುಂದರ ತ್ರೈಲೋಕ್ಯವಿಜಯ

“ಯುಧಿಷ್ಠಿರ! ಉತ್ಸವವು ಕಳೆದನಂತರ ರಾಕ್ಷಸರಾಜರು ಮಂತ್ರಿ-ಸೇನಾಪತಿಗಳೊಡನೆ ಸಮಾಲೋಚನೆಮಾಡಿ, ಸ್ವರ್ಗ-ಮರ್ತ್ಯ-ಪಾತಾಳಲೋಕಗಳನ್ನೂ ಜಯಿಸಲು ನಿಶ್ಚಯಿಸಿ, ಸೈನ್ಯಗಳ ಸಿದ್ಧತೆಗೆ ಆಜ್ಞೆ ಮಾಡಿದರು. ಬಂಧು-ಮಿತ್ರರ ಮತ್ತು ಹಿರಿಯರ ಅನುಜ್ಞೆಯನ್ನು ಪಡೆದು, ದಿಗ್ವಿಜಯಕ್ಕೆ ಪೂರ್ವದಲ್ಲಿ ಮಾಡಬೇಕಾದ ವಿಧ್ಯುಕ್ತಕರ್ಮಗಳನ್ನು ಮುಗಿಸಿ, ಮಖಾನಕ್ಷತ್ರವಿದ್ದ ರಾತ್ರಿಯಲ್ಲಿ ಸೈನ್ಯಸಮೇತರಾಗಿ ಸುಂದೋಪಸುಂದರು ವಿಜಯಯಾತ್ರೆಗೆ ಹೊರಟರು. ಅವರ ಸೈನ್ಯಗಳು ಬಹುಸಂಖ್ಯೆಯಲ್ಲಿದ್ದು ಕವಚಗಳಿಂದಲೂ, ಗದಾ-ಪಟ್ಟಿಶ-ಶೂಲ-ಮುದ್ಗರಾದಿ ತೀಕ್ಷ್ಣವಾದ ಆಯುಧಗಳಿಂದಲೂ ಸುಸಜ್ಜಿತವಾಗಿದ್ದುವು. ಸುಂದೋಪಸುಂದರು ಸಂತೋಷಚಿತ್ತರಾಗಿ ಪ್ರಯಾಣಮಾಡುತ್ತಿದ್ದಾಗ ಅವರಿಗೆ ಜಯಸೂಚಕವಾಗಿ ಚಾರಣರು ಪರಾಕುಗಳನ್ನು ಹೇಳುತ್ತಿದ್ದರು.

ಇಚ್ಛೆಬಂದಲ್ಲಿಗೆ ಹೋಗಲು ಶಕ್ತಿಯಿದ್ದ, ಯುದ್ಧದುರ್ಮದರಾಗಿದ್ದ ದೈತ್ಯಸಹೋದರರು ಮೊತ್ತಮೊದಲು ಅಂತರಿಕ್ಷಕ್ಕೆ ಹಾರಿ ದೇವಲೋಕಕ್ಕೆ ಮುತ್ತಿಗೆಹಾಕಿದರು. ಸುಂದೋಪಸುಂದರು ದಿಗ್ವಿಜಯಕ್ಕಾಗಿ ಸ್ವರ್ಗಲೋಕಕ್ಕೆ ಬರುತ್ತಿರುವ ವಿಷಯವನ್ನೂ ಮತ್ತು ಅವರಿಗಿದ್ದ ವರಬಲವನ್ನೂ ಗಮನಿಸಿದ ದೇವತೆಗಳು ಆ ರಾಕ್ಷಸರನ್ನು ಪ್ರತಿಭಟಿಸುವುದರಿಂದ ಪ್ರಯೋಜನ ವಿಲ್ಲವೆಂದು ಭಾವಿಸಿ, ರಕ್ಷಣೆಯನ್ನು ಪಡೆಯಲು ಬ್ರಹ್ಮಲೋಕಕ್ಕೆ ತೆರಳಿ

ದರು. ಯಾವವಿಧವಾದ ಪ್ರತಿಭಟನೆಯೂ ಇಲ್ಲದೇ ಕ್ಷಣಮಾತ್ರದಲ್ಲಿ ದೇವ ಲೋಕವು ಅಸುರರಿಗೆ ಸೇರಿಹೋಯಿತು. ಅಪ್ಪಿ-ತಪ್ಪಿ ಎದುರಿಗೆ ಸಿಕ್ಕುತ್ತಿದ್ದ ಯಕ್ಷ-ರಾಕ್ಷಸರನ್ನು ನಿರ್ಮೂಲಮಾಡುತ್ತಾ ರಾಕ್ಷಸಸಹೋದರರು ದೇವ ಲೋಕದಿಂದ ಹೊರಟು ನಾಗಲೋಕಕ್ಕೆ ಬಂದು, ಅಲ್ಲಿಯೂ ಪ್ರತಿಭಟಿಸಿದವ ರನ್ನು ಕ್ಷಣಮಾತ್ರದಲ್ಲಿ ನಿರ್ನಾಮಮಾಡಿ, ಪಾತಾಳಲೋಕವನ್ನೂ ಸ್ವಾಧೀನ ಪಡಿಸಿಕೊಂಡು ಮುಂದೆ ಸಮುದ್ರಪ್ರದೇಶವಾಸಿಗಳಾದ ಮ್ಲೇಚ್ಛರನ್ನೂ ಗೆದ್ದು ಅವರ ರಾಜ್ಯ-ಕೋಶಾದಿಗಳನ್ನೂ ಕಿತ್ತುಕೊಂಡರು.

ದೇವಲೋಕವೂ ಮತ್ತು ಪಾತಾಳಲೋಕವೂ ಸ್ವಾಧೀನವಾದನಂತರ ಸುಂದೋಪಸುಂದರು ಅಖಂಡಭೂಮಂಡಲವನ್ನೂ ಜಯಿಸುವ ಉದ್ದೇಶ ದಿಂದ ತಮ್ಮ ಸೇನಾಪತಿಗಳನ್ನು ಸಮಾಲೋಚನೆಗೆ ಕರೆದು ಹೇಳಿದರು :

**ರಾಜರ್ಷಯೋ ಮಹಾಯಜ್ಞೈರ್ಹವ್ಯಕವ್ಯೈರ್ದ್ವಿಜಾತಯಃ।**
**ತೇಜೋ ಬಲಂ ಚ ದೇವಾನಾಂ ವರ್ಧಯನ್ತಿ ಶ್ರಿಯಂ ತಥಾ ॥೧೦॥**

**ತೇಷಾಮೇವಂ ಪ್ರವೃತ್ತಾನಾಂ ಸರ್ವೇಷಾಮಸುರದ್ವಿಷಾಮ್।**
**ಸಮ್ಭೂಯ ಸರ್ವೈರಸ್ಮಾಭಿಃ ಕಾರ್ಯಃ ಸರ್ವಾತ್ಮನಾ ವಧಃ ॥೧೧॥**

"ವೀರರೇ! ಭೂಲೋಕದಲ್ಲಿ ನಾವು ಮುಖ್ಯವಾಗಿ ಬ್ರಾಹ್ಮಣರನ್ನೂ, ರಾಜರ್ಷಿಗಳನ್ನೂ ವಿನಾಶಮಾಡಬೇಕಾಗಿದೆ. ಏಕೆಂದರೆ : ರಾಜರ್ಷಿಗಳು ಯಜ್ಞ-ಯಾಗಾದಿಗಳಿಂದಲೂ, ಬ್ರಾಹ್ಮಣರು ಹವ್ಯ-ಕವ್ಯಗಳಿಂದಲೂ ದೇವತೆಗಳ ಸಂಪತ್ತು, ತೇಜಸ್ಸು ಮತ್ತು ಬಲಗಳನ್ನು ಹೆಚ್ಚಿಸುತ್ತಾರೆ. ದೇವತೆ ಗಳಿಗೂ-ಅಸುರರಿಗೂ ವೈರವು ಜನ್ಮಸಿದ್ಧವಾದುದು. ಅಸುರರ ವೈರಿಗಳಾದ ದೇವತೆಗಳಿಗೆ ಬ್ರಾಹ್ಮಣರೂ, ರಾಜರ್ಷಿಗಳೂ ಯಜ್ಞ-ಯಾಗಾದಿಗಳ ಮೂಲಕವಾಗಿ ತೇಜೋಬಲಗಳನ್ನು ಹೆಚ್ಚಿಸುವುದರಿಂದ ಅವರೂ ನಮಗೆ ಶತ್ರುಗಳೇ ಆಗಿರುತ್ತಾರೆ. ದೇವತೆಗಳಿಗೆ ತೇಜೋಬಲಪ್ರದಾತೃಗಳನ್ನೇ ತೀರಿಸಿಬಿಟ್ಟರೆ ದೇವತೆಗಳೂ ಶಕ್ತಿಹೀನರಾಗುವರು. ಆದುದರಿಂದ ನಮ್ಮ ಶಕ್ತಿಯೆಲ್ಲವನ್ನೂ ಕೇಂದ್ರೀಕರಿಸಿ ಬ್ರಾಹ್ಮಣರನ್ನೂ ಮತ್ತು ರಾಜರ್ಷಿಗಳನ್ನೂ ಸಂಪೂರ್ಣವಾಗಿ ವಿನಾಶಮಾಡಬೇಕಾಗಿದೆ"– ಹೀಗೆ ಸೈನಿಕರಿಗೆ ಆದೇಶ ನೀಡಿ ಸಮುದ್ರದ ಪೂರ್ವದ ದಂಡೆಯಲ್ಲಿ ಬಹಳ ಕಠಿನವಾದ ಸಂಕಲ್ಪ

ಮಾಡಿ ಎಲ್ಲ ದಿಕ್ಕುಗಳಿಗೂ ಹೊರಟರು. ಯಜ್ಞಶಾಲೆಗಳಿಗೆ ಹೋಗಿ ಯಜ್ಞವನ್ನು ಮಾಡುವವರು, ಮಾಡಿಸುವವರು, ಋತ್ವಿಜರು – ಎಲ್ಲರನ್ನೂ ಕ್ಷಣಮಾತ್ರದಲ್ಲಿ ಸಂಹರಿಸಿ ಅಲ್ಲಿಂದ ಮುಂದಿನ ಯಜ್ಞಶಾಲೆಗಳಿಗೆ ಧಾವಿಸುತ್ತಿದ್ದರು. ಸುಂದೋಪಸುಂದರು ಬ್ರಾಹ್ಮಣರನ್ನು ಸಂಹರಿಸಿದೊಡನೆಯೇ ಅವರ ಸೈನಿಕರು ಅಲ್ಲಿರುತ್ತಿದ್ದ ಭಾವಿತಾತ್ಮರಾದ ಮುನಿಗಳ ಅಗ್ನಿಹೋತ್ರಸಂಬಂಧವಾದ ಸಾಮಗ್ರಿಗಳನ್ನು ನೀರಿನಲ್ಲಿ ಎಸೆದು, ಹವಿಸ್ಸಿದ್ದ ಪಾತ್ರೆಗಳನ್ನು ಒಡೆದುಹಾಕಿ, ಪವಿತ್ರಭೂಮಿಯನ್ನು ಅಪವಿತ್ರಗೊಳಿಸಿ, ಮುಂದಿನ ಆಶ್ರಮಕ್ಕೆ ತೆರಳುತ್ತಿದ್ದರು. ಅವರ ಕ್ರೌರ್ಯವನ್ನು ಕಂಡು ಕೋಪಗೊಂಡ ಕೆಲವು ತಪೋಧನರು ಶಪಿಸುತ್ತಿದ್ದರು. ಆದರೆ ಅವರ ಶಾಪವು ಸುಂದೋಪಸುಂದರ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡುತ್ತಿರಲಿಲ್ಲ. ಬ್ರಹ್ಮನ ವರಬಲವಿದ್ದುದರಿಂದ ಮಹರ್ಷಿಗಳ ಶಾಪವು–ಕಲ್ಲಿನ ಮೇಲೆ ಬಾಣಪ್ರಯೋಗಮಾಡಿದಂತೆ ನಿರರ್ಥಕವಾಗುತ್ತಿತ್ತು. ಶಾಪವು ತಪಸ್ವಿಗಳ ಬಾಯಿಂದ ಹೊರಬಿದ್ದೊಡನೆಯೇ ಅಸುರಸಹೋದರರು ಅಪಹಾಸ್ಯಮಾಡಿ ನಗುತ್ತಾ ತಪಸ್ವಿಗಳ ನಾಲಿಗೆಗಳನ್ನೇ ಸೀಳಿಬಿಡುತ್ತಿದ್ದರು. ಅದನ್ನು ಕಂಡೊಡನೆಯೇ ಅಳಿದುಳಿದ ಬ್ರಾಹ್ಮಣರು ತಮ್ಮ ವಿಧಿ-ನಿಯಮ-ದೀಕ್ಷೆಗಳನ್ನೂ ಪರಿತ್ಯಜಿಸಿ ದಿಕ್ಕಾಪಾಲಾಗಿ ಓಡಿಬಿಡುತ್ತಿದ್ದರು. ಜಿತೇಂದ್ರಿಯರಾದ, ಜ್ಞಾನಿಗಳಾದ, ಸದಾಕಾಲದಲ್ಲಿಯೂ ಚಿನ್ಮಯನ ಧ್ಯಾನೋಪಾಸನೆಗಳಲ್ಲಿಯೇ ಆಸಕ್ತರಾಗಿದ್ದ ಮಹಾಮಹಿಮರೂ ಸುಂದೋಪಸುಂದರ ಭಯದಿಂದ – ಗರುಡನನ್ನು ಕಂಡ ಹಾವುಗಳಂತೆ – ಓಡಿಹೋಗುತ್ತಿದ್ದರು. ಋಷ್ಯಾಶ್ರಮಗಳೆಲ್ಲವೂ ಕೆಡಹಲ್ಪಟ್ಟು ರಾಕ್ಷಸರಿಂದ ಧೂಳೀಪಟಲಮಾಡಲ್ಪಟ್ಟುವು. ಯಜ್ಞಕ್ಕೆ ಸಂಬಂಧಿಸಿದ ಪಾತ್ರೆಗಳೆಲ್ಲವೂ ನುಚ್ಚುನೂರಾಗಿ, ಸುತ್ತಲೂ ಎಸೆಯಲ್ಪಟ್ಟಿದ್ದುವು. ಪ್ರಳಯಕಾಲದಲ್ಲಿ ಪ್ರಪಂಚವೆಲ್ಲವೂ ಜನರಹಿತವಾಗುವಂತೆ–ಪವಿತ್ರವಾಗಿದ್ದ ಆಶ್ರಮಭೂಮಿಗಳೆಲ್ಲವೂ ಸುಂದೋಪಸುಂದರಿಂದ ನಿರ್ಜನವಾಗಿಯೂ, ಅಪವಿತ್ರವಾಗಿಯೂ ಮಾಡಲ್ಪಟ್ಟುವು.

ಅನೇಕಸಿದ್ಧಿಗಳನ್ನು ಪಡೆದಿದ್ದ ಮಹರ್ಷಿಗಳು ರಾಕ್ಷಸರ ಕಣ್ಣಿಗೆ ಅಗೋಚರರಾದರು. ಆಗಲೂ ಸುಂದೋಪಸುಂದರು ಅವರ ಬೇಟೆಯನ್ನು ನಿಲ್ಲಿಸಲಿಲ್ಲ. ತಾವೂ ಹಲವಾರು ಬಗೆಯ ಕಾಮರೂಪಗಳನ್ನು ಧರಿಸಿ ಮಹರ್ಷಿಗಳನ್ನು ಹುಡುಕತೊಡಗಿದರು. ಅನೇಕಮಹರ್ಷಿಗಳು ನಿಬಿಡವಾದ ಅರಣ್ಯಮಧ್ಯ

ದಲ್ಲಿದ್ದ ಗುಹೆಗಳಲ್ಲಿ ಅಡಗಿದ್ದರು. ಸುಂದೋಪಸುಂದರು ಆ ವಿಷಯವನ್ನು ತಿಳಿದವರಾಗಿ ಮದಿಸಿದ ಸಲಗಗಳ ರೂಪಗಳನ್ನು ಧರಿಸಿ ಅರಣ್ಯದಲ್ಲಿ ನುಗ್ಗಿ, ಗುಹೆಗಳ ಸಮೀಪಕ್ಕೆ ಹೋಗಿ, ಮಹರ್ಷಿಗಳನ್ನು ಸೊಂಡಿಲುಗಳಿಂದ ಸೆಳೆದು ಯಮಾಲಯಕ್ಕೆ ಕಳುಹಿಸುತ್ತಿದ್ದರು. ಕೆಲವು ಸಮಯಗಳಲ್ಲಿ ಸಿಂಹಗಳ ಆಕಾರಗಳನ್ನು ಹೊಂದುತ್ತಾ, ಕೆಲವು ಸಂದರ್ಭಗಳಲ್ಲಿ ಹುಲಿಗಳ ರೂಪಗಳನ್ನು ಹೊಂದುತ್ತಾ – ನಿರಾಯುಧರಾದ ಮಹರ್ಷಿಗಳನ್ನು ಬೇಟೆಯಾಡುತ್ತಿದ್ದರು. ಯಜನ-ಯಾಜನಗಳೂ, ಅಧ್ಯಯನ-ಅಧ್ಯಾಪನಗಳೂ, ದಾನ-ಪ್ರತಿಗ್ರಹ ಗಳೂ ಪೂರ್ಣವಾಗಿ ನಿಂತುಹೋದುವು. ರಾಜರ ಮತ್ತು ಬ್ರಾಹ್ಮಣರ ಸಂಪೂರ್ಣವಿನಾಶವೇ ಆಯಿತು. ಹಾಹಾಕಾರಶಬ್ದಗಳು ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿತವಾಗುತ್ತಿದ್ದುವು. ಕ್ರಯ-ವಿಕ್ರಯಾದಿ ವ್ಯವಹಾರಗಳೆಲ್ಲವೂ ಸಂಪೂರ್ಣವಾಗಿ ನಿಂತುಹೋದುವು. ಎಲ್ಲ ಧಾರ್ಮಿಕ ಕಾರ್ಯಗಳೂ, ಉತ್ಸವಗಳೂ, ವಿವಾಹಾದಿಗಳೂ ನಿಂತುಹೋದುವು. ಕೃಷಿಯೂ ಗೋರಕ್ಷಣೆಯೂ ಇಲ್ಲವಾಯಿತು. ನಗರಗಳೂ ಆಶ್ರಮಗಳೂ ಸ್ಮಶಾನಪ್ರಾಯವಾದುವು. ಎಲ್ಲೆಡೆಗಳಲ್ಲಿಯೂ ಅಸ್ಥಿಪಂಜರಗಳಿಂದ ತುಂಬಿಹೋಗಿದ್ದ ಭೂಮಿಯು ಭಯಂಕರರೂಪವನ್ನು ತಾಳಿತು. ಪಿತೃದೇವತೆಗಳಿಗೆ ಅರ್ಪಿತವಾಗುತ್ತಿದ್ದ ಪಿಂಡೋದಕಕ್ರಿಯೆಗಳೂ, ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವಾಗ ಹೇಳುತ್ತಿದ್ದ ಸ್ವಾಹಾ-ವಷಟ್ಕಾರಗಳ ಉಚ್ಚಾರಣೆಗಳೂ ನಿಂತುಹೋದುವು. ಜಗತ್ತು ಭಯಂಕರಾಕಾರವನ್ನು ತಾಳಿತು. ಜಗತ್ತಿನ ಘೋರರೂಪವನ್ನು ಕಣ್ಣುಗಳಿಂದ ನೋಡಲೂ ಸಾಧ್ಯವಾಗುತ್ತಿರಲಿಲ್ಲ.

ಸುಂದೋಪಸುಂದರ ಘೋರಕೃತ್ಯಕ್ಕೆ ಸಾಕ್ಷಿಗಳಾಗಿದ್ದ ಸೂರ್ಯ-ಚಂದ್ರರೂ, ಅಂಗಾರಕಾದಿ ಇತರಗ್ರಹಗಳೂ, ನಕ್ಷತ್ರಗಳೂ, ಅಷ್ಟದಿಕ್ಪಾಲಕರೂ ಭೂವಲಯದ ದುರವಸ್ಥೆಯನ್ನು ಕಂಡು ದುಃಖಿತರಾದರು. ಸುಂದೋಪಸುಂದರು ತಮ್ಮ ಘೋರಕೃತ್ಯಗಳಿಂದ ಪ್ರಪಂಚವನ್ನೆಲ್ಲಾ ಗೆದ್ದು ನಿಸ್ಸಪತ್ನರಾಗಿ, ಕುರುಕ್ಷೇತ್ರವೆಂಬ ಸ್ಥಳದಲ್ಲಿ ನಿವಾಸಮಾಡತೊಡಗಿದರು.”

ಎ೨೧೦ನೆಯ ಅಧ್ಯಾಯವು ಮುಗಿಯಿತು.

## ತಿಲೋತ್ತಮೆಯ ಉತ್ಪತ್ತಿ: ರೂಪ-ಸೌಂದರ್ಯಗಳಿಂದ ಸುಂದೋಪಸುಂದರನ್ನು ಆಕರ್ಷಿಸಲು ರಾಕ್ಷಸರ ಬಳಿಗೆ ತಿಲೋತ್ತಮೆಯ ಪ್ರಸ್ಥಾನ

"ಯುಧಿಷ್ಠಿರ! ಪ್ರಪಂಚದಲ್ಲಿ ಸುಂದೋಪಸುಂದರು ನಡೆಸುತ್ತಿದ್ದ ದಾರುಣವಾದ ಕೊಲೆಗಳನ್ನು ಕಂಡು ಜಗತ್ತಿನ ಮೇಲಿನ ಕೃಪೆಯಿಂದ ಜಿತಕ್ರೋಧರಾದ-ಜಿತಾತ್ಮರಾದ-ಜಿತೇಂದ್ರಿಯರಾದ ದೇವರ್ಷಿಗಳು, ಮಹರ್ಷಿಗಳು, ಸಿದ್ಧರು, ಚಾರಣರು ಇವರೆಲ್ಲರೂ ಜಗತ್ತಿಗೆ ಕಲ್ಯಾಣವನ್ನುಂಟುಮಾಡಲು ಬ್ರಹ್ಮನಲ್ಲಿಗೆ ತೆರಳಿ, ದೇವತೆಗಳಿಂದಲೂ ಸಿದ್ಧರಿಂದಲೂ ಬ್ರಹ್ಮರ್ಷಿಗಳಿಂದಲೂ ಪರಿವೃತನಾಗಿ ಸಿಂಹಾಸನದಲ್ಲಿ ಕುಳಿತಿದ್ದ ಪಿತಾಮಹನನ್ನು ಸಂದರ್ಶಿಸಿದರು. ಮಹಾಸಭೆಯಲ್ಲಿ ದೇವದೇವನಾದ ಮಹಾದೇವ, ವಾಯುಸಮೇತನಾದ ಅಗ್ನಿದೇವ, ಚಂದ್ರ-ಸೂರ್ಯರು, ಶಕ್ರ, ಬ್ರಹ್ಮರ್ಷಿಗಳು, ವೈಖಾನಸರು, ವಾಲಖಿಲ್ಯರು, ವಾನಪ್ರಸ್ಥರು, ಮರೀಚಿಪರು, ಅಜರು, ಅವಿಮೂಢರು, ತೇಜೋಗರ್ಭರು–ಇವರಲ್ಲದೇ ಇನ್ನೂ ಅನೇಕತಪಸ್ವಿಗಳೂ ಯಥೋಚಿತವಾದ ಆಸನಗಳಲ್ಲಿ ಕುಳಿತಿದ್ದರು.

ದೇವರ್ಷಿಪುರಸ್ಸರರಾಗಿ ಹೋಗಿದ್ದವರೆಲ್ಲರೂ ಪಿತಾಮಹನನ್ನು ಕಂಡು ಬಹುದೀನರಾಗಿ ಸುಂದೋಪಸುಂದರು ಭೂಲೋಕದಲ್ಲಿ ಮಾಡುತ್ತಿರುವ ಕ್ರೂರಕರ್ಮಗಳನ್ನು ವಿಶದವಾಗಿ ನಿವೇದಿಸಿದರು.

ರಾಕ್ಷಸರು ಆಶ್ರಮಕ್ಕೆ ಬಂದು ಯಜ್ಞದ ಮುಖ್ಯದ್ರವ್ಯವಾದ ಸೋಮರಸವನ್ನು ಹಾಳುಮಾಡಿ ಯಜ್ಞೇಶ್ವರನ ಮೇಲೆ ನೀರು ಚೆಲ್ಲುತ್ತಿದ್ದುದು; ಪ್ರತಿಭಟಿಸಲು ಅಥವಾ ಶಾಪಕೊಡಲು ಹೋದ ಯಜಮಾನನನ್ನೂ, ಪುರೋಹಿತರನ್ನೂ, ಋತ್ವಿಜರನ್ನೂ ನಿರ್ದಯೆಯಿಂದ ಕತ್ತರಿಸಿ ಹಾಕುತ್ತಿದ್ದುದು–ಈ ಎಲ್ಲ ವಿಷಯಗಳನ್ನೂ ವಿವರವಾಗಿ ಪಿತಾಮಹನಿಗೆ ನಿವೇದಿಸಿದರು.

ಸಭೆಯಲ್ಲಿ ಕುಳಿತಿದ್ದ ದೇವಾಧಿದೇವತೆಗಳೆಲ್ಲರೂ ಅವರು ಹೇಳಿದ

ವಿಷಯಗಳನ್ನೂ ಪುಷ್ಟೀಕರಿಸಿದುದು ಮಾತ್ರವಲ್ಲದೇ ಸುಂದೋಪಸುಂದರ ಸಂಹಾರವಾಗಿಯೇ ತೀರಬೇಕೆಂದು ಬ್ರಹ್ಮನನ್ನು ಒತ್ತಾಯಪಡಿಸಿದರು.

ಪಿತಾಮಹನು ಕ್ಷಣಕಾಲ ಯೋಚಿಸಿ, ತನ್ನ ಮನಸ್ಸಿನಲ್ಲಿಯೇ ಅಸುರರ ಸಂಹಾರಕ್ಕೆ ತಕ್ಕ ಯೋಜನೆಯನ್ನು ಸಿದ್ಧಪಡಿಸಿ, ದೇವಶಿಲ್ಪಿಯಾದ ವಿಶ್ವಕರ್ಮನನ್ನು ಹತ್ತಿರಕ್ಕೆ ಕರೆದು ಹೇಳಿದನು :

"ವಿಶ್ವಕರ್ಮ! ಸಕಲರ ಚಿತ್ತವನ್ನೂ ಆಕರ್ಷಿಸಲು ಸಮರ್ಥವಾದ ರೂಪ-ಲಾವಣ್ಯಗಳುಳ್ಳ ಸ್ತ್ರೀರತ್ನವನ್ನು ನಿರ್ಮಿಸಬೇಕು."

ವಿಶ್ವಕರ್ಮನು ನತಶಿರನಾಗಿ ಆಜ್ಞೆಯನ್ನು ಶಿರಸಾವಹಿಸಿ ಹೊರಟುಹೋದನು.

ವಿಶ್ವಕರ್ಮನು ಏಕಾಂತದಲ್ಲಿ ಕುಳಿತು ಪ್ರಪಂಚದಲ್ಲಿರುವ ಸುಂದರವಸ್ತುಗಳೆಲ್ಲವನ್ನೂ ಸ್ಮರಿಸಿಕೊಂಡನು. ಸೌಂದರ್ಯಕ್ಕೆ ಆಕರಗಳಾದ ಸ್ಥಾವರ-ಜಂಗಮವಸ್ತುಗಳನ್ನೂ ಸಂಗ್ರಹಮಾಡಿಕೊಂಡನು. ಮತ್ತೊಂದು ಕಡೆಯಲ್ಲಿ ಉತ್ತಮಜಾತಿಯ ನವರತ್ನಗಳನ್ನೂ ಸಂಗ್ರಹಿಸಿಕೊಂಡನು. ತಾನು ಸಂಗ್ರಹಿಸಿದ್ದ ಚರಾಚರವಸ್ತುಗಳ ಸುಂದರಭಾಗಗಳನ್ನು ಮಾದರಿಯನ್ನಾಗಿಟ್ಟುಕೊಂಡು ನವರತ್ನಗಳಲ್ಲಿಯೇ ಸ್ತ್ರೀಯೊಬ್ಬಳ ಆಕೃತಿಯನ್ನು ಸಿದ್ಧಮಾಡಿದನು.*

ನವರತ್ನಗಳಲ್ಲಿಯೂ ಉತ್ತಮಭಾಗಗಳನ್ನೇ ಸಂಗ್ರಹಿಸಿ ಮಾಡಿದ

---

* ಇದರ ಅಭಿಪ್ರಾಯವು ಹೀಗಿರಬಹುದಾಗಿದೆ. ಉತ್ತಮಸ್ತ್ರೀಯ ಲಕ್ಷಣವನ್ನು ಹೇಳುವಾಗ–ಸಿಂಹಮಧ್ಯಮೆ, ಚಂದ್ರವದನೆ, ಕಮಲದಳಾಯತಾಕ್ಷೀ, ಕಮಲದ ಮೊಗ್ಗಿನಂತೆ ಕುಚದ್ವಯವುಳ್ಳವಳು, ಹರಿಣಾಕ್ಷೀ, ಸಂಪಿಗೆಹೂವಿನಂತೆ ಮೂಗುಳ್ಳವಳು, ತೊಂಡೆಹಣ್ಣಿನಂತೆ ಕೆಂಪಾದ ತುಟಿಗಳುಳ್ಳವಳು, ಹಾವಿನಂತೆ ನೀಳವಾದ ಜಡೆಯುಳ್ಳವಳು, ಬಾಳೆಗಿಡದಂತೆ ತೊಡೆಗಳುಳ್ಳವಳು – ಇತ್ಯಾದಿ ಅನೇಕವಿಧಗಳಿಂದ ಚರಾಚರವಸ್ತುಗಳ ನಿದರ್ಶನಗಳನ್ನು ಕೊಟ್ಟು ವರ್ಣನೆಮಾಡುವುದನ್ನು ನಾವು ಕೇಳಿದ್ದೇವೆ. ಒಂದೊಂದು ವಸ್ತುವೂ ಒಂದೊಂದು ಗುಣದಲ್ಲಿ ವೈಶಿಷ್ಟ್ಯವನ್ನು ಪಡೆದಿರುತ್ತದೆ. ವಿಶ್ವಕರ್ಮನು ಅಂತಹ ವಸ್ತುಗಳನ್ನೇ ಆರಿಸಿಕೊಂಡು ಅದರಂತೆಯೇ ಸರ್ವಾಂಗಸುಂದರವಾದ ಪ್ರತಿಕೃತಿಯನ್ನು ನವರತ್ನಗಳಲ್ಲಿ ರಚಿಸಿದನು.

ಸ್ತ್ರೀಯ ಸೌಂದರ್ಯವನ್ನು ಊಹಿಸಲು ಕೂಡ ಸಾಧ್ಯವಿದೆಯೇ? ಮೂರು ಲೋಕಗಳಲ್ಲಿಯೂ ಅಂತಹ ಸೌಂದರ್ಯವುಳ್ಳ ಸ್ತ್ರೀಯರು ಇರಲೇ ಇಲ್ಲ. ಅತಿಯಾದ ಪ್ರಯಾಸದಿಂದ ವಿಶ್ವಕರ್ಮನು ಆ ಸ್ತ್ರೀರತ್ನವನ್ನು ನಿರ್ಮಿಸಿದ್ದನು.

ಆ ಸ್ತ್ರೀರತ್ನದ ಅಂಗಾಂಗಗಳಲ್ಲಿ ಪರರ ಚಿತ್ತಾಕರ್ಷಣೆಯನ್ನು ಮಾಡದ ಒಂದು ಭಾಗವೂ ಕೂಡ ಇರಲಿಲ್ಲ. ಬ್ರಹ್ಮನ ಸಂಕಲ್ಪದಂತೆ ಜೀವಂತಳಾದ ಆ ಸ್ತ್ರೀರತ್ನವು-ಶರೀರಧಾರಿಣಿಯಾದ, ಕಾಮರೂಪಿಣಿಯಾದ ಲಕ್ಷ್ಮೀದೇವಿಯಂತೆ-ಪ್ರಪಂಚದಲ್ಲಿರುವ ಸಕಲಪ್ರಾಣಿಗಳ ಕಣ್ಣುಗಳನ್ನೂ, ಮನಸ್ಸುಗಳನ್ನೂ ಆಕರ್ಷಣೆಮಾಡಲು ಸಮರ್ಥವಾಯಿತು.

**ತಿಲಂ ತಿಲಂ ಸಮಾನೀಯ ರತ್ನಾನಾಂ ಯದ್ವಿನಿರ್ಮಿತಾ ।**
**ತಿಲೋತ್ತಮೇತಿ ತತ್ತಸ್ಯಾ ನಾಮ ಚಕ್ರೇ ಪಿತಾಮಹಃ ॥೧೮॥**

ಉತ್ತಮೋತ್ತಮವಾದ ನವರತ್ನಗಳೆಲ್ಲದರಿಂದಲೂ ತಿಲಾಂಶದಷ್ಟು ಸಾರವಾದ ಭಾಗಗಳನ್ನೇ ತೆಗೆದು ನಿರ್ಮಿಸಿದ ಸ್ತ್ರೀರತ್ನವಾದುದರಿಂದ ಬ್ರಹ್ಮನು ಅವಳಿಗೆ 'ತಿಲೋತ್ತಮಾ' ಎಂದೇ ಹೆಸರನ್ನಿಟ್ಟನು. ತಿಲೋತ್ತಮೆಯು ಬ್ರಹ್ಮನ ಎದುರಿನಲ್ಲಿ ನಿಂತು ಬದ್ಧಾಂಜಲಿಯಾಗಿ ಹೇಳಿದಳು :

"ಭೂತೇಶನೇ! ನಾನೇನು ಮಾಡಬೇಕು? ನನ್ನನ್ನು ನಿರ್ಮಿಸಿದ ಕಾರಣವಾದರೂ ಏನು?"

ಅವಳು ಸರ್ವಾಂಗಸುಂದರಿಯಾಗಿದ್ದಂತೆಯೇ ಅವಳ ಧ್ವನಿಯೂ ಎಲ್ಲರ ಕಿವಿಗಳಿಗೂ ಇಂಪನ್ನುಂಟುಮಾಡುತ್ತಿದ್ದಿತು.

ಮಧುರಭಾಷಿಣಿಯ ಪ್ರಶ್ನೆಗಳಿಗೆ ಬ್ರಹ್ಮನು ಉತ್ತರವನ್ನಿತ್ತನು :

**ಗಚ್ಛ ಸುನ್ದೋಪಸುನ್ದಾಭ್ಯಾಮಸುರಾಭ್ಯಾಂ ತಿಲೋತ್ತಮೇ ।**
**ಪ್ರಾರ್ಥನೀಯೇನ ರೂಪೇಣ ಕುರು ಭದ್ರೇ ಪ್ರಲೋಭನಮ್ ॥೨೦॥**
**ತ್ವತ್ಕೃತೇ ದರ್ಶನಾದೇವ ರೂಪಸಮ್ಪತ್ಕೃತೇನ ವೈ ।**
**ವಿರೋಧಃ ಸ್ಯಾದ್ಯಥಾ ತಾಭ್ಯಾಮನ್ಯೋನ್ಯೇನ ತಥಾ ಕುರು ॥೨೧॥**

"ತಿಲೋತ್ತಮೇ! ನೀನು ಸುಂದೋಪಸುಂದರ ಬಳಿಗೆ ಹೋಗಬೇಕು. ನಿನ್ನ ಕಮನೀಯವಾದ ರೂಪದಿಂದ ಅವರಿಬ್ಬರ ಮನಸ್ಸನ್ನೂ ಪ್ರಲೋಭನ

ಗೊಳಿಸಬೇಕು. ನಿನ್ನನ್ನು ನೋಡಿದೊಡನೆಯೇ ನಿನ್ನ ಸಲುವಾಗಿ ಮತ್ತು ನಿನ್ನ ರೂಪಸಂಪತ್ತಿನ ಸಲುವಾಗಿ ಅವರಿಬ್ಬರೂ ಪರಸ್ಪರವಾಗಿ ವಿರೋಧವನ್ನು ಕಟ್ಟಿಕೊಳ್ಳುವಂತೆ ನೀನು ವರ್ತಿಸಬೇಕಾಗಿದೆ. ಆಗ ನಾವು ಉದ್ದೇಶಿಸಿರುವ ಕಾರ್ಯವು ನೆರವೇರುವುದು."

ಬ್ರಹ್ಮನ ಆಜ್ಞೆಗೆ ತಿಲೋತ್ತಮೆಯು 'ತಥಾಸ್ತು' ಎಂದು ಹೇಳಿ ಅಸುರರ ಪಟ್ಟಣಕ್ಕೆ ಹೋಗುವ ಮೊದಲು ಆ ಮಹಾಸಭೆಯನ್ನು ಪ್ರದಕ್ಷಿಣೆ ಮಾಡತೊಡಗಿದಳು. ಆ ಮಹಾಸಭೆಯಲ್ಲಿ ಬ್ರಹ್ಮನ ಬಲಗಡೆಯಲ್ಲಿ ಭಗವಾನ್ ಶಂಕರನು ಪೂರ್ವಾಭಿಮುಖವಾಗಿ ಕುಳಿತಿದ್ದನು. ದೇವತೆಗಳು ಬ್ರಹ್ಮನ ಉತ್ತರಭಾಗದಲ್ಲಿಯೂ, ಋಷಿ-ಮಹರ್ಷಿಗಳೆಲ್ಲರೂ ಬ್ರಹ್ಮನ ಸುತ್ತಲೂ ಕುಳಿತಿದ್ದರು. ತಿಲೋತ್ತಮೆಯು ಪ್ರದಕ್ಷಿಣೆಮಾಡುತ್ತಿದ್ದಂತೆಲ್ಲಾ ಆ ಮಹಾಸಭೆಯಲ್ಲಿ (ಬ್ರಹ್ಮನನ್ನುಳಿದು) ನಿಶ್ಚಲವಾಗಿ ಧೈರ್ಯದಿಂದ ಕುಳಿತಿದ್ದವರೆಂದರೆ ಇಂದ್ರ ಮತ್ತು ಭಗವಾನ್ ಮಹಾದೇವ-ಇವರಿಬ್ಬರೇ.

ತಿಲೋತ್ತಮೆಯು ಎದುರಿಗೆ ನಿಂತಿದ್ದಾಗ ಮಹಾದೇವನು ತನಗಿದ್ದ ಒಂದೇ ಮುಖದಿಂದಲೇ ಅವಳನ್ನು ಕಣ್ತುಂಬ ನೋಡಿದನು. ಆದರೆ :

**ದೃಷ್ಟುಕಾಮಸ್ಯ ಚಾತ್ಯರ್ಥಂ ಗತಯಾ ಪಾರ್ಶ್ವತಸ್ತಯಾ ।**
**ಅನ್ಯದಞ್ಚಿತಪದ್ಮಾಕ್ಷಂ ದಕ್ಷಿಣಂ ನಿಃಸೃತಂ ಮುಖಮ್ ॥೨೫॥**

**ಪೃಷ್ಠತಃ ಪರಿವರ್ತನ್ತ್ಯಾ ಪಶ್ಚಿಮಂ ನಿಃಸೃತಂ ಮುಖಮ್ ।**
**ಗತಯಾ ಚೋತ್ತರಂ ಪಾರ್ಶ್ವಮುತ್ತರಂ ನಿಃಸೃತಂ ಮುಖಮ್ ॥೨೬॥**

ತಿಲೋತ್ತಮೆಯು ಮಹಾದೇವನ ಬಲಪಾರ್ಶ್ವದಲ್ಲಿ ಬಂದಾಗ ಅವಳನ್ನು ನೋಡುವ ಸಲುವಾಗಿಯೇ ದಕ್ಷಿಣಪಾರ್ಶ್ವದಲ್ಲಿ ಮಹಾದೇವನಿಗೆ ಕಮಲದಳಗಳಂತೆ ಕಣ್ಣುಗಳನ್ನು ಹೊಂದಿದ್ದ ಒಂದು ಮುಖವು ಉತ್ಪನ್ನ ವಾಯಿತು. ತಿಲೋತ್ತಮೆಯು ಮಹಾದೇವನ ಹಿಂದೆ ಹೋದೊಡನೆಯೇ ಪಶ್ಚಿಮಪಾರ್ಶ್ವದಲ್ಲಿ ಮತ್ತೊಂದು ಮುಖವು ಒಡನೆಯೇ ಹುಟ್ಟಿತು. ತಿಲೋತ್ತಮೆಯು ರುದ್ರದೇವನ ಎಡಪಾರ್ಶ್ವಕ್ಕೆ ಬಂದೊಡನೆಯೇ ಉತ್ತರ ಪಾರ್ಶ್ವದಲ್ಲಿ ಒಂದು ಮುಖವು ಹುಟ್ಟಿತು. ತಿಲೋತ್ತಮೆಯ ಸೌಂದ

ರ್ಯಾತಿಶಯವನ್ನು ನಾಲ್ಕು ಕಡೆಗಳಿಂದಲೂ ನೋಡಲು ಮಹಾದೇವನಿಗೆ ಒಟ್ಟು ನಾಲ್ಕು ಮುಖಗಳಾದುವು.

**ಮಹೇನ್ದ್ರಸ್ಯಾಪಿ ನೇತ್ರಾಣಾಂ ಪೃಷ್ಠತಃ ಪಾರ್ಶ್ವತೋಽಗ್ರತಃ ।**
**ರಕ್ತಾನ್ತಾನಾಂ ವಿಶಾಲಾನಾಂ ಸಹಸ್ರಂ ಸರ್ವತೋಽಭವತ್ ॥೨೭॥**

ತಿಲೋತ್ತಮೆಯನ್ನು ನೋಡುವ ಸಲುವಾಗಿ ಇಂದ್ರನ ದೇಹದ ಮುಂಭಾಗದಲ್ಲಿ, ಬಲ-ಎಡಪಕ್ಕಗಳಲ್ಲಿ ಮತ್ತು ಪೃಷ್ಠಭಾಗದಲ್ಲಿ ವಿಶಾಲವಾದ ಮತ್ತು ರಕ್ತಾಂತವಾದ ಸಾವಿರ ಕಣ್ಣುಗಳು ಹುಟ್ಟಿಕೊಂಡುವು.

**ಏವಂ ಚತುರ್ಮುಖಃ ಸ್ಥಾಣುರ್ಮಹಾದೇವೋಽಭವತ್ಪುರಾ ।**
**ತಥಾ ಸಹಸ್ರನೇತ್ರಶ್ಚ ಬಭೂವ ಬಲಸೂದನಃ ॥೨೮॥**

ಪಾಂಡುಪುತ್ರನೇ! ಈ ರೀತಿಯಲ್ಲಿ ತಿಲೋತ್ತಮೆಯ ರೂಪ-ಲಾವಣ್ಯಗಳ ಕಾರಣದಿಂದಾಗಿ ಸ್ಥಾಣುವು ಚತುರ್ಮುಖನಾದನು. ಬಲನಿಷೂದನನಾದ ಇಂದ್ರನು ಸಹಸ್ರಾಕ್ಷನಾದನು.

ಉಳಿದ ದೇವತೆಗಳ ಮತ್ತು ಮಹರ್ಷಿಗಳ ಮುಖಗಳು-ಸೂಜಿಗಲ್ಲನ್ನೇ ಅನುಸರಿಸಿ ಸೂಜಿಯು ತಿರುಗುವಂತೆ-ತಿಲೋತ್ತಮೆಯ ಗತಿಯನ್ನೇ ಅನುಸರಿಸಿ ನಾಲ್ಕು ದಿಕ್ಕುಗಳಿಗೂ ತಿರುಗಿಕೊಳ್ಳುತ್ತಿದ್ದುವು. ಅವರ ಕಣ್ಣುಗಳ ನೋಟವೂ ತಿಲೋತ್ತಮೆಯಲ್ಲಿಯೇ ನೆಟ್ಟುಹೋಗಿತ್ತು. ಬ್ರಹ್ಮನ ಕಣ್ಣುಗಳು ಮಾತ್ರ ತಿಲೋತ್ತಮೆಯನ್ನು ಅನುಸರಿಸಿ ಹೋಗಲಿಲ್ಲ. ಮಹಾಸಭೆಯನ್ನು ಪ್ರದಕ್ಷಿಣೆಮಾಡಿದ ತಿಲೋತ್ತಮೆಯು ಅಸುರರ ನಗರಿಗೆ ಹೋಗುತ್ತಿರಲಾಗಿ, ದೇವತೆಗಳೂ ಮತ್ತು ಋಷಿ-ಮಹರ್ಷಿಗಳೂ ಕಾರ್ಯಸಿದ್ಧಿಯಾಯಿತೆಂದೇ ಭಾವಿಸಿದರು. ಅತುಲವಾದ ರೂಪಸಂಪತ್ತಿನಿಂದ ಕೂಡಿದ್ದ ಅವಳ ಅನುಪಮಸೌಂದರ್ಯವು ಸುಂದೋಪಸುಂದರಲ್ಲಿ ವೈಷಮ್ಯವನ್ನುಂಟು ಮಾಡಲು ಸಮರ್ಥವಾಗುವುದೆಂಬ ದೃಢವಿಶ್ವಾಸವೂ ದೇವರ್ಷಿಗಳಿಗುಂಟಾಯಿತು. ತಿಲೋತ್ತಮೆಯು ಕಣ್ಮರೆಯಾದನಂತರ ಚತುರ್ಮುಖನು ದೇವತೆಗಳಿಂದಲೂ, ಋಷಿ-ಮಹರ್ಷಿಗಳಿಂದಲೂ ಕೂಡಿದ್ದ ಆ ಮಹಾಸಭೆಯನ್ನು ವಿಸರ್ಜಿಸಿದನು.”

೨೧೧ನೆಯ ಅಧ್ಯಾಯವು ಮುಗಿಯಿತು.

## ತಿಲೋತ್ತಮೆಯನ್ನು ಹೊಂದಲು ಸುಂದೋಪಸುಂದರಲ್ಲಿ ಕಲಹ: ಇಬ್ಬರ ಮರಣ: ಬ್ರಹ್ಮನಿಂದ ತಿಲೋತ್ತಮೆಗೆ ವರಪ್ರದಾನ: ದ್ರೌಪದಿಯ ವಿಷಯದಲ್ಲಿ ಪಾಂಡವರ ನಿಯಮನಿರ್ಧಾರ

ನಾರದರು ಹೇಳುತ್ತಾರೆ :

**ಜಿತ್ವಾ ತು ಪೃಥಿವೀಂ ದೈತ್ಯೌ ನಿಃಸಪತ್ನೌ ಗತವ್ಯಥೌ।**
**ಕೃತ್ವಾ ತ್ರೈಲೋಕ್ಯಮವ್ಯಗ್ರಂ ಕೃತಕೃತ್ಯೌ ಬಭೂವತುಃ ॥೧॥**

"ಯುಧಿಷ್ಠಿರ! ಇತ್ತಲಾಗಿ ಸುಂದೋಪಸುಂದರು ತ್ರಿಭುವನಗಳನ್ನೂ ಸ್ವಾಧೀನಪಡಿಸಿಕೊಂಡು ಶತ್ರುರಹಿತರಾಗಿ ತಾವು ಕೃತಕೃತ್ಯರಾದೆವೆಂದೂ, ಮುಂದೇನೂ ಮಾಡಬೇಕಾದ ಕಾರ್ಯವೇ ಇಲ್ಲವೆಂದೂ-ದೃಢನಿಶ್ಚಯವನ್ನು ಹೊಂದಿದರು. ದೇವ-ಯಕ್ಷ-ಗಂಧರ್ವ-ನಾಗ-ರಾಕ್ಷಸ-ಮಾನವರಲ್ಲಿದ್ದ ಶ್ರೇಷ್ಠವಸ್ತುಗಳೆಲ್ಲವನ್ನೂ ತೆಗೆಸಿಕೊಂಡು ಬಂದು ತಮ್ಮ ಭಂಡಾರಕ್ಕೆ ತುಂಬಿಕೊಂಡು ಬಹಳ ಆನಂದದಿಂದ ಕಾಲಕಳೆಯುತ್ತಿದ್ದರು. ತಾವು ಶರೀರಶ್ರಮದಿಂದ ಮಾಡಬೇಕಾಗಿದ್ದ ಕಾರ್ಯಗಳೆಲ್ಲವೂ ಮುಗಿದನಂತರ ನಿರುದ್ಯೋಗಿಗಳಾಗಿ ತಮ್ಮ ಸಂಪೂರ್ಣಕಾಲವನ್ನೂ ದೇವತೆಗಳಂತೆ ಅನೇಕ ವಿಧವಾದ ಸುಖೋಪಭೋಗಗಳಲ್ಲಿ ಕಳೆಯುತ್ತಿದ್ದರು. ಸ್ತ್ರೀಯರು, ಪುಷ್ಪಮಾಲೆ, ಗಂಧ, ಭಕ್ಷ್ಯ-ಭೋಜ್ಯಗಳು, ನಾನಾವಿಧವಾದ ಪಾನೀಯಗಳು–ಇವೇ ಅವರ ಸುಖೋಪಭೋಗಗಳಿಗೆ ಸಾಧನವಾದ ವಸ್ತುಗಳಾಗಿದ್ದುವು. ಅಂತಃಪುರ, ಉದ್ಯಾನವನ, ಪರ್ವತ, ಅರಣ್ಯ–ಇವೇ ಮೊದಲಾದ ಪ್ರದೇಶಗಳಲ್ಲಿ ಸುಂದೋಪಸುಂದರು ತಮ್ಮ ಮನಬಂದಂತೆ ದೇವತೆಗಳೋಪಾದಿಯಲ್ಲಿ ಸುಖೋಪಭೋಗಗಳನ್ನು ಅನುಭವಿಸುತ್ತಾ ಕಾಲಕಳೆಯುತ್ತಿದ್ದರು.

ಒಂದು ದಿನ ಸುಂದೋಪಸುಂದರು ವಿಹಾರಾರ್ಥವಾಗಿ ವಿಂಧ್ಯಪರ್ವತದ ಮೇಲಿದ್ದ ಸಮತಟ್ಟಾದ ಸ್ಥಳಕ್ಕೆ ತೆರಳಿದರು. ವಿಹಾರಪ್ರದೇಶವು ಫಲ-ಪುಷ್ಪಭರಿತವಾಗಿ ಹಲವು ಬಗೆಯ ಲತಾ-ದ್ರುಮಗಳಿಂದ ಕೂಡಿ ನಯನಮನೋಹರವಾಗಿದ್ದಿತು. ಆ ಪ್ರದೇಶಕ್ಕೆ ಅಸುರರ ಆಜ್ಞೆಯಂತೆ ಸಕಲ ವಿಧವಾದ ಸುಖೋಪಭೋಗವಸ್ತುಗಳನ್ನೂ ತರಲಾಗಿತ್ತು. ಸುಂದೋಪ

ಸುಂದರು ಪ್ರಕೃತಿಯ ಸೊಬಗನ್ನು ವೀಕ್ಷಿಸುತ್ತಾ ರತ್ನಸಿಂಹಾಸನದಲ್ಲಿ ಕುಳಿತರು. ಅವರಿಗೆ ಹೆಚ್ಚು ಆನಂದವನ್ನುಂಟುಮಾಡಲು ತಾಳ-ಮೃದಂಗ-ಗೀತ ಗಳೊಡನೆ ನಾಟ್ಯಪ್ರದರ್ಶನವು ಪ್ರಾರಂಭವಾಯಿತು. ಉತ್ತಮಗಾಯಕಿ ಯರು ಅಸುರರ ವೀರಗಾಥೆಗಳನ್ನು ಹಾಡುತ್ತಿದ್ದು ಅದಕ್ಕೆ ಅನುಗುಣವಾಗಿ ನರ್ತಕಿಯರು ಅಭಿನಯಿಸುತ್ತಾ, ಸುಂದೋಪಸುಂದರಿಗೆ ಅಮಿತಾನಂದ ವನ್ನುಂಟುಮಾಡುತ್ತಿದ್ದರು. ಅಸುರರ ಉಭಯಪಾರ್ಶ್ವಗಳಲ್ಲಿಯೂ ಮದ್ಯಕುಂಭಗಳನ್ನು ಹಿಡಿದು ಪ್ರಮದೆಯರು ನಿಂತಿದ್ದರು.

ಆ ಸಮಯಕ್ಕೆ ಸರಿಯಾಗಿ ತಿಲೋತ್ತಮೆಯು ತೆಳುವಾದ ಕೆಂಪು ಬಣ್ಣದ ರೇಷ್ಮೆಯ ಸೀರೆಯನ್ನುಟ್ಟು, ಮನಮೋಹಕವಾಗಿ ಶೃಂಗಾರಮಾಡಿ ಕೊಂಡು, ಅಲ್ಲಲ್ಲಿ ಕಾಡುಹೂಗಳನ್ನು ಬಿಡಿಸುತ್ತಾ ವಿಂಧ್ಯಪರ್ವತದ ಪ್ರಸ್ಥಭೂಮಿಗೆ ಬಂದಳು. ನದೀತೀರದಲ್ಲಿ ಬೆಳೆದಿದ್ದ ಕರ್ಣಿಕಾರಪುಷ್ಪಗಳನ್ನು ಕೀಳುತ್ತಾ ಮೆಲ್ಲ-ಮೆಲ್ಲನೆ ಸುಂದೋಪಸುಂದರು ಕುಳಿತಿದ್ದ ಪ್ರದೇಶಕ್ಕೂ ಬಂದಳು. ಸುರಾಪಾನದಿಂದ ಮತ್ತರಾಗಿ ರಕ್ತಲೋಚನರಾಗಿದ್ದ ಸುಂದೋಪ ಸುಂದರು ತಿಲೋತ್ತಮೆಯನ್ನು ನೋಡಿದೊಡನೆಯೇ ಕಾಮವೇದನೆಯಿಂದ ಪೀಡಿತರಾದರು.

ಏಕಕಾಲದಲ್ಲಿ ಅವರಿಬ್ಬರ ಮನಸ್ಸುಗಳೂ ಮಿಂಚಿನಂತಹ ಅನುಪಮ ಸೌಂದರ್ಯವನ್ನು ಹೊಂದಿದ್ದ ತಿಲೋತ್ತಮೆಯಲ್ಲಿ ಲೀನವಾದುವು. ಇಬ್ಬರೂ ಒಟ್ಟಿಗೆ ಮೇಲೆದ್ದು ತಿಲೋತ್ತಮೆಯೆಡೆಗೆ ಧಾವಿಸಿದರು. ಕಾಮಪೀಡಿತರಾಗಿದ್ದ ಇಬ್ಬರೂ ತಿಲೋತ್ತಮೆಯ ಕೈಗಳನ್ನು ಹಿಡಿದರು. ಸುಂದನು ಬಲಗೈಯನ್ನೂ, ಉಪಸುಂದನು ಎಡಗೈಯನ್ನೂ ಹಿಡಿದರು. ತಿಲೋತ್ತಮೆಯು ಇಬ್ಬರನ್ನೂ ಒಮ್ಮೆ ಕಟಾಕ್ಷವೀಕ್ಷಣದಿಂದ ನೋಡಿ ಅವರಿಬ್ಬರ ಹೃದಯಗಳಲ್ಲಿಯೂ ಕಾಮಾಗ್ನಿಯು ಮತ್ತಷ್ಟು ಪ್ರಜ್ವಲಿಸುವಂತೆ ಮಾಡಿ ತಲೆತಗ್ಗಿಸಿ ನಿಂತಳು. ವರಮದದಿಂದಲೂ, ಶಕ್ತಿಮದದಿಂದಲೂ, ಐಶ್ವರ್ಯಮದದಿಂದಲೂ ಕೊಬ್ಬಿದ್ದ ಮತ್ತು ಸುರಾಪಾನದಿಂದ ಪ್ರಮತ್ತರಾಗಿದ್ದ ಸಹೋದರರು ಕಾಮಪೀಡಿತರಾಗಿ ಪರಸ್ಪರವಾಗಿ ಮಾತ್ಸರ್ಯವನ್ನು ತಾಳಿ ಕೋಪಾವಿಷ್ಟರಾಗಿ ಹುಬ್ಬುಗಳನ್ನು ಗಂಟಿಕ್ಕಿಕೊಂಡು ಮಾತನಾಡತೊಡಗಿದರು :

"ಇವಳು ನನ್ನ ಪತ್ನಿಯಾಗುತ್ತಾಳೆ. ಆದುದರಿಂದ ನಿನಗೆ ತಾಯಿಯಂತೆ ಪೂಜ್ಯಳು. ಬೇಗನೆ ಕೈಬಿಡು"– ಎಂದು ಸುಂದನು ಹುಂಕಾರಮಾಡಿ ಹೇಳಿದನು.

"ನೀನು ಹೇಳುವುದು ಸರಿಯಲ್ಲ. ಇವಳು ನನ್ನ ಪತ್ನಿಯು. ನಿನಗಿವಳು ಸೊಸೆಗೆ ಸಮಾನಳು"–ಎಂದು ಉಪಸುಂದನು ಉತ್ತರಿಸಿದನು.



ಸುಂದನಿಗೆ ಮಹತ್ತರವಾದ ಕೋಪವೇ ಬಂದಿತು. ಗಟ್ಟಿಯಾಗಿ ಗರ್ಜಿಸಿ ಹೇಳಿದನು :

"ಇವಳು ನಿನ್ನವಳಲ್ಲ ; ನನ್ನವಳು."

ಆ ಸಮಯದಲ್ಲಿ ತಿಲೋತ್ತಮೆಯು ಇಬ್ಬರ ಕಡೆಗೂ ಒಮ್ಮೊಮ್ಮೆ ಕಟಾಕ್ಷವೀಕ್ಷಣಗಳೆಂಬ ತೀಕ್ಷ್ಣವಾದ ಕಾಮಬಾಣಗಳನ್ನು ಪ್ರಯೋಗಿಸುತ್ತಾ ಮಂದಹಾಸವನ್ನು ಬೀರುತ್ತಿದ್ದಳು.

ಅದರಿಂದಾಗಿ ಸಹೋದರರು ಮತ್ತಷ್ಟು ಭ್ರಾಂತರಾದರು. ಗಾಢವಾಗಿದ್ದ ಸಹೋದರಪ್ರೇಮವನ್ನೂ ಸಂಪೂರ್ಣವಾಗಿ ಮರೆತರು. ಬ್ರಹ್ಮನೊಡನೆ

ಕೇಳಿದ್ದ ವರಗಳೂ ಮರೆತುಹೋದುವು. ತಿಲೋತ್ತಮೆಯು ಯಾರಿಗೆ ಸೇರಬೇಕೆಂಬ ಕಡೆಯ ನಿರ್ಧಾರವನ್ನು ಮಾಡಲು ಇಬ್ಬರೂ ಗದೆಗಳನ್ನು ಮೇಲೆತ್ತಿ ಕಾಳಗಕ್ಕೇ ಇಳಿದರು.

ತಿಲೋತ್ತಮೆಯು ಸ್ವಲ್ಪವಾದರೂ ಭಯಪಡಲೂ ಇಲ್ಲ ; ಭ್ರಾಂತಿ ಹೊಂದಲೂ ಇಲ್ಲ. ಸಹೋದರರಿಬ್ಬರ ನಡುವೆ ನಿಂತಿದ್ದವಳು ಸ್ವಲ್ಪ ಹಿಂದಕ್ಕೆ ಸರಿದಳು.

"ನಾನಿವಳ ಕೈಯನ್ನು ನಿನಗಿಂತಲೂ ಮೊದಲೇ ಹಿಡಿದಿರುವೆನು. ಹೀಗಿದ್ದರೂ ಇವಳು ನನ್ನವಳೆನ್ನುವೆಯಾ?"

ಈ ಮಾತು ಸಹೋದರರಿಬ್ಬರ ವದನಗಳಿಂದಲೂ ಏಕಕಾಲದಲ್ಲಿ ಹೊರಟಿತು. ಕೋಪಾವಿಷ್ಟರಾಗಿ ಒಮ್ಮೆಯೇ ಇಬ್ಬರೂ ಗದೆಗಳನ್ನು ಮೇಲೆತ್ತಿದರು. ಒಮ್ಮೆಯೇ ಗದೆಯಿಂದ ಒಬ್ಬರು ಮತ್ತೊಬ್ಬರ ತಲೆಯನ್ನು ಪ್ರಹರಿಸಿದರು. ಒಮ್ಮೆಯೇ ಅಸುರರಿಬ್ಬರ ತಲೆಗಳೂ ಒಡೆದುಹೋಗಿ ರಕ್ತದ ಕೋಡಿಯೇ ಹರಿಯಿತು. ಒಮ್ಮೆಯೇ ಪರ್ವತೋಪಮವಾಗಿದ್ದ ಎರಡು ಶರೀರಗಳೂ ತಿಲೋತ್ತಮೆಯ ಸೌಂದರ್ಯಕ್ಕೆ ಅಡ್ಡಬಿದ್ದುವು. ಇಬ್ಬರು ಸೂರ್ಯರು ಆಕಾಶದಿಂದ ಕೆಳಗೆ ಬಿದ್ದರೋ ಎನ್ನುವಂತೆ ರಕ್ತಸಿಕ್ತರಾಗಿ ಕೆಳಗುರುಳಿದರು.

ಸುಂದೋಪಸುಂದರ ಸುಖಲೋಲುಪತೆಗೆ ಸಾಧನವಾಗಿ ಬಂದಿದ್ದ ಪ್ರಮದೆಯರು ಓಡಿಹೋದರು. ದೈತ್ಯಸಮೂಹವು ಪಾತಾಳಲೋಕಕ್ಕೆ ಹೋಗಿ ಅಡಗಿಕೊಂಡಿತು.

ದೇವರ್ಷಿಗಳ ಸಂಕಲ್ಪಸಿದ್ಧಿಯಾದೊಡನೆಯೇ ಚತುರ್ಮುಖನು ದೇವರ್ಷಿಗಳೊಡನೆ ತಿಲೋತ್ತಮೆಯಿದ್ದೆಡೆಗೆ ಆಗಮಿಸಿದನು. ಚತುರ್ಮುಖನನ್ನು ಕಂಡೊಡನೆಯೇ ತಿಲೋತ್ತಮೆಯು ಲಜ್ಜೆಯಿಂದೊಡಗೂಡಿ ಬ್ರಹ್ಮನ ಪಾದಾರವಿಂದಗಳಿಗೆ ನಮಿಸಿ ದೂರದಲ್ಲೇ ನಿಂತಳು. ಚತುರ್ಮುಖನು ಸುಪ್ರೀತನಾಗಿ ತಿಲೋತ್ತಮೆಯನ್ನು ಶ್ಲಾಘಿಸಿ, ಅಯಾಚಿತವಾಗಿಯೇ ವರವನ್ನಿತ್ತನು :

**ಆದಿತ್ಯಚರಿತಾಲ್ಲೋಕಾನ್ವಿಚರಿಷ್ಯಸಿ ಭಾಮಿನಿ ।**
**ತೇಜಸಾ ಚ ಸುದೃಷ್ಟಾಂ ತ್ವಾಂ ನ ಕರಿಷ್ಯತಿ ಕಶ್ಚನ ॥೨೪॥**

"ಭಾಮಿನಿ! ಸೂರ್ಯನು ಸಂಚರಿಸುವ ಲೋಕಗಳಲ್ಲೆಲ್ಲಾ ನೀನೂ ಇಚ್ಛಾನುಸಾರವಾಗಿ ಸಂಚರಿಸಬಹುದು ಮತ್ತು ಸೂರ್ಯನ ತೇಜಸ್ಸಿನಂತೆ ಉಜ್ಜ್ವಲತೇಜಸ್ಸಿನಿಂದ ಜ್ವಲಿಸುವ ನಿನ್ನನ್ನು ಯಾವನೂ ಕಣ್ಣೆಗಲಿಸಿ ಚೆನ್ನಾಗಿ ನೋಡಲಾರನು."

ತಿಲೋತ್ತಮೆಯು ಬ್ರಹ್ಮನಿಗೆ ಪುನಃ ನಮಸ್ಕರಿಸಿ ಹೊರಟುಹೋದಳು.

ಚತುರ್ಮುಖನು ದೇವತೆಗಳ ಸಮೂಹದಲ್ಲಿ ನಿಂತಿದ್ದ ಇಂದ್ರನನ್ನು ಕರೆದು ಸುಂದೋಪಸುಂದರು ಆಕ್ರಮಿಸಿದ್ದ ತ್ರೈಲೋಕ್ಯಾಧಿಪತ್ಯವನ್ನು ಪುನಃ ಇಂದ್ರನಿಗೆ ವಹಿಸಿಕೊಟ್ಟು, ತನ್ನ ಲೋಕಕ್ಕೆ ಹೊರಟುಹೋದನು. ಇಂದ್ರ ಪುರಃಸರರಾದ ದೇವರ್ಷಿಗಳು ಚತುರ್ಮುಖನನ್ನು ಸ್ತೋತ್ರಮಾಡುತ್ತಾ ತಮ್ಮ-ತಮ್ಮ ನಿವಾಸಗಳಿಗೆ ತೆರಳಿದರು."

ನಾರದರು ಮುಂದುವರಿದು ಹೇಳಿದರು :

"ಯುಧಿಷ್ಠಿರ! ನಿಶ್ಚಯವಾಗಿಯೂ ಸುಂದೋಪಸುಂದರ ಸೋದರ ಪ್ರೇಮವು ಅನುಪಮವಾದುದು. ಎಲ್ಲ ವಿಷಯಗಳಲ್ಲಿಯೂ ಒಟ್ಟಿಗೆ ಕೂಡಿ ಇರುತ್ತಿದ್ದು ತಿಲೋತ್ತಮೆಯನ್ನು ಪಡೆಯಬೇಕೆಂಬ ಒಂದೇ ಸಂಕಲ್ಪಮಾಡಿ ಅವಳ ಸಲುವಾಗಿ ಅಸುವನ್ನು ನೀಗಿಕೊಂಡರು. ಈ ಇತಿಹಾಸವನ್ನು ನೆನೆದು ನಿಮ್ಮ ಮೇಲಿನ ಪ್ರೀತಿಯಿಂದ ನಿಮಗೆ ಹಿತವನ್ನುಂಟುಮಾಡುವ ಸಲುವಾಗಿ ನಿಮ್ಮಲ್ಲಿಗೆ ಬಂದಿರುವೆನು. ನನಗೆ ಪ್ರಿಯವಾಗುವ ಕಾರ್ಯವನ್ನು ಮಾಡಬೇಕೆಂದು ನಿಮ್ಮ ಇಚ್ಛೆಯಿರುವುದಾದರೆ ಈ ಕೂಡಲೇ ನೀವು ದ್ರೌಪದಿಯ ವಿಷಯದಲ್ಲಿ ಒಂದು ನಿಯಮವನ್ನು ಮಾಡಿಕೊಳ್ಳಬೇಕು. ದ್ರೌಪದಿಯ ಸಲುವಾಗಿ ನೀವು ಯಾವಾಗಲೂ ವೈಮನಸ್ಯವನ್ನು ಹೊಂದಬಾರದು. ಇದೇ ನನ್ನ ಅಭಿಲಾಷೆ."

ನಾರದರ ಮಾತುಗಳಿಗೆ ಪಾಂಡವರು ಸಮ್ಮತಿಯನ್ನಿತ್ತು ಪರಸ್ಪರವಾಗಿ ಸಮಾಲೋಚಿಸಿ, ಮಹರ್ಷಿಗಳ ಸಮ್ಮುಖದಲ್ಲಿಯೇ ಒಂದು ನಿಯಮವನ್ನು ಸಿದ್ಧಪಡಿಸಿದರು :

**ದ್ರೌಪದ್ಯಾ ನಃ ಸಹಾಸೀನಾನನ್ಯೋನ್ಯಂ ಯೋಽಭಿದರ್ಶಯೇತ್ ।**
**ಸ ನೋ ದ್ವಾದಶ ವರ್ಷಾಣಿ ಬ್ರಹ್ಮಚಾರೀ ವನೇ ವಸೇತ್ ॥೨೯॥**

“ನಮ್ಮೈವರಲ್ಲಿ ಯಾರಾದರೂ ಒಬ್ಬರು ದ್ರೌಪದಿಯ ಜೊತೆಯಲ್ಲಿ ಏಕಾಂತದಲ್ಲಿರುವಾಗ ಮತ್ತೊಬ್ಬರು ನೋಡಿದ್ದೇ ಆದರೆ–ನೋಡಿದವರು ಹನ್ನೆರಡು ವರ್ಷಗಳ ಕಾಲ ಬ್ರಹ್ಮಚರ್ಯವನ್ನು ಪಾಲಿಸುತ್ತಾ ಕಾಡಿನಲ್ಲಿ ವಾಸಮಾಡಬೇಕು”.

ಧರ್ಮಚಾರಿಗಳಾದ ಪಾಂಡವರು ದ್ರೌಪದಿಯ ವಿಷಯವಾಗಿ ಆ ವಿಧವಾದ ನಿಯಮವನ್ನು ಮಾಡಿಕೊಂಡನಂತರ ನಾರದರು ಸಂತುಷ್ಟರಾಗಿ ಪಾಂಡವರನ್ನು ಹರಸಿ ಲೋಕಸಂಚಾರಕ್ಕೆ ಹೊರಟುಹೋದರು.

ಜನಮೇಜಯ! ನಿಮ್ಮ ತಾತಂದಿರು ಆ ವಿಧವಾದ ನಿಯಮದಿಂದಿದ್ದುದರಿಂದಲೇ ದ್ರೌಪದಿಯ ಕಾರಣಕ್ಕಾಗಿ ಅವರಲ್ಲಿ ಯಾವ ವಿಧವಾದ ವೈಮನಸ್ಯವೂ ಉಂಟಾಗಲು ಅವಕಾಶವಾಗಲಿಲ್ಲ.”

೨೧೨ನೆಯ ಅಧ್ಯಾಯವು ಮುಗಿಯಿತು.

೨೧೩ನೆಯ ಅಧ್ಯಾಯ ಅರ್ಜುನವನವಾಸಪರ್ವ

## ಬ್ರಾಹ್ಮಣನ ಗೋರಕ್ಷಣೆಗಾಗಿ ಅರ್ಜುನನಿಂದ ನಿಯಮಭಂಗ ಮತ್ತು ವನಪ್ರಸ್ಥಾನ

ವೈಶಂಪಾಯನರು ಮುಂದುವರಿದು ಹೇಳುತ್ತಾರೆ :

“ಜನಮೇಜಯ! ಪಾಂಡವರು ನಾರದರ ಸಮ್ಮುಖದಲ್ಲಿ ಪ್ರತಿಜ್ಞೆಯನ್ನು ಮಾಡಿದಂತೆಯೇ ದ್ರೌಪದಿಯ ವಿಷಯದಲ್ಲಿ ನಿಯಮದಿಂದಿರುತ್ತಾ ಸುಖದಿಂದ ಕಾಲಕಳೆಯುತ್ತಿದ್ದರು. ತಮ್ಮ ಅಸ್ತ್ರ-ಶಸ್ತ್ರಗಳ ಪ್ರಭಾವದಿಂದ ಅನೇಕರಾಜರನ್ನು ಆಶ್ರಿತರನ್ನಾಗಿ ಮಾಡಿಕೊಂಡರು. ಕೃಷ್ಣೆಯೂ ಸಹ ಮನುಜಶ್ರೇಷ್ಠರಾದ ಅಮಿತೌಜಸ್ಕರಾದ ಐವರಲ್ಲಿಯೂ ಬಹಳ ವಿಧೇಯಳಾಗಿ ನಡೆದುಕೊಳ್ಳುತ್ತಿದ್ದಳು. ದ್ರೌಪದೀ-ಪಾಂಡವರು ಅನ್ಯೋನ್ಯವಾಗಿ ಪ್ರೀತಿಯಿಂದಿರುತ್ತಾ ನಿತ್ಯಸಂತುಷ್ಟರಾಗಿದ್ದರು. ತನ್ನಲ್ಲಿ ವಿಹರಿಸುತ್ತಿರುವ ಸರ್ಪಗಳಿಂದ ಸರಸ್ವತೀನದಿಯು ಸಂತೋಷಿಸುವಂತೆ-ದ್ರೌಪದಿಯು ತನ್ನಲ್ಲಿ ಪ್ರೀತಿಯಿಂದಿರುವ ಐವರು ಪತಿಗಳಿಂದ ಕೂಡಿ ಪರಮಸಂತುಷ್ಟಳಾಗಿದ್ದಳು. ಪಾಂಡವರು ಪರಮಧಾರ್ಮಿಕರಾಗಿ ವರ್ತಿಸುತ್ತಿದ್ದುದರಿಂದ ಕುರುವಂಶದವ

ರೆಲ್ಲರೂ ದೋಷರಹಿತರಾಗಿ ನಿತ್ಯತುಷ್ಟರಾಗಿ ದಿನ-ದಿನಕ್ಕೂ ಅಭಿವೃದ್ಧಿಯನ್ನು ಹೊಂದುತ್ತಿದ್ದರು.

ದೀರ್ಘಕಾಲವು ಕಳೆಯಿತು. ಒಂದು ದಿನ ಕೆಲವರು ಕಳ್ಳರು ಬ್ರಾಹ್ಮಣನೊಬ್ಬನ ಹಸುಗಳನ್ನು ಕದ್ದುಕೊಂಡು ಹೋದರು. ಬ್ರಾಹ್ಮಣನು ಅದನ್ನು ತಿಳಿದು ಬಹಳ ಸಂಕಟಪಡುತ್ತಾ ಕೋಪಾವಿಷ್ಟನಾಗಿ, ಖಾಂಡವಪ್ರಸ್ಥಕ್ಕೆ ಬಂದು ಅರಮನೆಯ ಮುಂದೆ ನಿಂತು ಪಾಂಡವರನ್ನು ಉದ್ದೇಶಿಸಿ ಹೇಳತೊಡಗಿದನು :

"ಪಾಂಡವರೇ! ನಿಮ್ಮ ಈ ರಾಜ್ಯದಲ್ಲಿಯೇ ನನ್ನ ಗೋಧನವು ನೀಚರಿಂದ ಬಲಾತ್ಕಾರವಾಗಿ ಅಪಹರಿಸಲ್ಪಟ್ಟಿದೆ. ನೀವೀಗಲೇ ಅವರನ್ನು ಹಿಂಬಾಲಿಸಿ ಹೋಗಿರಿ. ಅಯ್ಯೋ! ಶಾಂತನಾದ ಬ್ರಾಹ್ಮಣನೊಬ್ಬನು ಯಾಗಕ್ಕಾಗಿ ಉಪಯೋಗಿಸುತ್ತಿದ್ದ ಹವಿಸ್ಸನ್ನು ಕಾಗೆಗಳು ಕಚ್ಚಿಕೊಂಡು ಹೋದಂತಾಯಿತಲ್ಲಾ! ಅರಾಜಕತ್ವವೇ ಹೀಗೆ. ಗುಹೆಯಲ್ಲಿ ಹುಲಿಯಿಲ್ಲವೆಂದು ತಿಳಿದ ಮೇಲೆ ಗುಳ್ಳೇನರಿಯೂ ಹುಲಿಯ ಗುಹೆಗೆ ಧೈರ್ಯವಾಗಿ ಮುತ್ತಿಗೆಹಾಕುವುದು.

**ಅರಕ್ಷಿತಾರಂ ರಾಜಾನಂ ಬಲಿಷಡ್ಭಾಗಹಾರಿಣಮ್ ।**
**ತಮಾಹುಃ ಸರ್ವಲೋಕಸ್ಯ ಸಮಗ್ರಂ ಪಾಪಚಾರಿಣಮ್ ॥೯॥**

ಪ್ರಜೆಗಳ ಆದಾಯದಲ್ಲಿ ಆರನೆಯ ಒಂದು ಪಾಲು ರಾಜಾದಾಯವನ್ನು ಉಪಭೋಗಿಸುವ ರಾಜನು ತನ್ನ ಪ್ರಜೆಗಳನ್ನು ಆಪತ್ಕಾಲದಲ್ಲಿ ರಕ್ಷಿಸದಿದ್ದರೆ–ಪ್ರಪಂಚದಲ್ಲಿಯೇ ಬಹಳ ಪಾಪಿಷ್ಠನೆನಿಸುವನೆಂದು ರಾಜನೀತಿಜ್ಞರು ಹೇಳುತ್ತಾರೆ. ಬ್ರಾಹ್ಮಣನ ಗೋಧನವು ಕಳ್ಳರಿಂದ ಅಪಹರಿಸಲ್ಪಟ್ಟಿದೆ. ಧರ್ಮಕ್ಕೆ ನ್ಯೂನತೆಯುಂಟಾಗಿದೆ. ರಾಜಕುಮಾರರೇ! ನನ್ನ ಗೋಧನದ ಅಪಹಾರದಿಂದಾಗಿ ನಾನಿಂದು ಬಹಳ ದುಃಖಿತನಾಗಿದ್ದೇನೆ. ನನ್ನನ್ನು ಉದ್ಧರಿಸಿರಿ. ಅಸ್ತ್ರಗಳನ್ನು ಧರಿಸಿ ಈಗಲೇ ಹೊರಡಿರಿ!"

ಜನಮೇಜಯ! ಬ್ರಾಹ್ಮಣನ ರೋದನವನ್ನೂ-ಮಾತುಗಳನ್ನೂ ಅರಮನೆಯೊಳಗಿದ್ದ ಧನಂಜಯನು ಕೇಳಿ-"ಮಾ ಭೈಃ" "ಹೆದರಬೇಡ!" ಎಂದು ಕೂಗಿ ಹೇಳಿದನು. ಮಹಾಬಾಹುವಾದ ಅರ್ಜುನನು ಬ್ರಾಹ್ಮಣನ

ಮಾತುಗಳನ್ನು ಕೇಳಿದೊಡನೆಯೇ ಅವನ ಕಷ್ಟವನ್ನು ಪರಿಹರಿಸಲು ಧನುಸ್ಸನ್ನು ತೆಗೆದುಕೊಳ್ಳುವುದಕ್ಕಾಗಿ ಎರಡು ಹೆಜ್ಜೆಗಳನ್ನು ಮುಂದಿಟ್ಟನು. ಮರುಕ್ಷಣದಲ್ಲಿಯೇ ಮನಸ್ಸಿನಲ್ಲೊಂದು ವಿಧವಾದ ಕಳವಳವುಂಟಾಯಿತು. ಅಲ್ಲಿಯೇ ನಿಂತನು. ಆಲೋಚಿಸತೊಡಗಿದನು.

ಪಾಂಡವರು ತಮ್ಮ ಶಸ್ತ್ರಾಸ್ತ್ರಗಳನ್ನಿಟ್ಟಿದ್ದ ಸ್ಥಳವು ಅಂತಃಪುರವೂ ಆಗಿದ್ದಿತು. ಆ ಸಮಯದಲ್ಲಿಯೇ ಯುಧಿಷ್ಠಿರನು ದ್ರೌಪದಿಯೊಡನೆ ಅಂತಃಪುರದಲ್ಲಿದ್ದನು.

"ಅಣ್ಣನು ದ್ರೌಪದಿಯೊಡನಿರುವಾಗ ಅಂತಃಪುರಕ್ಕೆ ಪ್ರವೇಶಿಸುವುದು ಹೇಗೆ?"

ಹೀಗೆ ಯೋಚಿಸುತ್ತಿರುವಾಗಲೇ ಬ್ರಾಹ್ಮಣನ ಆರ್ತನಾದವು ಪುನಃ ಕೇಳಿಸಿತು.

ಇದಲ್ಲವೇ ಅರ್ಜುನನ ಪರೀಕ್ಷಾಸಮಯ? ಬ್ರಾಹ್ಮಣನ ಗೋಧನವನ್ನು ಬಿಡಿಸಿಕೊಡಬೇಕು. ಆಯುಧವಿಲ್ಲದೇ ಆ ಕಾರ್ಯವು ಸಾಧ್ಯವಿರಲಿಲ್ಲ. ಆಯುಧವನ್ನು ತರಲು ಹೋದರೆ ವನವಾಸಕ್ಕೆ ಸಿದ್ಧನಾಗಬೇಕು. ಅರ್ಜುನನು ಕ್ಷಣಕಾಲ ಯೋಚಿಸಿದನು :

ಹ್ರಿಯಮಾಣೇ ಧನೇ ತಸ್ಮಿನ್ಬ್ರಾಹ್ಮಣಸ್ಯ ತಪಸ್ವಿನಃ ।
ಅಶ್ರುಪ್ರಮಾರ್ಜನಂ ತಸ್ಯ ಕರ್ತವ್ಯಮಿತಿ ನಿಶ್ಚಯಃ ॥೧೫॥

ಉಪಕ್ಷೇಪಣಜೋಽಧರ್ಮಃ ಸುಮಹಾನ್ಸ್ಯಾನ್ಮಹೀಪತೇಃ ।
ಯದ್ಯಸ್ಯ ರುದತೋ ದ್ವಾರಿ ನ ಕರೋಮ್ಯದ್ಯ ರಕ್ಷಣಮ್ ॥೧೬॥

ಅನಾಸ್ತಿಕ್ಯಂ ಚ ಸರ್ವೇಷಾಮಸ್ಮಾಕಮಪಿ ರಕ್ಷಣೇ ।
ಪ್ರತಿತಿಷ್ಠೇತ ಲೋಕೇಽಸ್ಮಿನ್ನಧರ್ಮಶ್ಚೈವ ನೋ ಭವೇತ್ ॥೧೭॥

ಅನಾದೃತ್ಯ ತು ರಾಜಾನಂ ಗತೇ ಮಯಿ ನ ಸಂಶಯಃ ।
ಅಜಾತಶತ್ರೋರ್ನೃಪತೇರ್ಮಮ ಚೈವಾನೃತಂ ಭವೇತ್ ॥೧೮॥

ಅನುಪ್ರವೇಶೇ ರಾಜ್ಞಸ್ತು ವನವಾಸೋ ಭವೇನ್ಮಮ ।
ಸರ್ವಮನ್ಯತ್ಪರಿಹೃತಂ ಧರ್ಷಣಾತ್ತು ಮಹೀಪತೇಃ ॥೧೯॥

**ಅಧರ್ಮೋ ವೈ ಮಹಾನಸ್ತು ವನೇ ವಾ ಮರಣಂ ಮಮ ।**
**ಶರೀರಸ್ಯ ವಿನಾಶೇನ ಧರ್ಮ ಏವ ವಿಶಿಷ್ಯತೇ ॥೨೦॥**

"ಅಯ್ಯೋ! ನಿರಪರಾಧಿಯಾದ ಈ ಬ್ರಾಹ್ಮಣನ ಗೋಧನವು ಕಳ್ಳರಿಂದ ಅಪಹೃತವಾಗಿದೆ. ನಮ್ಮ ಬಾಗಿಲಿಗೆ ಬಂದು ಅಳುತ್ತಾ ನಿಂತಿದ್ದಾನೆ. ಅವನ ಕಣ್ಣೀರನ್ನು ಒರೆಸಿಯೇ ತೀರಬೇಕು. ನಾನೊಂದು ವೇಳೆ ವನವಾಸ ಮಾಡಬೇಕಾಗುವುದೆಂಬ ಭಯದಿಂದ ಇವನನ್ನು ರಕ್ಷಣೆಮಾಡದಿದ್ದರೆ ರಾಜನು ಪಾಪಭೂಯಿಷ್ಠನಾಗುತ್ತಾನೆ. ಆಸ್ತಿಕ್ಯದ ವಿನಾಶವಾಗುತ್ತದೆ. ದುಷ್ಟಶಿಕ್ಷಣ - ಶಿಷ್ಟಪರಿಪಾಲನೆಗಳಿಗೆ ನಾವು ಅಸಮರ್ಥರೆಂಬ ಪ್ರವಾದವು ಲೋಕದಲ್ಲೆಲ್ಲಾ ಹರಡುತ್ತದೆ. ನಾವೂ ಧರ್ಮಭ್ರಷ್ಟರಾಗುತ್ತೇವೆ. ಆದುದರಿಂದ ಬ್ರಾಹ್ಮಣನ ದುಃಖನಿವಾರಣೆಯನ್ನು ಮಾಡುವುದೇ ಮುಖ್ಯ ಕರ್ತವ್ಯ.

ಆದರೆ ಈ ಕಾರ್ಯಕ್ಕಾಗಿ ನಾನಿಂದು ಶತ್ರುರಹಿತನಾದ ಯುಧಿಷ್ಠಿರನನ್ನೂ ಅನಾದರಣೆಮಾಡಿ, ಆಯುಧಗ್ರಹಣಕ್ಕಾಗಿ ಅಂತಃಪುರವನ್ನು ಪ್ರವೇಶಿಸಿದರೆ ಅಣ್ಣನೊಡನೆ ಅವಿಧೇಯತೆಯಿಂದ-ಅಸತ್ಯದಿಂದ ವರ್ತಿಸಿದಂತಾಗುತ್ತದೆ. ಇಷ್ಟು ಮಾತ್ರವಲ್ಲ. ಇದರಿಂದ ನಾನು ಅರಣ್ಯವಾಸದ ಶಿಕ್ಷೆಗೂ ಒಳಗಾಗಬೇಕಾಗುತ್ತದೆ. ಅಣ್ಣನು ಏಕಾಂತದಲ್ಲಿರುವಾಗ ಅಲ್ಲಿಗೆ ಪ್ರವೇಶಿಸುವುದರಿಂದ ಅಣ್ಣನನ್ನು ಅನಾದರಣೆ ಮಾಡಿದಂತಾಗುತ್ತದೆ. ಇದೊಂದು ಹೊರತಾಗಿ ಉಳಿದ ವಿಷಯಗಳು ಪರಿಗಣನೀಯವಲ್ಲ. ಅಣ್ಣನ ಏಕಾಂತಗೃಹವನ್ನು ಪ್ರವೇಶಿಸುವುದು ಅಧರ್ಮವೆನಿಸಿದರೂ ಚಿಂತೆಯಿಲ್ಲ. ಇದರಿಂದಾಗಿ ನನಗೆ ವನವಾಸಪ್ರಾಪ್ತಿಯಾದರೂ ಚಿಂತೆಯಿಲ್ಲ. ಅರಣ್ಯದಲ್ಲಿಯೇ ನಾನು ಸತ್ತುಹೋದರೂ ಚಿಂತೆಯಿಲ್ಲ. ನನ್ನ ಶರೀರವು ನಾಶವಾಗಿಹೋದರೂ ಗೋ-ಬ್ರಾಹ್ಮಣರಕ್ಷಾರೂಪವಾದ ಶ್ರೇಷ್ಠವಾದ ಧರ್ಮವಾದರೂ ಉಳಿದಂತಾಗುತ್ತದೆ. ಶರೀರರಕ್ಷಣೆಗಿಂತಲೂ ಧರ್ಮದ ರಕ್ಷಣೆಯೇ ಹೆಚ್ಚಿನದು."

ಅರ್ಜುನನು ತರ್ಕ-ವಿತರ್ಕಗಳಿಂದ ಈ ವಿಧವಾದ ನಿಶ್ಚಯಕ್ಕೆ ಬಂದನು.

ಕುಂತೀಪುತ್ರನಾದ ಧನಂಜಯನು ಈ ಪ್ರಕಾರವಾಗಿ ನಿಶ್ಚಯಿಸಿ ಯುಧಿಷ್ಠಿರನಿದ್ದ ಅಂತಃಪುರವನ್ನು ಪ್ರವೇಶಿಸಿದನು. ಅಣ್ಣನೊಡನೆ ಸಮಯೋಚಿತವಾದ ಎರಡು ಮಾತುಗಳನ್ನಾಡಿ, ಧನುರ್ಬಾಣಗಳನ್ನು

ತೆಗೆದುಕೊಂಡು ಹೊರಗೆ ಬಂದು ಪ್ರಸನ್ನಚಿತ್ತನಾಗಿ ಬ್ರಾಹ್ಮಣನೊಡನೆ ಹೇಳಿದನು : "ಬ್ರಾಹ್ಮಣೋತ್ತಮರೇ! ಹೋಗೋಣ ನಡೆಯಿರಿ. ಸ್ವಲ್ಪ ತಡ ಮಾಡಿದರೂ ಕಳ್ಳರು ತಪ್ಪಿಸಿಕೊಂಡು ಹೋಗಿಬಿಟ್ಟಾರು! ನಾನು ನಿಮ್ಮ ಜೊತೆ ಯಲ್ಲಿಯೇ ಬಂದು ಕಳ್ಳರಿಂದ ನಿಮ್ಮ ಗೋಧನವನ್ನು ಬಿಡಿಸಿಕೊಡುವೆನು."



ಅರ್ಜುನನು ರಥವನ್ನೇರಿ, ಬ್ರಾಹ್ಮಣನನ್ನೂ ಪಕ್ಕದಲ್ಲಿ ಕುಳ್ಳಿರಿಸಿ ಕೊಂಡು, ಕಳ್ಳರು ಹೋದ ಮಾರ್ಗದಲ್ಲಿಯೇ ಅವರನ್ನಟ್ಟಿಸಿಕೊಂಡು ಹೋದನು. ಕಳ್ಳರು ಕಣ್ಣಿಗೆ ಬಿದ್ದೊಡನೆಯೇ ಸವ್ಯಸಾಚಿಯಾದ ಅರ್ಜುನನು ಬಾಣಪ್ರಯೋಗಮಾಡಲು ಉಪಕ್ರಮಿಸಿದನು. ಕಳ್ಳರು ಹಿಂದಿರುಗಿ ನೋಡಿ, ತಮ್ಮನ್ನು ರಾಜಕುಮಾರನೇ ಹಿಡಿಯಲು ಬರುತ್ತಿದ್ದಾನೆಂದು ತಿಳಿದು, ತಾವು ಅಪಹರಿಸಿಕೊಂಡು ಬಂದಿದ್ದ ಗೋಧನವನ್ನು ಅಲ್ಲಿಯೇ ಬಿಟ್ಟು ಓಡಲಾರಂಭಿಸಿದರು.

ಅರ್ಜುನನು ಕಳ್ಳರನ್ನು ಧ್ವಂಸಮಾಡಿ, ಗೋಧನವನ್ನು ಬ್ರಾಹ್ಮಣಿನಿ ಗರ್ಪಿಸಿ, ಖ್ಯಾತಿಯನ್ನು ಪಡೆದು ರಾಜಧಾನಿಗೆ ಹಿಂದಿರುಗಿದನು.

ಅನಂತರ ಅರಮನೆಯನ್ನು ಪ್ರವೇಶಿಸಿ ಹಿರಿಯರಿಗೆ ನಮಿಸಿದನು. ಕಿರೀಟಿಯು ಮಾಡಿದ ಕಾರ್ಯವನ್ನು ಎಲ್ಲರೂ ಶ್ಲಾಘಿಸಿದರು. ಪಾರ್ಥನು ಯುಧಿಷ್ಠಿರನಲ್ಲಿಗೆ ಹೋಗಿ ಬದ್ಧಾಂಜಲಿಯಾಗಿ ನಿಂತು ಹೇಳಿದನು : "ಮಹಾರಾಜ! ನಾವೈವರೂ ಸೇರಿ ನಾರದರ ಸಮ್ಮುಖದಲ್ಲಿ ಮಾಡಿಕೊಂಡ ಪ್ರತಿಜ್ಞಾನುಸಾರವಾಗಿ ನಡೆದುಕೊಳ್ಳಲು ಅನುಮತಿಯನ್ನು ಕೊಡು. ನೀನು ದ್ರೌಪದಿಯೊಡನೆ ಕುಳಿತಿರುವಾಗ ನಾನು ಅಂತಃಪುರವನ್ನು ಪ್ರವೇಶಿಸಿ, ನಾವು ಮಾಡಿಕೊಂಡಿದ್ದ ನಿಯಮವನ್ನು ಉಲ್ಲಂಘಿಸಿರುವೆನು. ಆದುದರಿಂದ ನಾನೀಗಲೇ ಅರಣ್ಯಕ್ಕೆ ಹೊರಡುವೆನು. ನಿಯಮವನ್ನು ಉಲ್ಲಂಘಿಸಿದವರು ಹನ್ನೆರಡು ವರ್ಷಗಳ ಕಾಲ ವನವಾಸಮಾಡಬೇಕೆಂಬ ನಿಯಮವನ್ನು ನಾವೇ ಮಾಡಿಕೊಂಡಿರುವೆವಲ್ಲವೇ?"

ಅರ್ಜುನನ ಮಾತುಗಳನ್ನು ಕೇಳಿದೊಡನೆಯೇ ಯುಧಿಷ್ಠಿರನಿಗೆ ಭ್ರಾಂತಿಯುಂಟಾಯಿತು. ಶೋಕಾರ್ತನಾಗಿ ಗದ್ಗದಧ್ವನಿಯಲ್ಲಿ-"ಯಾಕಪ್ಪಾ ಕಾಡಿಗೆ ಹೋಗಬೇಕು?"-ಎಂದು ಕೇಳಿದನು.

ಒಡಹುಟ್ಟಿದವನು, ಅದರಲ್ಲಿಯೂ ಹೆಚ್ಚು ಪ್ರೀತಿಗೆ ಪಾತ್ರನಾದ ಸಹೋದರನು ಕಾಡಿಗೆ ಹೋಗುವನೆಂದರೆ ದುಃಖವಾಗದಿರುವುದೇ? ಯುಧಿಷ್ಠಿರನು ಕ್ಷಣಕಾಲ ಯೋಚಿಸಿದನು. ಅರ್ಜುನನು ಕಾಡಿಗೆ ಹೋಗಲೇ ಬೇಕಾಗಿರುವ ಕಾರಣವೂ ಯುಧಿಷ್ಠಿರನಿಗೆ ಮನವರಿಕೆಯಾಯಿತು. ಮನಸ್ಸಿಗೆ ಸಮಾಧಾನವನ್ನು ತಂದುಕೊಂಡು ಹೇಳಿದನು :

"ಧನಂಜಯ! ಧಾರ್ಮಿಕವಿಷಯಗಳಲ್ಲಿ ನನ್ನ ಮಾತನ್ನು ಪ್ರಮಾಣವನ್ನಾಗಿಟ್ಟುಕೊಳ್ಳಬಹುದೆಂಬ ದೃಢವಿಶ್ವಾಸವಿರುವುದಾದರೆ–ನಾನು ಹೇಳುವ ಮಾತನ್ನು ಕೇಳು. ನನಗೆ ಅಪ್ರಿಯವಾಗಿದೆಯೆಂದು ನೀನು ಭಾವಿಸಿರುವ ಅಂತಃಪುರಪ್ರವೇಶದ ಕಾರಣವೇನೆಂಬುದನ್ನು ನಾನು ಚೆನ್ನಾಗಿ ತಿಳಿದಿರುವೆನು. ಮೇಲಾಗಿ ನೀನು ಪ್ರವೇಶಮಾಡಿದ್ದರಿಂದ ನನ್ನ ಹೃದಯದಲ್ಲಿ ಯಾವ ವಿಧವಾದ ಅಸಂತೋಷವೂ ಉಂಟಾಗಲಿಲ್ಲ. ಅದೂ ಅಲ್ಲದೇ :

**ಗುರೋರನುಪ್ರವೇಶೋ ಹಿ ನೋಪಘಾತೋ ಯವೀಯಸಃ ।**
**ಯವೀಯಸೋಽನುಪ್ರವೇಶೋ ಜ್ಯೇಷ್ಠಸ್ಯ ವಿಧಿಲೋಪಕಃ ॥೩೨॥**

ಅಣ್ಣನಾದವನು ಪತ್ನಿಯೊಡನಿರುವಾಗ ತಮ್ಮನಾದವನು ಪ್ರವೇಶಿಸಿದರೆ ತಮ್ಮನು ಯಾವ ವಿಧವಾದ ದೋಷಕ್ಕೂ ಭಾಗಿಯಾಗುವುದಿಲ್ಲ. ತಮ್ಮನು ಪತ್ನೀಸಮೇತನಾಗಿ ಅಂತಃಪುರದಲ್ಲಿರುವಾಗ ಮಾತ್ರ ಅಣ್ಣನು ಪ್ರವೇಶಿಸುವುದು ನಿಯಮಕ್ಕೆ ಭಂಗವೆನಿಸುತ್ತದೆ. ಈ ಕಾರಣಗಳಿಂದ ಅಂತಃಪುರವನ್ನು ಪ್ರವೇಶಿಸಿದುದಕ್ಕಾಗಿ ವನವಾಸಮಾಡಬೇಕೆನ್ನುವ ನಿನ್ನ ಸಂಕಲ್ಪವನ್ನು ಸಾಕುಮಾಡು. ನಾನು ಹೇಳಿದಂತೆ ಕೇಳು. ಧರ್ಮಕ್ಕೆ ಯಾವ ವಿಧವಾದ ನ್ಯೂನತೆಯೂ ಉಂಟಾಗುವುದಿಲ್ಲ. ನೀನು ನನ್ನನ್ನು ನಿಶ್ಚಯವಾಗಿಯೂ ಅನಾದರಣೆ ಮಾಡಿರುವುದಿಲ್ಲ."

ಧರ್ಮಮೂರ್ತಿಯಾದ ಯುಧಿಷ್ಠಿರನೇ ಈ ಮಾತುಗಳನ್ನು ಹೇಳಿದ ಮೇಲೆ ಅರ್ಜುನನು ವನವಾಸದ ಇಚ್ಛೆಯನ್ನು ತೊರೆಯಬಹುದಾಗಿತ್ತಲ್ಲವೇ? ಆದರೆ ಅರ್ಜುನನು ಹಾಗೆ ಮಾಡಲಿಲ್ಲ. ಕಳಂಕವು ಅಣ್ಣನ ಮನಸ್ಸಿನಲ್ಲಿಲ್ಲದಿದ್ದರೂ ಅಂತಃಪುರಪ್ರವೇಶಮಾಡಿದ ಕಳಂಕವು ಅರ್ಜುನನ ಮನಸ್ಸಿನಲ್ಲಿ ನೆಟ್ಟುಹೋಗಿತ್ತು. ಆದುದರಿಂದ ಯುಧಿಷ್ಠಿರನ ಮಾತುಗಳು ಅರ್ಜುನನಿಗೆ ಹಿತವೆನಿಸಲಿಲ್ಲ. ಆದರೂ ಅಣ್ಣನ ಮಾತುಗಳನ್ನು ತಿರಸ್ಕರಿಸಲಿಲ್ಲ. ಹಿಂದೊಮ್ಮೆ ಯುಧಿಷ್ಠಿರನು ಹೇಳಿದ್ದ ಮಾತುಗಳನ್ನೇ ಅವನ ಸ್ಮರಣೆಗೆ ತಂದನು :

**ನ ವ್ಯಾಜೇನ ಚರೇದ್ಧರ್ಮಮಿತಿ ಮೇ ಭವತಃ ಶ್ರುತಮ್ ।**
**ನ ಸತ್ಯಾದ್ವಿಚಲಿಷ್ಯಾಮಿ ಸತ್ಯೇನಾಯುಧಮಾಲಭೇ ॥೩೪॥**

"ಅಣ್ಣ! 'ತೋರಿಕೆಯಿಂದ ಕೂಡಿದ, ಧರ್ಮವೆಂದು ತೋರುವ ಆದರೆ ಅಧರ್ಮವೇ ಆಗಿರುವ, ಕಾರ್ಯವನ್ನು ಮಾಡಬಾರದು'- ಎಂಬುದಾಗಿ ನೀನೇ ಹೇಳಿರುವೆಯಲ್ಲವೇ? ಆದುದರಿಂದ ನಾನು ಅರಣ್ಯಕ್ಕೆ ಹೋಗದಿರಲು ನೀನು ಎಷ್ಟೇ ಸಮಾಧಾನವನ್ನು ಹೇಳಿದರೂ ನನ್ನ ಮನಸ್ಸು ಒಪ್ಪಲಾರದು. ನಾವು ಮಾಡಿಕೊಂಡಿರುವ ನಿಯಮವನ್ನು ಮೀರಿ ನಾನು ನಡೆಯುವುದಿಲ್ಲ. ಸತ್ಯದಿಂದ ಚ್ಯುತನಾಗುವುದಿಲ್ಲ. ಈ ವಿಷಯದಲ್ಲಿ ಆಯುಧವನ್ನು ಮುಟ್ಟಿ ಪ್ರಮಾಣಮಾಡುತ್ತೇನೆ."

ಯುಧಿಷ್ಠಿರನು ಮುಂದೇನು ತಾನೇ ಮಾತಾಡಿಯಾನು? ಖಿನ್ನವಾದ

ಮನಸ್ಸಿನಿಂದಲೇ ಕಾಡಿಗೆ ಹೋಗಲು ಅರ್ಜುನನಿಗೆ ಅನುಮತಿಯನ್ನಿತ್ತನು. ಹನ್ನೆರಡು ವರ್ಷಗಳ ಅವಿಚ್ಛಿನ್ನವಾದ ವನವಾಸಕ್ಕೆ ಅರ್ಜುನನು ಹೊರಟನು.

ಎ೧೩ನೆಯ ಅಧ್ಯಾಯವು ಮುಗಿಯಿತು.



೨೧೪ನೆಯ ಅಧ್ಯಾಯ ಅರ್ಜುನವನವಾಸಪರ್ವ (ಮುಂದುವರಿದಿದೆ.)

## ಅರ್ಜುನನ ಗಂಗಾದ್ವಾರ ಪ್ರಯಾಣ : ಉಲೂಪಿಯೊಡನೆ ಸಮಾಗಮ

ಜನಮೇಜಯ! ಅರ್ಜುನನು ಯುಧಿಷ್ಠಿರನ ಅನುಮತಿಯನ್ನು ಪಡೆದು ವನವಾಸಮಾಡುವ ಸಲುವಾಗಿ ಹೊರಟೊಡನೆಯೇ ವೇದ-ವೇದಾಂಗ ಪಾರಂಗತರಾದ ಬ್ರಾಹ್ಮಣರು ಅರ್ಜುನನನ್ನು ಅನುಸರಿಸಿ ಹೊರಟರು. ಅವರ ಜೊತೆಯಲ್ಲಿ ಆತ್ಮದರ್ಶನಾಕಾಂಕ್ಷಿಗಳಾದ ಮಹರ್ಷಿಗಳೂ,

ಗಾಯಕರೂ, ಭಿಕ್ಷುಗಳೂ, ಭಗವದ್ಭಕ್ತರೂ, ಸೂತರೂ, ಪೌರಾಣಿಕರೂ, ನೀತಿಯ ಕಥೆಗಳನ್ನು ಹೇಳುವವರೂ, ಶ್ರಮಣಕರೂ, ವಾನಪ್ರಸ್ಥರೂ, ಸುಮಧುರಧ್ವನಿಯಲ್ಲಿ ದೇವತೆಗಳ ಆಖ್ಯಾನಗಳನ್ನು ಹೇಳುವ ದ್ವಿಜೋತ್ತಮರೂ ಹೊರಟರು.

ಅವರುಗಳಿಂದಲೂ ಮತ್ತು ಮಧುರಭಾಷಿಗಳಾದ ಇನ್ನೂ ಅನೇಕ ಸಾಧು-ಸತ್ಪುರುಷರಿಂದಲೂ ಪರಿವೃತನಾದ ಅರ್ಜುನನು–ದೇವತೆಗಳಿಂದೊಡಗೂಡಿದ ಇಂದ್ರನಂತೆ–ಪರಿಶೋಭಿಸುತ್ತಾ ಯಾತ್ರೆಗಾಗಿ ಹೊರಟನು.

ನಯನಮನೋಹರವಾದ ಕಾಡುಗಳು, ಕೊಳಗಳು, ನದಿಗಳು, ಸಾಗರಗಳು, ನಾನಾದೇಶಗಳು, ತಟಾಕಗಳು, ಪುಣ್ಯತೀರ್ಥಗಳು–ಇವೆಲ್ಲವನ್ನೂ ಭರತರ್ಷಭನಾದ ಅರ್ಜುನನು ಸಂದರ್ಶಿಸಿದನು. ಅಲ್ಲಿಂದ ಮುಂದೆ ಗಂಗಾದ್ವಾರದ (ಹರಿದ್ವಾರ) ಸಮೀಪಕ್ಕೆ ಬಂದು ಅಲ್ಲಿ ವೀರನಾದ ಅರ್ಜುನನು ಬಿಡಾರಮಾಡಿದನು.

ಜನಮೇಜಯ! ವಿಶುದ್ಧಾತ್ಮನಾದ, ಪಾಂಡವಪ್ರವರನಾದ ಧನಂಜಯನು ಅಲ್ಲಿ ಮಹಾದ್ಭುತವಾದ ಕಾರ್ಯವನ್ನೇ ಮಾಡಿದನು. ಅದನ್ನೇ ಹೇಳುವೆನು ಕೇಳು : ಅರ್ಜುನನು ಹರಿದ್ವಾರದಲ್ಲಿ ತಾತ್ಕಾಲಿಕನಿವಾಸವನ್ನು ಮಾಡಿಕೊಂಡಿರುವಾಗ–ಅವನನ್ನೇ ಅನುಸರಿಸಿ ಬಂದಿದ್ದ ಬ್ರಾಹ್ಮಣರು ಅನೇಕಸ್ಥಳಗಳಲ್ಲಿ ಅಗ್ನಿಹೋತ್ರಗಳನ್ನು ಮಾಡುವ ಸಲುವಾಗಿ ಯಜ್ಞೇಶ್ವರನನ್ನು ಪ್ರತಿಷ್ಠಾಪಿಸಿದರು. ಗಂಗಾತೀರದಲ್ಲಿ ಪ್ರತಿಷ್ಠಾಪಿತವಾಗಿದ್ದ, ಪುಷ್ಪಾದಿಗಳಿಂದ ಅಲಂಕೃತವಾದ ವೇದಿಗಳಿಂದ ಕೂಡಿದ್ದ, ಸ್ಪಷ್ಟವಾದ ಮಂತ್ರೋಚ್ಚಾರಣೆಗಳ ಮೂಲಕವಾಗಿ ಸಮಿತ್ತು, ಚರು, ಆಜ್ಯಗಳಿಂದ ಹೋಮಮಾಡಲ್ಪಟ್ಟು ಪ್ರಜ್ವಲಿಸುತ್ತಿದ್ದ ಅಗ್ನಿಹೋತ್ರಾದಿಗಳಿಂದಲೂ–ಸನ್ಮಾರ್ಗಾನುಸಾರಿಗಳಾದ, ಗಂಗೆಯಲ್ಲಿ ಸ್ನಾನಮಾಡಿ ಸೂರ್ಯೋದಯಸಮಯದಲ್ಲಿ ಸೂರ್ಯನಿಗೆದುರಾಗಿ ನಿಂತು ಅರ್ಘ್ಯಪ್ರದಾನಮಾಡುತ್ತಿದ್ದ ವಿದ್ವಜ್ಜನರಿಂದಲೂ–ಧ್ಯಾನಾಸಕ್ತರಾಗಿ ಕುಳಿತಿದ್ದ ಮಹಾತ್ಮರಿಂದಲೂ ಕೂಡಿದ್ದ ಗಂಗಾದ್ವಾರವು ಬಹಳ ಶೋಭಾಯಮಾನವಾಗಿ ಕಾಣುತ್ತಿದ್ದಿತು. ಅರ್ಜುನನ ಆಶ್ರಮವು ಮಹಾತ್ಮರಿಂದಲೂ, ವಿದ್ವಾಂಸರಿಂದಲೂ, ಬ್ರಾಹ್ಮಣೋತ್ತಮರಿಂದಲೂ

ನಿಬಿಡವಾಗಿರಲಾಗಿ ಒಂದು ದಿನ ಪಾಂಡವರ್ಷಭನಾದ, ಕುಂತೀಪುತ್ರನಾದ ಅರ್ಜುನನು ದೈನಂದಿನ ಪದ್ಧತಿಯಂತೆ ಸ್ನಾನಮಾಡುವ ಸಲುವಾಗಿ ಗಂಗಾನದಿಯಲ್ಲಿಳಿದನು. ಯಥಾವಿಧಿಯಾಗಿ ಸ್ನಾನವನ್ನು ಮುಗಿಸಿ, ಪಿತೃದೇವತೆಗಳಿಗೆ ತರ್ಪಣವನ್ನೂ ಕೊಟ್ಟು, ಅಗ್ನಿಕಾರ್ಯವನ್ನು ಮಾಡುವ ಅಪೇಕ್ಷೆಯಿಂದ ನದಿಯ ದಂಡೆಯ ಕಡೆಗೆ ತಿರುಗಿದನು. ಅರವಿಂದವದನೆಯಾದ 'ಉಲೂಪಿ' ಎಂಬ ನಾಗಕನ್ಯೆಯು ನದಿಯಿಂದ ದಂಡೆಯೆಡೆಗೆ ಹೋಗುತ್ತಿದ್ದ ಅರ್ಜುನನ ಪಾದಾರವಿಂದಗಳನ್ನು ಹಿಡಿದು ಪಾತಾಳಲೋಕಕ್ಕೆ ಸೆಳೆದುಕೊಂಡು ಹೋದಳು. ಕಾಮಪೀಡಿತೆಯಾಗಿದ್ದ ಉಲೂಪಿಯು ನಾಗರಾಜನಾದ ಕೌರವ್ಯನ ಸುಂದರವಾದ ಅರಮನೆಗೆ ಅರ್ಜುನನನ್ನು ಕರೆದೊಯ್ದಳು. ಅಲ್ಲೊಂದು ಅಗ್ನಿಕುಂಡವು ಪ್ರತಿಷ್ಠಿತವಾಗಿದ್ದು ಅರ್ಜುನನ ಅಗ್ನಿಕಾರ್ಯಕ್ಕೆ ಬೇಕಾಗಿದ್ದ ಸಕಲಸಂಭಾರಗಳೂ ಸಿದ್ಧವಾಗಿದ್ದುವು. ಅರ್ಜುನನು ಯಜ್ಞೇಶ್ವರನ ಮುಂದೆ ಕುಳಿತು ಭಕ್ತಿಪೂರ್ವಕವಾಗಿ ಅಗ್ನಿಕಾರ್ಯವನ್ನು ಮುಗಿಸಿದನು. 'ನಾನು ಯಾರಿಂದ ಸೆಳೆಯಲ್ಪಟ್ಟೆನು? ಎಲ್ಲಿದ್ದೇನೆ?"–ಎಂಬ ಯಾವುದೇ ವಿಧವಾದ ಶಂಕೆಯೂ ಇಲ್ಲದೇ ತದೇಕಚಿತ್ತನಾಗಿ ಅರ್ಜುನನು ಯಜ್ಞೇಶ್ವರನನ್ನು ಪೂಜಿಸಿದ ಕಾರಣ ಅಗ್ನಿದೇವನೂ ಸುಪ್ರೀತನಾದನು.

ಅಗ್ನಿಕಾರ್ಯವು ಮುಗಿದನಂತರ ಅರ್ಜುನನು ಮೇಲೆದ್ದು ಪಕ್ಕದಲ್ಲಿ ನಿಂತಿದ್ದ ನಾಗರಾಜಪುತ್ರಿಯಾದ ಉಲೂಪಿಯನ್ನು ನೋಡಿ ಮುಗುಳ್ನಗೆಯನ್ನು ಬೀರುತ್ತಾ ಹೇಳಿದನು : "ಭಾಮಿನಿ! ಎಂತಹ ಸಾಹಸಕಾರ್ಯವನ್ನು ಮಾಡಿಬಿಟ್ಟೆ? ಈ ಸುಂದರವಾದ ದೇಶವಾವುದು? ನೀನಾರು? ಯಾರ ಮಗಳು?"

ಲಜ್ಜೆಯಿಂದ ಕೆಂಪೇರಿದ್ದ ಮುಖಭಾವದಿಂದ ಕೂಡಿದ್ದ ನಾಗಕನ್ಯೆಯು ಜೇನಿನಂತೆ ಮಧುರವಾದ ಮಾತುಗಳನ್ನು ಹೇಳಿದಳು :

"ರಾಜಕುಮಾರ! ಐರಾವತವೆಂಬ ನಾಗನ ವಂಶದಲ್ಲಿ ಹುಟ್ಟಿದ ಕೌರವ್ಯನೆಂಬ ನಾಗಶ್ರೇಷ್ಠನೊಬ್ಬನಿರುವನು. ಅವನ ಮಗಳು ನಾನು. ನನ್ನನ್ನು 'ಉಲೂಪಿ' ಎಂದು ಕರೆಯುವರು. ಗಂಗೆಯಲ್ಲಿ ಸ್ನಾನಮಾಡಲು ಇಳಿದಿದ್ದ ನಿನ್ನ ಶರೀರದ ಸೊಬಗನ್ನು ಕಂಡು ಸುಮಶರನ ಬಾಣಗಳ ಆಘಾತಕ್ಕೆ ತುತ್ತಾ

ದೆನು. ನನಗೆ ಆ ವೇಳೆಯಲ್ಲಿ-'ಏನನ್ನು ಮಾಡಬೇಕು? ಏನನ್ನು ಮಾಡಬಾರದು?'-ಎಂಬ ಪರಿವೆಯೇ ಉಂಟಾಗಲಿಲ್ಲ. ನಿನ್ನನ್ನಿಲ್ಲಿಗೆ ಕರೆತಂದೆನು. ಕುರುವಂಶಪ್ರದೀಪನೇ! ನಾನಿನ್ನೂ ಅವಿವಾಹಿತೆಯಾಗಿರುವೆನು. ನಿನ್ನ ಸಲುವಾಗಿ ಮನ್ಮಥನು ನನ್ನ ಮೇಲೆ ಪಂಚಬಾಣಗಳನ್ನೂ ಪ್ರಯೋಗಮಾಡಿರುವನು. ಇದರಿಂದಾಗಿ ನಾನು ಬಹಳ ತೊಳಲುತ್ತಿರುವೆನು. ನಿನ್ನ ಆತ್ಮಪ್ರದಾನದಿಂದ ನನ್ನ ತೊಳಲಿಕೆಯನ್ನು ನಿವಾರಣೆಮಾಡು."

ಮಂದಸ್ಮಿತನಾಗಿಯೇ ಅರ್ಜುನನು ನಾಗಕನ್ಯೆಯನ್ನು ಕುರಿತು ಹೇಳಿದನು: "ಭದ್ರೇ! ನಿನ್ನ ಪ್ರಾರ್ಥನೆಯು ಅಯುಕ್ತವೆಂದು ಹೇಳಲಾರೆನು. ಆದರೆ ನಾನು ಯುಧಿಷ್ಠಿರನ ಆದೇಶದಂತೆ ವನದಲ್ಲಿ ಹನ್ನೆರಡು ವರ್ಷಗಳು ಬ್ರಹ್ಮಚರ್ಯವ್ರತದಲ್ಲಿದ್ದುಕೊಂಡೇ ಕಾಲಕಳೆಯಲು ಬಂದಿರುವೆನು. ನಾನು ಸ್ವೇಚ್ಛೆಯಿಂದಿರುವ ಅಧಿಕಾರವನ್ನು ಹೊಂದಿರುವುದಿಲ್ಲ. ಆದರೂ ನಿನ್ನ ಇಚ್ಛೆಯನ್ನು ಪೂರ್ಣಮಾಡುವ ಅಭಿಲಾಷೆಯಿದೆ. ನಾನು ಹುಟ್ಟಿದಂದಿನಿಂದ ಎಂದೂ ಎಲ್ಲಿಯೂ ಸುಳ್ಳನ್ನಾಡಿರುವುದಿಲ್ಲ. ಈಗ ನಾನು ಅನೃತಭಾಷಿಯಾಗಕೂಡದು ; ಧರ್ಮಭ್ರಷ್ಟನೂ ಆಗಕೂಡದು ; ನಿನ್ನ ಮನಸ್ಸಿನ ಅಭಿಲಾಷೆಯನ್ನೂ ನೆರವೇರಿಸಬೇಕು. ಇದರ ಸಾಧ್ಯತೆಯು ಹೇಗೆಂಬುದನ್ನು ನೀನೇ ಪರ್ಯಾಲೋಚಿಸಿ ಹೇಳು."

"ಪಾಂಡುಪುತ್ರನೇ! ನೀನೇಕೆ ಪ್ರಪಂಚಪರ್ಯಟನಮಾಡುತ್ತಿರುವೆಯೆಂಬುದನ್ನೂ ಮತ್ತು ಹಿರಿಯಣ್ಣನೇಕೆ ಬ್ರಹ್ಮಚರ್ಯದಿಂದಿರಲು ಆಜ್ಞೆಮಾಡಿರುವನೆಂಬುದನ್ನೂ ನಾನು ತಿಳಿದಿರುವೆನು. ನಿಮ್ಮೈವರಲ್ಲಿ ಯಾರಾದರೊಬ್ಬರು ದ್ರೌಪದಿಯೊಡನಿರುವಾಗ ಮತ್ತೊಬ್ಬರು ಅಂತಃಪುರವನ್ನು ಪ್ರವೇಶಮಾಡಿದರೆ ಅವರು ಹನ್ನೆರಡು ವರ್ಷಗಳ ಕಾಲ ಅರಣ್ಯದಲ್ಲಿ ಬ್ರಹ್ಮಚರ್ಯವ್ರತದಿಂದಿರಬೇಕೆಂದು ನೀವೈವರೂ ಮಾಡಿಕೊಂಡಿರುವ ನಿಯಮಾನುಸಾರ ನೀನಿಂದು ಪ್ರಪಂಚಪರ್ಯಟನೆಮಾಡುತ್ತಿರುವೆಯಲ್ಲವೇ? ಆದರೆ ನನ್ನ ಪ್ರಾರ್ಥನೆಯನ್ನು ಮನ್ನಿಸುವುದರಿಂದ ನಿನ್ನ ವ್ರತಕ್ಕೆ ಸ್ವಲ್ಪವೂ ಕುಂದುಂಟಾಗುವುದಿಲ್ಲ.

**ತದಿದಂ ದ್ರೌಪದೀಹೇತೋರನ್ಯೋನ್ಯಸ್ಯ ಪ್ರವಾಸನಮ್ ।**
**ಕೃತವಾಂಸ್ತತ್ರ ಧರ್ಮಾರ್ಥಮತ್ರ ಧರ್ಮೋ ನ ದುಷ್ಯತಿ ॥೨೬॥**
**ಪರಿತ್ರಾಣಂ ಚ ಕರ್ತವ್ಯಮಾರ್ತಾನಾಂ ಪೃಥುಲೋಚನ ।**
**ಕೃತ್ವಾ ಮಮ ಪರಿತ್ರಾಣಂ ತವ ಧರ್ಮೋ ನ ಲುಪ್ಯತೇ ॥೨೭॥**
**ಯದಿ ವಾಪ್ಯಸ್ಯ ಧರ್ಮಸ್ಯ ಸೂಕ್ಷ್ಮೋಽಪಿ ಸ್ಯಾದ್ವ್ಯತಿಕ್ರಮಃ ।**
**ಸ ಚ ತೇ ಧರ್ಮ ಏವ ಸ್ಯಾದ್ದತ್ತ್ವಾ ಪ್ರಾಣಾನ್ಮಮಾರ್ಜುನ ॥೨೮॥**
**ಭಕ್ತಾಂ ಚ ಭಜ ಮಾಂ ಪಾರ್ಥ ಸತಾಮೇತನ್ಮತಂ ಪ್ರಭೋ ॥೨೯॥**

ವಿಶಾಲನೇತ್ರನೇ! ದ್ರೌಪದಿಯ ವಿಷಯದಲ್ಲಿ ಮಾಡಿರುವ ಈ ಧರ್ಮರಕ್ಷಾನಿಯಮವು ಬೇರೆಯವರಿಗೆ ಅನ್ವಯಿಸುವುದಿಲ್ಲ. ಕಷ್ಟದಲ್ಲಿರುವವನನ್ನು ಪಾರುಮಾಡುವುದೂ ರಾಜನ ಒಂದು ಮುಖ್ಯಕರ್ತವ್ಯವಲ್ಲವೇ? ಈ ಕಾರಣದಿಂದ ಮದನನ ಪ್ರಕೋಪಕ್ಕೆ ಸಿಕ್ಕಿ ಬಾಧೆಪಡುತ್ತಿರುವ ನನ್ನನ್ನು ಪಾರುಮಾಡುವುದರಿಂದ ನಿನ್ನ ವ್ರತಕ್ಕೆ ನ್ಯೂನತೆಯುಂಟಾಗಲಾರದು. ಅಥವಾ ನಿನ್ನ ಬ್ರಹ್ಮಚರ್ಯವ್ರತಕ್ಕೆ ಸ್ವಲ್ಪ ಲೋಪವಾಗುವುದೆಂದೇ ಭಾವಿಸಬಹುದಾದರೂ ನನ್ನ ಪ್ರಾಣವನ್ನುಳಿಸುವುದರಿಂದ ಹೆಚ್ಚಿನ ಧರ್ಮವನ್ನೂ, ಕೀರ್ತಿಯನ್ನೂ ಪಡೆಯುವೆಯೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ನೀನೇನಾದರೂ ನನ್ನನ್ನು ನಿರ್ಲಕ್ಷಿಸಿಹೋದಲ್ಲಿ ನಾನು ಖಂಡಿತವಾಗಿಯೂ ಪ್ರಾಣತೊರೆಯುವೆನು. ಸದಾ ನಾನು ನಿನ್ನ ಆರಾಧಕಳಾಗಿರುವೆನು. ಸೇವಕಿಯಾಗಿರುವೆನು. ನೀನು ದೀನರಾದವರನ್ನೂ, ಅನಾಥರಾದವರನ್ನೂ ಅನುದಿನವೂ ಸಂರಕ್ಷಿಸುತ್ತಿರುವೆಯಲ್ಲವೇ? ಇದೇ ನಿನ್ನ ಧರ್ಮವೆಂದು ತಿಳಿದಿರುವೆಯಲ್ಲವೇ? ಆದುದರಿಂದ ದೀನಳಾದ ನನ್ನ ಪ್ರಾರ್ಥನೆಯನ್ನು ಮನ್ನಿಸಿ ಆತ್ಮಪ್ರದಾನಮಾಡು.

ಪುರುಷೋತ್ತಮ! ನಾನು ನಿನ್ನ ಆಶ್ರಯವನ್ನು ಕೇಳುತ್ತಿರುವೆನು. ನೀನು ನನ್ನ ಪ್ರಾರ್ಥನೆಯನ್ನು ತಿರಸ್ಕರಿಸಿಬಿಡುವೆಯೆಂಬ ಉದ್ವಿಗ್ನತೆಯಿಂದ ಬಹುದುಃಖಿತಳಾಗಿ ಗೋಳಿಡುತ್ತಾ ಬೇಡಿಕೊಳ್ಳುವೆನು. ನಾನು ನಿನ್ನಲ್ಲಿ ಅನುರಕ್ತಳಾಗಿರುವೆನು. ಆದುದರಿಂದ ನೀನು ನನಗೆ ಪ್ರಿಯವಾದುದನ್ನು ಮಾಡು. ನಿನ್ನ ಆತ್ಮಪ್ರದಾನಮಾಡಿ ನನ್ನ ಕಾಮನೆಯನ್ನು ಪೂರೈಸು, ಪಾರ್ಥ!”

ಉಲೂಪಿಯು ಹೀಗೆ ಹೇಳಿದನಂತರ ಪಾರ್ಥನು ಕಾಮಾರ್ತ ಳಾಗಿರುವ ಉಲೂಪಿಯ ಕಾಮನೆಯನ್ನು ಪೂರೈಸುವುದೇ ಧರ್ಮವೆಂದು ನಿಶ್ಚಯಿಸಿದವನಾಗಿ ಅವಳು ಹೇಳಿದಂತೆಯೇ ಮಾಡಿದನು. ಪ್ರತಾಪವಂತ ನಾದ ಅರ್ಜುನನು ನಾಗರಾಜನ ಅರಮನೆಯಲ್ಲಿಯೇ ಉಲೂಪಿಯ ಜೊತೆಯಲ್ಲಿ ರಾತ್ರಿಯನ್ನು ಕಳೆದು ಸೂರ್ಯೋದಯವಾಗುತ್ತಲೇ ಕೌರವ್ಯನ (ನಾಗರಾಜನ) ಅರಮನೆಯಿಂದ ಹೊರಟುಬಿಟ್ಟನು.

ಕೌರವ್ಯನ ಅರಮನೆಯಿಂದ ಗಂಗಾನದಿಯ ದಂಡೆಯವರೆಗೂ ಪತಿವ್ರತೆಯಾದ ಉಲೂಪಿಯೂ ಅರ್ಜುನನನ್ನು ಅನುಸರಿಸಿ ಬಂದು, ಅವನನ್ನೊಮ್ಮೆ ಗಾಢಾಲಿಂಗನಮಾಡಿಕೊಂಡು, ತನ್ನ ಇಚ್ಛೆಯನ್ನು ಪೂರ್ಣಮಾಡಿದುದಕ್ಕಾಗಿ ಅರ್ಜುನನಿಗೆ–'ಭೂಲೋಕದಲ್ಲಿ ನೀನು ಅಪ್ರತಿಮಸಾಹಸಿಯಾಗಿರುವಂತೆ–ನೀರಿನಲ್ಲಿಯೂ ಅಪ್ರತಿಮಸಾಹಸಿ ಯಾಗುವೆ. ಜಲಚರಪ್ರಾಣಿಗಳೆಲ್ಲವೂ ನಿನ್ನ ಅಧೀನವಾಗುವುವು'– ಎಂಬ ವರವನ್ನಿತ್ತು ಸಂತುಷ್ಟಹೃದಯಳಾಗಿ ತನ್ನ ಅರಮನೆಗೆ ಹಿಂದಿರುಗಿದಳು.

೨೧೪ನೆಯ ಅಧ್ಯಾಯವು ಮುಗಿಯಿತು.

೨೧೫ನೆಯ ಅಧ್ಯಾಯ ಅರ್ಜುನವನವಾಸಪರ್ವ (ಮುಂದುವರಿದಿದೆ.)

## ಅರ್ಜುನನ ಪೂರ್ವದಿಕ್ಕಿನ ತೀರ್ಥಗಳ ಪ್ರವಾಸ: ಮಣಿಪೂರದಲ್ಲಿ ಚಿತ್ರಾಂಗದೆಯ ಪಾಣಿಗ್ರಹಣ

ಜನಮೇಜಯ! ವಜ್ರಧರನ ಮಗನಾದ ಅರ್ಜುನನು ನದಿಯ ತೀರಕ್ಕೆ ಬಂದು ಹಿಂದಿನ ದಿನ ನಡೆದ ವೃತ್ತಾಂತಗಳೆಲ್ಲವನ್ನೂ ತನ್ನನ್ನು ಅನುಸರಿಸಿ ಬಂದಿದ್ದ ಬ್ರಾಹ್ಮಣರಿಗೆ ಹೇಳಿ, ಮುಂದೆ ಹಿಮವತ್ಪರ್ವತದ ತಪ್ಪಲಿಗೆ ಹೋದನು. ಅಗಸ್ತ್ಯವಟವೆಂಬ ಪುಣ್ಯಕ್ಷೇತ್ರವನ್ನು ದರ್ಶನಮಾಡಿ ಅಲ್ಲಿಂದ ಮುಂದೆ ವಸಿಷ್ಠಪರ್ವತಕ್ಕೆ ಪ್ರಯಾಣಮಾಡಿದನು. ಅಲ್ಲಿಂದ ಮುಂದೆ ಭೃಗುತುಂಗಕ್ಕೆ ಹೋಗಿ ಅಲ್ಲಿದ್ದ ಭೃಗುತೀರ್ಥದಲ್ಲಿ ಸ್ನಾನಮಾಡಿ, ಸಾವಿರಾರು ಬ್ರಾಹ್ಮಣರಿಗೆ ಗೋವುಗಳನ್ನೂ ಮನೆಗಳನ್ನೂ ದಾನವಾಗಿ ಕೊಟ್ಟನು. ಅಲ್ಲಿಂದ ಮುಂದಕ್ಕೆ ಹಿರಣ್ಯಬಿಂದುವೆಂಬ ಆಶ್ರಮಕ್ಕೆ ಹೋಗಿ,

ಅಲ್ಲಿದ್ದ ತೀರ್ಥಗಳಲ್ಲಿ ಸ್ನಾನಮಾಡಿ, ಅದರ ಸಮೀಪದಲ್ಲಿದ್ದ ಅನೇಕ ಪವಿತ್ರಸ್ಥಳಗಳನ್ನೂ ಸಂದರ್ಶಿಸಿದನು. ಅನಂತರ ಹಿಮವತ್ಪರ್ವತದ ತಪ್ಪಲಿನಿಂದ ಕೆಳಗಿಳಿದು ಬ್ರಾಹ್ಮಣರಿಂದೊಡಗೂಡಿ ಪೂರ್ವದಿಕ್ಕಿಗೆ ಯಾತ್ರೆ ಹೊರಟನು. ಅರ್ಜುನನು ಪೂರ್ವದಿಕ್ಕಿನಲ್ಲಿದ್ದ ಪುಣ್ಯಕ್ಷೇತ್ರಗಳನ್ನು ಅನುಕ್ರಮವಾಗಿ ಸಂದರ್ಶಿಸುತ್ತಾ ನೈಮಿಷಾರಣ್ಯಕ್ಕೆ ಹೋದನು. ಹೋಗುವಾಗ ಉತ್ಪಲಿನೀ, ನಂದಾ, ಅಪರನಂದಾ, ಕೌಶಿಕೀ, ಗಯಾ ಮತ್ತು ಗಂಗಾನದಿಗಳಲಿ ್ಲ ಯಥಾನುಕ್ರಮವಾಗಿ ಸ್ನಾನಮಾಡಿ, ತನ್ನನ್ನೂ ಪವಿತ್ರ ನನ್ನಾಗಿ ಮಾಡಿಕೊಂಡು ಪಿತೃದೇವತೆಗಳಿಗೆ ತರ್ಪಣಾದಿಗಳನ್ನು ಕೊಟ್ಟು, ಬ್ರಾಹ್ಮಣರಿಗೆ ದಾನ-ದಕ್ಷಿಣೆಗಳನ್ನೂ, ಗೋವುಗಳನ್ನೂ ಯಥೇಚ್ಛವಾಗಿ ಕೊಟ್ಟನು. ಅಲ್ಲಿಂದ ಮುಂದೆ ಅಂಗ-ವಂಗ-ಕಳಿಂಗರಾಷ್ಟ್ರಗಳಿಗೆ ಹೋಗಿ ಆ ದೇಶಗಳಲ್ಲಿದ್ದ ಪವಿತ್ರಸ್ಥಳಗಳನ್ನೂ, ಪುಣ್ಯತೀರ್ಥಗಳನ್ನೂ ಯಥಾವಿಧಿ ಯಾಗಿ ಸಂದರ್ಶನಮಾಡಿ, ಬ್ರಾಹ್ಮಣರಿಗೆ ಯಥಾಯೋಗ್ಯವಾದ ದಾನ-ದಕ್ಷಿಣೆಗಳನ್ನು ಕೊಟ್ಟನು. ಕಳಿಂಗರಾಷ್ಟ್ರದ ಸಮೀಪಕ್ಕೆ ಹೋಗುತ್ತಲೇ ಅರ್ಜುನನನ್ನು ಹಿಂಬಾಲಿಸಿ ಬರುತ್ತಿದ್ದವರೆಲ್ಲರೂ ಅಲ್ಲಿಯೇ ನಿಂತು ಅರ್ಜುನನನ್ನು ಹರಸಿ, ಮುಂದಕ್ಕೆ ಅವನನ್ನು ಬೀಳ್ಕೊಟ್ಟರು. ಧನಂಜಯನು ಅವರ ಅನುಮತಿಯನ್ನು ಪಡೆದು ನಾಲ್ಕಾರು ಮಂದಿ ಬೆಂಬಲಿಗರೊಡನೆ ಸಮುದ್ರದೆಡೆಗೆ ಪ್ರಯಾಣಮಾಡಿದನು.

ಕಳಿಂಗದೇಶವನ್ನು ಬಿಟ್ಟನಂತರ ಅರ್ಜುನನು ಸಮುದ್ರತೀರದಲ್ಲಿನ ನಾನಾದೇಶಗಳನ್ನೂ, ಅನೇಕರೀತಿಯ ಜನ, ಪವಿತ್ರಸ್ಥಳಗಳು, ಸುಂದರವಾದ ಸೌಧಗಳು– ಇವೆಲ್ಲವನ್ನೂ ಸಂದರ್ಶಿಸಿ, ಅನೇಕ ತಪಸ್ವಿಗಳಿಂದ ಅಲಂಕೃತ ವಾಗಿದ್ದ ಮಹೇಂದ್ರಪರ್ವತಕ್ಕೆ ಹೋದನು. ಅಲ್ಲಿದ್ದ ಪುಣ್ಯತೀರ್ಥಗಳಲ್ಲಿ ಮಿಂದು, ಮುಂದೆ ಸಮುದ್ರತೀರದಲ್ಲಿಯೇ ನಡೆದುಹೋಗುತ್ತಾ ಸುಪ್ರಸಿದ್ಧವಾದ ಮಣಿಪೂರಕ್ಕೆ ತೆರಳಿದನು. ಮಣಿಪೂರರಾಜ್ಯದಲ್ಲಿದ್ದ ಪುಣ್ಯಕ್ಷೇತ್ರಗಳನ್ನೂ ಪವಿತ್ರನದಿಗಳನ್ನೂ ಸಂದರ್ಶಿಸಿ, ಕಡೆಗೆ ಮಣಿಪೂರದ ರಾಜನಾಗಿದ್ದ ಚಿತ್ರವಾಹನನನ್ನು ಸಂದರ್ಶಿಸಲು ಹೋದನು.

ಮಣಿಪೂರದ ರಾಜನಿಗೆ ಚಿತ್ರಾಂಗದೆಯೆಂಬ ಸರ್ವಾಂಗಸುಂದರಿ ಯಾದ ಕನ್ಯೆಯಿದ್ದಳು. ಧನಂಜಯನು ಚಿತ್ರವಾಹನನನ್ನು ನೋಡಲು ಹೋದ

ವೇಳೆಗೆ ಸರಿಯಾಗಿ ಚಿತ್ರಾಂಗದೆಯು ಅರಮನೆಯ ಉದ್ಯಾನವನದಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತಿದ್ದಳು. ದೈವಸಂಕಲ್ಪದಂತೆ ಇಬ್ಬರ ನಯನಚಕೋರಗಳೂ ಮಿಲನವಾದುವು. ಒಡನೆಯೇ ಇಬ್ಬರ ಹೃದಯಗಳಲ್ಲಿಯೂ ಪ್ರೇಮಾಂಕುರವು ಮೊಳೆಯಿತು.

ಧನಂಜಯನಿಗೆ ಚಿತ್ರಾಂಗದೆಯನ್ನು ವರಿಸಬೇಕೆನ್ನುವ ಅಭಿಲಾಷೆ ಯುಂಟಾಯಿತು. ಒಡನೆಯೇ ರಾಜನ ಬಳಿಗೆ ಹೋಗಿ ಹೇಳಿದನು :



"ಮಹಾರಾಜ! ನಾನೊಬ್ಬ ಕ್ಷತ್ರಿಯವೀರನಾಗಿದ್ದೇನೆ. ನನಗೆ ನಿನ್ನ ಮಗಳನ್ನು ಕೊಟ್ಟು ವಿವಾಹಮಾಡು."

ರಾಜಕನ್ಯೆಯನ್ನು ವಿವಾಹಮಾಡಿಕೊಡುವಂತೆ ರಾಜನನ್ನೇ ಹೋಗಿ ಕೇಳಬೇಕಾದರೆ ಅವನು ಕ್ಷತ್ರಿಯವೀರನೇ ಆಗಿರಬೇಕೆಂಬುದರಲ್ಲಿ ರಾಜನಿಗೆ ಸಂಶಯವುಂಟಾಗಲಿಲ್ಲ. ಕುಲ-ಗೋತ್ರಗಳನ್ನು ತಿಳಿಯುವ ಸಲುವಾಗಿ "ನೀನು ಯಾವ ರಾಜನ ಮಗನಾಗಿರುವೆ? ನಿನ್ನ ನಾಮಧೇಯವೇನು?" ಎಂದು ಧನಂಜಯನನ್ನು ಕೇಳಿದನು.

"ನಾನು ಕುರುಪುಂಗವನಾದ ಪಾಂಡುವಿನ ಮಗನು ; ಕುಂತೀಪುತ್ರನು. ಧನಂಜಯನೆಂದು ನನ್ನ ಹೆಸರು."

ಚಿತ್ರವಾಹನನು ಕುರುವಂಶದ ಕೀರ್ತಿಯನ್ನು ಕೇಳಿದ್ದನಾದ ಕಾರಣ ಧನಂಜಯನ ಕುಲ-ಗೋತ್ರಗಳ ವಿಷಯವಾಗಿ ಪರ್ಯಾಲೋಚಿಸುವ ಕಾರಣ ವಿರಲಿಲ್ಲ. ಧನಂಜಯನನ್ನು ಪುರಸ್ಕರಿಸಿ ಸಮೀಪದಲ್ಲಿ ಕುಳ್ಳಿರಿಸಿಕೊಂಡು ಸವಿಮಾತುಗಳಲ್ಲಿ ತನ್ನ ಪೂರ್ವೇತಿಹಾಸವನ್ನು ವಿವರಿಸತೊಡಗಿದನು.

ಧನಂಜಯನು ಚಿತ್ರವಾಹನನ ಪೂರ್ವಜರ ಕಥೆಯನ್ನು ತದೇಕಚಿತ್ತನಾಗಿ ಕೇಳುತ್ತಿದ್ದನು.

ಚಿತ್ರವಾಹನನು ಹೇಳುತ್ತಾನೆ :

"ಅರ್ಜುನ! ನಮ್ಮ ಪೂರ್ವಜರಲ್ಲಿ ಮಹಾಪರಾಕ್ರಮಿಯಾದ ಪ್ರಭಂಜನನೆಂಬ ರಾಜನಿದ್ದನು. ಅವನಿಗೆ ಬಹಳ ಕಾಲದವರೆಗೂ ಮಕ್ಕಳಾಗಲಿಲ್ಲ. ಮಕ್ಕಳನ್ನು ಪಡೆಯಲು ಅನೇಕವಿಧವಾದ ವ್ರತ-ನಿಯಮಗಳನ್ನು ಆಚರಿಸಿದನು. ಕಠಿನವಾದ ತಪಸ್ಸನ್ನೂ ಮಾಡಿದನು. ಉಮಾಪತಿಯಾದ ಪರಮೇಶ್ವರನನ್ನು ಕುರಿತು ಬಹುಕಾಲ ಕಠೋರವಾದ ತಪಶ್ಚರಣೆಮಾಡಿ ಮಹಾದೇವನನ್ನು ಒಲಿಸಿಕೊಂಡನು. ಅವನ ತಪಶ್ಚರಣೆಯಿಂದ ಸುಪ್ರೀತನಾದ ಪಿನಾಕಿಯು-ನಮ್ಮ ವಂಶದಲ್ಲಿ ಪ್ರತಿಯೊಬ್ಬರಿಗೂ ಒಬ್ಬೊಬ್ಬ ಮಗನು ಹುಟ್ಟುವಂತೆ ಅನುಗ್ರಹಿಸಿದನು. ಅದರಂತೆಯೇ ನಮ್ಮ ವಂಶದಲ್ಲಿ ನನ್ನ ಹಿಂದಿನವರಿಗೆಲ್ಲರಿಗೂ ಒಬ್ಬೊಬ್ಬರಂತೆ ಗಂಡುಮಕ್ಕಳೇ ಹುಟ್ಟಿರುವರು. ಆದರೆ ನನಗೊಬ್ಬನಿಗೆ ಮಾತ್ರ ಪುತ್ರನು ಹುಟ್ಟುವುದಕ್ಕೆ ಬದಲಾಗಿ ಒಬ್ಬಳು ಪುತ್ರಿಯು ಹುಟ್ಟಿರುವಳು. ಆದರೂ ಇವಳನ್ನು ನಾನು ಪುತ್ರನೆಂದೇ ಭಾವಿಸಿರುವೆನು. ಇವಳೇ ನನ್ನ ವಂಶದ ಉದ್ಧಾರಕಳು. ಈ ಕಾರಣದಿಂದ ನಾನಿವಳನ್ನು ವಿಧಿವತ್ತಾಗಿ ಪುತ್ರಿಕೆಯನ್ನಾಗಿ ಮಾಡಿಕೊಂಡಿರುವೆನು. ಆದುದರಿಂದ ನಿನ್ನಿಂದ ಇವಳಲ್ಲಿ ಹುಟ್ಟುವ ಒಬ್ಬನೇ ಮಗನನ್ನು ಕನ್ಯಾಶುಲ್ಕರೂಪವಾಗಿ ಕೊಡಲು ಒಪ್ಪುವೆಯಾದರೆ ನೀನು ನನ್ನ ಮಗಳ ಪಾಣಿಗ್ರಹಣವನ್ನು ಮಾಡಬಹುದು."

ಧನಂಜಯನು ರಾಜನು ಹೇಳಿದುದೆಲ್ಲಕ್ಕೂ 'ತಥಾಸ್ತು' ಎಂದನು.

ಯಥಾಶಾಸ್ತ್ರವಾಗಿ ವೈಭವದಿಂದ ಚಿತ್ರಾಂಗದಾ-ಧನಂಜಯರ ವಿವಾಹವಾಯಿತು. ಮೂರು ವರ್ಷಗಳ ಕಾಲ ಧನಂಜಯನು ಚಿತ್ರಾಂಗದೆಯೊಡನಿದ್ದನು. ಚಿತ್ರಾಂಗದೆಯು ಧನಂಜಯನಿಂದ ಅವನಿಗೆ ಅನುರೂಪನಾದ ಮಗನನ್ನು ಪಡೆದಳು. ಚಿತ್ರವಾಹನನ ಆನಂದಕ್ಕೆ ಪಾರವೇ ಇರಲಿಲ್ಲ. ಧನಂಜಯನು ಚಿತ್ರಾಂಗದೆಯನ್ನಾಲಿಂಗಿಸಿ, ಮಗುವಿನ ಶಿರಸ್ಸನ್ನು ಆಘ್ರಾಣಿಸಿ, ಚಿತ್ರವಾಹನನ ಅನುಮತಿಯನ್ನು ಪಡೆದು ಮುಂದೆ ಪ್ರಯಾಣ ಮಾಡಿದನು.

೨೧೫ನೆಯ ಅಧ್ಯಾಯವು ಮುಗಿಯಿತು.

೨೧೬ನೆಯ ಅಧ್ಯಾಯ ಅರ್ಜುನವನವಾಸಪರ್ವ (ಮುಂದುವರಿದಿದೆ.)

## ಅರ್ಜುನನಿಂದ ವರ್ಗಾ ಎಂಬ ಅಪ್ಸರೆಯ ಶಾಪವಿಮೋಚನೆ: ವರ್ಗಾಳ ಆತ್ಮಕಥೆ

ಪಾರಿಕ್ಷಿತ! ಮಣಿಪೂರದಿಂದ ಹೊರಟ ಧನಂಜಯನು ದಕ್ಷಿಣ ಸಮುದ್ರದ ತೀರಪ್ರದೇಶಗಳಲ್ಲಿರುವ ಪುಣ್ಯಕ್ಷೇತ್ರಗಳಿಗೆ ಪ್ರಯಾಣ ಹೊರಟನು. ಆ ಪುಣ್ಯಕ್ಷೇತ್ರಗಳೆಲ್ಲವೂ ತಪಸ್ವಿಗಳ ಸಾನ್ನಿಧ್ಯದಿಂದ ಪಾವನವಾಗಿದ್ದುವು. ಆ ಪ್ರದೇಶದಲ್ಲಿ ಐದು ವಿಭಾಗಗಳಿದ್ದುವು. ಪ್ರತಿಯೊಂದು ವಿಭಾಗದಲ್ಲಿಯೂ ಒಂದೊಂದು ಪುಣ್ಯತೀರ್ಥವಿದ್ದಿತು. ಅವುಗಳ ಸುತ್ತಲೂ ಋಷಿ-ಮಹರ್ಷಿಗಳು ತಪಶ್ಚರಣೆಮಾಡುತ್ತಿದ್ದರು. ಸರೋವರಗಳು ನಯನಮನೋಹರವಾಗಿದ್ದು ಪರಿಶುದ್ಧವಾದ ನೀರಿನಿಂದ ಕೂಡಿದ್ದುವು. ಅಗಸ್ತ್ಯತೀರ್ಥ, ಸೌಭದ್ರತೀರ್ಥ, ಪೌಲೋಮತೀರ್ಥ, ಅಶ್ವಮೇಧಯಾಗದ ಫಲವನ್ನೀಯುವ ಕಾರಂಧಮತೀರ್ಥ, ಪಾಪಪರಿಹಾರಕವಾದ ಭರದ್ವಾಜತೀರ್ಥ–ಇವೇ ಆ ಐದು ಸರೋವರಗಳು. ಆದರೆ ಅಂತಹ ಪವಿತ್ರಸರೋವರಗಳನ್ನು ಅಲ್ಲಿದ್ದ ಧರ್ಮಬುದ್ಧಿಯುಳ್ಳ ತಪಸ್ವಿಗಳು ವರ್ಜ್ಯಮಾಡಿದ್ದರು. ಧನಂಜಯನಿಗದು ಬಹಳ ಆಶ್ಚರ್ಯವೆನಿಸಿತು. ಮಹರ್ಷಿಗಳು ಅಂತಹ ಪವಿತ್ರವಾದ, ನಯನ

ಮನೋಹರವಾದ ಸರೋವರಗಳನ್ನು ಬಿಟ್ಟು ಬೇರೆಡೆಗೆ ಹೋಗಿ ತಮ್ಮ ಸ್ನಾನಾಹ್ನಿಕಗಳನ್ನು ಮಾಡುತ್ತಿದ್ದರು. ಧನಂಜಯನು ಅದರ ಕಾರಣವನ್ನು ತಿಳಿಯಲು ಮಹರ್ಷಿಗಳ ಬಳಿಗೆ ಹೋಗಿ ಬದ್ಧಾಂಜಲಿಪುಟನಾಗಿ ಕೇಳಿದನು:

"ಮಹರ್ಷಿಗಳೇ! ಪವಿತ್ರವಾದ ಈ ಐದು ಸರೋವರಗಳು ಬ್ರಹ್ಮನಿಷ್ಠರಿಂದ ಪರಿತ್ಯಜಿಸಲ್ಪಟ್ಟಿರುವುದೇಕೆ?"

ಮಹರ್ಷಿಗಳು ಉತ್ತರಿಸಿದರು :

"ಧನಂಜಯ! ಈ ಐದು ಸರೋವರಗಳಲ್ಲಿ ಒಂದೊಂದರಲ್ಲಿಯೂ ಒಂದೊಂದು ಮೊಸಳೆಯು ವಾಸಮಾಡುತ್ತಿದೆ. ಸ್ನಾನಮಾಡಲು ಸರೋವರಕ್ಕಿಳಿದವರನ್ನು ಒಡನೆಯೇ ನೀರಿನೊಳಕ್ಕೆ ಸೆಳೆದುಕೊಂಡುಬಿಡುತ್ತದೆ. ಈ ಕಾರಣದಿಂದಲೇ ಈ ಪವಿತ್ರಸರೋವರಗಳು ವರ್ಜ್ಯಮಾಡಲ್ಪಟ್ಟಿವೆ."

ಆ ವಿಷಯವನ್ನು ಕೇಳಿದ ಕೂಡಲೇ ಮಹಾಪರಾಕ್ರಮಿಯಾದ ಧನಂಜಯನು ಋಷಿಸತ್ತಮರು ಬೇಡವೆಂದರೂ ಕೇಳದೇ ಸರೋವರಗಳಲ್ಲಿ ಏನಿದೆಯೆಂದು ಪರೀಕ್ಷಿಸುವ ಸಲುವಾಗಿ ಸರೋವರಗಳ ಬಳಿಗೆ ತೆರಳಿದನು. ಶೂರನಾದ ಅರ್ಜುನನು ಮೊದಲನೆಯದಾಗಿ ಮಹರ್ಷಿಯಾದ ಸುಭದ್ರನ ಸೌಭದ್ರಸರೋವರದ ಸಮೀಪಕ್ಕೆ ಬಂದು, ಸರೋವರದಲ್ಲಿಳಿದು ಸ್ನಾನ ಮಾಡಲು ಉಪಕ್ರಮಿಸಿದನು.

ಮರುಕ್ಷಣದಲ್ಲಿಯೇ ನೀರಿನಲ್ಲಿದ್ದ ದೊಡ್ಡದಾದೊಂದು ಮೊಸಳೆಯು ಪುರುಷವ್ಯಾಘ್ರನಾದ, ಕುಂತೀಪುತ್ರನಾದ ಧನಂಜಯನ ಕಾಲುಗಳನ್ನು ಬಲವಾಗಿ ಹಿಡಿದೆಳೆಯಿತು. ಭುಜಬಲಪರಾಕ್ರಮವುಳ್ಳ, ಮಹಾಸಾಹಸಿಯಾದ ಅರ್ಜುನನು ಮೊಸಳೆಯ ಬಾಯಿಗೆ ಕೈ ಹಾಕಿ ಅದರ ಎರಡು ದವಡೆಗಳನ್ನೂ ಹಿಗ್ಗಿಸಿ, ಕಾಲುಗಳನ್ನು ಬಿಡಿಸಿಕೊಂಡು ಆ ಮೊಸಳೆಯನ್ನೂ ಸೆಳೆದುಕೊಂಡು ಸರೋವರದ ಸೋಪಾನಗಳನ್ನು ಹತ್ತಿದನು. ಮರುಕ್ಷಣದಲ್ಲಿಯೇ ಮೊಸಳೆಯು ಅದೃಶ್ಯವಾಗಿ ಅದರ ಸ್ಥಾನದಲ್ಲಿ ಮಂದಸ್ಮಿತೆಯಾದ ಯುವತಿಯೊಬ್ಬಳು ಪಾರ್ಥನ ಹತ್ತಿರದಲ್ಲಿ ನಿಂತಿದ್ದಳು. ಸಕಲವಿಧವಾದ ಆಭರಣಗಳಿಂದಲೂ ಅಲಂಕೃತಳಾಗಿದ್ದ ಆ ಯುವತಿಯು ದೇವಕನ್ಯೆಯಂತೆ ತನ್ನ ಸೌಂದರ್ಯಾತಿಶಯದಿಂದ ಪ್ರಕಾಶಿಸ

ತೊಡಗಿದಳು. ಆ ಮಹಾದ್ಭುತವನ್ನು ಕಂಡು ಧನಂಜಯನು ಪರಮಪ್ರೀತನಾಗಿ ಆ ಯುವತಿಯನ್ನು ಕೇಳಿದನು : "ಕಲ್ಯಾಣಿ! ನೀನು ಯಾರು? ಇದುವರೆಗೂ ನೀರಿನಲ್ಲಿ ಮೊಸಳೆಯ ರೂಪದಲ್ಲಿದ್ದುದೇಕೆ? ಋಷಿಯೊಬ್ಬನ ಶಾಪದಿಂದಾಗಿ ನಿನಗೀ ದುರವಸ್ಥೆಯು ಪ್ರಾಪ್ತವಾಗಿರಬಹುದಲ್ಲವೇ? ಋಷಿಯ ಶಾಪಕ್ಕೊಳಗಾಗಲು ನೀನು ಮಾಡಿರುವ ಅಂತಹ ಪಾಪಕೃತ್ಯವಾದರೂ ಯಾವುದು?"

"ಮಹಾಬಾಹುವೇ! ನಾನೊಬ್ಬ ಅಪ್ಸರೆಯು. ದೇವಾರಣ್ಯದಲ್ಲಿ ವಿಹರಿಸುವವಳು. ಕುಬೇರನ ಪ್ರೀತಿಗೆ ಪಾತ್ರಳಾಗಿದ್ದವಳು. ನನ್ನನ್ನು 'ವರ್ಗಾ' ಎಂದು ಕರೆಯುತ್ತಾರೆ. ನನಗೆ ನಾಲ್ವರು ಸಖಿಯರೂ ಇದ್ದಾರೆ. ನಾವೆಲ್ಲರೂ ನಮಗೆ ಇಷ್ಟಬಂದಲ್ಲಿಗೆ ಹೋಗುವ ಶಕ್ತಿಯನ್ನೂ ಪಡೆದಿದ್ದೆವು.

ನಾಲ್ವರು ಸಖಿಯರಿಂದೊಡಗೂಡಿದ ನಾನು ಒಂದಾನೊಂದು ದಿನ ಕುಬೇರನ ಅರಮನೆಗೆ ಹೋಗುತ್ತಿದ್ದೆನು. ನಾವು ಹೋಗುತ್ತಿದ್ದ ದಾರಿಯಲ್ಲಿ ಒಂದು ಆಶ್ರಮವಿದ್ದಿತು. ಸುಂದರಕಾಯನಾದ ಬ್ರಾಹ್ಮಣನೊಬ್ಬನು ವ್ರತನಿಷ್ಠನಾಗಿದ್ದುಕೊಂಡು ವೇದಾಧ್ಯಯನಮಾಡುತ್ತಾ ಏಕಾಂತದಲ್ಲಿದ್ದುದನ್ನು ಕಂಡೆವು. ಆ ವನದ ಭಾಗವೆಲ್ಲವೂ ಆತನ ತಪೋಮಹಿಮೆಯಿಂದ ಬೆಳಗುತ್ತಿದ್ದಿತು. ಸೂರ್ಯನು ಪ್ರಪಂಚವನ್ನು ಬೆಳಗುವ ರೀತಿಯಲ್ಲಿ – ಆ ತಪೋವನವನ್ನು ತನ್ನ ಮಹತ್ತರವಾದ ತೇಜಸ್ಸಿನಿಂದ ಆ ಬ್ರಾಹ್ಮಣನು ಬೆಳಗುತ್ತಿದ್ದನು.

ಆತನ ತೇಜಸ್ಸನ್ನೂ ಮತ್ತು ಆತನ ಶರೀರದ ಅಮಿತಸೌಂದರ್ಯವನ್ನೂ ಕಂಡು ಮೋಹಿತರಾದ ನಾವು ಆತನ ತಪಸ್ಸಿಗೆ ವಿಘ್ನವನ್ನುಂಟುಮಾಡುವ ಅಪೇಕ್ಷೆಯಿಂದ ಆ ಆಶ್ರಮಕ್ಕೆ ಹೋದೆವು. ನಾನೂ, ಸೌರಭೇಯೀ, ಸಮೀಚೀ, ಬುದ್ಬುದಾ, ಲತಾ – ಐವರೂ ಸೇರಿ ಮಹರ್ಷಿಯ ತಪಸ್ಸಿಗೆ ವಿಘ್ನವನ್ನುಂಟುಮಾಡಲು ಮೊದಲುಮಾಡಿದೆವು. ಒಬ್ಬರು ಹಾಡುವುದು, ಮತ್ತೊಬ್ಬರು ಹಾಡನ್ನನುಸರಿಸಿ ಕುಣಿಯುವುದು, ಇನ್ನೊಬ್ಬರು ಪುಷ್ಪ-ಗಂಧಗಳನ್ನು ಆಶ್ರಮದಲ್ಲೆಲ್ಲಾ ಎರಚುವುದು, ನಗುವುದು– ಇತ್ಯಾದಿಗಳಿಂದ ಆ ಬ್ರಾಹ್ಮಣನ ಮನಸ್ಸನ್ನು ಕ್ಷೋಭೆಗೊಳಿಸಲು ಪ್ರಯತ್ನಿಸಿದೆವು. ಆದರೆ ಜಿತೇಂದ್ರಿಯನಾದ ಆ ಬ್ರಾಹ್ಮಣಯುವಕನು ನಮ್ಮ ಸೌಂದರ್ಯಕ್ಕೆ ಮರುಳಾಗುವುದಂತಿರಲಿ ; ಕಣ್ಣೆತ್ತಿ ಸಹ ನಮ್ಮನ್ನು ಒಮ್ಮೆಯಾದರೂ

ನೋಡಲಿಲ್ಲ. ಧ್ಯಾನಯೋಗದಲ್ಲಿ ನಿಶ್ಚಲನಾಗಿ ಕುಳಿತಿದ್ದನು. ನಾವು ಮಾಡುತ್ತಿದ್ದ ಕುಚೇಷ್ಟೆಗಳಿಂದ ಆತನ ಹೃದಯದಲ್ಲಿ ಯಾವ ವೈಕಲ್ಯವೂ ಉಂಟಾಗಲಿಲ್ಲ. ಧ್ಯಾನಾನಂತರದಲ್ಲಿಯೂ ಆ ಬ್ರಾಹ್ಮಣನು ನಮ್ಮನ್ನು ಕಂಡು ವ್ಯಾಮೋಹಗೊಳ್ಳಲಿಲ್ಲ. ಕುಪಿತನಾಗಿ – 'ಮೊಸಳೆಗಳ ರೂಪವನ್ನು ಹೊಂದಿ ನೂರು ವರ್ಷಗಳ ಕಾಲ ನೀರಿನಲ್ಲಿ ವಾಸಮಾಡಿರಿ' – ಎಂದು ಶಪಿಸಿಬಿಟ್ಟನು."

೨೧೬ನೆಯ ಅಧ್ಯಾಯವು ಮುಗಿಯಿತು.

೨೧೭ನೆಯ ಅಧ್ಯಾಯ ಅರ್ಜುನವನವಾಸಪರ್ವ (ಮುಂದುವರಿದಿದೆ.)

## ವರ್ಗಾಳ ಪ್ರಾರ್ಥನೆಯಂತೆ ಅರ್ಜುನನಿಂದ ಇತರ ನಾಲ್ವರು ಅಪ್ಸರೆಯರ ಶಾಪವಿಮೋಚನೆ : ಮಣಿಪೂರದಲ್ಲಿ ಚಿತ್ರಾಂಗದೆಯನ್ನು ಪುನಃ ಕಂಡು ಗೋಕರ್ಣತೀರ್ಥಕ್ಕೆ ಅರ್ಜುನನ ಪ್ರಯಾಣ

"ಅರ್ಜುನ! ಋಷಿಯ ಶಾಪವನ್ನು ಕೇಳಿ ನಾವೆಲ್ಲರೂ ಬಹಳ ದುಃಖಿತರಾದೆವು. ವ್ರತನಿಷ್ಠನಾದ ಬ್ರಾಹ್ಮಣನ ಕೋಪವನ್ನು ಶಾಂತಗೊಳಿಸಲು ನಾವೆಲ್ಲರೂ ಸೇರಿ ಆತನನ್ನು ದೈನ್ಯದಿಂದ ಪ್ರಾರ್ಥಿಸಿದೆವು :

"ಮಹಾನುಭಾವನೇ! ಯೌವನಮದದಿಂದಲೂ, ಸೌಂದರ್ಯಮದದಿಂದಲೂ ಕೊಬ್ಬಿದವರಾಗಿ ಮನ್ಮಥನಿಂದ ಚೋದಿತರಾಗಿ ನಾವು ಈ ಅಕಾರ್ಯವನ್ನು ಮಾಡಿಬಿಟ್ಟೆವು. ಅಬಲೆಯರಾದ ನಮ್ಮನ್ನು ಕ್ಷಮಿಸುವುದು ನಿನಗೆ ಯೋಗ್ಯವಾಗಿದೆ. ತಪೋಧನನಾದ, ಜಿತೇಂದ್ರಿಯನಾದ ನಿನ್ನನ್ನು ಪ್ರಲೋಭಗೊಳಿಸಲು ಬಂದಿರುವುದೇ (ಅದರಲ್ಲಿ ವಿಫಲರಾಗಿರುವುದೇ) ನಮ್ಮ ಸಂಪೂರ್ಣವಾದ ವಧೆಯಾದಂತಾಗಿದೆ. ಆದರೂ :

**ಅವಧ್ಯಾಸ್ತು ಸ್ತ್ರಿಯಃ ಸೃಷ್ಟಾ ಮನ್ಯನ್ತೇ ಧರ್ಮಚಾರಿಣಃ ।**
**ತಸ್ಮಾದ್ಧರ್ಮೇಣ ವರ್ಧ ತ್ವಂ ನಾಸ್ಮಾನ್ಹಿಂಸಿತುಮರ್ಹಸಿ ॥೪॥**

ಸ್ತ್ರೀಹತ್ಯೆಯನ್ನು ಮಾಡಕೂಡದೆಂದು ಧರ್ಮಮಾರ್ಗಾನುಸಾರಿಗಳು ಹೇಳುತ್ತಾರೆ. ಬ್ರಾಹ್ಮಣೋತ್ತಮನೇ! ಈ ವಿಷಯವು ನಿನಗೂ ತಿಳಿದಿದೆ.

ಯಲ್ಲವೇ? ನಿನ್ನ ಧಾರ್ಮಿಕಬುದ್ಧಿಯೂ ಹೆಚ್ಚಲಿ. ನಮ್ಮನ್ನು ದಯೆಯಿಟ್ಟು ಹಿಂಸಿಸಬೇಡ. ಮೇಲಾಗಿ :

**ಸರ್ವಭೂತೇಷು ಧರ್ಮಜ್ಞ ಮೈತ್ರೋ ಬ್ರಾಹ್ಮಣ ಉಚ್ಯತೇ ।**
**ಸತ್ಯೋ ಭವತು ಕಲ್ಯಾಣ ಏಷ ವಾದೋ ಮನೀಷಿಣಾಮ್ ॥೫॥**

ಧರ್ಮಜ್ಞನೇ! ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಬ್ರಾಹ್ಮಣನು ಮೈತ್ರಿಯಿಂದಿರುವನೆಂದು ಹೇಳಲ್ಪಟ್ಟಿದೆ. ಮಂಗಳಸ್ವರೂಪನೇ! ಮನೀಷಿಗಳಾದವರ ಆ ವಾಕ್ಯವು ಸತ್ಯವಾಗಿ ಪರಿಣಮಿಸಲಿ.

**ಶರಣಂ ಚ ಪ್ರಪನ್ನಾನಾಂ ಶಿಷ್ಟಾಃ ಕುರ್ವನ್ತಿ ಪಾಲನಮ್ ।**
**ಶರಣಂ ತ್ವಾಂ ಪ್ರಪನ್ನಾಃ ಸ್ಮಸ್ತಸ್ಮಾತ್ತ್ವಂ ಕ್ಷನ್ತುಮರ್ಹಸಿ ॥೬॥**

ಶರಣಾಗತರಾದ ದೀನರ ರಕ್ಷಣೆಯನ್ನು ಶಿಷ್ಟರು ಖಂಡಿತವಾಗಿಯೂ ಮಾಡುತ್ತಾರೆ. ನಾವು ನಿನಗೆ ಶರಣಾಗತರಾಗಿದ್ದೇವೆ. ಅಂಗಲಾಚಿ ಬೇಡಿಕೊಳ್ಳುತ್ತೇವೆ. ನಮ್ಮನ್ನು ಕ್ಷಮಿಸುವುದು ಧರ್ಮಾತ್ಮನಾದ ನಿನಗೆ ಸಾಧುವಾಗಿದೆ.” ಹೀಗೆಲ್ಲಾ ಬೇಡಿಕೊಂಡೆವು.

ಚಂದ್ರ-ಸೂರ್ಯರ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಆ ಬ್ರಾಹ್ಮಣೋತ್ತಮನು ನಮ್ಮ ದೈನ್ಯಪ್ರಾರ್ಥನೆಗೆ ಮನ್ನಣೆಯನ್ನಿತ್ತು ಪ್ರಸನ್ನನಾಗಿ ಹೇಳಿದನು :

“ಅಪ್ಸರೆಯರೇ! ಸಾಮಾನ್ಯವಾಗಿ ನೂರು, ಸಾವಿರ, ಕೋಟಿ–ಇತ್ಯಾದಿ ಸಂಖ್ಯಾವಾಚಕಗಳು ಅಕ್ಷಯವಾಚಕವಾದುವುಗಳೇ ಹೊರತು ನಿರ್ಣೀತವಾದ ಸಂಖ್ಯೆಗಳಲ್ಲ. ನೂರೆಂದರೆ ಎಷ್ಟು ನೂರು ಬೇಕಾದರೂ ಆಗಬಹುದು. ಆದರೆ ನಾನು ಹೇಳಿರುವ ನೂರು ವರ್ಷಗಳು ನಿಮ್ಮ ವಿಷಯದಲ್ಲಿ ನಿರ್ಣೀತವಾದ ಒಂದೇ ನೂರು ವರ್ಷಗಳಾಗಿರುತ್ತವೆ. ಅಕ್ಷಯವಾಚಕವಾಗಿರುವುದಿಲ್ಲ. ನೀವು ಮೊಸಳೆಗಳಾಗಿ ನೀರಿನಲ್ಲಿದ್ದು ನೀರಿಗಿಳಿದವರನ್ನು ಸೆಳೆದು ತಿನ್ನುತ್ತಾ ಒಂದು ನೂರು ವರ್ಷಗಳ ಪರ್ಯಂತವಾಗಿ ನೀರಿನಲ್ಲಿ ವಾಸಮಾಡುತ್ತಿರಿ. ನೂರು ವರ್ಷಗಳು ಮುಗಿದೊಡನೆಯೇ ಮಹಾನುಭಾವನೊಬ್ಬನು ಬಂದು ನಿಮ್ಮನ್ನು ನೀರಿನಿಂದ ಹೊರಗೆಳೆಯುವನು. ಅಂದೇ ನಿಮ್ಮ ಶಾಪ ವಿಮೋಚನೆಯಾಗುವುದು. ನೀವು ನಿಮ್ಮ-ನಿಮ್ಮ ಪೂರ್ವರೂಪಗಳನ್ನು

ಹೊಂದುವಿರಿ. ನಾನು ಪರಿಹಾಸಕ್ಕಾದರೂ ಸುಳ್ಳನ್ನಾಡಿದವನಲ್ಲ. ನೀವು ನೂರು ವರ್ಷಗಳವರೆಗೂ ಮೊಸಳೆಗಳ ರೂಪದಲ್ಲಿ ವಾಸಮಾಡುತ್ತಿದ್ದು, ಮೃತ್ಯುಸರೋವರಗಳೆಂಬ ಭೀತಿಯನ್ನು ಹುಟ್ಟಿಸುತ್ತಿದ್ದ ಆ ಸರೋವರಗಳು ನಿಮ್ಮ ಶಾಪವಿಮೋಚನೆಯಾದೊಡನೆಯೇ 'ನಾರೀತೀರ್ಥ' ಗಳೆಂಬ ಹೆಸರಿನಿಂದ ಖ್ಯಾತವಾಗುವುವು. ಮನನಶೀಲರಾದ ಜಿತೇಂದ್ರಿಯರನ್ನು ಪಾವನಗೊಳಿಸುವ ಪುಣ್ಯತೀರ್ಥಗಳಾಗುವುವು."

ಬ್ರಾಹ್ಮಣನ ಮಾತುಗಳನ್ನು ಕೇಳಿ ನಾವೆಲ್ಲರೂ ಆತನಿಗೆ ಪ್ರದಕ್ಷಿಣ ಪೂರ್ವಕವಾಗಿ ನಮಸ್ಕಾರಗಳನ್ನು ಮಾಡಿ, ಬಹುದುಃಖಿತರಾಗಿ ಭಾರವಾದ ಹೃದಯಗಳಿಂದ ಆಶ್ರಮವನ್ನು ಬಿಟ್ಟು – "ಯಾವ ಸರೋವರಕ್ಕೆ ಹೋಗಿ ಸೇರಿಕೊಳ್ಳೋಣ? ಯಾವ ಸರೋವರದಲ್ಲಿ ಸೇರಿಕೊಂಡರೆ ನಮ್ಮನ್ನು ಆ ಸರೋವರದಿಂದ ಮೇಲಕ್ಕೆತ್ತಿ ಶಾಪವಿಮುಕ್ತರನ್ನಾಗಿ ಮಾಡುವ ಮಹಾನುಭಾವನು ಅತ್ಯಲ್ಪಕಾಲದಲ್ಲಿಯೇ ಅಲ್ಲಿಗೆ ಬಂದು ನಮ್ಮ ಪೂರ್ವರೂಪಗಳನ್ನು ದಯಪಾಲಿಸುತ್ತಾನೆ?" – ಎಂಬುದನ್ನು ಪರಸ್ಪರವಾಗಿ ಆಲೋಚಿಸುತ್ತಾ ಹೋಗುತ್ತಿದ್ದೆವು. ಆ ವೇಳೆಗೆ ಸರಿಯಾಗಿ ದೇವರ್ಷಿಗಳಾದ ನಾರದರು ನಮ್ಮೆದುರಿಗೇ ಬಂದರು. ಅಮಿತತೇಜಸ್ವಿಗಳಾದ ನಾರದರನ್ನು ನೋಡಿದೊಡನೆಯೇ ನಮಗೊದಗಿದ್ದ ಕಷ್ಟದ ವಿಸ್ಮರಣೆಯಾಗಿ ಅಮಿತಾನಂದವಾಯಿತು. ಮಹರ್ಷಿಗಳಿಗೆ ಅಭಿವಾದನಮಾಡಿ ತಲೆತಗ್ಗಿಸಿಕೊಂಡು ಅವರ ಮುಂದೆ ಬದ್ಧಾಂಜಲಿಗಳಾಗಿ ನಿಂತುಕೊಂಡೆವು. ಮಹರ್ಷಿಗಳನ್ನು ನೋಡಿ ಸಂತೋಷಗೊಂಡೆವಾದರೂ ಬ್ರಾಹ್ಮಣಶಾಪದ ಸ್ಮರಣೆಯು ಬಂದೊಡನೆಯೇ ನಮ್ಮ ಮುಖಗಳು ಕುಂದಿದುವು. ಅದನ್ನು ಕಂಡು ನಾರದರು ನಮ್ಮ ದುಃಖಕ್ಕೆ ಕಾರಣವೇನೆಂಬುದನ್ನು ನಮ್ಮಿಂದ ವಿಶದವಾಗಿ ಕೇಳಿ ತಿಳಿದುಕೊಂಡು ಅನಂತರ ಹೇಳಿದರು :

"ದಕ್ಷಿಣಸಮುದ್ರತೀರದ ತಗ್ಗಿನ ಪ್ರದೇಶದಲ್ಲಿ ಐದು ಸರೋವರ ಗಳಿಂದ ಕೂಡಿರುವ ಪುಣ್ಯಸ್ಥಳಗಳಿವೆ. ಆ ಸರೋವರಗಳು ಬಹಳ ಸುಂದರ ವಾಗಿರುವುದು ಮಾತ್ರವಲ್ಲದೇ–ಪರಮಪವಿತ್ರವಾದ ಸರೋವರಗಳೆಂದೂ ಪ್ರಸಿದ್ಧವಾಗಿವೆ. ನೀವು ಈ ಕೂಡಲೇ ಅಲ್ಲಿಗೆ ಹೋಗಿರಿ. ಮಹಾತ್ಮನಾದ,

ಪಾಂಡುಪುತ್ರನಾದ, ಪುರುಷವ್ಯಾಘ್ರನಾದ ಧನಂಜಯನು ನಿಮ್ಮನ್ನು ಈ ದುಃಖದಿಂದ ಪಾರುಮಾಡುತ್ತಾನೆ. ಇದರಲ್ಲಾವ ಸಂಶಯವೂ ಇಲ್ಲ."

ಪಾರ್ಥ! ನಾರದರ ಆ ಮಾತುಗಳನ್ನು ಕೇಳಿ ಅವರು ಹೇಳಿದಂತೆಯೇ ನಾವೈವರೂ ಈ ಐದು ಸರೋವರಗಳಲ್ಲಿ ಸೇರಿಕೊಂಡೆವು. ಅವರು ಹೇಳಿದ್ದಂತೆ ಇಂದು ನಾನು ನಿನ್ನಿಂದ ಶಾಪವಿಮುಕ್ತಿಯನ್ನು ಹೊಂದಿರುತ್ತೇನೆ. ಆದರೆ ನನ್ನ ಸಖಿಯರಿನ್ನೂ ಮೊಸಳೆಗಳ ರೂಪಗಳಲ್ಲಿಯೇ ಇರುತ್ತಾರೆ. ವೀರಾಧಿವೀರನೇ! ಅವರನ್ನೂ ಶಾಪದಿಂದ ವಿಮೋಚಿಸುವ ಶುಭಕಾರ್ಯವನ್ನು ಮಾಡುವಂತೆ ಕೈಜೋಡಿಸಿ ಬೇಡುವೆನು."

ಅಪ್ಸರೆಯ ಮಾತಿನಂತೆ ಧನಂಜಯನು ಸಂತುಷ್ಟಹೃದಯನಾಗಿ ಮೊಸಳೆಗಳ ರೂಪಗಳಲ್ಲಿದ್ದ ಉಳಿದ ನಾಲ್ವರು ಅಪ್ಸರೆಯರನ್ನೂ ಸರೋವರಗಳಿಂದ ಮೇಲಕ್ಕೆಳೆದು ತಂದನು.

ಪಾರ್ಥನ ಸಂಸ್ಪರ್ಶವಾದೊಡನೆಯೇ ಆ ನಾಲ್ವರೂ ಶಾಪದಿಂದ ವಿಮುಕ್ತರಾಗಿ ಸ್ವಸ್ವರೂಪಗಳನ್ನು ಪಡೆದು ಪ್ರಕಾಶಿಸಿದರು.

ಅರ್ಜುನನು ಮೃತ್ಯುರೂಪಗಳಾಗಿದ್ದ ಸರೋವರಗಳನ್ನು ಪವಿತ್ರಸರೋವರಗಳನ್ನಾಗಿ ಮಾಡಿ, ಅಪ್ಸರೆಯರಿಗೆ ಮನಬಂದಲ್ಲಿಗೆ ಹೋಗಲು ಅನುಮತಿಯನ್ನಿತ್ತು, ಪುನಃ ಚಿತ್ರಾಂಗದೆಯನ್ನು ನೋಡುವ ತವಕದಿಂದ ಮಣಿಪೂರಕ್ಕೆ ಪ್ರಯಾಣಮಾಡಿದನು.

ಚಿತ್ರಾಂಗದೆಯಲ್ಲಿ ಧನಂಜಯನಿಗೆ ಹುಟ್ಟಿದ ಮಗುವಿಗೆ 'ಬಭ್ರುವಾಹನ' ಎಂದು ಹೆಸರನ್ನಿಟ್ಟಿದ್ದರು. ಮಗುವನ್ನು ನೋಡಿ ಆನಂದತುಂದಿಲನಾದ ಪಾರ್ಥನು ರಾಜನಾದ ಚಿತ್ರವಾಹನನಿಗೆ ಹೇಳಿದನು :

**ಚಿತ್ರಾಙ್ಗದಾಯಾಃ ಶುಲ್ಕಂ ತ್ವಂ ಗೃಹಾಣ ಬಭ್ರುವಾಹನಮ್ ।**
**ಅನೇನ ಚ ಭವಿಷ್ಯಾಮಿ ಋಣಾನ್ಮುಕ್ತೋ ನರಾಧಿಪ ॥೨೫॥**

"ನರಾಧಿಪನೇ! ಚಿತ್ರಾಂಗದೆಗಾಗಿ ನಾನು ಕೊಡಬೇಕಾಗಿದ್ದ ಕನ್ಯಾಶುಲ್ಕರೂಪವಾಗಿ ಈ ಬಭ್ರುವಾಹನನನ್ನು ಸ್ವೀಕರಿಸು. ಇದರಿಂದ ನಾನು ಋಣಮುಕ್ತನಾಗುತ್ತೇನೆ."

ಪಾಂಡುನಂದನನು ಚಿತ್ರವಾಹನನಿಗೆ ಹೀಗೆ ಹೇಳಿ ಪತ್ನಿಯಾದ ಚಿತ್ರಾಂಗದೆಯನ್ನು ಕುರಿತು ಹೇಳಿದನು :

"ಭದ್ರೇ! ನಿನಗೆ ಮಂಗಳವಾಗಲಿ. ಬಭ್ರುವಾಹನನನ್ನು ಕಾಪಾಡಿಕೊಂಡು ನೀನು ಇಲ್ಲಿಯೇ ಇರು. ನಾನು ಇಂದ್ರಪ್ರಸ್ಥಕ್ಕೆ ಪ್ರಯಾಣಮಾಡಿದನಂತರ ನಿನ್ನನ್ನು ಅಲ್ಲಿಗೆ ಕರೆಸಿಕೊಳ್ಳುತ್ತೇನೆ. ಆಗ ನನ್ನ ತಾಯಿಯಾದ ಕುಂತಿಯನ್ನೂ, ಅಣ್ಣಂದಿರಾದ ಧರ್ಮಜ-ಭೀಮರನ್ನೂ, ಅನುಜರಾದ ನಕುಲ-ಸಹದೇವರನ್ನೂ ಕಾಣಬಹುದಾಗಿದೆ. ಅಲ್ಲಿರುವ ಇನ್ನೂ ಅನೇಕ ಬಾಂಧವರೊಡನೆ ಸೇರಿ ಆನಂದಿಸಬಹುದಾಗಿದೆ. ಧರ್ಮರತನಾದ, ಕುಂತೀಪುತ್ರನಾದ ಯುಧಿಷ್ಠಿರನು ಪ್ರಪಂಚದಲ್ಲಿರುವ ಸಕಲರಾಜರನ್ನೂ ಗೆದ್ದು ಯಾವಾಗ ರಾಜಸೂಯಯಾಗ ಮಾಡುವನೋ–ಆಗ ಪೃಥ್ವಿಯಲ್ಲಿ 'ನೃಪ'ರೆಂದು ಹೆಸರು ಪಡೆದಿರುವ ಎಲ್ಲ ರಾಜರೂ ತಪ್ಪದೇ ಆ ಮಹಾಯಾಗದಲ್ಲಿ ಭಾಗವಹಿಸಲು ಬರುತ್ತಾರೆ. ಆ ಸಮಯದಲ್ಲಿ ನಿನ್ನ ತಂದೆಯವರೂ ಬಹುರತ್ನಗಳೊಡನೆ ಅಲ್ಲಿಗೆ ಬರುತ್ತಾರೆ. ನಿನ್ನ ತಂದೆಯವರ ಸೇವಾನಿಮಿತ್ತವಾಗಿ ನೀನೂ ಅವರೊಡನೆ ಹಸ್ತಿನಾಪುರಕ್ಕೆ ಬಂದೇ ಬರಬೇಕಾಗುತ್ತದೆ. ಆದುದರಿಂದ ರಾಜಸೂಯಯಾಗದ ಸಮಯದಲ್ಲಿ ನಾನು ಪುನಃ ನಿನ್ನನ್ನು ನೋಡುತ್ತೇನೆ. ದುಃಖಿಸಬೇಡ, ರಾಜಕುಮಾರಿ! ನಮ್ಮಿಬ್ಬರ ಪ್ರೇಮದ ಕುರುಹಾಗಿರುವ ಈ ಬಾಲಕನನ್ನು ರಕ್ಷಿಸಿಕೊಂಡಿರು. ನನ್ನ ಪ್ರಾಣಗಳೇ ಬಭ್ರುವಾಹನನ ರೂಪದಲ್ಲಿ ಈ ದೇಶದಲ್ಲಿ ಸಂಚರಿಸುತ್ತಿರುತ್ತವೆ. ಆದುದರಿಂದ ನಿನ್ನ ಪಿತೃವಂಶವರ್ಧಕನಾದ ನಮ್ಮ ಈ ಪ್ರಿಯಪುತ್ರನನ್ನು ಜಾಗರೂಕತೆಯಿಂದ ಸಂರಕ್ಷಿಸು. ಇವನು ಧರ್ಮತಃ ಚಿತ್ರವಾಹನನ ಪುತ್ರನಾಗಿದ್ದರೂ – ಶರೀರಸಂಬಂಧದಿಂದ ನನ್ನ ಪುತ್ರನೂ ಆಗಿರುವುದರಿಂದ ಕುರುವಂಶದವರಿಗೆ ಆನಂದವರ್ಧನನೂ ಆಗಿರುತ್ತಾನೆ. ಪಾಂಡವರಿಗಿವನು ಬಹಳ ಪ್ರೀತಿಪಾತ್ರನಾದ ಮಗನು. ಆದುದರಿಂದ ಇವನನ್ನು ನೀನು ಸ್ವಲ್ಪವಾದರೂ ಅನಾದರಣೆಮಾಡದೇ ಸಂರಕ್ಷಿಸು. ನಾನು ಹೊರಟುಹೋದೆನೆಂಬ ವಿರಹದುಃಖದಿಂದ ಯಾವಾಗಲೂ ಶೋಕಿಸುತ್ತಾ ಕುಳಿತಿರಬೇಡ."

ಜನಮೇಜಯ! ಅರ್ಜುನನು ಚಿತ್ರಾಂಗದೆಗೆ ಇವೇ ಮುಂತಾಗಿ

ಸಮಾಧಾನಕರವಾದ ಮಾತುಗಳನ್ನು ಹೇಳಿ ಮಣಿಪೂರದಿಂದ ಗೋಕರ್ಣಕ್ಷೇತ್ರಕ್ಕೆ ಪ್ರಯಾಣಮಾಡಿದನು.

ಮಹಾದೇವನಾದ ಪಶುಪತಿಯ ಅಧಿಷ್ಠಾನವಾದ, ದರ್ಶನಮಾಡಿದ ಮಾತ್ರದಿಂದಲೇ ಮುಕ್ತಿದಾಯಕವಾದ ಮತ್ತು ಪಾಪಿಷ್ಠನಾದವನೂ ಪರಮಪದಪ್ರಾಪ್ತಿಯ ಅಭಯವನ್ನು ಪರಶಿವನಿಂದ ಪಡೆಯಬಹುದಾದ ಗೋಕರ್ಣಮಹಾಕ್ಷೇತ್ರಕ್ಕೆ ಪಾರ್ಥನು ಆಗಮಿಸಿದನು.

೨೧೭ನೆಯ ಅಧ್ಯಾಯವು ಮುಗಿಯಿತು.

೨೧೮ನೆಯ ಅಧ್ಯಾಯ ಅರ್ಜುನವನವಾಸಪರ್ವ (ಮುಂದುವರಿದಿದೆ.)

## ಪ್ರಭಾಸಕ್ಷೇತ್ರದಲ್ಲಿ ಪಾರ್ಥ–ಕೃಷ್ಣರ ಸಮಾಗಮ : ದ್ವಾರಕೆಗೆ ಪ್ರಯಾಣ

ವೈಶಂಪಾಯನರು ಹೇಳುತ್ತಾರೆ :

**ಸೋಽಪರಾನ್ತೇಷು ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।**
**ಸರ್ವಾಣ್ಯೇವಾನುಪೂರ್ವ್ಯೇಣ ಜಗಾಮಾಮಿತವಿಕ್ರಮಃ ॥೧॥**

"ಜನಮೇಜಯ! ಮಹಾಪರಾಕ್ರಮಿಯಾದ ಅರ್ಜುನನು ಗೋಕರ್ಣದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಪಶ್ಚಿಮಸಮುದ್ರದ ತೀರಪ್ರದೇಶಗಳಲ್ಲಿದ್ದ ಪುಣ್ಯಕ್ಷೇತ್ರಗಳನ್ನೂ, ತೀರ್ಥಗಳನ್ನೂ ಮತ್ತು ದೇವಾಲಯಗಳನ್ನೂ ಅನುಕ್ರಮವಾಗಿ ಸಂದರ್ಶಿಸಿದನು. ಅನಂತರ ಅರ್ಜುನನು ರಮಣೀಯವಾದ ಪ್ರಭಾಸಕ್ಷೇತ್ರಕ್ಕೆ ಪ್ರಯಾಣಮಾಡಿದನು. ಪುಣ್ಯಪ್ರದವಾದ ಮತ್ತು ರಮಣೀಯವಾದ ಪ್ರಭಾಸಕ್ಷೇತ್ರಕ್ಕೆ ಅಪರಾಜಿತನಾದ ಮತ್ತು ಪ್ರಿಯಮಿತ್ರನಾದ ಧನಂಜಯನು ಬಂದಿರುವನೆಂಬ ವಾರ್ತೆಯನ್ನು ಮಧುಸೂದನನು ಕೇಳಿದನು. ಒಡನೆಯೇ ಮಿತ್ರನನ್ನು ಕಾಣುವ ಸಲುವಾಗಿ ಪ್ರಭಾಸತೀರ್ಥಕ್ಕೆ ಮಾಧವನೂ ಪ್ರಯಾಣಮಾಡಿದನು. ಪ್ರಭಾಸತೀರ್ಥದ ತೀರಪ್ರದೇಶದಲ್ಲಿ ಪಾರ್ಥ-ಕೃಷ್ಣರ ಸಮಾಗಮವಾಯಿತು. ಗೆಳೆಯರಿಬ್ಬರೂ ಒಬ್ಬರನ್ನೊಬ್ಬರು ಬಾಚಿತಬ್ಬಿಕೊಂಡರು.

ಪರಸ್ಪರಸಂದರ್ಶನದಿಂದ ಅವರಿಬ್ಬರ ಹೃದಯಗಳಲ್ಲುಂಟಾದ ಆನಂದಕ್ಕೆ ಪಾರವೇ ಇರಲಿಲ್ಲ. ಅವರಿಬ್ಬರದೂ ಕೇವಲ ಆ ಜನ್ಮದ ಸ್ನೇಹ ವಾಗಿರಲಿಲ್ಲ. ಜನ್ಮಾಂತರದ ಸ್ನೇಹವಾಗಿದ್ದಿತು. ಅವರಿಬ್ಬರೂ ಹಿಂದೆ ನರ-ನಾರಾಯಣರೆಂಬ ಋಷಿಗಳಾಗಿದ್ದು ಆಗಲೂ ಇಬ್ಬರೂ ಪ್ರಿಯಸಖರೇ ಆಗಿದ್ದರು.



ಇಬ್ಬರೂ ಗಾಢಾಲಿಂಗನವನ್ನು ಮಾಡಿಕೊಂಡು ಅನಿರ್ವಾಚ್ಯವಾದ ಆತ್ಮಾನಂದವನ್ನು ಅನುಭವಿಸಿದನಂತರ ಪರಸ್ಪರವಾಗಿ ಕುಶಲಪ್ರಶ್ನೆಗಳಾದುವು. ಶ್ರೀಕೃಷ್ಣನು ಅರ್ಜುನನನ್ನು ಪ್ರಶ್ನಿಸಿದನು :

"ಇದೇನು? ಅರ್ಜುನ! ಏಕಾಕಿಯಾಗಿ ತಾಪಸನ ವೇಷವನ್ನು ಧರಿಸಿ ಯಾವ ಕಾರಣದಿಂದ ಈ ಪುಣ್ಯತೀರ್ಥಗಳನ್ನು ಪರ್ಯಟನ ಮಾಡುತ್ತಿರುವೆ?"

ಅರ್ಜುನನು ತಾನು ವನವಾಸಕ್ಕೆ ಹೊರಟಿರುವ ಕಾರಣವನ್ನು ವಿಶದ

ವಾಗಿ ವಿವರಿಸಿದನು. ಎಲ್ಲವನ್ನೂ ಕೇಳಿದನಂತರ ಶ್ರೀಕೃಷ್ಣನು–'ಇದು ಹೀಗೆಯೇ ಸರಿ'–ಎಂದು ಮುಗುಳ್ನಗೆಯೊಡನೆ ಹೇಳಿದನು.

ಪ್ರಭಾಸತೀರ್ಥದಲ್ಲಿ ಸ್ವಲ್ಪಕಾಲ ವಿನೋದದಿಂದಿದ್ದ ಕೃಷ್ಣಾರ್ಜುನರು ರೈವತಕಪರ್ವತಕ್ಕೆ ವಿಹಾರಾರ್ಥವಾಗಿ ತೆರಳಿದರು.

ಶ್ರೀಕೃಷ್ಣನ ನಿರ್ದೇಶನದಂತೆ ಆ ಮೊದಲೇ ರೈವತಕಪರ್ವತವು ಅನೇಕ ಶಿಲ್ಪಿಗಳಿಂದ ನಯನಮನೋಹರವಾಗಿ ಸಿಂಗರಿಸಲ್ಪಟ್ಟಿದ್ದಿತು. ಆಹಾರ ಪದಾರ್ಥಗಳು ಸಂಗ್ರಹಿಸಲ್ಪಟ್ಟಿದ್ದುವು. ಪರ್ವತದ ಸೊಬಗನ್ನು ನೋಡಿ ಆನಂದಿಸಿ, ತಮಗಾಗಿ ಸಿದ್ಧಪಡಿಸಿದ್ದ ಮೃಷ್ಟಾನ್ನವನ್ನು ಭುಂಜಿಸಿ, ತಾಳ ಮೃದಂಗ-ಗೀತಗಳಿಂದ ಕೂಡಿದ, ಹೃದಯಾನಂದಕರವಾದ ನರ್ತಕರ ನಾಟ್ಯವನ್ನು ಶ್ರೀಕೃಷ್ಣನೊಡನೆ ಅರ್ಜುನನು ವೀಕ್ಷಿಸಿದನು.

ಮಹಾಮತಿಯಾದ ಅರ್ಜುನನು ನಾಟ್ಯವು ಮುಗಿದನಂತರ ನರ್ತಕರನ್ನು ಶ್ಲಾಘಿಸಿ, ಪ್ರಿಯೋಕ್ತಿಗಳನ್ನಾಡಿ ಕಳುಹಿಸಿಕೊಟ್ಟು ದಿವ್ಯವಾದ ಶಯನದಲ್ಲಿ ಪವಡಿಸಿದನು.

ಹಂಸತೂಲಿಕೆಯ ಮೇಲೆ ಮಲಗಿದ ಅರ್ಜುನನು ತನ್ನ ಪ್ರವಾಸಾನುಭವಗಳನ್ನೆಲ್ಲಾ ಶ್ರೀಕೃಷ್ಣನಿಗೆ ಹೇಳಿದನು. ತಾನು ಕಂಡ ಪವಿತ್ರತೀರ್ಥಗಳು, ಸರೋವರಗಳು, ಗಿರಿ-ದುರ್ಗಗಳು, ನದೀ-ನದಗಳು, ಕಾಡುಗಳು ಎಲ್ಲವನ್ನೂ ಶ್ರೀಕೃಷ್ಣನ ಕಣ್ಣಿಗೆ ಕಟ್ಟುವ ರೀತಿಯಲ್ಲಿ ವರ್ಣಿಸಿದನು. ಹಾಗೆ ಹೇಳುತ್ತಿರುವಾಗಲೇ ಸ್ವರ್ಗಸುಖವನ್ನು ಕೊಡುವುದಾಗಿದ್ದ ದಿವ್ಯವಾದ ಹಾಸಿಗೆಯಲ್ಲಿ ಮಲಗಿದ್ದ ಅರ್ಜುನನು ನಿದ್ರಾಪರವಶನಾದನು.

ಸುಪ್ರಭಾತದ ವೀಣಾವಾದನದಿಂದಲೂ, ಹೊಗಳುಭಟರ ಕರ್ಣಾನಂದಕರವಾದ ಪರಾಕುಗಳಿಂದಲೂ ಅರ್ಜುನನಿಗೆ ಎಚ್ಚರವಾಯಿತು. ಶೌಚ-ಮುಖಮಾರ್ಜನ-ಸ್ನಾನಾದಿಗಳು ಮುಗಿಯುವ ವೇಳೆಗೆ ಸರಿಯಾಗಿ ಶ್ರೀಕೃಷ್ಣನು ಅರ್ಜುನನ ಸಮೀಪಕ್ಕೆ ಬಂದು– 'ಸುಪ್ರಭಾತವಾಯಿತೇ?'– ಎಂದು ಮುಗುಳ್ನಗೆಯೊಡನೆ ಕೇಳಿದನು. ಧನಂಜಯನು ಉತ್ತರಿಸುವಷ್ಟರಲ್ಲಿಯೇ ಶ್ರೀಕೃಷ್ಣನು ಅವನ ಕೈಹಿಡಿದು ಸಮೀಪದಲ್ಲಿಯೇ ನಿಂತಿದ್ದ ಸ್ವರ್ಣಖಚಿತವಾದ ರಥದಲ್ಲಿ ಕುಳ್ಳಿರಿಸಿಕೊಂಡು ದ್ವಾರಕೆಗೆ ಕರೆದೊಯ್ದನು.

ಧನಂಜಯನು ದ್ವಾರಕೆಗೆ ಬರುವನೆಂದು ತಿಳಿದೊಡನೆಯೇ ನಗರಿಯು ತಳಿರು-ತೋರಣಗಳಿಂದ ಅಲಂಕರಿಸಲ್ಪಟ್ಟಿದ್ದಿತು. ಉದ್ಯಾನವನಗಳೂ, ಸೌಧಗಳೂ ವಿಚಿತ್ರರೀತಿಯಲ್ಲಿ ಅಲಂಕೃತವಾಗಿದ್ದುವು. ಧನಂಜಯನನ್ನು ನೋಡಲು ದ್ವಾರಕೆಯ ಸಾವಿರಾರು ಜನರು ರಾಜಬೀದಿಯುದ್ದಕ್ಕೂ ಸಾಲು-ಸಾಲಾಗಿ ನೆರೆದು ನಿಂತರು. ಭೋಜರು, ವೃಷ್ಣಿಗಳು, ಅಂಧಕರು–ಇವರೆಲ್ಲರೂ ಸ್ತ್ರೀ-ಪುರುಷರೇ ಆದಿಯಾಗಿ ಪುಟ್ಟ-ಪುಟ್ಟ ಮಕ್ಕಳನ್ನೂ ಕಂಕುಳುಗಳಲ್ಲೆತ್ತಿಕೊಂಡು ಧನಂಜಯನನ್ನು ನಿರೀಕ್ಷಿಸುತ್ತಾ ನಿಂತರು. ಶ್ರೀಕೃಷ್ಣನ ರಥವು ದ್ವಾರಕೆಗೆ ಪ್ರವೇಶಿಸಿದೊಡನೆಯೇ ಅಖಂಡಜನಸ್ತೋಮವು ಜಯಕಾರಗಳ ಮೂಲಕ ಧನಂಜಯನಿಗೆ ಅದ್ಭುತವಾದ ಸ್ವಾಗತವನ್ನು ನೀಡಿತು. ಧನಂಜಯನೂ ಸಹ ಯಾದವಪ್ರಮುಖರಲ್ಲಿ ತನಗಿಂತಲೂ ಚಿಕ್ಕವರನ್ನು ಆಶೀರ್ವದಿಸಿ, ಹಿರಿಯರಿಂದ ಆಶೀರ್ವಾದಗಳನ್ನು ಪಡೆದು, ತನಗೆ ಸಮಾನರನ್ನು ಆಲಿಂಗಿಸಿ, ಯೋಗ-ಕ್ಷೇಮಗಳನ್ನು ವಿಚಾರಿಸುತ್ತಾ, ಮಂದಹಾಸಪೂರ್ವಕವಾಗಿ ಶ್ರೀಕೃಷ್ಣನ ಅರಮನೆಯನ್ನು ಪ್ರವೇಶಿಸಿದನು. ಸುಖೋಪಭೋಗಗಳಿಗೆ ಬೇಕಾಗುವ ಸಕಲಸಂಭಾರಗಳಿಂದಲೂ ಸಮೃದ್ಧವಾಗಿದ್ದ ಅರಮನೆಯಲ್ಲಿ ಧನಂಜಯನು ಅನೇಕದಿನಗಳವರೆಗೆ ತಂಗಿದನು.”

೨೧೮ನೆಯ ಅಧ್ಯಾಯವು ಮುಗಿಯಿತು.

೨೧೯ನೆಯ ಅಧ್ಯಾಯ ಸುಭದ್ರಾಹರಣಪರ್ವ

## ರೈವತಕಪರ್ವತದ ಉತ್ಸವ: ಸುಭದ್ರೆಯನ್ನು ಕಂಡು ಅರ್ಜುನನು ಮೋಹವಶನಾದುದು: ಸುಭದ್ರಾಹರಣಕ್ಕಾಗಿ ನಿಶ್ಚಯ: ಯುಧಿಷ್ಠಿರನ ಸಮ್ಮತಿ

ವೈಶಂಪಾಯನರು ಹೇಳುತ್ತಾರೆ:

**ತತಃ ಕತಿಪಯಾಹಸ್ಯ ತಸ್ಮಿನ್ರೈವತಕೇ ಗಿರೌ।**
**ವೃಷ್ಣ್ಯನ್ಧಕಾನಾಮಭವದುತ್ಸವೋ ನೃಪಸತ್ತಮ ॥೧॥**

ಜನಮೇಜಯ! ಕೆಲವು ದಿನಗಳನಂತರ ರೈವತಕಪರ್ವತದ ಮೇಲೆ

ಪ್ರತಿವರ್ಷವೂ ನಡೆಯುತ್ತಿದ್ದ ವೃಷ್ಣ್ಯಂಧಕ-ಭೋಜವಂಶದವರಿಗೆ ಪ್ರಧಾನವಾದ ಉತ್ಸವವು ಪ್ರಾರಂಭವಾಯಿತು. ಆ ಉತ್ಸವದ ಸಮಯದಲ್ಲಿ ಯಾದವರು ಸಾವಿರಾರು ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನ-ದಕ್ಷಿಣೆಗಳನ್ನು ಕೊಡುತ್ತಿದ್ದರು.

ವಿಚಿತ್ರರತ್ನಯುಕ್ತವಾದ ಪ್ರಾಸಾದಗಳಿಂದಲೂ, ಕಲ್ಪವೃಕ್ಷಗಳಿಂದಲೂ ರೈವತಕಪರ್ವತವು ತುಂಬಿಹೋಗಿದ್ದು ಇಡೀ ಪ್ರದೇಶವೇ ಬಹುವಾಗಿ ಶೋಭಿಸುತ್ತಿದ್ದಿತು.

ಪರ್ವತದ ಮುಖ್ಯಭಾಗಗಳಲ್ಲಿ ಗಾಯನಸಮಾರಂಭಗಳೂ ನೃತ್ಯಪ್ರದರ್ಶನಗಳೂ ಏರ್ಪಟ್ಟಿದ್ದುವು. ವೃಷ್ಣಿವಂಶದ ಯುವಕರು ಸೊಗಸಾಗಿ ಸಿಂಗರಿಸಿಕೊಂಡು ಸ್ವರ್ಣರಥಗಳಲ್ಲಿ ಕುಳಿತು ಅಟ್ಟಹಾಸದಿಂದ ಸಾಲು-ಸಾಲಾಗಿ ಬರುತ್ತಿದ್ದರು. ದ್ವಾರಕೆಯ ಪ್ರಜೆಗಳು ರಾಜಮನೆತನದವರ ಆ ವೈಭವವನ್ನು ನೋಡಲು ಕಾಲ್ನಡಿಗೆಯಲ್ಲಿಯೂ, ಚಿಕ್ಕದಾದ ಮತ್ತು ದೊಡ್ಡದಾದ ವಾಹನಗಳಲ್ಲಿಯೂ ಪತ್ನೀ-ಪುತ್ರ-ಸೇವಕರಿಂದ ಸಹಿತರಾಗಿ ಸಾವಿರಾರು ಸಂಖ್ಯೆಯಲ್ಲಿ ರೈವತಕಪರ್ವತಕ್ಕೆ ಧಾವಿಸಿ ಬಂದರು.

ಯಾದವರ ನಾಯಕನಾದ ಬಲದೇವನೂ ದಿವ್ಯಾಂಬರಗಳನ್ನು ಧರಿಸಿ, ರೇವತಿಯಿಂದೊಡಗೂಡಿ ರೈವತಕಪರ್ವತಕ್ಕೆ ಬಂದನು. ಅವನ ಹಿಂಬದಿಯಲ್ಲಿ ಅನೇಕಗಾಯಕರು ಬಲಭದ್ರನ ಗುಣಗಾನಮಾಡುತ್ತಾ ಬರುತ್ತಿದ್ದರು. ಅವನ ನಂತರ ಮಹಾಪರಾಕ್ರಮಿಯಾದ ಉಗ್ರಸೇನನು ತನ್ನ ಸಹಸ್ರಪತ್ನಿಯರಿಂದೊಡಗೂಡಿ ಬಂದನು. ಅವನ ಹಿಂದೆಯೂ ಗಾಯಕರು ರಾಜನ ಗುಣಗಾನಮಾಡುತ್ತಾ ಅವನನ್ನೇ ಅನುಸರಿಸಿ ಬರುತ್ತಿದ್ದರು. ಯುದ್ಧದುರ್ಮದರಾದ, ಮಹಾವೀರರಾದ ರೌಕ್ಮಿಣೇಯ (ಪ್ರದ್ಯುಮ್ನ) ಮತ್ತು ಸಾಂಬರು ದಿವ್ಯಮಾಲೆಗಳನ್ನೂ, ದಿವ್ಯಾಂಬರ ಗಳನ್ನೂ ಧರಿಸಿ ದೇವತಾಯುಗ್ಮದಂತೆ ಪ್ರಕಾಶಿಸುತ್ತಾ ರೈವತಕಪರ್ವತಕ್ಕೆ ಬಂದರು. ಅವರಾದ ಮೇಲೆ ಅಕ್ರೂರ, ಸಾರಣ, ಗದ, ಬಭ್ರು, ವಿದೂರಥ, ನಿಶಠ, ಚಾರುದೇಷ್ಣ, ಪೃಥು, ವಿಪೃಥು, ಸತ್ಯಕ, ಸಾತ್ಯಕಿ, ಭಂಗಕಾರ, ಮಹಾರವ, ಹಾರ್ದಿಕ್ಯ, ಉದ್ಧವ–ಇವರೇ ಮೊದಲಾದ ಯಾದವಪ್ರಮುಖರು, ದಿವ್ಯಾಂಬರಧರರಾಗಿ ಪತ್ನೀಸಮೇತ

ರಾಗಿ, ದಿವ್ಯವಾದ ರಥಗಳನ್ನೇರಿ ಗಾಯಕರಿಂದ ಅನುಸೃತರಾಗಿ ಬಂದು ರೈವತಕಪರ್ವತವನ್ನು ಅಲಂಕರಿಸಿದರು.

ಉತ್ಸವವು ಯಥಾಕ್ರಮವಾಗಿ ಪ್ರಾರಂಭವಾದನಂತರ ಕೃಷ್ಣಾರ್ಜುನರು ಎಲ್ಲವನ್ನೂ ಅವಲೋಕಿಸುವ ಕುತೂಹಲದಿಂದ ಪರ್ವತದ ಸುತ್ತಲೂ ಹೊರಟರು. ಅವರು ಪರ್ವತದ ಸೊಬಗನ್ನು ನೋಡುತ್ತಾ ತಪ್ಪಲಿನ ಪ್ರದೇಶದಲ್ಲಿ ಬರುತ್ತಿದ್ದಾಗ–ಚೆಲುವೆಯಾದ, ಸರ್ವಾಭರಣಭೂಷಿತೆಯಾದ, ವಸುದೇವನ ಪುತ್ರಿಯಾದ ಸುಭದ್ರೆಯು ತನ್ನ ಸಖಿಯರೊಡನೆ ಕುಳಿತಿರುವುದನ್ನು ಕಂಡರು. ಸುಭದ್ರೆಯ ಸುಂದರಮುಖಾರವಿಂದಕ್ಕೆ ಆಕರ್ಷಿತವಾದ ಧನಂಜಯನ ನೇತ್ರಭ್ರಮರಗಳು ಅನೇಕನಿಮಿಷಗಳವರೆಗೆ ಪರಾಙ್ಮುಖವಾಗಲಿಲ್ಲ. ಒಡನಾಡಿಯೊಡನೆ ಆಡುತ್ತಿದ್ದ ಮಾತುಗಳೂ ನಿಂತುಹೋದುವು. ಶ್ರೀಕೃಷ್ಣನು ಅದನ್ನು ಗ್ರಹಿಸಿದವನಾಗಿ "ಧನಂಜಯ! ಏನಿದು?"–ಎನ್ನುತ್ತಾ ಗಟ್ಟಿಯಾಗಿ ನಕ್ಕನು.

"ವನವಾಸದಲ್ಲಿಯೇ ಅಭಿಲಾಷೆಯಿರುವವನ ಮನಸ್ಸು ಮನ್ಮಥನ ಬಾಣಗಳ ಆಘಾತಕ್ಕೆ ಸಿಕ್ಕಿ ಉದ್ವಿಗ್ನತೆಗೊಂಡಿತೇ? ಅರ್ಜುನ!

ಇವಳು ನನ್ನ ತಂಗಿ. ಸಾರಣನ ಸಹೋದರಿಯು. 'ಸುಭದ್ರಾ' ಎಂದು ಇವಳ ಹೆಸರು. ನಮ್ಮ ತಂದೆಗೆ ಅಚ್ಚುಮೆಚ್ಚಿನ ಮಗಳು. ಇವಳನ್ನು ಮದುವೆಯಾಗಬೇಕೆಂಬ ಅಭಿಲಾಷೆಯಿದೆಯೇ? ಪಾರ್ಥ!"

ಮುಖಾವಲೋಕನದಿಂದಲೇ ಧನಂಜಯನ ಮನದ ಉದ್ವಿಗ್ನತೆಯನ್ನು ತಿಳಿದವನಾಗಿ ಶ್ರೀಕೃಷ್ಣನು ಹೇಳಿದನು :

"ನಿನಗೆ ಇವಳನ್ನು ಪಡೆಯಬೇಕೆನ್ನುವ ಇಚ್ಛೆಯಿರುವುದಾದರೆ ಈ ವಿಷಯವನ್ನು ನಮ್ಮ ತಂದೆಯವರೊಡನೆ ನಾನೇ ಪ್ರಸ್ತಾಪಮಾಡುವೆನು."

ಅದಕ್ಕೆ ಅರ್ಜುನನು ಹೇಳಿದನು :

**ದುಹಿತಾ ವಸುದೇವಸ್ಯ ವಾಸುದೇವಸ್ಯ ಚ ಸ್ವಸಾ ।**
**ರೂಪೇಣ ಚೈಷಾ ಸಮ್ಪನ್ನಾ ಕಮಿವೈಷಾ ನ ಮೋಹಯೇತ್ ॥೧೮॥**

"ವಸುದೇವನ ಮಗಳು ; ವಾಸುದೇವನ ತಂಗಿ ; ಮೇಲಾಗಿ ಸರ್ವಾಂಗ ಸುಂದರಿಯಾಗಿದ್ದಾಳೆ. ಇಂತಹವಳು ಯಾವ ಮಾನವನ ಮನಸ್ಸನ್ನು

ತಾನೇ ಸೂರೆಗೊಳ್ಳದೇ ಇರುವಳು? ಯಾವನು ತಾನೇ ಇವಳಿಂದ ವ್ಯಾಮೋಹಿತನಾಗದಿರುವನು? ಕೃಷ್ಣ!

**ಕೃತಮೇವ ತು ಕಲ್ಯಾಣಂ ಸರ್ವಂ ಮಮ ಭವೇದ್ಧ್ರುವಮ್ ।**
**ಯದಿ ಸ್ಯಾನ್ಮಮ ವಾರ್ಷ್ಣೇಯೀ ಮಹಿಷೀಯಂ ಸ್ವಸಾ ತವ ॥೧೯॥**

**ಪ್ರಾಪ್ತೌ ತು ಕ ಉಪಾಯಃ ಸ್ಯಾತ್ತಂ ಪ್ರಬ್ರೂಹಿ ಜನಾರ್ದನ ।**
**ಆಸ್ಥಾಸ್ಯಾಮಿ ತದಾ ಸರ್ವಂ ಯದಿ ಶಕ್ಯಂ ನರೇಣ ತತ್ ॥೨೦॥**



ನಿಶ್ಚಯವಾಗಿಯೂ ಈ ನಿನ್ನ ತಂಗಿಯು ನನ್ನ ಪ್ರಿಯತಮೆಯೇ ಆಗುವುದಾದರೆ ನಾನು ಸಕಲಸನ್ಮಂಗಳಗಳನ್ನೂ ಪಡೆಯುವೆನು, ಕೃಷ್ಣ! ಇದರಲ್ಲಾವ ಸಂಶಯವೂ ಇರುವುದಿಲ್ಲ. ಇವಳನ್ನು ಪಡೆಯಲು ಮಾಡಬೇಕಾದ ಉಪಾಯವನ್ನು ನೀನೇ ಸೂಚಿಸು. ನಾನು ಇವಳಿಗಾಗಿ ಮಾನವಸಾಧ್ಯವಾದ ಯಾವ ಕಾರ್ಯವನ್ನು ಬೇಕಾದರೂ ಮಾಡಲು ಸಿದ್ಧನಾಗಿರುವೆನು."

ಇಬ್ಬರೂ ಒಂದೆಡೆಯಲ್ಲಿ ಸಮಾಲೋಚನೆಗೆ ಕುಳಿತರು. ಶ್ರೀಕೃಷ್ಣನು ಅರ್ಜುನನೊಡನೆ ಹೇಳತೊಡಗಿದನು :

**ಸ್ವಯಂವರಃ ಕ್ಷತ್ರಿಯಾಣಾಂ ವಿವಾಹಃ ಪುರುಷರ್ಷಭ ।**
**ಸ ಚ ಸಂಶಯಿತಃ ಪಾರ್ಥ ಸ್ವಭಾವಸ್ಯಾನಿಮಿತ್ತತಃ ॥೨೧॥**

"ಪುರುಷಶ್ರೇಷ್ಠನೇ! ಸ್ವಯಂವರರೀತಿಯಲ್ಲಿ ವಿವಾಹವನ್ನು ಮಾಡಿಕೊಳ್ಳುವುದು ಕ್ಷತ್ರಿಯರಿಗೆ ಹೇಳಲ್ಪಟ್ಟಿದೆ. ಆದರೆ ಸ್ವಯಂವರವೇರ್ಪಟ್ಟರೆ ಈ ಹೆಣ್ಣು ನಿನಗೇ ಸಿಕ್ಕುವುದೆಂಬ ಭರವಸೆಯಿಲ್ಲ. ಏಕೆಂದರೆ : ಸ್ತ್ರೀಯರ ಮನೋಗತವಾದ ಅಭಿಪ್ರಾಯವನ್ನು ನಾವು ತಿಳಿದವರಾಗಿಲ್ಲ.

**ಪ್ರಸಹ್ಯ ಹರಣಂ ಚಾಪಿ ಕ್ಷತ್ರಿಯಾಣಾಂ ಪ್ರಶಸ್ಯತೇ ।**
**ವಿವಾಹಹೇತುಃ ಶೂರಾಣಾಮಿತಿ ಧರ್ಮವಿದೋ ವಿದುಃ ॥೨೨॥**

**ಸ ತ್ವಮರ್ಜುನ ಕಲ್ಯಾಣೀಂ ಪ್ರಸಹ್ಯ ಭಗಿನೀಂ ಮಮ ।**
**ಹರ ಸ್ವಯಂವರೇ ಹ್ಯಸ್ಯಾಃ ಕೋ ವೈ ವೇದ ಚಿಕೀರ್ಷಿತಮ್ ॥೨೩॥**

ಆದರೆ ಪರಾಕ್ರಮಿಗಳಾದ ಕ್ಷತ್ರಿಯರು ಬಲಾತ್ಕಾರವಾಗಿ ಕನ್ಯೆಯನ್ನು ಅಪಹರಿಸಿಕೊಂಡು ವಿವಾಹವಾಗಬಹುದೆಂದು ಧರ್ಮವಿದರು ಹೇಳುತ್ತಾರೆ. ಸ್ವಯಂವರದಲ್ಲಿ ಇವಳೇನು ಮಾಡುವಳೆಂಬುದು ನಮಗೆ ತಿಳಿದಿಲ್ಲವಾದುದರಿಂದ ಈ ನನ್ನ ತಂಗಿಯನ್ನು ನೀನು ಅಪಹರಿಸಿಕೊಂಡು ಹೋಗುವುದೇ ಸೂಕ್ತವಾಗಿದೆ, ಧನಂಜಯ!"

ಏನು ಮಾಡಬೇಕೆಂಬುದನ್ನೂ ಇಬ್ಬರೂ ನಿಶ್ಚಯಿಸಿದರು. ಒಡನೆಯೇ ಶೀಘ್ರಗಾಮಿಗಳಾದ ವಾರ್ತಾವಾಹಿಗಳ ಮೂಲಕ ಇಂದ್ರಪ್ರಸ್ಥದಲ್ಲಿದ್ದ ಯುಧಿಷ್ಠಿರನಿಗೆ ಸುಭದ್ರಾಹರಣದ ವಿಷಯವನ್ನು ಹೇಳಿಕಳುಹಿಸಿದರು. ಚಾರರ ಮೂಲಕ ಕೃಷ್ಣಾರ್ಜುನರು ಹೇಳಿ ಕಳುಹಿಸಿದ ಸುಭದ್ರಾಹರಣದ ಯೋಜನೆಗೆ ಧರ್ಮಜನೂ ಅನುಮತಿಯನ್ನಿತ್ತನು.

೨೧೯ನೆಯ ಅಧ್ಯಾಯವು ಮುಗಿಯಿತು.

## ಅರ್ಜುನನೊಡನೆ ಯಾದವರ ಯುದ್ಧಸಿದ್ಧತೆ : ಬಲರಾಮನ ಕೋಪೋದ್ಗಾರ

ವೈಶಂಪಾಯನರು ಹೇಳುತ್ತಾರೆ :

**ತತಃ ಸಂವಾದಿತೇ ತಸ್ಮಿನ್ನನುಜ್ಞಾತೋ ಧನಂಜಯಃ ।**
**ಗತಾಂ ರೈವತಕೇ ಕನ್ಯಾಂ ವಿದಿತ್ವಾ ಜನಮೇಜಯ ॥೧॥**

**ವಾಸುದೇವಾಭ್ಯನುಜ್ಞಾತಃ ಕಥಯಿತ್ವೇತಿಕೃತ್ಯತಾಮ್ ।**
**ಕೃಷ್ಣಸ್ಯ ಮತಮಾದಾಯ ಪ್ರಯಯೌ ಭರತರ್ಷಭ ॥೨॥**

ಮಹಾರಾಜ! ಯುಧಿಷ್ಠಿರನು ಸುಭದ್ರೆಯ ಹರಣಕ್ಕೆ ಒಪ್ಪಿರುವನೆಂಬುದನ್ನು ಶ್ರೀಕೃಷ್ಣನಿಂದ ಧನಂಜಯನು ತಿಳಿದುಕೊಂಡನು. ಆ ವೇಳೆಗೆ ಸರಿಯಾಗಿ ಸುಭದ್ರೆಯು ರೈವತಕಪರ್ವತದ ಮೇಲಕ್ಕೆ ಹೋಗಿರುವಳೆಂಬ ವಾರ್ತೆಯೂ ಅರ್ಜುನನಿಗೆ ತಿಳಿಯಿತು. ಧನಂಜಯನು ವಾಸುದೇವನ ಅನುಜ್ಞೆಯನ್ನು ಪಡೆದು, ಸುಭದ್ರೆಯ ಹರಣಕ್ಕೆ ಕಾಲ-ದೇಶಗಳನ್ನು ಕೃಷ್ಣನಲ್ಲಿಯೇ ಸಮಾಲೋಚಿಸಿ ಸ್ಥಿರಪಡಿಸಿಕೊಂಡು ಸುಭದ್ರಾಹರಣಕ್ಕಾಗಿ ಹೊರಟನು.

ಭಗವಂತನಾದ ಶ್ರೀಕೃಷ್ಣನ ಆಜ್ಞೆಯಂತೆ ಯಥಾವಿಧಿಯಾಗಿ ಕಲ್ಪಿತವಾಗಿದ್ದ ರಥವು ಸಿದ್ಧವಾಗಿದ್ದಿತು. ಆ ರಥಕ್ಕೆ ಸ್ವರ್ಣಮಯವಾದ ತಗಡಿನ ಹೊದ್ದಿಕೆಯಿದ್ದು ಶೈಬ್ಯ ಮತ್ತು ಸುಗ್ರೀವಗಳೆಂಬ ಶ್ರೀಕೃಷ್ಣನ ರಥದ ಕುದುರೆಗಳನ್ನೇ ಹೂಡಿದ್ದರು. ರಥದ ಸುತ್ತಲೂ ಪುಟ್ಟ-ಪುಟ್ಟ ಗಂಟೆಗಳ ಮಾಲೆಗಳಿದ್ದುವು. ರಥದಲ್ಲಿ ಸಕಲಶಸ್ತ್ರಾಸ್ತ್ರಗಳನ್ನೂ ಇಡಲಾಗಿತ್ತು. ರಥದ ಚಕ್ರಗಳ ಶಬ್ದವು ಗುಡುಗಿನ ಶಬ್ದವನ್ನು ಅನುಕರಿಸುತ್ತಿದ್ದಿತು. ದೂರದಿಂದ ನೋಡುವವರಿಗೆ ಆ ದಿವ್ಯರಥವು ಪ್ರಜ್ವಲಿಸುತ್ತಿರುವ ಯಜ್ಞೇಶ್ವರನಂತೆಯೇ ಕಾಣುತ್ತಿದ್ದಿತು. ರಥದ ಶಬ್ದವನ್ನು ಕೇಳಿದೊಡನೆಯೇ ಶತ್ರುಗಳ ಆನಂದಕ್ಕೆ ವಿಘಾತವುಂಟಾಗುತ್ತಿದ್ದಿತು. ಕವಚ-ಖಡ್ಗ, ಗೋಧಾಂಗುಲಿತ್ರಗಳನ್ನು ಧರಿಸಿದ್ದ

ಅರ್ಜುನನು ದಿವ್ಯವಾದ ರಥದಲ್ಲಿ ಕುಳಿತು ಬೇಟೆಯಾಡುವ ನೆಪದಿಂದ ಹೊರಬಿದ್ದನು.

ಆ ವೇಳೆಗೆ ಸರಿಯಾಗಿ ಸುಭದ್ರೆಯು ಪದ್ಧತಿಯಂತೆ ರೈವತಕಪರ್ವತವನ್ನು ಪೂಜಿಸಿ, ಇತರ ಕುಲದೇವತೆಗಳನ್ನೂ ಭಕ್ತಿಪೂರ್ವಕವಾಗಿ ಅರ್ಚಿಸಿ, ಬ್ರಾಹ್ಮಣರಿಗೆ ನಮಸ್ಕರಿಸಿ ಅವರಿಂದ ಆಶೀರ್ವಾದಗಳನ್ನು ಪಡೆದು, ಅವರ ನಿರ್ದೇಶನದಂತೆ ಪರ್ವತವನ್ನೂ ಪ್ರದಕ್ಷಿಣೆಮಾಡಿ ದ್ವಾರವತಿಗೆ ಹಿಂದಿರುಗುತ್ತಿದ್ದಳು. ಸುಮಶರನ ಬಾಣಗಳ ಆಘಾತಕ್ಕೆ ಸಿಕ್ಕಿದ್ದ ಧನಂಜಯನು ರಥದಿಂದಿಳಿದು, ಸಖಿಯರ ಮಧ್ಯದಲ್ಲಿದ್ದ ಸುಭದ್ರೆಯ ಕಡೆಗೆ ನುಗ್ಗಿ, ಸರ್ವಾಂಗಸುಂದರಿಯಾದ ಯಾದವ ಕನ್ಯಾರತ್ನವನ್ನೆತ್ತಿಕೊಂಡು ರಥವನ್ನೇರಿದನು.



ಅನಂತರದಲ್ಲಿ ಪುರುಷವ್ಯಾಘ್ರನಾದ ಅರ್ಜುನನು ಶುಚಿಸ್ಮಿತೆಯಾದ ಸುಭದ್ರೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಆ ಸ್ವರ್ಣಮಯರಥದ ಮೂಲಕವಾಗಿಯೇ ಇಂದ್ರಪ್ರಸ್ಥದ ಕಡೆಗೆ ಪ್ರಯಾಣಮಾಡಿದನು.

ಸುಭದ್ರೆಯ ಒಡನಿದ್ದ ರಾಜಭಟರು ತಮ್ಮೆದುರಿನಲ್ಲಿಯೇ ಆದ ಸುಭದ್ರಾಹರಣವನ್ನು ಕಂಡು ಭೀತರಾಗಿ ಗೋಳಿಡುತ್ತಾ ದ್ವಾರಕೆಯ ಕಡೆಗೆ ಓಡಿದರು. ಸುಧರ್ಮಾಸಭೆಗೆ ಹೋಗಿ ಅಲ್ಲಿದ್ದ ಮುಖ್ಯಾಧಿಕಾರಿಯೊಡನೆ ಧನಂಜಯನು ಮಾಡಿದ ಕಾರ್ಯವನ್ನು ವಿವರಿಸಿ ಹೇಳಿದರು.

ಸುಧರ್ಮಾಸಭೆಯಲ್ಲಿದ್ದ ಮುಖ್ಯಾಧಿಕಾರಿಯು ಸುಭದ್ರಾಹರಣವನ್ನು ಕೇಳಿದೊಡನೆಯೇ ಪಟ್ಟಣಿಗರೆಲ್ಲರಿಗೂ ಕೇಳಿಸುವ ರೀತಿಯಲ್ಲಿ ಯುದ್ಧಕ್ಕೆ ಸಿದ್ಧವಾಗಲು ಸೂಚನೆಯನ್ನೀಯುವ ಭೇರೀತಾಡನವನ್ನು ಮಾಡಿದನು. ಒಂದೆರಡು ಕ್ಷಣಗಳೊಳಗಾಗಿಯೇ ವೃಷ್ಣ್ಯಂಧಕ-ಭೋಜವಂಶಗಳ ಯುವಕರು ನಾಲ್ಕು ದಿಕ್ಕುಗಳಿಂದಲೂ ಸಭಾಮಂಟಪಕ್ಕೆ ಧಾವಿಸಿ ಬಂದರು. ಊಟ ಮಾಡುತ್ತಿದ್ದವರು ಅರ್ಧದಲ್ಲಿಯೇ ಎದ್ದು ಬಂದರು. ನೀರು ಕುಡಿಯುತ್ತಿದ್ದವರ ಪಾತ್ರೆಗಳು ಭೇರಿತಾಡನವನ್ನು ಕೇಳಿದೊಡನೆಯೇ ಕೈಗಳಿಂದ ಜಾರಿಬಿದ್ದುವು. ಎಲ್ಲರೂ ಕವಚ ಮತ್ತು ಆಯುಧಗಳಿಂದ ಸಜ್ಜಿತರಾಗಿ ಬಂದು ಸಭಾಮಂದಿರದಲ್ಲಿ ಪ್ರಜ್ವಲಿಸುತ್ತಿದ್ದ ರತ್ನಸಿಂಹಾಸನಗಳಲ್ಲಿ ಮಂಡಿಸಿದರು. ಪ್ರಜ್ವಲಿಸುತ್ತಿರುವ ಅಗ್ನಿಗೆ ಸಮಾನವಾದ ಕಾಂತಿಯುಳ್ಳ, ಸ್ವರ್ಣಮಯವಾದ, ರತ್ನಖಚಿತವಾದ ರತ್ನಗಂಬಳಿಗಳಿಂದ ಕೂಡಿದ್ದ ಸಿಂಹಾಸನಗಳಲ್ಲಿ – ಯಜ್ಞವೇದಿಗಳಲ್ಲಿ ಪ್ರಜ್ವಲಿಸುವ ಯಜ್ಞೇಶ್ವರರಂತೆ – ವಜ್ರ-ವೈಢೂರ್ಯಗಳಿಂದ ಮಾಡಲ್ಪಟ್ಟ ಶಿರಸ್ತ್ರಾಣಗಳನ್ನು ಧರಿಸಿದ್ದ ಯದುವೀರರು ಪ್ರಕಾಶಿಸಿದರು.

ಹೆಚ್ಚೇನು ಹೇಳಲಿ, ಜನಮೇಜಯ! ಅಂದಿನ ಆ ಸುಧರ್ಮಾಸಭೆಯು ದೇವಸಭೆಯಂತೆಯೇ ಪ್ರಕಾಶಿಸಿತು. ಸಭಾನಾಯಕನು ಮೇಲೆದ್ದು ಯದುರಾಜಕುಮಾರರಿಗೆ ಜಿಷ್ಣುವು ಮಾಡಿದ ಕಾರ್ಯವನ್ನು ವಿವರಿಸಿ ಹೇಳಿದನು. ಮಹಾವೀರರಾದ ಯದುಯುವಕರಿಗೆ ಸಹನೆಯು ಮೀರಿತು. ಕಣ್ಣುಗಳು ಕೆಂಪೇರಿದುವು. ಆಸನವನ್ನು ಬಿಟ್ಟು ಮೇಲೆದ್ದು, ಭೂಮಿಯ ನ್ನೊಮ್ಮೆ ಕಾಲಿನಿಂದ ಅಪ್ಪಳಿಸಿ ರೋಷಾವಿಷ್ಟರಾಗಿ ನಿಂತರು. 'ರಥಗಳನ್ನು ಸಿದ್ಧಮಾಡಿರಿ!' – ಎಂಬ ಕೂಗು ಕ್ಷತ್ರಿಯಸಮೂಹದಿಂದ ಕೇಳಿಸಿತು. 'ಆಯುಧಗಳನ್ನು ತನ್ನಿರಿ!' –ಎಂಬ ಗರ್ಜನೆಯೂ ಮತ್ತೊಂದು ದಿಕ್ಕಿನಿಂದ

ಪ್ರತಿಧ್ವನಿತವಾಯಿತು. 'ದಿವ್ಯಧನುಸ್ಸುಗಳೂ - ವಜ್ರಕವಚಗಳೂ ಒಡನೆಯೇ ಸಿದ್ಧವಾಗಲಿ!' – ಇವೇ ಮೊದಲಾದ ವೀರಗರ್ಜನೆಗಳು ಸಭೆಯಲ್ಲಿ ನಾಲ್ಕು ದಿಕ್ಕುಗಳಿಂದಲೂ ಗುಡುಗಿನಂತೆ ಮೊಳಗಿದುವು. ಕೆಲವರು ತಮ್ಮ ಸಾರಥಿಗಳನ್ನು ಕರೆದು ರಥಕ್ಕೆ ಕುದುರೆಗಳನ್ನು ಹೂಡುವಂತೆ ಹೇಳಿದರು. ಮತ್ತೆ ಕೆಲವರು ಕಾಲಾತಿಕ್ರಮವನ್ನು ಸಹಿಸಲಾರದೇ ತಾವೇ ಹೋಗಿ ರಥಗಳಿಗೆ ಕುದುರೆಗಳನ್ನು ಸಜ್ಜುಗೊಳಿಸಿ ಯುದ್ಧಸನ್ನದ್ಧರಾದರು. ವಜ್ರಕವಚಗಳೂ, ಧನುಸ್ಸುಗಳೂ ಸಾವಿರಾರು ಸಂಖ್ಯೆಯಲ್ಲಿ ತರಲ್ಪಟ್ಟು ಎಲ್ಲರೂ ಸುಸಜ್ಜಿತರಾಗಿ ನಿಂತರು. ಅವರ ಸಮರಗರ್ಜನೆಗಳು ನಭೋಮಂಡಲವನ್ನು ಮುಟ್ಟಿದುವು.

ಆ ವೇಳೆಗೆ ಸರಿಯಾಗಿ ಕೈಲಾಸಶಿಖರದಂತೆ ಬೆಳ್ಳಗಿದ್ದ ಬಲದೇವನು ವನಮಾಲೆಯನ್ನು ಧರಿಸಿ, ನೀಲಾಂಬರವನ್ನುಟ್ಟುಕೊಂಡು ಸಭಾಮಂದಿರವನ್ನು ಪ್ರವೇಶಿಸಿದನು.

"ಮತಿಗೆಟ್ಟ ವೀರರೇ! ನೀವೇನು ಮಾಡುತ್ತಿರುವಿರಿ? ಶ್ರೀಕೃಷ್ಣನು ಮೌನವಾಗಿ ಕುಳಿತಿರುವುದನ್ನು ಕಾಣಿರಾ? ಇವನ ಹೃದಯದಲ್ಲೇನಿದೆ ಯೆಂಬುದನ್ನು ತಿಳಿಯದೇ ನೀವು ವ್ಯರ್ಥವಾಗಿ ಗರ್ಜನೆಗಳನ್ನು ಮಾಡುತ್ತಿರುವಿರಿ. ಮಹಾತ್ಮನಾದ ಶ್ರೀಕೃಷ್ಣನು ತನ್ನ ಅಭಿಪ್ರಾಯ ವೇನೆಂಬುದನ್ನು ಹೊರಗೆಡಹಲಿ. ಅವನು ಏನು ಹೇಳುವನೋ ಅದರಂತೆ ಮಾಡಲು ನೀವು ಸಿದ್ಧರಾಗಿರಿ" –ಎಂದು ಮದೋತ್ಸಿಕ್ತನಾದ ಬಲರಾಮನು ಗಡುಸಾದ ಧ್ವನಿಯಲ್ಲಿ ಹೇಳಿದೊಡನೆಯೇ ಸಭೆಯು ಸ್ತಬ್ಧವಾಯಿತು. 'ಸಾಧು!' 'ಸಾಧು!' – ಎಂಬ ಶಬ್ದಗಳು ನಾಲ್ಕು ನಿಟ್ಟಿನಿಂದಲೂ ಕೇಳಿಬಂದುವು. ಯದುವೀರರು ತಮ್ಮ-ತಮ್ಮ ಆಸನಗಳಲ್ಲಿ ಕುಳಿತರು.

ಬಲರಾಮನೂ ಸಿಂಹಾಸನದಲ್ಲಿ ಕುಳಿತು ಮೌನಿಯಾಗಿದ್ದ ಶ್ರೀಕೃಷ್ಣನಿಗೆ ಹೇಳಿದನು : "ಜನಾರ್ದನ! ಎಲ್ಲವನ್ನೂ ನೋಡುತ್ತಾ ಕುಳಿತಿರುವೆಯಲ್ಲದೇ ಮಾತನ್ನೇಕೆ ಆಡುವುದಿಲ್ಲ? ನಿನಗಾಗಿಯೇ ಅಲ್ಲವೇ ನಾವೆಲ್ಲರೂ ಕುಂತೀಪುತ್ರನನ್ನು ಆದರಿಸಿ ಸತ್ಕರಿಸಿದುದು? ಇಂದು ಅವನು ಮಾಡಿರುವ ಅಕಾರ್ಯವನ್ನು ನೋಡಿದರೆ ಕುರುಕುಲಪಾಂಸನನಾದ ಅವನು ನಮ್ಮ ಆದರಣೆಗೆ ಅಯೋಗ್ಯನೆಂದೇ ಭಾವಿಸಬೇಕಾಗಿದೆ.

**ಕೋ ಹಿ ತತ್ರೈವ ಭುಕ್ತ್ವಾನ್ನಂ ಭಾಜನಂ ಭೇತ್ತುಮರ್ಹತಿ ।**
**ಮನ್ಯಮಾನಃ ಕುಲೇ ಜಾತಮಾತ್ಮಾನಂ ಪುರುಷಃ ಕ್ವಚಿತ್ ॥೨೭॥**

ಸದ್ವಂಶದಲ್ಲಿ ಹುಟ್ಟಿರುವೆನೆಂದು ತಿಳಿದಿರುವ ಯಾವ ಮಾನವನು ತಾನೇ ತಾನು ಊಟಮಾಡಿದ ಪಾತ್ರೆಯನ್ನೇ ಒಡೆದುಹಾಕಲು ಪ್ರಯತ್ನಿಸಿಯಾನು? ಜನಾರ್ದನ! ಅವನು ನಮ್ಮಿಂದ ಆದರಿಸಲ್ಪಟ್ಟಿದ್ದಾನೆ. ನಮ್ಮಲ್ಲಿ ಪರಸ್ಪರ ಪ್ರೀತಿ-ವಿಶ್ವಾಸಗಳಿವೆ. ಒಂದು ವೇಳೆ ಅವನು ನಮ್ಮೊಡನೆ ಬಾಂಧವ್ಯವನ್ನು ಬೆಳೆಸಬೇಕೆನ್ನುವುದಾಗಿದ್ದರೆ – ಸೌಖ್ಯದಿಂದಿರಬೇಕೆನ್ನುವ ಇಚ್ಛೆಯುಳ್ಳವನಾಗಿದ್ದರೆ – ಪೂರ್ವಾಪರವಿವೇಚನೆಯೇ ಇಲ್ಲದ ಇಂತಹ ಅಕಾರ್ಯವನ್ನು ಮಾಡುತ್ತಿದ್ದನೇ? ಇಂದು ಆ ಪಾಂಡವಾಧಮನು ನಮ್ಮನ್ನೂ ಲೆಕ್ಕಿಸದೇ, ನಿನ್ನನ್ನೂ ಪರಿಗಣಿಸದೇ ಸುಭದ್ರೆಯ ಅಪಹರಣವನ್ನು ಮಾಡಿ ತನ್ನ ಮೃತ್ಯುವನ್ನು ತಾನೇ ತಂದುಕೊಂಡಿದ್ದಾನೆ. ಅವನ ಈ ಅಕಾರ್ಯದಿಂದ ನನ್ನ ತಲೆಯ ಮೇಲೆಯೇ ಅವನು ಕಾಲಿಟ್ಟಂತಾಗಿದೆ. ಗೋವಿಂದ! ಇದನ್ನು ನಾನು ಹೇಗೆ ತಾನೇ ಸಹಿಸಲಿ? ಕಾಲಿನಿಂದ ತುಳಿಯಲ್ಪಟ್ಟ ಹಾವಿನಂತೆ – ನಾನೀ ಅಕಾರ್ಯಕ್ಕೆ ಪ್ರತೀಕಾರವನ್ನು ಮಾಡಬೇಡವೇ? ನಾನೊಬ್ಬನೇ ಇಂದು ಪೃಥ್ವಿಯನ್ನು ಕುರುರಹಿತವನ್ನಾಗಿ ಮಾಡಿಬಿಡುವೆನು. ಧನಂಜಯನ ಈ ವ್ಯತಿಕ್ರಮವನ್ನು ನಾನೆಂದಿಗೂ ಸಹಿಸಲಾರೆನು."

ಬಲದೇವನು ಮಾತುಗಳನ್ನು ಮುಗಿಸುವ ವೇಳೆಗೆ ಅವನ ಧ್ವನಿಯು ಉಚ್ಚಸ್ಥಾಯಿಯಲ್ಲಿದ್ದು ಮೋಡಗಳ ಅಥವಾ ದುಂದುಭಿಯ ಶಬ್ದವನ್ನು ಅನುಕರಿಸುವುದಾಗಿದ್ದಿತು. ಅವನ ಕಣ್ಣುಗಳು ಕೆಂಪಾಗಿದ್ದುವು. ತುಟಿಗಳು ಅದುರುತ್ತಿದ್ದುವು. ಅವನ ಹೇಳಿಕೆಯು ಮುಗಿದೊಡನೆಯೇ ಯದು ವೀರರೆಲ್ಲರೂ - 'ಅರ್ಜುನಸ್ಯ ವ್ಯತಿಕ್ರಮಃ ನ ಮರ್ಷಣೀಯಃ' 'ಅರ್ಜುನನ ಈ ವ್ಯತಿಕ್ರಮವು ಸಹಿಸತಕ್ಕುದಲ್ಲ' – ಎಂದು ಕೂಗುತ್ತಾ ಬಲರಾಮನ ಮಾತುಗಳನ್ನು ಅನುಮೋದಿಸಿದರು.

೨೨೦ನೆಯ ಅಧ್ಯಾಯವು ಮುಗಿಯಿತು.

೨೨೧ನೆಯ ಅಧ್ಯಾಯ ಹರಣಾಹರಣಪರ್ವ

## ದ್ವಾರವತಿಯಲ್ಲಿ ಅರ್ಜುನ ಮತ್ತು ಸುಭದ್ರೆಯರ ವಿವಾಹ: ಇಂದ್ರಪ್ರಸ್ಥಕ್ಕೆ ಪುನರಾಗಮನ: ಅಭಿಮನ್ಯುವಿನ ಜನನ: ಜಾತಕರ್ಮಾದಿ ಸಂಸ್ಕಾರ: ಬಾಲ್ಯಶಿಕ್ಷಣ

ವೈಶಂಪಾಯನರು ಹೇಳುತ್ತಾರೆ :

**ಉಕ್ತವನ್ತೋ ಯಥಾ ವೀರ್ಯಮಸಕೃತ್ಸರ್ವವೃಷ್ಣಯಃ ।**
**ತತೋಽಬ್ರವೀದ್ವಾಸುದೇವೋ ವಾಕ್ಯಂ ಧರ್ಮಾರ್ಥಸಂಯುತಮ್॥೧॥**

ಜನಮೇಜಯ! ಯದುವೀರರೆಲ್ಲರೂ ತಮ್ಮ-ತಮ್ಮ ವೀರ್ಯ-ಪರಾಕ್ರಮಗಳಿಗೆ ಅನುಗುಣವಾಗಿ ಅರ್ಜುನನ ಮೇಲೆ ಸೇಡುತೀರಿಸಿಕೊಳ್ಳಬೇಕೆಂಬ ಅಭಿಪ್ರಾಯವನ್ನು ಹಲವಾರು ಬಾರಿ ಉದ್ಘೋಷಿಸುತ್ತಿರುವಾಗ ಅದುವರೆಗೂ ಮೌನವನ್ನೇ ಧರಿಸಿ ಕುಳಿತಿದ್ದ ವಾಸುದೇವನು ಧರ್ಮಾರ್ಥಯುಕ್ತವಾದ ಈ ಮಾತುಗಳನ್ನಾಡಿದನು.

ಬಲರಾಮಾದಿಗಳೆಲ್ಲರೂ ಕೌಂತೇಯನು ಸುಭದ್ರೆಯನ್ನು ಅಪಹರಿಸಿ ಯಾದವಕುಲಕ್ಕೆ ಅವಮಾನವನ್ನೇ ಮಾಡಿಬಿಟ್ಟಿರುವನೆಂದು ಹೌಹಾರುತ್ತಿದ್ದಾಗ ಶ್ರೀಕೃಷ್ಣನು ಅನುದ್ವಿಗ್ನನಾಗಿ ಹೇಳಿದನು :

**ನಾವಮಾನಂ ಕುಲಸ್ಯಾಸ್ಯ ಗುಡಾಕೇಶಃ ಪ್ರಯುಕ್ತವಾನ್ ।**
**ಸಮ್ಮಾನೋಽಭ್ಯಧಿಕಸ್ತೇನ ಪ್ರಯುಕ್ತೋಽಯಂ ನ ಸಂಶಯಃ ॥೨॥**

"ಗುಡಾಕೇಶನು (ಅರ್ಜುನನು) ನಮ್ಮ ಕುಲಕ್ಕೆ ಅವಮಾನವಾಗುವ ಅಕಾರ್ಯವನ್ನೇನನ್ನೂ ಮಾಡಿರುವುದಿಲ್ಲ ಮತ್ತು ನಾವು ಹಾಗೆ ಭಾವಿಸಲೂಬಾರದು. ಇದಕ್ಕೆ ಪ್ರತಿಯಾಗಿ ಅವನು ನಮ್ಮ ವಂಶಕ್ಕೆ ಅತಿಶಯವಾದ ಗೌರವವನ್ನು ತರುವ ಕಾರ್ಯವನ್ನೇ ಮಾಡಿರುವನು.

**ಅರ್ಥಲುಬ್ಧಾನ್ನ ವಃ ಪಾರ್ಥೋ ಮನ್ಯತೇ ಸಾತ್ವತಾಂಸ್ತಥಾ ।**
**ಸ್ವಯಂವರಮನಾಧೃಷ್ಯಂ ಮನ್ಯತೇ ಚಾಪಿ ಪಾಣ್ಡವಃ ॥೩॥**

ಪಾರ್ಥನು ಸಾತ್ವತವಂಶದಲ್ಲಿ ಹುಟ್ಟಿರುವ ನಮ್ಮನ್ನು ಅರ್ಥಲುಬ್ಧ

ರೆಂದೂ ಭಾವಿಸಿರುವುದಿಲ್ಲ. ಎಂದರೆ : ದ್ರವ್ಯರೂಪವಾದ ಕನ್ಯಾಶುಲ್ಕವನ್ನು ಅಭಿಲಾಷಿಸುವವರೆಂದೂ ಭಾವಿಸಿಲ್ಲ. ಕ್ಷಾತ್ರಪದ್ಧತಿಯಂತೆ ಸುಭದ್ರೆಯ ಸ್ವಯಂವರವೇ ಆಗಿದ್ದರೆ ಸುಭದ್ರೆಯು ಯಾರ ಕೊರಳಿಗೆ ಹಾರಹಾಕುವಳೆಂಬ ವಿಷಯದಲ್ಲಿ ಪಾರ್ಥನು ಸಂಶಯಪಟ್ಟಿರಬಹುದು.

**ಪ್ರದಾನಮಪಿ ಕನ್ಯಾಯಾಃ ಪಶುವತ್ಕೋಽನುಮನ್ಯತೇ ।**
**ವಿಕ್ರಯಂ ಚಾಪ್ಯಪತ್ಯಸ್ಯ ಕಃ ಕುರ್ಯಾತ್ಪುರುಷೋ ಭುವಿ ॥೪॥**

ಕುದುರೆ, ಹಸು, ಆನೆ – ಮುಂತಾದುವನ್ನು ದಾನಕೊಡುವ ರೀತಿಯಲ್ಲಿ ಕನ್ಯೆಯನ್ನು ದಾನಕೊಟ್ಟರೆ ವೀರನಾದವನು ಪ್ರತಿಗ್ರಹಿಸಲು ಇಷ್ಟಪಡುವನೇ? ಪ್ರಪಂಚದಲ್ಲಿ ಯಾವನು ತಾನೇ ತನ್ನ ಮಕ್ಕಳನ್ನು ಹಣತೆಗೆದುಕೊಂಡು ಮಾರಲು ಸಿದ್ಧನಾಗುವನು? ಅದು ನಮ್ಮಿಂದಂತೂ ಸಾಧ್ಯವಾಗುತ್ತಿರಲಿಲ್ಲ.



ಅರ್ಜುನನು ಈ ದೋಷಗಳೆಲ್ಲವನ್ನೂ ಪರಿಶೀಲಿಸಿಯೇ ಕ್ಷತ್ರಧರ್ಮಾನುಸಾರವಾಗಿ ಕನ್ಯೆಯನ್ನು ಬಲಾತ್ಕಾರಪೂರ್ವಕವಾಗಿ ಅಪಹರಿಸಿಕೊಂಡು ಹೋಗಿರಬಹುದೆಂಬುದು ನನ್ನ ಅಭಿಪ್ರಾಯವಾಗಿದೆ.

ಈ ಸಂಬಂಧವೂ ಉಚಿತವೇ ಆಗಿರುವುದೆಂಬುದು ನನ್ನ ಅಭಿಪ್ರಾಯವಾಗಿದೆ. ಸುಭದ್ರೆಯೂ ಯಶಸ್ವಿನಿಯಾದ ಕನ್ಯಾರತ್ನ. ಅರ್ಜುನನೂ ಯಶೋವಂತನಾದ ವರರತ್ನ. ಇವಳು ತನಗೆ ಅನುರೂಪ ಳಾದವಳೆಂದೇ ಭಾವಿಸಿ ಅರ್ಜುನನು ಸುಭದ್ರೆಯನ್ನು ಅಪಹರಣ ಮಾಡಿರುತ್ತಾನೆಂದು ನಾನು ಭಾವಿಸುತ್ತೇನೆ.

ಇದು ಮಹಾಪರಾಧವೆಂದು ನನಗನ್ನಿಸುವುದಿಲ್ಲ. ಪ್ರಪಂಚದಲ್ಲಿ ಧನಂಜಯನ ಮೈತ್ರಿಯನ್ನು ಬಯಸದವನಾರು? ಅರ್ಜುನನು ಭರತ ವಂಶೋತ್ಪನ್ನನು ; ಸುಪ್ರಸಿದ್ಧನಾದ ಶಾಂತನುವಿನ ಮೊಮ್ಮಗನ ಮಗನು. ಮೇಲಾಗಿ : ನಮ್ಮೆಲ್ಲರ ಬಂಧುವು. ನಮ್ಮ ಸೋದರತ್ತೆಯಾದ ಕುಂತೀದೇವಿಯ ಮಗ. ಅವನೊಡನೆ ಸಂಬಂಧಮಾಡುವುದು ಕೀರ್ತಿದಾಯಕವಲ್ಲವೇ? ಮೂರನೆಯದಾಗಿ : ಅವನನ್ನು ಪರಾಭವಗೊಳಿಸಲು ಯಾರಿಂದಲಾದರೂ ಸಾಧ್ಯವಿದೆಯೇ? ಇಂದ್ರನೇ ಆಗಲೀ, ಏಕಾದಶರುದ್ರರೇ ಆಗಲೀ – ಅವನೆದುರಿನಲ್ಲಿ ನಿಂತು ಸೆಣೆಸಲಾರರು. ಫಾಲನೇತ್ರನಾದ ಪರಶಿವನೊಬ್ಬನನ್ನು ಬಿಟ್ಟು ಮತ್ತಾರಿಂದಲೂ ಪಾರ್ಥನನ್ನು ಪರಾಭವಗೊಳಿಸುವ ಸಾಧ್ಯತೆಯಿಲ್ಲ. ಅವನು ಸುಭದ್ರೆಯನ್ನು ಕರೆದೊಯ್ಯುತ್ತಿರುವ ರಥವೂ ಅಸಾಧಾರಣವಾದುದು. ಮೇಲಾಗಿ ರಥವನ್ನೊಯ್ಯುತ್ತಿರುವ ಕುದುರೆಗಳೂ ನನ್ನವು. ಈ ವಿಷಯವನ್ನು ನೀವು ಗಮನಿಸಬೇಕಾಗಿದೆ. ಪಾರ್ಥನು ಅಪ್ರತಿಮಪರಾಕ್ರಮಿಯೆಂಬುದೂ, ಅವನ ಬಾಣಪ್ರಯೋಗದ ಕೈಚಳಕವು ಅನ್ಯಾದೃಶವೆಂಬುದೂ ಲೋಕಪ್ರಸಿದ್ಧವಾಗಿದೆ. ಪ್ರಪಂಚದಲ್ಲಿ ಅವನ ಸಮಾನರಾರೂ ಇಲ್ಲವೆಂಬುದೇ ನನ್ನ ಖಚಿತವಾದ ಅಭಿಪ್ರಾಯವಾಗಿದೆ.”

ಸಭೆಯು ನಿಶ್ಶಬ್ದವಾಗಿ ಶ್ರೀಕೃಷ್ಣನ ಅಸ್ಖಲಿತವಾಣಿಯನ್ನು ಕೇಳುತ್ತಿದ್ದಿತು. ಶ್ರೀಕೃಷ್ಣನ ಮಾತಿಗೆ ಪ್ರತಿಹೇಳುವ ಸಾಧ್ಯತೆಯು ಸಭೆಯಲ್ಲಿ ಯಾರಿಗೂ ಇದ್ದಂತೆ ತೋರಲಿಲ್ಲ. ಶ್ರೀಕೃಷ್ಣನು ತನ್ನ ಉಪದೇಶವನ್ನು ಮುಂದುವರಿಸಿದನು:

“ಯದುವೀರರೇ! ಕೂಡಲೇ ಹೋಗಿ ಪಾರ್ಥನನ್ನು ಸಂತೈಸಿ ಸಂತೋಷದಿಂದ ದ್ವಾರವತಿಗೆ ಕರೆತನ್ನಿರಿ.

ನೀವೇನಾದರೂ ಅವನೊಡನೆ ಯುದ್ಧಕ್ಕೆ ಹೋಗಿ ಅವನು ಯುದ್ಧದಲ್ಲಿ ನಿಮ್ಮನ್ನು ಪರಾಜಯಗೊಳಿಸಿ (ಪರಾಜಯಗೊಳಿಸುವುದಂತೂ ನಿಶ್ಚಯ) ಬಲಾತ್ಕಾರದಿಂದ ರಾಜಕುಮಾರಿಯನ್ನು ಇಂದ್ರಪ್ರಸ್ಥಕ್ಕೆ ಕರೆದುಕೊಂಡು ಹೋಗಿಬಿಟ್ಟರೆ – ಆಗ ನಿಮ್ಮ ಯಶಸ್ಸು ವಿನಾಶಹೊಂದುವುದು. ಅವನನ್ನು ಸಂತೈಸಿ ಕರೆತರುವುದರಿಂದ ನೀವು ಪರಾಜಿತರಾದಂತಾಗುವುದಿಲ್ಲ. ಇದು ನನ್ನ ಅಭಿಪ್ರಾಯವಾಗಿದೆ" – ಎಂದು ಹೇಳಿ ಶ್ರೀಕೃಷ್ಣನು ತನ್ನ ಮಾತುಗಳನ್ನು ಮುಗಿಸಿದನು.

ಬಲರಾಮನೇ ಆದಿಯಾಗಿ ಯದುವೀರರೆಲ್ಲರೂ ಶ್ರೀಕೃಷ್ಣನ ಅಭಿಪ್ರಾಯವನ್ನು ಒಪ್ಪಿದರು.

ಶೀಘ್ರಗಾಮಿಗಳಾದ ಯದುನಾಯಕರು ಪಾರ್ಥನಲ್ಲಿಗೆ ಹೋಗಿ ಅವನನ್ನು ಸಂತೈಸಿ ದ್ವಾರಕೆಗೆ ಕರೆತಂದರು. ಸಕಲಸಂಭ್ರಮಗಳಿಂದ ಅರ್ಜುನ-ಸುಭದ್ರೆಯರ ವಿವಾಹಮಹೋತ್ಸವವು ನೆರವೇರಿತು.

ಯದುವೀರರಿಂದ ಪುರಸ್ಕೃತನಾದ ಪಾರ್ಥನು ಒಂದು ವರ್ಷಕ್ಕಿಂತಲೂ ಹೆಚ್ಚು ಕಾಲ ಸಕಲಸುಖೋಪಭೋಗಗಳನ್ನೂ ಅನುಭವಿಸುತ್ತಾ ದ್ವಾರಕೆಯಲ್ಲಿಯೇ ಕಳೆದನು. ಆ ವೇಳೆಗೆ ವನವಾಸದ ಹನ್ನೊಂದು ವರ್ಷಗಳು ಕಳೆದುವು. ಉಳಿದೊಂದು ವರ್ಷಕಾಲ ಪವಿತ್ರತಮವಾದ ಪುಷ್ಕರಕ್ಷೇತ್ರದಲ್ಲಿದ್ದು, ಹನ್ನೆರಡು ವರ್ಷಗಳು ಪೂರ್ಣವಾದನಂತರ ಖಾಂಡವಪ್ರಸ್ಥಕ್ಕೆ ಹಿಂದಿರುಗಿ ಬಂದನು. ಯುಧಿಷ್ಠಿರನ ಬಳಿಗೆ ಹೋಗಿ ಅವನಿಗೆ ನಮಸ್ಕರಿಸಿದನಂತರ ಬ್ರಾಹ್ಮಣರಿಗೆ ಅಭಿವಾದನಮಾಡಿ ಆಶೀರ್ವಾದಗಳನ್ನು ಪಡೆದು ದ್ರೌಪದಿಯ ಅಂತಃಪುರಕ್ಕೆ ಹೋದನು.

ಮಂದಹಾಸದಿಂದ ದ್ರೌಪದಿಯನ್ನು ಕಾಣಲು ಹೋದ ಪಾರ್ಥನ ಮುಖಾರವಿಂದವನ್ನು ಕಂಡೊಡನೆಯೇ ದ್ರೌಪದಿಯು ಪ್ರಣಯಕೋಪದಿಂದ ಹೇಳಿದಳು :

**ತತ್ರೈವ ಗಚ್ಛ ಕೌನ್ತೇಯ ಯತ್ರ ಸಾ ಸಾತ್ವತಾತ್ಮಜಾ ।**
**ಸುಬದ್ಧಸ್ಯಾಪಿ ಭಾರಸ್ಯ ಪೂರ್ವಬನ್ಧಃ ಶ್ಲಥಾಯತೇ ॥೧೭॥**

"ಕೌಂತೇಯ! ನೀನಿಲ್ಲೇಕೆ ಬಂದೆ? ಸಾತ್ವತವಂಶದ ಕುವರಿಯೊಬ್ಬಳಿರುವಳಲ್ಲಾ! ಅಲ್ಲಿಯೇ ಹೋಗಿರು. ಒಂದು ಹೊರೆಗೆ ಮೊದಲನೆಯ ಕಟ್ಟನ್ನು ಎಷ್ಟೇ ಬಿಗಿಯಾಗಿ ಕಟ್ಟಿದ್ದರೂ ಎರಡನೆಯ ಕಟ್ಟು ಹಾಕಲು ಹೋದಾಗ ಮೊದಲನೆಯ ಕಟ್ಟು ಸ್ವಲ್ಪವಾದರೂ ಸಡಿಲವಾಗುತ್ತದೆ, ಅಲ್ಲವೇ?"

ದ್ರೌಪದಿಯ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯುತ್ತಿದ್ದಿತು. ಮುಖವು ಕೆಂಪೇರಿದ್ದಿತು. ಆದರೆ ಆಗ ಪಾರ್ಥನೇನು ಮಾಡಿಯಾನು? "ಹಾಗೆಂದೂ ಭಾವಿಸಬೇಡ, ದ್ರೌಪದೀ! ನಿನ್ನ ಮೇಲೆ ನನಗೆ ಅಪಾರವಾದ ಪ್ರೇಮವಿದೆ. ನನ್ನನ್ನು ಕ್ಷಮಿಸು"– ಇವೇ ಮುಂತಾದ ಪ್ರಿಯೋಕ್ತಿಗಳಿಂದ ದ್ರೌಪದಿಯನ್ನು ಸಂತೈಸಿದನು. ಒಡನೆಯೇ ಸುಭದ್ರೆಯಿದ್ದಲ್ಲಿಗೆ ಹೋಗಿ ಅವಳುಟ್ಟಿದ್ದ ಕೆಂಪುರೇಷ್ಮೆಯ ಸೀರೆಯನ್ನು ಬದಲಿಸಿ ಗೋಪಸ್ತ್ರೀಯಂತೆ ಅಲಂಕರಿಸಿಕೊಳ್ಳಲು ಹೇಳಿದನು. ಸುಭದ್ರೆಯು ಗೋಪಸ್ತ್ರೀಯಾದನಂತರ ಕುಂತೀ-ದ್ರೌಪದಿಯರಿದ್ದ ಅಂತಃಪುರಕ್ಕೆ ಕಳುಹಿಸಿಕೊಟ್ಟನು. ಗೋಪಸ್ತ್ರೀಯ ಅಲಂಕಾರವನ್ನು ಧರಿಸಿಯೂ ಸುಭದ್ರೆಯು ಹೆಚ್ಚು ಸೌಂದರ್ಯದಿಂದ ಪ್ರಕಾಶಿಸಿದಳು.

ಸುಭದ್ರೆಯು ಅಂತಃಪುರದೊಳಗೆ ಹೋಗಿ ಮೊದಲು ಕುಂತಿಗೆ ನಮಸ್ಕರಿಸಿದಳು. ಕುಂತಿಗೆ ಸುಭದ್ರೆಯನ್ನು ಕಂಡರೆ ಸ್ವಾಭಾವಿಕವಾಗಿಯೇ ಹೆಚ್ಚು ಪ್ರೇಮವಿದ್ದಿತಲ್ಲವೇ? ಸುಭದ್ರೆಯನ್ನು ಬಾಚಿ ತಬ್ಬಿಕೊಂಡು ಶಿರಸ್ಸನ್ನು ಆಘ್ರಾಣಿಸಿ, ಅನೇಕಾನೇಕ ಆಶೀರ್ವಾದಗಳನ್ನು ಮಾಡಿದಳು. ಚಂದ್ರವದನೆಯಾದ ಸುಭದ್ರೆಯು ಒಡನೆಯೇ ಅಲ್ಲಿಂದ ಹೊರಟು ದ್ರೌಪದಿಯ ಅಂತಃಪುರಕ್ಕೆ ಬಂದು ಅವಳನ್ನು ಭಕ್ತಿಪುರಸ್ಸರವಾಗಿ ನಮಿಸಿ ಕೈಜೋಡಿಸಿ ಹೇಳಿದಳು : "ಅಕ್ಕ! ನಾನು ನಿನ್ನ ಸೇವಕಿಯಾಗಿರುತ್ತೇನೆ."

ಸುಮಧುರವಾದ ಆ ಮಾತುಗಳನ್ನು ಕೇಳಿದೊಡನೆಯೇ ದ್ರೌಪದಿಯ ಹೃದಯದಿಂದ ಪ್ರೀತಿರಸವು ಉಕ್ಕಿಬಂದು ಸುಭದ್ರೆಯನ್ನು ಗಾಢವಾಗಿ ಆಲಿಂಗನಮಾಡಿಕೊಂಡು– "ನಿಃಸಪತ್ನೋಽಸ್ತು ತೇ ಪತಿಃ– ನಿನ್ನ ಗಂಡನು ಶತ್ರುರಹಿತನಾಗಲಿ (ಅಜೇಯನಾಗಿರಲಿ)" ಎಂದು ಹರಸಿದಳು.

'ಹಾಗೆಯೇ ಆಗಲಕ್ಕ'- ಎಂದು ಹೇಳಿ ಸುಭದ್ರೆಯು ಪುನಃ ದ್ರೌಪದಿಗೆ ನಮಸ್ಕರಿಸಿ ಹೊರಟುಹೋದಳು.

ಜನಮೇಜಯ! ದ್ರೌಪದಿಯು ಸುಭದ್ರೆಯನ್ನು ಪ್ರೀತಿಯಿಂದ ಕಂಡುದರಿಂದ ಪಾಂಡವರೂ ಸಂತೋಷಗೊಂಡರು. ಕುಂತಿಗೂ ಪರಮಸಂತೋಷವಾಯಿತು.



ಪಾರ್ಥನು ಸುಭದ್ರೆಯೊಡನೆ ಇಂದ್ರಪ್ರಸ್ಥಕ್ಕೆ ತಲುಪಿದನೆಂಬ ವಾರ್ತೆಯು ಬಂದೊಡನೆಯೇ ಶ್ರೀಕೃಷ್ಣನು ತಂಗಿಗೂ ಪಾರ್ಥನಿಗೂ ಬಳುವಳಿಗಳನ್ನು ಕೊಡುವ ಸಲುವಾಗಿ ಬಲರಾಮನೊಡನೆ ಹೊರಟನು. ಅವರ ಜೊತೆಯಲ್ಲಿ ಬಹುಮಂದಿ ವೃಷ್ಣ್ಯಂಧಕ, ಭೋಜವಂಶಗಳ ನಾಯಕರೂ ಹೊರಟರು. ಅನೇಕಸೈನ್ಯಗಳೂ ಹೊರಟವು. ಭ್ರಾತೃ-ಪುತ್ರರೂ ಹೊರಟರು. ಸೈನ್ಯದ ದಂಡನಾಯಕನಾಗಿದ್ದ ಮತ್ತು ಮಹಾಮೇಧಾವಿಯೆಂದು ಪ್ರಸಿದ್ಧನಾಗಿದ್ದ ಅಕ್ರೂರನೂ ಹೊರಟನು. ಅನಾಧೃಷ್ಟಿ, ಬೃಹಸ್ಪತಿಯ ಶಿಷ್ಯನಾದ

ಉದ್ಧವ, ಸತ್ಯಕ, ಸಾತ್ಯಕಿ, ಕೃತವರ್ಮಾ, ಸಾತ್ವತ, ಪ್ರದ್ಯುಮ್ನ, ಸಾಂಬ, ನಿಶಠ, ಶಂಕು, ಚಾರುದೇಷ್ಣ, ಝಿಲ್ಲಿ, ವಿಪೃಥು, ಸಾರಣ, ಗದ-ಇವರೆಲ್ಲರೂ ಅನೇಕವಿಧವಾದ ಬಳುವಳಿಗಳನ್ನು ತೆಗೆದುಕೊಂಡು ಇಂದ್ರಪ್ರಸ್ಥಕ್ಕೆ ಹೊರಟರು.

ಶ್ರೀಕೃಷ್ಣನು ಯಾದವಪರಿವಾರದೊಡನೆ ಬರುತ್ತಿರುವನೆಂಬ ವಾರ್ತೆಯನ್ನು ಕೇಳಿದೊಡನೆಯೇ ಯುಧಿಷ್ಠಿರನು ವಾಸುದೇವನನ್ನು ಸ್ವಾಗತಿಸಲು ನಕುಲ-ಸಹದೇವರನ್ನು ಕಳುಹಿಸಿಕೊಟ್ಟನು. ಇಂದ್ರಪ್ರಸ್ಥನಗರಿಯು ಒಡನೆಯೇ ತಳಿರು-ತೋರಣಗಳಿಂದ ಅಲಂಕರಿಸಲ್ಪಟ್ಟಿತು. ಬೀದಿಗಳನ್ನು ಗುಡಿಸಿ ನೀರು ಚುಮುಕಿಸಿದರು. ಬೀದಿಯ ಎರಡು ಕಡೆಗಳಲ್ಲಿಯೂ ಕಂಬಗಳನ್ನು ನೆಟ್ಟು, ಅವುಗಳಲ್ಲಿ ಪುಷ್ಪಗುಚ್ಛಗಳನ್ನು ಕಟ್ಟಿದರು. ಸುಗಂಧವನ್ನು ಸೂಸುತ್ತಿದ್ದ ಪುಷ್ಪಗುಚ್ಛಗಳ ಮೇಲೆ ಚಂದನದ ನೀರನ್ನು ಚುಮುಕಿಸಿದರು. ಪ್ರತಿಯೊಂದು ಬೀದಿಯಲ್ಲಿಯೂ ಅಲ್ಲಲ್ಲಿ ಅಗ್ಗಿಷ್ಟಿಕೆಗಳನ್ನು ಇಟ್ಟು ಅಗರುಗಳನ್ನು ಹಾಕುತ್ತಿದ್ದರು. ನಗರವೆಲ್ಲವೂ ಸುಗಂಧಮಯವಾಗಿದ್ದಿತು.

ಶ್ರೀಕೃಷ್ಣನು ಯಾದವಪರಿವಾರದೊಡನೆ ಬರುತ್ತಿರುವನೆಂಬ ವಾರ್ತೆಯು ತಿಳಿದೊಡನೆಯೇ ಜನಸ್ತೋಮವು ಬೀದಿಯ ಎರಡು ಕಡೆಗಳಲ್ಲಿಯೂ ಕಿಕ್ಕಿರಿದು ನಿಂತಿತು. ವ್ಯಾಪಾರಿಗಳು ಅಂಗಡಿಗಳನ್ನು ಅಲಂಕರಿಸಿದ್ದರು.

ಮಹಾಬಾಹುವಾದ ಶ್ರೀಕೃಷ್ಣನು, ಬಲರಾಮ ಮತ್ತು ವೃಷ್ಣ್ಯಂಧಕ-ಭೋಜನಾಯಕರಿಂದ ಸಮೇತನಾಗಿ ನಗರಿಯೊಳಕ್ಕೆ ಪ್ರವೇಶಿಸಿ, ನಗರಪ್ರಮುಖರ ಯೋಗ-ಕ್ಷೇಮಗಳನ್ನು ವಿಚಾರಿಸಿ, ಪೂರ್ಣಕುಂಭವನ್ನು ಹಿಡಿದು ಸ್ವಾಗತಿಸಲು ನಿಂತಿದ್ದ ಬ್ರಾಹ್ಮಣರನ್ನು ಪುರಸ್ಕರಿಸಿದನು. ತನ್ನನ್ನು ನೋಡಲು ಕಾದಿದ್ದ ಜನತೆಗೆ ದರ್ಶನವನ್ನೀಯುತ್ತಾ, ಇಂದ್ರನ ಅರಮನೆಗೆ ಸಮನಾದ ಯುಧಿಷ್ಠಿರನ ಅರಮನೆಯನ್ನು ಮಂದಹಾಸಪೂರ್ವಕವಾಗಿ ಪ್ರವೇಶಿಸಿದನು. ಯುಧಿಷ್ಠಿರನು ಬಲರಾಮನನ್ನು ಯಥಾಯೋಗ್ಯವಾದ ಪೂಜೆಗಳಿಂದ ಸ್ವಾಗತಿಸಿದನಂತರ ಶ್ರೀಕೃಷ್ಣನನ್ನು ಆಲಿಂಗಿಸಿಕೊಂಡು ನೆತ್ತಿಯನ್ನು ಆಘ್ರಾಣಿಸಿದನು. ಯುಧಿಷ್ಠಿರನ ವಿಷಯದಲ್ಲಿ ಸುಪ್ರೀತನಾದ ಶ್ರೀಕೃಷ್ಣನು ಬಹುವಿನಯದಿಂದ ಯುಧಿಷ್ಠಿರನನ್ನು ಸಮ್ಮಾನಿಸಿದನು.

ಯುಧಿಷ್ಠಿರನ ಪಕ್ಕದಲ್ಲಿಯೇ ನಿಂತಿದ್ದ ಭೀಮನ ಯೋಗ-ಕ್ಷೇಮಗಳನ್ನೂ ವಿಚಾರಿಸಿ, ಅವನನ್ನು ಯಥಾಯೋಗ್ಯವಾಗಿ ಪುರಸ್ಕರಿಸಿದನು.

ಯುಧಿಷ್ಠಿರನು ವೃಷ್ಣ್ಯಂಧಕ-ಭೋಜನಾಯಕರಲ್ಲಿ ಕೆಲವರನ್ನು ಗುರುಗಳಂತೆ ಸಮ್ಮಾನಿಸಿದನು. ಸಮವಯಸ್ಕರಾದ ಕೆಲವರನ್ನು ಮಿತ್ರರನ್ನು ಸಮ್ಮಾನಿಸುವಂತೆ ಸಮ್ಮಾನಿಸಿದನು. ಕೆಲವರೊಡನೆ ಪ್ರೇಮಪೂರ್ವಕವಾದ ವಾರ್ತಾಲಾಪಮಾಡಿದನು. ತನಗಿಂತಲೂ ಕಿರಿಯರಿಂದ ಅಭಿವಾದನಮಾಡಿಸಿಕೊಂಡು ಅವರನ್ನು ಮನಸಾರ ಹರಸಿದನು.

ಈ ರೀತಿಯಲ್ಲಿ ಯುಧಿಷ್ಠಿರನು ಅರಮನೆಗೆ ಬಂದ ವೃಷ್ಣ್ಯಂಧಕ ಶ್ರೇಷ್ಠರನ್ನು ಯಥಾವಿಧಿಯಾಗಿ ಯಥಾಯೋಗ್ಯವಾಗಿ ಸತ್ಕರಿಸಿದನು.

ಅಭಿವಾದನ-ಪ್ರತ್ಯಭಿವಾದನಗಳೂ, ಕುಶಲಪ್ರಶ್ನೆಗಳೂ ಮುಗಿದ ನಂತರದಲ್ಲಿ ಹೃಷೀಕೇಶನು ವರನಿಗೂ, ವಧುವಿಗೂ, ವರನ ಬಂಧುಗಳಿಗೂ, ವಧುವಿನ ಜ್ಞಾತಿಗಳಿಗೂ, ತಂದೆ-ತಾಯಿ ಮೊದಲಾದವರಿಗೂ ಕೊಡಬೇಕಾದ ಬಳುವಳಿಗಳನ್ನು ಸಮರ್ಪಿಸಿದನು.

ನಾಲ್ಕು ಕುದುರೆಗಳಿಂದ ಎಳೆಯಲ್ಪಡುವ ಗಂಟೆಗಳ ಸಾಲುಗಳುಳ್ಳ, ಸ್ವರ್ಣಖಚಿತವಾದ, ಕುಶಲರಾದ ಸೂತರಿಂದ ಕೂಡಿದ ಸಾವಿರ ರಥಗಳು.; ಅತಿಸುಂದರವಾದ, ಪುಷ್ಕಳವಾಗಿ ಹಾಲುಕೊಡುವ, ಮಥುರಾದೇಶದ ಹತ್ತು ಸಾವಿರ ಗೋವುಗಳು.; ಚಿನ್ನದ ಕಡಿವಾಣಗಳುಳ್ಳ, ಚಂದ್ರನ ಕಾಂತಿಯಂತೆ ಬಿಳಿಯದಾದ ಒಂದು ಸಾವಿರ ಹೆಣ್ಣುಕುದುರೆಗಳು.; ಗಾಳಿಯಂತೆ ಶೀಘ್ರಗಾಮಿಗಳಾಗಿದ್ದ, ತರಪೇತಾದ, ಕಪ್ಪುಕೂದಲಿನ ಐದುನೂರು ಹೇಸರಗತ್ತೆಗಳು ಮತ್ತು ಬಿಳಿಯ ಕೂದಲಿನ ನೂರು ಹೇಸರಗತ್ತೆಗಳು ಕಮಲನೇತ್ರೆಯರಾದ, ಯುವತಿಯರಾದ, ಕಡುಚೆಲುವೆಯರಾದ, ಚಿನ್ನದ ಆಭರಣಗಳಿಂದ ಅಲಂಕೃತರಾದ, ಸಕಲಾಭರಣಭೂಷಿತೆಯರಾದ, ಸ್ನಾನ-ಪಾನಾದಿ ಸೇವಾಕಾರ್ಯಗಳಲ್ಲಿ ನುರಿತಿದ್ದ ಒಂದು ಸಾವಿರ ಕನ್ಯೆಯರು; ಬಾಹ್ಲೀಕದೇಶದ ಒಂದು ಲಕ್ಷ ಕುದುರೆಗಳು ; ಹತ್ತು ಜನ ಹೊರುವಷ್ಟು ಪರಿಶುದ್ಧವಾದ ಮತ್ತು ಶುದ್ಧಿಯಾಗದಿರುವ ಚಿನ್ನದ ಗಟ್ಟಿಗಳು—ಇವುಗಳನ್ನು ಶ್ರೀಕೃಷ್ಣನು ಪಾಂಡವರಿಗೆ ಬಳುವಳಿಯಾಗಿ ಕೊಟ್ಟನು. ಮೂರು ಕಡೆಗಳಲ್ಲಿ

ಮದೋದಕವನ್ನು ಸುರಿಸುತ್ತಿದ್ದ, ಬೆಟ್ಟದ ಶಿಖರದಂತಿರುವ, ಯುದ್ಧದಲ್ಲಿ ಹಿಂದಿರುಗದ, ಗಂಟೆಗಳನ್ನು ಕಟ್ಟಿರುವ, ಚಿನ್ನದ ಮಾಲೆಗಳಿಂದ ಅಲಂಕರಿಸಲ್ಪಟ್ಟ, ಮಾವುತರಿಂದ ಕೂಡಿದ ಒಂದು ಸಾವಿರ ಆನೆಗಳನ್ನು ಬಲರಾಮನು ಪಾರ್ಥನಿಗೆ ಬಳುವಳಿಯಾಗಿ ಕೊಟ್ಟನು. ಆ ಬಳುವಳಿಗಳು ಒಂದು ಮಹಾನದಿಯ ರೀತಿಯಲ್ಲಿಯೇ ಇದ್ದುವು. ಮುತ್ತು-ರತ್ನ-ವಜ್ರ-ವೈಡೂರ್ಯಗಳು ಪ್ರವಾಹದ ರೀತಿಯಲ್ಲಿಯೂ, ರತ್ನಗಂಬಳಿ ಮತ್ತು ಪೀತಾಂಬರಾದಿಗಳು ನೊರೆಯ ರೀತಿಯಲ್ಲಿಯೂ, ಆನೆಗಳು ಮೊಸಳೆ-ತಿಮಿಂಗಿಲಗಳ ರೀತಿಯಲ್ಲಿಯೂ, ಪತಾಕೆಗಳು ಪಾಚಿಗಳ ರೀತಿಯಲ್ಲಿಯೂ ಇದ್ದು ಪಾಂಡವರೊಡನಿದ್ದ ಸಮುದ್ರಪ್ರಾಯವಾದ ಐಶ್ವರ್ಯದೊಡನೆ ಸೇರಿ ಸಮುದ್ರವು ಉಕ್ಕಿಹೋಗುವಷ್ಟು ಸಮೃದ್ಧವಾಗಿ ಶತ್ರುಗಳಿಗೆ ವ್ಯಾಕುಲವನ್ನುಂಟುಮಾಡುವುದಾಗಿದ್ದಿತು. ಯುಧಿಷ್ಠಿರನು ಎಲ್ಲವನ್ನೂ ಸ್ವೀಕರಿಸಿ ಯದುವೀರರನ್ನು ಸತ್ಕರಿಸಿದನು.

ಕುರುವಂಶದವರೂ, ವೃಷ್ಣ್ಯಂಧಕ-ಭೋಜವಂಶದವರೂ ಅನೇಕದಿನಗಳವರೆಗೆ ಜೊತೆಯಲ್ಲಿದ್ದುಕೊಂಡು-ಧರ್ಮಾತ್ಮರಾದವರು ಅವಸಾನಾನಂತರದಲ್ಲಿ ಸ್ವರ್ಗಸುಖವನ್ನು ಅನುಭವಿಸುವಂತೆ-ಸುಖ ಮತ್ತು ಸಂತೋಷಗಳಿಂದ ಕಾಲಕಳೆಯುತ್ತಿದ್ದರು. ಕೆಲವು ವೇಳೆ ಗಟ್ಟಿಯಾಗಿ ನಗುತ್ತಲೂ ಕೆಲವು ವೇಳೆ ಚಪ್ಪಾಳೆಗಳನ್ನು ತಟ್ಟುತ್ತಲೂ ಯದು-ಕುರುವೀರರು ತಮ್ಮ ಸಂತೋಷಾಧಿಕ್ಯವನ್ನು ವ್ಯಕ್ತಪಡಿಸುತ್ತಿದ್ದರು. ಬಹುದಿನಗಳವರೆಗೆ ಅಂತಹ ಸಂತೋಷದ ಕ್ರೀಡಾವಿನೋದಗಳಲ್ಲಿ ನಲಿಯುತ್ತಿದ್ದರು. ಅನಂತರ ಯುಧಿಷ್ಠಿರನ ಅನುಮತಿಯನ್ನು ಪಡೆದು, ಯುಧಿಷ್ಠಿರನು ಪಾರಿತೋಷಕ ರೂಪದಲ್ಲಿ ಕೊಟ್ಟ ಧನ-ಕನಕ-ವಸ್ತುಗಳೊಡನೆ ಬಲರಾಮನ ನೇತೃತ್ವದಲ್ಲಿ ಯಾದವರೆಲ್ಲರೂ ದ್ವಾರಕಾಪುರಿಗೆ ಹಿಂದಿರುಗಿದರು.

ಶ್ರೀಕೃಷ್ಣನು ಮಾತ್ರ ಅರ್ಜುನನೊಡನೆ ಇಂದ್ರಪ್ರಸ್ಥದಲ್ಲಿಯೇ ಉಳಿದನು. ಇಬ್ಬರು ಗೆಳೆಯರೂ ಯಮುನಾತೀರದಲ್ಲಿದ್ದ ಕಾಡುಗಳಿಗೆ ಹೋಗಿ ಜಿಂಕೆಗಳನ್ನು ಬೇಟೆಯಾಡುತ್ತಿದ್ದರು. ಕೃಷ್ಣಾರ್ಜುನರು ಯಾವಾಗಲೂ ಪರಸ್ಪರ ಅಗಲುತ್ತಲೇ ಇರಲಿಲ್ಲ. ಆ ವೇಳೆಗೆ–ದೇವೇಂದ್ರನ ಸತಿಯಾದ ಶಚೀದೇವಿಯು ಜಯಂತನನ್ನು ಹಡೆದಂತೆ–ಪಾರ್ಥನ ಪತ್ನಿಯಾದ ಸುಭದ್ರೆಯು ಕುಲದೀಪಕನಾದ ಸುಪುತ್ರನನ್ನು ಪ್ರಸವಿಸಿದಳು. ಆ ಮಗುವು ಸರ್ವಾಂಗ

ಸುಂದರವಾಗಿದ್ದು, ನೀಳವಾದ ತೋಳುಗಳಿಂದಲೂ, ಅಗಲವಾದ ವಕ್ಷಃಸ್ಥಳದಿಂದಲೂ, ಎತ್ತಿನಂತೆ ವಿಶಾಲವಾದ ನೇತ್ರಗಳಿಂದಲೂ ಕೂಡಿದ್ದಿತು. ಮಗುವಿಗೆ ಅಭಿಮನ್ಯುವೆಂದು ನಾಮಕರಣವನ್ನು ಮಾಡಿದರು.

**ಅಭಿಶ್ಚ ಮನ್ಯುಮಾಂಶ್ಚೈವ ತತಸ್ತಮರಿಮರ್ದನಮ್ ।**
**ಅಭಿಮನ್ಯುಮಿತಿ ಪ್ರಾಹುರಾರ್ಜುನಿಂ ಪುರುಷರ್ಷಭಮ್ ॥೬೭॥**

ನಿರ್ಭೀತನಾಗಿಯೂ, ಕೋಪಿಷ್ಠನಾಗಿಯೂ ಇದ್ದು ಶತ್ರುಗಳನ್ನು ಮರ್ದನಮಾಡುವ ಸ್ವಭಾವವುಳ್ಳವನಾದುದರಿಂದ ಅರ್ಜುನನ ಮಗನಿಗೆ ಆ ಹೆಸರನ್ನಿಡಲಾಯಿತು. ಬನ್ನಿಯ ಮರವನ್ನು ಕಡೆದಾಗ ಅಗ್ನಿಯು ಹುಟ್ಟುವಂತೆ–ಸುಭದ್ರಾರ್ಜುನರಲ್ಲಿ ಅಗ್ನಿಗೆ ಅನುರೂಪವಾದ ತೇಜಸ್ಸುಳ್ಳ ಅಭಿಮನ್ಯುವು ಹುಟ್ಟಿದನು. ಅವನು ಹುಟ್ಟಿದೊಡನೆಯೇ ಯುಧಿಷ್ಠಿರನು ಬ್ರಾಹ್ಮಣರಿಗೆ ಹತ್ತುಸಾವಿರ ಗೋವುಗಳನ್ನೂ, ಸುವರ್ಣನಾಣ್ಯಗಳನ್ನೂ ದಾನವಾಗಿ ಕೊಟ್ಟನು. ಚಂದ್ರನು ಜೀವಕೋಟಿಗೆ ಆಹ್ಲಾದಕರನಾಗಿರುವಂತೆ–ಅಭಿಮನ್ಯುವು ಎಲ್ಲರಿಗೂ ಆಹ್ಲಾದವನ್ನುಂಟುಮಾಡುತ್ತಿದ್ದನು. ಅದರಲ್ಲಿಯೂ ಜನಾರ್ದನನಿಗೆ ಬಾಲನಾದ ಅಭಿಮನ್ಯುವನ್ನು ಕಂಡರೆ ಹೆಚ್ಚು ಪ್ರೀತಿ. ಮಗುವಿಗೆ ಮಾಡಬೇಕಾಗಿದ್ದ ಜಾತಕರ್ಮ, ನಾಮಕರಣ–ಇತ್ಯಾದಿ ಕರ್ಮಗಳನ್ನು ಶ್ರೀಕೃಷ್ಣನೇ ಮಾಡಿಸಿದನು. ಶಿಶುವು ಶುಕ್ಲಪಕ್ಷದ ಚಂದ್ರನಂತೆ ದಿನ-ದಿನಕ್ಕೂ ಅಭಿವೃದ್ಧಿಯನ್ನು ಹೊಂದಿತು. ಕಾಲಕ್ರಮದಲ್ಲಿ ಸಾಂಗ ವೇದಾಧ್ಯಯನವನ್ನು ಮಾಡಿ ತನ್ನ ತಂದೆಯಿಂದ ದಿವ್ಯ-ಮಾನುಷಶಸ್ತ್ರಾಸ್ತ್ರಗಳ ಪ್ರಯೋಗ-ಸಂವಿಧಾನಗಳನ್ನೂ ಅಭ್ಯಾಸಮಾಡಿದನು. * ಮಂತ್ರಮುಕ್ತ, ಪಾಣಿಮುಕ್ತ, ಮುಕ್ತಾಮುಕ್ತ, ಅಮುಕ್ತಗಳೆಂಬ ಚತುಷ್ಪಾದಗಳಿಂದ

---

* ಮಂತ್ರಮುಕ್ತ :- ಮಹಾಮಂತ್ರದಿಂದ ಅಭಿಮಂತ್ರಿಸಿ ಬಾಣವನ್ನು ಬಿಡುವುದು. (ಇದಕ್ಕೆ ಉಪಸಂಹಾರವಿಲ್ಲ) ಪಾಣಿಮುಕ್ತ :- ಸಾಮಾನ್ಯವಾದ ಬಾಣವನ್ನು ಬತ್ತಳಿಕೆಯಿಂದ ತೆಗೆದು ಧನುಸ್ಸಿನಲ್ಲಿ ನಿಯೋಜಿಸಿಬಿಡುವುದು. ಮುಕ್ತಾಮುಕ್ತ :- ಪ್ರಯೋಗ ಮತ್ತು ಉಪಸಂಹಾರಗಳಿರುವ ಮಹಾಸ್ತ್ರಗಳು. ಅಮುಕ್ತ :- ಪ್ರಯೋಗಿಸದೆಯೇ ಶತ್ರುಗಳನ್ನು ಭಯಪಡಿಸುವ ಅಭಿಮಂತ್ರಿತಧ್ವಜಾದಿಗಳು. ಇವು ಧನುರ್ವೇದದ ನಾಲ್ಕು ಪಾದಗಳು. ಸೂತ್ರ, ಶಿಕ್ಷೆ, ಪ್ರಯೋಗ ಮತ್ತು ರಹಸ್ಯ– ಈ ನಾಲ್ಕನ್ನೂ ಧನುರ್ವೇದದ ನಾಲ್ಕು ಪಾದಗಳೆನ್ನುತ್ತಾರೆ.

ಯುಕ್ತವಾದ ಧನುರ್ವೇದವನ್ನೂ–ಆದಾನ, ಸಂಧಾನ, ವಿಮೋಕ್ಷಣ, ವಿನಿವರ್ತನ, ಸ್ಥಾನ, ಮುಷ್ಟಿ, ಪ್ರಯೋಗ, ಪ್ರಾಯಶ್ಚಿತ್ತ, ಮಂಡಲ ಮತ್ತು ರಹಸ್ಯಗಳೆಂಬ ಹತ್ತು ರೀತಿಯ ಧನುರ್ವೇದಾಂಗಗಳನ್ನೂ ಅಭಿಮನ್ಯುವು ಪಾರ್ಥನಿಂದ ಕಲಿತನು.

ತನ್ನ ಸಮ್ಮುಖಕ್ಕೆ ಬಂದ ದಿವ್ಯಾಸ್ತ್ರಗಳ ಶಮನಕ್ಕಾಗಿ ಪ್ರತ್ಯಸ್ತ್ರಗಳನ್ನು ಬಿಡುವ ಪ್ರಕ್ರಿಯೆ, ಶಸ್ತ್ರಾಸ್ತ್ರಗಳ ವಿಜ್ಞಾನ, ಅಸ್ತ್ರಗಳ ಸೌಷ್ಠವ, ಉತ್ಸರ್ಪಣ-ಪ್ರಸರ್ಪಣಾದಿಗಳಲ್ಲಿ ಅಭಿಮನ್ಯುವು ವಿಶೇಷಪ್ರಾವೀಣ್ಯವನ್ನು ಪಡೆದನು. ಹೆಚ್ಚೇನು ಹೇಳಲಿ, ಜನಮೇಜಯ! ಅಭಿಮನ್ಯುವು ಧನುರ್ವಿದ್ಯೆಯಲ್ಲಿಯೂ, ಸಕಲಶಾಸ್ತ್ರಗಳಲ್ಲಿಯೂ ತಂದೆಯಾದ ಪಾರ್ಥನಿಗೆ ಸಮಾನನೆನಿಸಿದನು. ಮಗನ ಸಾಮರ್ಥ್ಯವನ್ನು ಕಂಡು ಪಾರ್ಥನ ಸಂತೋಷಕ್ಕೆ ಪಾರವೇ ಇರಲಿಲ್ಲ. ದೇವೇಂದ್ರನು ಹಿಂದೆ ತನ್ನ ಮಗನಾದ ಪಾರ್ಥನ ಶೌರ್ಯ-ಪರಾಕ್ರಮಗಳನ್ನು ನೋಡಿ ಸಂತೋಷಿಸಿದ್ದಂತೆ–ಇಂದು ಪಾರ್ಥನು ತನ್ನ ಮಗನಾದ ಅಭಿಮನ್ಯುವಿನ ಶೌರ್ಯವನ್ನು ನೋಡಿ ಸಂತೋಷಿಸಿದನು. ಅಭಿಮನ್ಯುವು ತನಗೆದುರಾಗಿ ಬರುವ ಶತ್ರುಗಳೆಲ್ಲರನ್ನೂ ನಿಗ್ರಹಿಸುವ ಸಾಮರ್ಥ್ಯವನ್ನು ಪಡೆದಿದ್ದನು. ಸರ್ವಲಕ್ಷಣಸಂಪನ್ನನಾದ ದೇಹವುಳ್ಳವನಾಗಿದ್ದನು. ಎತ್ತಿನಂತೆ ಸ್ಕಂಧವುಳ್ಳವನಾಗಿಯೂ, ಶತ್ರುಗಳ ವಿಷಯದಲ್ಲಿ ಬಾಯ್ದೆರೆದ ಸರ್ಪದಂತೆಯೂ, ಸಿಂಹದರ್ಪನಾಗಿಯೂ ಇದ್ದನು. ಮಹಾಧನುಸ್ಸನ್ನು ಧರಿಸಿದ್ದ ಅಭಿಮನ್ಯುವು ಮದೋದಕದಿಂದ ಕೂಡಿರುವ ಮದಿಸಿದ ಗಜದಂತೆ ನಡಿಗೆಯುಳ್ಳವನಾಗಿ ಪ್ರಕಾಶಿಸುತ್ತಿದ್ದನು. ಚಂದ್ರನಂತೆ ಸುಂದರವಾದ ಮುಖಾರವಿಂದವುಳ್ಳವನಾಗಿ, ಮೇಘನಾದದಂತೆ ಧ್ವನಿಯುಳ್ಳವನಾಗಿದ್ದ ಸುಭದ್ರಾತನಯನು ಧೈರ್ಯದಲ್ಲಿಯೂ, ಶಕ್ತಿಯಲ್ಲಿಯೂ, ಸೌಂದರ್ಯದಲ್ಲಿಯೂ, ಆಕೃತಿಯಲ್ಲಿಯೂ ಶ್ರೀಕೃಷ್ಣನಿಗೆ ಸದೃಶನಾಗಿದ್ದನು.

ದ್ರೌಪದಿಯೂ ಸಹ ತನ್ನ ಐವರು ಪತಿಗಳಿಂದ ಯುದ್ಧದಲ್ಲಿ ಅಪ್ರತಿಮ ಸಾಮರ್ಥ್ಯವನ್ನು ತೋರುವ, ಸ್ಥೈರ್ಯದಲ್ಲಿ ಪರ್ವತೋಪಮರಾದ ಐವರು ಪುತ್ರರನ್ನು ಪಡೆದಳು. ರಾಜಪುರೋಹಿತರು ಹುಟ್ಟಿದ ಮಕ್ಕಳಿಗೆ ಅನುರೂಪವಾದ ಹೆಸರುಗಳನ್ನೇ ಇಟ್ಟರು.

ಯುಧಿಷ್ಠಿರನಿಂದ ಪ್ರತಿವಿಂಧ್ಯನನ್ನೂ, ವೃಕೋದರನಿಂದ ಸುತಸೋಮನನ್ನೂ, ಅರ್ಜುನನಿಂದ ಶ್ರುತಕರ್ಮನನ್ನೂ, ನಕುಲನಿಂದ ಶತಾನೀಕನನ್ನೂ, ಸಹದೇವನಿಂದ ಶ್ರುತಸೇನನನ್ನೂ–ದ್ರೌಪದಿಯು ಪಡೆದಳು. ಅದಿತಿಯು ಆದಿತ್ಯರನ್ನು ಪಡೆದಂತೆ-ದ್ರೌಪದಿಯು ಮಹಾರಥರಾದ ವೀರಪುತ್ರರನ್ನು ಪಂಚಪಾಂಡವರಿಂದ ಪಡೆದಳು.

**ಶಾಸ್ತ್ರತಃ ಪ್ರತಿವಿನ್ಧ್ಯಂ ತಮೂಚುರ್ವಿಪ್ರಾ ಯುಧಿಷ್ಠಿರಮ್ ।**
**ಪರಪ್ರಹರಣಜ್ಞಾನೇ ಪ್ರತಿವಿನ್ಧ್ಯೋ ಭವತ್ವಯಮ್ ॥೮೧॥**

ದ್ರೌಪದಿಯಲ್ಲಿ ಯುಧಿಷ್ಠಿರನಿಗೆ ಹುಟ್ಟಿದ ಮಗನು, ಮುಂದೆ ನಡೆಯುವ ಮಹಾಯುದ್ಧದಲ್ಲಿ ಶತ್ರುಗಳ ಬಾಣಗಳನ್ನು ವಿಂಧ್ಯಪರ್ವತದಂತೆ ತಡೆಯಲು ಸಮರ್ಥನಾಗಲೆಂಬ ಆಶಯದಿಂದ ಪ್ರತಿವಿಂಧ್ಯನೆಂದು ಹೆಸರನ್ನಿಟ್ಟರು.

**ಸುತೇ ಸೋಮಸಹಸ್ರೇ ತು ಸೋಮಾರ್ಕಸಮತೇಜಸಮ್ ।**
**ಸುತಸೋಮಂ ಮಹೇಷ್ವಾಸಂ ಸುಷುವೇ ಭೀಮಸೇನತಃ ॥೮೨॥**

ಭೀಮನು ಒಂದು ಸಾವಿರ ಸೋಮಯಾಗಗಳನ್ನು ಮಾಡಿದನಂತರ ಸೂರ್ಯ-ಚಂದ್ರರ ತೇಜಸ್ಸಿಗೆ ಅನುರೂಪವಾದ ತೇಜಸ್ಸಿನಿಂದ ಕೂಡಿದ್ದ ಮಹಾಧನುಷ್ಮಂತನಾದ ಮಗನನ್ನು ದ್ರೌಪದಿಯು ಭೀಮಸೇನನಿಂದ ಪಡೆದಳು. ಭೀಮನು ಸೋಮಯಾಗಗಳನ್ನು ಮಾಡಿದನಂತರ ಆ ಮಗುವು ದ್ರೌಪದಿಗೆ ಹುಟ್ಟಿದ್ದರಿಂದ ಮಗುವಿಗೆ ಸುತಸೋಮನೆಂದೇ ಹೆಸರನ್ನಿಟ್ಟರು.

**ಶ್ರುತಂ ಕರ್ಮ ಮಹತ್ಕೃತ್ವಾ ನಿವೃತ್ತೇನ ಕಿರೀಟಿನಾ ।**
**ಜಾತಃ ಪುತ್ರಸ್ತಥೇತ್ಯೇವಂ ಶ್ರುತಕರ್ಮಾ ತತೋಽಭವತ್ ॥೮೩॥**

ಅರ್ಜುನನು ವನವಾಸಕಾಲದಲ್ಲಿ ಅನೇಕಮಹಾಕಾರ್ಯಗಳನ್ನು ಮಾಡಿ ಹಿಂದಿರುಗಿದನಂತರ ದ್ರೌಪದಿಯಲ್ಲಿ ಆ ಶಿಶುವು ಜನಿಸಿದುದರಿಂದ ಶ್ರುತಕರ್ಮನೆಂದು ಹೆಸರನ್ನಿಟ್ಟರು.

**ಶತಾನೀಕಸ್ಯ ರಾಜರ್ಷೇಃ ಕೌರವ್ಯಸ್ಯ ಮಹಾತ್ಮನಃ ।**
**ಚಕ್ರೇ ಪುತ್ರಂ ಸನಾಮಾನಂ ನಕುಲಃ ಕೀರ್ತಿವರ್ಧನಮ್ ॥೮೪॥**

ಕುರುಕುಲಾವತಂಸನಾದ, ರಾಜರ್ಷಿಯಾದ, ಮಹಾತ್ಮನಾದ ಶತಾ

ನೀಕನ ಹೆಸರನ್ನೇ ನಕುಲನು ಕೀರ್ತಿವರ್ಧನನಾದ ತನ್ನ ಮಗನಿಗೂ ಇಟ್ಟನು.

**ತತಸ್ತ್ವಜೀಜನತ್ಕೃಷ್ಣಾ ನಕ್ಷತ್ರೇ ವಹ್ನಿದೈವತೇ ।**
**ಸಹದೇವಾತ್ಸುತಂ ತಸ್ಮಾಚ್ಛ್ರುತಸೇನೇತಿ ಯಂ ವಿದುಃ ॥೮೫॥**

ದ್ರೌಪದಿಯು ಸಹದೇವನ ಸಮಾಗಮದಿಂದ ವಹ್ನಿದೇವತಾಕವಾದ ಕೃತ್ತಿಕಾನಕ್ಷತ್ರದಲ್ಲಿ ಸುತನನ್ನು ಪ್ರಸವಿಸಿದಳು. ಸಹದೇವನ ಮಗನು ಅಗ್ನಿ ದೇವತಾತ್ಮಕವಾದ ಕೃತ್ತಿಕಾನಕ್ಷತ್ರದಲ್ಲಿ ಹುಟ್ಟಿದ್ದರಿಂದ 'ಶ್ರುತಸೇನ' ಎಂಬ ಅಗ್ನಿಯ ಹೆಸರನ್ನೇ ಇಡಲಾಯಿತು.

ಆ ಐವರು ಮಕ್ಕಳೂ ಒಂದೊಂದು ವರ್ಷದ ಅಂತರದಲ್ಲಿ ಹುಟ್ಟಿದರು. ಐವರು ಮಕ್ಕಳೂ ಪರಸ್ಪರವಾಗಿ ವಿಶೇಷಪ್ರೀತಿಯಿಂದ ಕೂಡಿರುತ್ತಿದ್ದರು. ಅವರೆಲ್ಲರ ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ–ಇವೆಲ್ಲವನ್ನೂ ಯಥಾವಿಧಿಯಾಗಿ ಕುಲಪುರೋಹಿತರಾದ ಧೌಮ್ಯರು ನೆರವೇರಿಸಿದರು.

ಅವರೈವರೂ ಸುಚರಿತ್ರರಾಗಿದ್ದುಕೊಂಡು ವೇದಾಧ್ಯಯನಮಾಡಿ ಧನುರ್ವಿದ್ಯೆಯನ್ನು ಪಾರ್ಥನಿಂದಲೇ ಕಲಿತರು.

ದೇವಲೋಕದ ಬಾಲಕರಂತೆ ಪ್ರಕಾಶಿಸುತ್ತಿದ್ದ, ವಿಶಾಲವಕ್ಷರಾದ ಮಕ್ಕಳನ್ನು ಪಡೆದು ಪಂಚಪಾಂಡವರು ಹೆಚ್ಚಿನ ಸಂತೋಷವನ್ನು ಹೊಂದಿದರು."

೨೨೧ನೆಯ ಅಧ್ಯಾಯವು ಮುಗಿಯಿತು.

೨೨೨ನೆಯ ಅಧ್ಯಾಯ ಖಾಂಡವದಾಹಪರ್ವ

## ಯುಧಿಷ್ಠಿರನ ರಾಜ್ಯಭಾರ : ಖಾಂಡವವನಪ್ರದೇಶದಲ್ಲಿ ಪಾರ್ಥ–ಕೃಷ್ಣರ ವಿಹಾರ : ಬ್ರಾಹ್ಮಣವೇಷಧಾರಿಯಾದ ಅಗ್ನಿಯ ಆಗಮನ

"ಜನಮೇಜಯ! ಧೃತರಾಷ್ಟ್ರನಿಂದಲೂ, ಭೀಷ್ಮನಿಂದಲೂ ಅನುಜ್ಞೆಯನ್ನು ಪಡೆದು ಇಂದ್ರಪ್ರಸ್ಥವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವನ್ನಾಳುತ್ತಿದ್ದ ಯುಧಿಷ್ಠಿರಾದಿಗಳು ಸುತ್ತ-ಮುತ್ತಲ ಅನೇಕ

ರಾಜ್ಯಗಳನ್ನು ತಮ್ಮ ಕೈವಶಮಾಡಿಕೊಂಡರು. ರಾಜ್ಯಗಳನ್ನು ಗೆದ್ದುದು ಮಾತ್ರ ವಲ್ಲ.; ತಮ್ಮ ಚಕ್ರಾಧಿಪತ್ಯದಲ್ಲಿ ಪ್ರಜೆಗಳ ಯೋಗ-ಕ್ಷೇಮಗಳನ್ನೂ ಬಹಳ ವಿಚಕ್ಷಣೆಯಿಂದ ನೋಡಿಕೊಳ್ಳುತ್ತಿದ್ದರು. ಜೀವಾತ್ಮರು ಸಲಕ್ಷಣವಾದ, ನೀರೋಗವಾದ, ಪುಣ್ಯಕಾರ್ಯವನ್ನೆಸಗುವ ಶರೀರವನ್ನು ಹೊಂದಿ ನಿರ್ಬಾಧಿತರಾಗಿರುವಂತೆ–ಯುಧಿಷ್ಠಿರನನ್ನು ಆಶ್ರಯಿಸಿ ಪ್ರಜೆಗಳು ಸುಖದಿಂದಿದ್ದರು.

ಧರ್ಮಾರ್ಥ-ಕಾಮಗಳೆಂಬ ಮೂರು ಪುರುಷಾರ್ಥಗಳನ್ನೂ ತನ್ನ ಬಂಧುಗಳೆಂದೇ ಭಾವಿಸಿ ಕೊಂಚವಾದರೂ ತಾರತಮ್ಯವಿಲ್ಲದಂತೆ ಧರ್ಮಜನು ಸಾಧಿಸಿಕೊಂಡು ಬರುತ್ತಿದ್ದನು. ಸಮವಾಗಿ ತಾರತಮ್ಯವಿಲ್ಲದೇ ವಿಭಾಗಿಸಲ್ಪಟ್ಟಿರುವ ಧರ್ಮಾರ್ಥ-ಕಾಮಗಳಿಗೆ ನಾಲ್ಕನೆಯದಾದ, ಭೂಮಿಯಲ್ಲಿ ಮೂರ್ತಿಮತ್ತಾಗಿರುವ ಮೋಕ್ಷದಂತೆಯೇ ಯುಧಿಷ್ಠಿರನು ಪ್ರಕಾಶಿಸಿದನು. ಪ್ರಜೆಗಳಿಗೆ ರಾಜ್ಯದಲ್ಲಿ ಯಾವ ವಿಧವಾದ ನ್ಯೂನತೆಯೂ ಕಂಡುಬರುತ್ತಿರಲಿಲ್ಲ. ಯುಧಿಷ್ಠಿರನು ವೇದ-ವೇದಾಂಗಗಳ ಅಧ್ಯಯನದಲ್ಲಿ ನಿರತನಾಗಿರುತ್ತಿದ್ದನು. ಅನೇಕಮಹಾಯಾಗಗಳನ್ನು ಮಾಡುತ್ತಿದ್ದನು ಮತ್ತು ಪ್ರಜೆಗಳ ರಕ್ಷಣೆಯಲ್ಲಿ ಸರ್ವದಾ ಆಸಕ್ತಿಯುಳ್ಳವನಾಗಿದ್ದನು. ಈ ವಿಧವಾದ ಸಕಲಗುಣಪರಿಪೂರ್ಣನಾದ ರಾಜನನ್ನು ಇಂದ್ರಪ್ರಸ್ಥದ ಪ್ರಜೆಗಳು ಪಡೆದಿದ್ದರು. ಅವರಲ್ಲಿ ಲಕ್ಷ್ಮಿಯು ನೆಲೆಗೊಂಡಳು. ಅವರ ಮನಸ್ಸು ಧರ್ಮಪರಾಯಣವಾಯಿತು. ಧರ್ಮವು ದಿನೇ-ದಿನೇ ಅಭಿವೃದ್ಧಿಯನ್ನು ಹೊಂದುತ್ತಿದ್ದಿತು. ದೇಶದ ಎಲ್ಲ ಕಡೆಗಳಲ್ಲಿಯೂ ಧರ್ಮದ ಪುನರುತ್ಥಾನವಾಯಿತು. ನಾಲ್ವರು ಸಹೋದರರಿಂದಲೂ ಆರಾಧಿಸಲ್ಪಡುತ್ತಿದ್ದ ಯುಧಿಷ್ಠಿರನು-ನಾಲ್ಕು ವೇದಗಳಿಂದ ನೆರವೇರಿಸಲ್ಪಡುತ್ತಿರುವ ಮಹಾಯಾಗದಂತೆ–ಪ್ರಕಾಶಿಸಿದನು. ಪ್ರಜಾಪತಿಬ್ರಹ್ಮನನ್ನು ಬೃಹಸ್ಪತಿಯೇ ಮೊದಲಾದ ದೇವತೆಗಳು ಸುತ್ತುವರಿದು ಕುಳಿತಿರುವಂತೆ– ಯುಧಿಷ್ಠಿರನ ಸುತ್ತಲೂ ಬೃಹಸ್ಪತಿಗೆ ಸಮಾನರಾದ ಧೌಮ್ಯಾದಿ ಬ್ರಾಹ್ಮಣೋತ್ತಮರು ಕುಳಿತಿರುತ್ತಿದ್ದರು. ಕಳಂಕರಹಿತನಾದ ಪೂರ್ಣಚಂದ್ರನಲ್ಲಿ ಹೇಗೋ ಹಾಗೆ ಧರ್ಮರಾಜನಲ್ಲಿ ಪ್ರಜೆಗಳು ನೇತ್ರಾನಂದವನ್ನು ಮಾತ್ರವೇ ಪಡೆಯು ತ್ತಿರಲಿಲ್ಲ.; ಹೃದಯಾನಂದವನ್ನೂ ಹೊಂದುತ್ತಿದ್ದರು. ಪ್ರಜೆಗಳು ಯುಧಿಷ್ಠಿರನನ್ನು ಕೇವಲ ರಾಜನೆಂಬ ಕಾರಣದಿಂದಲೇ ಗೌರವಿಸುತ್ತಿರಲಿಲ್ಲ ;

ಯುಧಿಷ್ಠಿರನಲ್ಲಿ ಪ್ರಜೆಗಳಿಗೆ ಅನಿರ್ವಾಚ್ಯವಾದ, ಸಹಜವಾದ ಪ್ರೇಮವು ಮೂಡಿದ್ದಿತು. ಆ ಕಾರಣದಿಂದಲೇ ಪ್ರಜೆಗಳು ಧರ್ಮರಾಜನನ್ನು ಕಂಡು ಹೃದಯದಲ್ಲಿಯೂ ಆನಂದಿಸುತ್ತಿದ್ದರು.

ರಾಜಾ ಯುಧಿಷ್ಠಿರನೂ ಯಾವಾಗಲೂ ಪ್ರಜೆಗಳ ಪ್ರಿಯ-ಹಿತಾಕಾಂಕ್ಷಿಯಾಗಿಯೇ ಇರುತ್ತಿದ್ದನು.

**ನ ಹ್ಯಯುಕ್ತಂ ನ ಚಾಸತ್ಯಂ ನಾಸಹ್ಯಂ ನ ಚ ವಾಪ್ರಿಯಮ್ ।**
**ಭಾಷಿತಂ ಚಾರುಭಾಷಸ್ಯ ಜಜ್ಞೇ ಪಾರ್ಥಸ್ಯ ಧೀಮತಃ ॥೧೧॥**

ಪ್ರಿಯಭಾಷಿಯಾದ, ಬುದ್ಧಿವಂತನಾದ ಯುಧಿಷ್ಠಿರನು ಅಯುಕ್ತವಾದುದನ್ನಾಗಲೀ, ಅಸತ್ಯವಾದುದನ್ನಾಗಲೀ, ಅಸಹ್ಯವಾದುದನ್ನಾಗಲೀ, ಅಪ್ರಿಯವಾದುದನ್ನಾಗಲೀ–ಎಂದೂ ಹೇಳುತ್ತಿರಲಿಲ್ಲ. ತನ್ನ ಶರೀರಕ್ಕೆ ಹಿತವನ್ನುಂಟುಮಾಡಿಕೊಳ್ಳುವ ಅಥವಾ ಹಿತವನ್ನು ಬಯಸುವ ರೀತಿಯಲ್ಲಿ ಸಕಲಪ್ರಜೆಗಳಿಗೂ ಹಿತವನ್ನೇ ಉಂಟುಮಾಡುತ್ತಾ ಅವರ ಆನಂದದೊಡನೆ ತಾನೂ ಆನಂದಪಡುತ್ತಾ ಕಾಲಕಳೆಯುತ್ತಿದ್ದನು. ಪಾಂಡವರೆಲ್ಲರೂ ತಮ್ಮ ಭುಜಬಲ-ಪರಾಕ್ರಮಗಳಿಂದ ಸಕಲರಾಜರನ್ನೂ ಸಂತಾಪಗೊಳಿಸುತ್ತಾ ಅವರೆಲ್ಲರನ್ನೂ ಆಶ್ರಿತರನ್ನಾಗಿ ಮಾಡಿಕೊಂಡು ಶತ್ರುಗಳ ಭಯವಿಲ್ಲದವರಾಗಿ ಆನಂದದಿಂದ ಕಾಲಕಳೆಯುತ್ತಿದ್ದರು.

ಕೆಲವು ದಿನಗಳು ಕಳೆದುವು. ಒಂದು ದಿನ ಪಾರ್ಥನು ಶ್ರೀಕೃಷ್ಣನೊಡನೆ ಹೇಳಿದನು :

"ಕೃಷ್ಣ! ಬೇಸಿಗೆಯ ಕಾಲವು ಬಂದಿದೆ. ಜಲಕ್ರೀಡೆಯಾಡಲು ಯೋಗ್ಯವಾದ ಕಾಲವಿದು. ಬಂಧು-ಮಿತ್ರರೊಡನೆ ಯಮುನಾನದಿಗೆ ಹೋಗಿ ಅಲ್ಲಿ ವಿಹಾರಮಾಡಿಕೊಂಡು ಸಾಯಂಕಾಲ ಹಿಂದಿರುಗುವ ಅಭಿಲಾಷೆಯಿದೆ. ನಿನ್ನ ಅಭಿಪ್ರಾಯವೇನು?"

"ಕುಂತೀಸುತನೇ! ನಿನಗೆ ಇಷ್ಟವಾದುದೇ ನನಗೂ ಇಷ್ಟವಾಗಿರುವುದು. ಮಿತ್ರರೊಡನೆ ಯಮುನೆಗೆ ಹೋಗಿ ಯಥಾಸುಖವಾಗಿ ಮನಬಂದಂತೆ ಜಲಕ್ರೀಡೆಯಾಡೋಣ."

ಯುಧಿಷ್ಠಿರನ ಅನುಮತಿಯನ್ನು ಪಡೆದು ಬಂಧು-ಮಿತ್ರ-ಪರಿವಾರ

ಸಮೇತರಾದ ಕೃಷ್ಣಾರ್ಜುನರು ವಿಹಾರಾರ್ಥವಾಗಿ ಯಮುನಾನದಿಗೆ ಹೊರಟರು.

ಯಮುನೆಯ ದಡದಲ್ಲಿ ಅವರೆಲ್ಲರ ವಿಹಾರಾರ್ಥವಾಗಿಯೇ ಒಂದು ಪ್ರದೇಶವನ್ನು ಸಿದ್ಧಪಡಿಸಲಾಗಿತ್ತು. ಅಲ್ಲಿ ನಾನಾಜಾತಿಗಳ ಮರ-ಗಿಡ-ಬಳ್ಳಿಗಳಿದ್ದು, ಅವುಗಳ ಮಧ್ಯದಲ್ಲಿ ನಯನಮನೋಹರವಾದ ಸೌಧಗಳು ನಿರ್ಮಿಸಲ್ಪಟ್ಟಿದ್ದು ಆ ಸ್ಥಳವು ದೇವನಗರಿಯಂತೆ ಪ್ರಕಾಶಿಸುತ್ತಿದ್ದಿತು. ಆ ಸೌಧಗಳಲ್ಲಿ ಪರಿವಾರಸಹಿತರಾದ ಕೃಷ್ಣಾರ್ಜುನರಿಗಾಗಿ ಅತ್ಯುತ್ತಮವಾದ ಭಕ್ಷ್ಯ-ಭೋಜ್ಯಗಳೂ, ಲೇಹ್ಯ-ಚೋಷ್ಯ-ಪಾನೀಯಗಳೂ, ಪುಷ್ಪಹಾರಗಳೂ, ನಾನಾಬಗೆಯ ಅಗರು-ಗಂಧಗಳೂ ಸಿದ್ಧವಾಗಿದ್ದುವು. ಕೃಷ್ಣಾರ್ಜುನರು ರತ್ನಖಚಿತವಾಗಿದ್ದ ಆ ಸೌಧಗಳನ್ನು ಸಕಲಪರಿವಾರದೊಡನೆ ಪ್ರವೇಶಿಸಿದರು.

ಪರಿವಾರದಲ್ಲಿ ಒಬ್ಬೊಬ್ಬರೂ ತಮ್ಮ ಮನಬಂದಂತೆ ಒಂದೊಂದು ಕ್ರೀಡೆಯಲ್ಲಿ ನಿರತರಾದರು.

ವಿಪುಲಶ್ರೋಣಿಯರಾದ, ಮನೋಹರವಾದ ಕುಚದ್ವಯಭಾರದಿಂದ ಬಳುಕುತ್ತಿರುವ, ಯೌವನಮದದಿಂದ ಮನಬಂದಂತೆ ಹೆಜ್ಜೆಗಳನ್ನಿಡುತ್ತಿದ್ದ ವಾಮಲೋಚನೆಯರೂ ಕೃಷ್ಣಾರ್ಜುನರ ಆದೇಶದಂತೆ ಯಥೇಚ್ಛವಾಗಿ ಕ್ರೀಡಿಸಲು ಪ್ರಾರಂಭಿಸಿದರು. ಕೆಲವರು ಉದ್ಯಾನವನದಲ್ಲಿಯೂ, ಕೆಲವರು ಯಮುನೆಯಲ್ಲಿಯೂ ಮತ್ತು ಸೌಧದ ಒಳಭಾಗದಲ್ಲಿಯೂ ವಿಹರಿಸುತ್ತಿದ್ದರು.

ರಾಜಪರಿವಾರದವರೆಲ್ಲರೂ ಕ್ರೀಡೆಗಳಲ್ಲಿ ನಿರತರಾದರು. ದ್ರಾಕ್ಷಾರಸವನ್ನು ಕುಡಿದು ಮದಿಸಿದ್ದ ದ್ರೌಪದೀ-ಸುಭದ್ರೆಯರು ಕ್ರೀಡೆಗಳಲ್ಲಿ ಭಾಗವಹಿಸಿ ಅಮೂಲ್ಯವಾದ ವಸ್ತ್ರಾಭರಣಗಳನ್ನು ತಮ್ಮ ಜೊತೆಗಾತಿಯರಿಗೆ ಪಾರಿತೋಷಕವಾಗಿ ಕೊಡುತ್ತಿದ್ದರು. ವರಾಂಗನೆಯರಲ್ಲಿ ಕೆಲವರು ಆನಂದದಿಂದ ನೃತ್ಯಮಾಡುತ್ತಲೂ ಕೆಲವರು ಕೇಕೆಹಾಕುತ್ತಲೂ ಇದ್ದರು. ಕೆಲವು ಸ್ತ್ರೀಯರು ತಮ್ಮ ಜೊತೆಗಾತಿಯರನ್ನು ಪರಿಹಾಸಮಾಡಿ ನಗುತ್ತಿದ್ದರು. ಕೆಲವು ಸ್ತ್ರೀಯರು ದ್ರಾಕ್ಷಾರಸವನ್ನು ಕುಡಿಯುವುದರಲ್ಲಿ ನಿರತರಾಗಿದ್ದರು. ತಮ್ಮ-ತಮ್ಮ ಆಟಗಳಲ್ಲಿ ಒಬ್ಬಳು ಮತ್ತೊಬ್ಬಳ ಮುಖವನ್ನು ನೋಡು

ವುದು ; ಕೇಕೆಹಾಕಿಕೊಂಡು ನಗುವುದು ; ಒಬ್ಬ ಯುವತಿಯು ಮತ್ತೊಬ್ಬ ಯುವತಿಯನ್ನು ವ್ಯಾಜಾಂತರದಿಂದ ಜಗಳಕ್ಕೆ ಕರೆಯುವುದು! ಹೊಡೆಯುವುದು ; ಇಂತಹ ಕಲಹಗಳನ್ನು ನೋಡಿ ಬೇಸರಪಟ್ಟು ಒಬ್ಬಿಬ್ಬ ಯುವತಿಯರು ದೂರಹೋಗಿ ತಮ್ಮ ರಹಸ್ಯವಿಷಯಗಳನ್ನು ಪರಸ್ಪರವಾಗಿ ಮಾತನಾಡಿಕೊಳ್ಳುವುದು–ಇತ್ಯಾದಿಗಳು ಆ ಉದ್ಯಾನವನದಲ್ಲಿ ನಡೆಯುತ್ತಿದ್ದುವು. ವೀಣಾ-ವೇಣು-ಮೃದಂಗಾದಿಗಳ ಸುಮಧುರವಾದ ಧ್ವನಿಗಳಿಂದ ಆ ಭವನವೂ ಮತ್ತು ವನವೂ ತುಂಬಿಹೋಯಿತು.

ಸಕಲಪರಿವಾರದವರನ್ನೂ ಆಟ-ಪಾಟಗಳಲ್ಲಿ ನಿಯೋಜಿಸಿ, ಕೃಷ್ಣಾರ್ಜುನರು ಉದ್ಯಾನವನಕ್ಕೆ ಅನತಿದೂರದಲ್ಲಿದ್ದ ಮನೋರಮ್ಯವಾದ ಪ್ರದೇಶವೊಂದರಲ್ಲಿ ಸಿದ್ಧಪಡಿಸಿದ್ದ ರತ್ನಖಚಿತವಾದ ಆಸನಗಳ ಮೇಲೆ ಕುಳಿತು ಮಾತನಾಡುತ್ತಿದ್ದರು. ತಾವು ಹಿಂದೆ ಮಾಡಿದ ಅನೇಕವಿಧವಾದ ಸಾಹಸಕಾರ್ಯಗಳನ್ನೂ, ಇತರ ವಿಷಯಗಳನ್ನೂ ನೆನೆದು ಪ್ರಸ್ತಾಪಮಾಡುತ್ತಿದ್ದರು. ಸ್ವರ್ಗದ ಅಶ್ವಿನೀದೇವತೆಗಳಂತೆ ಸುಂದರವಾದ ದೇಹಕಾಂತಿಯಿಂದ ಪ್ರಕಾಶಿಸುತ್ತಿದ್ದ ಕೃಷ್ಣಾರ್ಜುನರ ಸಮೀಪಕ್ಕೆ ಬ್ರಾಹ್ಮಣನೊಬ್ಬನು ಆ ವೇಳೆಗೆ ಸರಿಯಾಗಿ ಬಂದನು.

ಸಾಲವೃಕ್ಷದಂತೆ ಬೃಹದಾಕಾರನಾಗಿಯೂ, ಪುಟಕ್ಕೆ ಹಾಕಿದ ಚಿನ್ನದಂತೆ ಹೊಂಬಣ್ಣದ ಕಾಂತಿಯುಳ್ಳವನಾಗಿಯೂ, ಹಳದಿ ಮತ್ತು ಹಸುರು ಮಿಶ್ರವಾದ ಬಣ್ಣದಿಂದ ಪ್ರಕಾಶಿಸುತ್ತಿದ್ದ ಗಡ್ಡ-ಮೀಸೆಯುಳ್ಳವನಾಗಿಯೂ, ಜಟಾಧಾರಿಯಾಗಿಯೂ, ನಾರುಬಟ್ಟೆಯನ್ನು ಧರಿಸಿದವನಾಗಿಯೂ, ಬಾಲ ಸೂರ್ಯನಂತೆ ಪ್ರಕಾಶಮಾನನಾಗಿಯೂ, ಕಮಲದ ಎಲೆಯಂತೆ ವಿಶಾಲವಾದ ಮುಖವುಳ್ಳವನಾಗಿಯೂ, ಅಧಿಕವಾದ ತೇಜಸ್ಸಿನಿಂದ ಪ್ರಜ್ವಲಿಸುತ್ತಲೂ ಇದ್ದ ಬ್ರಾಹ್ಮಣೋತ್ತಮನು ತಮ್ಮ ಸಮೀಪಕ್ಕೆ ಬಂದೊಡನೆಯೇ ಕೃಷ್ಣಾರ್ಜುನರು ಮೇಲೆದ್ದು ನಿಂತರು."

೨೨೨ನೆಯ ಅಧ್ಯಾಯವು ಮುಗಿಯಿತು.

೨೨೩ನೆಯ ಅಧ್ಯಾಯ ಖಾಂಡವದಾಹಪರ್ವ (ಮುಂದುವರಿದಿದೆ.)

## ಖಾಂಡವದಹನಕಾರ್ಯದಲ್ಲಿ ಸಹಾಯಮಾಡುವಂತೆ ಕೃಷ್ಣಾರ್ಜುನರಲ್ಲಿ ಅಗ್ನಿಯ ಪ್ರಾರ್ಥನೆ : ಖಾಂಡವದಹನಕ್ಕೆ ಕಾರಣ : ಶ್ವೇತಕಿಯ ಕಥಾಪ್ರಸಂಗ

"ಜನಮೇಜಯ! ಖಾಂಡವವನದ ಸಮೀಪದಲ್ಲಿಯೇ ನಿಂತಿದ್ದ ಲೋಕಪ್ರವೀರರಾದ ಕೃಷ್ಣಾರ್ಜುನರನ್ನು ಕುರಿತು ಬ್ರಾಹ್ಮಣನು ಹೇಳಿದನು :



"ನಾನು ಅತ್ಯಧಿಕವಾಗಿ ತಿನ್ನುವ ಸ್ವಭಾವವುಳ್ಳ ಬ್ರಾಹ್ಮಣನು. ನನಗೆ ಎಷ್ಟು ತಿಂದರೂ ತೃಪ್ತಿಯೇ ಆಗುವುದಿಲ್ಲ. ಇನ್ನೂ ತಿನ್ನುತ್ತಿರಬೇಕೆನ್ನಿಸುತ್ತದೆ. ನಾನೊಬ್ಬ ಹೊಟ್ಟೆಬಾಕ. ಮಹಾಶೂರರಾದ ನಿಮ್ಮಿಬ್ಬರನ್ನೂ ನಾನಿಂದು ಭಿಕ್ಷೆಬೇಡಲು ಬಂದಿದ್ದೇನೆ. ನೀವಿಬ್ಬರೂ ಸೇರಿ ಒಂದು ಬಾರಿಯಾದರೂ ಭೋಜನವಿಷಯದಲ್ಲಿ ನನಗೆ ತೃಪ್ತಿಯುಂಟಾಗುವಂತೆ ಮಾಡಿರಿ."

ಕೃಷ್ಣಾರ್ಜುನರು ಬ್ರಾಹ್ಮಣನ ಮಾತುಗಳನ್ನು ಕೇಳಿದನಂತರ ಹೇಳಿದರು :

"ಬ್ರಾಹ್ಮಣೋತ್ತಮರೇ! ನಿಮಗಿಷ್ಟವಾದ ಆಹಾರವು ಯಾವುದು? ನಿಮಗಿಷ್ಟವಾದುದನ್ನೇ ಪ್ರಯತ್ನಪೂರ್ವಕವಾಗಿ ತಂದುಕೊಟ್ಟು ನಿಮಗೆ ತೃಪ್ತಿಯನ್ನುಂಟುಮಾಡುವೆವು."

ಕೃಷ್ಣಾರ್ಜುನರು ಹೀಗೆ ಆಶ್ವಾಸನೆಯನ್ನು ಕೊಟ್ಟು ಯಾವ ವಿಧವಾದ ಆಹಾರವು ಬೇಕೆಂದು ಬ್ರಾಹ್ಮಣನನ್ನು ಪ್ರಶ್ನಿಸಲಾಗಿ, ಬ್ರಾಹ್ಮಣನು ಹೇಳಿದನು :

"ನನಗೆ ಸಾಧಾರಣವಾದ ಭೋಜನದ ಅಪೇಕ್ಷೆಯಿಲ್ಲ. ನನ್ನನ್ನು 'ಅಗ್ನಿ' ಎಂದು ತಿಳಿಯಿರಿ. ನನಗೆ ಅನುರೂಪವಾದ ಆಹಾರವನ್ನೇ ನೀವು ಕೊಡಬೇಕಾಗಿದೆ. ಅನತಿದೂರದಲ್ಲಿರುವ ಈ ಖಾಂಡವವನವು ಇಂದ್ರನಿಂದ ರಕ್ಷಿಸಲ್ಪಡುತ್ತಿದೆ. ಆ ಕಾರಣದಿಂದಲೇ ಈ ಖಾಂಡವವನವನ್ನು ನಾನು ಭಕ್ಷಿಸಲು ಅಸಮರ್ಥನಾಗಿದ್ದೇನೆ. ಇಂದ್ರನು ಈ ವನವನ್ನು ರಕ್ಷಿಸಲು ಕಾರಣವೂ ಇದೆ. ಇಲ್ಲಿಯೇ ಇಂದ್ರನ ಗೆಳೆಯನಾದ ತಕ್ಷಕನೆಂಬ ನಾಗರಾಜನು ತನ್ನ ಬಂಧು-ಮಿತ್ರಸಮೇತನಾಗಿ ವಾಸಮಾಡುತ್ತಿದ್ದಾನೆ. ತಕ್ಷಕನ ಕಾರಣದಿಂದಾಗಿ ಇಲ್ಲಿ ಲಕ್ಷಾಂತರಪ್ರಾಣಿಗಳು ಸುರಕ್ಷಿತವಾಗಿವೆ. ನಾನು ಹಲವು ಬಾರಿ ಖಾಂಡವದಹನಕ್ಕೆ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಖಾಂಡವದಹನಕ್ಕೆ ಪ್ರಾರಂಭಿಸಿದೊಡನೆಯೇ ಇಂದ್ರನು ಮೇಘಗಳನ್ನು ಪ್ರಚೋದಿಸಿ ಮಳೆಗರೆಯುತ್ತಾನೆ. ನಾನೂ ತಣ್ಣಗಾಗಿಬಿಡುತ್ತೇನೆ. ಈ ಕಾರಣದಿಂದಲೇ ನಾನೀಗ ನಿಮ್ಮ ರಕ್ಷಣೆಯನ್ನು ಪಡೆಯಲು ಬಂದಿರುವೆನು. ನೀವಿಬ್ಬರೂ ಶಸ್ತ್ರಾಸ್ತ್ರಪ್ರಯೋಗಗಳಲ್ಲಿ ನಿಪುಣರಾಗಿರುವಿರಿ. ನೀವು ನನಗೆ ಸಹಕಾರವನ್ನಿತ್ತರೆ ನಾನು ಕ್ಷಣಮಾತ್ರದಲ್ಲಿ ಈ ಅರಣ್ಯವನ್ನು ದಹಿಸಿಬಿಡುವೆನು. ಇದೇ ನಾನು ಅಪೇಕ್ಷಿಸುವ ಆಹಾರ. ನೀವು ನಿಮಗೆ ತಿಳಿದಿರುವ ಅಮೋಘವಾದ ಅಸ್ತ್ರಗಳನ್ನು ಪ್ರಯೋಗಿಸಿ ದೇವೇಂದ್ರನು ಸುರಿಸಲಿರುವ ಮಳೆಯನ್ನು ತಡೆಗಟ್ಟಬೇಕು ಮತ್ತು ಈ ಅರಣ್ಯದಿಂದ ಹೊರಕ್ಕೆ ಯಾವ ಪ್ರಾಣಿಗಳೂ ತಪ್ಪಿಸಿ

ಕೊಂಡು ಹೋಗಲು ಅವಕಾಶವಾಗದಂತೆಯೂ ನೀವು ತಡೆಹಿಡಿಯಬೇಕೆಂದು ಪ್ರಾರ್ಥಿಸುತ್ತೇನೆ.”

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

“ಮುನಿವರ್ಯರೇ! ಅನೇಕಪ್ರಾಣಿಗಳಿಂದ ನಿಬಿಡವಾದ ಖಾಂಡವವನವನ್ನು ದಹಿಸಲು ಅಗ್ನಿಯ ಮುಖ್ಯವಾದ ಉದ್ದೇಶವಾದರೂ ಏನು? ಅದಕ್ಕೆ ಮಹತ್ತರವಾದ ಕಾರಣವೇ ಇರಬೇಕು. ಆ ಕಾರಣವನ್ನು ವಿವರವಾಗಿ ಕೇಳುವ ಅಭಿಲಾಷೆಯಿದೆ. ಬ್ರಾಹ್ಮಣೋತ್ತಮರೇ! ಯಾವ ಮಹಾಕಾರಣದಿಂದಾಗಿ ಅಗ್ನಿಯು ಖಾಂಡವವನವನ್ನು ದಹನಮಾಡಲು ನಿಶ್ಚಯಿಸಿದನು? ಮತ್ತು ಅದು ಹೇಗೆ ಸಾಧ್ಯವಾಯಿತು?–ಎಂಬುದೆಲ್ಲವನ್ನೂ ವಿಸ್ತಾರವಾಗಿಯೇ ಹೇಳಿರಿ.”

“ಮಹಾರಾಜ! ಯಾವ ಕಾರಣಕ್ಕಾಗಿ ಅಗ್ನಿಯು ಖಾಂಡವದಹನವನ್ನು ಮಾಡಿದನು–ಎಂಬುದೆಲ್ಲವನ್ನೂ ನಾನು ನಿನಗೆ ಯಥಾವತ್ತಾಗಿಯೇ ಹೇಳುವೆನು ಕೇಳು” – ಎಂದು ಹೇಳಿ ವೈಶಂಪಾಯನರು ಕಥೆಯನ್ನು ಮುಂದುವರಿಸಿದರು :

“ಹಿಂದೊಂದು ಕಾಲದಲ್ಲಿ ಮಹಾಪರಾಕ್ರಮಿಯಾದ, ಕೀರ್ತಿಮಂತ ನಾದ, ಇಂದ್ರನಿಗೆ ಸಮಾನನೆನಿಸಿದ್ದ ‘ಶ್ವೇತಕಿ’ ಎಂಬ ರಾಜನೊಬ್ಬನಿದ್ದನು. ಯಾಗಶೀಲನಾಗಿಯೂ, ದಾನಶೀಲನಾಗಿಯೂ, ಬುದ್ಧಿವಂತನಾಗಿಯೂ ಇದ್ದ ಆ ರಾಜನಿಗೆ ಸಮಾನರಾದವರು ಆಗಿನ ಕಾಲದಲ್ಲಿ ಯಾರೂ ಇರಲಿಲ್ಲ. ದೇವಯಜ್ಞ-ಪಿತೃಯಜ್ಞಾದಿ ಪಂಚಮಹಾಯಜ್ಞಗಳನ್ನು ಮಾಡುತ್ತಾ, ಜ್ಯೋತಿಷ್ಟೋಮಾದಿ ಕ್ರತುಗಳನ್ನು ಮಾಡುತ್ತಾ, ಋತ್ವಿಜರಿಗೆ ಯಥೇಚ್ಛವಾಗಿ ದಕ್ಷಿಣೆಯನ್ನು ಕೊಡುತ್ತಾ ಸಂತೋಷದಿಂದ ಕಾಲಕಳೆಯುತ್ತಿದ್ದನು. ಯಾವಾಗಲೂ ಅವನ ಬುದ್ಧಿಯು ಸತ್ರಗಳಲ್ಲಿಯೂ, ಅನೇಕವಿಧವಾದ ಧಾರ್ಮಿಕಸಮಾರಂಭಗಳಲ್ಲಿಯೂ, ದಾನಕೊಡುವುದರಲ್ಲಿಯೂ ನಿಯತ ವಾಗಿದ್ದಿತು. ಅವನು ಮಾಡುತ್ತಿದ್ದ ಯಜ್ಞ-ಯಾಗಾದಿಗಳಿಗೆ ಕಾಲಮಿತಿಯೇ ಇರುತ್ತಿರಲಿಲ್ಲ. ಅನೇಕವರ್ಷಗಳಕಾಲ ಅವಿಚ್ಛಿನ್ನವಾಗಿ ಕ್ರತುಗಳನ್ನು ಮಾಡು ವುದರಲ್ಲಿಯೇ ನಿರತನಾಗಿದ್ದನು. ಯಜ್ಞಗಳಲ್ಲಿ ಭಾಗವಹಿಸಿದ್ದ ಋತ್ವಿಜರ

ಕಣ್ಣುಗಳು ಯಜ್ಞೇಶ್ವರನ ಧೂಮದಿಂದ ಅನವರತವೂ ವ್ಯಾಪ್ತವಾಗಿರುತ್ತಿದ್ದುದರಿಂದ ಶಕ್ತಿಹೀನವಾದುವು. ಆ ಕಾರಣದಿಂದಾಗಿ ಅವರಿಗೆ ಶ್ವೇತಕಿಯ ಯಾಗದಲ್ಲಿ ಋತ್ವಿಜರಾಗಿ ಮುಂದುವರಿಯಲು ಸಾಧ್ಯವಾಗಲಿಲ್ಲ. ನಿರ್ದಿಷ್ಟವಾಗಿದ್ದ ಕ್ರತುವು ಮುಗಿಯುವುದಕ್ಕೆ ಮುಂಚೆಯೇ ಋತ್ವಿಜರೆಲ್ಲರೂ ಯಾಗವನ್ನು ಪರಿತ್ಯಜಿಸಿ ಹೊರಟುಹೋದರು. ಪರಿತ್ಯಜಿಸಿ ಹೋಗಿದ್ದ ಬ್ರಾಹ್ಮಣರ ಬಳಿಗೆ ರಾಜನು ಹೋಗಿ ಆರ್ತ್ವಿಜ್ಯವನ್ನು ಮುಂದುವರಿಸುವಂತೆ ಪದೇ-ಪದೇ ಪ್ರಾರ್ಥಿಸಿದನು. ಆದರೆ ನೇತ್ರಬಾಧೆಯ ಕಾರಣದಿಂದಾಗಿ ಯಾರೂ ರಾಜನ ಪ್ರಾರ್ಥನೆಯನ್ನು ಅಂಗೀಕರಿಸಲಿಲ್ಲ. ಅವರ ಅನುಜ್ಞೆಯನ್ನು ಪಡೆದು ರಾಜನು ಬೇರೆಯ ಋತ್ವಿಜರನ್ನು ಆಹ್ವಾನಿಸಿ ಪ್ರಾರಂಭಿಸಿದ್ದ ಮಹಾಯಾಗವನ್ನು ಪೂರೈಸಿದನು.

ಕೆಲವು ದಿವಸಗಳ ನಂತರ ಶ್ವೇತಕಿಗೆ ನೂರು ವರ್ಷಗಳ ಪರಿಮಿತಿಯುಳ್ಳ ಮಹಾಯಾಗವನ್ನು ಮಾಡಬೇಕೆನ್ನುವ ಅಭಿಲಾಷೆಯುಂಟಾಯಿತು. ಆದರೆ ಅವನಿಗೆ ಋತ್ವಿಜರೇ ಸಿಗಲಿಲ್ಲ. ಆದರೂ ಶ್ವೇತಕಿಯು ಉತ್ಸಾಹಹೀನನಾಗಲಿಲ್ಲ. ತನ್ನ ಪರಿವಾರದವರೆಲ್ಲರೊಡನೆ ಬ್ರಾಹ್ಮಣರ ಬಳಿಗೆ ಹೋಗಿ ಸೇವೆಮಾಡಿ, ಯಥೇಚ್ಛವಾಗಿ ದಾನ-ದಕ್ಷಿಣೆಗಳನ್ನು ಕೊಟ್ಟು, ಸ್ವಲ್ಪವಾದರೂ ಬೇಸರಗೊಳ್ಳದೇ ಆರ್ತ್ವಿಜ್ಯವನ್ನು ವಹಿಸುವಂತೆ ನತಶಿರನಾಗಿ ಬಾರಿ-ಬಾರಿಗೂ ಅವರನ್ನು ದೈನ್ಯದಿಂದ ಪ್ರಾರ್ಥಿಸುತ್ತಿದ್ದನು. ಆದರೂ ರಾಜನು ಸಂಕಲ್ಪಿಸಿದ್ದ ನೂರು ವರ್ಷಗಳ ಮಹಾಯಾಗಕ್ಕೆ ಆರ್ತ್ವಿಜ್ಯವನ್ನು ವಹಿಸಲು ಯಾರೂ ಮುಂದೆಬರಲಿಲ್ಲ.

ಅಷ್ಟೊಂದು ಪ್ರಾರ್ಥಿಸಿದರೂ ಒಪ್ಪದಿದ್ದರೆ ಕೋಪವು ಬರುವುದು ಸಹಜವಲ್ಲವೇ? ರಾಜನು ಕುಪಿತನಾಗಿ ಆಶ್ರಮದಲ್ಲಿದ್ದ ವೇದಪಾರಂಗತರಾದ ಬ್ರಾಹ್ಮಣರನ್ನು ಪ್ರಶ್ನಿಸಿದನು :

"ವಿಪ್ರೋತ್ತಮರೇ! ನನ್ನ ದೈನ್ಯಪ್ರಾರ್ಥನೆಯನ್ನೇಕೆ ಬಾರಿ-ಬಾರಿಗೂ ತಿರಸ್ಕರಿಸುತ್ತಿರುವಿರಿ? ನಾನೇನು ಪತಿತನೇ? ತಮ್ಮ ಶುಶ್ರೂಷೆಯಲ್ಲಿ ಲೋಪವನ್ನೇನಾದರೂ ಮಾಡಿರುವೆನೇ?–ಹಾಗೇನಾದರೂ ಆಗಿದ್ದರೆ ನಾನು ತಮ್ಮೆಲ್ಲರಿಂದಲೂ ಇತರ ಬ್ರಾಹ್ಮಣರಿಂದಲೂ ತಿರಸ್ಕಾರಕ್ಕೆ ಯೋಗ್ಯ

ನಾಗುವೆನು. ತಮಗೆ ತಿಳಿದಿರುವಂತೆಯೇ ನಾನು ಪತಿತನಾಗಿಲ್ಲದಿರುವುದು ಮಾತ್ರವಲ್ಲದೇ, ಯಾವಾಗಲೂ ತಮ್ಮ ವಿಷಯದಲ್ಲಿ ಪ್ರಸನ್ನನಾಗಿಯೇ ಇರುವೆನು. ಆದುದರಿಂದ ನಾನು ಮಾಡಬೇಕೆಂದಿರುವ ಕ್ರತುವಿಗೆ ಪ್ರತಿಬಂಧಕ ವನ್ನು ಮಾಡುವುದಾಗಲೀ, ಅಸಹಕಾರವನ್ನು ತೋರುವುದಾಗಲೀ, ನನ್ನನ್ನು ಪರಿತ್ಯಾಗಮಾಡುವುದಾಗಲೀ–ನಿಮಗೆ ಖಂಡಿತವಾಗಿಯೂ ಯೋಗ್ಯವೆನಿಸು ವುದಿಲ್ಲ. ತಮ್ಮ ದಾಸನಾಗಿರುವ ನನ್ನ ಮೇಲೆ ಪ್ರಸನ್ನತೆಯನ್ನು ತೋರುವುದು ಯುಕ್ತವಾಗಿದೆ. ನಾನು ನಿಮ್ಮೆಲ್ಲರ ಅಭಯವನ್ನೂ ಕೇಳಿಕೊಳ್ಳುತ್ತಿರುವೆನು. ಒಂದು ವೇಳೆ ದ್ವೇಷಬುದ್ಧಿಯಿಂದಲೇ ನನ್ನನ್ನು ನೀವು ಪರಿತ್ಯಜಿಸುವುದಾದರೆ– ನಾನು ಬೇರೆಯ ಋತ್ವಿಜರ ಸಮೀಪಕ್ಕೆ ಹೋಗಿ ನಾನು ಮಾಡಲಿರುವ ಯಾಗಕ್ಕೆ ಆರ್ತ್ವಿಜ್ಯವನ್ನು ವಹಿಸುವಂತೆ ಅವರನ್ನು ದೈನ್ಯದಿಂದ ಬೇಡಿಕೊಳ್ಳುವೆನು."

ರಾಜನು ಶಾಂತಿಯುತವಾಗಿ ಹೇಳಿದರೂ, ದೈನ್ಯದಿಂದ ಕೇಳಿಕೊಂಡರೂ, ಕುಪಿತನಾಗಿ ಹೇಳಿದರೂ ಬ್ರಾಹ್ಮಣರು ರಾಜನ ನೂರು ವರ್ಷಗಳ ಯಜ್ಞಕ್ಕೆ ಆರ್ತ್ವಿಜ್ಯವನ್ನು ವಹಿಸಲು ಒಪ್ಪಲಿಲ್ಲ. ತಾವೂ ಸಹ ಕೋಪಗೊಂಡವರಂತೆಯೇ ನಟಿಸುತ್ತಾ ರಾಜನಿಗೆ ಹೇಳಿದರು.: "ಮಹಾರಾಜ! ನೀನು ಪ್ರಾರಂಭಿಸಲಿರುವ ಕ್ರತುವಿಗೆ ಕಾಲಮಿತಿಯೇ ಇಲ್ಲ. ಅವಿಚ್ಛಿನ್ನವಾಗಿ ನಡೆಯುವುದಾಗಿದೆ. ನಾವಾದರೋ ಇದುವರೆಗೂ ಆರ್ತ್ವಿಜ್ಯವನ್ನು ವಹಿಸಿ ಬಹಳ ಬಳಲಿದ್ದೇವೆ. ಆದುದರಿಂದ ಈ ಸಮಯದಲ್ಲಿ ನಮ್ಮನ್ನು ಬಿಟ್ಟುಕೊಡುವುದು ಅಥವಾ ನಮಗೆ ಸ್ವಲ್ಪ ವಿರಾಮಕೊಡುವುದು ನಿನಗೆ ಯೋಗ್ಯವಾಗಿದೆ. ಆದರೆ ನೀನು ಮೋಹಪರವಶನಾಗಿ ಮುಂದಿನ ಕ್ರತುವಿನ ಆರಂಭಕ್ಕೆ ಅವಸರಪಡಿಸುತ್ತಿರುವೆ. ಆದುದರಿಂದ ನೀನೀಗಲೇ ರುದ್ರನ ಬಳಿಗೆ ಹೋಗು. ಅವನೇ ನಿನ್ನ ಕ್ರತುವಿಗೆ ಯಾಜಕನಾಗಲು ಸಮರ್ಥನಾಗಿರುವನು."

ಬ್ರಾಹ್ಮಣರ ಆ ಆಕ್ಷೇಪಕರವಾದ ಮಾತುಗಳನ್ನು ಕೇಳಿ ಶ್ವೇತಕಿಗೆ ಕೋಪವು ಮತ್ತೂ ಹೆಚ್ಚಿತು. ರುದ್ರನನ್ನೇ ಯಾಜಕನನ್ನಾಗಿ ಮಾಡಿಕೊಳ್ಳು ವೆನೆಂಬ ನಿರ್ಧಾರದಿಂದ ಕೈಲಾಸಪರ್ವತಕ್ಕೆ ಹೋಗಿ ಮಹಾದೇವನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಲು ಪ್ರಾರಂಭಿಸಿದನು. ಅನೇಕದಿವಸ ಗಳವರೆಗೆ ಆಹಾರವನ್ನೇ ಪರಿತ್ಯಜಿಸಿದನು. ಹಣ್ಣುಗಳನ್ನೂ, ಗೆಡ್ಡೆ-ಗೆಣಸು

ಗಳನ್ನೂ, ಅನ್ನವನ್ನೂ, ಹನ್ನೆರಡು ದಿವಸಗಳಿಗೊಮ್ಮೆ ಅಥವಾ ಹದಿನಾರು ದಿವಸಗಳಿಗೊಮ್ಮೆ ತೆಗೆದುಕೊಳ್ಳುತ್ತಿದ್ದನು. ಆರು ತಿಂಗಳ ಕಾಲ ತದೇಕಚಿತ್ತನಾಗಿ ಸ್ಥಾಣುವಿನಂತೆ ನಿಂತಲ್ಲಿಂದ ಚಲಿಸದೇ ಕೈಗಳನ್ನು ಮೇಲೆತ್ತಿಕೊಂಡು ಉಗ್ರವಾದ ತಪಶ್ಚರಣೆಯನ್ನು ಮಾಡಿದನು. ಶ್ವೇತಕಿಯ ನಿಶ್ಚಲವಾದ ಮತ್ತು ಕಠಿನವಾದ ತಪಸ್ಸನ್ನು ನೋಡಿ ಶಂಕರನು ಸುಪ್ರೀತನಾಗಿ ಅವನ ಸಮೀಪಕ್ಕೆ ಬಂದು ಹೇಳಿದನು : "ಪುರುಷವ್ಯಾಘ್ರನೇ! ನಿನ್ನ ನಿಶ್ಚಲತಪಸ್ಸಿನಿಂದ ಪ್ರಸನ್ನನಾಗಿರುವೆನು. ನಿನಗೆ ಮಂಗಳವಾಗಲಿ. ಅಪೇಕ್ಷಿತವಾದ ವರವನ್ನು ಕೇಳು."

ರಾಜರ್ಷಿಯಾದ ಶ್ವೇತಕಿಯು ಭಗವಂತನಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ ಬದ್ಧಾಂಜಲಿಯಾಗಿ ನಿಂತು ಹೇಳಿದನು :

**ಯದಿ ಮೇ ಭಗವಾನ್ಪ್ರೀತಃ ಸರ್ವಲೋಕನಮಸ್ಕೃತಃ ।**
**ಸ್ವಯಂ ಮಾಂ ದೇವದೇವೇಶ ಯಾಜಯಸ್ವ ಸುರೇಶ್ವರ ॥೪೩॥**

"ಸುರೇಶ್ವರನೇ! ಸರ್ವಲೋಕನಮಸ್ಕೃತನಾದ ನೀನು ನನ್ನ ತಪಸ್ಸಿನಿಂದ ಸಂತುಷ್ಟನಾಗಿರುವೆಯಾದರೆ ಮತ್ತು ನನ್ನ ಮೇಲೆ ಪ್ರೀತಿಯುಳ್ಳವ ನಾಗಿದ್ದರೆ-ದೇವದೇವೇಶನೇ! ನಾನು ಮಾಡಲಿರುವ ಯಜ್ಞವನ್ನು ನಡೆಸಿಕೊಡು."

ರಾಜನ ಮಾತುಗಳನ್ನು ಕೇಳಿ ಮತ್ತೂ ಸಂತುಷ್ಟನಾದ ಪರಮೇಶ್ವರನು ಮುಗುಳ್ನಗೆಯೊಡನೆ ರಾಜನನ್ನು ಕುರಿತು ಹೇಳಿದನು : "ಮಹಾರಾಜ! ನಾವು ಯಾವಾಗಲೂ ಯಾಜಕರಾಗುವುದಿಲ್ಲ. ಆದರೂ ನನ್ನನ್ನು ಯಾಜಕನನ್ನಾಗಿ ಮಾಡಿಕೊಳ್ಳುವ ಉದ್ದೇಶದಿಂದಲೇ ನೀನು ಅತಿಕಠೋರವಾದ ತಪಸ್ಸನ್ನು ಮಾಡಿರುವೆ. ಆದುದರಿಂದ ಒಂದು ನಿಬಂಧನೆಯೊಡನೆ ನಾನು ನಿನ್ನ ಕ್ರತುವಿಗೆ ಯಾಜಕನಾಗುವೆನು.

**ಸಮಾ ದ್ವಾದಶ ರಾಜೇನ್ದ್ರ ಬ್ರಹ್ಮಚಾರೀ ಸಮಾಹಿತಃ ।**
**ಸತತಂ ತ್ವಾಜ್ಯಧಾರಾಭಿರ್ಯದಿ ತರ್ಪಯಸೇಽನಲಮ್ ।**
**ಕಾಮಂ ಪ್ರಾರ್ಥಯಸೇ ಯಂ ತ್ವಂ ಮತ್ತಃ ಪ್ರಾಪ್ಸ್ಯಸಿ ತಂ ನೃಪ ॥**

ಮಹಾರಾಜ! ನೀನು ಬ್ರಹ್ಮಚರ್ಯದಿಂದಿರುತ್ತಾ, ಹನ್ನೆರಡು ವರ್ಷ

ಗಳ ಕಾಲ ಅವಿಚ್ಛಿನ್ನವಾಗಿ ಯಜ್ಞೇಶ್ವರನನ್ನು ಆಜ್ಯಧಾರೆಗಳಿಂದ ತೃಪ್ತಿಗೊಳಿಸಬೇಕು. ಅನಂತರ ನೀನು ಯಾವ ಕಾಮನೆಯಿಂದ ನನ್ನನ್ನು ಪ್ರಾರ್ಥಿಸಿರುವೆಯೋ–ಆ ನಿನ್ನ ಕಾಮನೆಯು ಪೂರ್ಣವಾಗುವುದು. ನಾನು ನಿನ್ನ ಯಾಜಕನಾಗುವೆನು"– ಎಂದು ಹೇಳಿ ಪರಶಿವನು ಅಂತರ್ಧಾನಹೊಂದಿದನು.

ಮಹೇಶನು ಹೇಳಿದಂತೆಯೇ ಶ್ವೇತಕಿಯು ಹನ್ನೆರಡು ವರ್ಷಗಳ ಕಾಲ ಬ್ರಹ್ಮಚರ್ಯವ್ರತದಿಂದಿದ್ದು ಯಜ್ಞೇಶ್ವರನಿಗೆ ಸತತವಾಗಿ ಆಜ್ಯಧಾರೆಗಳನ್ನು ಸಮರ್ಪಿಸಿದನು. ಹನ್ನೆರಡು ವರ್ಷಗಳು ಮುಗಿದನಂತರ ಪರಮೇಶ್ವರನೇ ಶ್ವೇತಕಿಯ ಬಳಿಗೆ ಬಂದು ಪರಮಪ್ರೀತನಾಗಿ ಹೇಳಿದನು : "ನರಶ್ರೇಷ್ಠನೇ! ನೀನು ಮಾಡಿರುವ ಈ ಕರ್ಮದಿಂದ ನಾನು ಅತ್ಯಂತಸಂತುಷ್ಟನಾಗಿರುವೆನು. ಯಾಜಕತ್ವವು ಬ್ರಾಹ್ಮಣರಿಗೆ ಮಾತ್ರವೇ ವಿಧ್ಯುಕ್ತವಾಗಿದೆ. ಆದುದರಿಂದ ನಾನೇ ಸ್ವತಃ ಬಂದು ನಿನ್ನ ಯಜ್ಞಕ್ಕೆ ಯಾಜಕನಾಗಲಾರೆನು. ಭೂಲೋಕದಲ್ಲಿ ಸುಪ್ರಸಿದ್ಧನಾದ ಬ್ರಾಹ್ಮಣನೊಬ್ಬನಿರುವನು. ಅವನು ನನ್ನ ಅಂಶದಿಂದಲೇ ಸಂಭೂತನಾಗಿ ದುರ್ವಾಸನೆಂದು ವಿಖ್ಯಾತನಾಗಿರುವನು. ಮಹಾನುಭಾವನಾದ ಆ ಬ್ರಾಹ್ಮಣಶ್ರೇಷ್ಠನು ನನ್ನ ನಿರ್ದೇಶನದಂತೆ ನಿನಗೆ ಯಾಜಕನಾಗುವನು. ಕ್ರತುವಿಗೆ ಬೇಕಾಗುವ ಸಂಭಾರಗಳೆಲ್ಲವನ್ನೂ ಸಿದ್ಧಮಾಡು."

ರುದ್ರನಾಡಿದ ಮಾತುಗಳನ್ನು ಕೇಳಿ ಶ್ವೇತಕಿಯು ತನ್ನ ನಗರಿಗೆ ಹಿಂದಿರುಗಿ, ಕ್ರತುವಿಗೆ ಬೇಕಾಗುವ ಸಂಭಾರಗಳೆಲ್ಲವನ್ನೂ ಸಿದ್ಧಪಡಿಸಿ ಪುನಃ ರುದ್ರನ ಸಮೀಪಕ್ಕೆ ಹೋಗಿ ಬದ್ಧಾಂಜಲಿಯಾಗಿ ಹೇಳಿದನು : "ಮಹಾದೇವ! ನಿನ್ನ ಪ್ರಸಾದದಿಂದ ಕ್ರತುವಿಗೆ ಬೇಕಾದ ಸಂಭಾರಗಳೆಲ್ಲವನ್ನೂ ಸಿದ್ಧಪಡಿಸಿರುವೆನು. ನಾಳೆಯೇ ನಾನು ಯಜ್ಞದೀಕ್ಷೆಯನ್ನು ಕೈಗೊಳ್ಳಲು ಅನುಕೂಲವಾಗುವಂತೆ ಅನುಗ್ರಹಿಸು."

ಪರಶಿವನು ರಾಜನ ಮಾತುಗಳನ್ನು ಕೇಳಿ ಒಡನೆಯೇ ತನ್ನ ಅಂಶ ಸಂಭೂತನಾದ ದುರ್ವಾಸನನ್ನು ಸ್ಮರಿಸಿದನು. ರುದ್ರನು ಸ್ಮರಿಸಿದೊಡನೆಯೇ ಮಹಾಜ್ಞಾನಿಯಾಗಿದ್ದ ದುರ್ವಾಸನು ಅವನ ಸನ್ನಿಧಿಗೆ ಬರಲಾಗಿ, ಮಹಾ

ದೇವನು ಹೇಳಿದನು : "ಬ್ರಾಹ್ಮಣೋತ್ತಮನೇ! ಇವನು ಶ್ವೇತಕಿಯೆಂಬ ಸುಪ್ರಸಿದ್ಧನಾದ ರಾಜನು. ನನ್ನ ಆಜ್ಞೆಯಂತೆ ನೀನು ಈ ರಾಜನು ಮಾಡಲಿರುವ ಯಜ್ಞಕ್ಕೆ ಯಾಜಕನಾಗಬೇಕು." 'ಬಾಢಂ' 'ಹಾಗೆಯೇ ಆಗಲಿ'– ಎಂದು ಹೇಳಿ ದುರ್ವಾಸನು ಶ್ವೇತಕಿಯೊಡನೆ ಹೊರಟನು.

ಶ್ವೇತಕಿಯು ಸಂಕಲ್ಪಿಸಿದ್ದ ನೂರು ವರ್ಷಗಳ ಕ್ರತುವು ಪ್ರಾರಂಭವಾಯಿತು. ಕ್ರತುವು ಯಥಾವಿಧಿಯಾಗಿ ಯಥೋಕ್ತಕಾಲದಲ್ಲಿ ನಡೆಯಿತು. ಆ ಸಮಯದಲ್ಲಿ ಶ್ವೇತಕಿಯು ಬ್ರಾಹ್ಮಣರಿಗೆ ಹೇರಳವಾಗಿ ದಾನ-ದಕ್ಷಿಣೆಗಳನ್ನು ಕೊಟ್ಟನು. ಕ್ರತುವಿನ ಅವಭೃಥಸ್ನಾನವಾದ ಮೇಲೆ ಯಾಗಕ್ಕೆ ಬಂದಿದ್ದ ಋತ್ವಿಜರೆಲ್ಲರೂ ದುರ್ವಾಸನ ಅನುಜ್ಞೆಯನ್ನು ಪಡೆದು ಹೊರಟುಹೋದರು. ಸದಸ್ಯರೆಲ್ಲರೂ ತಮ್ಮ-ತಮ್ಮ ಆಶ್ರಮಗಳಿಗೆ ತೆರಳಿದರು. ರಾಜನೂ ಬ್ರಾಹ್ಮಣರಿಂದ ಪುರಸ್ಕೃತನಾಗಿ, ಹೊಗಳುಭಟರು ಪರಾಕುಗಳನ್ನು ಹೇಳುತ್ತಿರುವಾಗ, ನಾಗರಿಕರ ಸಂಭ್ರಮದ ಸ್ವಾಗತದೊಡನೆ ಅರಮನೆಯನ್ನು ಪ್ರವೇಶಿಸಿದನು.

ಹೀಗೆ ಸುಪ್ರಸಿದ್ಧನಾದ ಶ್ವೇತಕಿಯು ಬಹಳಕಾಲ ಕಳೆದಮೇಲೆ ತನ್ನ ಯಜ್ಞದಲ್ಲಿ ಭಾಗವಹಿಸಿದ್ದ ಋತ್ವಿಜರೊಡನೆಯೂ ಸದಸ್ಯರೊಡನೆಯೂ ಸ್ವರ್ಗವನ್ನೈದಿದನು.

ಶ್ವೇತಕಿಯು ಮಾಡಿದ ಮಹಾಯಜ್ಞದಲ್ಲಿ ಅಗ್ನಿದೇವನು ಹನ್ನೆರಡು ವರ್ಷಗಳ ಕಾಲ ಅವಿಚ್ಛಿನ್ನವಾಗಿ ಆಜ್ಯಧಾರೆಯನ್ನು ಸವಿದನು. ಹನ್ನೆರಡು ವರ್ಷಗಳೂ ಆ ಆಜ್ಯಧಾರೆಗೆ ವಿಚ್ಛಿತ್ತಿಯೇ ಇರಲಿಲ್ಲ. ಆ ಯಾಗದಲ್ಲಿ ಯಜ್ಞೇಶ್ವರನು ಅಮಿತವಾದ ತೃಪ್ತಿಯನ್ನು ಹೊಂದಿದನು. ಬೇರೆಯವರಿಂದ ಪುನಃ ಆಜ್ಯಧಾರೆಯನ್ನು ಸವಿಯುವ ಇಚ್ಛೆಯೇ ಅಗ್ನಿಗೆ ಉಂಟಾಗಲಿಲ್ಲ. ಯಾವುದೂ ಬೇಡವಾಯಿತು. ಹಿಂದಿನಂತೆ ಅವನು ಪ್ರಕಾಶಮಾನನಾಗಿಯೂ ಇರುತ್ತಿರಲಿಲ್ಲ. ಅಗ್ನಿದೇವನಿಗೆ ಹಸಿವೇ ಇಂಗಿಹೋಯಿತು. ಮುಖವು ಬಿಳಿಚಿಕೊಂಡಿತು. ನಿಶ್ಶಕ್ತಿಯು ತಲೆದೋರಿತು. ಅಜೀರ್ಣರೋಗವು ಅಂಟಿಕೊಂಡಿರುವಂತೆ ಕಾಣುತ್ತಿತ್ತು. ಯಜ್ಞೇಶ್ವರನು ಅನುದಿನವೂ ತನ್ನ ಶಕ್ತಿಯು ಕುಂದು

ತ್ತಿರುವುದನ್ನೂ–ಶರೀರವು ಕಾಂತಿಹೀನವಾಗಿರುವುದನ್ನೂ ಮನಗಂಡು ಚಿಂತಾಕ್ರಾಂತನಾಗಿ ಸರ್ವಮಾನ್ಯನಾದ ಬ್ರಹ್ಮನ ಬಳಿಗೆ ತೆರಳಿದನು. ಸಿಂಹಾಸನಾರೂಢನಾಗಿ ಕುಳಿತಿದ್ದ ಬ್ರಹ್ಮನನ್ನು ಬದ್ಧಾಂಜಲಿಯಾಗಿ ಪ್ರಾರ್ಥಿಸಿದನು: "ಮಹಾನುಭಾವ! ಶ್ವೇತಕಿಯು ಹನ್ನೆರಡು ವರ್ಷಗಳ ಕಾಲ ಅವಿಚ್ಛಿನ್ನವಾಗಿ ಆಜ್ಯಧಾರೆಯನ್ನು ನನಗರ್ಪಿಸಿ ನನಗೆ ಅತ್ಯಂತತೃಪ್ತಿಯನ್ನುಂಟುಮಾಡಿರುವನು. ಹನ್ನೆರಡು ವರ್ಷಗಳ ಪರ್ಯಂತ ಸತತವಾದ ಆಜ್ಯಸೇವನೆಯಿಂದಾಗಿ ನನಗೆ ಈಗ ಯಾವುದೂ ರುಚಿಸುತ್ತಿಲ್ಲ. ಯಾವುದನ್ನು ಕಂಡರೂ ಬೇಡವೆನ್ನಿಸುತ್ತದೆ. ನಾನೀಗ ಶಕ್ತಿಯಲ್ಲಿಯೂ, ತೇಜಸ್ಸಿನಲ್ಲಿಯೂ ಹೀನನಾಗಿರುವೆನು. ನಾನು ಹಿಂದಿನಂತೆಯೇ ಪಚನಶಕ್ತಿಯನ್ನು ಪಡೆಯಲು ಅಭಿಲಾಷೆಯುಳ್ಳವನಾಗಿರುವೆನು. ದಯಮಾಡಿ ನನಗೆ ಔಷಧವನ್ನು ಸೂಚಿಸಬೇಕು."

ಯಜ್ಞೇಶ್ವರನ ಮಾತುಗಳನ್ನು ಕೇಳಿ ಚತುರ್ಮುಖನು ಮುಗುಳ್ನಗೆಯನ್ನು ಬೀರುತ್ತಾ ಹೇಳಿದನು : "ಹವ್ಯವಾಹನನೇ! ಹನ್ನೆರಡು ವರ್ಷಗಳ ಕಾಲ ಅವಿಚ್ಛಿನ್ನವಾಗಿ ವಸೋರ್ಧಾರೆಯಿಂದ ಸಹಿತವಾದ ಆಜ್ಯವನ್ನು ಸೇವಿಸಿದ್ದರಿಂದಲೇ ನಿನಗೆ ಗ್ಲಾನಿಯುಂಟಾಗಿದೆ. ಆದರೆ ಇದಕ್ಕಾಗಿ ನೀನು ಚಿಂತಿಸಬೇಕಾಗಿಲ್ಲ. ನೀನು ಸ್ವಲ್ಪಕಾಲದಲ್ಲಿಯೇ ನಿನ್ನ ಪಚನಶಕ್ತಿಯನ್ನು ಪುನಃ ಪಡೆಯುವೆ. ನಿನಗುಂಟಾಗಿರುವ ಅರುಚಿಯನ್ನು ಹೋಗಲಾಡಿಸುವೆನು. ಅದಕ್ಕೆ ಕಾಲವೂ ಈಗಲೇ ಸನ್ನಿಹಿತವಾಗಿದೆ. ನೀನು ಹಿಂದೆ ಒಂದು ಸಲ ದೇವತೆಗಳ ಪ್ರಾರ್ಥನೆಯಂತೆ ಭಸ್ಮಮಾಡಿದ್ದ, ದೇವತೆಗಳ ಶತ್ರುಗಳಿಗೆ ನಿವಾಸಸ್ಥಾನವಾಗಿದ್ದ ಖಾಂಡವವನವು ಇಂದು ಪುನಃ ಅನೇಕವಾದ ದುಷ್ಟಪ್ರಾಣಿಗಳಿಗೆ ಆವಾಸಸ್ಥಾನವಾಗಿದೆ. ಅಲ್ಲಿರುವ ಪ್ರಾಣಿಗಳ ಮೇದಸ್ಸುಗಳನ್ನು ಸವಿದೊಡನೆಯೇ ನಿನ್ನ ಅಜೀರ್ಣರೋಗವು ನಿವಾರಣೆಯಾಗುವುದು. ಮೊದಲಿನಂತೆಯೇ ನಿನಗೆ ಪಚನಶಕ್ತಿಯೂ ಮತ್ತು ತೇಜಸ್ಸೂ ಉಂಟಾಗುವುದು. ಖಾಂಡವವನವನ್ನು ಅದರಲ್ಲಿರುವ ಪ್ರಾಣಿಗಳ ಸಹಿತವಾಗಿ ಭಸ್ಮಮಾಡಲು ಒಡನೆಯೇ ಹೋಗು, ಹುತಾಶನ! ಅದೇ ನಿನಗೆ ಪರಮೌಷಧ."

ಬ್ರಹ್ಮದೇವನ ಮಾತುಗಳನ್ನು ಕೇಳದೊಡನೆಯೇ ಅಗ್ನಿದೇವನು ಬಹುಬೇಗ ಧಾವಿಸಿ ಖಾಂಡವವನವನ್ನು ಸಮೀಪಿಸಿದನು. ಮಿತ್ರನಾದ

ವಾಯುವಿನ ಸಹಕಾರದಿಂದ ಪ್ರಜ್ವಲಿಸುತ್ತಾ ವನವನ್ನು ಭಸ್ಮಮಾಡಲು ಉಪಕ್ರಮಿಸಿದನು.

ಅಲ್ಲಿದ್ದ ಸಕಲಪ್ರಾಣಿಗಳೂ ಯಜ್ಞೇಶ್ವರನನ್ನು ಪರಾಭವಗೊಳಿಸುವುದರಲ್ಲಿ ಒಂದಾಗಿ ಕಾರ್ಯಮಾಡಿದುವು. ಸಾವಿರಾರು ಆನೆಗಳು ಕೋಪಾವೇಶದಿಂದ ತಮ್ಮ ಸೊಂಡಿಲುಗಳಿಂದ ನೀರನ್ನೆತ್ತಿ ತಂದು ಯಜ್ಞೇಶ್ವರನ ಮೇಲೆ ಸುರಿಯುತ್ತಿದ್ದುವು. ಹಲವು ಹೆಡೆಗಳನ್ನು ಹೊಂದಿದ್ದ ಸಾವಿರಾರು ಸರ್ಪಗಳು ಹೆಡೆಗಳಲ್ಲಿ ನೀರನ್ನು ತಂದು ಯಜ್ಞೇಶ್ವರನ ಮೇಲೆ ಸೇಚನಮಾಡುತ್ತಿದ್ದುವು. ಅದೇ ರೀತಿಯಲ್ಲಿ ಸಮಸ್ತಪ್ರಾಣಿಗಳೂ ತಮಗೆ ಸಾಧ್ಯವಿದ್ದಷ್ಟು ನೀರನ್ನು ತಂದು ಅಗ್ನಿಯ ಮೇಲೆ ಸುರಿದು ಯಜ್ಞೇಶ್ವರನನ್ನು ಪರಾಭವಗೊಳಿಸಿದುವು. ಅಗ್ನಿದೇವನೂ ಸಹ ತನ್ನ ಪ್ರಯತ್ನವನ್ನು ಬಿಡಲಿಲ್ಲ. ಒಮ್ಮೆ ಒಂದೆಡೆಯಲ್ಲಿ ಸುಪ್ತನಾಗಿ ಹೋದರೂ ಮತ್ತೊಂದೆಡೆಯಲ್ಲಿ ಪುನಃ ಪ್ರಜ್ವಲಿಸುತ್ತಿದ್ದನು. ಏಳು ಬಾರಿ ಅಳಿದು ಏಳು ಬಾರಿ ಪುನಃ ಉರಿದರೂ ತನ್ನ ಇಚ್ಛೆಯನ್ನು ಪೂರ್ಣಮಾಡಿಕೊಳ್ಳಲು ಯಜ್ಞದೇವನಿಗೆ ಸಾಧ್ಯವಾಗಲಿಲ್ಲ. ಖಾಂಡವವನದಲ್ಲಿದ್ದ ಪ್ರಾಣಿಗಳ ಸಾಮೂಹಿಕಶಕ್ತಿಯೇ ವಿಜಯಗಳಿಸಿತು. ಎಲ್ಲ ಪ್ರಾಣಿಗಳೂ ಸೇರಿ ಯಜ್ಞೇಶ್ವರನನ್ನು ಸಂಪೂರ್ಣವಾಗಿ ಪರಾಭವಗೊಳಿಸಿದುವು."

೨೨೩ನೆಯ ಅಧ್ಯಾಯವು ಮುಗಿಯಿತು.

೨೨೪ನೆಯ ಅಧ್ಯಾಯ ಖಾಂಡವದಾಹಪರ್ವ (ಮುಂದುವರಿದಿದೆ.)

## ಅರ್ಜುನನು ಅಗ್ನಿದೇವನ ಪ್ರಾರ್ಥನೆಯನ್ನು ಅಂಗೀಕರಿಸಿ, ದಿವ್ಯಾಯುಧಗಳನ್ನು ಅನುಗ್ರಹಿಸುವಂತೆ ಕೇಳಿದುದು

"ಜನಮೇಜಯ! ತನ್ನ ಕಾರ್ಯಸಾಧನೆಯಾಗದಿದ್ದುದಕ್ಕಾಗಿ ಅಗ್ನಿದೇವನಿಗೆ ಬಹಳ ನಿರಾಶೆಯುಂಟಾಯಿತು.

ಅಜೀರ್ಣರೋಗವು ಪರಿಹಾರವಾಗದೇ ಇದ್ದುದರಿಂದ ಅಗ್ನಿದೇವನು ಸದಾಕಾಲದಲ್ಲಿಯೂ ಜೋಲುಬಿದ್ದ ಮುಖದಿಂದಲೇ ಇರುತ್ತಿದ್ದನು.

ಖಾಂಡವವನದ ಪ್ರಾಣಿಗಳಿಂದ ತನಗಾದ ಪರಾಭವವನ್ನು ನೆನೆದಂತೆಲ್ಲಾ ಅಗ್ನಿದೇವನಿಗೆ ಬಹುವಾದ ಕೋಪವೂ ಬರುತ್ತಿತ್ತು. ಆದರೆ ಅವನ ಕೋಪದಿಂದ ಕಾರ್ಯಸಾಧನೆಯಾಗುವ ಸಾಧ್ಯತೆಯಿರಲಿಲ್ಲ. ಪುನಃ ಪಿತಾಮಹನಲ್ಲಿಗೇ ಧಾವಿಸಿದನು.

ಬ್ರಹ್ಮನಲ್ಲಿಗೆ ಹೋಗಿ ಅವನಲ್ಲಿ ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ನಿವೇದಿಸಿದನು.

ಭಗವಾನ್ ಚತುರ್ಮುಖನು ಕ್ಷಣಕಾಲ ಪರ್ಯಾಲೋಚಿಸಿ, ಅಗ್ನಿ ದೇವನನ್ನು ಕುರಿತು ಹೇಳಿದನು : "ಅನಘನಾದ ಅಗ್ನಿಯೇ! ನೀನು ಇಂದ್ರನ ಸಾನ್ನಿಧ್ಯದಲ್ಲಿಯೇ ಖಾಂಡವವನವನ್ನು ಭಸ್ಮಮಾಡುವ ಉಪಾಯವೊಂದು ಗೋಚರವಾಗಿದೆ. ಆದರೆ ನೀನು ಕಾಲನಿರೀಕ್ಷಣೆಯನ್ನು ಮಾಡಬೇಕು. ನರ-ನಾರಾಯಣರು ನಿನಗೆ ಸಹಕಾರವನ್ನೀಯುತ್ತಾರೆ. ಅವರ ಬೆಂಬಲದಿಂದ ನೀನು ಖಾಂಡವವನವನ್ನು ಭಸ್ಮಮಾಡಲು ಸಮರ್ಥನಾಗುವೆ. ನರ-ನಾರಾಯಣರು ಪೃಥ್ವಿಯಲ್ಲಿ ಅವತರಿಸುವವರೆಗೂ ನೀನು ಕಾಯಬೇಕು."

ಅಗ್ನಿಯು ನಿರಾಶೆಹೊಂದಲಿಲ್ಲ. ಹಾಗೆಯೇ ಆಗಲೆಂದು ಬ್ರಹ್ಮನಿಗೆ ಪ್ರತ್ಯುತ್ತರಿಸಿ ಬ್ರಹ್ಮನ ಅನುಮತಿಯನ್ನು ಪಡೆದು ಹೊರಟುಹೋದನು.

ದಿನಗಳು, ವಾರಗಳು, ಪಕ್ಷಗಳು, ಮಾಸಗಳು, ಸಂವತ್ಸರಗಳು– ಗಾಡಿಯ ಚಕ್ರಗಳಂತೆ ಉರುಳಿದುವು. ನರ-ನಾರಾಯಣಮಹರ್ಷಿಗಳು ಭೂಲೋಕದಲ್ಲಿ ಜನ್ಮತಾಳಿದ್ದಾರೆಂಬ ವಿಷಯವು ಅಗ್ನಿದೇವನಿಗೆ ತಿಳಿಯಿತು. ಬ್ರಹ್ಮನ ವಾಣಿಯನ್ನು ಸ್ಮರಿಸಿಕೊಂಡು ಒಡನೆಯೇ ಚತುರ್ಮುಖನ ಸಮೀಪಕ್ಕೆ ಅಗ್ನಿದೇವನು ತೆರಳಿದನು. ಯಜ್ಞೇಶ್ವರನನ್ನು ಕಂಡೊಡನೆಯೇ ಚತುರ್ಮುಖನು ಆದರದಿಂದ ಸ್ವಾಗತಿಸಿ ಹೇಳಿದನು :

"ಯಜ್ಞೇಶ್ವರ! ಇಂದ್ರನು ನೋಡುತ್ತಿರುವಾಗಲೇ ನೀನು ಖಾಂಡವ ವನವನ್ನು ಭಸ್ಮಮಾಡಲು ಸಾಧ್ಯವಾಗಬಹುದಾದ ಉಪಾಯವನ್ನು ಹೇಳು ವೆನು, ಕೇಳು. ಆದಿದೇವತೆಗಳಾದ ನರ-ನಾರಾಯಣರು ದೇವತೆಗಳ ಕಾರ್ಯ ವನ್ನು ಪೂರ್ಣಮಾಡಲು ಪೃಥ್ವಿಯಲ್ಲಿ ಅವತರಿಸಿದ್ದಾರೆ. ಭೂಮಿಯಲ್ಲಿ

ಅವರಿಬ್ಬರೂ 'ಕೃಷ್ಣ ಮತ್ತು ಅರ್ಜುನ' ಎಂಬ ಹೆಸರುಗಳಿಂದ ಪ್ರಸಿದ್ಧರಾಗಿದ್ದಾರೆ. ಈ ಸಮಯದಲ್ಲಿ ಅವರು ಖಾಂಡವವನದ ಸಮೀಪದಲ್ಲಿಯೇ ಇರುವರು. ಖಾಂಡವದಾಹಕ್ಕೆ ಸಹಕರಿಸುವಂತೆ ಅವರನ್ನು ಪ್ರಾರ್ಥಿಸು. ಅವರ ಆಶ್ರಯವನ್ನು ಪಡೆದು ನೀನು ಖಾಂಡವವನವನ್ನು–ಸಮಸ್ತದೇವತೆಗಳೂ ಒಟ್ಟುಗೂಡಿ ರಕ್ಷಿಸಲು ಬಂದರೂ ಭಸ್ಮಮಾಡಬಹುದು. ಅವರು ನಿಶ್ಚಯವಾಗಿಯೂ ಖಾಂಡವವನದಿಂದ ಒಂದೇ ಒಂದು ಪ್ರಾಣಿಯೂ ಹೊರಗೆ ಹೋಗದಂತೆ ತಡೆಯುವರು ಮತ್ತು ಇಂದ್ರನನ್ನೂ ಪರಾಭವಗೊಳಿಸುವರು. ಈ ವಿಷಯದಲ್ಲಿ ನನಗಾವ ಸಂಶಯವೂ ಇರುವುದಿಲ್ಲ."

ಬ್ರಹ್ಮನ ಆ ಮಾತುಗಳನ್ನು ಕೇಳಿದೊಡನೆಯೇ ಅಗ್ನಿದೇವನು ಸಂತುಷ್ಟನಾಗಿ ಬ್ರಾಹ್ಮಣವೇಷವನ್ನು ಧರಿಸಿ ಕೃಷ್ಣಾರ್ಜುನರ ಸಮೀಪಕ್ಕೆ ಅವಸರದಿಂದ ಧಾವಿಸಿದನು.

ಜನಮೇಜಯ! ಅಗ್ನಿದೇವನು ಕೃಷ್ಣಾರ್ಜುನರ ಸಮೀಪಕ್ಕೆ ಬಂದು ಭೋಜನವನ್ನು ಯಾಚಿಸಿದ ವಿಷಯವನ್ನು ಈ ಹಿಂದೆಯೇ ಹೇಳಿರುವೆನಲ್ಲವೇ? ಅಗ್ನಿಯ ಭೋಜನವು ಸಾಧಾರಣವಾದ ಭೋಜನವಾಗಿರಲಿಲ್ಲ. ಅಖಂಡಖಾಂಡವವನವೇ ಅವನಿಗೆ ಬೇಕಾಗಿದ್ದಿತು. ಅಗ್ನಿಯ ಆಶಯವೇನೆಂಬುದನ್ನು ಕೃಷ್ಣಾರ್ಜುನರು ತಿಳಿದನಂತರ ಅರ್ಜುನನು ಯಜ್ಞೇಶ್ವರನೊಡನೆ ಸಮಯೋಚಿತವಾದ ಈ ಮಾತುಗಳನ್ನು ಹೇಳಿದನು :

"ಅಗ್ನಿದೇವನೇ! ನೂರಾರು ಇಂದ್ರರು ಬಂದರೂ ಸೆಣೆಸಲು ಶಕ್ಯವಿರುವ ಅಗಣಿತವಾದ ದಿವ್ಯಾಸ್ತ್ರಗಳು ನನ್ನಲ್ಲಿವೆ. ಆದರೆ ನನ್ನ ಭುಜಬಲಕ್ಕೆ ಅನುಗುಣವಾದ ಅಥವಾ ನನ್ನ ಭುಜಬಲಶಕ್ತಿಯನ್ನು ತಡೆದುಕೊಳ್ಳುವ ಧನುಸ್ಸು ಮಾತ್ರ ನನ್ನಲ್ಲಿಲ್ಲ. ಯಜ್ಞೇಶ್ವರ! ಬಾಣಪ್ರಯೋಗದಲ್ಲಿ ನನ್ನ ಕೈಚಳಕವೆಷ್ಟೆಂಬುದನ್ನು ನೀನೂ ಅರಿತಿರಬಹುದು. ಸಾವಿರಾರು ಬಾಣಗಳನ್ನು ಅನವರತವಾಗಿ ಪ್ರಯೋಗಿಸುವ ಶಕ್ತಿಯು ನನಗಿದೆ. ಆದರೆ ಅದಕ್ಕೆ ತಕ್ಕಂತೆ ಎಷ್ಟು ಬಾಣಗಳನ್ನು ತೆಗೆದರೂ ಅಕ್ಷಯವಾಗುವ ಬತ್ತಳಿಕೆಗಳ ಆವಶ್ಯಕತೆಯಿದೆ. ನನಗೆ ಬೇಕಾಗಬಹುದಾದ ಅಸಂಖ್ಯಾತಬಾಣಗಳನ್ನು ನನ್ನಲ್ಲಿರುವ ರಥವೂ ಹೊರಲಾರದು. ಈ ಕಾರಣದಿಂದ ನನಗೆ ಉತ್ತಮ

ವಾದ, ಬಿಳಿಯದಾದ, ಗಾಳಿಯಂತೆ ಗಮನವಿರುವ ಅಶ್ವಗಳೂ–ದಿವ್ಯಾಸ್ತ್ರಗಳನ್ನೊಳಗೊಂಡ, ಸೂರ್ಯನಿಗೆ ಸಮಾನವಾದ ಪ್ರಭೆಯುಳ್ಳ, ಮೇಘನಾದವನ್ನುಂಟುಮಾಡುವ ದಿವ್ಯರಥವೂ ಬೇಕಾಗಿದೆ. ಕೃಷ್ಣನಲ್ಲಿಯೂ ಖಾಂಡವವನದಲ್ಲಿರುವ ನಾಗಗಳನ್ನೂ-ಪಿಶಾಚಗಳನ್ನೂ ಸಂಹರಿಸಲು ಅವನ ಬಲ-ಪರಾಕ್ರಮಗಳಿಗೆ ಅನುಗುಣವಾದ ಆಯುಧವಿಲ್ಲ. ಮಹಾನುಭಾವನೇ! ಯಾವುದರ ಸಹಾಯದಿಂದ ನಮಗೆ ಅಪಜಯವೇ ಉಂಟಾಗುವುದಿಲ್ಲವೋ ಮತ್ತು ಮಳೆಯನ್ನು ಸುರಿಸಲು ಬರುವ ದೇವೇಂದ್ರನನ್ನೂ ಪರಾಜಯಗೊಳಿಸಲು ಸಾಧ್ಯವಿದೆಯೋ–ಅಂತಹ ದಿವ್ಯರಥವನ್ನೂ, ದಿವ್ಯಾಯುಧಗಳನ್ನೂ, ಅಕ್ಷಯತೂಣೀರಗಳನ್ನೂ ದಯಪಾಲಿಸುವವನಾಗು. ನಾವು ನಮ್ಮ ಪರಾಕ್ರಮವೆಷ್ಟೆಂಬುದನ್ನು ತೋರಿಸಲು ಸಿದ್ಧರಾಗಿರುವೆವು. ಅದಕ್ಕೆ ತಕ್ಕ ಉಪಾಯಗಳನ್ನು ಹೊಂದಿಸಿಕೊಡುವುದು ನಿನಗೆ ಸೇರಿದ್ದಾಗಿದೆ, ಅಗ್ನಿದೇವ!”

೨೨೪ನೆಯ ಅಧ್ಯಾಯವು ಮುಗಿಯಿತು.

೨೨೫ನೆಯ ಅಧ್ಯಾಯ ಖಾಂಡವದಾಹಪರ್ವ (ಮುಂದುವರಿದಿದೆ.)

## ಅಗ್ನಿಯಿಂದ ಅರ್ಜುನನಿಗೆ ಗಾಂಡೀವಧನುಸ್ಸು, ಅಕ್ಷಯ ತೂಣೀರಗಳು ಮತ್ತು ದಿವ್ಯರಥಗಳ ಪ್ರದಾನ : ಶ್ರೀಕೃಷ್ಣನಿಗೆ ಚಕ್ರಪ್ರದಾನ : ಖಾಂಡವದಹನ

ಜನಮೇಜಯ! ಯಜ್ಞೇಶ್ವರನು ಅರ್ಜುನನ ಮಾತುಗಳನ್ನು ಕೇಳಿದೊಡನೆಯೇ ಲೋಕಪಾಲಕರಲ್ಲೊಬ್ಬನಾದ, ಅದಿತಿಯ ಮಗನಾದ, ಜಲನಿವಾಸಿಯಾಗಿರುವ, ಜಲೇಶ್ವರನಾದ ವರುಣದೇವನ ಸ್ಮರಣೆಯನ್ನು ಮಾಡಿದನು. ಮರುಕ್ಷಣದಲ್ಲಿಯೇ ವರುಣದೇವನು ಅಗ್ನಿದೇವನ ಮುಂದೆ ಬಂದು ನಿಂತನು. ಅಗ್ನಿಯು ಲೋಕಪಾಲರಲ್ಲಿ ನಾಲ್ಕನೆಯವನಾದ ವರುಣದೇವನನ್ನು ಪುರಸ್ಕರಿಸಿ ಯಥೋಚಿತವಾಗಿ ಸತ್ಕರಿಸಿ ಹೇಳಿದನು : “ವರುಣದೇವ! ಸೋಮರಾಜನಿಂದ ನಿನಗೆ ಕೊಡಲ್ಪಟ್ಟಿರುವ ದಿವ್ಯಧನುಸ್ಸನ್ನೂ, ಅಕ್ಷಯವಾದ ಬತ್ತಳಿಕೆಗಳನ್ನೂ, ಕಪಿಧ್ವಜವಿರುವ ದಿವ್ಯರಥವನ್ನೂ ಕೂಡಲೇ ದಯಪಾಲಿಸು. ಪಾರ್ಥನು ಗಾಂಡೀವಧನುಸ್ಸಿನಿಂದ

ಒಂದು ಮಹಾಕಾರ್ಯವನ್ನು ಸಾಧಿಸಬೇಕಾಗಿದೆ. ನಿನ್ನಲ್ಲಿರುವ ದಿವ್ಯವಾದ ಚಕ್ರವನ್ನೂ ದಯಪಾಲಿಸುವುದರಿಂದ ವಾಸುದೇವನೂ ಆ ಮಹಾಕಾರ್ಯಸಾಧನೆಗೆ ನೆರವಾಗುತ್ತಾನೆ. ಅದನ್ನು ಜನಾರ್ದನನಿಗೆ ದಯಪಾಲಿಸು."

"ನಿನ್ನ ಪ್ರಾರ್ಥನೆಯಂತೆ ನೀನು ಕೇಳುವುದೆಲ್ಲವನ್ನೂ ಕೊಡುತ್ತೇನೆ" – ಎಂದು ಹೇಳಿ ವರುಣದೇವನು ಗಾಂಡೀವವೆಂಬ ಧನುಸ್ಸನ್ನು ಅರ್ಜುನನಿಗೊಪ್ಪಿಸಿದನು.

ಜನಮೇಜಯ! ಗಾಂಡೀವನೆಂಬ ಧನುಸ್ಸಿನ ಮಹಿಮೆಯು ಅಪಾರ ವಾದುದು. ಅದು ಮಹಾವೀರ್ಯವುಳ್ಳ ಧನುಸ್ಸು. ಯಶಸ್ಸನ್ನೂ – ಕೀರ್ತಿಯನ್ನೂ ಹೆಚ್ಚಿಸುವ ಸಾಮರ್ಥ್ಯವುಳ್ಳದ್ದು. ಬೇರಾವ ಶಸ್ತ್ರಾಸ್ತ್ರಗಳಿಂದಲೂ ಘಾತಪಡಿಸಲು ಸಾಧ್ಯವಾಗದ ಧನುಸ್ಸು. ಎದುರಾಳಿಯ ಎಲ್ಲ ವಿಧವಾದ ಶಸ್ತ್ರಾಸ್ತ್ರಗಳನ್ನೂ ಘಾತಪಡಿಸುವ ಅಥವಾ ವಿಮುಖಮಾಡುವ ಸಾಮರ್ಥ್ಯ ವಿರುವ ಧನುಸ್ಸು. ಶತ್ರುಸೈನ್ಯವನ್ನು ಕ್ಷಣಮಾತ್ರದಲ್ಲಿ ಪರಾಭವಗೊಳಿಸುವ ಸಾಮರ್ಥ್ಯವುಳ್ಳ ಆ ಮಹಾಧನುಸ್ಸಿಗೆ ಇತರ ಲಕ್ಷಧನುಸ್ಸುಗಳು ಕೂಡ ಸಾಟಿಯಾಗಲಾರವು. ಅದು ರಾಷ್ಟ್ರವನ್ನು ವಿಸ್ತೀರ್ಣಗೊಳಿಸಲು ಸಾಧಕವಾದ ದಿವ್ಯಧನುಸ್ಸು. ಆ ಧನುಸ್ಸು ನಾನಾವರ್ಣಗಳಿಂದ ಪ್ರಕಾಶಿಸುತ್ತಿದ್ದಿತು. ನೋಡಲು ನೇತ್ರಾನಂದಕರವಾಗಿ ಸುಂದರವಾಗಿದ್ದಿತು. ಅದರ ಮೇಲೆ ಏಟುಬಿದ್ದ ಗುರುತುಗಳಾವುವೂ ಇರಲಿಲ್ಲ. ಅನೇಕವರ್ಷಗಳಿಂದ ಆ ದಿವ್ಯಧನುಸ್ಸು ದೇವ-ದಾನವ-ಗಂಧರ್ವರಿಂದ ಪೂಜಿಸಲ್ಪಡುತ್ತಿದ್ದಿತು. ಗಾಂಡೀವವೆಂಬ ಆ ದಿವ್ಯಧನುಸ್ಸನ್ನು ವರುಣನು ಅರ್ಜುನನಿಗೆ ಕೊಟ್ಟನು. ಅದರ ಜೊತೆಯಲ್ಲಿಯೇ ಅಕ್ಷಯವಾದ ಎರಡು ಬತ್ತಳಿಕೆಗಳನ್ನೂ ಮತ್ತು ದಿವ್ಯರಥವನ್ನೂ ವರುಣನು ಅರ್ಜುನನಿಗೆ ಕೊಟ್ಟನು.

ಜನಮೇಜಯ! ಯಜ್ಞೇಶ್ವರನ ಪ್ರಾರ್ಥನೆಯಂತೆ ವರುಣನು ಅರ್ಜುನನಿಗೆ ಕೊಟ್ಟ ರಥವೂ ಅನ್ಯಾದೃಶವಾದುದು. ಆ ರಥದಲ್ಲಿ ಸಕಲದಿವ್ಯಾಯುಧಗಳೂ ಸಜ್ಜುಗೊಳಿಸಲ್ಪಟ್ಟಿದ್ದುವು. ಆಂಜನೇಯನು ಆ ರಥದ ಧ್ವಜದಲ್ಲಿ ಕುಳಿತಿದ್ದನು. ಬೆಳ್ಳಿಯಂತೆ ಅಥವಾ ಬಿಳುಪಾದ ಮೋಡದಂತೆ ಶುಭ್ರವಾಗಿದ್ದ, ಚಿನ್ನದ ಕಡಿವಾಣಗಳಿಂದ ಸಮಲಂಕೃತವಾಗಿದ್ದ, ಮನೋವೇಗ-ವಾಯುವೇಗಗತಿಯುಳ್ಳ ಗಂಧರ್ವಲೋಕದ ದಿವ್ಯಾಶ್ವಗಳು ಆ ರಥಕ್ಕೆ

ಹೂಡಲ್ಪಟ್ಟಿದ್ದುವು. ಯುದ್ಧಕ್ಕೆ ಬೇಕಾಗುವ ಸಕಲಸಾಮಗ್ರಿಗಳೂ ಆ ರಥದಲ್ಲಿ ಸಜ್ಜಾಗಿದ್ದುವು. ರಥವನ್ನು ವಿನಾಶಮಾಡಲು ದೇವ-ದಾನವ-ರಾಕ್ಷಸ ರಿಂದಲೂ ಸಾಧ್ಯವಿರಲಿಲ್ಲ. ಆ ರಥದ ಪ್ರಭೆಯು ಅಸಾಧಾರಣವಾಗಿದ್ದಿತು ಮತ್ತು ಅದರ ಚಕ್ರಗಳ ಶಬ್ದವು ಅತಿಘೋರವಾಗಿದ್ದಿತು. ರತ್ನಖಚಿತವಾಗಿದ್ದ ಆ ರಥವು ಸಕಲಪ್ರಾಣಿಗಳ ಮನೋಹಾರಿಯಾಗಿಯೂ ಇದ್ದಿತು. ಚತುರ್ದಶಭುವನಗಳಿಗೂ ಪ್ರಭುವಾದ ಭೌಮನನೆಂಬ ಪ್ರಜಾಪತಿಯು (ವಿಶ್ವಕರ್ಮನು) ಆ ರಥವನ್ನು ಬಹುಕಾಲ ತಪಸ್ಸುಮಾಡಿ ನಿರ್ಮಿಸಿದ್ದನು. ಆ ರಥದ ಪ್ರಭೆಯು ಸೂರ್ಯಪ್ರಭೆಯಂತಿದ್ದುದರಿಂದ ಅದನ್ನು ದೃಷ್ಟಿಸಿ ನೋಡುವುದಕ್ಕೂ ಸಾಧ್ಯವಾಗುತ್ತಿರಲಿಲ್ಲ. ಸೋಮರಾಜನು ಆ ರಥದಲ್ಲಿಯೇ ಕುಳಿತು ದಾನವರನ್ನು ಪರಾಜಯಗೊಳಿಸಿದ್ದನು. ಸಾಯಂಕಾಲದ ಸೂರ್ಯನ ಪ್ರಭೆಯು ಬಿದ್ದ ಮೋಡದೋಪಾದಿಯಲ್ಲಿ ಆ ರಥದ ಕಾಂತಿಯಿದ್ದಿತು. ರಥದಲ್ಲಿ ಸುವರ್ಣಮಯವಾದ ಯಷ್ಟಿಯಿದ್ದಿತು. ಧ್ವಜದಲ್ಲಿ ಸಿಂಹ-ಶಾರ್ದೂಲಗಳಿಗೆ ಸದೃಶವಾದ ಪ್ರಭಾವದಿಂದ ಕೂಡಿದ್ದ ದಿವ್ಯವಾನರನಿದ್ದನು. ಎದುರಾಗಿ ಬಂದ ಶತ್ರುಸಮೂಹವನ್ನು ದಹಿಸಿಬಿಡುವನೋ-ಎಂಬಂತೆ ಆ ಧ್ವಜದಲ್ಲಿ ಕಪೀಶ್ವರನು ಪ್ರಕಾಶಿಸುತ್ತಿದ್ದನು. ಕಪೀಶ್ವರನು ಮಾತ್ರವಲ್ಲದೇ ಇನ್ನೂ ಅನೇಕಭೂತಗಣಗಳೂ ರಥವನ್ನು ರಕ್ಷಿಸುವ ಸಲುವಾಗಿ ಸ್ಥಾಪಿತವಾಗಿದ್ದುವು. ಅವುಗಳ ಗರ್ಜನೆಗಳು ಶತ್ರುಪಕ್ಷದ ಸೈನಿಕರಿಗೆ ಮೂರ್ಛೆಯನ್ನುಂಟು ಮಾಡುವುದಾಗಿದ್ದುವು. ಅಂತಹ ಅನೇಕಪತಾಕೆಗಳಿಂದ ಕೂಡಿದ್ದ ದಿವ್ಯರಥ ವನ್ನು ಅರ್ಜುನನು ಕವಚ-ಖಡ್ಗಗಳನ್ನು ಧರಿಸಿದವನಾಗಿ, ಅಂಗುಲಿತ್ರಗಳನ್ನು ಹಾಕಿಕೊಂಡು, ದೇವತೆಗಳಿಗೆ ನಮಸ್ಕರಿಸಿ, ರಥವನ್ನು ಪ್ರದಕ್ಷಿಣೆಮಾಡಿ - ಪುಣ್ಯಪುರುಷರು ಪುಷ್ಪಕವಿಮಾನವನ್ನು ಆರೋಹಣಮಾಡುವ ರೀತಿಯಲ್ಲಿ- ಕೃಷ್ಣನೊಡನೆ ಆರೋಹಣಮಾಡಿದನು.

ಬ್ರಹ್ಮನಿಂದ ನಿರ್ಮಿತವಾದ ಗಾಂಡೀವಧನುಸ್ಸನ್ನು ಪಡೆದು ಅರ್ಜು ನನು ಆನಂದಭರಿತನಾದನು. ಯಜ್ಞೇಶ್ವರನನ್ನು ಪುರಸ್ಕರಿಸಿ, ಗಾಂಡೀವ ಧನುಸ್ಸಿನ ಒಂದು ಭಾಗದಲ್ಲಿದ್ದ ಮೌರ್ವಿಯನ್ನು ಬಲಪ್ರಯೋಗ ದಿಂದ ಮತ್ತೊಂದು ತುದಿಗೆ ಸಂಯೋಜಿಸಿ, ಧನುಷ್ಟೇಂಕಾರವನ್ನು ಮಾಡಿ ದನು. ಧನುಷ್ಟೇಂಕಾರದ ಮಹಾಶಬ್ದವನ್ನು ಕೇಳಿದವರೆಲ್ಲರೂ ಭೀತರಾದರು.

ಕಪಿಧ್ವಜವುಳ್ಳ ರಥ, ಮುರಿಯಲು ಅಸಾಧ್ಯವಾದ ಧನುಸ್ಸು, ಅಕ್ಷಯ ತೂಣೀರಗಳು–ಇವುಗಳನ್ನು ಪಡೆದು ಅರ್ಜುನನು ಅಗ್ನಿಯು ಕೈಗೊಳ್ಳಲಿರುವ ಖಾಂಡವದಹನಕ್ಕೆ ಸಹಕಾರವನ್ನೀಯಲು ತಾನು ಸಮರ್ಥನಾಗಿರುವೆನೆಂದು ಭಾವಿಸಿದನು.

ಯಜ್ಞೇಶ್ವರನು ಅರ್ಜುನನ ಸಖನಾದ ಶ್ರೀಕೃಷ್ಣನಿಗೆ ವಜ್ರದಿಂದ ನಿರ್ಮಿತವಾದ ಮಧ್ಯಭಾಗದಿಂದ ಕೂಡಿದ್ದ, ಆಗ್ನೇಯಾಸ್ತ್ರಕ್ಕೆ ಸದೃಶವಾದ ಚಕ್ರವನ್ನು ಕೊಟ್ಟನು. ಆ ಚಕ್ರವು ಶ್ರೀಕೃಷ್ಣನಿಗೆ ಪ್ರೀತಿಪಾತ್ರವಾದ ಆಯುಧವಾಗಿ ಪರಿಣಮಿಸಿತು. ಅದನ್ನು ಪಡೆದ ಶ್ರೀಕೃಷ್ಣನೂ ಖಾಂಡವದಾಹಕ್ಕೆ ಸಹಕಾರವನ್ನೀಯಲು ಸಮರ್ಥನಾದನು. ಚಕ್ರದ ಮಹತ್ತ್ವವೆಷ್ಟೆಂಬುದನ್ನು ಯಜ್ಞೇಶ್ವರನು ಶ್ರೀಕೃಷ್ಣನಿಗೆ ವಿವರಿಸುತ್ತಾ ಹೇಳಿದನು.: "ಮಧುಸೂದನ! ಈ ಚಕ್ರದಿಂದ ನೀನು ನಿನ್ನ ಎದುರಾಗಿ ಬರುವ ಅತಿಮಾನುಷರನ್ನೂ ಜಯಿಸಬಹುದು. ಈ ಚಕ್ರವು ನಿನ್ನ ಕೈಯಲ್ಲಿರುವವರೆಗೂ ನೀನು ದೇವತೆಗಳನ್ನೂ, ರಾಕ್ಷಸರನ್ನೂ, ಪಿಶಾಚರನ್ನೂ, ದೈತ್ಯರನ್ನೂ, ನಾಗರನ್ನೂ– ಪರಾಕ್ರಮದಲ್ಲಿ ಮೀರಿಸುವೆ. ಶತ್ರುಗಳೆಲ್ಲರನ್ನೂ ಸದೆಬಡಿಯಲು ಸಮರ್ಥನಾಗುವೆ. ಮಾಧವನೇ! ಈ ಆಯುಧದಲ್ಲಿ ಮತ್ತೊಂದು ವೈಶಿಷ್ಟ್ಯವೂ ಇದೆ.:

**ಕ್ಷಿಪ್ತಂ ಕ್ಷಿಪ್ತಂ ರಣೇ ಚೈತತ್ತ್ವಯಾ ಮಾಧವ ಶತ್ರುಷು ।**
**ಹತ್ವಾಪ್ರತಿಹತಂ ಸಂಖ್ಯೇ ಪಾಣಿಮೇಷ್ಯತಿ ತೇ ಪುನಃ ॥೨೭॥**

ನೀನು ಶತ್ರುಗಳ ಮೇಲೆ ಈ ಚಕ್ರವನ್ನು ಪ್ರಯೋಗಮಾಡುತ್ತಿದ್ದಂತೆಲ್ಲಾ ಇದು ಅವರನ್ನು ಬಲಿತೆಗೆದುಕೊಂಡು, ಶತ್ರುಗಳ ಶಸ್ತ್ರಾಸ್ತ್ರಪ್ರಹಾರಗಳಿಂದ ಸ್ವಲ್ಪವೂ ಘಾಸಿಗೊಳ್ಳದೇ ಅಪ್ರತಿಹತವಾಗಿ ಪುನಃ ನಿನ್ನ ಕೈಯನ್ನೇ ಸೇರುವುದು."

ಅನಂತರ ವರುಣದೇವನು ಶ್ರೀಕೃಷ್ಣನಿಗೆ 'ಕೌಮೋದಕೀ' ಎಂಬ ಗದೆಯನ್ನು ಕೊಟ್ಟನು. ಆ ಗದೆಯು ದೈತ್ಯರೆಲ್ಲರನ್ನೂ ನಾಶಮಾಡುವ ಸಾಮರ್ಥ್ಯವನ್ನು ಪಡೆದಿದ್ದಿತು. ಅದನ್ನು ಪ್ರಯೋಗಮಾಡಿದೊಡನೆಯೇ ಸಿಡಿಲಿನಂತೆ ಶಬ್ದಮಾಡುತ್ತಾ ಎದುರಾಳಿಯನ್ನು ನಿರ್ಮೂಲಮಾಡುತ್ತಿದ್ದಿತು.

ಅಮೋಘವಾದ ಆಯುಧಗಳನ್ನು ಪಡೆದ ಕೃಷ್ಣಾರ್ಜುನರು ಯಜ್ಞೇ

ಶ್ವರನಿಗೆ ಹೇಳಿದರು : "ಮಹಾನುಭಾವ! ನೀನು ಕೊಟ್ಟಿರುವ ಅಮೋಘವಾದ ಆಯುಧಗಳಿಂದಲೂ, ರಥದಿಂದಲೂ ನಾವು ದೇವ-ದಾನವರೆಲ್ಲರನ್ನೂ ಎದುರಿಸಲು ಸಮರ್ಥರಾಗಿದ್ದೇವೆ. ತಕ್ಷಕನನ್ನು ರಕ್ಷಿಸಲು ಬರುವ ಇಂದ್ರನ ವಿಷಯವಾಗಿ ನೀನು ಸ್ವಲ್ಪವೂ ಯೋಚಿಸುವ ಕಾರಣವಿಲ್ಲ."



ಕೆಲವು ಕ್ಷಣಗಳು ಕಳೆದನಂತರ ಅರ್ಜುನನು ಹೇಳಿದನು : "ಪಾವಕ! ನೀನು ದಯಪಾಲಿಸಿರುವ ಚಕ್ರಾಯುಧವನ್ನು ಹಿಡಿದು ಹೃಷೀಕೇಶನು ಯುದ್ಧಕ್ಕಿಳಿದನೆಂದರೆ ತ್ರಿಭುವನಗಳಲ್ಲಿ ಯಾರೇ ಬಂದರೂ ಅವರನ್ನು ಧ್ವಂಸಮಾಡುವನು. ಅಕ್ಷಯತೂಣೀರಗಳಿಂದ ಕೂಡಿರುವ ಗಾಂಡೀವ ಧನುಸ್ಸನ್ನು ಹೊಂದಿರುವ ನಾನೂ ತ್ರಿಭುವನಗಳನ್ನು ಏಕಕಾಲದಲ್ಲಿ ಎದುರಿಸಿ ಯುದ್ಧಮಾಡಲು ಸಿದ್ಧನಾಗಿರುವೆನು. ಆದುದರಿಂದ ಈ ಕೂಡಲೇ ಖಾಂಡವವನವನ್ನು ಸ್ವೇಚ್ಛೆಯಿಂದ ನಾಲ್ಕು ಕಡೆಗಳಲ್ಲಿಯೂ ಆವರಿಸಿಕೊಂಡು ಭಕ್ಷಿಸು. ನಾವು ನಿನ್ನ ರಕ್ಷಣೆಮಾಡಲು ಈಗ ಸಮರ್ಥರಾಗಿರುವೆವು."

ಜನಮೇಜಯ! ಕೃಷ್ಣಾರ್ಜುನರ ಮಾತುಗಳನ್ನು ಕೇಳಿದೊಡನೆಯೇ

ಯಜ್ಞೇಶ್ವರನು ಸಂತೋಷಭರಿತನಾಗಿ ದಹನಸ್ವರೂಪವನ್ನು ತಾಳಿ, ಬಹಳ ರಭಸದಿಂದ ಖಾಂಡವವನವನ್ನು ಆವರಿಸಿದನು. ಯುಗಾಂತ್ಯದಲ್ಲಿ ಸಪ್ತಶಿಖೆಗಳಿಂದ ಕೂಡಿ ಪ್ರಪಂಚವನ್ನು ಸುಡುವ ರೀತಿಯಲ್ಲಿ–ಯಜ್ಞೇಶ್ವರನು ಖಾಂಡವವನವನ್ನು ಸಪ್ತಮಹಾಜ್ವಾಲೆಗಳಿಂದ ಭಸ್ಮಮಾಡತೊಡಗಿದನು. ವನವು ಉರಿಯುತ್ತಿದ್ದಾಗ ಉಂಟಾಗುತ್ತಿದ್ದ ಭಯಂಕರಶಬ್ದವು ಮೇಘನಾದವನ್ನು ಅನುಕರಿಸುತ್ತಿದ್ದಿತು. ವನದೊಳಗಿದ್ದ ಪ್ರಾಣಿಗಳೆಲ್ಲವೂ ಭಯಪಟ್ಟು ತಲ್ಲಣಿಸಿದುವು. ಎಲ್ಲ ಕಡೆಗಳಿಂದಲೂ ಜ್ವಲಿಸುತ್ತಿರುವ ಅಗ್ನಿಯ ಜ್ವಾಲೆಗಳಿಂದ ವ್ಯಾಪ್ತವಾದ ಆ ಖಾಂಡವವನವು–ಸ್ವರ್ಣಮಯವಾದ ಮೇರುಪರ್ವತದ ಮೇಲೆ ಸೂರ್ಯನ ಕಿರಣಗಳು ಬಿದ್ದರೆ ಆ ಪರ್ವತವು ಎಷ್ಟು ಪ್ರಕಾಶಮಾನವಾಗಿರುವುದೋ–ಅಷ್ಟು ಹೆಚ್ಚಿನ ಪ್ರಕಾಶದಿಂದ ಪ್ರಜ್ವಲಿಸುತ್ತಿದ್ದಿತು.”

೨೨೫ನೆಯ ಅಧ್ಯಾಯವು ಮುಗಿಯಿತು.

೨೨೬ನೆಯ ಅಧ್ಯಾಯ ಖಾಂಡವದಾಹಪರ್ವ (ಮುಂದುವರಿದಿದೆ.)

## ಖಾಂಡವದಹನದ ಸಮಯದಲ್ಲಿ ಅಲ್ಲಿದ್ದ ಪ್ರಾಣಿಗಳ ಚಿಂತಾಜನಕಸ್ಥಿತಿ : ಮಳೆಗರೆದು ಯಜ್ಞೇಶ್ವರನನ್ನು ಶಾಂತಗೊಳಿಸಲು ಇಂದ್ರನ ಪ್ರಯತ್ನ

“ಜನಮೇಜಯ! ಕೃಷ್ಣಾರ್ಜುನರು ರಥಾರೂಢರಾಗಿ ಖಾಂಡವವನದ ಉಭಯಪಾರ್ಶ್ವಗಳಲ್ಲಿಯೂ ಪ್ರಾಣಿಗಳ ಹತ್ಯಾಕಾಂಡವನ್ನು ಪ್ರಾರಂಭಿಸಿದರು. ಖಾಂಡವವನದ ಯಾವ ಕಡೆಯಿಂದಲೇ ಆಗಲಿ ಒಂದು ಸಣ್ಣ ಪ್ರಾಣಿಯು ತಪ್ಪಿಸಿಕೊಳ್ಳಲು ಹೊರಹೊರಟರೂ ಒಡನೆಯೇ ಕೃಷ್ಣಾರ್ಜುನರು ಅಲ್ಲಿಗೆ ಧಾವಿಸಿ ಆ ಪ್ರಾಣಿಯನ್ನು ಅಲ್ಲಿಯೇ ತುಂಡರಿಸಿ ಯಜ್ಞೇಶ್ವರನಿಗೆ ಆಹುತಿಕೊಡುತ್ತಿದ್ದರು. ಖಾಂಡವವನದಲ್ಲಿದ್ದ ಪ್ರಾಣಿಗಳಿಗೆ ತಮ್ಮ ಸುತ್ತಲೂ ರಥಗಳಿವೆಯೋ ಎಂಬ ಭ್ರಾಂತಿಯನ್ನುಂಟು ಮಾಡುವ ರೀತಿಯಲ್ಲಿ ಕೃಷ್ಣಾರ್ಜುನರ ರಥಗಳು ಅತಿರಭಸದಿಂದ ಸಂಚರಿಸುತ್ತಿದ್ದುವು.

ಕೃಷ್ಣಾರ್ಜುನರ ಎರಡು ರಥಗಳೂ ಬಹಳ ರಭಸದಲ್ಲಿ ತಿರುಗುತ್ತಿದ್ದಾಗ ತಮ್ಮ ಸುತ್ತಲೂ ರಥಗಳಿರುವಂತೆಯೂ ಮತ್ತು ಆ ಎಲ್ಲ ರಥಗಳಲ್ಲಿಯೂ ಇಬ್ಬರೂ ಒಟ್ಟಾಗಿ ಕುಳಿತಿರುವಂತೆಯೂ ಖಾಂಡವವನಚಾರಿಗಳಿಗೆ ಕಾಣುತ್ತಿದ್ದಿತು.

ಯಜ್ಞೇಶ್ವರನು ನಾಲ್ಕು ಕಡೆಗಳಲ್ಲಿಯೂ ಹತ್ತಿ ಉರಿಯುತ್ತಿದ್ದಾಗ ಅಲ್ಲಿದ್ದ ಸಾವಿರಾರು ಪ್ರಾಣಿಗಳು ಭಯಂಕರಧ್ವನಿಮಾಡುತ್ತಾ ಪ್ರಾಣಗಳನ್ನುಳಿಸಿ ಕೊಳ್ಳಬೇಕೆಂಬ ಧಾವಂತದಿಂದ ಸುತ್ತ-ಮುತ್ತಲೂ ಓಡಾಡತೊಡಗಿದುವು. ಕೆಲವು ಪ್ರಾಣಿಗಳಿಗೆ ಕಾಲುಗಳೇ ಸುಟ್ಟುಹೋಗಿದ್ದುವು. ಕೆಲವು ಪ್ರಾಣಿಗಳು ಅಧಿಕವಾದ ಜ್ವಾಲೆಗಳಿಂದ ಬೆಂದುಹೋಗಿದ್ದುವು. ಕೆಲವು ಪ್ರಾಣಿಗಳ ಶರೀರಗಳಲ್ಲಿ ಸುಟ್ಟ ಬೊಬ್ಬೆಗಳುಂಟಾಗಿ ಅವು ವಿಕಾರಸ್ವರೂಪವನ್ನು ತಾಳಿದ್ದುವು. ಕೆಲವು ಪ್ರಾಣಿಗಳ ಕಣ್ಣಿನ ಗುಡ್ಡೆಗಳು ಹೊರಹೊರಟಿದ್ದುವು. ಮತ್ತೆ ಕೆಲವು ಪ್ರಾಣಿಗಳು ತಮ್ಮ ಅವಸಾನವು ಸಮೀಪಿಸಿತೆಂದು ನಿಶ್ಚಯಿಸಿ ಪತ್ನೀ-ಪುತ್ರ-ಬಂಧುಗಳನ್ನು ತೊರೆದು ಹೋಗಲು ಸಾಧ್ಯವಾಗದೆ ಒಂದನ್ನೊಂದು ಅಪ್ಪಿಕೊಂಡು ಪ್ರಾಣತೊರೆದುವು. ಕೆಲವು ಪ್ರಾಣಿಗಳು ಹಲ್ಲುಗಳನ್ನು ಕಚ್ಚುತ್ತಾ ಬಲವನ್ನೆಲ್ಲಾ ಕೇಂದ್ರೀಕರಿಸಿ ಮೇಲಕ್ಕೆ ಹಾರಿ ಒಡನೆಯೇ ಯಜ್ಞೇಶ್ವರನ ಜ್ವಾಲೆಗಳಲ್ಲಿ ಸಿಕ್ಕಿ ಪರಿಭ್ರಮಣಹೊಂದಿ ಕೆಳಗೆ ಬೀಳುತ್ತಿದ್ದುವು. ರೆಕ್ಕೆ-ಪುಕ್ಕಗಳೆಲ್ಲಾ ಸುಟ್ಟುಹೋಗಿದ್ದ ಕೆಲವು ಪಕ್ಷಿಗಳು ದಾರುಣವಾದ ಯಾತನೆಯನ್ನು ಅನುಭವಿಸುತ್ತಾ ನೆಲದ ಮೇಲೆ ಬಿದ್ದು ವಿಲಿ-ವಿಲಿಗುಟ್ಟುತ್ತಾ ಕಡೆಗೆ ಪ್ರಾಣಬಿಡುತ್ತಿದ್ದುವು. ಜನಮೇಜಯ! ಇಷ್ಟು ಮಾತ್ರವಲ್ಲ. ಖಾಂಡವವನದಲ್ಲಿದ್ದ ವಾಪೀ-ಕೂಪ-ಸರೋವರಗಳೆಲ್ಲವೂ ಯಜ್ಞೇಶ್ವರನ ಜ್ವಾಲೆಗಳಿಂದ ಕಾದು-ಕುದಿದು ಇಂಗಿಹೋಗಿ, ಅವುಗಳಲ್ಲಿ ವಾಸಮಾಡುತ್ತಿದ್ದ ಮೀನು, ಆಮೆ ಮೊದಲಾದ ಜಲಚರಪ್ರಾಣಿಗಳೆಲ್ಲವೂ ಯಜ್ಞೇಶ್ವರನಿಗೆ ಆಹುತಿಯಾದುವು. ಖಾಂಡವವನದ ಒಂದೊಂದು ಪ್ರಾಣಿಯೂ ಹತ್ತಿ ಉರಿಯುತ್ತಿದ್ದುದನ್ನು ನೋಡಿದರೆ ಯಜ್ಞೇಶ್ವರನು ನಾನಾವಿಧವಾದ ರೂಪಗಳನ್ನು ಧರಿಸಿರುವನೋ-ಎಂಬಂತೆ ಕಾಣುತ್ತಿದ್ದನು. ಖಾಂಡವವನದಿಂದ ಹೊರಗೆ ಹಾರಿಹೋಗಲು ಯತ್ನಿಸಿದ ಪಕ್ಷಿಗಳು ಅರ್ಜುನನ ಬಾಣಗಳಿಗೆ ಸಿಕ್ಕಿ ತುಂಡಾಗಿ, ಯಜ್ಞೇಶ್ವರನು ಜ್ವಾಲೆಗಳ

ರೂಪದಲ್ಲಿ ಚಾಚಿದ್ದ ನಾಲಿಗೆಗಳ ಮೇಲೆ ಬೀಳುತ್ತಿದ್ದುವು. ಪಕ್ಷಿಗಳು ಕೆಳಗೆ ಬೀಳುವಾಗ ದಾರುಣವಾಗಿ ಮತ್ತು ಹೃದಯಭೇದಕವಾಗಿ ಧ್ವನಿ ಮಾಡುತ್ತಿದ್ದುವು. ಖಾಂಡವವನದ ಪ್ರಾಣಿಗಳು ಮಾಡುತ್ತಿದ್ದ ಆರ್ತನಾದಗಳು ಸಮುದ್ರಮಥನಕಾಲದಲ್ಲಿ ಉಂಟಾದ ಘೋರಶಬ್ದವನ್ನು ಸ್ಮರಣೆಗೆ ತರುವುದಾಗಿದ್ದಿತು.



ಗಗನಚುಂಬಿಗಳಾದ ಯಜ್ಞೇಶ್ವರನ ಜ್ವಾಲೆಗಳು ಸ್ವರ್ಗದ ನಿವಾಸಿಗಳಿಗೂ ಭಯದ ಉದ್ವೇಗವನ್ನುಂಟುಮಾಡಿದುವು. ಯಜ್ಞೇಶ್ವರನ ಜ್ವಾಲೆಗಳಿಂದ ಸಂತಪ್ತರಾದ ದೇವತೆಗಳು ಮಹರ್ಷಿಗಳಿಂದ ಕೂಡಿದವರಾಗಿ ದೇವಾಧಿಪತಿಯಾದ ಶತಕ್ರತುವಿನ ಬಳಿಗೆ ಹೋಗಿ, ಕೈಜೋಡಿಸಿ ಹೇಳಿದರು : "ದೇವರಾಜ! ಯಾವ ಕಾರಣದಿಂದ ಯಜ್ಞೇಶ್ವರನು ಸಮಸ್ತಪ್ರಾಣಿಗಳನ್ನೂ ದಹಿಸುತ್ತಿದ್ದಾನೆ? ಪ್ರಪಂಚದ ಅವಸಾನವೇನಾದರೂ ಸನ್ನಿಹಿತವಾಗಿದೆಯೇ?"

ಇಂದ್ರನು ದೇವತೆಗಳ ಮಾತುಗಳನ್ನು ಕೇಳಿ–ಅಗ್ನಿಯು ಮಾಡು

ತ್ತಿರುವ ದಹನಕಾರ್ಯವನ್ನು ತಾನೂ ವೀಕ್ಷಿಸಿದವನಾಗಿ, ಖಾಂಡವದಾಹವಾಗುತ್ತಿದೆಯೆಂಬುದನ್ನು ತಿಳಿದು, ವನವನ್ನು ರಕ್ಷಣೆಮಾಡಲು ಒಡನೆಯೇ ಹೊರಟನು. ವಿಧ-ವಿಧವಾದ ಆಕಾರಗಳಿಂದ ಕೂಡಿ ವಿಶಾಲವಾಗಿದ್ದ ರಥಗಳ ಸಮೂಹದಿಂದ ಕೂಡಿದವನಾಗಿ ಆಗಮಿಸಿದ ಇಂದ್ರನು ಆಕಾಶವನ್ನು ನಾನಾರೀತಿಯ ಮೋಡಗಳಿಂದ ನಿಬಿಡವನ್ನಾಗಿ ಮಾಡಿ, ಖಾಂಡವವನದ ಮೇಲೆ ಧಾರಾಕಾರವಾಗಿ ಮಳೆಗರೆಯಲು ಮೊದಲಿಟ್ಟನು. ಇಂದ್ರನ ಆಜ್ಞೆಯನ್ನನುಸರಿಸಿ ಸಾವಿರಾರು ಕಾರ್ಮುಗಿಲುಗಳು ಸತತವಾಗಿ ಮಳೆಗರೆಯಲು ಪ್ರಾರಂಭಿಸಿದುವು. ಮೋಡಗಳು ಸುರಿಸುತ್ತಿದ್ದ ಮಳೆಯ ಧಾರೆಗಳು ರಥದ ಅಚ್ಚುಗಳಷ್ಟು ದಪ್ಪವಾಗಿದ್ದುವು. ಆದರೆ ಅಂತಹ ಸತತಧಾರೆಗಳೂ ಯಜ್ಞೇಶ್ವರನ ಜ್ವಾಲೆಗಳಿಂದ ಶೋಷಿಸಲ್ಪಟ್ಟವುಗಳಾಗಿ ಯಾವ ನೀರಿನ ಧಾರೆಯೂ ಖಾಂಡವವನವನ್ನು ಸಮೀಪಿಸುವ ಸಾಧ್ಯತೆಯಿರಲಿಲ್ಲ. ಅದನ್ನು ಕಂಡು ಇಂದ್ರನು ಕುಪಿತನಾಗಿ, ಇನ್ನೂ ಹೆಚ್ಚು ಮೇಘಗಳನ್ನು ಆಮಂತ್ರಿಸಿ, ಹೆಚ್ಚಿನ ಮಳೆಗರೆಯಲು ಆಜ್ಞೆಮಾಡಿದನು. ಯಜ್ಞೇಶ್ವರನ ಜ್ವಾಲೆಗಳಿಗೆ ಸತತವಾದ ಆ ವರ್ಷಧಾರೆಯನ್ನು ಶೋಷಿಸಲು ಸಾಧ್ಯವಾಗಲಿಲ್ಲ. ಕಪ್ಪಾದ ಕಾರ್ಮುಗಿಲುಗಳು ಖಾಂಡವವನವನ್ನು ಆವರಿಸಿದುವು. ಗುಡುಗು-ಮಿಂಚುಗಳ ಆರ್ಭಟಗಳು ಬಹಳವಾಗಿದ್ದುವು. ಜ್ವಾಲೆಗಳು ಮಳೆಯ ರಭಸದಿಂದ ಶಾಂತವಾಗುತ್ತಿದ್ದಂತೆಲ್ಲಾ ಮಹತ್ತರವಾದ ಧೂಮವು ಖಾಂಡವವನವನ್ನು ಆವರಿಸಿ ಆ ದೃಶ್ಯವು ಬಹಳ ಭಯಂಕರವಾಗಿ ಕಾಣುತ್ತಿದ್ದಿತು."

೨೨೬ನೆಯ ಅಧ್ಯಾಯವು ಮುಗಿಯಿತು.

೨೨೭ನೆಯ ಅಧ್ಯಾಯ ಖಾಂಡವದಾಹಪರ್ವ (ಮುಂದುವರಿದಿದೆ.)

## ಅಶ್ವಸೇನನ ಪಲಾಯನ : ಮಗನಿಗಾಗಿ ಮಾತೆಯ ಪ್ರಾಣತ್ಯಾಗ : ದೇವತೆಗಳೊಡನೆ ಕೃಷ್ಣಾರ್ಜುನರ ಯುದ್ಧ

"ಜನಮೇಜಯ! ಕೆಲವು ನಿಮಿಷಗಳೊಳಗಾಗಿಯೇ ಪಾಂಡುಸುತನು ಅನೇಕದಿವ್ಯಾಸ್ತ್ರಗಳನ್ನು ಮಂತ್ರಪುರಸ್ಸರವಾಗಿ ಪ್ರಯೋಗಿಸಿ, ಖಾಂಡವ ವನವನ್ನು ಬಾಣವರ್ಷದಿಂದ ಮುಚ್ಚಿ ಇಂದ್ರನು ಸುರಿಸುತ್ತಿದ್ದ ಮೇಘವರ್ಷ

ವನ್ನು ತಡೆದನು. ಚಂದ್ರನು ಕಿರಣರೂಪವಾದ ಹಿಮದಿಂದ ಅರಣ್ಯವನ್ನು ಮುಚ್ಚುವಂತೆ–ಅರ್ಜುನನು ಶರಸಮೂಹದಿಂದ ಖಾಂಡವವನವನ್ನು ಮುಚ್ಚಿದನು. ಖಾಂಡವವನದ ಮೇಲೆ ಅರ್ಜುನನು ಪ್ರಯೋಗಿಸಿದ್ದ ಛತ್ರಿಯ ರೂಪದ ಶರಜಾಲದಿಂದಾಗಿ ಮೇಘವರ್ಷವು ಖಾಂಡವವನದ ಮೇಲೆ ಬೀಳದಿದ್ದುದು ಮಾತ್ರವಲ್ಲದೇ-ಖಾಂಡವವನದಿಂದ ಯಾವ ಪ್ರಾಣಿಯೂ ತಪ್ಪಿಸಿಕೊಂಡು ಹೋಗದಂತೆ ತಡೆಯೂ ಆಯಿತು. ಖಾಂಡವದಾಹ ವಾಗುತ್ತಿದ್ದಾಗ ಇಂದ್ರನ ಮಿತ್ರನಾದ ತಕ್ಷಕನು ಕುರುಕ್ಷೇತ್ರಕ್ಕೆ ತೆರಳಿದ್ದನು. ಆದರೆ ಅವನ ಸತೀ–ಸುತರು ಖಾಂಡವವನದಲ್ಲಿಯೇ ಇದ್ದರು. ತಕ್ಷಕನ ಮಗನಾದ ಅಶ್ವಸೇನನು ಖಾಂಡವವನದಿಂದ ತಪ್ಪಿಸಿಕೊಂಡು ಹೋಗಲು ಎಷ್ಟೇ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಖಾಂಡವವನದ ಸುತ್ತಲೂ ಅರ್ಜುನನ ಬಾಣಗಳ ಬಲೆಯಿರುವಾಗ ತಪ್ಪಿಸಿಕೊಂಡು ಹೋಗಲು ಹೇಗೆ ತಾನೇ ಸಾಧ್ಯವಾದೀತು? ವೀರಮಾತೆಯಾದ ಅಶ್ವಸೇನನ ತಾಯಿಯು ಮಗನನ್ನು ಹೇಗಾದರೂ ಮಾಡಿ ಪಾರುಮಾಡಿಯೇ ತೀರಬೇಕೆಂದು ನಿಶ್ಚಯಿಸಿದಳು. ಅದಕ್ಕಾಗಿ ತನ್ನ ಪ್ರಾಣಗಳನ್ನಾದರೂ ಪರಿತ್ಯಾಗಮಾಡಲು ಸಿದ್ಧಳಾದಳು. ಮಗನ ತಲೆಯನ್ನು ಮೊದಲು ನುಂಗಿದಳು. ಬಳಿಕ ಬಾಲವನ್ನೂ ನುಂಗಿದಳು. ಅರ್ಜುನನ ಬಾಣಗಳು ಬೀಳುವುದೆಂಬ ಗಾಬರಿಯಿಂದಾಗಿ ಶರೀರವನ್ನು ನುಂಗುತ್ತಲೇ ಮೇಲೆ ಹಾರಿದಳು.* ಅರ್ಜುನನು ಅದನ್ನು ಕಂಡೊಡನೆಯೇ ಬಾಣಪ್ರಯೋಗಮಾಡಿ ನಾಗಿನಿಯ ತಲೆಯನ್ನು ಹಾರಿಸಿದನು. ತಕ್ಷಕನ ಮಿತ್ರನಾದ ಇಂದ್ರನು ಅದೆಲ್ಲವನ್ನೂ ನೋಡುತ್ತಿದ್ದನು. ತಕ್ಷಕನ ಮೇಲಿನ ವಿಶ್ವಾ

---

* ಸರ್ಪವು ಕಪ್ಪೆ ಮೊದಲಾದ ಪ್ರಾಣಿಗಳನ್ನು ನುಂಗುತ್ತದೆ. ಆದರೆ ನುಂಗಿದ ಬಹಳ ಹೊತ್ತಿನವರೆಗೂ ಹೊಟ್ಟೆಯಲ್ಲಿರುವ ಪ್ರಾಣಿಗಳು ಸಾಯುವುದಿಲ್ಲ. ಸರ್ಪವು ಯಾವುದಾದರೂ ಮರವನ್ನು ಬಿಗಿಯಾಗಿ ಸುತ್ತಿಕೊಂಡು ಹೊಟ್ಟೆಯೊಳಗಿರುವ ಪ್ರಾಣಿಯು ಸಾಯುವಂತೆ ಮಾಡಿ ಅನಂತರ ತಾನು ತಿಂದ ಪ್ರಾಣಿಯನ್ನು ಜೀರ್ಣಮಾಡಿಕೊಳ್ಳುವುದೆಂದು ಪ್ರಾಣಿಶಾಸ್ತ್ರಜ್ಞರು ಹೇಳುತ್ತಾರೆ. ಇಲ್ಲಿ ನಾಗಿನಿಯೂ ಅಶ್ವಸೇನನನ್ನು ತಲೆಯಿಂದ ನುಂಗಿದ್ದಳು. ಮೇಲೆ ಹಾರುವಾಗ ನಾಗಿನಿಯ ಬಾಲದ ತುದಿಯಲ್ಲಿ ಅಶ್ವಸೇನನ ತಲೆಯಿದ್ದಿತು. ಆದುದರಿಂದ ನಾಗಿನಿಯ ತಲೆಯನ್ನು ಕತ್ತರಿಸಿದರೂ ಅಶ್ವಸೇನನು ಜೀವಂತನಾಗಿ ಉಳಿದು ವಿಮುಕ್ತನಾದನು. ಮಗನಿಗಾಗಿ ಮಹಾಮಾತೆಯು ಪ್ರಾಣತೆತ್ತಳು.

ಸವೇ ಇಂದ್ರನು ಖಾಂಡವವನದ ರಕ್ಷಣೆಗೆ ಬರಲು ಮುಖ್ಯಕಾರಣವಾಗಿದ್ದಿತು. ಹೇಗಾದರೂ ಮಾಡಿ ತನ್ನ ಮಿತ್ರನ ಮಗನನ್ನು ಉಳಿಸಬೇಕೆಂದು ನಿಶ್ಚಯಿಸಿ ನಾಗಿನಿಯ ತಲೆಯು ಕೆಳಗೆ ಬಿದ್ದೊಡನೆಯೇ ಘೋರವಾದ ಚಂಡಮಾರುತವನ್ನು ಪ್ರಯೋಗಿಸಿದನು. ಪ್ರಪಂಚವನ್ನೇ ನಡುಗಿಸಲು ಸಮರ್ಥವಾಗಿದ್ದ ಆ ಬಿರುಗಾಳಿಯು ಅರ್ಜುನನನ್ನು ಕೆಲವು ಕ್ಷಣಗಳವರೆಗೆ ಪ್ರಜ್ಞಾಹೀನನನ್ನಾಗಿ ಮಾಡಿತು. (ಭ್ರಾಂತಿಗೊಳಿಸಿತು.) ಅಷ್ಟರೊಳಗಾಗಿಯೇ ಅಶ್ವಸೇನನು ತಪ್ಪಿಸಿಕೊಂಡುಬಿಟ್ಟನು. ಚಂಡಮಾರುತವೂ ಅವನಿಗೆ ಸಹಕಾರಿಯಾಯಿತು. ನಾಗಿನಿಯ ತಲೆಯನ್ನು ಕತ್ತರಿಸಿದರೂ ಕೆಳಗೆ ಬೀಳದೇ ಓಡಿಹೋಗಿ ತಪ್ಪಿಸಿಕೊಂಡ ಅಶ್ವಸೇನನ ವಿಷಯವಾಗಿ ಅರ್ಜುನನಿಗೆ ಬಹಳ ಕೋಪವುಂಟಾಯಿತು. ಕೃಷ್ಣ-ಪಾರ್ಥರೂ, ಯಜ್ಞೇಶ್ವರನೂ ಒಮ್ಮೆ ಹಲ್ಲು ಕಡಿದು, ಮೋಸದಿಂದ ತಪ್ಪಿಸಿಕೊಂಡು ಹೋದ ಅಶ್ವಸೇನನನ್ನು ಆಶ್ರಯಹೀನನಾಗುವಂತೆ ಶಪಿಸಿದರು. ಆ ಘಟನೆಯು ನಡೆದನಂತರದಲ್ಲಿ ಅರ್ಜುನನು, ಪ್ರಾಣಗಳನ್ನುಳಿಸಿಕೊಳ್ಳಲು ಮೇಲೆ ಹಾರುತ್ತಿದ್ದ ಪ್ರತಿಯೊಂದು ಪ್ರಾಣಿಯನ್ನೂ ಮೂರು ನಾಲ್ಕು ಭಾಗಗಳನ್ನಾಗಿ ತುಂಡರಿಸುತ್ತಿದ್ದನು.

ಇಂದ್ರನು ಮಾಡಿದ ಕೃತ್ರಿಮದಿಂದ ಜಿಷ್ಣುವಿಗೆ ಮಹಾಕೋಪವುಂಟಾಗಿ, ನಾಲ್ಕು ದಿಕ್ಕುಗಳನ್ನೂ ಬಾಣಗಳಿಂದ ತುಂಬುತ್ತಾ ದೇವೇಂದ್ರನೊಡನೆಯೇ ಯುದ್ಧಮಾಡಲು ಸನ್ನದ್ಧನಾದನು. ಮಾನವನು ಯುದ್ಧಕ್ಕೆ ಸಿದ್ಧನಾದರೆ ದೇವಾಧಿಪತಿಯು ಸುಮ್ಮನಿರಲು ಸಾಧ್ಯವಾದೀತೇ? ಇಂದ್ರನೂ ಯುದ್ಧಕ್ಕೆ ಸಜ್ಜಾಗಿ ನಿಂತು, ತನ್ನ ಆಯುಧಗಳನ್ನು ಒಂದಾದ ಮೇಲೊಂದರಂತೆ ಪ್ರಯೋಗಿಸಲು ಪ್ರಾರಂಭಿಸಿದನು. ಸಮುದ್ರವನ್ನೂ ಅಲ್ಲೋಲ-ಕಲ್ಲೋಲಮಾಡುವ ಸಾಮರ್ಥ್ಯವಿದ್ದ ಚಂಡಮಾರುತವು ಮಹಾಶಬ್ದದೊಡನೆ ಕಾರ್ಮುಗಿಲುಗಳನ್ನು ಹೊತ್ತು ತಂದಿತು. ಪುನಃ ಧಾರಾಕಾರವಾಗಿ ಮಳೆ ಸುರಿಯಲು ಪ್ರಾರಂಭವಾಯಿತು. ಗುಡುಗು- ಮಿಂಚು- ಸಿಡಿಲುಗಳೂ ಪ್ರಾರಂಭವಾದುವು. ಅರ್ಜುನನು ಮಂತ್ರಪುನಶ್ಚರಣೆಮಾಡಿ ವಾಯವ್ಯಾಸ್ತ್ರವನ್ನು ಪ್ರಯೋಗಿಸಿದೊಡನೆಯೇ ಆಕಾಶವು ನಿರ್ಮಲವಾಯಿತು. ಕಾರ್ಮುಗಿಲಿನ ಲೇಶವೂ ಇಲ್ಲವಾಯಿತು. ಸೂರ್ಯನು ಯಥಾಪೂರ್ವವಾಗಿ ಪ್ರಕಾಶಿಸತೊಡಗಿದನು. ಅಗ್ನಿದೇವನು ನಿರಪಾಯನಾಗಿ ಪ್ರಾಣಿಗಳ

ಮೇದಸ್ಸುಗಳನ್ನು ಸವಿಯುತ್ತಾ ಸಂತೋಷಚಿತ್ತನಾಗಿ ಸಾವಿರಾರು ಜ್ವಾಲೆಗಳಿಂದ ಧಗಧಗನೆ ಉರಿಯತೊಡಗಿದನು.

ಖಾಂಡವವನದ ದಾಹಕ್ಕೆ ಸಹಕಾರವನ್ನೀಯುತ್ತಾ ನಿಂತಿದ್ದ ಕೃಷ್ಣಾರ್ಜುನರನ್ನು ಕಂಡು ಗರುಡನ ಜಾತಿಗೆ ಸೇರಿದ ಪಕ್ಷಿಗಳು ಕೋಪಗೊಂಡು ವಿಸ್ತಾರವಾಗಿದ್ದ ತಮ್ಮ ರೆಕ್ಕೆಗಳಿಂದಲೂ, ಕಾಲುಗುರುಗಳಿಂದಲೂ, ಕೊಕ್ಕುಗಳಿಂದಲೂ ಕೃಷ್ಣಾರ್ಜುನರನ್ನು ಅಪ್ಪಳಿಸುವ ಸಲುವಾಗಿ ಆಕಾಶದ ಕಡೆಯಿಂದ ರಭಸವಾಗಿ ಅವರೆಡೆಗೆ ಧಾವಿಸುತ್ತಿದ್ದುವು. ಗರುಡನ ವೈರಿಗಳಾದ ಸರ್ಪಗಳೂ ತತ್ಕಾಲದಲ್ಲಿ ತಮ್ಮಿಬ್ಬರಿಗೂ ಏಕಮಾತ್ರ ವೈರಿಯಾಗಿದ್ದ ಅರ್ಜುನನನ್ನು ಕೊನೆಗಾಣಿಸಲು ಮುಖಗಳಿಂದ ಕೆಂಡವನ್ನೂ, ವಿಷವನ್ನೂ ಕಾರುತ್ತಾ ರಭಸದಿಂದ ಅರ್ಜುನನ ಮೇಲೆ ನುಗ್ಗಿಬಂದುವು. ಅರ್ಜುನನೂ ಕೋಪವೆಂಬ ಅಗ್ನಿಯಲ್ಲಿ ಶರಗಳನ್ನು ಕಾಯಿಸಿ ಎದುರಾಳಿಗಳ ಮೇಲೆ ಪ್ರಯೋಗಿಸಿ ಅಖಂಡಪಕ್ಷಿಸಮೂಹವನ್ನೂ–ನಾಗಸಮೂಹವನ್ನೂ ಛಿದ್ರೀಕರಿಸಿದನು. ತುಂಡು-ತುಂಡಾಗಿ ಬಿದ್ದ ಪಕ್ಷಿಗಳೂ, ನಾಗಗಳೂ ಅಗ್ನಿಗೆ ಉತ್ತಮವಾದ ಭಕ್ಷ್ಯ-ಭೋಜ್ಯಗಳಾದುವು.

ಅರ್ಜುನನೊಡನೆ ಯುದ್ಧಮಾಡುವ ಸಲುವಾಗಿ ಅಸುರರೂ, ಗಂಧರ್ವರೂ, ಯಕ್ಷ-ರಾಕ್ಷಸರೂ ಘೋರಗರ್ಜನೆಗಳನ್ನು ಮಾಡುತ್ತಾ ಧಾವಿಸಿ ಬಂದರು. ಅವರೆಲ್ಲರೂ ಕೋಪಾಧಿಕ್ಯದಿಂದ ಹೆಚ್ಚು ಬಲವುಳ್ಳವರಾಗಿದ್ದರು. ಕೆಲವರು ತಮ್ಮ ಬಾಯ್ಗಳಿಂದಲೇ ಕಬ್ಬಿಣದ ಗುಂಡುಗಳನ್ನು ಅರ್ಜುನನ ಮೇಲೆ ಸುರಿಸುತ್ತಿದ್ದರು. ಕೆಲವರು ಬಹುದೂರದಲ್ಲಿಯೇ ನಿಂತು ಯಂತ್ರಗಳ ಸಹಾಯದಿಂದ ಕಲ್ಲಿನ ಮಳೆಗರೆಯುತ್ತಿದ್ದರು. ಭುಷುಂಡಿ ಎಂಬ ಚರ್ಮರಜ್ಜುಮಯವಾದ ಯಂತ್ರದಿಂದ ಅತಿಭಯಂಕರವಾದ ಅನೇಕವಿಧವಾದ ಆಯುಧಗಳನ್ನೂ ಪ್ರಯೋಗಿಸುತ್ತಿದ್ದರು. ಒಂದೇ ಕಾಲದಲ್ಲಿ ನಾಲ್ಕು ದಿಕ್ಕುಗಳಿಂದಲೂ ಆಕ್ರಮಿಸಿ ಶರಾಶ್ಮವರ್ಷಗಳನ್ನು ಸುರಿಸುತ್ತಿದ್ದರು. ಪರಾಕ್ರಮಿಯಾದ ಅರ್ಜುನನು ಅವರೆಲ್ಲರ ತಲೆಗಳನ್ನೂ ಕ್ಷಣಮಾತ್ರದಲ್ಲಿ ಕೆಳಗುರುಳಿಸಿದನು. ಕೃಷ್ಣನೂ ಕೂಡ ತನ್ನ ಚಕ್ರದಿಂದಲೂ, ಶರಗಳಿಂದಲೂ ದೈತ್ಯ-ದಾನವಸಮೂಹವನ್ನು ವಿನಾಶಗೊಳಿಸಿದನು. ಪ್ರವಾಹಕಾಲದಲ್ಲಿ ರಭಸದಿಂದ ಕೂಡಿದ ಅಲೆಗಳಿಂದ

ತರಲ್ಪಡುವ ತೃಣ-ಕಾಷ್ಠಾದಿಗಳು ದಡಕ್ಕೆ ಬಂದೊಡನೆಯೇ ನಿಂತುಬಿಡುವಂತೆ–ಕ್ರೋಧವೆಂಬ ಅಲೆಯಿಂದ ಬಂದ ದೈತ್ಯ-ದಾನವರೆಲ್ಲರೂ ಕೃಷ್ಣಾರ್ಜುನರೆಂಬ ದಡಗಳ ಸಮೀಪಕ್ಕೆ ಬಂದೊಡನೆಯೇ ನಿಶ್ಚಲರಾಗಿಬಿಡುತ್ತಿದ್ದರು.

ಕೃಷ್ಣಾರ್ಜುನರ ಅಂತಹ ಅತ್ಯದ್ಭುತವಾದ ಪರಾಕ್ರಮವನ್ನು ಕಂಡು ಇಂದ್ರನು ಕುಪಿತನಾಗಿ ಐರಾವತವನ್ನೇರಿ ಅರ್ಜುನನಿಗೆದುರಾಗಿ ಬಂದು ವಜ್ರಾಯುಧವನ್ನು ಮೇಲೆತ್ತಿ 'ಹತಾವೇತೌ' 'ಇವರಿಬ್ಬರೂ ಸತ್ತರು!' ಎಂದು ಗರ್ಜನೆಮಾಡಿದನು.

ಇಂದ್ರನು ವಜ್ರಾಯುಧವನ್ನು ಎತ್ತಿ ನಿಂತೊಡನೆಯೇ ಯಮನು ಕಾಲದಂಡವನ್ನೂ, ಕುಬೇರನು ಗದೆಯನ್ನೂ, ವರುಣನು ಪಾಶಾಶನಿಗಳನ್ನೂ, ಸ್ಕಂದನು ಶಕ್ತ್ಯಾಯುಧವನ್ನೂ, ಅಶ್ವಿನೀದೇವತೆಗಳು ಓಷಧಿಲತೆಗಳನ್ನೂ, ಧಾತೃವು ಧನುಸ್ಸನ್ನೂ, ಜಯನು ಮುಸಲವನ್ನೂ, ತ್ವಷ್ಟೃವು ಪರ್ವತವನ್ನೂ, ಅಂಶನು ಶಕ್ತ್ಯಾಯುಧವನ್ನೂ, ಮೃತ್ಯುದೇವನು ಪರಶ್ವಧವೆಂಬ ಆಯುಧವಿಶೇಷವನ್ನೂ, ಅರ್ಯಮನು ಪರಿಘವನ್ನೂ, ಮಿತ್ರನು ಕತ್ತಿಯಂತೆ ಚೂಪಾದ ಅಲಗುಳ್ಳ ಚಕ್ರವನ್ನೂ, ಪೂಷ-ಭಗ-ಸವಿತೃಗಳು ಭಯಂಕರವಾದ ಧನುರ್ಬಾಣ-ಖಡ್ಗಗಳನ್ನೂ ಹಿಡಿದು ಕೃಷ್ಣಾರ್ಜುನರಿಗೆದುರಾಗಿ ನಿಂತರು. ಅವರನ್ನೇ ಹಿಂಬಾಲಿಸಿ ಏಕಾದಶರುದ್ರರೂ, ಅಷ್ಟವಸುಗಳೂ, ಸಪ್ತಮರುತ್ತುಗಳೂ, ವಿಶ್ವೇದೇವತೆಗಳೂ, ಸಾಧ್ಯರೂ ತಮ್ಮ-ತಮ್ಮ ಆಯುಧಗಳನ್ನು ಮೇಲೆತ್ತಿ ಕೋಪದಿಂದ ಹೂಂಕರಿಸುತ್ತಾ ಅರ್ಜುನನನ್ನು ಸುತ್ತುವರಿದರು.

ಅವರೆಲ್ಲರ ಮುಖ್ಯವಾದ ಉದ್ದೇಶವು ಕೃಷ್ಣಾರ್ಜುನರ ವಧೆಯೇ ಆಗಿದ್ದಿತು. ಮಹಾಯುದ್ಧವು ಸಂಭವಿಸುವ ಕಾಲದಲ್ಲಿ ತೋರುವ ಮಹೋತ್ಪಾತಗಳು ಗೋಚರವಾಗತೊಡಗಿದುವು. ಪ್ರಾಣಿಗಳೆಲ್ಲವೂ ಪ್ರಜ್ಞಾಹೀನವಾದುವು. ಜನಮೇಜಯ! ಹೆಚ್ಚೇನು ಹೇಳಲಿ? ಪ್ರಳಯವಾಗುವ ಮೊದಲು ಉಂಟಾಗುವ ಭಯಂಕರವಾತಾವರಣವು ಅಂದು ಆ ಖಾಂಡವವನದ ಸಮೀಪದಲ್ಲಿ ಕಾಣುತ್ತಿದ್ದಿತು.

ಭಯವೆಂಬುದನ್ನೇ ಅರಿಯದ ಕೃಷ್ಣಾರ್ಜುನರು ಸಮುದ್ರದ ಅಲೆ

ಗಳಂತೆ ದೇವಸೈನ್ಯವು ಮುನ್ನುಗ್ಗುತ್ತಿದ್ದರೂ ಧನುರ್ಬಾಣಗಳನ್ನು ಹಿಡಿದು ತಾಳ್ಮೆಯಿಂದಲೇ ಸಜ್ಜಾಗಿ ನಿಂತಿದ್ದರು. ದೇವತೆಗಳಿಗೂ-ಕೃಷ್ಣಾರ್ಜುನರಿಗೂ ಯುದ್ಧವು ಪ್ರಾರಂಭವಾಯಿತು. ದೇವತೆಗಳು ಕೃಷ್ಣಾರ್ಜುನರ ಬಾಣವರ್ಷಗಳಿಗೆ ಎದುರಾಗಿ ನಿಲ್ಲಲಾರದೇ–ನಾಲ್ಕಾರು ಬಾರಿ ಮುನ್ನುಗ್ಗಿ ಹೋದರೂ ಕೃತಕೃತ್ಯರಾಗದೇ, ಕಟ್ಟಕಡೆಗೆ ಇಂದ್ರನ ರಕ್ಷಣೆಯನ್ನೇ ಪಡೆಯಬೇಕಾಯಿತು. ಮಹಾಸಮರವನ್ನು ನೋಡುತ್ತಿದ್ದ ಇಂದ್ರನಾದರೋ ಕೃಷ್ಣಾರ್ಜುನರ ಪರಾಕ್ರಮವನ್ನು ಕಂಡು ಸುಪ್ರೀತನಾಗಿ ಅರ್ಜುನನ ಪರಾಕ್ರಮವನ್ನು ಇನ್ನೂ ಪರೀಕ್ಷಿಸಬೇಕೆನ್ನುವ ಕುತೂಹಲದಿಂದ ಅಗಾಧವಾದ ಅಶ್ಮವರ್ಷವನ್ನು ಸುರಿಸಿದನು. ಅರ್ಜುನನು ನಿಮಿಷಮಾತ್ರದಲ್ಲಿ ತನ್ನ ಬಾಣಪ್ರಯೋಗಕೌಶಲದಿಂದ ಅಶ್ಮವರ್ಷವನ್ನು ನಿವಾರಿಸಿದನು. ಪುನಃ-ಪುನಃ ಸುರಿಸಿದ ಅಶ್ಮವರ್ಷಗಳಿಂದಲೂ ಪ್ರಯೋಜನವಾಗದಿದ್ದುದನ್ನು ಕಂಡು ಇಂದ್ರನು ಅರ್ಜುನನನ್ನು ಹೇಗಾದರೂ ಮಾಡಿ ಪರಾಭವಗೊಳಿಸಿಯೇ ತೀರಬೇಕೆಂಬ ನಿಶ್ಚಯದಿಂದ ಮಂದರಪರ್ವತದ ಶಿಖರವನ್ನು ಕಿತ್ತು ಅರ್ಜುನನ ಮೇಲೆ ಪ್ರಯೋಗಿಸಿದನು. ಅರ್ಜುನನು ತನ್ನೆದುರಾಗಿ ಬಿರುಸಿನಿಂದ ಬರುತ್ತಿದ್ದ ಪರ್ವತಶಿಖರವನ್ನು ಕ್ಷಣಮಾತ್ರದಲ್ಲಿ ತೀಕ್ಷ್ಣವಾದ ಬಾಣಗಳಿಂದ ಸಾವಿರಾರು ಚೂರುಗಳನ್ನಾಗಿ ಮಾಡಿಬಿಟ್ಟನು. ಆ ಶಿಖರದ ತುಂಡುಗಳು ಕೆಳಗೆ ಬೀಳುವಾಗ ಆಕಾಶವೇ ಚೂರುಚೂರಾಗಿ ಸೂರ್ಯ-ಚಂದ್ರ-ನಕ್ಷತ್ರಸಹಿತವಾಗಿ ಭೂಮಿಯ ಮೇಲೆ ಬೀಳುತ್ತಿರುವುದೋ ಎಂಬ ಭ್ರಾಂತಿಯನ್ನುಂಟುಮಾಡುತ್ತಿದ್ದುವು. ಆ ಪರ್ವತಶಿಖರದ ತುಂಡುಗಳು ಖಾಂಡವವನದ ಸುತ್ತಲೂ ಬಿದ್ದು ಸಾವಿರಾರು ಪ್ರಾಣಿಗಳನ್ನು ವಿನಾಶಗೊಳಿಸಿ ಅರ್ಜುನನ ಕಾರ್ಯಕ್ಕೆ ಸಹಕಾರವನ್ನೇ ನೀಡಿದುವು.”

ಎಂಬ೨೭ನೆಯ ಅಧ್ಯಾಯವು ಮುಗಿಯಿತು.

## ದೇವತೆಗಳ ಪರಾಜಯ : ಖಾಂಡವವನವಿನಾಶ : ಮಯಾಸುರನ ರಕ್ಷಣೆ

"ಮಹಾರಾಜ! ಪರ್ವತಶಿಖರದ ಆಘಾತಕ್ಕೆ ಸಿಕ್ಕದೇ ಅಳಿದುಳಿದ ದಾನವ-ರಾಕ್ಷಸರೂ, ನಾಗಗಳೂ, ಆನೆಗಳೂ, ಸಿಂಹ-ಶಾರ್ದೂಲಗಳೂ, ತೋಳಗಳೂ, ಕರಡಿಗಳೂ, ಅನೇಕಜಾತಿಯ ಪಕ್ಷಿಗಳೂ-ಮೇಲಿಂದ ಬೀಳುತ್ತಿದ್ದ ಪಾಷಾಣವರ್ಷದಿಂದಲೂ ಅಗ್ನಿದೇವನ ಜ್ವಾಲೆಗಳಿಂದಲೂ ತಪ್ಪಿಸಿಕೊಳ್ಳಲು ಖಾಂಡವವನದ ಸುತ್ತಲೂ ಓಡಲಾರಂಭಿಸಿದುವು. ಆದರೆ ಅಗ್ನಿಯ ಜ್ವಾಲೆಗಳನ್ನೂ ಕೃಷ್ಣಾರ್ಜುನರನ್ನೂ ನೋಡಿ, ಅವರ ಧನುಷ್ಟೇಂಕಾರಗಳನ್ನೂ ಕೇಳಿದೊಡನೆಯೇ ಅವುಗಳಿಗೆ ಗಮನಶಕ್ತಿಯೇ ಉಡುಗಿಹೋಗಿ ಭಯದಿಂದ ಗಟ್ಟಿಯಾಗಿ ಆರ್ತನಾದಗಳನ್ನು ಮಾಡುತ್ತಿದ್ದುವು. ಅವುಗಳ ಆರ್ತನಾದಗಳು ಯಜ್ಞೇಶ್ವರನ ಛಟಾ-ಘಟಾಶಬ್ದಗಳೊಡನೆ ಸೇರಿ ಮೇಘನಾದಗಳಂತೆ ಕೇಳುತ್ತಿದ್ದುವು. ಅನಂತರದಲ್ಲಿ ಮಹಾಬಾಹುವಾದ ಶ್ರೀಕೃಷ್ಣನು ಅದ್ಭುತವಾದ ತೇಜಸ್ಸಿನಿಂದ ಕೂಡಿ ಪ್ರಕಾಶಮಾನವಾಗಿದ್ದ ಉಗ್ರವಾದ ಮಹಾಚಕ್ರವನ್ನು ಸರ್ವಪ್ರಾಣಿಗಳ ವಿನಾಶಾರ್ಥವಾಗಿ ವೇಗವಾಗಿ ತಿರುಗಿಸಿ ರಭಸದಿಂದ ಪ್ರಯೋಗಿಸಿದನು.

ಶ್ರೀಕೃಷ್ಣನು ತನ್ನ ಕೈಯ್ಯಲ್ಲಿದ್ದ ಚಕ್ರವನ್ನು ಬಿಟ್ಟೊಡನೆಯೇ ಚಕ್ರಾಘಾತದಿಂದ ಪೀಡಿತರಾದ, ಕ್ಷುದ್ರರಾದ ಅನೇಕಾನೇಕ ದಾನವ-ನಿಶಾಚರರೂ, ಪ್ರಾಣಿಗಳೂ ನೂರಾರು ಚೂರುಗಳಾಗಿ ಕತ್ತರಿಸಲ್ಪಟ್ಟು ಯಜ್ಞೇಶ್ವರನಿಗೆ ಆಹುತಿಯಾಗುತ್ತಿದ್ದರು. ಶ್ರೀಕೃಷ್ಣನ ಚಕ್ರಕ್ಕೆ ಸಿಕ್ಕಿದ ದಾನವ-ರಾಕ್ಷಸರು ರಕ್ತದಿಂದ ತೋಯ್ದ ಶರೀರಗಳುಳ್ಳವರಾಗಿ- ಸಾಯಂಕಾಲದ ಸೂರ್ಯನ ಪ್ರಭೆಯಿಂದ ಪ್ರಕಾಶಿಸುವ ಕಪ್ಪಾದ ಮೋಡಗಳಂತೆ ಕಾಣುತ್ತಿದ್ದರು.

ತನ್ನ ಚಕ್ರಾಯುಧದ ಸತತವಾದ ಪ್ರಯೋಗದಿಂದ ಸಾವಿರಾರು ಪಿಶಾಚರನ್ನೂ, ಪಕ್ಷಿಗಳನ್ನೂ, ಹಾವುಗಳನ್ನೂ, ಪಶುಗಳನ್ನೂ ಕತ್ತರಿಸುತ್ತಾ ಖಾಂಡವವನದ ಸುತ್ತಲೂ ತಿರುಗುತ್ತಿದ್ದ ಶ್ರೀಕೃಷ್ಣನು ಸಾಕ್ಷಾತ್ ಕಾಲಪುರುಷನಂತೆಯೇ ಪ್ರಕಾಶಿಸಿದನು.

ಯಜ್ಞೇಶ್ವರನು ಚಕ್ರವನ್ನು ಶ್ರೀಕೃಷ್ಣನಿಗೆ ಕೊಡುವಾಗ ಹೇಳಿದ್ದಂತೆಯೇ ಆ ಮಹಾಚಕ್ರವು :

**ಕ್ಷಿಪ್ತಂ ಕ್ಷಿಪ್ತಂ ಪುನಶ್ಚಕ್ರಂ ಕೃಷ್ಣಸ್ಯಾಮಿತ್ರಘಾತಿನಃ ।**
**ಭಿತ್ವಾನೇಕಾನಿ ಸತ್ವಾನಿ ಪಾಣಿಮೇತಿ ಪುನಃ ಪುನಃ ॥೧೦॥**

ಪದೇ-ಪದೇ ಶ್ರೀಕೃಷ್ಣನಿಂದ ಪ್ರಮುಕ್ತವಾಗಿ ಕ್ಷಣಮಾತ್ರದಲ್ಲಿ ಅನೇಕ ಪ್ರಾಣಿಗಳನ್ನು ಸಂಹಾರಮಾಡಿದ ಬಳಿಕ ಶತ್ರುಹಂತಕನಾದ ಶ್ರೀಕೃಷ್ಣನ ಕೈಯನ್ನೇ ಆ ಚಕ್ರವು ಪುನಃ ಅಲಂಕರಿಸುತ್ತಿದ್ದಿತು. ಪಿಶಾಚರನ್ನೂ, ಸರ್ಪಗಳನ್ನೂ, ರಾಕ್ಷಸರನ್ನೂ ಅಸಂಖ್ಯಸಂಖ್ಯೆಯಲ್ಲಿ ಸಂಹಾರಮಾಡುತ್ತಿದ್ದ ಆ ಸಮಯದಲ್ಲಿ, ಜಗತ್ತಿಗೇ ಆಹ್ಲಾದವನ್ನುಂಟುಮಾಡುವುದಾಗಿದ್ದ ಶ್ರೀಕೃಷ್ಣನ ಸುಂದರಮುಖಾರವಿಂದವು ನೋಡಲು ಅತಿಭಯಂಕರವಾಗಿ ಕಾಣುತ್ತಿದ್ದಿತು. ಕೃಷ್ಣಾರ್ಜುನರನ್ನು ಪರಾಭವಗೊಳಿಸಲು ದೇವತೆಗಳಲ್ಲಿ ಯಾರಿಗೂ ಸಾಧ್ಯವಾಗಲಿಲ್ಲ. ಕೃಷ್ಣಾರ್ಜುನರ ಸಹಕಾರದಿಂದ ವಿನಾಶವಾಗುತ್ತಿರುವ ಖಾಂಡವವನವನ್ನು ರಕ್ಷಿಸಲು ತಮಗೆ ಸಾಧ್ಯವಿಲ್ಲವೆಂದು ನಿಶ್ಚಯಿಸಿದ ದೇವತೆಗಳೆಲ್ಲರೂ ಪರಾಙ್ಮುಖರಾದರು. ದೇವತೆಗಳು ಹಿಂದಿರುಗುತ್ತಿರುವುದನ್ನು ಕಂಡು ಶತಕ್ರತುವು ಅವರಿಬ್ಬರ ಪರಾಕ್ರಮವನ್ನು ಬಹುವಾಗಿ ಶ್ಲಾಘಿಸಿದನು. ಆ ಸಮಯಕ್ಕೆ ಸರಿಯಾಗಿ ಅಶರೀರವಾಣಿಯು ಇಂದ್ರನನ್ನು ಕುರಿತು ಗಂಭೀರವಾದ ಧ್ವನಿಯಲ್ಲಿ ಹೀಗೆಂದು ಹೇಳಿತು :

**ನ ತೇ ಸಖಾ ಸಂನಿಹಿತಸ್ತಕ್ಷಕೋ ಭುಜಗೋತ್ತಮಃ ।**
**ದಾಹಕಾಲೇ ಖಾಣ್ಡವಸ್ಯ ಕುರುಕ್ಷೇತ್ರಂ ಗತೋ ಹ್ಯಸೌ ॥೧೬॥**

**ನ ಚ ಶಕ್ಯೌ ಯುಧಾ ಜೇತುಂ ಕಥಂಚಿದಪಿ ವಾಸವ ।**
**ವಾಸುದೇವಾರ್ಜುನಾವೇತೌ ನಿಬೋಧ ವಚನಾನ್ಮಮ ॥೧೭॥**

**ನರನಾರಾಯಣಾವೇತೌ ಪೂರ್ವದೇವೌ ದಿವಿ ಶ್ರುತೌ ।**
**ಭವಾನಪ್ಯಭಿಜಾನಾತಿ ಯದ್ವೀರ್ಯೌ ಯತ್ಪರಾಕ್ರಮೌ ॥೧೮॥**

**ನೈತೌ ಶಕ್ಯೌ ದುರಾಧರ್ಷೌ ವಿಜೇತುಮಜಿತೌ ಯುಧಿ ।**
**ಅಪಿ ಸರ್ವೇಷು ಲೋಕೇಷು ಪುರಾಣಾವೃಷಿಸತ್ತಮೌ ॥೧೯॥**

**ಪೂಜನೀಯತಮಾವೇತಾವಪಿ ಸರ್ವೈಃ ಸುರಾಸುರೈಃ ।**
**ಯಕ್ಷರಾಕ್ಷಸಗನ್ಧರ್ವನರಕಿನ್ನರಪನ್ನಗೈಃ ॥೨೦॥**

**ತಸ್ಮಾದಿತಃ ಸುರೈಃ ಸಾರ್ಧಂ ಗನ್ತುಮರ್ಹಸಿ ವಾಸವ ।**
**ದಿಷ್ಟಂ ಚಾಪ್ಯನುಪಶ್ಯೈತತ್ಖಾಣ್ಡವಸ್ಯ ವಿನಾಶನಮ್ ॥೨೧॥**

"ವಾಸವ! ನಿನ್ನ ಮಿತ್ರನಾದ ತಕ್ಷಕನ ವಿಷಯವಾಗಿ ನೀನು ಚಿಂತೆಪಡುವ ಕಾರಣವಿಲ್ಲ. ಖಾಂಡವದಾಹದಲ್ಲಿ ಅವನು ಅವಸಾನಹೊಂದಿರುವುದಿಲ್ಲ. ಖಾಂಡವದಾಹವು ಆರಂಭವಾಗುವ ಮೊದಲೇ ತಕ್ಷಕನು ಕುರುಕ್ಷೇತ್ರಕ್ಕೆ ಹೊರಟುಹೋಗಿದ್ದಾನೆ. ನನ್ನ ಮಾತನ್ನು ಕೇಳು. ಕೃಷ್ಣಾರ್ಜುನರು ಯುದ್ಧದಲ್ಲಿ ಯಾರಿಂದಲೂ ಪರಾಜಿತರಾಗುವವರಲ್ಲ. ಹಿಂದೆ ದೇವತೆಗಳಾಗಿದ್ದು ಸ್ವರ್ಗದಲ್ಲಿ ವಿಖ್ಯಾತರಾಗಿದ್ದ, ನರ-ನಾರಾಯಣನಾಮಕರಾದ ಇವರೇ ಇಂದು ಅರ್ಜುನ-ಕೃಷ್ಣರಾಗಿ ಅವತರಿಸಿರುವರು. ಇವರ ವೀರ್ಯ-ಪರಾಕ್ರಮ ಗಳೆಷ್ಟೆಂಬುದನ್ನು ನೀನೇ ಪ್ರತ್ಯಕ್ಷವಾಗಿ ನೋಡಿದೆಯಲ್ಲವೇ? ಪುರಾತನ ಮಹರ್ಷಿಗಳಾದ ಇವರನ್ನು ಪರಾಜಯಗೊಳಿಸಲು ತ್ರಿಭುವನಗಳಲ್ಲಿಯೇ ಯಾರಿಂದಲೂ ಸಾಧ್ಯವಾಗಲಾರದು. ಇವರು ಸುರಾಸುರರಿಂದಲೂ ಯಕ್ಷ-ರಾಕ್ಷಸ-ಗಂಧರ್ವ-ನರ-ಕಿನ್ನರ-ಸರ್ಪಗಳಿಂದಲೂ ಪೂಜಾರ್ಹರಾಗಿ ರುತ್ತಾರೆ. ಈ ಕಾರಣದಿಂದ ನೀನು ಇವರೊಡನೆ ಯುದ್ಧವನ್ನು ಪರಿತ್ಯಜಿಸಿ ದೇವತೆಗಳೊಡನೆ ಹಿಂದಿರುಗುವುದೇ ಯೋಗ್ಯವಾಗಿದೆ. ಮೇಲಾಗಿ ಖಾಂಡವವನದ ವಿನಾಶವು ವಿಧಿಯಿಂದಲೇ ನಿಯತವಾಗಿದೆ. ಇದನ್ನೂ ಮನಗಂಡು ಸ್ವರ್ಗಕ್ಕೆ ಹಿಂದಿರುಗು."

ತಕ್ಷಕನ ರಕ್ಷಣೆಯೇ ಇಂದ್ರನ ಮುಖ್ಯೋದ್ದೇಶವಾಗಿತ್ತಲ್ಲವೇ?

ಅಶರೀರವಾಣಿಯ ಮಾತುಗಳನ್ನು ಕೇಳಿ ಅದನ್ನು ಸತ್ಯವಾಣಿಯೆಂದೇ ನಿಶ್ಚಯಿಸಿ, ಕ್ರೋಧ-ಮಾತ್ಸರ್ಯಗಳನ್ನು ಪರಿತ್ಯಜಿಸಿ ಪರಿವಾರಸಮೇತನಾಗಿ ಇಂದ್ರನು ಸ್ವರ್ಗಕ್ಕೆ ಹಿಂದಿರುಗಿದನು.

ಮಹಾತ್ಮನಾದ ಮತ್ತು ತಮ್ಮ ಒಡೆಯನಾದ ಇಂದ್ರನೇ ಪರಾಙ್ಮುಖನಾಗುತ್ತಿರುವುದನ್ನು ಕಂಡ ದೇವತೆಗಳೆಲ್ಲರೂ ತಮ್ಮ ಸೇನಾಬಲಗಳೊಡನೆ ಪುರಂದರನನ್ನೇ ಅನುಸರಿಸಿ ಹೊರಟುಹೋದರು.

ಶತ್ರುಗಳು ಹಿಮ್ಮೆಟ್ಟಿದರೆಂದರೆ ವಿಜಯಿಗಳಿಗೆ ಆಗುವ ಸಂತೋಷವನ್ನು ವರ್ಣಿಸಲಸದಳ. ಇಂದ್ರನು ಪರಿವಾರಸಮೇತನಾಗಿ ಪರಾಙ್ಮುಖನಾದುದನ್ನು ಕಂಡು ಕೃಷ್ಣಾರ್ಜುನರು ಸಂತೋಷಾಧಿಕ್ಯದಿಂದ ಸಿಂಹನಾದಗಳನ್ನು ಮಾಡಿದರು.

ದೇವತೆಗಳೇ ಹಿಮ್ಮೆಟ್ಟಿದ ಮೇಲೆ ಖಾಂಡವವನದ ರಕ್ಷಣೆಯು ಹೇಗೆ ತಾನೇ ಸಾಧ್ಯವಾದೀತು? ಸುರಕ್ಷಿತನಾದ ಅಗ್ನಿಯು ದ್ವಿಗುಣಿತವಾದ ಜ್ವಾಲೆಗಳಿಂದ ಕೂಡಿ ಪ್ರಾಣಿಗಳನ್ನು ಕಬಳಿಸಲು ಮೊದಲಿಟ್ಟನು. ಗಾಳಿಯು ಮೋಡಗಳನ್ನು ನಿವಾರಣೆಮಾಡುವಂತೆ–ಅರ್ಜುನನು ತನ್ನ ಪರಾಕ್ರಮದಿಂದ ದೇವತೆಗಳನ್ನು ಪರಾಙ್ಮುಖರನ್ನಾಗಿ ಮಾಡಿ ಪ್ರಾಣಿಗಳ ವಧೆಯಲ್ಲಿ ಉದ್ಯುಕ್ತನಾದನು. ಒಂದು ಪ್ರಾಣಿಯಾದರೂ ಖಾಂಡವವನದಿಂದ ತಪ್ಪಿಸಿಕೊಂಡು ಹೋಗಲು ಸಾಧ್ಯವಾಗಲಿಲ್ಲ. ಅರ್ಜುನನೊಡನೆ ಯುದ್ಧಮಾಡುವುದಂತಿರಲಿ.; ಎಂತಹ ಬಲಿಷ್ಠವಾದ ಪ್ರಾಣಿಗೂ ಅರ್ಜುನನನ್ನು ಕಣ್ಣೆತ್ತಿ ನೋಡಲು ಕೂಡ ಸಾಧ್ಯವಾಗುತ್ತಿರಲಿಲ್ಲ. ಕೆಲವು ಸಮಯಗಳಲ್ಲಿ ಒಂದೇ ಬಾಣದಿಂದ ನೂರಾರು ಪ್ರಾಣಿಗಳನ್ನು ಕೊಲ್ಲುತ್ತಲೂ, ಕೆಲವು ಸಮಯಗಳಲ್ಲಿ ನೂರಾರು ಬಾಣಗಳನ್ನು ಒಂದೇ ಪ್ರಾಣಿಯ ಮೇಲೆ ಪ್ರಯೋಗಮಾಡುತ್ತಲೂ ಅರ್ಜುನನು ಕಾಲಪುರುಷನಂತೆ ಖಾಂಡವವನದ ಸುತ್ತಲೂ ತಿರುಗುತ್ತಿದ್ದನು. ಕೆಲವು ಪ್ರಾಣಿಗಳು ಅರ್ಜುನನನ್ನು ಕಾಣುತ್ತಲೇ ಮೃತ್ಯುವಿನಿಂದ ಆಮಂತ್ರಿತವಾದುವುಗಳಂತೆ ಪ್ರಾಣತೊರೆದು ಅಗ್ನಿಯ ಜ್ವಾಲೆಗಳಲ್ಲಿ ಸಿಕ್ಕಿ ಭಸ್ಮವಾಗುತ್ತಿದ್ದುವು. ನದಿಯ ದಂಡೆಗೆ ಓಡಿದರೂ, ಹಳ್ಳದೊಳಕ್ಕೆ ಧುಮ್ಮಿಕ್ಕಿದರೂ ಪ್ರಾಣಿಗಳಿಗೆ ಆಶ್ರಯವು ಸಿಕ್ಕುತ್ತಿರಲಿಲ್ಲ. ಎಲ್ಲೆಡೆಗಳಲ್ಲಿಯೂ ಪ್ರಾಣಿಗಳು ಅಗ್ನಿಯ ಜ್ವಾಲೆಗಳಲ್ಲಿ ಸಿಕ್ಕಿ ಪ್ರಾಣಬಿಡುತ್ತಿದ್ದುವು.

ಖಾಂಡವವನದ ದಹನದ ಕಾರಣದಿಂದಾಗಿ ಪಿತೃಲೋಕದಲ್ಲಿಯೂ ಮತ್ತು ದೇವಲೋಕದಲ್ಲಿಯೂ ಸಂತಾಪವು ಹೆಚ್ಚಿತು. ಸಾವಿರಾರು ಪ್ರಾಣಿಗಳು ಕಾತರದಿಂದ ಗಟ್ಟಿಯಾಗಿ ಅರಚುತ್ತಿದ್ದುವು. ಯಜ್ಞೇಶ್ವರನ ಜ್ವಾಲೆಗಳಿಗೆ ಸಿಕ್ಕಿಬಿದ್ದ ಆನೆಗಳೂ, ಜಿಂಕೆಗಳೂ, ತೋಳಗಳೂ ಬೇಗೆಯನ್ನು ತಡೆಯಲಾರದೇ ಬಹುಘೋರತರವಾದ ಚೀತ್ಕಾರಗಳನ್ನು ಮಾಡುತ್ತಿದ್ದುವು. ಭಯಂಕರವಾದ ಶಬ್ದವನ್ನು ಕೇಳಿ ಗಂಗಾ-ಸಮುದ್ರಗಳಲ್ಲಿದ್ದ ಮೀನುಗಳೇ

ಮೊದಲಾದ ಜಲಚರಪ್ರಾಣಿಗಳೆಲ್ಲವೂ ಭಯದಿಂದ ನಡುಗಿದುವು. ಆ ಅರಣ್ಯದಲ್ಲಿ ವಾಸಮಾಡುತ್ತಿದ್ದ ವಿದ್ಯಾಧರಗಣಕ್ಕೂ ಇತರ ಪ್ರಾಣಿಗಳಿಗುಂಟಾದ ದುರವಸ್ಥೆಯೇ ಉಂಟಾಯಿತು.

ಮಹಾಬಾಹುವೇ! ಅರ್ಜುನನನ್ನಾಗಲೀ, ಶ್ರೀಕೃಷ್ಣನನ್ನಾಗಲೀ ಯಾರಿಂದಲೂ ನೋಡಲು ಸಾಧ್ಯವಾಗುತ್ತಿರಲಿಲ್ಲವೆಂದಮೇಲೆ ಅವರೆದುರಿನಲ್ಲಿ ನಿಂತು ಯುದ್ಧಮಾಡುವ ಮಾತೆಲ್ಲಿ ಬಂತು? ಜನಮೇಜಯ! ಒಂದೊಂದು ಬಾರಿ ರಾಕ್ಷಸರು, ದಾನವರು, ನಾಗರಾಜರು ಎಲ್ಲರೂ ಒಟ್ಟಾಗಿ ಸೇರಿ ತಪ್ಪಿಸಿಕೊಂಡುಹೋಗಲು ಪ್ರಯತ್ನಿಸುತ್ತಿದ್ದರು. ಆ ಸುಳಿವು ತಿಳಿದೊಡನೆಯೇ ಶ್ರೀಕೃಷ್ಣನು ಚಕ್ರವನ್ನು ಪ್ರಯೋಗಿಸಿ ಎಲ್ಲರನ್ನೂ ಏಕಕಾಲದಲ್ಲಿ ಯಮಾಲಯಕ್ಕೆ ಕಳುಹಿಸಿಬಿಡುತ್ತಿದ್ದನು. ವಿಷ್ಣುಚಕ್ರದ ಪ್ರಹಾರದಿಂದ ಕತ್ತರಿಸಲ್ಪಟ್ಟ, ದೊಡ್ಡ-ದೊಡ್ಡ ಶರೀರಗಳಿಂದ ಕೂಡಿದ್ದ ಆ ಪ್ರಾಣಿಗಳು ಪ್ರಾಣಗಳನ್ನು ತೊರೆದು ಧಗ-ಧಗನೆ ಉರಿಯುತ್ತಿದ್ದ ಯಜ್ಞೇಶ್ವರನಲ್ಲಿ ಬೀಳುತ್ತಿದ್ದುವು.

ಪ್ರಾಣಿಗಳ ಕೊಬ್ಬಿನಿಂದಲೂ, ರಕ್ತದಿಂದಲೂ, ಮಾಂಸಾದಿಗಳಿಂದಲೂ ಅಗ್ನಿದೇವನು ಸಂತುಷ್ಟನಾಗಿ ಧೂಮರಹಿತನಾಗಿ ಪ್ರಜ್ವಲಿಸಿದನು. ಬಹಳ ಎತ್ತರದವರೆಗೂ ಅಗ್ನಿಯ ಜ್ವಾಲೆಗಳು ಪ್ರಸರಿಸಿದುವು. ಹುತಾಶನನು ಕೆಂಪಾದ ಕಣ್ಣುಗಳಿಂದ ಕೂಡಿ ಜ್ವಾಲೆಗಳೆಂಬ ನಾಲಿಗೆಗಳಿಂದ ಕೂಡಿದವನಾಗಿ, ಅಗಲವಾದ ಬಾಯಿಂದ ಕೃಷ್ಣಾರ್ಜುನರು ಸಿದ್ಧಮಾಡಿಕೊಟ್ಟ ಸುಧೆಯ ರೂಪವಾದ ಪ್ರಾಣಿಗಳ ವಪೆಗಳನ್ನು ಸವಿಯುತ್ತಾ ಮಹಾನಂದವನ್ನು ಹೊಂದಿದನು. ಅವನ ಆನಂದಕ್ಕೆ ಪಾರವೇ ಇರಲಿಲ್ಲ. ಅವನ ಅಜೀರ್ಣರೋಗವೂ ಪರಿಹಾರವಾಗಿ ಮನಸ್ಸಿಗೂ ಶಾಂತಿಯು ಸಿಕ್ಕಿತು.

ಆ ವೇಳೆಗೆ ಸರಿಯಾಗಿ ತಕ್ಷಕನ ನಿವಾಸದಿಂದ ಹೊರಟು ತಪ್ಪಿಸಿಕೊಂಡು ಹೋಗಲಿದ್ದ ಮಯನೆಂಬ ರಾಕ್ಷಸನನ್ನು ಮಾಧವನು ಅಡ್ಡಗಟ್ಟಿದನು. ವಾಯುಸಾರಥಿಯಾದ ಅಗ್ನಿಯು ಸಶರೀರನಾಗಿ, ಜಡೆಯನ್ನು ಧರಿಸಿ ಮೇಘದೋಪಾದಿಯಲ್ಲಿ ಗರ್ಜಿಸುತ್ತಾ ಅಸುರನನ್ನು ಹೇಗಾದರೂ ಮಾಡಿ ಭಸ್ಮಮಾಡಬೇಕೆಂಬ ಆಶಯದಿಂದ ಮಯನನ್ನು ತನಗೊಪ್ಪಿಸಿಕೊಡುವಂತೆ ಶ್ರೀಕೃಷ್ಣನನ್ನು ಪ್ರಾರ್ಥಿಸಿದನು.

ಅವನು ಶಿಲ್ಪಿಗಳಲ್ಲಿ ಶ್ರೇಷ್ಠನಾದ, ದಾನವೇಂದ್ರನಾದ ಮಯನೆಂಬುದನ್ನು ತಿಳಿದು-ವಾಸುದೇವನು ಅವನನ್ನು ಸಂಹರಿಸಲು ಚಕ್ರವನ್ನೆತ್ತಿದನು.



ಶ್ರೀಕೃಷ್ಣನು ಚಕ್ರದಿಂದ ಪ್ರಹರಿಸಿದೊಡನೆಯೇ ಅವನನ್ನು ಭಸ್ಮಮಾಡುವ ಸಲುವಾಗಿ ಯಜ್ಞೇಶ್ವರನೂ ಸಿದ್ಧನಾಗಿದ್ದನು. ಆ ಸಂದರ್ಭದಲ್ಲಿ ಮಯನು ಪ್ರಾಣಗಳನ್ನುಳಿಸಿಕೊಳ್ಳುವ ಸಲುವಾಗಿ 'ಅರ್ಜುನ! ತ್ರಾಹಿ' 'ಅರ್ಜುನ! ಕಾಪಾಡು' ಎಂದು ಗಟ್ಟಿಯಾಗಿ ಕೂಗಿಕೊಂಡನು. ಭಯದಿಂದ ಕಂಪಿಸುತ್ತಿದ್ದ ಮಯನ ಆ ಆರ್ತನಾದವನ್ನು ಕೇಳುತ್ತಲೇ ಸತ್ತುಹೋದವನನ್ನು ಬದುಕಿಸುವ ರೀತಿಯಲ್ಲಿ ಅರ್ಜುನನು 'ಮಾ ಭೈಃ' 'ಹೆದರಬೇಡ!'-ಎಂದು ಪ್ರತ್ಯುತ್ತರವನ್ನಿತ್ತನು. ದಯಾಪರನಾದ ಪಾರ್ಥನು–'ನ ಭೇತವ್ಯಂ ನ ಭೇತವ್ಯಂ'–'ನೀನು ಹೆದರುವ ಕಾರಣವಿಲ್ಲ ನೀನು ಹೆದರುವ ಕಾರಣವಿಲ್ಲ.' – ಎಂದು ಪುನಃ ಪುನಃ ಮಯನಿಗೆ ಆಶ್ವಾಸನೆಯಿನ್ನಿತ್ತನು.

ಪೃಥಾಸುತನಾದ ಅರ್ಜುನನು ಭಯಪಡಬೇಡವೆಂದು ಮಯನಿಗೆ ಹೇಳಿದೊಡನೆಯೇ ಶ್ರೀಕೃಷ್ಣನು ಪ್ರಯೋಗಿಸಲೆಂದು ಮೇಲೆತ್ತಿದ್ದ ಚಕ್ರವನ್ನು ಕೆಳಗಿಳಿಸಿದನು. ಅಗ್ನಿದೇವನೂ ನಮುಚಿಯ ಸೋದರನಾದ ಮಯನನ್ನು ಸುಡಲು ಹೋಗಲಿಲ್ಲ.

ಕೃಷ್ಣಾರ್ಜುನರ ಸಹಕಾರದಿಂದಾಗಿ ಇಂದ್ರಪ್ರಮುಖರಾದ ದೇವತೆಗಳ ದಾಳಿಯಿಂದ ಸಂರಕ್ಷಿತನಾದ ಅಗ್ನಿದೇವನು ಖಾಂಡವವನವನ್ನು ಹದಿನೈದು ದಿನಗಳ ಕಾಲ ಅವಿಚ್ಛಿನ್ನವಾಗಿ ಸುಟ್ಟು ಭಸ್ಮಮಾಡಿದನು. ಖಾಂಡವವನ ದಲ್ಲಿದ್ದ ಅಶ್ವಸೇನ, ಮಯ ಮತ್ತು ನಾಲ್ಕು ಶಾರ್ಙ್ಗಪಕ್ಷಿಗಳು–ಈ ಆರು ಜೀವಿಗಳು ಮಾತ್ರ ಯಜ್ಞೇಶ್ವರನಿಗೆ ಬಲಿಯಾಗಲಿಲ್ಲ."

೨೨೮ನೆಯ ಅಧ್ಯಾಯವು ಮುಗಿಯಿತು.

೨೨೯ನೆಯ ಅಧ್ಯಾಯ ಮಯದರ್ಶನಪರ್ವ (ಮುಂದುವರಿದಿದೆ.)

## ಶಾರ್ಙ್ಗಕೋಪಾಖ್ಯಾನ : ಮಂದಪಾಲಮುನಿಯಿಂದ ಜರಿತೆಯಲ್ಲಿ ಪುತ್ರೋತ್ಪತ್ತಿ : ಸಂತಾನರಕ್ಷಣೆಗಾಗಿ ಮಂದಪಾಲನಿಂದ ಅಗ್ನಿಸ್ತುತಿ

ಅಶ್ವಸೇನನು ತಪ್ಪಿಸಿಕೊಂಡ ರೀತಿಯನ್ನೂ ಮತ್ತು ಮಯನು ಅರ್ಜುನನ ಆಶ್ರಯವನ್ನು ಪಡೆದ ವಿಷಯವನ್ನೂ ವೈಶಂಪಾಯನರು ತಿಳಿಸಿದರು. ಆದರೆ ನಾಲ್ಕು ಶಾರ್ಙ್ಗಪಕ್ಷಿಗಳು ಹೇಗೆ ಜೀವಂತವಾಗಿ ಉಳಿದುವೆಂಬುದನ್ನು ತಿಳಿಸಲಿಲ್ಲ.

ಆ ವಿಷಯವಾಗಿಯೇ ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

**ಕಿಮರ್ಥಂ ಶಾರ್ಙ್ಗಕಾನಗ್ನಿರ್ನ ದದಾಹ ತಥಾಗತೇ ।**
**ತಸ್ಮಿನ್ವನೇ ದಹ್ಯಮಾನೇ ಬ್ರಹ್ಮನ್ನೇತತ್ಪ್ರಚಕ್ಷ್ವ ಮೇ ॥೧॥**

"ಪೂಜ್ಯರೇ! ಖಾಂಡವವನವು ಆ ಪರಿಯಿಂದ ಭಸ್ಮವಾಗುತ್ತಿರುವಾಗ ಅಗ್ನಿದೇವನು ಆ ನಾಲ್ಕು ಶಾರ್ಙ್ಗಪಕ್ಷಿಗಳನ್ನು ಭಸ್ಮಮಾಡದಿದ್ದ ಕಾರಣ ವಾದರೂ ಏನು? ಮಹರ್ಷಿಗಳೇ! ಅಶ್ವಸೇನನನ್ನೂ ಮತ್ತು ಮಯನನ್ನೂ

ದಹನಮಾಡದಿರುವ ಕಾರಣವನ್ನು ತಿಳಿಸಿರುತ್ತೀರಿ. ಆದರೆ ಶಾರ್ಙ್ಗಪಕ್ಷಿಗಳು ತಪ್ಪಿಸಿಕೊಳ್ಳಲು ಕಾರಣವೇನೆಂಬುದನ್ನು ನೀವು ತಿಳಿಸಲಿಲ್ಲ. ಅಶ್ವಸೇನ ಮತ್ತು ಮಯರು ತಪ್ಪಿಸಿಕೊಂಡುದುದಕ್ಕಿಂತಲೂ ಆ ನಾಲ್ಕು ಪುಟ್ಟ ಶಾರ್ಙ್ಗಪಕ್ಷಿಗಳು ಅಗ್ನಿಯ ಜ್ವಾಲೆಗಳಿಂದ ತಪ್ಪಿಸಿಕೊಂಡಿರುವ ವಿಷಯವು ನನಗೆ ಬಹಳ ಆಶ್ಚರ್ಯವೆನಿಸುತ್ತದೆ. ಅಂತಹ ಕಾಡುಗಿಚ್ಚಿನಲ್ಲಿಯೂ ಆ ಪುಟ್ಟ ಹಕ್ಕಿಗಳು ಉಳಿದುಕೊಂಡ ಚರಿತ್ರೆಯನ್ನು ದಯೆಯಿಟ್ಟು ಹೇಳಿರಿ.”

“ಜನಮೇಜಯ! ಅಗ್ನಿಯು ಆ ನಾಲ್ಕು ಪುಟ್ಟ ಹಕ್ಕಿಗಳನ್ನೇಕೆ ದಹಿಸಲಿಲ್ಲವೆಂಬ ವಿಷಯವನ್ನು ವಿವರವಾಗಿಯೇ ಹೇಳುವೆನು. ಸಾವಧಾನದಿಂದ ಕೇಳುವವನಾಗು :

ಮಂದಪಾಲನೆಂಬ ಮಹರ್ಷಿಯೊಬ್ಬನಿದ್ದನು. ಅವನು ಸಕಲಶಾಸ್ತ್ರ ಪಾರಂಗತನಾಗಿದ್ದನಲ್ಲದೇ, ಮಹರ್ಷಿಯೂ ಆಗಿದ್ದನು. ಧರ್ಮಜ್ಞರಲ್ಲಿ ಶ್ರೇಷ್ಠನೆಂದೂ ಹೆಸರು ಪಡೆದಿದ್ದನು. ಊರ್ಧ್ವರೇತಸ್ಕರಾದ ಮಹರ್ಷಿಗಳ ಮಾರ್ಗವನ್ನೇ ಅನುಸರಿಸುತ್ತಾ ಸರ್ವದಾ ಸ್ವಾಧ್ಯಾಯಪರನಾಗಿ, ಧರ್ಮನಿಷ್ಠನಾಗಿ, ಜಿತೇಂದ್ರಿಯನಾಗಿ ಕಾಲಕಳೆಯುತ್ತಿದ್ದನು. ಕಠಿನವಾದ ತಪಸ್ಸನ್ನು ಮಾಡುತ್ತಿದ್ದು, ಸಂಕಲ್ಪಿಸಿದ್ದ ತಪಸ್ಸನ್ನು ಪೂರ್ಣಗೊಳಿಸಿ, ಕಾಲಾಂತರದಲ್ಲಿ ಶರೀರವನ್ನು ಪರಿತ್ಯಜಿಸಿ ಪಿತೃಲೋಕಕ್ಕೆ ತೆರಳಿದನು. ಆದರೆ ಮಂದಪಾಲನಿಗೆ ಪಿತೃಲೋಕದಲ್ಲಿ ಲಭ್ಯವಾಗಬೇಕಾಗಿದ್ದ ಅಥವಾ ಅವನು ಆಶಿಸಿದ್ದ ಫಲಗಳಾವುವೂ ಸಿಕ್ಕಲಿಲ್ಲ. ಮಹರ್ಷಿಯು ಯಮಧರ್ಮನ ಸಮೀಪದಲ್ಲಿದ್ದ ದೇವತೆಗಳನ್ನು ಕೇಳಿದನು : “ದೇವತೆಗಳೇ! ನಾನು ಮಾಡಿರುವ ತಪಃಫಲದಿಂದ ನನಗೆ ಅನೇಕಲೋಕಗಳು ಲಭ್ಯವಾಗಬೇಕು. ಯಾವ ಕಾರಣದಿಂದ ಆ ಪುಣ್ಯಲೋಕಗಳು ನನಗೆ ಅಗೋಚರವಾಗಿವೆಯೋ ತಿಳಿಯದಾಗಿದೆ. ನಾನು ಮಾಡಿರುವ ಕರ್ಮಲೋಪವಾದರೂ ಏನಿದ್ದೀತು? ನನಗೆ ಆ ಪುಣ್ಯಲೋಕಗಳು ಅಗೋಚರವಾಗಿರುವ ಕಾರಣವನ್ನು ದಯೆಯಿಟ್ಟು ತಿಳಿಸಿರಿ. ನಾನು ಮಾಡಿರುವ ತಪಸ್ಸಿನ ಫಲವನ್ನು ಅನುಭವಿಸಲು ಹೇಗೆ ಸಾಧ್ಯವೆಂಬುದನ್ನೂ ತಿಳಿಯಹೇಳಿರಿ.”

**ಋಣಿನೋ ಮಾನವಾ ಬ್ರಹ್ಮಞ್ಜಾಯನ್ತೇ ಯೇನ ತಚ್ಛೃಣು ।**
**ಕ್ರಿಯಾಭಿರ್ಬ್ರಹ್ಮಚರ್ಯೇಣ ಪ್ರಜಯಾ ಚ ನ ಸಂಶಯಃ ॥೧೧॥**
**ತದಪಾಕ್ರಿಯತೇ ಸರ್ವಂ ಯಜ್ಞೇನ ತಪಸಾ ಶ್ರುತೈಃ ।**
**ತಪಸ್ವೀ ಯಜ್ಞಕೃಚ್ಚಾಸಿ ನ ಚ ತೇ ವಿದ್ಯತೇ ಪ್ರಜಾ ॥೧೨॥**
**ತ ಇಮೇ ಪ್ರಸವಸ್ಯಾರ್ಥೇ ತವ ಲೋಕಾಃ ಸಮಾವೃತಾಃ ।**
**ಪ್ರಜಾಯಸ್ವ ತತೋ ಲೋಕಾನುಪಭೋಕ್ಷ್ಯಸಿ ಪುಷ್ಕಲಾನ್ ॥೧೩॥**

"ಬ್ರಾಹ್ಮಣೋತ್ತಮನೇ! ಮಾನವರು ಪ್ರಪಂಚದಲ್ಲಿ ಮೂರು ಋಣಗಳನ್ನು ಹೊತ್ತು ಹುಟ್ಟುತ್ತಾರೆ. ಬ್ರಹ್ಮಚರ್ಯದಿಂದಿದ್ದು ವೇದಾಧ್ಯಯನಮಾಡಿ ಋಷಿಋಣವನ್ನು ತೀರಿಸಬೇಕು. ಯಜ್ಞ-ಯಾಗಾದಿಗಳನ್ನು ಮಾಡಿ ದೇವಋಣವನ್ನು ತೀರಿಸಬೇಕು. ಸಂತಾನವನ್ನು ಪಡೆದು ಪಿತೃಋಣವನ್ನು ತೀರಿಸಬೇಕು. ನೀನು ತಪಸ್ವಿಯೂ ಯಜ್ಞದೀಕ್ಷಿತನೂ ಆಗಿರುವುದರಿಂದ ಮೊದಲೆರಡು ಋಣಗಳಿಂದಲೂ ವಿಮುಕ್ತನಾಗಿರುವೆ. ಆದರೆ ಸಂತಾನವನ್ನು ಪಡೆಯದೇ ಇರುವ ಕಾರಣ ಪಿತೃಋಣದಿಂದ ವಿಮುಕ್ತಿಯನ್ನು ಹೊಂದಿರುವುದಿಲ್ಲ. ಈ ಕಾರಣದಿಂದಲೇ ನಿನಗೆ ಆ ಪುಣ್ಯಲೋಕಗಳು ಅಗೋಚರವಾಗಿವೆ (ಕಾಣಿಸುತ್ತಿಲ್ಲ.) ನೀನು ಸಂತಾನವನ್ನು ಪಡೆದನಂತರ ಪುಷ್ಕಲವಾದ ಪುಣ್ಯಲೋಕಗಳನ್ನು ಹೊಂದಿ ಸುಖಿಯಾಗಿರಬಹುದು.

**ಪುಂನಾಮ್ನೋ ನರಕಾತ್ಪುತ್ರಸ್ತ್ರಾಯತೇ ಪಿತರಂ ಶ್ರುತಿಃ ।**
**ತಸ್ಮಾದಪತ್ಯಸಂತಾನೇ ಯತಸ್ವ ಬ್ರಹ್ಮಸತ್ತಮ ॥೧೪॥**

ಬ್ರಹ್ಮಸತ್ತಮನೇ! ಪುತ್ರನು 'ಪುತ್' ಎಂಬ ನರಕದಿಂದ ತಂದೆಯನ್ನು ಪಾರುಮಾಡುವನೆಂದು ಶ್ರುತಿಗಳು ಸಾರುತ್ತಿವೆ. ಆದುದರಿಂದ ನಿನ್ನ ವಂಶದ ವಿಚ್ಛೇದವಾಗದಂತೆ ಸಂತಾನವನ್ನು ಪಡೆಯಲು ಯತ್ನಿಸುವುದು ನಿನ್ನ ಕರ್ತವ್ಯವಾಗಿದೆ."

ಮಂದಪಾಲನು ದೇವತೆಗಳ ಮಾತುಗಳನ್ನು ಕೇಳಿ ಕ್ಷಣಕಾಲ ಯೋಚಿಸಿದನು. 'ಅತ್ಯಲ್ಪಕಾಲದಲ್ಲಿಯೇ ಹೆಚ್ಚು ಸಂತಾನವನ್ನು ಪಡೆಯುವುದು ಹೇಗೆ?'–ಇದೇ ಅವನ ಯೋಚನೆಯ ವಿಷಯವಾಗಿತ್ತು. ಪಕ್ಷಿಗಳು ಬಹುಪ್ರಸವಗಳೆಂದೂ ಮತ್ತು ಶೀಘ್ರಪ್ರಸವಗಳೆಂದೂ ಸ್ಮರಿಸಿಕೊಂಡು

ಶಾರ್ಙ್ಗ ಪಕ್ಷಿಯ ರೂಪವನ್ನು ಹೊಂದಿ 'ಜರಿತಾ' ಎಂಬ ಸಾರಂಗಿಕೆಯೊಡನೆ ಸೇರಿದನು. ಅವನ ಸಂಕಲ್ಪದಂತೆ ಶೀಘ್ರಕಾಲದಲ್ಲಿಯೇ ಬ್ರಹ್ಮಜ್ಞಾನವುಳ್ಳ ನಾಲ್ಕು ಮರಿಗಳನ್ನು ಜರಿತೆಯಿಂದ ಪಡೆದನು.

ಬ್ರಹ್ಮನಿಷ್ಠನಾದರೂ ಜ್ಞಾನಿಯಾದರೂ ಮಂದಪಾಲನಿಗೆ ಪ್ರಾಪ್ತವಾಗಿದ್ದ ಪಕ್ಷಿದೇಹದ ಗುಣ-ದೋಷಗಳು ಸ್ವಲ್ಪವಾದರೂ ಇದ್ದೇ ಇರುತ್ತವಲ್ಲವೇ? ಇತರ ಪಕ್ಷಿಗಳಂತೆ ಮಂದಪಾಲನೂ ಜರಿತೆಯನ್ನು ಬಿಟ್ಟು ಚಾಪಲ್ಯದಿಂದ 'ಲಪಿತಾ' ಎಂಬ ಹೆಣ್ಣು ಹಕ್ಕಿಯೊಡನೆ ಸೇರಿದನು.

ಅದರಿಂದಾಗಿ ಜರಿತೆಯು ಚಿಂತಾಕ್ರಾಂತಳಾದಳು. ತಂದೆಯಿಂದ ಪರಿತ್ಯಜಿಸಲ್ಪಟ್ಟು ಅಂಡರೂಪಗಳಲ್ಲಿದ್ದ ಮಕ್ಕಳನ್ನು ತಾಯಿಯು ಪರಿತ್ಯಜಿಸಿ ಹೋಗಲು ಸಾಧ್ಯವಾಗಲಿಲ್ಲ. ಎಷ್ಟೇ ಆಗಲಿ, ತಾಯಿಯ ಕರುಳಲ್ಲವೇ? ತಾಯಿಗೆ ಕಂದನ ಮೇಲಿರುವ ಮಮತೆಯು ಎಷ್ಟು ಅಪಾರವೆಂಬುದನ್ನು ಪಶು-ಪಕ್ಷಿಗಳಲ್ಲಿಯೂ ಕಾಣಬಹುದಾಗಿದೆ.

ಮಾತೃಸ್ನೇಹದಿಂದ ಬಾಧಿತಳಾದ ಜರಿತೆಯು ಪಕ್ಷಿಗಳಿಗೆ ಅನುಗುಣವಾದ ರೀತಿಯಲ್ಲಿ ನಾಲ್ಕು ಮೊಟ್ಟೆಗಳನ್ನೂ ಮರಿಗಳನ್ನಾಗಿ ಮಾಡಿ ಅವುಗಳಿಗೆ ಆಹಾರವನ್ನು ತಂದು ಉಣಿಸುತ್ತಿದ್ದಳು.

ಒಂದಾನೊಂದು ದಿನ ಮಂದಪಾಲನು ತನ್ನ ನೂತನಪತ್ನಿಯೊಡನೆ ಹಾರಿಕೊಂಡು ಹೋಗುತ್ತಿರುವಾಗ ಅಗ್ನಿದೇವನು ಖಾಂಡವದಾಹಕ್ಕಾಗಿ ಬರುತ್ತಿರುವುದನ್ನು ಕಂಡನು. ಅಗ್ನಿಯ ಸಂಕಲ್ಪವು ಮಂದಪಾಲನಿಗೆ ತಿಳಿಯಿತು.

ಪಕ್ಷಿರೂಪದಲ್ಲಿದ್ದ ಮಂದಪಾಲನಿಗೆ ತನ್ನ ನಾಲ್ವರು ಮಕ್ಕಳ ಸ್ಮರಣೆಯುಂಟಾಯಿತು. ಖಾಂಡವವನದಲ್ಲಿರುವ ಅವರೂ ಭಸ್ಮವಾಗಿಹೋಗಿ ಬಿಡುವರೆಂಬ ಭಯವೂ ಉಂಟಾಯಿತು. ಮಂದಪಾಲನು ಲೋಕಪಾಲನಾದ, ಮಹಾತೇಜಸ್ವಿಯಾದ ಅಗ್ನಿದೇವನ ಬಳಿಗೆ ಹೋಗಿ ತನ್ನ ಮಕ್ಕಳ ರಕ್ಷಣೆಯ ಸಲುವಾಗಿ ಅಗ್ನಿದೇವನನ್ನು ಸ್ತೋತ್ರಮಾಡಲು ಪ್ರಾರಂಭಿಸಿದನು :

**ತ್ವಮಗ್ನೇ ಸರ್ವಲೋಕಾನಾಂ ಮುಖಂ ತ್ವಮಸಿ ಹವ್ಯವಾಟ್ ।**
**ತ್ವಮನ್ತಃ ಸರ್ವಭೂತಾನಾಂ ಗೂಢಶ್ಚರಸಿ ಪಾವಕ ।**
**ತ್ವಾಮೇಕಮಾಹುಃ ಕವಯಸ್ತ್ವಾಮಾಹುಸ್ತ್ರಿವಿಧಂ ಪುನಃ ॥೨೪॥**

ತ್ವಾಮಷ್ಟಧಾ ಕಲ್ಪಯಿತ್ವಾ ಯಜ್ಞವಾಹಮಕಲ್ಪಯನ್ ।
ತ್ವಯಾ ವಿಶ್ವಮಿದಂ ಸೃಷ್ಟಂ ವದನ್ತಿ ಪರಮರ್ಷಯಃ ॥೨೫॥

ತ್ವದೃತೇ ಹಿ ಜಗತ್ಕೃತ್ಸ್ನಂ ಸದ್ಯೋ ನಶ್ಯೇದ್ಧುತಾಶನ ।
ತುಭ್ಯಂ ಕೃತ್ವಾ ನಮೋ ವಿಪ್ರಾಃ ಸ್ವಕರ್ಮವಿಜಿತಾಂ ಗತಿಮ್ ॥೨೬॥

ಗಚ್ಛನ್ತಿ ಸಹ ಪತ್ನೀಭಿಃ ಸುತೈರಪಿ ಚ ಶಾಶ್ವತೀಮ್ ।
ತ್ವಾಮಗ್ನೇ ಜಲದಾನಾಹುಃ ಖೇ ವಿಷಕ್ತಾನ್ಸವಿದ್ಯುತಃ ॥೨೭॥

ದಹನ್ತಿ ಸರ್ವಭೂತಾನಿ ತ್ವತ್ತೋ ನಿಷ್ಕ್ರಮ್ಯ ಹೇತಯಃ ।
ಜಾತವೇದಸ್ತ್ವಯೈವೇದಂ ವಿಶ್ವಂ ಸೃಷ್ಟಂ ಮಹಾದ್ಯುತೇ ॥೨೮॥

ತವೈವ ಕರ್ಮ ವಿಹಿತಂ ಭೂತಂ ಸರ್ವಂ ಚರಾಚರಮ್ ।
ತ್ವಯಾಪೋ ವಿಹಿತಾಃ ಪೂರ್ವಂ ತ್ವಯಿ ಸರ್ವಮಿದಂ ಜಗತ್ ॥೨೯॥

ತ್ವಯಿ ಹವ್ಯಂ ಚ ಕವ್ಯಂ ಚ ಯಥಾವತ್ಸಮ್ಪ್ರತಿಷ್ಠಿತಮ್ ।
ತ್ವಮೇವ ದಹನೋ ದೇವ ತ್ವಂ ಧಾತಾ ತ್ವಂ ಬೃಹಸ್ಪತಿಃ ।
ತ್ವಮಶ್ವಿನೌ ಯಮೌ ಮಿತ್ರಃ ಸೋಮಸ್ತ್ವಮಸಿ ಚಾನಿಲಃ ॥೩೦॥

"ಅಗ್ನಿದೇವ! ನೀನು ಸರ್ವಲೋಕಗಳಿಗೂ ಮುಖಸ್ವರೂಪನಾಗಿರುವೆ. ನೀನು ದೇವತೆಗಳಿಗೆ ಹವಿಸ್ಸನ್ನು ಒಯ್ಯುವವನು. ಪಾಪಗಳನ್ನು ನಿವಾರಣೆ ಮಾಡುವ ಶಕ್ತಿಯುಳ್ಳ ನೀನು ಸಕಲಪ್ರಾಣಿಗಳಲ್ಲಿಯೂ ನಿಗೂಢನಾಗಿರುವೆ. ಜ್ಞಾನಿಗಳಾದವರು ನಿನ್ನನ್ನು ಪರಬ್ರಹ್ಮಸ್ವರೂಪಿಯಾದ ಒಬ್ಬನೇ ಎಂದೂ– ದಿವ್ಯ, ಭೌಮ, ಜಠರಾನಲ–ಈ ಮೂರು ರೂಪಗಳಲ್ಲಿಯೂ ಇರುವೆಯೆಂದೂ ಹೇಳುತ್ತಾರೆ. ಮಹರ್ಷಿಗಳು ನಿನ್ನನ್ನೇ ಪಂಚಭೂತಗಳು, ಸೂರ್ಯ, ಚಂದ್ರ, ಯಜಮಾನ – ಈ ಎಂಟು ವಿಭಾಗಗಳನ್ನಾಗಿ ವಿಂಗಡಿಸಿ, ನಿನ್ನನ್ನು ಯಜ್ಞಗಳಲ್ಲಿ ಹವಿಸ್ಸನ್ನು ಒಯ್ಯುವ ಕಾರ್ಯದಲ್ಲಿ ನಿಯೋಜಿಸಿರುತ್ತಾರೆ. ನಿನ್ನಿಂದಲೇ ಈ ಪ್ರಪಂಚವು ಸೃಷ್ಟವಾಗಿದೆಯೆಂದೂ ಜ್ಞಾನಿಗಳೂ ಹೇಳುತ್ತಾರೆ. ಹುತಾಶನನೇ! ನೀನಿಲ್ಲದಿದ್ದರೆ ಈ ಬ್ರಹ್ಮಾಂಡವು ಒಡನೆಯೇ ನಾಶವಾಗಿಬಿಡುತ್ತಿದ್ದಿತು. ಬ್ರಾಹ್ಮಣರು ನಿನ್ನನ್ನು ಔಪಾಸನ-ವೈಶ್ವದೇವಾದಿಗಳಿಂದ ಆರಾಧಿಸಿ, ಪತ್ನೀ-ಪುತ್ರರಿಂದ ಕೂಡಿದವರಾಗಿ ಕರ್ಮಾರ್ಜಿತವಾದ ಶಾಶ್ವತವಾದ ಪುಣ್ಯಲೋಕಗಳನ್ನು ಪಡೆಯುತ್ತಾರೆ. ಪ್ರಾಜ್ಞರಾದವರು

ನಿನ್ನನ್ನು ಅಂತರಿಕ್ಷದಲ್ಲಿ ಮಿಂಚಿನಿಂದ ಕೂಡಿದ ಮೇಘಸ್ವರೂಪಿಯೆಂದೂ ಹೇಳುತ್ತಾರೆ. ನಿನ್ನ ಅಪಾರವಾದ ಜ್ವಾಲೆಗಳು ಪ್ರಳಯಕಾಲದಲ್ಲಿ ಪ್ರಪಂಚದಲ್ಲಿರುವ ಸಕಲಪ್ರಾಣಿಗಳನ್ನೂ ಭಸ್ಮಮಾಡಲು ಸಮರ್ಥವಾಗಿವೆ. ನಿನ್ನಿಂದಲೇ ಈ ವಿಶ್ವವೂ ಸೃಷ್ಟಿಯಾಗಿದೆ. ನಿನ್ನ ಇರುವಿಕೆಯಿಂದಲೇ ವೇದವಿಹಿತವಾದ ಕರ್ಮವು ಸಾಧ್ಯವಾಗುತ್ತದೆ. ಸಕಲಚರಾಚರವಸ್ತುಗಳೂ ನಿನ್ನನ್ನು ಅವಲಂಬಿಸಿಯೇ ಜೀವಿಸುತ್ತಿವೆ. ನೀರೂ ಮತ್ತು ಭೂಮಿಯೂ ನಿನ್ನಲ್ಲಿಯೇ ಅಡಗಿದ್ದು ನಿನ್ನ ಇಚ್ಛೆಯಿಂದ ಹೊರಬಂದಿವೆ. ಹವ್ಯ-ಕವ್ಯಗಳೂ ನಿನ್ನಲ್ಲಿಯೇ ಪ್ರತಿಷ್ಠಿತವಾಗಿವೆ. ಸೃಷ್ಟಿಕರ್ತನೂ, ರಕ್ಷಕನೂ, ಸಂಹಾರಕನೂ ನೀನೇ ಆಗಿರುವೆ. ಬೃಹಸ್ಪತಿ, ಸೂರ್ಯ, ಚಂದ್ರ, ವಾಯು, ಅಶ್ವಿನೀದೇವತೆಗಳು–ಇವರೆಲ್ಲರೂ ನಿನ್ನ ಅಂಶಸಂಭೂತರೇ ಆಗಿರುತ್ತಾರೆ. ಸುಪ್ರೀತನಾಗು, ಯಜ್ಞೇಶ್ವರ!"

ಜನಮೇಜಯ! ಮಂದಪಾಲನಿಂದ ಈ ರೀತಿಯಲ್ಲಿ ಸಂಸ್ತುತನಾದ ಅಗ್ನಿದೇವನು - ಅಮಿತತೇಜಸ್ವಿಯಾದ, ಮಹರ್ಷಿಯಾದ ಮಂದಪಾಲನ ವಿಷಯದಲ್ಲಿ ಸುಪ್ರೀತನಾದನು. ಪ್ರೀತಾತ್ಮನಾದ ಅಗ್ನಿದೇವನು – 'ನಿನಗೆ ಇಷ್ಟವಾದ ಯಾವ ಕಾರ್ಯವನ್ನು ಮಾಡಿಕೊಡಲಿ?' – ಎಂದು ಮಂದಪಾಲನನ್ನು ಪ್ರಶ್ನಿಸಿದನು.

ಮಂದಪಾಲನು ತನ್ನ ಎರಡು ಕಾಲುಗಳನ್ನೇ ಅಂಜಲಿಪುಟವನ್ನಾಗಿ ಮಾಡಿಕೊಂಡು ಯಜ್ಞೇಶ್ವರನಿಗೆ ಹೇಳಿದನು :

**ಪ್ರದಹನ್ಖಾಣ್ಡವಂ ದಾವಂ ಮಮ ಪುತ್ರಾನ್ವಿಸರ್ಜಯ ॥೩೩॥**

"ನೀನು ಖಾಂಡವವನವನ್ನು ಭಸ್ಮಮಾಡುವ ಸಮಯದಲ್ಲಿ ನನ್ನ ನಾಲ್ಕು ಮಕ್ಕಳನ್ನೂ ಭಸ್ಮಮಾಡದೇ ಬಿಟ್ಟುಬಿಡು, ಮಹಾನುಭಾವ!"

'ಹಾಗೆಯೇ ಆಗಲಿ' ಎಂದು ಅಭಯಪ್ರದಾನವನ್ನು ಮಾಡಿದ ಅಗ್ನಿದೇವನು ಖಾಂಡವವನವನ್ನು ದಹಿಸಲು ಪ್ರಜ್ವಲಿಸಿದನು."

ಎರಡು೨೯ನೆಯ ಅಧ್ಯಾಯವು ಮುಗಿಯಿತು.

೨೩೦ನೆಯ ಅಧ್ಯಾಯ ಮಯದರ್ಶನಪರ್ವ (ಮುಂದುವರಿದಿದೆ.)

## ಜರಿತೆಯ ಮತ್ತು ಮಂದಪಾಲನ ಮಕ್ಕಳ ಪ್ರಲಾಪ

ಜನಮೇಜಯ! ಮಂದಪಾಲನು ತನ್ನ ಮಕ್ಕಳ ರಕ್ಷಣೆಗಾಗಿ ಅಗ್ನಿದೇವನನ್ನು ಪ್ರಾರ್ಥಿಸಿದ ವಿಷಯವಾಗಲೀ, ಯಜ್ಞೇಶ್ವರನು ಅಭಯವನ್ನಿತ್ತಿದ್ದ ವಿಷಯವಾಗಲೀ–ಜರಿತೆಗೂ, ಪುಟ್ಟಹಕ್ಕಿಗಳಿಗೂ ತಿಳಿದಿರಲಿಲ್ಲ.

ಖಾಂಡವವನದ ನಾಲ್ಕು ಕಡೆಗಳಲ್ಲಿಯೂ ಅಗ್ನಿಯು ಆವರಿಸಿ ದಹಿಸುತ್ತಿರುವುದನ್ನು ಕಂಡು ನಾಲ್ಕು ಪುಟ್ಟ ಹಕ್ಕಿಗಳೂ ಅವುಗಳ ತಾಯಿ ಜರಿತೆಯೂ ಭಯದಿಂದ ವಿಹ್ವಲಗೊಂಡುವು. ಅಗ್ನಿಯಿಂದ ತಪ್ಪಿಸಿಕೊಳ್ಳುವ ಮಾರ್ಗವೇ ಅವುಗಳಿಗೆ ತೋರಲಿಲ್ಲ. ತಾಯಿಯಾದ ಜರಿತೆಗೆ ಮಕ್ಕಳ ಅವಸ್ಥೆಯನ್ನು ಕಂಡು ಬಹಳ ದುಃಖವಾಯಿತು. ಅವಳು ಗಟ್ಟಿಯಾಗಿ ಅಳುತ್ತಾ ಹೇಳಿದಳು: "ಅಯ್ಯೋ! ಮಹಾಜ್ವಾಲೆಗಳಿಂದ ಪ್ರಪಂಚವನ್ನೇ ಬೆಳಗುತ್ತಿರುವ ಯಜ್ಞೇಶ್ವರನು ನಮ್ಮ ಸಮೀಪಕ್ಕೂ ಬರುತ್ತಿದ್ದು ನನ್ನ ಸಂಕಟವನ್ನು ಹೆಚ್ಚಿಸುತ್ತಿದ್ದಾನೆ. ಈ ನನ್ನ ಮಕ್ಕಳಿಗಾದರೋ ರೆಕ್ಕೆಗಳೂ ಹುಟ್ಟಿರುವುದಿಲ್ಲ. ಕಾಲುಗಳೂ ಬಲಿತಿರುವುದಿಲ್ಲ. ಬಹಳ ದುರ್ಬಲವಾಗಿವೆ. ನಮ್ಮ ಪೂರ್ವಜರು ಪುಣ್ಯಲೋಕಗಳನ್ನು ಪಡೆಯಲು ಈ ಪುಟ್ಟ ಹಕ್ಕಿಗಳು ಆಶ್ರಯಭೂತವಾಗಿವೆ. ಈ ಬೆಂಕಿಯಾದರೋ ದೊಡ್ಡ-ದೊಡ್ಡ ವೃಕ್ಷಗಳನ್ನೇ ಭಸ್ಮಮಾಡುತ್ತಾ ಖಾಂಡವವನವಾಸಿಗಳಿಗೆ ಭಯೋತ್ಪಾದನೆಮಾಡುತ್ತಾ ಮುನ್ನುಗ್ಗುತ್ತಿದೆ. ಈ ಅಗ್ನಿಯಿಂದ ತಪ್ಪಿಸಿಕೊಂಡು ಹೋಗಲು ನನ್ನ ಮಕ್ಕಳು ಸಮರ್ಥರಾಗಿಲ್ಲ. ನನಗಾದರೂ ಈ ನಾಲ್ಕು ಮರಿಗಳನ್ನೂ ಎತ್ತಿಕೊಂಡು ಇಲ್ಲಿಂದ ತಪ್ಪಿಸಿಕೊಂಡು ಹೋಗುವಷ್ಟು ಸಾಮರ್ಥ್ಯವಿಲ್ಲ. ಇವುಗಳನ್ನು ಬಿಟ್ಟು ನಾನೊಬ್ಬಳೇ ಹೋಗಲೂ ಸಾಧ್ಯವಿಲ್ಲ. ಇವುಗಳನ್ನು ಬಿಟ್ಟು ಹೋಗಬೇಕೆಂದರೆ ನನ್ನ ಹೃದಯವು ದಾರುಣವೇದನೆಗೊಳಗಾಗುತ್ತದೆ. ಇವುಗಳಲ್ಲಿ ಒಂದನ್ನು ಅತಿಪ್ರಯಾಸದಿಂದ ಎತ್ತಿಕೊಂಡು ಹೋಗಬಹುದು. ಆದರೆ ನಾಲ್ಕರಲ್ಲಿ ಯಾವುದನ್ನು ಒಯ್ಯಲಿ? ಯಾವುದನ್ನು ಇಲ್ಲಿಯೇ ಬಿಟ್ಟುಹೋಗಲಿ? ಅಯ್ಯೋ! ಈ ಆಪತ್ಕಾಲದಲ್ಲಿ ನಾನೇನು ಮಾಡಬೇಕೆಂಬುದೇ ತಿಳಿಯದಾಗಿದೆಯಲ್ಲಾ! ಮಕ್ಕಳಿರಾ! ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯ

ವಾದರೂ ಏನು? ನನಗಂತೂ ಇಲ್ಲಿಂದ ತಪ್ಪಿಸಿಕೊಂಡು ಹೋಗಲು ಯಾವ ವಿಧವಾದ ಉಪಾಯವೂ ಹೊಳೆಯುತ್ತಿಲ್ಲ. ನಿಮ್ಮ ಪ್ರಾಣಗಳನ್ನುಳಿಸುವ ಚಾಪಲ್ಯದಿಂದ ಕೂಡಿರುವ ನಾನು ನಿಮ್ಮ ನಾಲ್ವರ ಮೇಲೂ ನನ್ನ ರೆಕ್ಕೆಗಳನ್ನು ಪ್ರಸರಿಸಿ ಕುಳಿತು, ಯಜ್ಞೇಶ್ವರನ ಜ್ವಾಲೆಗಳಿಗೆ ಸಿಕ್ಕಿ, ನಿಮ್ಮೊಡನೆ ನಾನೂ ಪ್ರಾಣತ್ಯಾಗಮಾಡಲು ಸಿದ್ಧಳಾಗಿರುವೆನು."

ಕೆಲವು ಕ್ಷಣಗಳು ಕಳೆದ ಬಳಿಕ ಜರಿತೆಯು ಪುನಃ ಗದ್ಗದಧ್ವನಿಯಿಂದ ಹೇಳತೊಡಗಿದಳು :

"ಅಯ್ಯೋ! ಕೆಲವೇ ದಿನಗಳ ಹಿಂದೆ ನಿರ್ದಯನಾದ ನಿಮ್ಮ ತಂದೆಯು ಹೇಳಿಹೋದುದನ್ನು ನೆನೆದರೆ ನನ್ನ ದುಃಖವು ಇಮ್ಮಡಿಯಾಗುವುದು. 'ಜರಿತಾರಿಯು ಜ್ಯೇಷ್ಠಪುತ್ರನಾಗಿ ನಮ್ಮ ಕುಲದೀಪಕನಾಗುವನು. ಸಾರಿಸೃಕ್ಕನು ಬಹು ಸಂತಾನಪಡೆದು ನಮ್ಮ ಪಿತೃಗಳ ವಂಶವನ್ನು ವೃದ್ಧಿಪಡಿಸುವನು. ಮೂರನೆಯವನಾದ ಸ್ತಂಬಮಿತ್ರನು ತಪಸ್ವಿಯಾಗುವನು. ಕೊನೆಯವನಾದ ದ್ರೋಣನು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾಗುವನು.' ಇವೇ ನಿಮ್ಮ ತಂದೆಯು ಹೇಳಿದ ಮಾತುಗಳು. ಇಂದು ನೋಡಿದರೆ ಯಾರೊಬ್ಬರೂ ಉಳಿಯುವ ಸೂಚನೆಯೇ ಕಾಣುವುದಿಲ್ಲ. ಆಪತ್ಕಾಲವು ಸನ್ನಿಹಿತವಾಗಿದೆ. ಯಾವ ಉಪಾಯದಿಂದ ನನ್ನ ಮಕ್ಕಳೊಡನೆ ಪಾರಾಗಲು ಸಾಧ್ಯವಿದೆ? ನನಗಂತೂ ಮಕ್ಕಳೊಡನೆ ಇಲ್ಲಿಂದ ಪಾರಾಗಲು ಯಾವ ವಿಧವಾದ ಉಪಾಯವೂ ಬುದ್ಧಿಗೆ ಹೊಳೆಯುತ್ತಲೇ ಇಲ್ಲ."

ಇದೇ ಮುಂತಾಗಿ ಪ್ರಲಾಪಿಸುತ್ತಿದ್ದ ತಾಯಿಯನ್ನು ಕುರಿತು ಮರಿಗಳು ಹೇಳಿದುವು :

**ಸ್ನೇಹಮುತ್ಸೃಜ್ಯ ಮಾತಸ್ತ್ವಂ ಪತ ಯತ್ರ ನ ಹವ್ಯವಾಟ್ ।**
**ಅಸ್ಮಾಸ್ವಿಹ ವಿನಷ್ಟೇಷು ಭವಿತಾರಃ ಸುತಾಸ್ತವ ।**
**ತ್ವಯಿ ಮಾತರ್ವಿನಷ್ಟಾಯಾಂ ನ ನಃ ಸ್ಯಾತ್ಕುಲಸಂತತಿಃ ॥೧೩॥**

"ಅಮ್ಮ! ನಮ್ಮ ಮೇಲಿನ ಪ್ರೀತಿಯನ್ನು ತೊರೆದು ಅಗ್ನಿಭಯವಿಲ್ಲದೆಡೆಗೆ ಒಡನೆಯೇ ಹಾರಿಹೋಗು! ಒಂದು ವೇಳೆ ನಾವಿಲ್ಲಿಯೇ ವಿನಾಶ ಹೊಂದಿದರೂ ನೀನು ಜೀವಿಸಿದ್ದರೆ ಪುನಃ ಮಕ್ಕಳನ್ನು ಪಡೆಯಲು ಅವಕಾಶ

ವಿದೆ. ಹಾಗಲ್ಲದೇ ನೀನು ನಮ್ಮ ಮೇಲಿನ ವಾತ್ಸಲ್ಯದಿಂದ ನಮ್ಮೊಡನೆಯೇ ಇದ್ದು ನೀನೇ ಅವಸಾನಹೊಂದಿದರೆ ಮುಂದೆ ನಮ್ಮ ವಂಶದ ಅಭಿವೃದ್ಧಿಗೆ ಅವಕಾಶವೇ ಇಲ್ಲವಾಗುತ್ತದೆ. ಅಮ್ಮ! ಈ ಎರಡು ವಿಷಯಗಳನ್ನೂ ಪರ್ಯಾಲೋಚಿಸಿ ನಮ್ಮ ವಂಶಕ್ಕೆ ಕ್ಷೇಮವುಂಟಾಗುವ ರೀತಿಯಲ್ಲಿ ವರ್ತಿಸುವುದು ನಿನ್ನ ಕರ್ತವ್ಯವಾಗಿದೆ. ನಮ್ಮ ಮೇಲಿನ ವಾತ್ಸಲ್ಯದಿಂದ ನೀನು ಇಲ್ಲಿಯೇ ಇರುವೆಯಾದರೆ ಸರ್ವವಿನಾಶವಾಗುತ್ತದೆ. ಆದುದರಿಂದ ನಮ್ಮ ಮೇಲಿನ ವ್ಯಾಮೋಹವನ್ನು ತೊರೆದು ಹೊರಟುಹೋಗಮ್ಮಾ! ನೀನು ಜೀವಿಸಿದ್ದರೆ ಉತ್ತಮಲೋಕಗಳನ್ನು ಪಡೆಯಲಿಚ್ಛಿಸಿರುವ ನಮ್ಮ ತಂದೆಯು ಮುಂದೆ ನಿನ್ನಲ್ಲಿ ಅನೇಕಪುತ್ರರನ್ನು ಪಡೆಯಬಹುದು."

ಮಕ್ಕಳು ಹೀಗೆಂದು ಹೇಳಿದ ಮಾತ್ರಕ್ಕೆ ತಾಯಿಯಾದವಳಿಗೆ ಮಕ್ಕಳನ್ನು ಬಿಟ್ಟು ಹೋಗಿಬಿಡಲು ಸಾಧ್ಯವಾಗುವುದೇ? ಏನಾದರೂ ಮಾಡಿ ಮಕ್ಕಳನ್ನು ಉಳಿಸಬೇಕೆಂಬ ಆಶಯದಿಂದ ಪುಟ್ಟಹಕ್ಕಿಗಳನ್ನು ಕುರಿತು ಹೇಳಿದಳು :

"ಮಕ್ಕಳಿರಾ! ಸಮೀಪದಲ್ಲಿಯೇ ಇರುವ ಈ ಮರದ ಬುಡದಲ್ಲಿ ಒಂದು ಇಲಿಯ ಬಿಲವಿರುವುದು. ಈ ಕೂಡಲೇ ನೀವು ಆ ಬಿಲದೊಳಗೆ ಸೇರಿಕೊಳ್ಳಿರಿ. ಅಲ್ಲಿಗೆ ಹೋಗಿ ಸೇರಿಕೊಂಡರೆ ನಿಮಗೆ ಅಗ್ನಿಯ ಭಯವಿರು ವುದಿಲ್ಲ. ನೀವು ಅದರೊಳಗೆ ಹೋದೊಡನೆಯೇ ಬಿಲದ ಮೇಲ್ಭಾಗವನ್ನು ನಾನು ಮಣ್ಣಿನಿಂದ ಮುಚ್ಚಿಬಿಡುವೆನು. ಧಗ-ಧಗನೆ ಉರಿಯುತ್ತಿರುವ ಅಗ್ನಿಯಿಂದ ತಪ್ಪಿಸಿಕೊಳ್ಳಲು ಇದೊಂದೇ ಮಾರ್ಗವೆಂದು ನನಗೆ ತೋರುತ್ತಿದೆ. ಅಗ್ನಿಯು ಶಾಂತನಾದೊಡನೆಯೇ ನಾನು ಪುನಃ ಇಲ್ಲಿಗೆ ಬಂದು ಮಣ್ಣನ್ನು ತೆಗೆದು ಬಿಡುವೆನು. ಅಗ್ನಿಯ ಭಯವನ್ನು ತಪ್ಪಿಸಿಕೊಳ್ಳಬೇಕಾದರೆ ಕೂಡಲೇ ನಾನು ಹೇಳಿದಂತೆ ಮಾಡಿರಿ."

ರೆಕ್ಕೆ-ಪುಕ್ಕಗಳು ಬಲಿತಿಲ್ಲದ ಪಕ್ಷಿಗಳಾದರೂ ಋಷಿಸಂಭೂತವಾದುವು ಗಳಲ್ಲವೇ? ತಾಯಿಯ ಸಲಹೆಗೆ ಯಥೋಚಿತವಾದ ಉತ್ತರವನ್ನೇ ಪುಟ್ಟ ಹಕ್ಕಿಗಳು ಕೊಟ್ಟುವು.

ಅಬರ್ಹಾನ್ಮಾಂಸಭೂತಾನ್ನಃ ಕ್ರವ್ಯಾದಾಖುರ್ವಿನಾಶಯೇತ್ ।
ಪಶ್ಯಮಾನಾ ಭಯಮಿದಂ ಪ್ರವೇಷ್ಟುಂ ನಾತ್ರ ಶಕ್ನುಮಃ ॥೧೯॥

**ಕಥಮಗ್ನಿರ್ನ ನೋ ಧಕ್ಷ್ಯೇತ್ಕಥಮಾಖುರ್ನ ನಾಶಯೇತ್ ।**
**ಕಥಂ ನ ಸ್ಯಾತ್ಪಿತಾ ಮೋಘಃ ಕಥಂ ಮಾತಾ ಧ್ರಿಯೇತ ನಃ ॥೨೦॥**

**ಬಿಲ ಆಖೋರ್ವಿನಾಶಃ ಸ್ಯಾದಗ್ನೇರಾಕಾಶಚಾರಿಣಾಮ್ ।**
**ಅನ್ವವೇಕ್ಷ್ಯೈತದುಭಯಂ ಶ್ರೇಯಾನ್ದಾಹೋ ನ ಭಕ್ಷಣಮ್ ॥೨೧॥**

**ಗರ್ಹಿತಂ ಮರಣಂ ನ ಸ್ಯಾದಾಖುನಾ ಭಕ್ಷಿತೇ ಬಿಲೇ ।**
**ಶಿಷ್ಟಾದಿಷ್ಟಃ ಪರಿತ್ಯಾಗಃ ಶರೀರಸ್ಯ ಹುತಾಶನಾತ್ ॥೨೨॥**

"ಅಮ್ಮಾ! ರೆಕ್ಕೆ-ಪುಕ್ಕಗಳಿಲ್ಲದ ನಾವು ಮಾಂಸದ ಮುದ್ದೆಗಳಂತಿರುವೆವು. ನಾವೇನಾದರೂ ಬಿಲವನ್ನು ಹೊಕ್ಕೆವೆಂದರೆ ಮಾಂಸವನ್ನು ತಿನ್ನುವ ಇಲಿಯು ಒಡನೆಯೇ ನಮ್ಮನ್ನು ತಿಂದುಬಿಡುವುದು. ಈ ಒಂದು ಅಪಾಯವು ಬಿಲದಲ್ಲಿರುವುದರಿಂದ ನಾವು ಬಿಲದೊಳಗೆ ಹೋಗಲಾರೆವು. ಇಲ್ಲಿಯೇ ಇದ್ದರೂ ಅಥವಾ ಬಿಲದೊಳಗೆ ಹೊಕ್ಕರೂ ನಮಗೆ ಮೃತ್ಯುವಂತೂ ನಿಶ್ಚಯ. ನಮ್ಮ ತಂದೆಗೆ ಅಪುತ್ರತ್ವದ ದೋಷವು ಹೇಗೆ ನಿವಾರಣೆಯಾಗುವುದೆಂಬುದನ್ನೂ, ಅದಕ್ಕಾಗಿ ನಮ್ಮ ತಾಯಿಯು ಹೇಗೆ ರಕ್ಷಿಸಲ್ಪಡಬೇಕೆಂಬುದನ್ನೂ ನಾವು ಯೋಚಿಸುತ್ತಿದ್ದೇವೆ. ನಮ್ಮ ವಿಷಯವಾಗಿ ಹೇಳುವುದಾದರೆ ನಾವು ಬಿಲವನ್ನು ಹೊಕ್ಕು ಇಲಿಯ ಬಾಯಿಗೆ ಸಿಕ್ಕಿ ಪ್ರಾಣಬಿಡುವುದಕ್ಕಿಂತಲೂ–ಯಜ್ಞೇಶ್ವರನ ಜ್ವಾಲೆಗಳಿಗೇ ಸಿಕ್ಕಿ ಪ್ರಾಣಬಿಡುವುದೇ ಉತ್ತಮವೆಂದು ಭಾವಿಸುತ್ತೇವೆ. ಇಲಿಯಿಂದ ಮರಣವು ನಿಂದ್ಯವಾದುದು. ಶಿಷ್ಟನಾದ ಹುತಾಶನನಿಂದ ಶರೀರಪರಿತ್ಯಾಗವು ಇಷ್ಟವಾದುದು."

೨೩೦ನೆಯ ಅಧ್ಯಾಯವು ಮುಗಿಯಿತು.

೨೩೧ನೆಯ ಅಧ್ಯಾಯ ಮಯದರ್ಶನಪರ್ವ (ಮುಂದುವರಿದಿದೆ.)

## ತಾಯಿ–ಮಕ್ಕಳ ಸಂವಾದ

"ಜನಮೇಜಯ! ಮಕ್ಕಳ ಮಾತು ಯುಕ್ತಿಯುಕ್ತವಾಗಿಯೂ, ಶಾಸ್ತ್ರಸಮ್ಮತವಾಗಿಯೂ ಇದ್ದರೂ ವ್ಯಾಮೋಹದಿಂದ ಕೂಡಿದ್ದ ತಾಯಿಗೆ ಸುಮ್ಮನಿರಲು ಸಾಧ್ಯವಾಗಲಿಲ್ಲ. ಪುನಃ ಮಕ್ಕಳನ್ನು ಕುರಿತು ಹೇಳಿದಳು :

"ಮಕ್ಕಳಿರಾ! ನೀವು ಹೇಳುವುದೂ ನಿಶ್ಚಯ. ಆದರೆ ಈಗ ತಾನೇ ಬಿಲದಿಂದ ಇಲಿಯು ಹೊರಗೆ ಬಂದಿತು. ಒಡನೆಯೇ ಒಂದು ಗಿಡಗವು ಬಂದು ಅದನ್ನು ಕಚ್ಚಿಕೊಂಡು ಹೊರಟುಹೋಯಿತು. ಆದುದರಿಂದ ನೀವು ನಿರ್ಭಯವಾಗಿ ಬಿಲದೊಳಗೆ ಸೇರಿಕೊಳ್ಳಬಹುದು."

"ಅಮ್ಮ! ನೀನು ಹೇಳುತ್ತಿರುವಂತೆ ಗಿಡಗವು ಬಂದು ಇಲಿಯನ್ನು ಕಚ್ಚಿಕೊಂಡು ಹೋಯಿತೆಂಬ ವಿಷಯದಲ್ಲಿ ನಮಗೆ ನಿಶ್ಚಯವಿಲ್ಲ. ಮೇಲಾಗಿ ಈ ಬಿಲದಲ್ಲಿ ಒಂದೇ ಇಲಿಯು ಇತ್ತೆಂಬುದಕ್ಕೂ ಆಧಾರವಿಲ್ಲ. ಇನ್ನೂ ಅನೇಕ ಇಲಿಗಳು ಈ ಬಿಲದಲ್ಲಿರಲು ಸಾಧ್ಯವಿದೆ. ಅವುಗಳಿಂದ ನಮಗೆ ಪ್ರಾಣಭಯವಿದ್ದೇ ಇರುವುದು. ಒಂದು ವೇಳೆ ಅಗ್ನಿಯಿಂದ ನಮಗೆ ಭಯವಿರಲಾರದೆಂಬುದನ್ನೂ ಯೋಚಿಸಬಹುದಾಗಿದೆ. ಏಕೆಂದರೆ : ನಾವು ನೋಡುತ್ತಿರುವಂತೆ ಗಾಳಿಯು ಅಗ್ನಿಯ ಜ್ವಾಲೆಗಳನ್ನು ಅತ್ತಕಡೆಗೆ ಒಯ್ಯುತ್ತಿದೆ. ಆದುದರಿಂದ ನಾವು ಇಲ್ಲಿಯೇ ಉಳಿದರೆ, ಬದುಕಿದರೂ ಬದುಕಬಹುದು. ನೀನು ಹೇಳಿದಂತೆ ಬಿಲವನ್ನು ಹೊಕ್ಕರೆ, ಬಿಲವಾಸಿಗಳಿಂದ ನಮ್ಮ ವಿನಾಶವಂತೂ ನಿಶ್ಚಿತ. ಮರಣವು ನಿಶ್ಚಿತವೆಂಬ ಕಡೆಗೆ ಹೋಗುವುದಕ್ಕಿಂತಲೂ ಅನಿಶ್ಚಿತವೆಂಬ ಕಡೆಯಲ್ಲಿಯೇ ಇರುವುದು ಸೂಕ್ತವಲ್ಲವೇ? ಆದುದರಿಂದ ನಮ್ಮ ಚಿಂತೆಯನ್ನು ಬಿಟ್ಟು ನೀನು ತಪ್ಪಿಸಿಕೊಂಡು ಹೋಗುವುದು ಈಗಿನ ನಿನ್ನ ಮುಖ್ಯಕರ್ತವ್ಯವಾಗಿದೆ. ನೀನು ಜೀವಿಸಿದ್ದರೆ ನಮ್ಮಂತಹ ಇನ್ನೂ ಅನೇಕ ಮಕ್ಕಳನ್ನು ಪಡೆಯಬಹುದಮ್ಮಾ!"

ಜರಿತೆಯು ಪುನಃ ಹೇಳಿದಳು : "ಮಕ್ಕಳಿರಾ! ಒಂದು ದೊಡ್ಡ ಗಿಡಗವು ವೇಗವಾಗಿ ಬಿಲದ ಸಮೀಪಕ್ಕೆ ಬಂದುದನ್ನೂ ಮತ್ತು ಇಲಿಯನ್ನೆತ್ತಿಕೊಂಡು ಹಾರಿಹೋದುದನ್ನೂ ನಾನೇ ನೋಡಿದೆನು. ಅದು ಬಹಳ ವೇಗವಾಗಿ ಹಾರಿಹೋಗುತ್ತಿದ್ದಾಗ ಅದರ ಹಿಂದೆಯೇ ನಾನೂ ಹೋಗಿ ಬಿಲದಿಂದ ನಮ್ಮ ಶತ್ರುವಾದ ಇಲಿಯನ್ನು ಕಚ್ಚಿಕೊಂಡು ಹೋದುದಕ್ಕಾಗಿ – 'ನೀನು ಶತ್ರುರಹಿತನಾಗೆಂದೂ, ಸ್ವರ್ಗದಲ್ಲಿ ಸ್ವರ್ಣಶರೀರವನ್ನು ಪಡೆದು ಸುಖ ವಾಗಿರೆಂದೂ' – ಗಿಡಗವನ್ನು ಆಶೀರ್ವದಿಸಿದೆನು. ಗಿಡಗವು ಇಲಿಯನ್ನು ನುಂಗಿದ ಮೇಲೆಯೂ ನಾನು ಅದರ ಅನುಮತಿಯನ್ನು ಪಡೆದೇ ಹಿಂದಿರುಗಿದೆನು.

ಆದುದರಿಂದ ನೀವು ನಿರ್ಭಯವಾಗಿ ಈ ಬಿಲದೊಳಗೆ ಹೋಗಬಹುದು. ನೀವು ಸ್ವಲ್ಪವಾದರೂ ಭಯಪಡಬೇಕಾಗಿಲ್ಲ."

"ಅಮ್ಮಾ! ಗಿಡಗವು ಇಲಿಯನ್ನು ಕಚ್ಚಿಕೊಂಡು ಹೋಗಿರುವ ವಿಷಯವು ನಮಗೆ ನಿಶ್ಚಯವೆನಿಸುವವರೆಗೂ ನಾವು ಖಂಡಿತವಾಗಿಯೂ ಈ ಬಿಲದೊಳಗೆ ಹೋಗುವುದಿಲ್ಲ."

"ಗಿಡಗವು ಇಲಿಯನ್ನು ಕಚ್ಚಿಕೊಂಡು ಹೋದುದನ್ನು ನಿಶ್ಚಯವಾಗಿಯೂ ನಾನೇ ನೋಡಿರುವೆನು. ಮಕ್ಕಳಿರಾ! ನೀವು ಸ್ವಲ್ಪವೂ ಭಯಪಡಬೇಕಾಗಿಲ್ಲ. ನಾನು ಹೇಳಿದಂತೆ ಬಿಲದೊಳಗೆ ಒಡನೆಯೇ ಹೋಗಿರಿ."

"ಮಾತೆಯೇ! ಮಿಥ್ಯೋಪಚಾರಗಳಿಂದ ನಮ್ಮ ಭಯವನ್ನು ಹೋಗಲಾಡಿಸಲು ಪ್ರಯತ್ನಿಸಬೇಡ. ಬುದ್ಧಿಯು ಮಂಕಾಗಿರುವಾಗ ಮಾಡುವ ಕೆಲಸವು ಬುದ್ಧಿಪೂರ್ವಕವಾಗಿ ಮಾಡಿದಂತಾಗುವುದಿಲ್ಲ. ಮೇಲಾಗಿ ನಾವು ನಿನಗೆ ಯಾವ ಉಪಕಾರವನ್ನೂ ಮಾಡಿಲ್ಲ. ನಾವು ಹಿಂದೆ ಯಾರಾಗಿದ್ದೆವೆಂಬುದೂ ನಿನಗೆ ತಿಳಿಯದು. ಆದುದರಿಂದ ನೀನು ಇಷ್ಟು ಸಂಕಟವನ್ನಾದರೂ ಅನುಭವಿಸುತ್ತಾ ನಮ್ಮ ರಕ್ಷಣೆಗೆ ಪ್ರಯತ್ನಿಸುವೆಯೇಕೆ? ನಾವು ನಿನಗೇನಾಗಬೇಕು? ನೀನು ಸುಂದರಿಯಾಗಿಯೂ ಯುವತಿಯಾಗಿಯೂ ಇರುವೆ. ನಿನ್ನ ಪತಿಯನ್ನು ಹುಡುಕಲು ಸಮರ್ಥಳಾಗಿರುವೆ. ಆದುದರಿಂದ ನಮ್ಮ ಮೇಲಿನ ವ್ಯಾಮೋಹವನ್ನು ತೊರೆದು ಪತಿಯ ಸಮೀಪಕ್ಕೆ ಹೋಗು. ಪುನಃ ನೀನು ಅನೇಕ ಪುತ್ರರನ್ನು ಪಡೆಯಬಹುದು. ನಾವು ಅಗ್ನಿಯ ಜ್ವಾಲೆಗಳಿಗೆ ಸಿಕ್ಕಿ ಪ್ರಾಣತೊರೆದು ಒಳ್ಳೆಯ ಪುಣ್ಯಲೋಕಗಳನ್ನು ಪಡೆಯುವೆವು. ಒಂದು ವೇಳೆ ಅಗ್ನಿದೇವನು ನಮ್ಮನ್ನು ಭಸ್ಮಮಾಡದಿದ್ದರೆ, ಅಗ್ನಿಯು ಶಾಂತನಾದ ಮೇಲೆ ಪುನಃ ನೀನು ಇಲ್ಲಿಗೆ ಬಂದು ನಮ್ಮೊಡನೆ ಸೇರಿಕೊಳ್ಳಬಹುದಾಗಿದೆ."

ಪಕ್ಷಿಯ ರೂಪಗಳಲ್ಲಿದ್ದ ಜ್ಞಾನಿಗಳಾದ ಋಷಿಕುಮಾರರು ಹೇಳಿದ ಮಾತಿಗೆ ಜರಿತೆಯು ಏನು ತಾನೇ ಉತ್ತರಕೊಟ್ಟಾಳು? ಪುಟ್ಟಹಕ್ಕಿಗಳ ಮಾತಿನಂತೆ ಒಡನೆಯೇ ಹಾರಿ ಸುರಕ್ಷಿತವಾದ ಸ್ಥಳಕ್ಕೆ ಹೋದಳು. ಅಗ್ನಿದೇವನು ಬಹಳ ವೇಗದಿಂದಲೂ, ರಭಸದಿಂದಲೂ, ಮಹಾಜ್ವಾಲೆಗಳಿಂದಲೂ ಕೂಡಿದವನಾಗಿ ಮಂದಪಾಲನ ಮಕ್ಕಳ ಸಮೀಪಕ್ಕೆ ಬಂದನು.

ಪುಟ್ಟಹಕ್ಕಿಗಳು ಅಗ್ನಿಗೆ ಕೇಳಿಸುವಂತೆ ಪರಸ್ಪರವಾಗಿ ಮಾತನಾಡಲು ಪ್ರಾರಂಭಿಸಿದುವು."

೨೩೧ನೆಯ ಅಧ್ಯಾಯವು ಮುಗಿಯಿತು.

೨೩೨ನೆಯ ಅಧ್ಯಾಯ ಮಯದರ್ಶನಪರ್ವ (ಮುಂದುವರಿದಿದೆ.)

## ಋಷಿಕುಮಾರರಿಂದ (ಶಾರ್ಙ್ಗಪಕ್ಷಿಗಳಿಂದ) ಅಗ್ನಿಯ ಪ್ರಾರ್ಥನೆ : ಅಗ್ನಿಯಿಂದ ಅಭಯಪ್ರದಾನ

"ಮಹಾರಾಜ! ಮೊದಲು ಜರಿತಾರಿಯು ಹೇಳಿದನು :

ಪುರತಃ ಕೃಚ್ಛ್ರಕಾಲಸ್ಯ ಧೀಮಾಞ್ಜಾಗರ್ತಿ ಪೂರುಷಃ ।
ಸ ಕೃಚ್ಛ್ರಕಾಲಂ ಸಮ್ಪ್ರಾಪ್ಯ ವ್ಯಥಾಂ ನೈವೈತಿ ಕರ್ಹಿಚಿತ್ ॥೧॥

ಯಸ್ತು ಕೃಚ್ಛ್ರಮನುಪ್ರಾಪ್ತಂ ವಿಚೇತಾ ನಾವಬುಧ್ಯತೇ ।
ಸ ಕೃಚ್ಛ್ರಕಾಲೇ ವ್ಯಥಿತೋ ನ ಶ್ರೇಯೋ ವಿನ್ದತೇ ಮಹತ್ ॥೨॥

"ಬುದ್ಧಿವಂತನಾದವನು ಕಷ್ಟಕಾಲವು ಒದಗುವ ಮೊದಲೇ ಧೈರ್ಯದಿಂದ ಜಾಗ್ರತನಾಗುತ್ತಾನೆ. ಅಂತಹವನು ಕಷ್ಟವು ಸನ್ನಿಹಿತವಾಯಿತೆಂದು ಸಂಕಟಪಡುವುದಿಲ್ಲ. ಮುಂಬರುವ ಸಂಕಟಸಮಯವನ್ನು ತಿಳಿಯದ ಮೂಢಚಿತ್ತನು ಕಷ್ಟಕಾಲವು ಸನ್ನಿಹಿತವಾದೊಡನೆಯೇ ಸಂಕಟಕ್ಕೊಳಗಾಗುತ್ತಾನೆ. ಅಂತಹವನಿಗೆ ಶ್ರೇಯಃ-ಪ್ರೇಯಗಳುಂಟಾಗುವುದಿಲ್ಲ."

ಸಾರಿಸೃಕ್ಕನು ಅಣ್ಣನನ್ನು ಶ್ಲಾಘಿಸುತ್ತಾ ಹೇಳಿದನು :

ಧೀರಸ್ತ್ವಮಸಿ ಮೇಧಾವೀ ಪ್ರಾಣಕೃಚ್ಛ್ರಮಿದಂ ಚ ನಃ ।
ಪ್ರಾಜ್ಞಃ ಶೂರೋ ಬಹೂನಾಂ ಹಿ ಭವತ್ಯೇಕೋ ನ ಸಂಶಯಃ ॥೩॥

"ಅಣ್ಣ! ನೀನು ಸಹನೆಯುಳ್ಳವನೂ, ಧೀಮಂತನೂ ಆಗಿರುವೆ. ಈಗ ನಮಗೆ ಮರಣಕಾಲವು ಸನ್ನಿಹಿತವಾಗಿದೆ. ಆದರೆ ಅನೇಕರಲ್ಲಿ ಒಬ್ಬಿಬ್ಬರು ಮಾತ್ರ ನೀನು ಹೇಳಿದಂತೆ ಧೀಮಂತರೂ, ಧೈರ್ಯವಂತರೂ ಆಗಿರುತ್ತಾರೆ. ಅಲ್ಲವೇ?"

ಸ್ತಂಬಮಿತ್ರನು–'ಹಿರಿಯಣ್ಣನು ತಂದೆಗೆ ಸಮಾನನು'–ಎಂಬುದನ್ನು ಸ್ಮರಿಸುತ್ತಾನೆ :

**ಜ್ಯೇಷ್ಠಸ್ತಾತೋ ಭವತಿ ವೈ ಜ್ಯೇಷ್ಠೋ ಮುಞ್ಚತಿ ಕೃಚ್ಛ್ರತಃ ।**
**ಜ್ಯೇಷ್ಠಶ್ಚೇನ್ನ ಪ್ರಜಾನಾತಿ ಕನೀಯಾನ್ಕಿಂ ಕರಿಷ್ಯತಿ ॥೪॥**

"ಜನ್ಮದಾತನಾದ ತಂದೆಯಿಲ್ಲದಿರುವಾಗ ಹಿರಿಯಣ್ಣನೇ ತಂದೆಯಂತೆ ಕಿರಿಯರಿಗೆ ರಕ್ಷಕನು. ಅವನೇ ಕಿರಿಯರನ್ನು ಅಪಾಯದಿಂದ ಪಾರುಮಾಡಬೇಕು. ಹಿರಿಯಣ್ಣನೇ ಸುಮ್ಮನಿದ್ದುಬಿಟ್ಟರೆ ಕಿರಿಯರು ಏನು ತಾನೇ ಮಾಡಿಯಾರು?"

ಕಡೆಯದಾಗಿ ದ್ರೋಣನು ಹೇಳುತ್ತಾನೆ :

**ಹಿರಣ್ಯರೇತಾಸ್ತ್ವರಿತೋ ಜ್ವಲನ್ನಾಯಾತಿ ನಃ ಕ್ಷಯಮ್ ।**
**ಸಪ್ತಜಿಹ್ವಾನನಃ ಕ್ರೂರೋ ಲೇಲಿಹಾನೋ ವಿಸರ್ಪತಿ ॥೫॥**

"ಪ್ರಾಣಾಪಾಯವು ಸನ್ನಿಹಿತವಾಗುತ್ತಿದೆ. ಕ್ರೂರನಾದ ಅಗ್ನಿದೇವನು ಏಳು ಮುಖಗಳಿಂದಲೂ ಏಳು ನಾಲಿಗೆಗಳನ್ನೂ ಚಾಚಿ ಪ್ರಜ್ವಲಿಸುತ್ತಾ, ಹಾದಿಯಲ್ಲಿರುವ ವಸ್ತುಗಳನ್ನು ತನ್ನ ಸಪ್ತಜಿಹ್ವೆಗಳಿಂದಲೂ ಸವಿಯುತ್ತಾ ನಮ್ಮನ್ನೇ ಸಮೀಪಿಸುತ್ತಿದ್ದಾನೆ."

ತಮ್ಮ-ತಮ್ಮ ಮನಸ್ಸುಗಳಲ್ಲಿದ್ದ ಅಭಿಪ್ರಾಯಗಳನ್ನು ಮೇಲೆ ಹೇಳಿದಂತೆ ತಿಳಿಸಿದನಂತರ, ಪಕ್ಷಿರೂಪಗಳಲ್ಲಿದ್ದ ನಾಲ್ವರು ಋಷಿಕುಮಾರರೂ ಮುಂದೇನು ಮಾಡಬೇಕೆಂಬುದನ್ನು ನಿಶ್ಚಯಿಸಿದರು. ಜರಿತಾರಿಯೇ ಮೊದಲು ಅಗ್ನಿದೇವನನ್ನು ಪ್ರಾರ್ಥಿಸಿದನು :

**ಆತ್ಮಾಸಿ ವಾಯೋರ್ಜ್ವಲನ ಶರೀರಮಸಿ ವೀರುಧಾಮ್ ।**
**ಯೋನಿರಾಪಶ್ಚ ತೇ ಶುಕ್ರಂ ಯೋನಿಸ್ತ್ವಮಸಿ ಚಾಮ್ಭಸಃ ॥೭॥**

"ಅಗ್ನಿದೇವನೇ! ನೀನು ವಾಯುವಿಗೆ ಆತ್ಮಸ್ವರೂಪನಾಗಿದ್ದೀಯೆ. ಲತಾದಿ ಸ್ಥಾವರಗಳಿಗೂ ನೀನು ಶರೀರರೂಪನಾಗಿಯೇ ಇರುವೆ. ಭೂಮಿಯೂ ಮತ್ತು ನೀರೂ ನಿನ್ನಿಂದ ಉತ್ಪನ್ನವಾಗಿವೆ. 'ಅಗ್ನೇರಾಪಃ' ಎಂಬ ಶ್ರುತಿಯಂತೆ ನೀರಿಗೆ ನೀನೇ ಕಾರಣನಾಗಿದ್ದೀಯೆ.

**ಊರ್ಧ್ವಂ ಚಾಧಶ್ಚ ಸರ್ಪನ್ತಿ ಪೃಷ್ಠತಃ ಪಾರ್ಶ್ವತಸ್ತಥಾ ।**
**ಅರ್ಚಿಷಸ್ತೇ ಮಹಾವೀರ್ಯ ರಶ್ಮಯಃ ಸವಿತುರ್ಯಥಾ ॥೮॥**

ಎಲೈ ಮಹಾಪ್ರಭಾವಶಾಲಿಯಾದ ಅಗ್ನಿಯೇ! ಸೂರ್ಯನ ಕಿರಣಗಳಂತೆಯೇ ನಿನ್ನ ಜ್ವಾಲೆಗಳೂ ಮೇಲೆ, ಕೆಳಗೆ, ಹಿಂಭಾಗ ಮತ್ತು ಪಾರ್ಶ್ವಭಾಗಗಳಲ್ಲಿ ವ್ಯಾಪಿಸುತ್ತವೆ. ಅವುಗಳಿಂದ ನಮ್ಮನ್ನು ಕಾಪಾಡು."

ಅನಂತರ ಸಾರಿಸೃಕ್ಕನು ಪ್ರಾರ್ಥಿಸಿದನು :

**ಮಾತಾ ಪ್ರಣಷ್ಟಾ ಪಿತರಂ ನ ವಿದ್ಮಃ**
**ಪಕ್ಷಾ ಜಾತಾ ನೈವ ನೋ ಧೂಮಕೇತೋ ।**
**ನ ನಸ್ತ್ರಾತಾ ವಿದ್ಯತೇ ವೈ ತ್ವದನ್ಯ-**
**ಸ್ತಸ್ಮಾದಸ್ಮಾಂಸ್ತ್ರಾಹಿ ಬಾಲಾಂಸ್ತ್ವಮಗ್ನೇ ॥೯॥**

"ನಮ್ಮ ತಾಯಿಯು ನಮ್ಮನ್ನು ಬಿಟ್ಟು ಕಣ್ಮರೆಯಾಗಿ ಹೋದಳು. ನಾವು ನಮ್ಮ ತಂದೆಯು ಎಲ್ಲಿದ್ದಾನೆಂಬುದನ್ನು ತಿಳಿದೇ ಇಲ್ಲ. ಎಲೈ ಧೂಮಧ್ವಜನೇ! ಅನಲನೇ! ನಮಗಿನ್ನೂ ರೆಕ್ಕೆಗಳೂ ಸರಿಯಾಗಿ ಹುಟ್ಟಿಲ್ಲ. ನಿನ್ನ ಹೊರತಾಗಿ ನಮಗೆ ಬೇರೆ ಯಾರೂ ರಕ್ಷಕರಿಲ್ಲ. ಎಲೈ ಅಗ್ನಿಯೇ! ಬಾಲಕರಾದ ನಮ್ಮನ್ನು ಕಾಪಾಡು.

**ಯದಗ್ನೇ ತೇ ಶಿವಂ ರೂಪಂ ಯೇ ಚ ತೇ ಸಪ್ತ ಹೇತಯಃ ।**
**ತೇನ ನಃ ಪರಿಪಾಹಿ ತ್ವಮಾರ್ತಾನ್ನೈ ಶರಣೈಷಿಣಃ ॥೧೦॥**

ಎಲೈ ಅಗ್ನಿಯೇ! ನಿನ್ನ ಯಾವ ರೂಪವು ಲೋಕಹಿತಕರವಾಗಿಯೂ, ಶಾಂತವಾಗಿಯೂ ಇದೆಯೋ-ಅದರಿಂದಲೂ ಮತ್ತು ನಿನ್ನ ಕಾಲೀ-ಕರಾಲೀ ಮೊದಲಾದ ಏಳು ಜ್ವಾಲೆಗಳಿಂದಲೂ ನಮ್ಮನ್ನು ಕಾಪಾಡು. ನಿನ್ನ ಜ್ವಾಲೆಗಳು ನಮ್ಮನ್ನು ಸುಡದಿರಲಿ ಮತ್ತು ನಿನ್ನ ಶಾಂತವಾದ ರೂಪದಿಂದ ನಮ್ಮನ್ನು ಕಾಪಾಡು. ನಾವು ಭಯಗ್ರಸ್ತರಾಗಿ ನಿನ್ನನ್ನೇ ಶರಣುಹೊಂದಿರುವೆವು.

**ತ್ವಮೇವೈಕಸ್ತಪಸೇ ಜಾತವೇದೋ**
**ನಾನ್ಯಸ್ತಪ್ತಾ ವಿದ್ಯತೇ ಗೋಷು ದೇವ ।**

ಋಷೀನಸ್ಮಾನ್ಬಾಲಕಾನ್ಪಾಲಯಸ್ವ
ಪರೇಣಾಸ್ಮಾಂಸ್ತ್ರಾಹಿ ವೈ ಹವ್ಯವಾಹ ॥೧೧॥

ಜಾತವೇದಸನೇ! ಯಾರ ಸಹಾಯವೂ ಇಲ್ಲದೇ ಲೋಕಕ್ಕೆ ಬೇಕಾಗಿರುವ ತಾಪವೆಂಬ ಕಾರ್ಯವನ್ನು ನೀನೊಬ್ಬನೇ ಉಂಟುಮಾಡುತ್ತಿರುವೆ. ಸೂರ್ಯರಶ್ಮಿಗಳಲ್ಲಿಯೂ ನಿನ್ನ ಹೊರತು ಬೇರೆ ಯಾರೂ ತಾಪವನ್ನುಂಟುಮಾಡುವವರಿಲ್ಲ. ಬಾಲಕರೂ, ಋಷಿಗಳೂ ಆದ ನಮ್ಮನ್ನು ಕಾಪಾಡು. ಎಲೈ ದೇವತೆಗಳಿಗೆ ಹವಿಸ್ಸನ್ನು ಒಯ್ಯುವವನೇ! ನಮ್ಮನ್ನು ಬಿಟ್ಟು ದೂರಕ್ಕೆ ಹೋಗು."

ಅನಂತರ ಸ್ತಂಬಮಿತ್ರನು ಪ್ರಾರ್ಥಿಸುತ್ತಾನೆ :

ಸರ್ವಮಗ್ನೇ ತ್ವಮೇವೈಕಸ್ತ್ವಯಿ ಸರ್ವಮಿದಂ ಜಗತ್ ।
ತ್ವಂ ಧಾರಯಸಿ ಭೂತಾನಿ ಭುವನಂ ತ್ವಂ ಬಿಭರ್ಷಿ ಚ ॥೧೨॥

"ಎಲೈ ಅಗ್ನಿಯೇ! ಕಾಣಿಸುತ್ತಿರುವ ಈ ಸಮಸ್ತಪ್ರಪಂಚವನ್ನೂ ನೀನೊಬ್ಬನೇ ವ್ಯಾಪಿಸಿರುವೆ. ಈ ಸಮಸ್ತಪ್ರಪಂಚವೂ ನಿನ್ನಲ್ಲಿಯೇ ಇದೆ. ನೀನು ಸಮಸ್ತಭೂತಗಳನ್ನೂ–ಪ್ರಪಂಚವನ್ನೂ ಧರಿಸಿ ಪೋಷಿಸುವೆ.

ತ್ವಮಗ್ನಿರ್ಹವ್ಯವಾಹಸ್ತ್ವಂ ತ್ವಮೇವ ಪರಮಂ ಹವಿಃ ।
ಮನೀಷಿಣಸ್ತ್ವಾಂ ಜಾನನ್ತಿ ಬಹುಧಾ ಚೈಕಧಾಪಿ ಚ ॥೧೩॥

ನೀನು ಪಾಪಪರಿಹಾರಕನಾದುದರಿಂದ ಅಗ್ನಿಯೆಂದೂ, ದೇವತೆಗಳಿಗೆ ಹವಿಸ್ಸನ್ನು ಒಯ್ಯುವವನಾದುದರಿಂದ ಹವ್ಯವಾಹನನೆಂದೂ ಹೇಳಿಸಿಕೊಳ್ಳುತ್ತಿರುವೆ. ನೀನೇ ಉತ್ತಮವಾದ ಹವಿಸ್ಸಿನಂತೆ ಇರುವೆ. ಜ್ಞಾನಿಗಳು ನಿನ್ನನ್ನು ಅನೇಕರೂಪಗಳುಳ್ಳವನೆಂದೂ, ಮೂಲತಃ ಏಕರೂಪಿಯೆಂದೂ ತಿಳಿಯುತ್ತಾರೆ.

ಸೃಷ್ಟ್ವಾ ಲೋಕಾಂಸ್ತ್ರೀನಿಮಾನ್ಹವ್ಯವಾಹ
ಕಾಲೇ ಪ್ರಾಪ್ತೇ ಪಚಸಿ ಪುನಃ ಸಮಿದ್ಧಃ ।
ತ್ವಂ ಸರ್ವಸ್ಯ ಭುವನಸ್ಯ ಪ್ರಸೂತಿ-
ಸ್ತ್ವಮೇವಾಗ್ನೇ ಭವಸಿ ಪುನಃ ಪ್ರತಿಷ್ಠಾ ॥೧೪॥

ಎಲೈ ಹವ್ಯವಾಹನನೇ! ನೀನು ಈ ಮೂರು ಲೋಕಗಳನ್ನೂ ಸೃಷ್ಟಿಸಿ ಸಂಹಾರಕಾಲವು ಬಂದಾಗ ದೀಪ್ತನಾಗಿ ಸಂಹಾರಮಾಡುವೆ. ಹೀಗೆ ಸಮಸ್ತ ಪ್ರಪಂಚಕ್ಕೂ ಉತ್ಪತ್ತಿಕಾರಣನಾಗಿಯೂ, ಸ್ಥಿತಿಕಾರಣನಾಗಿಯೂ, ಪುನಃ ಲಯಕರ್ತನಾಗಿಯೂ ನೀನೇ ವಿರಾಜಿಸುತ್ತಿರುವೆ."

ಕಡೆಯಲ್ಲಿ ದ್ರೋಣನು ಪ್ರಾರ್ಥಿಸುತ್ತಾನೆ :

ತ್ವಮನ್ನಂ ಪ್ರಾಣಿಭಿರ್ಭುಕ್ತಮನ್ತರ್ಭೂತೋ ಜಗತ್ಪತೇ ।
ನಿತ್ಯಪ್ರವೃದ್ಧಃ ಪಚಸಿ ತ್ವಯಿ ಸರ್ವಂ ಪ್ರತಿಷ್ಠಿತಮ್ ॥೧೫॥

"ಎಲೈ ಜಗತ್ಸ್ವಾಮಿಯೇ! ನೀನು ಪ್ರಾಣಿಗಳಿಂದ ತಿನ್ನಲ್ಪಟ್ಟ ಆಹಾರವನ್ನು ಆ ಪ್ರಾಣಿಗಳ ಜಠರಗಳಲ್ಲಿ ಸೂಕ್ಷ್ಮರೂಪದಿಂದ ಯಾವಾಗಲೂ ಇದ್ದುಕೊಂಡು ಜೀರ್ಣವಾಗುವಂತೆ ಮಾಡುವೆ. ಆದುದರಿಂದ ಸಮಸ್ತಪ್ರಪಂಚವೂ ನಿನ್ನನ್ನೇ ಆಶ್ರಯಿಸಿಕೊಂಡಿದೆ.

ಸೂರ್ಯೋ ಭೂತ್ವಾ ರಶ್ಮಿಭಿರ್ಜಾತವೇದೋ
ಭೂಮೇರಮ್ಭೋ ಭೂಮಿಜಾತಾನ್ರಸಾಂಶ್ಚ ।
ವಿಶ್ವಾನಾದಾಯ ಪುನರುತ್ಸೃಜ್ಯ ಕಾಲೇ
ದೃಷ್ಟ್ವಾವೃಷ್ಟ್ಯಾ ಭಾವಯಸೀಹ ಶುಕ್ರ ॥೧೬॥

ಎಲೈ ಅಗ್ನಿಯೇ! ತೇಜಸ್ವಿಯಾದ ನೀನು ಸೂರ್ಯನಾಗಿ ಕಿರಣಗಳಿಂದ ಭೂಮಿಯಲ್ಲಿರುವ ನೀರನ್ನೂ-ಭೂಮಿಯಲ್ಲಿ ಉದ್ಭವಿಸುವ ಎಲ್ಲ ರಸಗಳನ್ನೂ ಹೀರಿ, ಪುನಃ ಯೋಗ್ಯವಾದ ಕಾಲದಲ್ಲಿ ಆ ನೀರನ್ನು-ಸರಿಯಾಗಿ ತಿಳಿದು ನೋಡಿ-ಮಳೆಯ ಮೂಲಕ ಸುರಿಸಿ ಸಮಸ್ತಪ್ರಪಂಚವನ್ನೂ ಆನಂದಗೊಳಿಸುವೆ.

ತ್ವತ್ತ ಏತಾಃ ಪುನಃ ಶುಕ್ರ ವೀರುಧೋ ಹರಿತಚ್ಛದಾಃ ।
ಜಾಯನ್ತೇ ಪುಷ್ಕರಿಣ್ಯಶ್ಚ ಸುಭದ್ರಶ್ಚ ಮಹೋದಧಿಃ ॥೧೭॥

ಎಲೈ ತೇಜಸ್ವಿಯಾದ ಅಗ್ನಿಯೇ! ಹಸುರಾದ ಎಲೆಗಳುಳ್ಳ ಲತೆಗಳೂ, ಒಳ್ಳೆಯ ನೀರುಳ್ಳ ಸರೋವರಗಳೂ, ಅತ್ಯಂತಮಂಗಳಕರವಾದ ಸಮುದ್ರವೂ ನಿನ್ನಿಂದಲೇ ಉಂಟಾಗುತ್ತವೆ.

**ಇದಂ ವೈ ಸದ್ಮ ತಿಗ್ಮಾಂಶೋ ವರುಣಸ್ಯ ಪರಾಯಣಮ್ ।**
**ಶಿವಸ್ತ್ರಾತಾ ಭವಾಸ್ಮಾಕಂ ಮಾಸ್ಮಾನದ್ಯ ವಿನಾಶಯ ॥೧೮॥**

ಎಲೈ ತೀಕ್ಷ್ಣವಾದ ಕಿರಣಗಳುಳ್ಳ (ಜ್ವಾಲೆಗಳುಳ್ಳ) ಅಗ್ನಿದೇವನೇ! ಈ ನಮ್ಮ ಶರೀರರೂಪವಾದ ಮನೆಯು ರಸನೇಂದ್ರಿಯಾಧಿಪತಿಯಾದ ವರುಣನಿಗೆ ಆಶ್ರಯಭೂತವಾಗಿದೆ. (ಸಮುದ್ರವು ವರುಣನ ಮನೆಯಾಗಿದೆ. ವರುಣಾಲಯವಾದ ಸಮುದ್ರವು ಬಡಬಾನಲರೂಪವಾದ ನಿನಗೆ ಆಶ್ರಯವಾಗಿದೆ.) ನೀನು ನಮಗೆ ಮಂಗಳಕರನೂ ರಕ್ಷಕನೂ ಆಗು. ನಮ್ಮನ್ನು ಈಗ ನಾಶಮಾಡಬೇಡ.

**ಪಿಙ್ಗಾಕ್ಷ ಲೋಹಿತಗ್ರೀವ ಕೃಷ್ಣವರ್ತ್ಮನ್ಹುತಾಶನ ।**
**ಪರೇಣ ಪ್ರೇಹಿ ಮುಞ್ಚಾಸ್ಮಾನ್ಸಾಗರಸ್ಯ* ಗೃಹಾನಿವ ॥೧೯॥**

ಪಿಂಗಳವರ್ಣದ ಕಣ್ಣುಗಳುಳ್ಳ, ಕೆಂಪಾದ ಕುತ್ತಿಗೆಯಿಂದ ಕೂಡಿರುವ, ಧೂಮವೇ ದಾರಿಯಾಗಿರುವ ಹುತವಹನೇ! ದೂರದಿಂದಲೇ ಹೋಗು. ಸಮುದ್ರದಲ್ಲಿರುವ ಪ್ರಾಣಿಗಳನ್ನು ಬಡಬಾಗ್ನಿಯು ಸುಡದಂತೆ–ನಮ್ಮನ್ನೂ ಬಿಟ್ಟುಬಿಡು."

ಬ್ರಹ್ಮಜ್ಞಾನಿಯಾದ ದ್ರೋಣನ ಮಾತುಗಳನ್ನು ಕೇಳಿ ಅಗ್ನಿದೇವನು ಸುಪ್ರೀತನಾದನು. ಮಂದಪಾಲನು ತನ್ನ ಮಕ್ಕಳ ವಿಷಯವಾಗಿ ಹೇಳಿದ ಮಾತುಗಳೂ ಮತ್ತು ಮಂದಪಾಲನಿಗೆ ತಾನು ಅಭಯಪ್ರದಾನ ಮಾಡಿರುವುದೂ ಅಗ್ನಿದೇವನ ಸ್ಮರಣೆಗೆ ಬಂದುವು. ಅಂತೆಯೇ ದ್ರೋಣನನ್ನು ಕುರಿತು ಹೇಳಿದನು :

"ದ್ರೋಣ! ನೀನು ಬ್ರಹ್ಮರ್ಷಿಯಾಗಿರುವೆ. ಆದುದರಿಂದ ನೀನು ಹೇಳಿರುವುದೂ ಬ್ರಹ್ಮವೇ ಆಗಿರುತ್ತದೆ. (ವೇದಪ್ರತಿಪಾದ್ಯವಾದ ವಿಷಯವೇ ಆಗಿರುತ್ತದೆ.) ನಾನು ನಿನಗೆ ಇಷ್ಟವಾಗುವುದನ್ನೇ ಮಾಡುತ್ತೇನೆ. ಭಯ

---

* ಸಾಗರಸ್ಯ ಗೃಹಾನಿವ = ಗೃಹ ಎಂಬುದಕ್ಕೆ–'ಮನೆಯಲ್ಲಿ ಯಾವಾಗಲೂ ಇರುವ ಪರಿವಾರದವರು' –ಎಂದೂ ಅರ್ಥವಾಗುತ್ತದೆ. ಸಾಗರದ ಪರಿವಾರವೆಂದರೆ ಜಲಚರ ಪ್ರಾಣಿಗಳು.

ಪಡುವ ಕಾರಣವಿಲ್ಲ. ಮಂದಪಾಲನೂ ನಿಮ್ಮ ಪ್ರಾಣಗಳನ್ನುಳಿಸಬೇಕೆಂದು ಕೇಳಿಕೊಂಡಿರುವನು. ಅವನು ಹೇಳಿದ ಮಾತುಗಳೂ ಮತ್ತು ನೀವು ಮಾಡಿದ ಸ್ತೋತ್ರಗಳೂ ನನ್ನನ್ನು ನಿಮ್ಮ ವಿಷಯದಲ್ಲಿ ಹೆಚ್ಚು ಗೌರವವುಳ್ಳವನನ್ನಾಗಿ ಮಾಡಿವೆ. ನೀವು ಮಾಡಿರುವ ಸ್ತೋತ್ರದಿಂದ ನಾನು ಸುಪ್ರೀತನಾಗಿದ್ದೇನೆ. ನಿಮಗೆ ಮಂಗಳವಾಗಲಿ. ನಾನು ನಿಮಗೇನು ಮಾಡಬೇಕೆಂಬುದನ್ನು ತಿಳಿಸು. ಮಾಡಿಕೊಡುವೆನು."

ದೇವನು ಸುಪ್ರೀತನಾದಾಗ ಏನು ಬೇಕಾದರೂ ಕೇಳಬಹುದಲ್ಲವೇ? ಅಗ್ನಿದೇವನು ಹೆದರಬೇಡಿರೆಂದು ಅಭಯಪ್ರದಾನಮಾಡಿರುವನು. ಆದುದರಿಂದ ಅಗ್ನಿದೇವನಿಂದ ಪ್ರಾಣಾಪಹಾರವಾಗುವ ಭಯವಂತೂ ಇಲ್ಲ. ಆದರೆ ಬೆಕ್ಕುಗಳಿಂದ ಪ್ರಾಪ್ತವಾಗುವ ಭಯವಿದೆ.

ದ್ರೋಣನು ಅಗ್ನಿದೇವನನ್ನು ಕುರಿತು ಹೇಳಿದನು : "ಓ ಶುಕ್ರ! ನಮ್ಮ ಸಮೀಪದಲ್ಲಿರುವ ಕಾಡುಬೆಕ್ಕುಗಳು ನಮಗೆ ಪ್ರತಿನಿತ್ಯವೂ ತೊಂದರೆಯನ್ನು ಕೊಡುತ್ತಿವೆ. ಆದುದರಿಂದ ನೀನು ದಯಮಾಡಿ ಇಲ್ಲಿರುವ ಬೆಕ್ಕುಗಳನ್ನು ಅವುಗಳ ಬಂಧು-ಮಿತ್ರಸಮೇತವಾಗಿ ನಾಶಮಾಡು."

ಯಜ್ಞೇಶ್ವರನು ಪಕ್ಷಿರೂಪದಲ್ಲಿದ್ದ ದ್ರೋಣನು ಹೇಳಿದಂತೆಯೇ ಬೆಕ್ಕುಗಳ ಸಮೂಹವನ್ನು ವಿನಾಶಗೊಳಿಸಿ, ಋಷಿಕುಮಾರರನ್ನು ಮುಟ್ಟದೆಯೇ ಮುಂದೆ ನಡೆದು ಅಖಂಡಖಾಂಡವವನವನ್ನೂ ಭಸ್ಮಮಾಡಿದನು."

೨೩೨ನೆಯ ಅಧ್ಯಾಯವು ಮುಗಿಯಿತು.

೨೩೩ನೆಯ ಅಧ್ಯಾಯ — ಮಯದರ್ಶನಪರ್ವ (ಮುಂದುವರಿದಿದೆ)

## ಪತ್ನೀ-ಪುತ್ರರೊಡನೆ ಮಂದಪಾಲನ ಪುನರ್ಮಿಲನ

"ಜನಮೇಜಯ! ಮಂದಪಾಲಮಹರ್ಷಿಗೆ ತನ್ನ ಮಕ್ಕಳ ವಿಷಯವಾಗಿ ಯೋಚನೆಯು ಹತ್ತಿತ್ತು. ಮಕ್ಕಳ ರಕ್ಷಣೆಗಾಗಿ ಅಗ್ನಿದೇವನನ್ನು ಪ್ರಾರ್ಥಿಸಿದಾಗ ಅಗ್ನಿಯು ಅಭಯಪ್ರದಾನಮಾಡಿದ್ದರೂ ಪುತ್ರವ್ಯಾಮೋಹವು ಮಂದಪಾಲನನ್ನು ಭ್ರಾಂತಿಗೊಳಿಸಿತು. ಅವನಿಗೆ ಮನಃಶಾಂತಿಯೇ ಇರಲಿಲ್ಲ. ಲಪಿತೆಯೊಡನೆ ಸರಸ-ಸಲ್ಲಾಪಗಳೂ ಬೇಕಾಗಲಿಲ್ಲ. ಕುಂದಿದ ಮುಖಭಾವವನ್ನು ಹೊಂದಿ ಲಪಿತೆಯೊಡನೆ ಹೇಳಿದನು :

"ಲಪಿತೇ! ನನ್ನ ಮಕ್ಕಳಿಗೆ ಚಲಿಸಲು ಕೂಡ ಸಾಮರ್ಥ್ಯವಿಲ್ಲ. ಅಗ್ನಿಯು ಪ್ರಜ್ವಲಿಸುತ್ತಿರುವಾಗ–ಅಗ್ನಿಸಖನಾದ ವಾಯುವು ಜ್ವಾಲೆಗಳನ್ನು ನನ್ನ ಮಕ್ಕಳೆಡೆಗೆ ಒಯ್ಯುವಾಗ–ನಿಶ್ಚಯವಾಗಿಯೂ ಆ ಮಕ್ಕಳು ತಮ್ಮ ಪ್ರಾಣರಕ್ಷಣೆಯನ್ನು ಮಾಡಿಕೊಳ್ಳಲು ಸಮರ್ಥರಾಗುವರೇ? ಖಂಡಿತ ವಾಗಿಯೂ ಸಮರ್ಥರಲ್ಲ. ಅವರ ತಾಯಿಯು ತಾನೇ ಹೇಗೆ ತನ್ನ ಮಕ್ಕಳನ್ನು ರಕ್ಷಣೆಮಾಡಿಯಾಳು? ತನ್ನ ಮಕ್ಕಳ ರಕ್ಷಣೆಯ ಮಾರ್ಗವನ್ನು ಕಾಣದೇ ಆ ಸಾಧ್ವಿಯು ಬಹಳ ದುಃಖಕ್ಕೀಡಾಗಿರಬೇಕು. ಹಾರಲು ಅಶಕ್ತರಾದ ಮರಿಗಳು ಅಗ್ನಿಯ ಜ್ವಾಲೆಗಳಲ್ಲಿ ಸಿಕ್ಕುತ್ತಿರುವುದನ್ನು ಕಂಡು ತಾಯಿಯು ಬಹಳವಾಗಿ ರೋದಿಸಿರಬಹುದಲ್ಲವೇ? ಅಯ್ಯೋ! ನನ್ನ ಮಗನಾದ ಜರಿತಾರಿಯು ಏನಾದನೋ? ಸಾರಿಸೃಕ್ಕನೇನಾದನೋ? ಸ್ತಂಬಮಿತ್ರ ಮತ್ತು ದ್ರೋಣರ ಪಾಡು ಏನಾಯಿತೋ? ಅಸಹಾಯಕಳಾದ, ಅವರ ತಾಯಿಯ ಅವಸ್ಥೆಯೇನಾಗಿದೆಯೋ? ತಿಳಿಯದಲ್ಲಾ, ಅಯ್ಯೋ!"

ಹೀಗೆಲ್ಲಾ ಹೇಳಿಕೊಂಡು ರೋದನಮಾಡುತ್ತಿದ್ದ ಮಂದಪಾಲನನ್ನು ಕುರಿತು ಲಪಿತೆಯು ಮಾತ್ಸರ್ಯದಿಂದ ಹೇಳಿದಳು: "ಮಂದಪಾಲ! ಹೀಗೇಕೆ ಅಳುತ್ತಿರುವೆ? ನಿನ್ನ ಅಳುವಿನ ಗುಟ್ಟು ನನಗೆ ತಿಳಿಯದೇ ಇಲ್ಲ. ನಿನ್ನ ಮಕ್ಕಳಿಗಾಗಿ ನೀನು ಅಳುತ್ತಿರುವೆಯಾ? ನಿನ್ನ ಮಕ್ಕಳ ವಿಷಯವಾಗಿ ನೀನು ಸ್ವಲ್ಪವಾದರೂ ಭ್ರಾಂತನಾಗಬೇಕಾಗಿಲ್ಲ. ಏಕೆಂದರೆ: 'ನನ್ನ ಮಕ್ಕಳು ಋಷಿ ಗಳೆಂದೂ, ಮಹಾಸತ್ತ್ವವುಳ್ಳವರೆಂದೂ'–ನೀನೇ ಹೇಳಿರುವೆಯಲ್ಲವೇ? ಅಗ್ನಿ ಸಮಾನರಾದ ನಿನ್ನ ಮಕ್ಕಳಿಗೆ ಅಗ್ನಿಯ ಭಯವೆಲ್ಲಿಯದು? ಮೇಲಾಗಿ ನನ್ನೆದುರಿನಲ್ಲಿಯೇ ನೀನು ನಿನ್ನ ಮಕ್ಕಳ ವಿಷಯವಾಗಿ ಅಗ್ನಿದೇವನನ್ನು ಪ್ರಾರ್ಥಿಸಲಿಲ್ಲವೇ? ಮಹಾಮಹಿಮನಾದ ಅಗ್ನಿದೇವನೂ ನನ್ನೆದುರಿನಲ್ಲಿಯೇ ಮಕ್ಕಳನ್ನು ಸಂರಕ್ಷಿಸುವುದಾಗಿ ಅಭಯಪ್ರದಾನಮಾಡಲಿಲ್ಲವೇ? ಲೋಕ ಪಾಲಕರಲ್ಲೊಬ್ಬನಾದ ಯಜ್ಞೇಶ್ವರನು ತಾನು ಹೇಳಿದ ಮಾತನ್ನು ಎಂದಿಗೂ ಸುಳ್ಳಾಗಿ ಮಾಡಲಾರನು. ಆದುದರಿಂದ ನೀನು ಭ್ರಾಂತನಾಗಲು ಕಾರಣವೂ ಇಲ್ಲ ಮತ್ತು ನಿನ್ನ ತೋರಿಕೆಯ ರೋದನವು ಮಕ್ಕಳ ವಿಷಯವಾಗಿಯೂ ಇರುವುದಿಲ್ಲ. ನನ್ನ ಸವತಿಯಾದ ಜರಿತೆಯನ್ನು ನೆನೆದು ನೀನು ಭ್ರಾಂತ ನಾಗಿರುವೆ. ಹಿಂದೆ ನಿನಗೆ ನನ್ನ ಸಪತ್ನಿಯಲ್ಲಿ ಇದ್ದಷ್ಟು ಪ್ರೇಮ-ವಿಶ್ವಾಸ

ಗಳು ನನ್ನಲ್ಲಿ ಖಂಡಿತವಾಗಿಯೂ ಇಲ್ಲ. ನಿಶ್ಚಯ. ಇಬ್ಬರ ಮನಸ್ಸುಗಳನ್ನು ಆಕರ್ಷಿಸುವ ವ್ಯಕ್ತಿಯು–ತನ್ನಿಂದ ಆಕರ್ಷಿತರಾದ ಇಬ್ಬರಲ್ಲಿ ಒಬ್ಬರು ಸಂಕಟಕ್ಕೊಳಗಾದಾಗ ಕರುಣೆಯಿಂದ ಕಾಣುವುದು ಸಹಜವಾದರೂ ತನ್ನ ಸಮೀಪವರ್ತಿಯಾಗಿರುವ ಇನ್ನೊಬ್ಬರನ್ನು ಮಾತ್ರ ಎಂದಿಗೂ ನಿರ್ಲಕ್ಷಿಸಬಾರದು. ಆದರೂ ಚಿಂತೆಯಿಲ್ಲ. ನಿನ್ನನ್ನು ಈಗ ವಿರಹದುಃಖಕ್ಕೀಡು ಮಾಡಿರುವ ಜರಿತೆಯ ಬಳಿಗೇ ನೀನು ಹೋಗಬಹುದು. ನಾನಾದರೋ ದುಷ್ಟಪುರುಷನನ್ನು ಆಶ್ರಯಿಸಿದ ಅಪರಾಧಕ್ಕಾಗಿ ಏಕಾಕಿನಿಯಾಗಿದ್ದುಕೊಂಡು ಕಾಡು-ಮೇಡುಗಳನ್ನಲೆಯುವೆನು."

ಲಪಿತೆಯ ಮಾತುಗಳು ಮನಸ್ಸನ್ನು ಚುಚ್ಚುವುದಾಗಿದ್ದರೂ ಮಂದಪಾಲನು ಸಮಾಧಾನದಿಂದಲೇ ಉತ್ತರವನ್ನಿತ್ತನು :

"ಲಪಿತೇ! ನೀನು ಭಾವಿಸಿರುವಂತೆ ನಾನು ಕಾಮೋಪಭೋಗಕ್ಕಾಗಿ ಲಲನೆಯರೊಡನೆ ಸುತ್ತಾಡುತ್ತಿಲ್ಲ. ಕೇವಲ ಸಂತಾನಪ್ರಾಪ್ತಿಗಾಗಿ ನಾನಿಲ್ಲಿರು ತ್ತೇನೆ. ನನಗೆ ಲಭಿಸಿರುವ ಸಂತಾನಕ್ಕೆ ಇಂದು ಅಪಾಯವೊದಗಿರುವುದು.

**ಭೂತಂ ಹಿತ್ವಾ ಚ ಭಾವ್ಯರ್ಥೇ ಯೋಽವಲಮ್ಬೇತ್ಸ ಮನ್ದಧೀಃ ।**
**ಅವಮನ್ಯೇತ ತಂ ಲೋಕೋ ಯಥೇಚ್ಛಸಿ ತಥಾ ಕುರು ॥೧೫॥**

ಮುಂದೆ ಪಡೆಯಲು ಸಾಧ್ಯವಾಗಬಹುದಾದ ಒಂದು ವಸ್ತುವಿನ ಮೇಲೆ ಆಸೆಯಿಟ್ಟು ಪ್ರಾಪ್ತವಾಗಿರುವ ವಸ್ತುವನ್ನು ನಿರ್ಲಕ್ಷಿಸುವವನು ಮೂಢನೇ ಆಗುತ್ತಾನೆ. ಅಂತಹವನನ್ನು ಪ್ರಪಂಚವೇ ಹಳಿಯುವುದು. ಆದುದರಿಂದ ನಾನು ನನ್ನ ಮಕ್ಕಳಿರುವೆಡೆಗೇ ಹೋಗಲು ನಿಶ್ಚಯಮಾಡಿಬಿಟ್ಟಿದ್ದೇನೆ. ನಿನ್ನ ಇಚ್ಛೆಬಂದಂತೆ ಮಾಡಲು ನೀನು ಸ್ವತಂತ್ರಳಾಗಿರುವೆ. ಚಿಗುರಿನಿಂದ ಕೂಡಿರುವ ಈ ವೃಕ್ಷಗಳನ್ನು ನಮ್ಮ ಕಣ್ಣೆದುರಿನಲ್ಲಿಯೇ ಭಸ್ಮಮಾಡುತ್ತಿರುವ ಅಗ್ನಿಜ್ವಾಲೆಗಳನ್ನು ನೋಡುತ್ತಿದ್ದರೆ ನನ್ನ ಮಕ್ಕಳ ವಿಷಯವಾಗಿ ನನ್ನ ಹೃದಯದಲ್ಲಿ ಸಂಕಟವಾಗುತ್ತಿರುವುದು" – ಎಂದು ಹೇಳಿ ಮಂದಪಾಲನು ಲಪಿತೆಯನ್ನು ಬಿಟ್ಟು ಹೊರಟೇಬಿಟ್ಟನು.

ಇತ್ತಲಾಗಿ ಯಜ್ಞೇಶ್ವರನು ಪ್ರಶಾಂತನಾದನು. ಮಕ್ಕಳೇನಾದರೋ ಎಂದು ಕಳವಳಪಡುತ್ತಿದ್ದ ಜರಿತೆಯು ಒಡನೆಯೇ ಮರಿಗಳಿದ್ದ ಸ್ಥಳಕ್ಕೆ

ಹಾರಿದಳು. ಮಕ್ಕಳೇನಾಗಿರುವರೋ ಎಂಬ ಉದ್ವೇಗವು ತಾಯಿಯ ಹೃದಯದಲ್ಲಿದ್ದಿತು. ಅಂತಹ ಸಮಯಗಳಲ್ಲಿ ಪ್ರಾಣಿಸಾಮಾನ್ಯಕ್ಕೆ ಅಪಾಯ ಚಿಂತನೆಯೇ ಹೆಚ್ಚು ಉಂಟಾಗುವುದು. ಜರಿತೆಗೆ ತನ್ನ ಮರಿಗಳು ಮಹಾಜ್ವಾಲೆಗಳಿಂದ ಪಾರಾಗಿರುವರೆಂಬುದನ್ನು ಊಹಿಸಲು ಕೂಡ ಶಕ್ಯವಿರಲಿಲ್ಲ. ಆದರೂ ಪುತ್ರವಾತ್ಸಲ್ಯವು ಅವಳನ್ನು ಒಡನೆಯೇ ಮಕ್ಕಳಿದ್ದೆಡೆಗೆ ಕರೆತಂದಿತು. ಚಿಲಿ-ಪಿಲಿಗುಟ್ಟುತ್ತಿದ್ದ ಮರಿಗಳನ್ನು ಕಂಡು ತಾಯಿಯ ಆನಂದಾತಿರೇಕವನ್ನು ವರ್ಣಿಸಲು ಸಾಧ್ಯವಿದೆಯೇ? ಮರಿಗಳು ಕ್ಷೇಮದಿಂದಿದ್ದರೂ ತಾಯಿಯನ್ನು ಕಂಡೊಡನೆಯೇ ಅಳತೊಡಗಿದುವು. ಜರಿತೆಯ ಕಣ್ಣುಗಳಿಂದಲೂ ಆನಂದಬಾಷ್ಪಗಳು ಸುರಿದುವು. ಜರಿತೆಯು ಪ್ರತಿಯೊಂದು ಮರಿಯ ಪಕ್ಕದಲ್ಲಿಯೂ ಕುಳಿತು ಕೊಕ್ಕಿನಿಂದ ಮುದ್ದಾಡಿ ಮಕ್ಕಳನ್ನು ಸಂತೈಸಿದಳು.

ಆ ಸಮಯಕ್ಕೆ ಸರಿಯಾಗಿ ಮಂದಪಾಲನೂ ಅಲ್ಲಿಗೆ ಬಂದನು. ಆದರೆ ನಾಲ್ವರು ಮಕ್ಕಳಲ್ಲಿ ಯಾರೂ ತಂದೆಯು ಬಂದನೆಂಬ ಸಂತೋಷವನ್ನೂ ಪ್ರಕಟಿಸಲಿಲ್ಲ. ತಂದೆಯ ಸಂಗಡ ಮಾತನಾಡಲೂ ಇಲ್ಲ. ಮಂದಪಾಲನು ಮಕ್ಕಳನ್ನೂ ಹೆಂಡತಿಯನ್ನೂ ಪ್ರೀತಿಯಿಂದಲೇ ಮಾತನಾಡಿಸಿದರೂ ಅವನಿಗೆ ಯಾರೂ ಏನನ್ನೂ ಹೇಳಲಿಲ್ಲ.

ಮಂದಪಾಲನಿಗೆ ಮಕ್ಕಳನ್ನು ಕಂಡು ಸಂತೋಷವೇನೋ ಆಯಿತು. ಆದರೆ ಮಕ್ಕಳು ಮಾಡಿದ ತಿರಸ್ಕಾರದಿಂದ ಮನದ ಯಾತನೆಯು ಬಹಳವಾಯಿತು. ಪತ್ನಿಯೊಡನೆ ಹೇಳಿದನು : "ಜರಿತೇ! ನಿನ್ನ ಮಕ್ಕಳಲ್ಲಿ ಹಿರಿಯನಾರು? ಎರಡನೆಯವನಾರು? ಮೂರನೆಯವನಾರು? ಕನಿಷ್ಠನಾರು? ನಾನು ನಿನ್ನನ್ನು ಸಂತಪ್ತಹೃದಯದಿಂದ ಕೇಳುತ್ತಿರುವೆನು. ನೀನೇಕೆ ಉತ್ತರಿಸದೇ ಸುಮ್ಮನಿರುವೆ? ನಾನು ನಿಮ್ಮನ್ನು ಬಿಟ್ಟು ಹೋದುದೇನೋ ನಿಶ್ಚಯ. ಆದರೆ ಅಲ್ಲಿಯಾದರೂ ನಾನು ಸುಖಿಯಾಗಿರಲಿಲ್ಲ."

ಕಡೆಯ ಮಾತನ್ನು ಕೇಳಿ ಜರಿತೆಯ ಮಾತ್ಸರ್ಯವು ಉಕ್ಕಿತು. ಗಡುಸಾದ ಧ್ವನಿಯಿಂದಲೇ ಹೇಳಿದಳು :

**ಕಿಂ ನು ಜ್ಯೇಷ್ಠೇನ ತೇ ಕಾರ್ಯಂ ಕಿಮನನ್ತರಜೇನ ತೇ ।**
**ಕಿಂ ವಾ ಮಧ್ಯಮಜಾತೇನ ಕಿಂ ಕನಿಷ್ಠೇನ ವಾ ಪುನಃ ॥೨೪॥**

ಯಾಂ ತ್ವಂ ಮಾಂ ಸರ್ವತೋ ಹೀನಾಮುತ್ಸೃಜ್ಯಾಸಿ ಗತಃ ಪುರಾ ।
ತಾಮೇವ ಲಪಿತಾಂ ಗಚ್ಛ ತರುಣೀಂ ಚಾರುಹಾಸಿನೀಮ್ ॥೨೫॥

"ಹಿರಿಯನು ಯಾರಾದರೇನು? ಎರಡನೆಯವನು ಯಾರೆಂಬ ವಿಷಯವು ನಿನಗೇಕೆ? ಮೂರು-ನಾಲ್ಕನೆಯವರಿಂದ ನಿನಗಾಗ ಬೇಕಾಗಿರುವುದಾದರೂ ಏನಿದೆ? ಸಹಧರ್ಮಿಣಿಯಾಗಿದ್ದ ನನ್ನನ್ನು ಗತಿಹೀನಳನ್ನಾಗಿ ಮಾಡಿ, ಚಾರುಹಾಸಿನಿಯಾದ, ತರುಣಿಯಾದ ಲಪಿತೆಯ ಹಿಂದೆ ಹೋದೆಯಲ್ಲವೇ? ಈಗಲೂ ಅಲ್ಲಿಗೇ ಹೋಗಬಹುದು."

ಮಂದಪಾಲನು ದೀರ್ಘವಾಗಿ ನಿಟ್ಟುಸಿರುಬಿಟ್ಟು ಹೇಳಿದನು :

ನ ಸ್ತ್ರೀಣಾಂ ವಿದ್ಯತೇ ಕಿಂಚಿದಮುತ್ರ ಪುರುಷಾನ್ತರಾತ್ ।
ಸಾಪತ್ನಕಮೃತೇ ಲೋಕೇ ನಾನ್ಯದರ್ಥವಿನಾಶನಮ್ ॥೨೬॥

ವೈರಾಗ್ನಿದೀಪನಂ ಚೈವ ಭೃಶಮುದ್ವೇಗಕಾರಿ ಚ ।
ಸುವ್ರತಾ ಚಾಪಿ ಕಲ್ಯಾಣೀ ಸರ್ವಭೂತೇಷು ವಿಶ್ರುತಾ ॥೨೭॥

ಅರುನ್ಧತೀ ಮಹಾತ್ಮಾನಂ ವಸಿಷ್ಠಂ ಪರ್ಯಶಙ್ಕತ ।
ವಿಶುದ್ಧಭಾವಮತ್ಯನ್ತಂ ಸದಾ ಪ್ರಿಯಹಿತೇ ರತಮ್ ॥೨೮॥

ಸಪ್ತರ್ಷಿಮಧ್ಯಗಂ ಧೀರಮವಮೇನೇ ಚ ತಂ ಮುನಿಮ್ ।
ಅಪಧ್ಯಾನೇನ ಸಾ ತೇನ ಧೂಮಾರುಣಸಮಪ್ರಭಾ ।
ಲಕ್ಷ್ಯಾಲಕ್ಷ್ಯಾನಾಭಿರೂಪಾ ನಿಮಿತ್ತಮಿವ ಪಶ್ಯತಿ ॥೨೯॥

"ಪರಲೋಕಸುಖನಾಶಕವಾದ ಪರಪುರುಷಸಂಬಂಧ, ಇಹಲೋಕ ಸುಖನಾಶಕವಾದ ಸಪತ್ನೀಸನ್ನಿಧಾನ–ಇವೆರಡೂ ಸ್ತ್ರೀಯರಿಗೆ ಇಷ್ಟಾರ್ಥಗಳ ನ್ನೆಲ್ಲವನ್ನೂ ನಾಶಮಾಡಿಬಿಡುತ್ತವೆ. ಸವತಿಯ ಸ್ಮರಣೆಯು ವೈರವೆಂಬ ಅಗ್ನಿಯನ್ನು ಉದ್ದೀಪನಗೊಳಿಸಿ ಉದ್ವೇಗವನ್ನೂ ಉಂಟುಮಾಡುತ್ತದೆ. ಸರ್ವಮಂಗಳೆಯಾದ, ಸುವ್ರತಳಾದ, ವಿಶ್ವವಿಖ್ಯಾತಳಾದ ಅರುಂಧತಿಯೂ ಪರಮಪೂಜ್ಯರಾದ, ಶುದ್ಧಾತ್ಮರಾದ ವಸಿಷ್ಠರ ವಿಷಯದಲ್ಲಿಯೇ ಶಂಕೆ ಪಟ್ಟಳು. ಮಹಾಮಹಿಮರಾದ, ಸಪ್ತರ್ಷಿಗಳಲ್ಲೊಬ್ಬರಾದ ವಸಿಷ್ಠರನ್ನು ಇದೇ ಕಾರಣದಿಂದ ಮನದಲ್ಲಿಯೇ ನಿಂದಿಸಿದಳು. ಮಹಾತಪಸ್ವಿಯ ವಿಷಯದಲ್ಲಿ

ಸಂಶಯಿತಳಾಗಿ, ಆ ಮಹಾಮಹಿಮರ ವಿಷಯದಲ್ಲಿ ದೋಷವನ್ನೆಣಿಸಿದ್ದರಿಂದ ಅರುಂಧತಿಯು ಚಿಕ್ಕುದಾದ ನಕ್ಷತ್ರವಾಗಿ ಅಗ್ನಿಯ ಜ್ವಾಲೆಯಿಂದ ಸಮ್ಮಿಶ್ರವಾದ ಧೂಮದ ನಸುಗೆಂಪಾದ ಪ್ರಭೆಯನ್ನು ಹೊಂದಿದವಳಾಗಿ ಕಂಡೂ ಕಾಣಿಸದವಳಾಗಿ ಸಪ್ತರ್ಷಿಗಳ ಮಧ್ಯದಲ್ಲಿ ನಿಮಿತ್ತಮಾತ್ರವಾಗಿ ಇರಬೇಕಾಯಿತು.

ಮಕ್ಕಳನ್ನು ನೋಡುವ ಸಲುವಾಗಿ ಇಲ್ಲಿಗೆ ಬಂದಿರುವ ನನ್ನನ್ನು ಅರುಂಧತಿಯು ವಸಿಷ್ಠರನ್ನು ಶಂಕಿಸಿ ನಿಂದಿಸಿದಂತೆಯೇ–ನೀನಿಲ್ಲಿ ನಿಂದಿಸುತ್ತಿರುವೆ. ಇಷ್ಟನಾದ ಪತಿಯನ್ನು ಹೊಂದಿದನಂತರವೂ ನೀನು ನನ್ನೊಡನೆ ಸಂದೇಹಗ್ರಸ್ತಳಾಗಿಯೇ ಮಾತನಾಡಿದಂತೆ ಲಪಿತೆಯೂ ಪುತ್ರಕಾಮನಾದ ನನ್ನೊಡನೆ ಸಂದೇಹಗ್ರಸ್ತಳಾಗಿಯೇ ಮಾತನಾಡಿದಳು.

'ಇವಳು ನನ್ನ ಮಡದಿ, ವಿಶ್ವಾಸಪಾತ್ರಳು'–ಎಂದು ಪುರುಷರು ಸ್ತ್ರೀಯರ ವಿಷಯದಲ್ಲಿ ಯಾವಾಗಲೂ ನಂಬಿಕೆಯನ್ನಿಡಬಾರದು. ಅವರು ತಾಯಿಯರಾದನಂತರ ಪತಿಶುಶ್ರೂಷೆಯ ವಿಷಯದಲ್ಲಿ ನಿರಾಸಕ್ತಿಯನ್ನೇ ಹೊಂದುವರು."

ಮಂದಪಾಲನು ಆಡಿದ ಮಾತುಗಳನ್ನು ಕೇಳಿದನಂತರ ಮಕ್ಕಳು ನಾಚಿಕೆಗೊಂಡವರಾಗಿ ಮೇಲೆದ್ದು ಬಂದು ತಂದೆಯನ್ನು ಆದರಿಸಿ, ಸ್ವಾಗತಿಸಿ ಪೂಜಿಸಿದರು. ಮಂದಪಾಲನೂ ಮಕ್ಕಳನ್ನು ಸವಿಮಾತುಗಳಿಂದ ಸಂತೈಸುತ್ತಾ, ತಾನೂ ಮಕ್ಕಳ ರಕ್ಷಣೆಗಾಗಿ ಅಗ್ನಿಯೊಡನೆ ಹೇಳಿದ ಮಾತುಗಳನ್ನೂ ಮತ್ತು ಅಗ್ನಿಯು ಕೊಟ್ಟ ಅಭಯವನ್ನೂ ತಿಳಿಸಿದನು. "ಅಗ್ನಿಯು ಅಭಯಪ್ರದಾನಮಾಡಿದ್ದರಿಂದಲೂ, ನಿಮ್ಮ ತಾಯಿಯ ಗುಣಾತಿಶಯಗಳೇನೆಂಬುದನ್ನು ನಾನು ತಿಳಿದವನಾಗಿದ್ದುದರಿಂದಲೂ ಮತ್ತು ನಿಮ್ಮ ಸಾಮರ್ಥ್ಯವನ್ನು ಬಲ್ಲವನಾಗಿದ್ದುದರಿಂದಲೂ–ನಾನು ಈ ಮೊದಲು ಇಲ್ಲಿಗೆ ಬರಲಿಲ್ಲ. ಆದುದರಿಂದ ನೀವು ನನ್ನ ವಿಷಯದಲ್ಲಿ ಆಗ್ರಹಮನೋಭಾವವನ್ನು ಹೊಂದಬೇಡಿರಿ. ನೀವೆಲ್ಲರೂ ಋಷಿಗಳಾಗಿರುವಿರಿ. ಈ ವಿಷಯವು ಅಗ್ನಿದೇವನಿಗೂ ತಿಳಿದಿರುವುದು."

ಮಂದಪಾಲನು ಹೀಗೆ ಹೇಳಿ ಪತ್ನೀ-ಪುತ್ರಸಮೇತನಾಗಿ ಲತಾಗುಲ್ಮ

ಗಳಿಂದಲೂ, ತಟಾಕಗಳಿಂದಲೂ ಕೂಡಿದ್ದ ರಮ್ಯವಾದ ಬೇರೊಂದು ಪ್ರದೇಶಕ್ಕೆ ಹೋಗಿ ಸುಖವಾಗಿದ್ದನು.

೨೩೩ನೆಯ ಅಧ್ಯಾಯವು ಮುಗಿಯಿತು.

೨೩೪ನೆಯ ಅಧ್ಯಾಯ ಮಯದರ್ಶನಪರ್ವ (ಮುಂದುವರಿದಿದೆ.)

## ಇಂದ್ರನಿಂದ ಕೃಷ್ಣಾರ್ಜುನರಿಗೆ ವರಪ್ರದಾನ : ಕೃಷ್ಣಾರ್ಜುನರೂ ಮತ್ತು ಮಯಾಸುರನೂ ಅಗ್ನಿಯಿಂದ ಬೀಳ್ಕೊಂಡವರಾಗಿ ಯಮುನಾನದಿಯ ದಂಡೆಗೆ ಬಂದುದು

"ಜನಮೇಜಯ! ನಾನು ಮೇಲೆ ಹೇಳಿದ ರೀತಿಯಲ್ಲಿ ಅಗ್ನಿದೇವನು ಕೃಷ್ಣಾರ್ಜುನರ ಸಹಕಾರದಿಂದ ಲೋಕಹಿತಕರವಾದ ಖಾಂಡವದಾಹವನ್ನು ಮಾಡಿದನು. ಕಾಲುವೆಯ ರೂಪದಲ್ಲಿ ಹರಿದುಬರುತ್ತಿದ್ದ ಪ್ರಾಣಿಗಳ ವಪೆಯನ್ನೂ ಮತ್ತು ಮೇದಸ್ಸನ್ನೂ ಕುಡಿದು ಅಗ್ನಿದೇವನು ಸಂತೋಷಭರಿತನಾಗಿ ಸಶರೀರನಾಗಿಯೇ ಅರ್ಜುನನಿಗೆ ಕಾಣಿಸಿಕೊಂಡನು. ಆ ವೇಳೆಗೆ ಸರಿಯಾಗಿ ಪುರಂದರನೂ ಮರುತ್ತುಗಳಿಂದ ಸಮೇತನಾಗಿ ಆಕಾಶದಿಂದಿಳಿದು ಬಂದು ಪಾರ್ಥ-ಕೇಶವರನ್ನು ಕುರಿತು ಹೇಳಿದನು :

"ನೀವಿಬ್ಬರೂ ದೇವತೆಗಳಿಂದಲೂ ಸಾಧ್ಯವಾಗದ ಕಾರ್ಯವನ್ನು ಮಾಡಿ ಮುಗಿಸಿರುವಿರಿ. ಆದುದರಿಂದ ನೀವು ಮಾನವಸಾಮಾನ್ಯರಿಂದ ಪಡೆಯಲು ಸಾಧ್ಯವಾಗದಂತಹ ಒಂದೊಂದು ವರವನ್ನು ಕೇಳಿರಿ. ನಿಮ್ಮಿಬ್ಬರ ಅದ್ಭುತಪರಾಕ್ರಮವನ್ನು ನೋಡಿ ಸುಪ್ರೀತನಾಗಿರುವ ನಾನು ನಿಮಗೆ ವರಗಳನ್ನು ಕೊಡುವ ಇಚ್ಛೆಯಿಂದಲೇ ಇಲ್ಲಿಗೆ ಬಂದಿರುವೆನು."

ಇಂದ್ರನ ಮಾತುಗಳನ್ನು ಕೇಳಿ ಅರ್ಜುನನು ತನಗೆ ಸಕಲದಿವ್ಯಾಸ್ತ್ರಗಳನ್ನೂ ಕರುಣಿಸಬೇಕೆಂದು ಕೇಳಿಕೊಂಡನು.

"ಅರ್ಜುನ! ನಿನ್ನ ಪ್ರಾರ್ಥನೆಯಂತೆ ನಿನಗೆ ಸಕಲದಿವ್ಯಾಸ್ತ್ರಗಳನ್ನೂ ಕೊಡುವೆನು. ಆದರೆ ಅದಕ್ಕೆ ಕಾಲನಿರೀಕ್ಷಣೆಯನ್ನು ಮಾಡಬೇಕಾಗಿದೆ. ಪಶುಪತಿಯು ನಿನ್ನ ವಿಷಯದಲ್ಲಿ ಸುಪ್ರೀತನಾಗುವ ಕಾಲದಲ್ಲಿ ನನ್ನ

ದಿವ್ಯಾಸ್ತ್ರಗಳೆಲ್ಲವನ್ನೂ ಕೊಡುವೆನು. ಮಹೇಶನು ನಿನ್ನಲ್ಲಿ ಯಾವಾಗ ಸುಪ್ರೀತನಾಗುವನೆಂಬ ವಿಷಯವೂ ನನಗೆ ತಿಳಿದಿದೆ. ನೀನು ತಪಸ್ಸನ್ನು ಮಾಡಬೇಕಾಗುವ ಕಾಲವು ಸನ್ನಿಹಿತವಾಗಿದೆ. ಆಗ ನನ್ನಿಂದ ನೀನು ಬಹು ವಿಧವಾದ ಆಗ್ನೇಯ-ವಾಯವ್ಯಾದಿ ಅಸ್ತ್ರಗಳನ್ನೂ ಪಡೆಯುವೆ"–ಎಂದು ಅರ್ಜುನನಿಗೆ ಹೇಳಿ (ಕೃಷ್ಣನ ಕಡೆಗೆ ತಿರುಗಿ) –"ನಿನಗೇನು ಬೇಕು, ಕೇಶವ?"–ಎಂದು ಪ್ರಶ್ನಿಸಿದನು.



"ಮಘವನ್! ನನಗೆ ಅರ್ಜುನನೊಡನೆ ಶಾಶ್ವತವಾದ ಮೈತ್ರಿಯನ್ನು ದಯಪಾಲಿಸು."

"ಹಾಗೆಯೇ ಆಗಲಿ"–ಎಂದು ಇಂದ್ರನು ಒಡನೆಯೇ ಹೇಳಿದನು.

ಮಹೇಂದ್ರನು ಅಗ್ನಿದೇವನೊಡನೆಯೂ ಒಂದೆರಡು ಯಥೋಚಿತವಾದ ವಚನಗಳನ್ನಾಡಿ ದೇವತೆಗಳಿಂದ ಕೂಡಿದವನಾಗಿ ಸ್ವರ್ಗಲೋಕಕ್ಕೆ ತೆರಳಿದನು.

ಯಜ್ಞೇಶ್ವರನು ಮೃಗ-ಪಕ್ಷಿಗಳಿಂದ ಸಮೃದ್ಧವಾಗಿದ್ದ ಖಾಂಡವವನವನ್ನು ಹದಿನೈದು ದಿವಸಗಳ ಪರ್ಯಂತವಾಗಿ ಸುಟ್ಟು ಭಸ್ಮಮಾಡಿ, ಆರು ದಿನಗಳ ಕಾಲ ವಿಶ್ರಾಂತಿಯನ್ನು ಅನುಭವಿಸಿದನು. ಅತ್ಯಂತಸಂತೃಪ್ತನಾಗಿ ಪ್ರಾಣಿಗಳ ಮಜ್ಜೆ, ಮೇದಸ್ಸು, ರಕ್ತ-ಎಲ್ಲವನ್ನೂ ಯಥೇಚ್ಛವಾಗಿ ತಿಂದು-ಕುಡಿದು ಸಂತುಷ್ಟನಾಗಿ ಯಜ್ಞೇಶ್ವರನು ಕೃಷ್ಣಾರ್ಜುನರಿಗೆ ಹೇಳಿದನು : "ನರವ್ಯಾಘ್ರರೇ! ನಿಮ್ಮ ಸಹಕಾರದಿಂದ ನಾನಿಂದು ತೃಪ್ತನಾಗಿದ್ದೇನೆ. ನೀವಿನ್ನು ನಿಮ್ಮ ಇಚ್ಛೆಯಿದ್ದಲ್ಲಿಗೆ ತೆರಳಬಹುದು"–ಎಂದು ಹೇಳಿ ಅಗ್ನಿದೇವನು ಅದೃಶ್ಯನಾದನು.

ಅನಂತರ ಕೃಷ್ಣಾರ್ಜುನರೂ ಮತ್ತು ಮಯನೂ ಸ್ವಲ್ಪಕಾಲ ಅತ್ತಲಿತ್ತ ಸಂಚರಿಸಿ ಕಡೆಗೆ ನಯನಮನೋಹರವಾಗಿದ್ದ ಯಮುನಾನದಿಯ ಸಮೀಪಕ್ಕೆ ಬಂದು ದಂಡೆಯ ಮೇಲೆ ಕುಳಿತರು."

೨೩೪ನೆಯ ಅಧ್ಯಾಯವು ಮುಗಿಯಿತು.

ಇಲ್ಲಿಗೆ ಆದಿಪರ್ವವು ಮುಗಿಯಿತು.

**ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ**
**ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।**
**ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ**
**ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥**
**ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।**
**ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥**

ಹರಿಃ ಓಂ ತತ್ಸತ್ ಶ್ರೀಕೃಷ್ಣಾರ್ಪಣಮಸ್ತು

ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು

ಶ್ರೀಮಹಾಗಣಪತಯೇ ನಮಃ ಶ್ರೀಮಹಾಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥**

# ಸಭಾಪರ್ವ

೧ನೆಯ ಅಧ್ಯಾಯ ಸಭಾಕ್ರಿಯಾಪರ್ವ

## ಶ್ರೀಕೃಷ್ಣನ ಆಜ್ಞೆಯಂತೆ ಮಯನಿಂದ ಸಭಾಭವನನಿರ್ಮಾಣ

ವೈಶಂಪಾಯನರು ಪ್ರಣವೋಚ್ಚಾರಣಪೂರ್ವಕವಾಗಿ ಸಭಾಪರ್ವದ ಪ್ರವಚನವನ್ನು ಪ್ರಾರಂಭಿಸಿದರು.

**ತತೋಽಬ್ರವೀನ್ಮಯಃ ಪಾರ್ಥಂ ವಾಸುದೇವಸ್ಯ ಸಂನಿಧೌ ।**
**ಪ್ರಾಞ್ಜಲಿಃ ಶ್ಲಕ್ಷ್ಣಯಾ ವಾಚಾ ಪೂಜಯಿತ್ವಾ ಪುನಃ ಪುನಃ ॥೨॥**

“ಜನಮೇಜಯ! ಮಯನು ವಾಸುದೇವನ ಸನ್ನಿಧಿಯಲ್ಲಿ ಕುಳಿತಿದ್ದ ಪಾರ್ಥನನ್ನು ಆದರದ ವಿನಯೋಕ್ತಿಗಳಿಂದ ಬಾರಿ-ಬಾರಿಗೂ ಪೂಜಿಸಿ, ಕೈಜೋಡಿಸಿಕೊಂಡು ಹೇಳಿದನು :

“ಪಾರ್ಥ! ನನ್ನ ಮೇಲೆ ಕುಪಿತನಾಗಿದ್ದ ಶ್ರೀಕೃಷ್ಣನಿಂದಲೂ, ನನ್ನನ್ನು ಭಸ್ಮಮಾಡಲು ರಭಸದಿಂದ ಬರುತ್ತಿದ್ದ ಅಗ್ನಿಯಿಂದಲೂ ನೀನು ನನ್ನನ್ನು ಪಾರುಮಾಡಿರುವೆ. ನನ್ನ ಪ್ರಾಣಗಳನ್ನುಳಿಸಿರುವ ಮಹಾನುಭಾವನಾದ ನಿನಗೆ ಯಾವ ಕಾರ್ಯವನ್ನು ಮಾಡಿಕೊಡಲಿ? ದಯವಿಟ್ಟು ತಿಳಿಸು.”

“ಮಯ! ನೀನು ಇಷ್ಟು ಹೇಳಿದ್ದೇ ಸಾಕು. ನೀನು ನನ್ನ ವಿಷಯದಲ್ಲಿ ಕೃತಜ್ಞತೆಯನ್ನು ತೋರಿರುವುದರಿಂದಲೇ ನನಗೆ ಬೇಕಾದ ಕಾರ್ಯವನ್ನು ಮಾಡಿಕೊಟ್ಟಂತಾಗಿದೆ. ನಿನಗೆ ಮಂಗಳವಾಗಲಿ. ನಿನ್ನ ಇಚ್ಛೆಯಿರುವೆಡೆಗೆ ಹೋಗಿ ಬಾ. ನಾವು ನಿನ್ನ ವಿಷಯದಲ್ಲಿ ಪ್ರೀತಿಯುಳ್ಳವರಾಗಿದ್ದೇವೆ. ನಿನಗೂ ನಮ್ಮ ಮೇಲೆ ಪ್ರೀತಿಯು ಶಾಶ್ವತವಾಗಿರಲಿ.”

"ಅರ್ಜುನ! ನಿನ್ನ ಘನತೆಗೆ ಅನುರೂಪವಾದ ಮಾತುಗಳನ್ನೇ ಆಡಿರುವೆ. ಆದರೆ ಪ್ರೀತಿಪೂರ್ವಕವಾಗಿ ನಿನಗೇನಾದರೂ ಮಾಡಿಕೊಡಬೇಕೆಂದೇ ನನ್ನ ಮನಸ್ಸು ತವಕಿಸುತ್ತಿದೆ. ವಿಶ್ವಕರ್ಮನು ದೇವಶಿಲ್ಪಿಯಾಗಿರುವಂತೆ ನಾನು ದಾನವಶಿಲ್ಪಿಯಾಗಿರುತ್ತೇನೆ. ಶಿಲ್ಪಶಾಸ್ತ್ರದಲ್ಲಿ ನನಗೆ ಸಂಪೂರ್ಣವಾದ ಪಾಂಡಿತ್ಯವಿದೆ. ಆದುದರಿಂದ ಅದಕ್ಕೆ ಸಂಬಂಧಿಸಿದಂತೆಯಾದರೂ ಒಂದು ಕಾರ್ಯವನ್ನು ಮಾಡಿಕೊಡಬೇಕೆಂದಿದ್ದೇನೆ."

"ದಾನವಶಿಲ್ಪಿಯೇ! 'ನನ್ನ ಪ್ರಾಣವನ್ನುಳಿಸಿರುವವನು ನೀನು' – ಎಂದು ನೀನೇ ಹತ್ತಾರು ಬಾರಿ ಹೇಳುತ್ತಿರುವೆ. ಇದರಿಂದಾಗಿ ಅದಕ್ಕೆ ಪ್ರತಿಫಲವನ್ನು ಪಡೆಯುವುದು ಅನುಚಿತವೆನಿಸುವುದು. ಆದುದರಿಂದ ನನಗಾಗಿ ನಾನು ಏನೊಂದನ್ನೂ ನಿನ್ನಿಂದ ಮಾಡಿಸಿಕೊಳ್ಳುವುದಿಲ್ಲ. ಆದರೆ ನಿನ್ನ ಆಶಯವನ್ನು ತಿರಸ್ಕರಿಸುವ ಇಚ್ಛೆಯೂ ನನಗಿಲ್ಲ. ಈ ನಮ್ಮ ಶ್ರೀಕೃಷ್ಣನಿಗೆ ಏನಾದರೂ ಮಾಡಿಕೊಡು. ಶ್ರೀಕೃಷ್ಣನಿಗೆ ನೀನು ಏನು ಮಾಡಿಕೊಟ್ಟರೂ ಅದು ನನಗೂ ಮಾಡಿಕೊಟ್ಟಂತೆಯೇ ಆಗುತ್ತದೆ."

ಅರ್ಜುನನ ಮಾತುಗಳನ್ನು ಕೇಳಿ ವಾಸುದೇವನಿಗೆ ಯೋಚನೆಯು ಹತ್ತಿತು. "ಮಯನಿಗೆ ಏನೆಂದು ಹೇಳಬೇಕು? ಯಾವ ಕಾರ್ಯವನ್ನು ಇವನಿಂದ ಮಾಡಿಸಿಕೊಳ್ಳಬೇಕು?"–ಹೀಗೆ ಕ್ಷಣಕಾಲ ಆಲೋಚಿಸಿ ಲೋಕನಾಥನಾದ ಶ್ರೀಕೃಷ್ಣನು ಹೇಳಿದನು :

"ಶಿಲ್ಪಿಶ್ರೇಷ್ಠನೇ! ನೀನು ನಮಗೆ ಏನಾದರೂ ಕಾರ್ಯವನ್ನು ಮಾಡಿ ಕೊಡಬೇಕೆಂದೇ ಸಂಕಲ್ಪಮಾಡಿರುವುದಾದರೆ–ಧರ್ಮಾತ್ಮನಾದ ಯುಧಿಷ್ಠಿರ ನಿಗೆ ಸುಂದರವಾದ ಮತ್ತು ವಿಶಾಲವಾದ ಸಭಾಮಂದಿರವೊಂದನ್ನು ಸಿದ್ಧಮಾಡು. ಆ ಸಭಾಮಂದಿರವು ಭೂಮಂಡಲದ ಜನರೆಲ್ಲರಿಗೂ ವಿಸ್ಮಯಕಾರಕವಾಗಿರಬೇಕು. ಅದನ್ನು ಅನುಕರಿಸಿ ಯಾರೂ ಅದರಂತೆ ಮತ್ತೊಂದನ್ನು ನಿರ್ಮಿಸುವ ಸಾಧ್ಯತೆಯೇ ಇರಬಾರದು. ಒಳಗೆ ಕುಳಿತು ಬಹಳ ಸೂಕ್ಷ್ಮವಾಗಿ ಪರಿಶೀಲಿಸಿದರೂ ಅದನ್ನು ನಿರ್ಮಿಸಿರುವುದು ಹೇಗೆಂಬ ವಿಷಯವೂ ಯಾರಿಗೂ ತಿಳಿಯಬಾರದು. ಆ ಭವ್ಯಭವನವು ದೇವ-ದಾನವ-ಮಾನವರೀತಿಗಳ ಶಿಲ್ಪಕಲೆಗಳಿಂದ ಕೂಡಿರಬೇಕು. ಅಂತಹ ಸಭಾಮಂದಿರವನ್ನು ಮಹಾರಾಜನಾದ ಯುಧಿಷ್ಠಿರನಿಗಾಗಿ ಸಿದ್ಧಪಡಿಸು."

ಶ್ರೀಕೃಷ್ಣನ ಮಾತುಗಳನ್ನು ಕೇಳಿ ಮಯನಿಗೆ ಬಹಳ ಸಂತೋಷವಾಯಿತು. ಯುಧಿಷ್ಠಿರನ ಸಲುವಾಗಿ ನಿರ್ಮಾಣಮಾಡಬೇಕಾಗಿದ್ದ–ಸ್ವರ್ಗದ ಸಭೆಗೆ ಸಮಾನವಾದ–ಸಭಾಭವನವನ್ನು ಮಯನು ಒಡನೆಯೇ ತನ್ನ ಮನಸ್ಸಿನಲ್ಲಿ ಕಲ್ಪಿಸಿಕೊಂಡನು.

ಅನಂತರ ಕೃಷ್ಣಾರ್ಜುನರು ಮಯನನ್ನು ಯುಧಿಷ್ಠಿರನ ಬಳಿಗೆ ಕರೆದುಕೊಂಡು ಹೋಗಿ ಪರಿಚಯಮಾಡಿಕೊಟ್ಟರು. ಯುಧಿಷ್ಠಿರನೂ ಮಯನನ್ನು ಸ್ವಾಗತಿಸಿ, ಯಥೋಚಿತವಾಗಿ ಸತ್ಕರಿಸಿದನು. ಯುಧಿಷ್ಠಿರನಿಂದ ಸತ್ಕೃತನಾದ ಮಯನು ತನ್ನ ಪೂರ್ವಜರಾದ ದಾನವರ ಕಥೆಯನ್ನು ಪಾಂಡವರಿಗೆ ಹೇಳಿದನು.

ಕೆಲವು ದಿನಗಳ ಕಾಲ ವಿಶ್ರಾಂತಿಯನ್ನು ಪಡೆದು, ದಾನವರ ವಿಶ್ವಕರ್ಮನೆನಿಸಿದ್ದ ಮಯನು ಅನಂತರದಲ್ಲಿ ತಾನು ಸಂಕಲ್ಪಿಸಿದ್ದ ಸಭಾಮಂದಿರದ ಕಾರ್ಯದಲ್ಲಿ ಪ್ರವೃತ್ತನಾದನು. ಶ್ರೀಕೃಷ್ಣ-ಪಾಂಡವರ ಅನುಮತಿಯನ್ನು ಪಡೆದು, ಶುಭದಿನದಲ್ಲಿ ಮಂಗಳಸ್ನಾನಮಾಡಿ, ಕೌತುಕಸೂತ್ರವನ್ನು ಕಟ್ಟಿಕೊಂಡು, ಸಾವಿರಾರು ಮಂದಿ ಬ್ರಾಹ್ಮಣರಿಗೆ ಮೃಷ್ಟಾನ್ನಭೋಜನವನ್ನು ಮಾಡಿಸಿ, ಯಥೇಚ್ಛವಾಗಿ ದಕ್ಷಿಣೆಗಳನ್ನು ಕೊಟ್ಟು ಆಶೀರ್ವಾದಗಳನ್ನು ಪಡೆದು, ಎಲ್ಲ ಋತುಗಳಲ್ಲಿಯೂ ಸಮಶೀತೋಷ್ಣ ವಾತಾವರಣವಿರುವ ಸುಂದರವಾದ ಸಭಾಮಂದಿರವನ್ನು ಕಟ್ಟಲು ಹತ್ತುಸಾವಿರ ಮೊಳಗಳಷ್ಟು ಭೂಮಿಯನ್ನು ಮಯನು ಅಳೆದನು."

೧ನೆಯ ಅಧ್ಯಾಯವು ಮುಗಿಯಿತು.

೨ನೆಯ ಅಧ್ಯಾಯ — ಸಭಾಕ್ರಿಯಾಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನ ದ್ವಾರಕಾಪ್ರಯಾಣ

ಜನಮೇಜಯ! ಬಹುವಾಗಿ ಪ್ರೀತಿಸುತ್ತಿದ್ದ ಪಾಂಡವರಿಂದ ಸಂಪೂಜಿತನಾದ ಶ್ರೀಕೃಷ್ಣನು ನಿತ್ಯಸತ್ಕೃತನಾಗಿ, ಖಾಂಡವಪ್ರಸ್ಥದಲ್ಲಿ ಅನೇಕ ದಿವಸಗಳವರೆಗೆ ಸುಖದಿಂದ ಕಾಲಕಳೆಯುತ್ತಿದ್ದು, ತಂದೆಯನ್ನು ನೋಡುವ ಅಪೇಕ್ಷೆಯಿಂದ ದ್ವಾರಕೆಗೆ ಹೊರಡಲು ನಿಶ್ಚಯಿಸಿದನು. ಜಗದ್ವಂದ್ಯನಾದ, ವಿಶಾಲಾಕ್ಷನಾದ ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೋಗಿಬರುವೆನೆಂದು

ಹೇಳಿದನು. ಸೋದರತ್ತೆಯಾದ ಕುಂತಿಯನ್ನೂ ಸಮೀಪಿಸಿ, ಪಾದಗಳನ್ನು ಮುಟ್ಟಿ ನಮಸ್ಕರಿಸಿದನು. ಮಹಾಮಾತೆಯಾದ ಕುಂತಿಯು ಜಗದಾನಂದ ಕಂದನ ಭುಜಗಳೆರಡನ್ನೂ ಹಿಡಿದು ಮೇಲೆತ್ತಿ, ಆನಂದಬಾಷ್ಪಗಳನ್ನು ಸುರಿಸುತ್ತಾ, ಬಾಚಿತಬ್ಬಿಕೊಂಡು, ಶಿರಸ್ಸನ್ನು ಆಘ್ರಾಣಿಸಿದಳು.

ಅನಂತರ ಕೇಶವನು ತಂಗಿಯಾದ ಸುಭದ್ರೆಯಿದ್ದ ಅಂತಃಪುರಕ್ಕೆ ಹೋದನು. ಅವಳನ್ನಗಲಿ ಹೋಗುವ ಯೋಚನೆಯು ಮನಸ್ಸಿಗೆ ಬಂದೊಡ ನೆಯೇ ಅವನ ಕಣ್ಣುಗಳಲ್ಲಿ ನೀರೂರಿತು. ಆದರೂ ಮಂದಹಾಸವನ್ನು ಬೀರುತ್ತಾ ತಂಗಿಯನ್ನು ಕುರಿತು ಪಥ್ಯವಾದ, ಧರ್ಮಸಮ್ಮತವಾದ, ಸತ್ಯವಾದ ಕೆಲವು ಹಿತವಚನಗಳನ್ನು ಉಪದೇಶಿಸಿದನು. ಸುಭದ್ರೆಯೂ ಎಲ್ಲವನ್ನೂ ಗ್ರಹಿಸಿ, ಅಣ್ಣನಿಗೆ ನಮಸ್ಕರಿಸಿ, ದ್ವಾರಕೆಯಲ್ಲಿ ತನ್ನ ಬಂಧುಗಳಿಗೆ ಹೇಳಿ ಕಳುಹಿಸಬೇಕಾದುದನ್ನೆಲ್ಲಾ ಹೇಳಿದಳು. ಶ್ರೀಕೃಷ್ಣನು ಸುಭದ್ರೆಯನ್ನು ಸಂತೈಸಿ, ಅಲ್ಲಿಂದ ದ್ರೌಪದಿಯಿದ್ದೆಡೆಗೆ ಹೋಗಿ ಅವಳನ್ನೂ ಸಂತೈಸಿ, ಅವಳ ಅನುಮತಿಯನ್ನೂ ಪಡೆದು, ಧೌಮ್ಯರ ಬಳಿಗೆ ಹೋಗಿ ಅವರಿಗೆ ನಮಸ್ಕರಿಸಿ, ಆಶೀರ್ವಾದಗಳನ್ನು ಪಡೆದು, ಅರ್ಜುನನಿಂದೊಡಗೂಡಿ ಯುಧಿಷ್ಠಿರ-ಭೀಮಾದಿಗಳಿದ್ದಲ್ಲಿಗೆ ತೆರಳಿದನು. ಪಂಚಪಾಂಡವರ ಮಧ್ಯದಲ್ಲಿದ್ದ ಶ್ರೀಕೃಷ್ಣನು–ದೇವತೆಗಳ ಸಮೂಹದಲ್ಲಿರುವ ಸಾಕ್ಷಾತ್ ಶಚೀಪತಿ ಯಂತೆಯೇ–ವಿರಾಜಿಸಿದನು.

ಪ್ರಯಾಣಮಾಡುವ ಮೊದಲು ಶ್ರೀಕೃಷ್ಣನು ಸ್ನಾನಮಾಡಿ ಪರಿಶುದ್ಧನಾಗಿ, ಪ್ರಯಾಣಕಾಲದಲ್ಲಿ ಉಂಟಾಗಬಹುದಾದ ದುಷ್ಟದೋಷಗಳ ನಿವಾರಣೆಗಾಗಿ ವಿಧ್ಯುಕ್ತವಾದ ಕೆಲವು ಶಾಂತಿಕರ್ಮಗಳನ್ನು ಮಾಡಿ, ಬ್ರಾಹ್ಮಣರನ್ನೂ-ದೇವತೆ ಗಳನ್ನೂ ಪೂಜಿಸಿ, ಅನಂತರ ಗಂಧಾದಿ ಸುಗಂಧದ್ರವ್ಯಗಳನ್ನು ಲೇಪಿಸಿಕೊಂಡು, ಅಂಗದ-ಭುಜಕೀರ್ತಿ-ಕೇಯೂರಾದಿಗಳನ್ನೂ ತೊಟ್ಟು, ದಿವ್ಯಮಾಲಾಧರ ನಾಗಿ ಪ್ರಯಾಣಕ್ಕೆ ಸನ್ನದ್ಧನಾದನು. ಅರಮನೆಯ ಮುಂದಿನ ಪ್ರಾಂಗಣಕ್ಕೆ ಬಂದು ಮೊಸರುತುಂಬಿದ ಪಾತ್ರೆ ಮತ್ತು ಫಲಾಕ್ಷತೆಗಳನ್ನು ಕೈಯಲ್ಲಿ ಹಿಡಿದು ಸ್ವಸ್ತಿವಾಚನಗಳನ್ನು ಮಾಡುತ್ತಿದ್ದ ಬ್ರಾಹ್ಮಣರಿಗೆ ಯಥಾಯೋಗ್ಯ ವಾದ ದಕ್ಷಿಣೆಗಳನ್ನು ಕೊಟ್ಟು, ಅವರನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ, ಅವರಿಂದ ಆಶೀರ್ವಾದಗಳನ್ನು ಪಡೆದು, ಸ್ವರ್ಣಮಯವಾದ

ಗರುಡನ ಧ್ವಜವಿರುವ, ಸಕಲಶಸ್ತ್ರಾಸ್ತ್ರಗಳಿಂದಲೂ, ಕತ್ತಿ-ಭಲ್ಲೆಗಳಿಂದಲೂ, ಚಕ್ರಾಯುಧದಿಂದಲೂ, ಶಾರ್ಙ್ಗವೆಂಬ ಧನುಸ್ಸಿನಿಂದಲೂ ಸಜ್ಜಾಗಿದ್ದ ರಥವನ್ನು ಹತ್ತಿ ಕುಳಿತನು. ಆ ರಥಕ್ಕೆ ಶೈಬ್ಯ-ಸುಗ್ರೀವಗಳೆಂಬ ಎರಡು ದಿವ್ಯಾಶ್ವಗಳು ಹೂಡಲ್ಪಟ್ಟಿದ್ದುವು. ಪುಂಡರೀಕಾಕ್ಷನಾದ ಶ್ರೀಕೃಷ್ಣನು ಶುಭತಿಥಿ, ಶುಭನಕ್ಷತ್ರ ಮತ್ತು ಶುಭಮುಹೂರ್ತಗಳಿಂದ ಕೂಡಿದ್ದ ಶುಭದಿನದಲ್ಲಿ ಇಂದ್ರಪ್ರಸ್ಥದಿಂದ ದ್ವಾರಾವತಿಗೆ ಹೊರಟನು.

ಶ್ರೀಕೃಷ್ಣನು ರಥವನ್ನೇರಿದನಂತರ ಯುಧಿಷ್ಠಿರನೂ ರಥಾರೋಹಣ ಮಾಡಿದನು. ಸಾರಥಿಯಾದ ದಾರುಕನನ್ನು ಪಕ್ಕದಲ್ಲಿ ಕುಳಿತುಕೊಳ್ಳುವಂತೆ ಹೇಳಿ, ಚಕ್ರವರ್ತಿಯಾದ ಯುಧಿಷ್ಠಿರನೇ ಕುದುರೆಗಳ ಕಡಿವಾಣಗಳನ್ನು ಹಿಡಿದು ಕುಳಿತನು. ಒಡನೆಯೇ ಅರ್ಜುನನು ರಥವನ್ನು ಹತ್ತಿ, ಶ್ರೀಕೃಷ್ಣನನ್ನು ಪ್ರದಕ್ಷಿಣೆಮಾಡಿ, ಸಮೀಪದಲ್ಲಿ ಕುಳಿತು, ಚಿನ್ನದ ಹಿಡಿಯಿಂದ ಕೂಡಿದ್ದ ಚಾಮರವನ್ನು ಬೀಸತೊಡಗಿದನು. ರಥದ ಹಿಂಬದಿಯಲ್ಲಿ ಭೀಮ-ನಕುಲ-ಸಹದೇವರೂ, ಋತ್ವಿಜರೂ, ಪಟ್ಟಣಿಗರೂ ಸಾಲಾಗಿ ಹೊರಟರು. ಆಗ ಶ್ರೀಕೃಷ್ಣನು ಶಿಷ್ಯರಿಂದ ಅನುಸರಿಸಲ್ಪಡುತ್ತಿರುವ ಗುರುವಿನಂತೆಯೇ ಕಾಣುತ್ತಿದ್ದನು.

ಅರ್ಧಯೋಜನದಷ್ಟು ದೂರ ಪ್ರಯಾಣವನ್ನು ಮಾಡಿದನಂತರ ಶ್ರೀಕೃಷ್ಣನು ಯುಧಿಷ್ಠಿರನಿಗೆ ರಥವನ್ನು ನಿಲ್ಲಿಸಿ ಹಿಂದಿರುಗುವಂತೆ ಹೇಳಿದನು. ಅರ್ಜುನ-ಯುಧಿಷ್ಠಿರರು ರಥದಿಂದಿಳಿಯುವಾಗ ಪರಸ್ಪರ ಬೀಳ್ಕೊಡುವ ಸಮಯದಲ್ಲಿ ಶ್ರೀಕೃಷ್ಣನು ಯುಧಿಷ್ಠಿರನ ಪಾದಗಳನ್ನು ಮುಟ್ಟಿ ನಮಸ್ಕರಿಸಿದನು. ಒಡನೆಯೇ ಧರ್ಮಜನು ಶ್ರೀಕೃಷ್ಣನನ್ನು ಮೇಲೆತ್ತಿ ಬಾಚಿ ತಬ್ಬಿ, ತಲೆಯನ್ನು ಆಘ್ರಾಣಿಸಿದನು. ಶ್ರೀಕೃಷ್ಣನು ಅರ್ಜುನನನ್ನು ಮೈತ್ರಿಯ ಪ್ರೇಮಾತಿಶಯದಿಂದ ಆಲಿಂಗಿಸಿಕೊಂಡನು. ಇಬ್ಬರ ಕಣ್ಣುಗಳಿಂದಲೂ ಆನಂದಬಾಷ್ಪಗಳು ಸುರಿದುವು. ಶ್ರೀಕೃಷ್ಣನು ಭೀಮನನ್ನೂ ಆಲಿಂಗಿಸಿದನಂತರ ನಕುಲ-ಸಹದೇವರು ಶ್ರೀಕೃಷ್ಣನ ಕಾಲುಗಳನ್ನು ಮುಟ್ಟಿ ನಮಸ್ಕರಿಸಿದರು.

ಯುಧಿಷ್ಠಿರನು ಶ್ರೀಕೃಷ್ಣನಿಗೆ '**ಗಮ್ಯತಾಂ**' ಎಂದು ಹೇಳಿ ಮುಂದೆ

ಪ್ರಯಾಣಮಾಡಲು ಅನುಮತಿಯನ್ನಿತ್ತನು. ಶ್ರೀಕೃಷ್ಣನು ಅತಿಶೀಘ್ರದಲ್ಲಿಯೇ ಪುನಃ ಇಂದ್ರಪ್ರಸ್ಥಕ್ಕೆ ಬರುವುದಾಗಿ ಪಾಂಡವರಿಗೆ ಆಶ್ವಾಸನೆಯನ್ನಿತ್ತು, ಕಾಲ್ನಡಿಗೆಯಲ್ಲಿ ಬರುತ್ತಿದ್ದ ಪೌರರನ್ನೂ, ರಥದಲ್ಲಿದ್ದ ಪಾಂಡವರನ್ನೂ ಬಹಳ ಕಷ್ಟದಿಂದ ತಡೆದು–ಇಂದ್ರನು ಅಮರಾವತಿಗೆ ಪ್ರಯಾಣ ಮಾಡುವಂತೆ–ದ್ವಾರಕೆಯ ಕಡೆಗೆ ತೆರಳಿದನು.



ಶ್ರೀಕೃಷ್ಣನು ಹೊರಟೊಡನೆಯೇ ಪಾಂಡವರು ಹಿಂದಿರುಗಲಿಲ್ಲ. ರಥಸ್ಥನಾದ ಕೇಶವನನ್ನು ನೋಡುತ್ತಲೇ ನಿಂತಿದ್ದರು. ಎಲ್ಲಿಯವರೆಗೂ ತಮ್ಮ ದೃಷ್ಟಿಗಳ ಪ್ರಸಾರವಿದ್ದಿತೋ ಅಲ್ಲಿಯವರೆಗೂ ಪಾಂಡವರು ಶ್ರೀಕೃಷ್ಣನನ್ನೇ ದಿಟ್ಟಿಸಿ ನೋಡುತ್ತಿದ್ದರು. ರಥವು ಕಣ್ಮರೆಯಾದ ಮೇಲೆಯೂ ಪಾಂಡವರ ಮನಸ್ಸು ಶ್ರೀಕೃಷ್ಣನನ್ನನುಸರಿಸಿಯೇ ಹೋಯಿತು. ನಯನಾಭಿರಾಮನಾದ ಶ್ರೀಕೃಷ್ಣನು ಅದೃಶ್ಯನಾಗಲಾಗಿ ಕೃಷ್ಣಗತಮನಸ್ಕರಾಗಿಯೇ, ಅಕಾಮ

ರಾಗಿಯೇ (ಇಚ್ಛೆಯಿಲ್ಲದವರಾಗಿಯೇ) ಪಾಂಡವರು ಇಂದ್ರಪ್ರಸ್ಥದ ಕಡೆಗೆ ಹೊರಟರು.

ಹಿಂದೆ ಕುಳಿತಿದ್ದ ಸಾತ್ಯಕಿಯಿಂದಲೂ, ಮುಂದೆ ಕುಳಿತಿದ್ದ ಸಾರಥಿಯಾದ ದಾರುಕನಿಂದಲೂ ಸಹಿತನಾದ ಶ್ರೀಕೃಷ್ಣನು ಗರುಡನಂತೆ ವೇಗವಾಗಿ ದ್ವಾರವತಿಗೆ ಹೋಗಿ ಸೇರಿದನು.

ಇತ್ತಲಾಗಿ ಯುಧಿಷ್ಠಿರನೂ ತಮ್ಮಂದಿರೊಡನೆಯೂ, ಸುಹೃದರೊಡನೆಯೂ ಹಿಂದಿರುಗಿ ನಗರಶ್ರೇಷ್ಠವೆನಿಸಿದ್ದ ಇಂದ್ರಪ್ರಸ್ಥವನ್ನು ಪ್ರವೇಶಿಸಿದನು. ಅರಮನೆಯನ್ನು ಪ್ರವೇಶಿಸಿದನಂತರ ಯುಧಿಷ್ಠಿರನು ಸುಹೃದರನ್ನೂ, ತಮ್ಮಂದಿರನ್ನೂ, ಮಕ್ಕಳನ್ನೂ ಅವರವರ ಮನೆಗಳಿಗೆ ಕಳುಹಿಸಿಕೊಟ್ಟು, ದ್ರೌಪದಿಯೊಡನೆ ಸಂತೋಷದಿಂದಿದ್ದನು.

ಅತ್ತಲಾಗಿ ಕೇಶವನು ಉಗ್ರಸೇನನೇ ಮೊದಲಾದ ಯಾದವಪ್ರಮುಖರಿಂದ ಆದರದ ಸ್ವಾಗತವನ್ನು ಪಡೆದು ದ್ವಾರವತಿಯನ್ನು ಆನಂದದಿಂದ ಪ್ರವೇಶಿಸಿದನು. ಅರಮನೆಯೊಳಗೆ ಪ್ರವೇಶಿಸಿದನಂತರ ಶ್ರೀಕೃಷ್ಣನು ವೃದ್ಧರಾದ ತನ್ನ ಮಾತಾ-ಪಿತೃಗಳ ಸಮೀಪಕ್ಕೆ ಹೋಗಿ, ಅವರಿಗೆ ನಮಸ್ಕಾರಮಾಡಿ ಸತ್ಕರಿಸಿ, ಅಣ್ಣನಾದ ಬಲರಾಮನನ್ನು ಸಂಧಿಸಿ, ಅವನಿಗೂ ಮಣಿದು ಪ್ರದ್ಯುಮ್ನ-ಸಾಂಬ-ನಿಶಠ-ಚಾರುದೇಷ್ಣ-ಗದ- ಅನಿರುದ್ಧ ಮತ್ತು ಭಾನು–ಇವರೆಲ್ಲರನ್ನೂ ಆಲಿಂಗಿಸಿ, ಹಿರಿಯರ ಅನುಮತಿಯನ್ನು ಪಡೆದು ರುಕ್ಮಿಣಿಯ ಅಂತಃಪುರಕ್ಕೆ ತೆರಳಿದನು.”

೨ನೆಯ ಅಧ್ಯಾಯವು ಮುಗಿಯಿತು.

೩ನೆಯ ಅಧ್ಯಾಯ ಸಭಾಕ್ರಿಯಾಪರ್ವ (ಮುಂದುವರಿದಿದೆ.)

## ಮಯಾಸುರನು ಭೀಮನಿಗೆ ಗದೆಯನ್ನೂ ಮತ್ತು ಅರ್ಜುನನಿಗೆ ಶಂಖವನ್ನೂ ತಂದುಕೊಟ್ಟುದು : ಅದ್ಭುತಸಭಾಭವನದ ನಿರ್ಮಾಣ

ಜನಮೇಜಯ! ಮಯನು ಸಭಾಮಂದಿರದ ತಳಹದಿಯ ಕಾರ್ಯವೆಲ್ಲವನ್ನೂ ಮುಗಿಸಿ, ಒಂದು ದಿನ ಅರ್ಜುನನನ್ನು ಕುರಿತು ಹೇಳಿದನು :

“ಅರ್ಜುನ! ನಾನು ಸ್ವಲ್ಪ ದಿನಗಳವರೆಗೆ ಹಿಮಾಲಯದ ಕಡೆಗೆ

ಹೋಗಿಬರುವೆನು. ಕೈಲಾಸಪರ್ವತಕ್ಕೆ ಉತ್ತರದಿಕ್ಕಿನಲ್ಲಿರುವ ಮೈನಾಕಪರ್ವತದ ಮೇಲೆ ದಾನವರು ಯಜ್ಞಮಾಡಿದಾಗ-ನಾನು ಒಂದು ಮಣಿಮಯವಾದ, ಅತಿರಮ್ಯವಾದ ಸುವರ್ಣಭಾಂಡವನ್ನು ಸಿದ್ಧಗೊಳಿಸಿದ್ದೆನು. ಅದು ಬಹುದಿನಗಳವರೆಗೂ ಬಿಂದುಸರಸ್ಸಿನ ಸಮೀಪದಲ್ಲಿರುವ, ಸತ್ಯಸಂಧನಾದ, ದಾನವೇಶ್ವರನಾದ ವೃಷಪರ್ವನ ಸಭಾಮಂದಿರದಲ್ಲಿಯೇ ಇದ್ದಿತು. ಅದು ಇದುವರೆಗೂ ಅಲ್ಲಿಯೇ ಇದ್ದರೆ ಅದನ್ನು ತೆಗೆದುಕೊಂಡು ಕೂಡಲೇ ಹೊರಟುಬರುವೆನು. ಅದನ್ನು ತಂದನಂತರ ಅದರಲ್ಲಿರುವ ನವರತ್ನಗಳೆಲ್ಲವನ್ನೂ ಈಗ ಕಟ್ಟುತ್ತಿರುವ ಸಭಾಮಂದಿರಕ್ಕಾಗಿ ವಿನಿಯೋಗಿಸಿ, ಮನಃಪ್ರಹ್ಲಾದಿಯಾದ, ರತ್ನವಿಭೂಷಿತವಾದ ಈ ಸಭಾಮಂದಿರದ ಖ್ಯಾತಿಯು ಪ್ರಪಂಚದಲ್ಲೆಲ್ಲಾ ಹರಡುವಂತೆ ಮಾಡುವೆನು. ಬಿಂದುಸರಸ್ಸಿನಲ್ಲಿ ವಿಚಿತ್ರವಾದ ಒಂದು ಗದೆಯೂ ಇದ್ದ ಜ್ಞಾಪಕವಿದೆ. ದಾನವೇಶ್ವರನು ಶತ್ರುಗಳೆಲ್ಲರನ್ನೂ ಆ ಗದೆಯಿಂದಲೇ ನಿರ್ಮೂಲಮಾಡಿದನಂತರ ಆ ಸರೋವರದಲ್ಲಿಯೇ ಸುರಕ್ಷಿತವಾಗಿಟ್ಟಿರುವನೆಂದು ಕೇಳಿರುವೆನು. ಆ ಗದೆಯು ಬಹಳ ಭಾರವಾಗಿಯೂ, ಗಟ್ಟಿಯಾಗಿಯೂ, ಸುವರ್ಣಬಿಂದುಗಳಿಂದ ಚಿತ್ರಿತ ವಾಗಿಯೂ ಇರುವುದಲ್ಲದೇ–ಎಂತಹ ಬಲಶಾಲಿಯ ಆಘಾತವನ್ನಾದರೂ ತಡೆದುಕೊಳ್ಳುವ ಸಾಮರ್ಥ್ಯವನ್ನು ಹೊಂದಿದೆ. ಆ ಗದೆಯು ಒಂದು ಲಕ್ಷಗದೆಗಳಿಗೆ ಸಮಾನವಾದುದೆಂದು ಬಲ್ಲವರು ಹೇಳುತ್ತಾರೆ. ನಿನಗೆ ಗಾಂಡೀವವು ಅನುರೂಪವಾದ ಧನುಸ್ಸಾಗಿರುವಂತೆ ಭೀಮನಿಗೆ ಆ ಗದೆಯು ಅನುರೂಪವಾದ ಆಯುಧವಾಗುವುದು. ಇದೂ ಅಲ್ಲದೇ ಆ ಬಿಂದುಸರೋ ವರದಲ್ಲಿ ವರುಣದೇವನ ದೇವದತ್ತವೆಂಬ ಶಂಖವಿರುವುದೆಂದೂ ಕೇಳಿದ್ದೇನೆ. ಅದನ್ನೂ ತಂದು ನಿನಗರ್ಪಿಸಬೇಕೆಂಬ ಆಶಯವಿದೆ. ಹೋಗಿಬರಲೇ?"

ಅರ್ಜುನನು ಮಯನಿಗೆ ಹೋಗಿಬರಲು ಅನುಮತಿಯನ್ನಿತ್ತನು.

ಮಯನು ಈಶಾನ್ಯದಿಕ್ಕಿಗೆ ಅಭಿಮುಖವಾಗಿ ಹೊರಟು ಕೈಲಾಸವನ್ನು ಸೇರಿ, ಅಲ್ಲಿಂದ ಮುಂದೆ ಕೈಲಾಸಕ್ಕೆ ಉತ್ತರದಲ್ಲಿರುವ ಮೈನಾಕಪರ್ವತಕ್ಕೆ ತೆರಳಿದನು. ಮೈನಾಕಪರ್ವತದ ಶಿಖರವು ಅನೇಕವಿಧವಾದ ವಜ್ರವೈಡೂರ್ಯಗಳಿಂದ ಪ್ರಕಾಶಿಸುತ್ತಿದ್ದಿತು. ಅದಕ್ಕೆ ಹಿರಣ್ಯಶೃಂಗವೆಂದೂ

ಹೆಸರು. ಆ ಶೃಂಗದ ಸಮೀಪದಲ್ಲಿಯೇ ಬಿಂದುಸರೋವರವಿದೆ. ಆ ಪವಿತ್ರ ಸರೋವರದ ದಂಡೆಯಲ್ಲಿಯೇ ರಾಜಾ ಭಗೀರಥನು ಭೂಮಿಯಲ್ಲಿ ಗಂಗಾವತರಣಕ್ಕಾಗಿ ಅನೇಕಸಹಸ್ರವರ್ಷಗಳ ಕಾಲ ತಪಸ್ಸುಮಾಡಿ ಕೃತಕೃತ್ಯನಾದನು. ಅವನ ತಪಃಫಲದಿಂದ ಗಂಗೆಯು ಭೂಮಿಗೆ ಬಂದವಳಾದುದರಿಂದ ಅವಳಿಗೆ 'ಭಾಗೀರಥೀ' ಎಂಬ ಹೆಸರಾಯಿತು.

ಸರ್ವಭೂತಗಳಿಗೂ (ಪ್ರಾಣಿಗಳಿಗೂ) ಈಶ್ವರನಾದ ಪ್ರಜಾಪತಿಯಿಂದ ಅಲ್ಲಿ ಮುಖ್ಯ-ಮುಖ್ಯವಾದ ಅನೇಕಕ್ರತುಗಳು ನೂರಾರು ಸಂಖ್ಯೆಯಲ್ಲಿ ಮಾಡಲ್ಪಟ್ಟುವು. ಯಜ್ಞಗಳಲ್ಲಿನ ಯೂಪಸ್ತಂಭಗಳು ರತ್ನಮಯವಾಗಿಯೂ, ವೇದಿಕೆಗಳು ಸ್ವರ್ಣಮಯವಾಗಿಯೂ ಇದ್ದುವು. ಸ್ವರ್ಣಮಯವಾದ ವೇದಿಕೆಗಳನ್ನೂ ಮತ್ತು ಯೂಪಸ್ತಂಭಗಳನ್ನೂ ನಿರ್ಮಿಸಿದ್ದುದು ಕೇವಲ ಶೋಭಾರ್ಥವಾಗಿಯೇ ಹೊರತು ಶಾಸ್ತ್ರಾನುಸಾರವಾಗಿ ಅವುಗಳನ್ನು ಹಿರಣ್ಮಯವನ್ನಾಗಿ ಮಾಡಿರಲಿಲ್ಲ.

ಆ ಸ್ಥಳದಲ್ಲಿಯೇ ಇಂದ್ರನು ನೂರು ಯಾಗಗಳನ್ನು ಮಾಡಿ 'ಶತಕ್ರತು' ಎಂಬ ಹೆಸರನ್ನು ಪಡೆದನು. ಆ ಕ್ರತುಗಳ ಸ್ಮಾರಕವಾಗಿ ಅಲ್ಲಿ ಸ್ವರ್ಣಮಯವಾದ, ರತ್ನಖಚಿತವಾದ ಯೂಪಸ್ತಂಭಗಳು ಸ್ಥಾಪಿಸಲ್ಪಟ್ಟಿವೆ. ಆ ಸ್ಥಳದಲ್ಲಿಯೇ ಉಗ್ರತೇಜಸ್ವಿಯಾದ ಮಹಾದೇವನು ಸಮಸ್ತಲೋಕ ಗಳನ್ನೂ ಸೃಷ್ಟಿಮಾಡಿ ಅನಂತರ ಸಾವಿರಾರು ಭೂತಗಣಗಳಿಂದ ಪೂಜೆಯನ್ನು ಸ್ವೀಕರಿಸುತ್ತಾ ವಾಸಮಾಡುತ್ತಿದ್ದಾನೆ. ಆ ಪವಿತ್ರಭೂಮಿಯಲ್ಲಿಯೇ ನರ-ನಾರಾಯಣರು, ಬ್ರಹ್ಮ, ಯಮ, ಸ್ಥಾಣು–ಈ ಐವರೂ ಸಹಸ್ರಯುಗ ಗಳಿಗೊಂದಾವರ್ತಿ ಮಹಾಕ್ರತುವನ್ನು ಮಾಡುತ್ತಾರೆ. ಪ್ರಪಂಚದಲ್ಲಿ ಧರ್ಮಸ್ಥಾಪನೆಗಾಗಿ ವಾಸುದೇವನು ಅನೇಕವರ್ಷಗಳ ಸತ್ರಯಜ್ಞಗಳನ್ನು ಅಲ್ಲಿಯೇ ಮಾಡಿ ಮುಗಿಸಿರುವನು. ಅಲ್ಲಿಯೇ ಸಹಸ್ರ-ಸಹಸ್ರನಿಷ್ಕಗಳನ್ನು ದಕ್ಷಿಣೆಯಾಗಿ ಕೊಟ್ಟನು. ಆ ಸ್ಥಳದಲ್ಲಿ ಕ್ರತುಗಳ ಸ್ಮಾರಕಕ್ಕಾಗಿಯೇ ಕೇಶವನಿಂದ ನಿರ್ಮಿಸಲ್ಪಟ್ಟ ಸ್ವರ್ಣಮಯವಾದ ಮಾಲೆಗಳಿಂದ ಅಲಂಕೃತವಾಗಿರುವ ಯೂಪಸ್ತಂಭಗಳೂ, ವೇದಿಗಳೂ ಈಗಲೂ ಅಚ್ಚಳಿಯದೇ ಶೋಭಿಸುತ್ತಿವೆ. ಅಂತಹ ಪವಿತ್ರಸ್ಥಳಕ್ಕೆ ಮಯನು ಹೋಗಿ ಗದೆಯನ್ನೂ, ದೇವದತ್ತ ವೆಂಬ ಶಂಖವನ್ನೂ, ವೃಷಪರ್ವನ ಸಭಾಮಂದಿರದಲ್ಲಿದ್ದ ನವರತ್ನಖಚಿತ

ವಾದ ಸ್ವರ್ಣಭಾಂಡವನ್ನೂ ಮತ್ತು ಯಕ್ಷ-ರಾಕ್ಷಸರಿಂದ ಸಂರಕ್ಷಿತವಾಗಿದ್ದ ಅನೇಕರತ್ನಸಂಪತ್ತನ್ನೂ ಯುಧಿಷ್ಠಿರನ ಸಭಾಮಂದಿರವನ್ನು ಕಟ್ಟಲು ತೆಗೆದುಕೊಂಡು ಬಂದನು.

ಮಹಾರಾಜ! ಮಯನು ಯುಧಿಷ್ಠಿರನಿಗಾಗಿ ನಿರ್ಮಿಸಿದ ನವರತ್ನ ಖಚಿತವಾದ ಸಭಾಮಂದಿರದ ಸೊಬಗು ಮೂರು ಲೋಕಗಳಲ್ಲಿಯೂ ವಿಖ್ಯಾತವಾಯಿತು. ಮಯನು ತಾನು ತಂದಿದ್ದ ಶ್ರೇಷ್ಠವಾದ ಗದೆಯನ್ನು ಭೀಮನಿಗೂ, ದೇವದತ್ತವೆಂಬ ಶಂಖವನ್ನು ಅರ್ಜುನನಿಗೂ ಅರ್ಪಿಸಿದನು. ದೇವದತ್ತದ ಧ್ವನಿಯು ಸಮಸ್ತಪ್ರಾಣಿಗಳ ಹೃದಯಗಳನ್ನೂ ತಲ್ಲಣ ಗೊಳಿಸುವುದಾಗಿದ್ದಿತು.

ಮಯನು ಕಟ್ಟಿದ ಅರಮನೆಯು ಹಿಂದೆಯೇ ಹೇಳಿದಂತೆ ಹತ್ತು ಸಾವಿರ ಚದುರಮೊಳಗಳ ಭವ್ಯಭವನವಾಗಿದ್ದಿತು. ಸ್ವರ್ಣದಿಂದಲೂ, ನವರತ್ನಗಳ ಕಾಂತಿಯಿಂದಲೂ ಜಾಜ್ವಲ್ಯಮಾನವಾಗಿದ್ದ ಆ ಅರಮನೆಯು ಸೂರ್ಯ-ಚಂದ್ರಾಗ್ನಿಗಳ ಸಭಾಭವನಗಳಂತೆ ವಿರಾಜಿಸುತ್ತಾ ಮನೋಹರ ವಾಗಿದ್ದಿತು. ತನ್ನ ಪ್ರಭೆಯಿಂದ ಸೂರ್ಯನ ತೇಜೋಮಯವಾದ ಪ್ರಭೆಯನ್ನೂ ಕುಂಠಿತಗೊಳಿಸುತ್ತಿತ್ತು. ಆ ದಿವ್ಯಸಭಾಭವನವು ತನ್ನ ಅಲೌಕಿಕವಾದ ತೇಜಸ್ಸಿನಿಂದ ನಿರಂತರವಾಗಿ ಪ್ರದೀಪ್ತವಾಗಿದ್ದಿತು.

ಅಂತರಿಕ್ಷದಲ್ಲಿ ಹೊಸದಾದ ಬಿಳಿಯ ಮೋಡವು ಪ್ರಕಾಶಿಸುವಂತೆ ಪೃಥ್ವಿಯ ಮೇಲೆ ಆ ಭವ್ಯಭವನವು ಪ್ರಕಾಶಿಸಿತು.

ವಿಶಾಲವಾಗಿಯೂ, ಎತ್ತರವಾಗಿಯೂ ಮನೋಹರವಾಗಿಯೂ, ಉತ್ತಮೋತ್ತಮವಾದ ವಸ್ತುಸಂಗ್ರಹಗಳಿಂದ ನಿರ್ಮಿತವಾಗಿಯೂ, ರತ್ನ ಖಚಿತವಾದ ಪ್ರಾಕಾರಗಳಿಂದಲೂ, ರತ್ನತೋರಣಗಳಿಂದಲೂ, ಕೂಡಿದು ದಾಗಿಯೂ ಅನೇಕಚಿತ್ರಗಳಿಂದ ಕೂಡಿದುದಾಗಿಯೂ ಮತ್ತು ಬಹುಧನ ವ್ಯಯದಿಂದ ನಿರ್ಮಿಸಲ್ಪಟ್ಟಿದ್ದುದಾಗಿಯೂ ಇದ್ದ ಆ ಮಯನಿರ್ಮಿತವಾದ ಸಭಾಮಂದಿರವು ಶ್ರೀಕೃಷ್ಣನ ಸಭೆಯನ್ನೂ, ಸುಧರ್ಮಾಸಭಾಮಂದಿರವನ್ನೂ (ದೇವಸಭೆಯನ್ನೂ), ಬ್ರಹ್ಮದೇವನ ಸಭಾಭವನವನ್ನೂ ಕಾಂತಿಯಿಂದಲೂ, ಸೊಬಗಿನಿಂದಲೂ ಮೀರಿಸಿದ್ದಿತು. ಆ ಭವ್ಯಮಂದಿರಕ್ಕೆ ಪರಾಕ್ರಮಿಗಳಾದ,

ಭಯಂಕರರಾದ, ಮಹಾಕಾಯರಾದ, ಕೆಂಡದಂತಹ ಕಣ್ಣುಗಳನ್ನು ಹೊಂದಿದ್ದ, ಅಂತರಿಕ್ಷದಲ್ಲಿಯೂ ಗಮನಶಕ್ತಿಯುಳ್ಳ ಎಂಟುಸಾವಿರ ಮಂದಿ ಕಿಂಕರರೆಂಬ ರಾಕ್ಷಸರು ರಕ್ಷಕರಾಗಿದ್ದರು ಮತ್ತು ಅದನ್ನು ಹೊತ್ತಿದ್ದರು. ಆ ಅರಮನೆಯಲ್ಲಿ ಮಯನು ಅಪ್ರತಿಮವಾದ ಒಂದು ಪುಷ್ಕರಿಣಿಯನ್ನೂ



ನಿರ್ಮಿಸಿದ್ದನು. ಆ ಕೊಳದಲ್ಲಿ ತಾವರೇಹೂಗಳ ಬಳ್ಳಿಗಳಿದ್ದುವು. ಎಲೆಗಳು ನೀಲಿಬಣ್ಣದ ವೈಡೂರ್ಯಗಳಿಂದ ಮಾಡಲ್ಪಟ್ಟಿದ್ದುವು. ಬಳ್ಳಿಗಳು ಥಳ-ಥಳಿಸುವ ರತ್ನಗಳಿಂದ ನಿರ್ಮಿತವಾಗಿದ್ದುವು. ಕಮಲಗಳೆಲ್ಲವೂ ಸ್ವರ್ಣಮಯವಾಗಿದ್ದುವು. ಆ ಕೊಳದಲ್ಲಿ ಅನೇಕಜಾತಿಯ ಪಕ್ಷಿಗಳೂ ವಾಸವಾಗಿದ್ದುವು. ಸ್ವರ್ಣದ ಕಾಂತಿಯಿದ್ದ ಮೀನುಗಳೂ, ಆಮೆಗಳೂ ಅನೇಕವಿದ್ದುವು. ಕೊಳದ ಕೆಳಭಾಗದಲ್ಲಿ ಸ್ವಲ್ಪವಾದರೂ ಕೆಸರಿರಲಿಲ್ಲ. ತಾಮರಸವು ಪಂಕೇರುಹವೆಂಬ (ಕೆಸರಿನಲ್ಲಿ ಹುಟ್ಟಿದ್ದೆಂಬ) ನಿಂದೆಯನ್ನು ಅಲ್ಲಿ ಕಳೆದುಕೊಂಡಿದ್ದಿತು. ಅದರಲ್ಲಿದ್ದ ನೀರು ಬಹಳ ತಿಳಿಯಾಗಿದ್ದಿತು. ಆ ಕೊಳದ ಸುತ್ತಲೂ ಮಣಿ

ಶಿಲೆಯ ಮತ್ತು ಸ್ಫಟಿಕದ ಸೋಪಾನಗಳಿದ್ದುವು. ಅವನ್ನೂ ರತ್ನಗಳಿಂದ ಅಲಂಕರಿಸಲಾಗಿದ್ದಿತು. ಅಂತಹ ದಿವ್ಯಸರಸ್ಸನ್ನು ನೋಡಿ ಅನೇಕರಾಜರು ಹಗಲಿನಲ್ಲಿಯೇ ಭೂಮಿಯೆಂದು ಭ್ರಮಿಸಿ ಕೊಳದಲ್ಲಿ ಬೀಳುತ್ತಿದ್ದರೆಂದರೆ–ಕೊಳದ ನಿರ್ಮಾಣದ ಚಾತುರ್ಯವೆಷ್ಟೆಂಬುದನ್ನು ಊಹಿಸಬಹುದಾಗಿದೆ. ನಯನಮನೋಹರವಾದ ಅನೇಕ ಲತಾ-ಗುಲ್ಮಗಳೂ, ವೃಕ್ಷಗಳೂ ಭವ್ಯಮಂದಿರದ ಸುತ್ತಲೂ ಅನೇಕ ದಿವ್ಯಸರೋವರಗಳೂ ಇದ್ದುವು. ಅವುಗಳಲ್ಲಿ ಕಾರಂಡವಪಕ್ಷಿಗಳೂ, ಚಕ್ರವಾಕಗಳೂ, ರಾಜಹಂಸಗಳೂ ನಲಿದಾಡುತ್ತಿದ್ದು ಸರೋವರಗಳ ಕಾಂತಿಯನ್ನು ಇಮ್ಮಡಿಗೊಳಿಸಿದ್ದುವು. ಆ ಸರೋವರಗಳಲ್ಲಿದ್ದ ತಾಮರಸಗಳ ಸುಗಂಧವನ್ನೂ ಮತ್ತು ಅರಮನೆಯ ಸುತ್ತಲೂ ಇದ್ದ ವೃಕ್ಷಗಳ ಪರಿಮಳವನ್ನೂ ವಾಯುವು ಅರಮನೆಯೊಳಕ್ಕೂ ಕೊಂಡೊಯ್ದು ಪಾಂಡವರ ಸೇವೆಯನ್ನು ಮಾಡುತ್ತಿದ್ದನು.

ಅಂತಹ ಭವ್ಯವಾದ ಸಭಾಮಂದಿರವನ್ನು ಮಯನು ಹದಿನಾಲ್ಕು ತಿಂಗಳ ಅವಧಿಯಲ್ಲಿ ನಿರ್ಮಿಸಿ ಧರ್ಮರಾಜನಿಗೆ ನಿವೇದಿಸಿದನು.”

ಌನೆಯ ಅಧ್ಯಾಯವು ಮುಗಿಯಿತು.

೪ನೆಯ ಅಧ್ಯಾಯ ಸಭಾಕ್ರಿಯಾಪರ್ವ (ಮುಂದುವರಿದಿದೆ.)

## ಸಭಾಭವನಕ್ಕೆ ಧರ್ಮರಾಜನ ಪ್ರವೇಶ : ಸಭೆಯಲ್ಲಿದ್ದ ಮಹರ್ಷಿಗಳ ಮತ್ತು ರಾಜರ ಪರಿಚಯ

“ಪಾರಿಕ್ಷಿತ! ಯುಧಿಷ್ಠಿರನು ಮಯನಿರ್ಮಿತವಾದ, ಸುಂದರವಾದ ಸಭಾಭವನದ ಪ್ರವೇಶಮಹೋತ್ಸವವನ್ನು ಸಕಲವೈಭವಗಳೊಂದಿಗೆ ಮಾಡಿದನು.

ಯುಧಿಷ್ಠಿರನು ನೂತನಗೃಹಪ್ರವೇಶಮಾಡಿದಂದು ಹತ್ತುಸಾವಿರ ಬ್ರಾಹ್ಮಣೋತ್ತಮರಿಗೆ ಮೃಷ್ಟಾನ್ನವನ್ನಿಟ್ಟನು. ಅಂದಿನ ಮೃಷ್ಟಾನ್ನವು ಹಾಲು, ಪಾಯಸ, ತುಪ್ಪ, ಜೇನುತುಪ್ಪ, ನಾನಾವಿಧವಾದ ಹಣ್ಣುಗಳು, ಹಲವಾರು ಗೆಡ್ಡೆ-ಗೆಣಸುಗಳು, ಅನೇಕವಿಧವಾದ ಕಾಯಿ-ಪಲ್ಯಗಳು ಇತ್ಯಾದಿಗಳಿಂದ ಸಿದ್ಧಮಾಡಲ್ಪಟ್ಟಿದ್ದಿತು. ಭಕ್ಷ್ಯ-ಭೋಜ್ಯ-ಲೇಹ್ಯ-ಚೋಷ್ಯ-

ಪಾನೀಯಗಳು ಯಥೇಚ್ಛವಾಗಿ ಹಂಚಲ್ಪಟ್ಟುವು. ಬ್ರಾಹ್ಮಣೋತ್ತಮರೆಲ್ಲರಿಗೂ ನೂತನ ವಸ್ತ್ರಗಳೂ, ಸುಗಂಧಮಾಲೆಗಳೂ ಕೊಡಲ್ಪಟ್ಟುವು. ಪ್ರತಿಯೊಬ್ಬ ಬ್ರಾಹ್ಮಣನಿಗೂ ದಕ್ಷಿಣೆಯ ರೂಪವಾಗಿ ಹಲವು ಸಾವಿರ ಹಸುಗಳು ಕೊಡಲ್ಪಟ್ಟುವು. ಸ್ವಸ್ತಿವಾಚನಕಾಲದಲ್ಲಿ ಬ್ರಾಹ್ಮಣರು ಮಾಡುತ್ತಿದ್ದ **"ಓಂ ಪುಣ್ಯಾಹಂ। ಕರ್ಮಣೇ ಸ್ವಸ್ತಿ। ಕರ್ಮ ಋಧ್ಯತಾಂ।"** – ಎಂಬ ಈ ವಾಕ್ಯಗಳು ನಭೋಮಂಡಲವನ್ನೂ ಭೇದಿಸುತ್ತಿದ್ದುವು.

ಯುಧಿಷ್ಠಿರನು ನಾನಾವಿಧವಾದ ಗಂಧ-ಪುಷ್ಪಾಕ್ಷತೆಗಳಿಂದ ದೇವತೆಗಳನ್ನು ಪೂಜಿಸಿದನು. ಆ ಶುಭಸಮಾರಂಭದಲ್ಲಿ ಅನೇಕಗಾಯಕರು ಗಾನಮಾಡಿದರು. ಮಲ್ಲರು ತಮ್ಮ ಶಕ್ತಿ-ಸಾಮರ್ಥ್ಯಗಳನ್ನು ಪ್ರದರ್ಶಿಸಿದರು. ನಟರು ತಮ್ಮ ನಾಟ್ಯಕಲೆಯಿಂದ ಧರ್ಮರಾಜನನ್ನು ತಣಿಸಿದರು. ಹೊಗಳುಭಟರು ನೂತನವಾದ ಹೊಗಳಿಕೆಯ ಪದ್ಯಗಳನ್ನು ಕಟ್ಟಿ ಸುಮಧುರವಾದ ಕಂಠಗಳಿಂದ ಹಾಡಿದರು.

ಯುಧಿಷ್ಠಿರನು ತನ್ನ ಅನುಜರಿಂದೊಡಗೂಡಿ ನೂತನಗೃಹಪ್ರವೇಶ ಮಾಡಿ–ಇಂದ್ರನು ಸ್ವರ್ಗದಲ್ಲಿ ಆನಂದಿಸುವಂತೆ–ಆನಂದಭರಿತನಾದನು. ಆ ಮಹೋತ್ಸವಕ್ಕೆ ಆಗಮಿಸದಿದ್ದ ಋಷಿಗಳೇ ಇರಲಿಲ್ಲ. ಅಸಿತ, ದೇವಲ, ಸತ್ಯ, ಸರ್ಪಿರ್ಮಾಲೀ, ಮಹಾಶಿರ, ಅರ್ವಾವಸು, ಸುಮಿತ್ರ, ಮೈತ್ರೇಯ, ಶುನಕ, ಬಲಿ, ಬಕದಾಲ್ಭ್ಯ, ಸ್ಥೂಲಶಿರ, ಕೃಷ್ಣದ್ವೈಪಾಯನ, ಶುಕ, ಸುಮಂತು, ಜೈಮಿನಿ, ಪೈಲ, ವ್ಯಾಸಶಿಷ್ಯರಾದ ನಾವುಗಳು, ತಿತ್ತಿರಿ, ಯಾಜ್ಞವಲ್ಕ್ಯ, ಪುತ್ರಸಹಿತನಾದ ಲೋಮಹರ್ಷಣ, ಅಪ್ಸುಹೋಮ್ಯ, ಧೌಮ್ಯ, ಅಣಿಮಾಂಡವ್ಯ, ಕೌಶಿಕ, ದಾಮೋಷ್ಣೀಷ, ತ್ರೈಬಲಿ, ಪರ್ಣಾದ, ಘಟಜಾನುಕ, ಮೌಂಜಾಯನ, ವಾಯುಭಕ್ಷ, ಪಾರಾಶರ್ಯ, ಸಾರಿಕ, ಬಲಿವಾಕ, ಸಿನೀವಾಕ, ಸತ್ಯಪಾಲ, ಕೃತಶ್ರಮ, ಜಾತುಕರ್ಣ, ಶಿಖಾವಂತ, ಆಲಂಬ, ಪಾರಿಜಾತಕ, ಪರ್ವತ, ಮಾರ್ಕಂಡೇಯ, ಪವಿತ್ರಪಾಣಿ, ಸಾವರ್ಣ, ಭಾಲುಕಿ, ಗಾಲವ, ಜಂಘಾಬಂಧು, ರೈಭ್ಯ, ಕೋಪವೇಗ, ಭೃಗು, ಹರಿಬಭ್ರು, ಕೌಂಡಿನ್ಯ, ಬಭ್ರುಮಾಲೀ, ಸನಾತನ, ಕಾಕ್ಷೀವಂತ, ಔಶಿಜ, ನಾಚಿಕೇತ, ಗೌತಮ, ಪೈಂಗ್ಯ, ವರಾಹ, ಎರಡನೇ ಶುನಕ, ಶಾಂಡಿಲ್ಯ, ಕುಕ್ಕುರ,

ವೇಣುಜಂಘ, ಕಾಲಾಪ ಮತ್ತು ಕಠ–ಇವರೇ ಮೊದಲಾದ ಮಹರ್ಷಿಗಳು ನೂತನಸಭಾಮಂದಿರದ ಪ್ರವೇಶೋತ್ಸವದಲ್ಲಿ ಭಾಗವಹಿಸಿದ್ದರು. ನಿತ್ಯಶುದ್ಧರಾದ ವೇದ-ವೇದಾಂಗಪಾರಂಗತರಾದ, ಧರ್ಮನಿಷ್ಠರಾದ, ಜಿತೇಂದ್ರಿಯರಾದ, ಧರ್ಮವಿದ್ವಾಂಸರಾದ ಬೇರೆಯ ಮಹರ್ಷಿಗಳೂ ಅಪರಿಮಿತಸಂಖ್ಯೆಯಲ್ಲಿ ಬಂದು ಧರ್ಮಪ್ರವಚನಗಳಿಂದ ಯುಧಿಷ್ಠಿರನನ್ನು ಆನಂದಸಾಗರದಲ್ಲಿ ಮುಳುಗಿಸಿದರು.

ಆ ಶುಭಸಮಾರಂಭದಲ್ಲಿ ಆಹ್ವಾನವನ್ನು ಸ್ವೀಕರಿಸಿ ಬಂದ ರಾಜರೂ ಅಪರಿಮಿತಸಂಖ್ಯೆಯಲ್ಲಿದ್ದರು. ಮುಂಜಕೇತು, ವಿವರ್ಧನ, ಸಂಗ್ರಾಮಜಿತ್, ದುರ್ಮುಖ, ಉಗ್ರಸೇನ, ಕಕ್ಷಸೇನ, ಕ್ಷೇಮಕ, ಕಾಂಬೋಜಾಧಿಪತಿಯಾದ ಕಮಠ, ಇಂದ್ರನು ಕಾಲಕೇಯಾಸುರರನ್ನು ನಡುಗಿಸುತ್ತಿದ್ದಂತೆ ಯವನರನ್ನು ಏಕವೀರನಾಗಿಯೇ ನಡುಗಿಸುತ್ತಿದ್ದ ಕಂಪನ, ಜಟಾಸುರ, ಮದ್ರರಾಜನಾದ ಶಲ್ಯ, ಕುಂತಿಭೋಜ, ಕಿರಾತರಾಜನಾದ ಪುಲಿಂದ, ಅಂಗರಾಜ, ವಂಗರಾಜ, ಪುಂಡ್ರಕ, ಪಾಂಡ್ಯ, ಆಂಧ್ರಕ, ಊಡ್ರರಾಜ, ಸುಮಿತ್ರ, ಶೈಬ್ಯ, ಸುಮನಸ, ಯವನಾಧಿಪತಿ, ಚಾಣೂರ, ದೇವರಾತ, ಭೋಜ, ಭೀಮರಥ, ಶ್ರುತಾಯುಧ, ಜಯಸೇನ, ಸುಕರ್ಮಾ, ಚೇಕಿತಾನ, ಪುರು, ಕೇತುಮಂತ, ವಸುದಾನ, ವಿದೇಹರಾಜನಾದ ಕೃತಕ್ಷಣ, ಸುಧರ್ಮಾ, ಅನಿರುದ್ಧ, ಶ್ರುತಾಯು, ಅನೂಪರಾಜ, ಕ್ರಮಜಿತ್, ಸುದರ್ಶನ, ಪುತ್ರಸಹಿತನಾದ ಶಿಶುಪಾಲ, ಕರೂಷಾಧಿಪತಿ (ದಂತವಕ್ತ್ರ), ವೃಷ್ಣಿಕುಲದ ಆಹುಕ, ವಿಪೃಥು, ಗದ, ಸಾರಣ, ಅಕ್ರೂರ, ಕೃತವರ್ಮಾ, ಸತ್ಯಕ, ಭೀಷ್ಮಕ, ಆಕೃತಿ, ದ್ಯುಮತ್ಸೇನ– ಮುಂತಾದವರೂ, ಕೇಕಯರಾಜಕುಮಾರರೂ, ಯಜ್ಞಸೇನ (ದ್ರುಪದ), ಕೇತುಮಂತ, ವಸುಮಂತ–ಇವರೇ ಮೊದಲಾದ ರಾಜ-ಮಹಾರಾಜರೂ ಗೃಹಪ್ರವೇಶಸಮಾರಂಭಕ್ಕೆ ಆಗಮಿಸಿದ್ದರು.

ಅರ್ಜುನನ ಧನುರ್ವಿದ್ಯಾಶಿಷ್ಯರಾಗಿದ್ದ, ಕೃಷ್ಣಾಜಿನವನ್ನು ತೊಟ್ಟಿದ್ದ, ಪ್ರದ್ಯುಮ್ನ, ಸಾಂಬ, ಯುಯುಧಾನ (ಸಾತ್ಯಕಿ), ಸುಧರ್ಮಾ, ಅನಿರುದ್ಧ, ಶೈಬ್ಯ–ಮುಂತಾದ ರಾಜಕುಮಾರರೂ ಯುಧಿಷ್ಠಿರನ ಶುಶ್ರೂಷೆಯಲ್ಲಿ ನಿರತರಾಗಿದ್ದರು.

ಅರ್ಜುನನ ಮಿತ್ರರಾದ ತುಂಬುರು, ಅಮಾತ್ಯಸಮೇತನಾದ ಚಿತ್ರಸೇನ ಮತ್ತು ಇತರ ಅನೇಕ ಗಂಧರ್ವರೂ, ಅಪ್ಸರೆಯರೂ, ಹಾಡುಗಾರಿಕೆ ಮತ್ತು ವಾದ್ಯಗಳಲ್ಲಿ ನಿಷ್ಣಾತರಾಗಿದ್ದ ಕಿನ್ನರ-ಕಿಂಪುರುಷರೂ ಧರ್ಮರಾಜನ ಸಭಾಭವನಕ್ಕೆ ಬಂದು ಅವನನ್ನು ತಮ್ಮ ಕಲಾಪಾಂಡಿತ್ಯಗಳಿಂದ ಸಂತುಷ್ಟನನ್ನಾಗಿ ಮಾಡಿದರು.

ಒಂದೆಡೆಯಲ್ಲಿ ಬ್ರಾಹ್ಮಣೋತ್ತಮರೂ, ಮತ್ತೊಂದೆಡೆಯಲ್ಲಿ ಋಷಿ-ಮಹರ್ಷಿಗಳೂ, ಇನ್ನೊಂದೆಡೆಯಲ್ಲಿ ರಾಜ-ಮಹಾರಾಜರೂ, ಬೇರೊಂದು ಕಡೆಯಲ್ಲಿ ಯಕ್ಷ-ಗಂಧರ್ವ-ಕಿನ್ನರ-ಕಿಂಪುರುಷರೂ, ಅವರೆಲ್ಲರ ಸುತ್ತಲೂ ತಮ್ಮ ರಾಜನ ಅಗ್ಗಳಿಕೆಯನ್ನು ಕಂಡು ಆನಂದಬಾಷ್ಪಗಳನ್ನು ಸುರಿಸುತ್ತಿದ್ದ ಪೌರರೂ ಇದ್ದರು. ಅವರೆಲ್ಲರ ಮಧ್ಯದಲ್ಲಿ ವಿರಾಜಿಸುತ್ತಿದ್ದ ಯುಧಿಷ್ಠಿರನು ದೇವಲೋಕದಲ್ಲಿ ದೇವತೆಗಳಿಂದ ಪರಿವೃತನಾಗಿ ಕುಳಿತಿರುವ ಬ್ರಹ್ಮನಂತೆಯೇ ಪ್ರಕಾಶಿಸಿದನು.”

ಳನೆಯ ಅಧ್ಯಾಯವು ಮುಗಿಯಿತು.

ಽನೆಯ ಅಧ್ಯಾಯ ಲೋಕಪಾಲಸಭಾಖ್ಯಾನಪರ್ವ

## ಯುಧಿಷ್ಠಿರನ ಸಭೆಗೆ ನಾರದರ ಆಗಮನ : ಪ್ರಶ್ನೆಗಳ ರೂಪದಲ್ಲಿ ರಾಜನೀತಿಯ ಉಪದೇಶ

ಜನಮೇಜಯ! ಪಾಂಡವರು ಮಯನಿರ್ಮಿತವಾದ ಭವ್ಯಭವನದಲ್ಲಿ ಮಹರ್ಷಿಗಳಿಂದಲೂ, ಯಕ್ಷ-ಗಂಧರ್ವರಿಂದಲೂ, ರಾಜಾಧಿರಾಜ ರಿಂದಲೂ, ಪ್ರಜೆಗಳಿಂದಲೂ ಪರಿವೃತರಾಗಿ ಸಿಂಹಾಸನದಲ್ಲಿ ಕುಳಿತಿರುವಾಗ ಮಹರ್ಷಿಗಳಾದ ನಾರದರು ಆಗಮಿಸಿದರು.

ವೇದೋಪನಿಷತ್ತುಗಳ ರಹಸ್ಯಜ್ಞ ; ದೇವಪೂಜಿತ ; ಪುರಾಣೇತಿಹಾಸ ಗಳಲ್ಲಿ ನಿಷ್ಣಾತ ; ನ್ಯಾಯಶಾಸ್ತ್ರವಿಶಾರದ ; ಶಿಕ್ಷಾ-ವ್ಯಾಕರಣ-ಛಂದಸ್ಸು-ನಿರುಕ್ತ-ಜ್ಯೌತಿಷ-ಕಲ್ಪ ಈ ಆರು ವೇದಾಂಗಗಳಲ್ಲಿ ಪಾರಂಗತ ಐಕ್ಯ-ಸಂಯೋಗ-ನಾನಾತ್ವ ಮತ್ತು ಸಮವಾಯಗಳಲ್ಲಿ ವಿಶಾರದ (ಶ್ರುತಿ-ಸ್ಮೃತಿ ಗಳಲ್ಲಿ ವಿರೋಧಾಭಾಸಗಳು ಸಾಮಾನ್ಯರ ದೃಷ್ಟಿಗೆ ಗೋಚರವಾಗುತ್ತವೆ.

ತತ್ತ್ವತಃ ಅವುಗಳು ವಿರೋಧಾಭಾಸಗಳಲ್ಲ. ಈ ವಿಷಯಗಳು ತಿಳಿಯಬೇಕಾದರೆ ಮಾನವನು ಶಾಸ್ತ್ರಾರ್ಥಪ್ರಕ್ರಿಯೆಗಳನ್ನು ತಿಳಿದಿರುವುದು ಮಾತ್ರವಲ್ಲದೇ ಆತ್ಮಜ್ಞಾನಿಯೂ ಆಗಿರಬೇಕು. ಅಂತಹವನು ಮಾತ್ರವೇ ವಿರೋಧಾಭಾಸಗಳನ್ನು ಸಮನ್ವಯಮಾಡಲು ಸಮರ್ಥನಾಗುತ್ತಾನೆ.) ವಾಗ್ಮೀ ; ಪ್ರಗಲ್ಭ; ಊಹಾಪೋಹಕುಶಲ ; ಸ್ಮೃತಿಮಂತ ; ಮೇಧಾವೀ ; ಕವಿ ; ಪರಾಪರವಿದ್ಯಾವಿಭಾಗಗಳನ್ನು ತಿಳಿದವನು ; ತರ್ಕಪಟು ; ಪ್ರತಿಜ್ಞಾ-ಹೇತು-ದೃಷ್ಟಾಂತ-ಉಪನಯ-ನಿಗಮನ ಈ ಪಂಚಾವಯವ ವಾಕ್ಯಗಳ ಗುಣದೋಷಜ್ಞ; ಬೃಹಸ್ಪತಿಯೊಡನೆಯಾದರೂ ಸಕಲವಿಷಯ ಗಳಲ್ಲಿಯೂ ವಾದಮಾಡಲು ಸಮರ್ಥ ; ಧರ್ಮಾರ್ಥ-ಕಾಮ-ಮೋಕ್ಷಗಳ ವಿಷಯದಲ್ಲಿ 'ಇದಮಿತ್ಥಂ' ಎಂಬ ನಿಶ್ಚಯಜ್ಞಾನೀ ; ತ್ರಿಕಾಲಜ್ಞ ; ಚತುರ್ದಶ ಭುವನಗಳ ಪ್ರತ್ಯಕ್ಷದರ್ಶೀ ; ಸಾಂಖ್ಯ ಮತ್ತು ಯೋಗಶಾಸ್ತ್ರಗಳೆರಡರಲ್ಲಿಯೂ ನಿಪುಣ ; ದೇವಾಸುರರಿಬ್ಬರ ಗರ್ವವನ್ನೂ ಮುರಿಯಲು ಪರಸ್ಪರ ಕಲಹಪ್ರಚೋದಕ ; ಸಂಧಿ-ವಿಗ್ರಹ-ಯಾನಾಸನ-ದ್ವೈಧೀಭಾವ- ಸಮಾಶ್ರ ಯಜ್ಞ; ಕಲಹಪ್ರಿಯ ; ಗೀತಪ್ರಿಯ ; ಸರ್ವವಿದ್ಯೆಗಳಲ್ಲಿಯೂ ಅಪ್ರತಿಹತ–ಇತ್ಯಾದಿ ಗುಣಸಂಪನ್ನರಾದ ನಾರದರು ಪಾರಿಜಾತ, ಪರ್ವತ, ಸೌಮ್ಯ, ಸುಮುಖ–ಈ ನಾಲ್ವರಿಂದ ಸಮೇತರಾಗಿ ಲೋಕಸಂಚಾರಮಾಡುತ್ತಾ ಯುಧಿಷ್ಠಿರನ ಸಭಾಮಂಟಪವನ್ನು ಪ್ರವೇಶಿಸಿದರು. ಅಂದಿನ ಪಾಂಡವರ ವೈಭವವನ್ನು ಕಂಡು ನಾರದರಿಗೆ ಬಹಳ ಸಂತೋಷವಾಯಿತು. 'ಜಯೋಽಸ್ತು ಧರ್ಮರಾಜಾಯ! ವಿಜಯೀ ಭವ!' – ಮುಂತಾದ ಆಶೀರ್ವಚನಗಳನ್ನು ಕೇಳಿದೊಡನೆಯೇ ಯುಧಿಷ್ಠಿರನು ಅನುಜರೊಡನೆ ಆಸನದಿಂದ ಮೇಲೆದ್ದು, ಸ್ವಲ್ಪದೂರ ಮುಂದೆ ನಡೆದು, ದೇವರ್ಷಿಗಳನ್ನು ವಿನಯಾದರಗಳಿಂದ ಸ್ವಾಗತಿಸಿ, ನಮಸ್ಕರಿಸಿದನು. ಸಿಂಹಾಸನದ ಪಕ್ಕದಲ್ಲಿಯೇ ಇದ್ದ ಆಸನವೊಂದರಲ್ಲಿ ಕುಳ್ಳಿರಿಸಿ, ಅರ್ಘ್ಯ-ಪಾದ್ಯಾದಿಗಳನ್ನೂ, ಗೋ-ಮಧುಪರ್ಕಗಳನ್ನೂ, ನವರತ್ನಗಳನ್ನೂ ಮಹರ್ಷಿಗಳಿಗೆ ಸಮರ್ಪಿಸಿ, ಯಥೋಚಿತವಾಗಿ ಸತ್ಕರಿಸಿ, ನಾರದರ ಅಪ್ಪಣೆಯನ್ನು ಪಡೆದು ಸಿಂಹಾಸನದಲ್ಲಿ ಕುಳಿತನು.

ಯುಧಿಷ್ಠಿರನಿತ್ತ ಸತ್ಕಾರದಿಂದ ಸುಪ್ರೀತರಾದ ವೇದಪಾರಂಗತರಾದ

ನಾರದರು, ಯುಧಿಷ್ಠಿರನನ್ನು ಕುರಿತು ಧರ್ಮ-ಕಾಮಾರ್ಥಗಳ ವಿಷಯವಾಗಿ ಪ್ರಶ್ನಿಸಲು ಮೊದಲಿಟ್ಟರು :

**ಕಚ್ಚಿದರ್ಥಾಶ್ಚ ಕಲ್ಪನ್ತೇ ಧರ್ಮೇ ಚ ರಮತೇ ಮನಃ ।**
**ಸುಖಾನಿ ಚಾನುಭೂಯನ್ತೇ ಮನಶ್ಚ ನ ವಿಹನ್ಯತೇ ॥೧೭॥**

"ಯುಧಿಷ್ಠಿರ! ಧರ್ಮಾರ್ಥ-ಕಾಮಗಳೆಂಬ ಮೂರು ಪುರುಷಾರ್ಥಗಳನ್ನೂ ಯಾವ ವಿಧವಾದ ಆತಂಕವೂ ಇಲ್ಲದೇ ಸೇವಿಸುತ್ತಿರುವೆಯಾ? ನಿನ್ನ ಅರ್ಥಗಳು ರಾಜ್ಯದ ಭರಣ-ಪೋಷಣಗಳಿಗೆ ಪರ್ಯಾಪ್ತವಾಗಿವೆಯೇ? (ಹಣದ ವಿಷಯದಲ್ಲಿ ಕೊರತೆಯಿಲ್ಲವೇ?) ನಿನ್ನ ಮನಸ್ಸು ಧರ್ಮದಲ್ಲಿಯೇ ಆಸಕ್ತವಾಗಿರುವುದೇ? ಸುಖಗಳನ್ನು ಯುಕ್ತರೀತಿಯಲ್ಲಿ ಅನುಭವಿಸುತ್ತಿರುವೆಯಾ? ಧರ್ಮಾರ್ಥ-ಕಾಮಗಳ ವಿಷಯದಲ್ಲಿ ಮನಸ್ಸಿಗೆ ಯಾವ ವಿಧವಾದ ಕ್ಲೇಶವೂ ಒದಗಿಲ್ಲವಷ್ಟೇ?

**ಕಚ್ಚಿದಾಚರಿತಂ ಪೂರ್ವೈರ್ನರದೇವ ಪಿತಾಮಹೈಃ।**
**ವರ್ತಸೇ ವೃತ್ತಿಮಕ್ಷುದ್ರಾಂ ಧರ್ಮಾರ್ಥಸಹಿತಾಂ ತ್ರಿಷು ॥೧೮॥**
**ಕಚ್ಚಿದರ್ಥೇನ ವಾ ಧರ್ಮಂ ಧರ್ಮೇಣಾರ್ಥಮಥಾಪಿ ವಾ ।**
**ಉಭೌ ವಾ ಪ್ರೀತಿಸಾರೇಣ ನ ಕಾಮೇನ ಪ್ರಬಾಧಸೇ ॥೧೯॥**
**ಕಚ್ಚಿದರ್ಥಂ ಚ ಧರ್ಮಂ ಚ ಕಾಮಂ ಚ ಜಯತಾಂ ವರ।**
**ವಿಭಜ್ಯ ಕಾಲೇ ಕಾಲಜ್ಞಃ ಸದಾ ವರದ ಸೇವಸೇ ॥೨೦॥**

ನಿನ್ನ ಪೂರ್ವಜರು ಅನುಸರಿಸುತ್ತಿದ್ದಂತೆ ಬ್ರಾಹ್ಮಣ-ವೈಶ್ಯ-ಶೂದ್ರವರ್ಣಗಳ ಪಾಲನೆಯ ವಿಷಯದಲ್ಲಿ ಕ್ಷುದ್ರವಲ್ಲದ ಧರ್ಮಾರ್ಥಸಹಿತವಾದ ನೀತಿಯನ್ನು ಅನುಸರಿಸುತ್ತಿರುವೆಯಲ್ಲವೇ? ನರದೇವನೇ! ನೀಚರು ಅರ್ಥಲೋಭದಿಂದ ಧರ್ಮಮಾರ್ಗಾನುಸರಣೆಯನ್ನು ಮಾಡುವುದಿಲ್ಲ. ವಿರಕ್ತರು ಧರ್ಮಲೋಭದಿಂದ ನಿರ್ಧನರಾಗುತ್ತಾರೆ. ಕಾಮಾಸಕ್ತರು ಧರ್ಮಾರ್ಥಗಳನ್ನು ಉಪೇಕ್ಷಿಸುತ್ತಾರೆ. ನೀನು ರಾಜ್ಯದ ಒಡೆಯನಾಗಿರುವುದರಿಂದ ನಿನ್ನಲ್ಲಿ ಅರ್ಥಲೋಭದಿಂದ ನೀಚತ್ವವಾಗಲೀ, ಧರ್ಮಲೋಭದಿಂದ ವಿರಕ್ತಿಯಾಗಲೀ, ಕಾಮಲೋಭದಿಂದ ಧರ್ಮಾರ್ಥಗಳಿಗೆ ಹಾನಿಯಾಗಲೀ ಉಂಟಾಗಿಲ್ಲವಲ್ಲವೇ? ಧರ್ಮಾರ್ಥ-ಕಾಮಗಳನ್ನು ಯಥೋಚಿತವಾಗಿ ಅನುಸರಿಸಬೇಕು. ಯಾವುದೊಂದರಲ್ಲಿಯೂ ಮಿತಿಮೀರಬಾರದು. ಯಾವ

ಕಾಲದಲ್ಲಿ ಏನನ್ನು ಮಾಡಬೇಕೆಂಬ ವಿವೇಚನೆಯಿರಬೇಕು. ಕಾಲಜ್ಞರಾದವರು ಮತ್ತು ಧರ್ಮಜ್ಞರಾದವರು ಹೀಗೆ ಹೇಳುತ್ತಾರೆ.: ಪ್ರಾತಃಕಾಲದಲ್ಲಿ ಧರ್ಮಸಾಧನೆಯನ್ನೂ, ಮಧ್ಯಾಹ್ನದಲ್ಲಿ ಅರ್ಥಸಾಧನೆಯನ್ನೂ, ರಾತ್ರಿಯಲ್ಲಿ ಕಾಮಸಾಧನೆಯನ್ನೂ ಮಾಡಬೇಕು. ಈ ಪ್ರಕಾರವಾಗಿ ಧರ್ಮಾರ್ಥ-ಕಾಮಗಳಿಗೆ ಪರಸ್ಪರವಾಗಿ ಘರ್ಷಣೆಯುಂಟಾಗದ ರೀತಿಯಲ್ಲಿ ರಾಜನಾದವನು ವರ್ತಿಸಬೇಕು. ಹಾಗೆಯೇ ನೀನು ನಡೆದುಕೊಳ್ಳುತ್ತಿರುವೆಯಲ್ಲವೇ?

**ಕಚ್ಚಿದ್ರಾಜಗುಣೈಃ ಷಡ್ಭಿಃ ಸಪ್ತೋಪಾಯಾಂಸ್ತಥಾನಘ ।**
**ಬಲಾಬಲಂ ತಥಾ ಸಮ್ಯಕ್ಚತುರ್ದಶ ಪರೀಕ್ಷಸೇ ॥೨೧॥**

ಯುಧಿಷ್ಠಿರ! ಆರು ವಿಧವಾದ ರಾಜಗುಣಗಳಿಂದ ಕೂಡಿದವನಾಗಿ, ಏಳು ವಿಧವಾದ ಉಪಾಯಗಳನ್ನೂ, ಮೂರು ವಿಧವಾದ ಬಲಾಬಲಗಳನ್ನೂ ತಿಳಿದವನಾಗಿ, ಹದಿನಾಲ್ಕು ವಿಧವಾದ ಶತ್ರುವಿನ ಉಪಕರಣಗಳನ್ನು ಪರೀಕ್ಷಿಸುತ್ತಿರುವೆಯಲ್ಲವೇ?*

ಇವೆಲ್ಲವನ್ನೂ ಚೆನ್ನಾಗಿ ಪರೀಕ್ಷಿಸಿ ಕಾರ್ಯಮಾಡುತ್ತಿರುವೆಯಾ? ಯುಧಿಷ್ಠಿರ!

---

* (ಈ ಸಂಖ್ಯೆಗಳಿಗೆ ವ್ಯಾಖ್ಯಾನಕಾರರು ವಿವರಣೆಗಳನ್ನು ಕೊಟ್ಟಿರುತ್ತಾರೆ. ಅವನ್ನು ಯಥಾವತ್ತಾಗಿ ಕೊಡಲಾಗಿದೆ.)

ಆರು ವಿಧವಾದ ರಾಜಗುಣಗಳು :

**ವಕ್ತಾ ಪ್ರಗಲ್ಭೋ ಮೇಧಾವೀ ಸ್ಮೃತಿಮಾನ್ ನಯವಿತ್ಕವಿಃ ।**

ನಾರದರೂ ಕೂಡ ಈ ಷಡ್ಗುಣಪರಿಪೂರ್ಣರಾದವರೆಂದು ಹಿಂದೆಯೇ ಹೇಳಲ್ಪಟ್ಟಿದೆ. **ವಕ್ತಾ** :- ಅಮಾತ್ಯರೊಡನೆ ಹೇಗೆ ಮಾತನಾಡಬೇಕು, ಚಾರರೊಡನೆ-ಗೂಢಚಾರರೊಡನೆ ಹೇಗೆ ಮಾತನಾಡಬೇಕೆಂಬ ತಿಳಿವಳಿಕೆಯುಳ್ಳವನು. **ಪ್ರಗಲ್ಭಃ**-ಶತ್ರು ದಮನದ ವಿಷಯದಲ್ಲಿ ಉತ್ಕರ್ಷವನ್ನು ತೋರಿಸತಕ್ಕವನು. **ಮೇಧಾವೀ** :- ತರ್ಕ ಕೌಶಲವುಳ್ಳವನು. **ಸ್ಮೃತಿಮಾನ್** :- ಹಿಂದೇನಾಯಿತು? ಅದನ್ನನುಸರಿಸಿ ಮುಂದೇನಾಗಬಹುದೆಂಬ ಪರಾಮರ್ಶೆಯುಳ್ಳವನು. **ನಯವಿತ್** :- ನೀತಿಶಾಸ್ತ್ರವನ್ನು ಚೆನ್ನಾಗಿ ತಿಳಿದಿರುವವನು. **ಕವಿಃ** :- ಶುಕ್ರಾಚಾರ್ಯನಂತೆ ಪಾಂಡಿತ್ಯವುಳ್ಳವನು. ರಾಜನಾದವನು ಈ ಆರು ಗುಣಗಳಿಂದಲೂ ಕೂಡಿರಬೇಕು. ಸಾಮ, ದಾನ, ಭೇದ, ದಂಡ, ಮಂತ್ರ, ಔಷಧ, ಇಂದ್ರಜಾಲ –ಇವು ಶತ್ರುಗಳನ್ನು ಗೆಲ್ಲಲು ಅನುಸರಿಸಬೇಕಾದ ಏಳು ಉಪಾಯಗಳು. ಇವುಗಳ ಪ್ರಯೋಗಚಾತುರ್ಯಗಳು ರಾಜನಾದವನಿಗೆ ಅವಶ್ಯವಾಗಿ

**ಕಚ್ಚಿದಾತ್ಮಾನಮನ್ವೀಕ್ಷ್ಯ ಪರಾಂಶ್ಚ ಜಯತಾಂ ವರ।**
**ತಥಾ ಸಂಧಾಯ ಕರ್ಮಾಣಿ ಅಷ್ಟೌ ಭಾರತ ಸೇವಸೇ ॥೨೨॥**

ಶತ್ರುವಿಗೂ ಮತ್ತು ನಿನಗೂ ಇರುವ ಬಲಾಬಲಗಳನ್ನು ಪೂರ್ಣವಾಗಿ ಪರಿಶೀಲಿಸಿ ಕಾರ್ಯಮಾಡಬೇಕು. ಅವನು ಪ್ರಬಲನಾಗಿದ್ದರೆ ಅವನೊಡನೆ ಸಂಧಿಮಾಡಿಕೊಂಡು ದೇಶವನ್ನು ಬಲಪಡಿಸಲು ಎಂಟು ವಿಧವಾದ ಕಾರ್ಯಗಳನ್ನು ಕೈಗೊಳ್ಳಬೇಕು. ಕೃಷಿ, ವಾಣಿಜ್ಯ, ಮಾರ್ಗಗಳನ್ನು ಮಾಡಿಸುವುದು, ಸೇತುವೆಗಳ ನಿರ್ಮಾಣ, ಕೋಟೆಗಳನ್ನು ಕಟ್ಟಿಸುವುದು, ಗಿಳಿಗಳ ಬಂಧನ, (ಗಿಳಿಗಳು ಆಹಾರಧಾನ್ಯಗಳನ್ನು ತಿಂದುಬಿಡುತ್ತವೆ) ಖನಿಜಗಳನ್ನು ತೆಗೆಸುವುದು, ಶೂನ್ಯಾನಾಂ ಚ ನಿವೇಶನಂ :- ಕೆಲವು ಅಥರ್ವಪ್ರಕ್ರಿಯೆಗಳಿಂದ ಹೂತಿಟ್ಟ ಧನವೆಲ್ಲಿದೆಯೆಂಬುದನ್ನು ತಿಳಿಯಬಹುದು ಮತ್ತು ಅದನ್ನು ತೆಗೆಯಲೂಬಹುದು. ಈ ರೀತಿಯಲ್ಲಿಯೂ ಧನವನ್ನು ರಾಜನಾದವನು ತೆಗೆದುಕೊಳ್ಳಬೇಕು.

ಈ ಎಂಟು ಪ್ರಕಾರಗಳನ್ನೂ ಅನುಸರಿಸಿ ಜಯಮೂಲವಾದ ಕೋಶದ

---

ತಿಳಿದಿರಬೇಕು. ಬಲಾಬಲಗಳನ್ನು ತಿಳಿಯಲು ಈ ಮೂರನ್ನೂ ಪರಿಶೀಲಿಸಬೇಕು. ಮೊದಲನೆಯದು :- ನಮ್ಮ ಪಕ್ಷದ ಬಲಕ್ಕೂ-ಶತ್ರುಪಕ್ಷದ ಬಲಕ್ಕೂ ಸಾಮ್ಯವಿರುವುದೇ? ಎರಡನೆಯದು :– ಶತ್ರುವು ತನಗಿಂತಲೂ ದುರ್ಬಲನೇ? ಮೂರನೆಯದು :- ತಾನು ಶತ್ರುವಿಗಿಂತಲೂ ದುರ್ಬಲನಾಗಿರುವೆನೇ?–ಈ ಮೂರು ವಿಧವಾದ ಬಲಾಬಲಗಳನ್ನೂ ಪರಿಶೀಲಿಸಿ ಕಾರ್ಯಮಾಡಬೇಕು.

ಹದಿನಾಲ್ಕನ್ನು ಚೆನ್ನಾಗಿ ಪರೀಕ್ಷಿಸಬೇಕೆಂದು ನಾರದರು ಯುಧಿಷ್ಠಿರನಿಗೆ ಹೇಳುತ್ತಾರೆ. ಇಲ್ಲಿ 'ಹದಿನಾಲ್ಕು ರೀತಿಯ ರಾಜದೋಷಗಳ ವಿಷಯದಲ್ಲಿ ಜಾಗರೂಕತೆಯಿಂದ ಇರಬೇಕು'–ಎಂದು ಬೇಕಾದರೂ ಅರ್ಥಮಾಡಬಹುದು. 'ಶತ್ರುಪಕ್ಷದ ಹದಿನಾಲ್ಕು ಭಾಗಗಳನ್ನು ಚೆನ್ನಾಗಿ ಪರಾಮರ್ಶಿಸಬೇಕು' ಎಂದು ಬೇಕಾದರೂ ಅರ್ಥಮಾಡಬಹುದಾಗಿದೆ. ಎರಡೂ ಇಲ್ಲಿ ಸಮಂಜಸವಾಗಿಯೇ ಇದೆ. **ನಾಸ್ತಿಕ್ಯಂ** : – ಪರಲೋಕದಲ್ಲಿ ನಂಬಿಕೆಯಿಲ್ಲದಿರುವುದು. **ಅನೃತಂ** : – ಸುಳ್ಳುಹೇಳುವುದು. **ಕ್ರೋಧಃ** : – ಕೋಪಿಷ್ಠನಾಗಿರುವುದು. **ಪ್ರಮಾದಃ** :– ಅವಧಾನವಿಲ್ಲದಿರುವುದು. (ಎಚ್ಚರಿಕೆಯಿಲ್ಲದಿರುವುದು) **ದೀರ್ಘಸೂತ್ರತಾ** :– ಕಾರ್ಯವನ್ನು ಬಹಳ ನಿಧಾನವಾಗಿ ಮಾಡುವುದು. **ಜ್ಞಾನವತಾಮದರ್ಶನಂ**: ಜ್ಞಾನಿಗಳನ್ನು ದರ್ಶನಮಾಡದಿರುವುದು. **ಆಲಸ್ಯಂ** :–ಪಾಲುಮಾರಿಕೆ. **ಪಂಚವೃತ್ತಿತಾ**: – ಪಂಚೇಂದ್ರಿಯ

ಅಭಿವೃದ್ಧಿಗೆ ರಾಜನಾದವನು ಪ್ರಯತ್ನಿಸಬೇಕು. ನೀನೂ ಹಾಗೆಯೇ ಮಾಡುತ್ತಿರುವೆಯಲ್ಲವೇ?

**ಕಚ್ಚಿತ್ಪ್ರಕೃತಯಃ ಸಪ್ತ ನ ಲುಪ್ತಾ ಭರತರ್ಷಭ ।**
**ಆಢ್ಯಾಸ್ತಥಾ ವ್ಯಸನಿನಃ ಸ್ವನುರಕ್ತಾಶ್ಚ ಸರ್ವಶಃ ॥೨೩॥**

ಯುಧಿಷ್ಠಿರ! ನಿನ್ನ ಸಪ್ತಪ್ರಕೃತಿಗಳು ಶತ್ರುಗಳಿಂದ ಆಕರ್ಷಿತರಾಗದೇ ವಿಷಯಲಂಪಟರಾಗದೇ, ದುರ್ವ್ಯಸನಗಳಲ್ಲಿ ಬೀಳದೇ ನಿನ್ನಲ್ಲಿಯೇ ಅನುರಕ್ತರಾಗಿರುವರೇ?*

**ಕಚ್ಚಿನ್ನ ಕೃತಕೈರ್ದೂತೈರ್ಯೇ ಚಾಪ್ಯಪರಿಶಙ್ಕಿತಾಃ।**
**ತ್ವತ್ತೋ ವಾ ತವ ಚಾಮಾತ್ಯೈರ್ಭಿದ್ಯತೇ ಮನ್ತ್ರಿತಂ ತಥಾ ॥೨೪॥**

---

ಗಳಿಗೆ ದಾಸನಾಗಿರುವುದು ಏಕಚಿಂತನಮರ್ಥಾನಾಂ : – ಐಶ್ವರ್ಯದ ವಿಷಯವಾಗಿಯೇ ಯಾವಾಗಲೂ ಯೋಚಿಸುತ್ತಿರುವುದು. (ಒಬ್ಬನೇ ಯೋಚಿಸುವುದು) ಅನರ್ಥಜ್ಞೈಶ್ಚ ಚಿನ್ತನಂ :- ಪ್ರತಿಯೊಂದಕ್ಕೂ ವಿಪರೀತಾರ್ಥವನ್ನು ಮಾಡುವವರೊಡನೆ ಸಮಾಲೋಚಿಸುವುದು. (ವಿಷಯವನ್ನು ಸರಿಯಾಗಿ ತಿಳಿಯದವರೊಡನೆ ಸಮಾಲೋಚಿಸುವುದು) ನಿಶ್ಚಿತಾನಾಮನಾರಂಭಃ: – ಮಾಡಬೇಕೆಂದು ನಿಶ್ಚಯಿಸಿದುದನ್ನು ಮಾಡದಿರುವುದು. ಮನ್ತ್ರಸ್ಯಾ ಪರಿರಕ್ಷಣಂ.: – ರಹಸ್ಯವಿಷಯಗಳನ್ನು ಗೋಪ್ಯವಾಗಿಡಲು ಅಸಮರ್ಥನಾಗಿರುವುದು. ಮಂಗಲಾದ್ಯಪ್ರಯೋಗಃ.: – ಮಂಗಳಕಾರ್ಯ-ದೇವಪೂಜಾದಿಗಳನ್ನು ಮಾಡದಿರುವುದು. ಪ್ರತ್ಯುತ್ಥಾನಂ ಚ ಸರ್ವತಃ.: – ಒಂದೇ ಕಾಲದಲ್ಲಿ ನಾಲ್ಕು ದಿಕ್ಕುಗಳಿಗೂ ದಂಡಯಾತ್ರೆಗಾಗಿ ಸೈನ್ಯಗಳನ್ನು ಕಳುಹಿಸುವುದು–ಇವು ಹದಿನಾಲ್ಕು ರಾಜದೋಷಗಳು. ಇವನ್ನು ವರ್ಜಿಸಬೇಕು.

ದೇಶ, ದುರ್ಗ, ರಥ, ಹಸ್ತಿ, ವಾಜಿ, ಯೋಧರು, ದೇಶಪಾಲ, ದುರ್ಗಪಾಲ, ಸೇನಾಪಾಲರು, ಅಂತಃಪುರ, ಶತ್ರುಪಕ್ಷದಲ್ಲಿರುವ ಅಶ್ವ-ರಥ-ವಾಹನಾದಿಗಳ ಸಂಖ್ಯೆ, ಆಯ–ವ್ಯಯಗಳ ವಿಷಯವನ್ನು ತಿಳಿದಿರುವುದು, ಬೊಕ್ಕಸ, ಶತ್ರುರಾಜನಿಗಿರುವ ಪ್ರಚ್ಛನ್ನ ಶತ್ರುಗಳು–ಈ ಹದಿನಾಲ್ಕು ವಿಷಯಗಳನ್ನು ಶತ್ರುಗಳ ವಿಷಯದಲ್ಲಿ ಪರೀಕ್ಷಿಸಬೇಕು.

* ಸಪ್ತಪ್ರಕೃತಿಗಳೆಂದರೆ ಸಪ್ತರಾಜ್ಯಾಂಗಗಳಾಗಬಹುದು. ಸ್ವಾಮೀ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಬಲ –ಇವುಗಳು ಸಪ್ತರಾಜ್ಯಾಂಗಗಳು. ಸ್ವಾಮಿರೂಪವಾದ ಪ್ರಕೃತಿಗಳು ಏಳು. ದುರ್ಗಾಧ್ಯಕ್ಷ, ಬಲಾಧ್ಯಕ್ಷ, ಧರ್ಮಾಧ್ಯಕ್ಷ, ಚಮೂಪತಿ, ಪುರೋಹಿತ, ವೈದ್ಯ, ಜ್ಯೌತಿಷಿಕ –ಇವರಿಗೆ ಸ್ವಾಮಿರೂಪಸಪ್ತಪ್ರಕೃತಿಗಳೆಂದು ಹೆಸರು.

ನೀನು ಮಾಡುವ ಸಮಾಲೋಚನೆಯು ನಿನ್ನ ಮಂತ್ರಿಗಳಿಂದಾಗಲೀ, ನಿನ್ನಿಂದಾಗಲೀ–ಬಹಿರಂಗವಾಗದಂತೆ ಎಚ್ಚರಿಕೆಯಿಂದಿರುವೆಯಾ? ಯಾರಿಗೂ ಸಂಶಯವುಂಟಾಗದಂತೆ ನಡೆದುಕೊಳ್ಳುವ ಶತ್ರುಗಳ ಗೂಢಚಾರರಿಂದ ನಿನ್ನ ಮಂತ್ರಾಲೋಚನೆಯು ಭೇದಿಸಲ್ಪಡುತ್ತಿಲ್ಲವಷ್ಟೇ?

**ಮಿತ್ರೋದಾಸೀನಶತ್ರೂಣಾಂ ಕಚ್ಚಿದ್ವೇತ್ಸಿ ಚಿಕೀರ್ಷಿತಮ್ ।**
**ಕಚ್ಚಿತ್ಸನ್ಧಿಂ ಯಥಾಕಾಲಂ ವಿಗ್ರಹಂ ಚೋಪಸೇವಸೇ ॥೨೫॥**

ನಿನ್ನ ಮಿತ್ರರು ಮಾಡಲು ಇಚ್ಛಿಸುತ್ತಿರುವುದೇನು? ನಿನ್ನ ವಿಷಯದಲ್ಲಿ ಉದಾಸೀನರಾದವರು ಏನು ಮಾಡಬೇಕೆಂದಿರುವರು? ಶತ್ರುಗಳೇನು ಮಾಡಬೇಕೆಂದಿರುವರು?–ಇವೆಲ್ಲವನ್ನೂ ತಿಳಿದಿರುವೆಯಾ? ಯಾರೊಡನೆ ಸಂಧಿಮಾಡಿಕೊಳ್ಳಬೇಕು? ಯಾರೊಡನೆ ಯುದ್ಧಮಾಡಬೇಕು? ಯಾವ ಕಾಲದಲ್ಲಿ ಯುದ್ಧಮಾಡಬೇಕು?–ಎಂಬುದನ್ನು ತಿಳಿದು ಅದರಂತೆ ನಡೆಯುತ್ತಿರುವೆಯಲ್ಲವೇ?

**ಕಚ್ಚಿದ್ವೃತ್ತಿಮುದಾಸೀನೇ ಮಧ್ಯಮೇ ಚಾನುಮನ್ಯಸೇ ।**
**ಕಚ್ಚಿದಾತ್ಮಸಮಾ ವೃದ್ಧಾಃ ಶುದ್ಧಾಃ ಸಮ್ಬೋಧನಕ್ಷಮಾಃ ॥೨೬॥**

---

ಇವರು ಶತ್ರುಪಕ್ಷದವರಿಂದ ಆಕರ್ಷಿತರಾದರೆ ದೇಶವು ವಿನಾಶಹೊಂದುವುದು. ಆದುದರಿಂದ ಇವರ ವಿಷಯದಲ್ಲಿ ರಾಜನಾದವನು ಬಹಳ ಜಾಗರೂಕತೆಯಿಂದಿರಬೇಕು. ಇವರಿಗೆ ಹೆಚ್ಚಿನ ಸುಖ-ಸೌಕರ್ಯಗಳನ್ನು ಒದಗಿಸಿಕೊಟ್ಟರೂ ಕೆಲವು ವೇಳೆ ಅಪಾಯವು ಸಂಭವಿಸಬಹುದು. ಹೇಗೆಂದರೆ : **ಹೃಷ್ಟೋ ದೃಪ್ಯತಿ। ದೃಪ್ತೋ ಧರ್ಮಮತಿಕ್ರಾಮತಿ। ಧರ್ಮಾತಿಕ್ರಮಾತ್ಪಾಪಂ ಕರೋತಿ।** ಸಂತುಷ್ಟನಾದವನು ಅಹಂಕಾರಿಯಾಗುತ್ತಾನೆ. ಅಹಂಕಾರಿಯಾದವನು ಧರ್ಮವನ್ನು ಅತಿಕ್ರಮಿಸುತ್ತಾನೆ. ಧರ್ಮವನ್ನು ಅತಿಕ್ರಮಿಸಿದವನು ಪಾಪಕಾರ್ಯವನ್ನು ಮಾಡುತ್ತಾನೆ–ಎಂಬ ಸ್ಮೃತಿವಚನವಿದೆ. 'ಆದುದರಿಂದ ನಿನ್ನ ಸಪ್ತಪ್ರಕೃತಿಗಳು ಹೆಚ್ಚು ಸುಖದಿಂದಿದ್ದರೂ ವ್ಯಸನಲಂಪಟರಾಗಬಹುದು. ಆಗಲೂ ದೇಶಕ್ಕೆ ಬಹಳ ಹಾನಿಯುಂಟಾಗುವುದು. ಈ ಕಾರಣದಿಂದ ಸಪ್ತಪ್ರಕೃತಿಗಳನ್ನು ಸಂತುಷ್ಟರಾಗಿಡಲು ಯತ್ನಿಸುವುದು ಮಾತ್ರವಲ್ಲದೇ ಅವರು ನಿನ್ನ ವಿಷಯದಲ್ಲಿ ಹೆಚ್ಚಿನ ಅನುರಾಗವುಳ್ಳವರಾಗಿರುವಂತೆಯೂ ನೋಡಿಕೊಳ್ಳಬೇಕು'–ಎಂಬುದು ನಾರದರ ಅಭಿಪ್ರಾಯವಾಗಿದೆ.

**ಕುಲೀನಾಶ್ಚಾನುರಕ್ತಾಶ್ಚ ಕೃತಾಸ್ತೇ ವೀರ ಮನ್ತ್ರಿಣಃ ।**
**ವಿಜಯೋ ಮನ್ತ್ರಮೂಲೋ ಹಿ ರಾಜ್ಞೋ ಭವತಿ ಭಾರತ ॥೨೭॥**

ಧರ್ಮಜ! ಉದಾಸೀನರಾದ ರಾಜರೊಡನೆಯೂ, ಮಧ್ಯಸ್ಥರಾದ ರಾಜರೊಡನೆಯೂ ತಕ್ಕ ರೀತಿಯಲ್ಲಿ ನಡೆದುಕೊಳ್ಳುತ್ತಿರುವೆಯಾ? ಮಂತ್ರಿಗಳನ್ನು ಆರಿಸಬೇಕಾದರೆ ಬಹಳ ಪರೀಕ್ಷಿಸಬೇಕು. ಶುದ್ಧಾಚಾರವುಳ್ಳವರು, ಕುಲೀನರಾಗಿರುವವರು, ಅಸಾಧಾರಣವಾದ ಮನೋನೈರ್ಮಲ್ಯವುಳ್ಳವರು ಎಂದರೆ ಯಾವ ವಿಧವಾದ ಸೋಂಕುಗಳೂ ಇಲ್ಲದವರು, ಆತ್ಮಸಮಾನರಾದವರು, ವೃದ್ಧರಾದವರು, ರಾಜನೀತಿಯನ್ನು ಬೋಧನೆಮಾಡುವುದರಲ್ಲಿ ಸಮರ್ಥರಾದವರು, ರಾಜನಲ್ಲಿಯೇ ಅನುರಕ್ತರಾಗಿರುವವರು ಮಂತ್ರಿಗಳಾಗಲು ಅರ್ಹರಾಗುತ್ತಾರೆ. ಇಂತಹವರನ್ನು ಪರೀಕ್ಷಿಸಿ ಅಮಾತ್ಯರನ್ನಾಗಿ ಮಾಡಿಕೊಂಡಿರುವೆಯಾ? ರಾಜನ ಜಯವು ಮಂತ್ರಮೂಲವಾಗಿರುತ್ತದೆ. ಅರ್ಥಾತ್ ಮಂತ್ರಿಗಳನ್ನೇ ಅವಲಂಬಿಸಿರುತ್ತದೆ.

**ಕಚ್ಚಿತ್ಸಂವೃತಮನ್ತ್ರೈಸ್ತೈರಮಾತ್ಯೈಃ ಶಾಸ್ತ್ರಕೋವಿದೈಃ ।**
**ರಾಷ್ಟ್ರಂ ಸುರಕ್ಷಿತಂ ತಾತ ಶತ್ರುಭಿರ್ನ ವಿಲುಪ್ಯತೇ ॥೨೮॥**

ಯುಧಿಷ್ಠಿರ! ರಾಜನೊಡನೆ ಮಾಡುವ ಮಂತ್ರಾಲೋಚನೆಗಳನ್ನು ರಹಸ್ಯವಾಗಿಟ್ಟಿರುವ, ಶಾಸ್ತ್ರಕೋವಿದರಾದ ಅಮಾತ್ಯರಿಂದಲೇ ರಾಜ್ಯವು ಸುರಕ್ಷಿತವಾಗಿರುವುದು. ವಿವೇಚನಾಪರರಾದ ಅಮಾತ್ಯರಿರುವ ರಾಜ್ಯವು ಶತ್ರುಗಳಿಂದ ಅಬಾಧಿತವಾಗಿರುತ್ತದೆ. ನಿನ್ನ ರಾಜ್ಯವು ಹೀಗೆ ಸುರಕ್ಷಿತವಾಗಿದೆಯೇ?

**ಕಚ್ಚಿನ್ನಿದ್ರಾವಶಂ ನೈಷಿ ಕಚ್ಚಿತ್ಕಾಲೇ ವಿಬುಧ್ಯಸೇ ।**
**ಕಚ್ಚಿಚ್ಚಾಪರರಾತ್ರೇಷು ಚಿನ್ತಯಸ್ಯರ್ಥಮರ್ಥವಿತ್ ॥೨೯॥**

ಯುಧಿಷ್ಠಿರ! ನೀನು ಅವೇಳೆಯಲ್ಲಿ ನಿದ್ರೆಗೆ ಅಡಿಯಾಳಾಗುತ್ತಿಲ್ಲ ತಾನೇ? ವೇಳೆಗೆ ಸರಿಯಾಗಿ ಜಾಗ್ರತನಾಗುವೆಯಲ್ಲವೇ? **ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಚಿನ್ತಯೇದಾತ್ಮನೋ ಹಿತಮ್ ।** ಬ್ರಾಹ್ಮಮುಹೂರ್ತದಲ್ಲೆದ್ದು ಆತ್ಮಹಿತವನ್ನು ಚಿಂತನೆಮಾಡಬೇಕೆಂದು ಸ್ಮೃತಿವಾಕ್ಯವಿದೆ. ಅದರಂತೆಯೇ ಅರ್ಥಶಾಸ್ತ್ರವನ್ನು ತಿಳಿದಿರುವ ನೀನೂ

ನಿನ್ನ ಕರ್ತವ್ಯಗಳನ್ನು ಕುರಿತು ಬ್ರಾಹ್ಮಮುಹೂರ್ತದಲ್ಲಿಯೇ ಚಿಂತಿಸುತ್ತಿರುವೆಯಲ್ಲವೇ?

**ಕಚ್ಚಿನ್ಮನ್ತ್ರಯಸೇ ನೈಕಃ ಕಚ್ಚಿನ್ನ ಬಹುಭಿಃ ಸಹ ।**
**ಕಚ್ಚಿತ್ತೇ ಮನ್ತ್ರಿತೋ ಮನ್ತ್ರೋ ನ ರಾಷ್ಟ್ರಂ ಪರಿಧಾವತಿ ॥೩೦॥**

ಧರ್ಮಜ! ಮಂತ್ರಾಲೋಚನೆಯನ್ನು ನೀನೊಬ್ಬನೇ ಆಗಲೀ, ಬಹು ಜನರೊಡನೆ ಕೂಡಿಯಾಗಲೀ ಮಾಡುತ್ತಿಲ್ಲ ತಾನೇ? ಸಮಾಲೋಚನೆಗಳ ರಹಸ್ಯವು ಬಯಲಾಗಿ ಶತ್ರುರಾಷ್ಟ್ರಗಳಲ್ಲಿ ಹರಡುತ್ತಿಲ್ಲ ತಾನೇ?*

**ಕಚ್ಚಿದರ್ಥಾನ್ವಿನಿಶ್ಚಿತ್ಯ ಲಘುಮೂಲಾನ್ಮಹೋದಯಾನ್ ।**
**ಕ್ಷಿಪ್ರಮಾರಭಸೇ ಕರ್ತುಂ ನ ವಿಘ್ನಯಸಿ ತಾದೃಶಾನ್ ॥೩೧॥**

ಮಾಡಬೇಕಾದ ಅಲ್ಪಪ್ರಯತ್ನದಿಂದಲೇ ಹೆಚ್ಚು ಪ್ರಯೋಜನವಾಗುವ ಕಾರ್ಯಗಳ ಯೋಜನೆಗಳನ್ನು ಹಾಕಿಕೊಳ್ಳಬೇಕು. ಅಂತಹ ಕಾರ್ಯಗಳನ್ನು ಪ್ರಾರಂಭಿಸಿದ ಮೇಲೆ ನಿರ್ವಿಘ್ನವಾಗಿ ನೆರವೇರಿಸಿ ಫಲವನ್ನು ಪಡೆಯಬೇಕು. ಇಂತಹ ಕಾರ್ಯಗಳನ್ನು ವಿಳಂಬಿಸುವುದಿಲ್ಲವಷ್ಟೇ?

**ಕಚ್ಚಿನ್ನ ಸರ್ವೇ ಕರ್ಮಾನ್ತಾಃ ಪರೋಕ್ಷಾಸ್ತೇ ವಿಶಙ್ಕಿತಾಃ ।**
**ಸರ್ವೇ ವಾ ಪುನರುತ್ಸೃಷ್ಟಾಃ ಸಂಸೃಷ್ಟಂ ಚಾತ್ರ ಕಾರಣಮ್ ॥೩೨॥**

ಪಾರ್ಥ! ಶ್ರಮಜೀವಿಗಳಾದ ವ್ಯವಸಾಯಗಾರರೂ, ಕಾರ್ಮಿಕರೂ ನಿನಗೆ ಪರೋಕ್ಷರಾಗಿಲ್ಲ ತಾನೇ? ಎಂದರೆ ಅವರೆಲ್ಲರೊಡನೆಯೂ ನೀನು ನಿಕಟಸಂಬಂಧವನ್ನು ಹೊಂದಿರಬೇಕು. ಅವರು ನಿನ್ನ ಸಮೀಪಕ್ಕೆ ಬರಲು ಭಯಪಡಬಾರದು. ಅವರಿಗೆ ನಿನ್ನ ವಿಷಯದಲ್ಲಿ ಅವಿಶ್ವಾಸವು ಹುಟ್ಟ ಬಾರದು. ಅವರೊಡನೆ ಇಟ್ಟುಕೊಳ್ಳುವ ವಿಶೇಷಪ್ರೇಮದಿಂದ ನಿನ್ನ ರಾಜ್ಯದ

---

* ರಾಜನು ತಾನೊಬ್ಬನೇ ಯೋಚಿಸಬಾರದು ಅಥವಾ ಬಹುಮಂದಿಯೊಡನೆಯೂ ರಾಜ್ಯಾಡಳಿತದ ರಹಸ್ಯವನ್ನು ಹೇಳಬಾರದು. ಒಬ್ಬನೇ ಯೋಚಿಸಿ ಕಾರ್ಯಮಾಡುವುದರಲ್ಲಿಯೂ ದೋಷವಿದೆ. ಹೆಚ್ಚು ಮಂದಿಗೆ ರಹಸ್ಯವನ್ನು ಬಯಲು ಮಾಡುವುದರಲ್ಲಿಯೂ ತೊಂದರೆಯಿದೆ. ಆದುದರಿಂದ ಆಪ್ತನಾದೊಬ್ಬ ಮಂತ್ರಿಯೊಡನೆ ಸಮಾಲೋಚನೆಯನ್ನು ಮಾಡಬೇಕು. 'ಷಟ್ಕರ್ಣೋ ಭಿದ್ಯತೇ ಮನ್ತ್ರಃ'–ಎಂಬಂತೆ ಮೂರನೆಯವನಿಗೆ ತಿಳಿಯಿತೆಂದರೆ ಗುಟ್ಟೆಲ್ಲವೂ ರಟ್ಟಾಗಿಬಿಡುತ್ತದೆ.

ಸಂಪತ್ತು ಅಭಿವೃದ್ಧಿಯಾಗುತ್ತದೆ. (ಇದಕ್ಕೆ ಹೀಗೂ ಅರ್ಥಮಾಡಬಹುದು: ಯಾವ ಕಾರ್ಯವೇ ಆಗಲೀ ಪರೋಕ್ಷದಲ್ಲಿ ನಡೆಯಲು ಅವಕಾಶವನ್ನೀಯಬಾರದು. ಕಾರ್ಯವು ಯಥಾಕ್ರಮವಾಗಿ ನಡೆಯಿತೇ? ಇಲ್ಲವೇ? ಎಂಬ ಸಂಶಯಕ್ಕೂ ಅವಕಾಶವಿರಬಾರದು ಮತ್ತು ಕಾರ್ಯವನ್ನು ಪ್ರಾರಂಭಿಸಿ ಮುಗಿಸದೇ ನಿಲ್ಲಿಸುವುದು, ಪುನಃ ಪ್ರಾರಂಭಿಸುವುದು ಹೀಗೂ ಮಾಡಬಾರದು. ಈ ಕೆಲವು ದೋಷಗಳು ಕಾರ್ಯಮಾಡಲು ನಿಯೋಜಿಸುವವರಲ್ಲಿ ಇಡುವ ವಿಶೇಷಸ್ನೇಹದಿಂದ ನಿವಾರಣೆಯಾಗಬಹುದಾಗಿದೆ.)

**ಆಪ್ತೈರಲುಬ್ಧೈಃ ಕ್ರಮಿಕೈಸ್ತೇ ಚ ಕಚ್ಚಿದನುಷ್ಠಿತಾಃ ।**
**ಕಚ್ಚಿದ್ರಾಜನ್ಕೃತಾನ್ಯೇವ ಕೃತಪ್ರಾಯಾಣಿ ವಾ ಪುನಃ।**
**ವಿದುಸ್ತೇ ವೀರ ಕರ್ಮಾಣಿ ನಾನವಾಪ್ತಾನಿ ಕಾನಿಚಿತ್ ॥೩೩॥**

ನಿನ್ನ ಕಾರ್ಯಗಳು ಆಪ್ತರಾದವರಿಂದಲೂ, ಲುಬ್ಧರಲ್ಲದವರಿಂದಲೂ, ಕಾರ್ಯದ ಅನುಭವವಿರುವವರಿಂದಲೂ ನಡೆಸಲ್ಪಡುತ್ತಿವೆಯಲ್ಲವೇ? ನೀನು ಇದುವರೆಗೆ ಮಾಡಿ ಮುಗಿಸಿರುವ ಕಾರ್ಯಗಳು, ಮುಗಿಯಲಿರುವ ಕಾರ್ಯಗಳು ಮತ್ತು ಪ್ರಾರಂಭಿಸಿರುವ ಕಾರ್ಯಗಳು–ಇವುಗಳೆಲ್ಲವೂ ಪ್ರಜೆಗಳ ಗಮನಕ್ಕೆ ಬಂದಿವೆಯಲ್ಲವೇ? ಇದು ಹೊರತಾಗಿ ನೀನು ಮುಂದೆ ಮಾಡಬೇಕೆಂದು ಸಂಕಲ್ಪಿಸಿರುವ ಯೋಜನೆಗಳ ವಿಷಯವಾಗಿ ಪ್ರಜೆಗಳಿಗೆ ತಿಳಿಯಬಾರದು.

**ಕಚ್ಚಿತ್ಕಾರಣಿಕಾ ಧರ್ಮೇ ಸರ್ವಶಾಸ್ತ್ರೇಷು ಕೋವಿದಾಃ।**
**ಕಾರಯನ್ತಿ ಕುಮಾರಾಂಶ್ಚ ಯೋಧಮುಖ್ಯಾಂಶ್ಚ ಸರ್ವಶಃ ॥೩೪॥**

ಸರ್ವಶಾಸ್ತ್ರಕೋವಿದರಾದ ಮತ್ತು ಧರ್ಮವನ್ನು ಸಕಾರಣವಾಗಿ ಪ್ರತಿಪಾದಿಸಲು ಸಾಮರ್ಥ್ಯವಿರುವ ವಿದ್ವಾಂಸರಿಂದ ರಾಜಕುಮಾರರಿಗೆ ಮತ್ತು ಮುಖ್ಯಯೋಧರಿಗೆ ಯೋಗ್ಯವಾದ ಶಿಕ್ಷಣವು ಲಭಿಸುತ್ತಿರುವುದೇ?

**ಕಚ್ಚಿತ್ಸಹಸ್ರೈರ್ಮೂರ್ಖಾಣಾಮೇಕಂ ಕ್ರೀಣಾಸಿ ಪಣ್ಡಿತಮ್।**
**ಪಣ್ಡಿತೋ ಹ್ಯರ್ಥಕೃಚ್ಛ್ರೇಷು ಕುರ್ಯಾನ್ನಿಃಶ್ರೇಯಸಂ ಪರಮ್ ॥೩೫॥**

ಧರ್ಮಜ! ಒಂದು ಸಾವಿರ ಮೂರ್ಖರ ವಿನಿಮಯದಿಂದಲಾದರೂ ಒಬ್ಬ ವಿದ್ವಾಂಸನನ್ನು ಪಡೆದುಕೊಳ್ಳಬೇಕು. ಏಕೆಂದರೆ : ಕಷ್ಟಕಾಲದಲ್ಲಿ

ವಿದ್ವಾಂಸನು ತನ್ನ ಬುದ್ಧಿಚಾತುರ್ಯದಿಂದ ಕಲ್ಯಾಣವನ್ನುಂಟುಮಾಡಲು ಸಮರ್ಥನಾಗುತ್ತಾನೆ. ನೀನು ಅಂತಹ ಪಂಡಿತರನ್ನು ಗೌರವಿಸುತ್ತಿರುವೆಯಲ್ಲವೇ?

**ಕಚ್ಚಿದ್ದುರ್ಗಾಣಿ ಸರ್ವಾಣಿ ಧನಧಾನ್ಯಾಯುಧೋದಕೈಃ ।**
**ಯನ್ತ್ರೈಶ್ಚ ಪರಿಪೂರ್ಣಾನಿ ತಥಾ ಶಿಲ್ಪಿಧನುರ್ಧರೈಃ ॥೩೬॥**

ನಿನ್ನ ದುರ್ಗಗಳು ಧನ-ಧಾನ್ಯಸಮೃದ್ಧವಾಗಿಯೂ, ಆಯುಧ ಸಮೃದ್ಧವಾಗಿಯೂ, ಜಲಸಮೃದ್ಧವಾಗಿಯೂ ಇರುವುವೇ? ಕೋಟೆಗಳಲ್ಲಿ ಶಸ್ತ್ರಾಸ್ತ್ರಗಳೂ, ಯಂತ್ರಗಳೂ ಇಡಲ್ಪಟ್ಟಿವೆಯೇ? ಅವುಗಳ ಪ್ರಯೋಗಗಳನ್ನು ತಿಳಿದಿರುವ ನಿಷ್ಣಾತರಾದ ಧನುರ್ಧಾರಿಗಳಾದ ಯೋಧರೂ ಮತ್ತು ಕುಶಲಕರ್ಮಿಗಳೂ ಸರ್ವಕಾಲದಲ್ಲಿಯೂ ಸಜ್ಜಾಗಿ ನಿಂತಿರುವರೇ?

**ಏಕೋಽಪ್ಯಮಾತ್ಯೋ ಮೇಧಾವೀ ಶೂರೋ ದಾನ್ತೋ ವಿಚಕ್ಷಣಃ ।**
**ರಾಜಾನಂ ರಾಜಪುತ್ರಂ ವಾ ಪ್ರಾಪಯೇನ್ಮಹತೀಂ ಶ್ರಿಯಮ್ ॥೩೭॥**

ಚತುರನಾದ, ಧೈರ್ಯಶಾಲಿಯಾದ, ಜಿತೇಂದ್ರಿಯನಾದ, ಯುಕ್ತಾಯುಕ್ತವಿವೇಚನೆಯಿರುವ ಮಂತ್ರಿಯು ಒಬ್ಬನಿದ್ದರೂ–ರಾಜನನ್ನೇ ಆಗಲೀ ರಾಜಪುತ್ರನನ್ನೇ ಆಗಲೀ ವಿಜಯಶ್ರೀಯೊಡನೆ ಯೋಜಿಸಲು ಸಮರ್ಥನಾಗುವನು. ಆದುದರಿಂದ ಅಂತಹ ಮಂತ್ರಿಯನ್ನು ನೀನು ಇಟ್ಟುಕೊಳ್ಳಬೇಕು.

**ಕಚ್ಚಿದಷ್ಟಾದಶಾನ್ಯೇಷು ಸ್ವಪಕ್ಷೇ ದಶ ಪಞ್ಚ ಚ ।**
**ತ್ರಿಭಿಸ್ತ್ರಿಭಿರವಿಜ್ಞಾತೈರ್ವೇತ್ಸಿ ತೀರ್ಥಾನಿ ಚಾರಕೈಃ ॥೩೮॥**

ಧರ್ಮಜ! ಶತ್ರುಪಕ್ಷದ ಹದಿನೆಂಟು ತೀರ್ಥಗಳನ್ನೂ (ಹದಿನೆಂಟು ಮಂದಿ ಮುಖ್ಯಸ್ಥರ ವಿಷಯಗಳನ್ನೂ) ಪರಸ್ಪರವಾಗಿ ಪರಿಚಯವಿಲ್ಲದ ಮೂವರು-ಮೂವರು ಚಾರರ ಮೂಲಕವಾಗಿ ತಿಳಿದುಕೊಳ್ಳುತ್ತಿರುವೆ ಯಲ್ಲವೇ?*

* ಮಂತ್ರೀ, ಪುರೋಹಿತ, ಯುವರಾಜ, ಚಮೂಪತಿ, ದ್ವಾರಪಾಲ, ಅಂತಃಪುರದ ಪ್ರಹರಿ, ಕಾರಾಗೃಹದ ಅಧಿಕಾರಿ, ತೆರಿಗೆಗಳನ್ನು ವಸೂಲಿಮಾಡುವ ಅಧಿಕಾರಿ, ಹಣ

**ಕಚ್ಚಿದ್ದ್ವಿಷಾಮವಿದಿತಃ ಪ್ರತಿಪನ್ನಶ್ಚ ಸರ್ವದಾ।**
**ನಿತ್ಯಯುಕ್ತೋ ರಿಪೂನ್ಸರ್ವಾನ್ವೀಕ್ಷಸೇ ರಿಪುಸೂದನ ॥೩೯॥**



ಶತ್ರುಸೂದನನೇ! ಶತ್ರುಗಳ ಚಲನ-ವಲನಗಳನ್ನು ಪ್ರತಿಕ್ಷಣದಲ್ಲಿಯೂ ಗೂಢಚಾರರ ಮೂಲಕ ತಿಳಿಯುತ್ತಿರಬೇಕು. ಆದರೆ ನೀನು ತಿಳಿದುಕೊಳ್ಳುತ್ತಿರುವೆಯೆಂಬ ವಿಷಯವು ಶತ್ರುಗಳಿಗೆ ತಿಳಿಯಬಾರದು. ಹಾಗೆಯೇ ನಡೆದುಕೊಳ್ಳುತ್ತಿರುವೆಯಲ್ಲವೇ?

---

ಕಾಸಿನ ಅಧಿಕಾರಿ, ಪಹರೆಯವರ ನಿಯಾಮಕ, ನಗರಾಧ್ಯಕ್ಷ, ಶಿಲ್ಪಿ, ಧರ್ಮಾಧ್ಯಕ್ಷ, ಸಭಾಧ್ಯಕ್ಷ, ದಂಡಪಾಲ, ದುರ್ಗಪಾಲ, ರಾಷ್ಟ್ರದ ಗಡಿಗಳ ಪಾಲಕ, ಅರಣ್ಯಗಳ ಅಧಿಕಾರಿ–ಈ ಹದಿನೆಂಟು ಸ್ಥಾನಗಳು ರಾಷ್ಟ್ರದ ರಾಜಕೀಯತೀರ್ಥಗಳೆಂದು ನೀತಿಶಾಸ್ತ್ರಜ್ಞರು ಹೇಳುತ್ತಾರೆ. ಶತ್ರುಪಕ್ಷದಲ್ಲಿರುವ ಈ ಹದಿನೆಂಟು ತೀರ್ಥವಿಷಯಗಳನ್ನೂ ತಜ್ಞರಾದ ಗೂಢಚಾರರ ಮೂಲಕ ತಿಳಿದುಕೊಳ್ಳಬೇಕು. ತನ್ನ ಪಕ್ಷದಲ್ಲಿಯೂ ಮೂವರನ್ನು ಬಿಟ್ಟು ಎಂದರೆ ಮಂತ್ರೀ, ಪುರೋಹಿತ, ಯುವರಾಜ–ಇವರನ್ನು ಬಿಟ್ಟು ಉಳಿದವರ ವಿಷಯಗಳನ್ನೂ ಗೂಢಚಾರರಿಂದ ತಿಳಿಯಬೇಕು.

**ಕಚ್ಚಿದ್ವಿನಯಸಮ್ಪನ್ನಃ ಕುಲಪುತ್ರೋ ಬಹುಶ್ರುತಃ ।**
**ಅನಸೂಯುರನುಪ್ರಷ್ಟಾ ಸತ್ಕೃತಸ್ತೇ ಪುರೋಹಿತಃ ॥೪೦॥**

ಯುಧಿಷ್ಠಿರ! ವಿದ್ಯಾವಿನಯಸಂಪನ್ನನಾದ, ಸತ್ಕುಲಪ್ರಸೂತನಾದ, ಪರರ ವಿಷಯದಲ್ಲಿ ಅಸೂಯೆಪಡದ, ಶಾಸ್ತ್ರಾರ್ಥಚರ್ಚಾಕುಶಲನಾದ ಪುರೋಹಿತನು ನಿನ್ನಿಂದ ಸತ್ಕೃತನಾಗಿರುವನೇ? ಅರ್ಥಾತ್ ಅಂತಹ ಪುರೋಹಿತನನ್ನು ನಿನ್ನ ಬಳಿಯಲ್ಲಿ ಇಟ್ಟುಕೊಂಡಿರುವೆಯಾ?

**ಕಚ್ಚಿದಗ್ನಿಷು ತೇ ಯುಕ್ತೋ ವಿಧಿಜ್ಞೋ ಮತಿಮಾನೃಜುಃ ।**
**ಹುತಂ ಚ ಹೋಷ್ಯಮಾಣಂ ಚ ಕಾಲೇ ವೇದಯತೇ ಸದಾ ॥೪೧॥**

**ಕಚ್ಚಿದಙ್ಗೇಷು ನಿಷ್ಣಾತೋ ಜ್ಯೋತಿಷಃ ಪ್ರತಿಪಾದಕಃ।**
**ಉತ್ಪಾತೇಷು ಚ ಸರ್ವೇಷು ದೈವಜ್ಞಃ ಕುಶಲಸ್ತವ ॥೪೨॥**

ಆಹಿತಾಗ್ನಿಯಾದ, ಶ್ರುತಿ-ಸ್ಮೃತ್ಯುಕ್ತವಿಧಿಗಳನ್ನು ಚೆನ್ನಾಗಿ ತಿಳಿದಿರುವ, ಅಕುಟಿಲನಾದ ಪುರೋಹಿತನು ಯಾವ ಕಾಲದಲ್ಲಿ ಯಾವ ಶಾಂತಿಹೋಮಗಳನ್ನು ಮಾಡಬೇಕೆಂಬುದನ್ನು ತಿಳಿಸುತ್ತಿರುವನೇ? ಸಾಮುದ್ರಿಕಶಾಸ್ತ್ರದಲ್ಲಿ ನಿಪುಣನಾದ, ಮುಂದೆ ಬರುವ ಉತ್ಪಾತ-ಮಹೋತ್ಪಾತಗಳನ್ನು ತಿಳಿಯುವ ಸಾಮರ್ಥ್ಯದಿಂದ ಕೂಡಿರುವ ಜ್ಯೌತಿಷಿಕನು ನಿನ್ನ ಆಸ್ಥಾನದಲ್ಲಿ ಇರುವನಲ್ಲವೇ?

**ಕಚ್ಚಿನ್ಮುಖ್ಯಾ ಮಹತ್ಸ್ವೇವ ಮಧ್ಯಮೇಷು ಚ ಮಧ್ಯಮಾಃ।**
**ಜಘನ್ಯಾಶ್ಚ ಜಘನ್ಯೇಷು ಭೃತ್ಯಾಃ ಕರ್ಮಸು ಯೋಜಿತಾಃ ॥೪೩॥**

ನಿನ್ನ ರಾಜ್ಯದಲ್ಲಿ ಅಧಿಕಾರಗಳನ್ನು ವಿತರಣೆಮಾಡುವಾಗಲೂ ಉತ್ತಮರಿಗೆ, ಮಧ್ಯಮರಿಗೆ, ಮೂರನೆಯ ಶ್ರೇಣಿಯವರಿಗೆ ಅವರಿಗೆ ಅನುಗುಣವಾದ ಉತ್ತಮ-ಮಧ್ಯಮ-ಜಘನ್ಯಕಾರ್ಯಗಳನ್ನೇ ನಿಯೋಜಿಸುತ್ತಿರುವೆಯಲ್ಲವೇ?

**ಅಮಾತ್ಯಾನುಪಧಾತೀತಾನ್ಪಿತೃಪೈತಾಮಹಾಞ್ಶುಚೀನ್।**
**ಶ್ರೇಷ್ಠಾಞ್ಶ್ರೇಷ್ಠೇಷು ಕಚ್ಚಿತ್ತ್ವಂ ನಿಯೋಜಯಸಿ ಕರ್ಮಸು ॥೪೪॥**

ಪ್ರಾಮಾಣಿಕರಾದ, ತಾತ-ಮುತ್ತಾತಂದಿರ ಕಾಲದಿಂದಲೂ ಸಂಬಂಧಿಸಿರುವ, ಪರಿಶುದ್ಧರಾದ, ವಿದ್ಯಾ-ವಿನಯ-ಜಿತೇಂದ್ರಿಯತ್ವಗಳಲ್ಲಿ ಕೀರ್ತಿಗಳಿ

ಸಿರುವ, ಶ್ರೇಷ್ಠರಲ್ಲಿ ಶ್ರೇಷ್ಠರಾದ ಅಮಾತ್ಯರನ್ನು ಶ್ರೇಷ್ಠಕಾರ್ಯಗಳಲ್ಲಿ ನಿಯಮಿಸುತ್ತಿರುವೆಯಾ?

**ಕಚ್ಚಿನ್ನೋಗ್ರೇಣ ದಣ್ಡೇನ ಭೃಶಮುದ್ವಿಜಸೇ ಪ್ರಜಾಃ ।**
**ರಾಷ್ಟ್ರಂ ತವಾನುಶಾಸನ್ತಿ ಮನ್ತ್ರಿಣೋ ಭರತರ್ಷಭ ॥೪೫॥**

**ಕಚ್ಚಿತ್ತ್ವಾಂ ನಾವಜಾನನ್ತಿ ಯಾಜಕಾಃ ಪತಿತಂ ಯಥಾ ।**
**ಉಗ್ರಪ್ರತಿಗ್ರಹೀತಾರಂ ಕಾಮಯಾನಮಿವ ಸ್ತ್ರಿಯಃ ॥೪೬॥**

ಭರತಶ್ರೇಷ್ಠನೇ! ನಿನ್ನ ಅಧಿಕಾರಿಗಳು ಪ್ರಜೆಗಳಿಗೆ ಕ್ರೂರವಾದ ಶಿಕ್ಷೆಗಳನ್ನು ಕೊಟ್ಟು ಅವರನ್ನು ಉದ್ವಿಗ್ನರನ್ನಾಗಿ ಮಾಡುತ್ತಿಲ್ಲವಲ್ಲವೇ? ನಿನ್ನ ಆಜ್ಞೆಯನ್ನೇ ಅನುಸರಿಸಿ ಅಮಾತ್ಯರು ರಾಜ್ಯಶಾಸನವನ್ನು ಮಾಡುತ್ತಿರುವರೇ? ಯಾಜಕರು ಪತಿತನಾದ ಯಜಮಾನನನ್ನೂ, ಕುಲಸ್ತ್ರೀಯರು ಕಾಮಚಾರಿಯಾದ ವಿಷಯಲಂಪಟನನ್ನೂ ತಿರಸ್ಕರಿಸುವಂತೆ–ಪ್ರಜಾ ಪೀಡಕನಾದ ರಾಜನನ್ನು ಪ್ರಜೆಗಳು ತಿರಸ್ಕರಿಸುತ್ತಾರೆ. ನೀನು ಅಂತಹ ತಿರಸ್ಕಾರಕ್ಕೆ ಗುರಿಯಾಗಿಲ್ಲವಷ್ಟೇ?*

**ಕಚ್ಚಿದ್ಧೃಷ್ಟಶ್ಚ ಶೂರಶ್ಚ ಮತಿಮಾನ್ಧೃತಿಮಾಞ್ಛುಚಿಃ ।**
**ಕುಲೀನಶ್ಚಾನುರಕ್ತಶ್ಚ ದಕ್ಷಃ ಸೇನಾಪತಿಸ್ತಥಾ ॥೪೭॥**

ಧನ-ಮಾನಗಳಲ್ಲಿ ಸಂತುಷ್ಟನಾಗಿರುವ, ಶೂರನಾದ, ಬುದ್ಧಿವಂತನಾದ, ಕಷ್ಟವನ್ನು ಸಹಿಸುವ ಸಾಮರ್ಥ್ಯವುಳ್ಳ, ಪರಿಶುದ್ಧನಾದ, ಸತ್ಕುಲ ಪ್ರಸೂತನಾದ, ದಕ್ಷನಾದ ಮತ್ತು ನಿನ್ನಲ್ಲಿಯೇ ಅನುರಕ್ತನಾಗಿರುವವನನ್ನು ಸೇನಾಪತಿಯನ್ನಾಗಿ ನಿಯಮಿಸಿಕೊಂಡಿರುವೆಯಾ?

---

* ಪ್ರಜಾಪೀಡನಸಂತಾಪಾತ್ಸಮುದ್ಭೂತೋ ಮಹಾನಲಃ ।
ರಾಜ್ಞಃ ಪ್ರಾಣಾನ್ಬಲಂ ತೋಷಂ ನಾದಗ್ಧ್ವಾ ವಿನಿವರ್ತತೇ ॥

ಪ್ರಜೆಗಳನ್ನು ನಾನಾಪ್ರಕಾರವಾಗಿ ಪೀಡಿಸುವುದರಿಂದ ಉದ್ಭೂತವಾಗುವ ದಾವಾಗ್ನಿಯು ರಾಜನ ಪ್ರಾಣ, ಬಲ, ಭಂಡಾರ ಇವೆಲ್ಲವನ್ನೂ ಭಸ್ಮಮಾಡದೇ ಹಿಂದಿರುಗುವುದಿಲ್ಲ. ಪ್ರಜೆಗಳು ರೊಚ್ಚಿಗೆದ್ದರೆ ರಾಜನೂ ಉಳಿಯುವುದಿಲ್ಲ. ಅವನ ಸೈನ್ಯಗಳೂ ಉಳಿಯುವುದಿಲ್ಲ. ಆದುದರಿಂದ ಪ್ರಜೆಗಳನ್ನೂ ರಾಜನು ಮಿತಿಮೀರಿದ ತೆರಿಗೆ ಮುಂತಾದುವುಗಳಿಂದ ಪೀಡಿಸಬಾರದು.

**ಕಚ್ಚಿದ್ಬಲಸ್ಯ ತೇ ಮುಖ್ಯಾಃ ಸರ್ವಯುದ್ಧವಿಶಾರದಾಃ ।**
**ಧೃಷ್ಟಾವದಾತಾ ವಿಕ್ರಾನ್ತಾಸ್ತ್ವಯಾ ಸತ್ಕೃತ್ಯ ಮಾನಿತಾಃ ॥೪೮॥**

ನಿಷ್ಕಾಪಟ್ಯದಿಂದ ಶತ್ರುಗಳನ್ನು ಎದುರಿಸಿ ಜಯಶಾಲಿಗಳಾಗಿ ಬರುವ, ಯುದ್ಧವಿಶಾರದರಾದ ಸೇನಾಪ್ರಮುಖರು ನಿನ್ನಿಂದ ಯಥೋಚಿತವಾದ ಸನ್ಮಾನಗಳನ್ನು ಹೊಂದುತ್ತಿರುವರೇ?

**ಕಚ್ಚಿದ್ಬಲಸ್ಯ ಭಕ್ತಂ ಚ ವೇತನಂ ಚ ಯಥೋಚಿತಮ್ ।**
**ಸಮ್ಪ್ರಾಪ್ತಕಾಲೇ ದಾತವ್ಯಂ ದದಾಸಿ ನ ವಿಕರ್ಷಸಿ ॥೪೯॥**

ಸೈನಿಕರಿಗೆ ಯಥೋಚಿತವಾಗಿ ಕೊಡಬೇಕಾದ ದೈನಂದಿನಭತ್ಯಗಳೂ ಮಾಸಾಶನಗಳೂ ಕಾಲಕ್ಕೆ ಸರಿಯಾಗಿ ಕೊಡಲ್ಪಡುತ್ತಿರುವುದೇ? ಹಾಗೆ ಕೊಡದೇ ಅವರಿಗೆ ತೊಂದರೆಯನ್ನುಂಟುಮಾಡುತ್ತಿಲ್ಲ ತಾನೇ?

**ಕಾಲಾತಿಕ್ರಮಣಾದೇತೇ ಭಕ್ತವೇತನಯೋರ್ಭೃತಾಃ ।**
**ಭರ್ತುಃ ಕುಪ್ಯನ್ತಿ ಯದ್ಭೃತ್ಯಾಃ ಸೋಽನರ್ಥಃ ಸುಮಹಾನ್ ಸ್ಮೃತಃ ॥೫೦॥**

ಕೊಡಬೇಕಾಗಿರುವ ಮಾಸಾಶನ-ಭತ್ಯಗಳನ್ನು ನಿಯತಕಾಲಕ್ಕೆ ಸರಿಯಾಗಿಯೇ ಕೊಡಬೇಕು. ಕಾಲಮೀರಿ ಕೊಡಬಾರದು. ಭತ್ಯ ಮತ್ತು ಮಾಸಾಶನಗಳಿಂದಲೇ ಜೀವಿಕೆಯನ್ನು ನಡೆಸುವ ಅವರಿಗೆ ಕಾಲಕ್ಕೆ ಸರಿಯಾಗಿ ವೇತನಗಳನ್ನು ಕೊಡದಿದ್ದರೆ ದಾರಿದ್ರ್ಯದ ದೆಸೆಯಿಂದ ಅವರು ಯಜಮಾನನ ಮೇಲೆಯೇ ಕೋಪಗೊಂಡು ದಂಗೆಯೇಳುತ್ತಾರೆ. ಇದು ರಾಜ್ಯದಲ್ಲಿ ಒಂದು ದೊಡ್ಡ ಅನರ್ಥವೆಂದೇ ನೀತಿಶಾಸ್ತ್ರಜ್ಞರು ಹೇಳುತ್ತಾರೆ.

**ಕಚ್ಚಿತ್ಸರ್ವೇಽನುರಕ್ತಾಸ್ತ್ವಾಂ ಕುಲಪುತ್ರಾಃ ಪ್ರಧಾನತಃ ।**
**ಕಚ್ಚಿತ್ಪ್ರಾಣಾಂಸ್ತವಾರ್ಥೇಷು ಸಂತ್ಯಜನ್ತಿ ಸದಾ ಯುಧಿ ॥೫೧॥**

ಧರ್ಮಜ! ಅಮಾತ್ಯರೇ ಆದಿಯಾಗಿ ಸಕಲಕುಲಪುತ್ರರೂ ನಿನ್ನಲ್ಲಿ ಅನುರಕ್ತರಾಗಿರುವರೇ? ಸರ್ವರೂ ನಿನ್ನ ಸಲುವಾಗಿ ಯುದ್ಧದಲ್ಲಿ ಪ್ರಾಣ ತ್ಯಾಗಮಾಡಲು ಸದಾ ಸಿದ್ಧರಾಗಿರುವರೇ?

**ಕಚ್ಚಿನ್ನೈಕೋ ಬಹೂನರ್ಥಾನ್ಸರ್ವಶಃ ಸಾಮ್ಪರಾಯಿಕಾನ್।**
**ಅನುಶಾಸ್ತಿ ಯಥಾಕಾಮಂ ಕಾಮಾತ್ಮಾ ಶಾಸನಾತಿಗಃ ॥೫೨॥**

ಸಂಗ್ರಾಮಕ್ಕೆ ಸಂಬಂಧಿಸಿದ ಗಜ-ರಥ-ತುರಗ-ಪದಾತಿಗಳೆಂಬ ನಾಲ್ಕು ವಿಭಾಗಗಳಿಗೂ ಪ್ರತ್ಯೇಕ-ಪ್ರತ್ಯೇಕವಾದ ಅಧಿಪತಿಗಳೇ ಇರಬೇಕು. ಚತುರಂಗ ಬಲವನ್ನೂ ಒಬ್ಬ ದಂಡನಾಯಕನೇ ಸ್ವೇಚ್ಛೆಯಿಂದ ಅಧೀನದಲ್ಲಿಟ್ಟು ಕೊಂಡಿದ್ದರೆ ಅಪಾಯವು ಖಂಡಿತ. ಆದುದರಿಂದ ನಿನ್ನ ರಾಜ್ಯದಲ್ಲಿ ನಾಲ್ಕು ವಿಭಾಗಗಳಿಗೂ ಪ್ರತ್ಯೇಕವಾಗಿ ದಂಡನಾಯಕರು ಇರುವರಲ್ಲವೇ?

**ಕಚ್ಚಿತ್ಪುರುಷಕಾರೇಣ ಪುರುಷಃ ಕರ್ಮ ಶೋಭಯನ್।**
**ಲಭತೇ ಮಾನಮಧಿಕಂ ಭೂಯೋ ವಾ ಭಕ್ತವೇತನಮ್ ॥೫೩॥**

ನಿನ್ನ ಅಧಿಕಾರಿಗಳಲ್ಲಿ ಯಾವನಾದರೊಬ್ಬನು ಸಮಯದಲ್ಲಿ ವಿಶೇಷ ಪರಾಕ್ರಮವನ್ನು ತೋರಿದರೆ ಅಂತಹವನು ನಿನ್ನಿಂದ ವಿಶೇಷವಾದ ಬಹುಮಾನವನ್ನೂ ಹೆಚ್ಚಿನ ಭತ್ಯ ಮತ್ತು ವೇತನಗಳನ್ನೂ ಪಡೆದು ಪುರಸ್ಕೃತನಾಗುವನಲ್ಲವೇ?

**ಕಚ್ಚಿದ್ವಿದ್ಯಾವಿನೀತಾಂಶ್ಚ ನರಾನ್ ಜ್ಞಾನವಿಶಾರದಾನ್ ।**
**ಯಥಾರ್ಹಂ ಗುಣತಶ್ಚೈವ ದಾನೇನಾಭ್ಯುಪಪದ್ಯಸೇ ॥೫೪॥**

ವಿದ್ಯಾವಿನಯಸಂಪನ್ನರನ್ನೂ, ವಿಜ್ಞಾನಿಗಳನ್ನೂ ಯಥಾರ್ಹವಾಗಿ ಧನ-ದಾನಗಳನ್ನು ಕೊಟ್ಟು ನಿನ್ನವರನ್ನಾಗಿ ಮಾಡಿಕೊಂಡಿರುವೆಯಾ?

**ಕಚ್ಚಿದ್ದಾರಾನ್ಮನುಷ್ಯಾಣಾಂ ತವಾರ್ಥೇ ಮೃತ್ಯುಮೀಯುಷಾಮ್।**
**ವ್ಯಸನಂ ಚಾಭ್ಯುಪೇತಾನಾಂ ಬಿಭರ್ಷಿ ಭರತರ್ಷಭ ॥೫೫॥**

ಭರತರ್ಷಭನೇ! ನಿನ್ನ ಹಿತಕ್ಕಾಗಿ ಪ್ರಾಣತೆತ್ತವರ ಮತ್ತು ನಿನ್ನ ಹಿತಕ್ಕಾಗಿ ಸಂಕಟಕ್ಕೊಳಗಾದವರ ಹೆಂಡತಿ-ಮಕ್ಕಳನ್ನು ಸರಿಯಾಗಿ ರಕ್ಷಣೆಮಾಡುತ್ತಿರುವೆಯಾ?

**ಕಚ್ಚಿದ್ಭಯಾದುಪಗತಂ ಕ್ಷೀಣಂ ವಾ ರಿಪುಮಾಗತಮ್ ।**
**ಯುದ್ಧೇ ವಾ ವಿಜಿತಂ ಪಾರ್ಥ ಪುತ್ರವತ್ಪರಿರಕ್ಷಸಿ ॥೫೬॥**

ಭಯದಿಂದ ಶರಣಾಗತನಾಗಿರುವ, ದರಿದ್ರನಾದ, ಯುದ್ಧದಲ್ಲಿ ಪರಾಜಿತನಾಗಿರುವ ಶತ್ರುವನ್ನು ನಿನ್ನ ಮಗನಂತೆಯೇ ಪುರಸ್ಕರಿಸಿ ಕಾಪಾಡುತ್ತಿರುವೆಯಾ?

**ಕಚ್ಚಿತ್ತ್ವಮೇವ ಸರ್ವಸ್ಯಾಃ ಪೃಥಿವ್ಯಾಃ ಪೃಥಿವೀಪತೇ ।**
**ಸಮಶ್ಚಾನಭಿಶಙ್ಕ್ಯಶ್ಚ ಯಥಾ ಮಾತಾ ಯಥಾ ಪಿತಾ ॥೫೭॥**

ಭೂಪತಿಯೇ! ನೀನು ನಿನ್ನ ಪ್ರಜೆಗಳೆಲ್ಲರನ್ನೂ ನಿಷ್ಪಕ್ಷಪಾತದೃಷ್ಟಿಯಿಂದ ಕಾಣುತ್ತಿರುವೆಯಾ? ಅವರೆಲ್ಲರೂ–ತಮ್ಮ ತಾಯಿ-ತಂದೆಗಳ ಸಮೀಪಕ್ಕೆ ನಿರ್ಭಯರಾಗಿ ಹೋಗುವಂತೆ–ನಿನ್ನಲ್ಲಿಗೂ ಬಂದು ತಮ್ಮ ಕಷ್ಟ-ಸುಖಗಳನ್ನು ನಿರ್ಭಯವಾಗಿ ಹೇಳಿಕೊಳ್ಳಲು ಅವಕಾಶವಿರುವುದಲ್ಲವೇ?

**ಕಚ್ಚಿದ್ವ್ಯಸನಿನಂ ಶತ್ರುಂ ನಿಶಮ್ಯ ಭರತರ್ಷಭ ।**
**ಅಭಿಯಾಸಿ ಜವೇನೈವ ಸಮೀಕ್ಷ್ಯ ತ್ರಿವಿಧಂ ಬಲಮ್ ॥೫೮॥**

ಶತ್ರುರಾಜರಲ್ಲಿ ಯಾರಾದರೂ ಸ್ತ್ರೀ-ದ್ಯೂತಾದಿ ದುರ್ವ್ಯಸನಗಳಲ್ಲಿ ನಿರತರಾಗಿರುವುದು ತಿಳಿದ ಕೂಡಲೇ ಮಂತ್ರ-ಕೋಶ-ಭೃತ್ಯರೂಪವಾದ ಅಥವಾ ಪ್ರಭುಶಕ್ತಿ-ಮಂತ್ರಶಕ್ತಿ-ಉತ್ಸಾಹಶಕ್ತಿರೂಪವಾದ ತ್ರಿವಿಧಬಲಗಳನ್ನೂ ವಿಮರ್ಶೆಮಾಡಿ ಆಕ್ರಮಣಮಾಡುತ್ತಿರುವೆಯಾ?*

**ಯಾತ್ರಾಮಾರಭಸೇ ದಿಷ್ಟ್ಯಾ ಪ್ರಾಪ್ತಕಾಲಮರಿಂದಮ ।**
**ಪಾರ್ಷ್ಣಿಮೂಲಂ ಚ ವಿಜ್ಞಾಯ ವ್ಯವಸಾಯಂ ಪರಾಜಯಮ್ ।**
**ಬಲಸ್ಯ ಚ ಮಹಾರಾಜ ದತ್ತ್ವಾ ವೇತನಮಗ್ರತಃ ॥೫೯॥**

ಧರ್ಮಜ! ಶತ್ರುಗಳನ್ನು ಜಯಿಸಲು ಸಕಾಲವಾವುದೆಂಬುದನ್ನು

---

*ಸ್ತ್ರೀ, ದ್ಯೂತ, ಬೇಟೆ, ಮದಿರೆ, ನೃತ್ಯಲೋಲುಪತೆ, ಗಾನಲೋಲುಪತೆ, ವೃಥಾಪರ್ಯಟನೆ, ವೀಣಾದಿವಾದ್ಯಗಳಲ್ಲಿ ಆಸಕ್ತನಾಗಿರುವುದು, ಪರನಿಂದೆಯನ್ನೇ ಯಾವಾಗಲೂ ಮಾಡುತ್ತಿರುವುದು, ಹಗಲು ನಿದ್ರೆಮಾಡುವುದು–ಈ ಹತ್ತು ರಾಜವ್ಯಸನಗಳು. ಇವುಗಳಲ್ಲಿ ಶತ್ರುರಾಜನು ಆಸಕ್ತನಾಗಿರುವನೆಂದು ತಿಳಿದಾಗ ಮಂತ್ರ-ಕೋಶ-ಭೃತ್ಯರೆಂಬ ತ್ರಿವಿಧಬಲಸಮೇತನಾಗಿ ಅಥವಾ ಪ್ರಭು-ಮಂತ್ರ-ಉತ್ಸಾಹಗಳೆಂಬ ತ್ರಿವಿಧಶಕ್ತಿಸಮೇತನಾಗಿ ಶತ್ರುವಿನ ಮೇಲೆ ಬಿದ್ದು ಜಯವನ್ನು ಗಳಿಸಬೇಕು.

ತಿಳಿದು, ದೈವಬಲವೂ ಇರುವುದೇ ಎಂಬುದನ್ನೂ ಶಾಸ್ತ್ರಜ್ಞರ ಮೂಲಕವಾಗಿ ನಿರ್ಣಯಿಸಿ ವಿಜಯಯಾತ್ರೆಯನ್ನಾರಂಭಿಸುವೆಯಾ?

ವಿಜಯಯಾತ್ರೆಗೆ ಹೋಗಬೇಕಾದರೆ ಮೊದಲು ಪಾರ್ಷ್ಣಿಮೂಲವನ್ನು* ಹಿಂಬದಿಯ ರಕ್ಷಕರ ಆಚಾರ-ವಿಚಾರ ಕುಲ-ಗೋತ್ರಗಳನ್ನು ಚೆನ್ನಾಗಿ ತಿಳಿದುಕೊಂಡು (ಸತ್ಕುಲಪ್ರಸೂತರನ್ನು, ಸ್ವಾಮಿನಿಷ್ಠೆಯಿರುವವರನ್ನು ಹಿಂಭಾಗದ ರಕ್ಷಕರನ್ನಾಗಿ ಮಾಡಿಕೊಂಡು) ಶತ್ರುವಿನ ವಿಜಯಕ್ಕೆ ಪ್ರಯತ್ನಿಸಬೇಕು. ನಿನ್ನ ಸೈನಿಕರಿಗೂ, ಸೈನ್ಯಾಧಿಕಾರಿಗಳಿಗೂ ಯುದ್ಧಕ್ಕೆ ಹೊರಡುವ ಮೊದಲು ಮುಂಗಡವಾಗಿ ವೇತನವನ್ನು ಕೊಡಬೇಕು.

**ಕಚ್ಚಿಚ್ಚ ಬಲಮುಖ್ಯೇಭ್ಯಃ ಪರರಾಷ್ಟ್ರೇ ಪರಂತಪ ।**
**ಉಪಚ್ಛನ್ನಾನಿ ರತ್ನಾನಿ ಪ್ರಯಚ್ಛಸಿ ಯಥಾರ್ಹತಃ ॥೬೦॥**

ಶತ್ರುಪಕ್ಷದ ದಂಡನಾಯಕರಿಗೆ ರಹಸ್ಯದಲ್ಲಿ ಯಥೇಚ್ಛವಾಗಿ ರತ್ನಾಭರಣಗಳನ್ನು ಅವರವರ ಸ್ಥಾನ-ಮಾನಗಳಿಗೆ ಅನುಗುಣವಾಗಿ ಕಳುಹಿಸಿಕೊಡುತ್ತಿರುವೆಯಾ?

**ಕಚ್ಚಿದಾತ್ಮಾನಮೇವಾಗ್ರೇ ವಿಜಿತ್ಯ ವಿಜಿತೇನ್ದ್ರಿಯಃ।**
**ಪರಾಞ್ಜಿಗೀಷಸೇ ಪಾರ್ಥ ಪ್ರಮತ್ತಾನಜಿತೇನ್ದ್ರಿಯಾನ್ ॥೬೧॥**

---

* ಪಾರ್ಷ್ಣಿಮೂಲಂ.:- ಎಂಬುದಕ್ಕೆ ವ್ಯಾಖ್ಯಾನಕಾರರು ಪಾರ್ಷ್ಣಿಗ್ರಾಹಕನೇ ಮೊದಲಾದ ಹನ್ನೆರಡು ಮಂಡಲ–ಎಂದು ವಿವರಿಸಿದ್ದಾರೆ.

ಪಾರ್ಷ್ಣಿಗ್ರಾಹಕಃ ಆದಿಃ ಯಸ್ಯ ತತ್ ದ್ವಾದಶವಿಧಂ ಮಣ್ಡಲಮ್ ।
**ಅರಿರ್ಮಿತ್ರಮರೇರ್ಮಿತ್ರಂ ಮಿತ್ರಮಿತ್ರಮತಃ ಪರಮ್ ।**
**ಅಥಾರಿಮಿತ್ರಮಿತ್ರಂ ಚ ವಿಜಿಗೀಷೋಃ ಪುರಸ್ಸೃತಾಃ ॥**
**ಪಾರ್ಷ್ಣಿಗ್ರಾಹಸ್ತತಃ ಪಶ್ಚಾದಾಕ್ರನ್ದಸ್ತದನನ್ತರಮ್ ।**
**ಆಸಾದಾವನಯೋಶ್ಚೈವ ವಿಜಿಗೀಷೋಸ್ತು ಪೃಷ್ಠತಃ ॥**

ಶತ್ರು, ಮಿತ್ರ, ಶತ್ರುವಿನ ಮಿತ್ರ, ತನ್ನ ಮಿತ್ರನ ಮಿತ್ರ, ಶತ್ರುವಿನ ಶತ್ರು, ಶತ್ರುವಿನ ಮಿತ್ರ, ಪಾರ್ಷ್ಣಿಗ್ರಾಹ (ಪೃಷ್ಠರಕ್ಷಕ), ಆಕ್ರಂದ (ಪ್ರೋತ್ಸಾಹಕ) ಇಬ್ಬರು ಆಸಾದರು (ಪಾರ್ಶ್ವಗ್ರಾಹನನ್ನು ಆಕ್ರಂದನನ್ನು ರಕ್ಷಿಸುವವರು), ಉದಾಸೀನ ಮತ್ತು ಮಧ್ಯಸ್ಥ ಇವರ ವಿಷಯವನ್ನು ರಾಜನು ಚೆನ್ನಾಗಿ ತಿಳಿದಿರಬೇಕು.

ಯುಧಿಷ್ಠಿರ! ಮೊದಲು ನಿನ್ನನ್ನು ಜಯಿಸಿಕೊಳ್ಳಬೇಕು. ಎಂದರೆ ನೀನು ಜಿತೇಂದ್ರಿಯನಾಗಿರಬೇಕು. ಆಗ ಮಾತ್ರ ನೀನು ಅಜಿತೇಂದ್ರಿಯರನ್ನೂ, ಪ್ರಮತ್ತರನ್ನೂ ಜಯಿಸಲು ಸಮರ್ಥನಾಗುವೆ.

**ಕಚ್ಚಿತ್ತೇ ಯಾಸ್ಯತಃ ಶತ್ರೂನ್ಪೂರ್ವಂ ಯಾನ್ತಿ ಸ್ವನುಷ್ಠಿತಾಃ ।**
**ಸಾಮ ದಾನಂ ಚ ಭೇದಶ್ಚ ದಣ್ಡಶ್ಚ ವಿಧಿವದ್ಗುಣಾಃ ॥೬೨॥**

ಶತ್ರುವಿನ ಮೇಲೆ ದಂಡಯಾತ್ರೆಗೆ ಹೋಗಬೇಕಾದರೆ ಮೊದಲು ಸಾಮ, ದಾನ, ಭೇದ–ಈ ಮೂರು ಉಪಾಯಗಳನ್ನು ವಿಧಿವತ್ತಾಗಿ ಪ್ರಯೋಗಿಸಿ ಅದರಿಂದ ನೀನು ಸಫಲನಾಗದಿದ್ದರೆ ಮಾತ್ರವೇ ಕಡೆಯದಾದ ದಂಡೋಪಾಯದಿಂದ ಶತ್ರುವನ್ನು ಜಯಿಸಬೇಕು.

**ಕಚ್ಚಿನ್ಮೂಲಂ ದೃಢಂ ಕೃತ್ವಾ ಪರಾನ್ಯಾಸಿ ವಿಶಾಂಪತೇ ।**
**ತಾಂಶ್ಚ ವಿಕ್ರಮಸೇ ಜೇತುಂ ಜಿತ್ವಾ ಚ ಪರಿರಕ್ಷಸಿ ॥೬೩॥**

ಪಾರ್ಥ! ದಂಡಯಾತ್ರೆಗೆ ಹೊರಡುವ ಮೊದಲು ಪರಿಶೀಲಿಸಬೇಕಾದ ಮತ್ತೊಂದು ಮುಖ್ಯಕರ್ತವ್ಯವಿದೆ. ನಿನ್ನ ರಾಜ್ಯವು ಸುಭದ್ರತೆಯಿಂದಿರುವುದೇ ಎಂಬುದನ್ನು ಮೊದಲು ಕೂಲಂಕಷವಾಗಿ ಪರಿಶೀಲಿಸಬೇಕು. ನಿನ್ನ ರಾಜ್ಯವು ಸುಭದ್ರತೆಯಿಂದಿದ್ದರೆ ಮಾತ್ರವೇ ನೀನು ಶತ್ರುರಾಜರನ್ನು ಗೆಲ್ಲಬಹುದು ಮತ್ತು ಗೆದ್ದ ರಾಜ್ಯವನ್ನು ಸುರಕ್ಷಿತವಾಗಿಟ್ಟುಕೊಳ್ಳಬಹುದು.

**ಕಚ್ಚಿದಷ್ಟಾಙ್ಗಸಂಯುಕ್ತಾ ಚತುರ್ವಿಧಬಲಾ ಚಮೂಃ ।**
**ಬಲಮುಖ್ಯೈಃ ಸುನೀತಾ ತೇ ದ್ವಿಷತಾಂ ಪ್ರತಿವರ್ಧಿನೀ ॥೬೪॥**

ಧರ್ಮಜ! ರಥ, ಆನೆ, ಕುದುರೆ, ಯೋಧರು, ಪದಾತಿಗಳು, ಕಾರ್ಮಿಕರು, ಚಾರರು, ದೈಹಿಕಶಿಕ್ಷಕರು–ಇವರುಗಳಿಗೆ ಸೈನ್ಯದ ಅಷ್ಟಾಂಗಗಳೆಂದು ಹೆಸರು. ಮೌಲ್ಯ, ಮೈತ್ರ, ಭೃತ್ಯ, ಆಟವಿಕ–ಇವುಗಳು ನಾಲ್ಕು ಬಲಗಳು. ಇವುಗಳ ನಾಯಕರು ಬಹಳ ಚತುರರಾಗಿರಬೇಕು.

ಅವರ ಚಾತುರ್ಯದಿಂದ ಮಾತ್ರವೇ ಶತ್ರುಪಕ್ಷದ ಪ್ರಾಬಲ್ಯವು ಕಡಿಮೆಯಾಗಲು ಸಾಧ್ಯವಾಗುವುದು.

**ಕಚ್ಚಿಲ್ಲವಂ ಚ ಮುಷ್ಟಿಂ ಚ ಪರರಾಷ್ಟ್ರೇ ಪರಂತಪ ।**
**ಅವಿಹಾಯ ಮಹಾರಾಜ ನಿಹಂಸಿ ಸಮರೇ ರಿಪೂನ್ ॥೬೫॥**

ಶತ್ರುರಾಜ್ಯದಲ್ಲಿ ಕ್ಷಾಮ-ಡಾಮರಗಳಿರುವಾಗ ಮತ್ತು ವೈರುಗಳ ಕೊಯಿಲಿನ ಕಾಲದಲ್ಲಿ ಉಪೇಕ್ಷಿಮಾಡದೇ ಯುದ್ಧಮಾಡಿ ಅವರನ್ನು ಧ್ವಂಸ ಮಾಡಬೇಕು.

**ಕಚ್ಚಿತ್ಸ್ವಪರರಾಷ್ಟ್ರೇಷು ಬಹವೋಽಧಿಕೃತಾಸ್ತವ ।**
**ಅರ್ಥಾನ್ಸಮಧಿತಿಷ್ಠನ್ತಿ ರಕ್ಷನ್ತಿ ಚ ಪರಸ್ಪರಮ್ ॥೬೬॥**

ಪರರಾಷ್ಟ್ರವನ್ನು ಗೆದ್ದನಂತರ ಅಲ್ಲಿ ನಿನ್ನಿಂದ ನಿಯೋಜಿತರಾದ ಅಧಿಕಾರಿಗಳು ನಿನ್ನ ರಾಜ್ಯದಲ್ಲಿರುವಂತೆಯೇ ಪ್ರಜಾರಕ್ಷಣೆ, ರಾಜಾದಾಯ ಸಂಗ್ರಹ–ಇವುಗಳಲ್ಲಿ ಆಸಕ್ತರಾಗಿರುವರೇ ಎಂಬುದನ್ನು ಪರಿಶೀಲಿಸಬೇಕು.

**ಕಚ್ಚಿದಭ್ಯವಹಾರ್ಯಾಣಿ ಗಾತ್ರಸಂಸ್ಪರ್ಶನಾನಿ ಚ ।**
**ಘ್ರೇಯಾಣಿ ಚ ಮಹಾರಾಜ ರಕ್ಷನ್ತ್ಯನುಮತಾಸ್ತವ ॥೬೭॥**

ನಿನಗೆ ಸೇರಬೇಕಾದ ಉತ್ತಮವಾದ ಭೋಜ್ಯವಸ್ತುಗಳು, ಉತ್ತಮ ವಾದ ವಸ್ತ್ರಗಳು, ಉತ್ತಮವಾದ ಚಂದನ-ಅಗುರು-ಕುಂಕುಮ ಕೇಸರಿ-ಕಸ್ತೂರೀ ಇತ್ಯಾದಿ ಅಮೋಘವಸ್ತುಗಳನ್ನು ನಿನಗಾಗಿ ರಕ್ಷಿಸಿಡುವರೇ ಅಥವಾ ಅಲ್ಲಿಯ ಅಧಿಕಾರಿಗಳೇ ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳುವರೇ–ಎಂಬುದನ್ನೂ ಪರಿಶೀಲಿಸಬೇಕು.

**ಕಚ್ಚಿತ್ಕೋಶಶ್ಚ ಕೋಷ್ಠಂ ಚ ವಾಹನಂ ದ್ವಾರಮಾಯುಧಮ್ ।**
**ಆಯಶ್ಚ ಕೃತಕಲ್ಯಾಣೈಸ್ತವ ಭಕ್ತೈರನುಷ್ಠಿತಃ ॥೬೮॥**

ಮಹಾರಾಜ! ನಿನ್ನ ಬೊಕ್ಕಸ, ಉಗ್ರಾಣ, ಗೋಶಾಲೆ, ಅಶ್ವಶಾಲೆ, ಗಜಶಾಲೆ, ಆಯುಧಾಗಾರ, ದಿಡ್ಡೀಬಾಗಿಲು–ಇವೆಲ್ಲವೂ ನಿನ್ನಲ್ಲಿ ವಿಶೇಷಾನು ರಕ್ತರಾದವರಿಂದ ಮಾತ್ರವೇ ಸಂರಕ್ಷಿಸಲ್ಪಡುತ್ತಿರುವುವೇ?

**ಕಚ್ಚಿದಾಭ್ಯನ್ತರೇಭ್ಯಶ್ಚ ಬಾಹ್ಯೇಭ್ಯಶ್ಚ ವಿಶಾಂಪತೇ ।**
**ರಕ್ಷಸ್ಯಾತ್ಮಾನಮೇವಾಗ್ರೇ ತಾಂಶ್ಚ ಸ್ವೇಭ್ಯೋ ಮಿಥಶ್ಚ ತಾನ್ ॥೬೯॥**

ರಾಜನಾದವನಿಗೆ ಆತ್ಮರಕ್ಷಣೆಯೆಂಬುದು ಬಹುಮುಖ್ಯವಾದುದು. ಅರಮನೆಯ ಒಳಗಿರುವ ಅಡಿಗೆಯವರೇ ಮೊದಲಾದವರ ವಿಷಯದಲ್ಲಿಯೂ,

ಅದಕ್ಕಿಂತಲೂ ಮಿಗಿಲಾಗಿ ಪುತ್ರಾಮಾತ್ಯರ ವಿಷಯಗಳಲ್ಲಿಯೂ ಜಾಗರೂಕನಾಗಿದ್ದುಕೊಂಡು ರಾಜನಾದವನು ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕಾಗುತ್ತದೆ. (ಮೊದಲು ಆತ್ಮರಕ್ಷಣೆಯನ್ನೂ ಬಳಿಕ ಸ್ವಕೀಯರ, ಅನಂತರ ಉಳಿದವರ ರಕ್ಷಣೆಯನ್ನು ಮಾಡುತ್ತಿರುವೆಯಾ?)

**ಕಚ್ಚಿನ್ನ ಪಾನೇ ದ್ಯೂತೇ ವಾ ಕ್ರೀಡಾಸು ಪ್ರಮದಾಸು ಚ ।**
**ಪ್ರತಿಜಾನನ್ತಿ ಪೂರ್ವಾಹ್ಣೇ ವ್ಯಯಂ ವ್ಯಸನಜಂ ತವ ॥೭೦॥**

ಪಾನ, ದ್ಯೂತ, ಸ್ತ್ರೀಸಂಗ–ಇತ್ಯಾದಿ ವ್ಯಸನಗಳಿಗೆ ಸಂಬಂಧಿಸಿದ ವ್ಯಯವೆಷ್ಟೆಂಬುದನ್ನು ನಿನ್ನ ಸೇವಕರು ಪ್ರಾತಃಕಾಲ ನಿನಗೆ ತಿಳಿಯಪಡಿಸಕೂಡದು. ಏಕೆಂದರೆ : ಪ್ರಾತಃಕಾಲದಲ್ಲಿ ನೀನು ಮಾಡಬೇಕಾಗಿರುವ ಧರ್ಮಾಚರಣೆಯಲ್ಲಿ ಭಾಗವಹಿಸುವ ಶಿಷ್ಟರು ನಿನ್ನ ದುರ್ವ್ಯಸನಗಳನ್ನು ತಿಳಿದು ನಿನ್ನನ್ನು ಪರಿತ್ಯಜಿಸಿಬಿಡಬಹುದು.

**ಕಚ್ಚಿದಾಯಸ್ಯ ಚಾರ್ಧೇನ ಚತುರ್ಭಾಗೇನ ವಾ ಪುನಃ ।**
**ಪಾದಭಾಗೈಸ್ತ್ರಿಭಿರ್ವಾಪಿ ವ್ಯಯಃ ಸಂಶುದ್ಧ್ಯತೇ ತವ ॥೭೧॥**

ರಾಜಾದಾಯದಲ್ಲಿ ಮಾಡುತ್ತಿರುವ ವ್ಯಯವೆಷ್ಟು? ಸಾಮಾನ್ಯವಾಗಿ ನಾಲ್ಕನೇ ಒಂದು ಭಾಗವನ್ನು ವ್ಯಯಮಾಡಿ, ಉಳಿದ ಧನವನ್ನು ಆಪದ್ಧನವನ್ನಾಗಿ ಉಳಿಸಬೇಕು. ರೋಗೋಪದ್ರವಾದಿಗಳಿಂದ ಪ್ರಜೆಗಳು ತೊಂದರೆಪಡುತ್ತಿದ್ದರೆ ಆದಾಯದಲ್ಲಿ ಅರ್ಧಭಾಗವನ್ನು ಖರ್ಚುಮಾಡ ಬಹುದು. ಕ್ಷಾಮ-ಡಾಮರಾದಿಗಳು ದೇಶದಲ್ಲಿ ಉಂಟಾದಲ್ಲಿ ರಾಜಾದಾಯ ದಲ್ಲಿ ಮುಕ್ಕಾಲು ಭಾಗವನ್ನು ವ್ಯಯಮಾಡಬಹುದು. ಒಟ್ಟಿನಲ್ಲಿ ರಾಜ್ಯದ ಬೊಕ್ಕಸವು ಯಾವ ಕಾರಣದಿಂದಲೂ ಬರಿದಾಗಬಾರದು.

**ಕಚ್ಚಿಜ್ಜ್ಞಾತೀನ್ಗುರೂನ್ವೃದ್ಧಾನ್ವಣಿಜಃ ಶಿಲ್ಪಿನಃ ಶ್ರಿತಾನ್ ।**
**ಅಭೀಕ್ಷ್ಣಮನುಗೃಹ್ಣಾಸಿ ಧನಧಾನ್ಯೇನ ದುರ್ಗತಾನ್ ॥೭೨॥**

ಕಷ್ಟಕ್ಕೆ ಸಿಕ್ಕಿದ ಜ್ಞಾತಿ-ಬಾಂಧವರನ್ನೂ, ಆಚಾರ್ಯರನ್ನೂ, ವೃದ್ಧರನ್ನೂ, ವರ್ತಕರನ್ನೂ, ಶಿಲ್ಪಿಗಳನ್ನೂ, ನಿನ್ನ ಇತರ ಆಶ್ರಿತರನ್ನೂ ಮತ್ತು ದರಿದ್ರರನ್ನೂ ಧನ-ಧಾನ್ಯಾದಿಗಳನ್ನು ಕೊಟ್ಟು ಸಂತೈಸುತ್ತಿರುವೆಯಲ್ಲವೇ?

**ಕಚ್ಚಿಚ್ಚಾಯವ್ಯಯೇ ಯುಕ್ತಾಃ ಸರ್ವೇ ಗಣಕಲೇಖಕಾಃ।**
**ಅನುತಿಷ್ಠನ್ತಿ ಪೂರ್ವಾಹ್ಣೇ ನಿತ್ಯಮಾಯಂ ವ್ಯಯಂ ತವ ॥೭೩॥**

ದೇಶದ ಆಯ-ವ್ಯಯಗಳ ಪರಿಶೀಲನೆಯಲ್ಲಿ ನಿಯುಕ್ತರಾದ ನಿನ್ನ ಅಧಿಕಾರಿಗಳು ಅಂದಂದಿನ ಆಯ-ವ್ಯಯಗಳ ಪರಿಸ್ಥಿತಿಯನ್ನು ಪ್ರತಿದಿನವೂ ಪೂರ್ವಾಹ್ಣದಲ್ಲೇ ವರದಿಮಾಡುತ್ತಿರುವರಲ್ಲವೇ?

**ಕಚ್ಚಿದರ್ಥೇಷು ಸಮ್ಪ್ರೌಢಾನ್ಹಿತಕಾಮಾನನುಪ್ರಿಯಾನ್ ।**
**ನಾಪಕರ್ಷಸಿ ಕರ್ಮಭ್ಯಃ ಪೂರ್ವಮಪ್ರಾಪ್ಯ ಕಿಲ್ಬಿಷಮ್ ॥೭೪॥**

ನಿನ್ನ ಹಿತಚಿಂತನೆಯಲ್ಲಿಯೇ ಆಸಕ್ತರಾದ, ಅರ್ಥಶಾಸ್ತ್ರದಲ್ಲಿ ಕುಶಲರಾದ ಅಧಿಕಾರಿಗಳನ್ನು ಅಕಾರಣವಾಗಿ ಅವರ ಮೇಲೆ ಯಾವ ವಿಧವಾದ ಅಪವಾದವೂ ಇಲ್ಲದಿದ್ದರೂ ಯಾವುದೋ ಒಂದು ಕಾರಣದಿಂದ ಉದ್ವೇಜಿತನಾಗಿ ಕೆಲಸದಿಂದ ತೆಗೆದುಹಾಕುತ್ತಿಲ್ಲ ತಾನೇ?

**ಕಚ್ಚಿದ್ವಿದಿತ್ವಾ ಪುರುಷಾನುತ್ತಮಾಧಮಮಧ್ಯಮಾನ್ ।**
**ತ್ವಂ ಕರ್ಮಸ್ವನುರೂಪೇಷು ನಿಯೋಜಯಸಿ ಭಾರತ ॥೭೫॥**

ಉತ್ತಮ-ಮಧ್ಯಮಾಧಮಶ್ರೇಣಿಗಳ ಪುರುಷರನ್ನು ವಿಂಗಡಿಸಿ ಅವರ ಯೋಗ್ಯತೆಗಳಿಗೆ ಅನುಗುಣವಾಗಿ ಅವರವರಿಗೆ ಅನುಗುಣವಾದ ಕಾರ್ಯಗಳಲ್ಲಿ ನಿಯೋಜಿಸುತ್ತಿರುವೆಯಲ್ಲವೇ?

**ಕಚ್ಚಿನ್ನ ಲುಬ್ಧಾಶ್ಚೌರಾ ವಾ ವೈರಿಣೋ ವಾ ವಿಶಾಮ್ಪತೇ ।**
**ಅಪ್ರಾಪ್ತವ್ಯವಹಾರಾ ವಾ ತವ ಕರ್ಮಸ್ವನುಷ್ಠಿತಾಃ ॥೭೬॥**

ಯುಧಿಷ್ಠಿರ! ಹಣದಾಸೆಯಿರುವವರನ್ನೂ, ಕಳ್ಳರನ್ನೂ, ವೈರಿಗಳನ್ನೂ ವ್ಯವಹಾರಗಳಲ್ಲಿ ಅನುಭವವಿಲ್ಲದವರನ್ನೂ ಅಧಿಕಾರಸ್ಥಾನಗಳಲ್ಲಿ ಇಟ್ಟುಕೊಳ್ಳುತ್ತಿಲ್ಲ ತಾನೇ?

**ಕಚ್ಚಿನ್ನ ಚೌರೈರ್ಲುಬ್ಧೈರ್ವಾ ಕುಮಾರೈಃ ಸ್ತ್ರೀಬಲೇನ ವಾ।**
**ತ್ವಯಾ ವಾ ಪೀಡ್ಯತೇ ರಾಷ್ಟ್ರಂ ಕಚ್ಚಿತ್ತುಷ್ಟಾಃ ಕೃಷೀವಲಾಃ ॥೭೭॥**

ಕಳ್ಳರಿಂದಲೂ, ಲೋಭಿಗಳಿಂದಲೂ, ಅಪ್ರಾಪ್ತವಯಸ್ಕರಾದ ರಾಜ ಕುಮಾರರಿಂದಲೂ, ಲಜ್ಜಾಹೀನರಾದ ಸ್ತ್ರೀಯರಿಂದಲೂ ಮತ್ತು ನಿನ್ನಿಂದಲೂ

ನಿನ್ನ ರಾಷ್ಟ್ರವು ಪೀಡಿಸಲ್ಪಡುತ್ತಿಲ್ಲ ತಾನೇ? ವ್ಯವಸಾಯಗಾರರು ನಿನ್ನ ರಾಷ್ಟ್ರದಲ್ಲಿ ನಿತ್ಯಸಂತುಷ್ಟರಾಗಿರುವರೇ?

**ಕಚ್ಚಿದ್ರಾಷ್ಟ್ರೇ ತಟಾಕಾನಿ ಪೂರ್ಣಾನಿ ಚ ಬೃಹನ್ತಿ ಚ ।**
**ಭಾಗಶೋ ವಿನಿವಿಷ್ಟಾನಿ ನ ಕೃಷಿರ್ದೇವಮಾತೃಕಾ ॥೭೮॥**

ಕೃಷಿಯನ್ನು ದೇವಮಾತೃಕವನ್ನಾಗಿಯೇ ಬಿಡದೇ (ಮಳೆಯ ಆಧಾರದ ಮೇಲೆಯೇ ಬಿಡದೇ) ನಿನ್ನ ದೇಶದ ಪ್ರತಿಯೊಂದು ಗ್ರಾಮದಲ್ಲಿಯೂ ಕುಂಟೆಗಳನ್ನೂ, ದೊಡ್ಡ-ದೊಡ್ಡ ಕೆರೆಗಳನ್ನೂ ನಿರ್ಮಿಸಿರುವೆಯಲ್ಲವೇ?

**ಕಚ್ಚಿನ್ನ ಭಕ್ತಂ ಬೀಜಂ ಚ ಕರ್ಷಕಸ್ಯಾವಸೀದತಿ ।**
**ಪ್ರತ್ಯೇಕಂ ಚ ಶತಂ ವೃದ್ಧ್ಯಾ ದದಾಸ್ಯೃಣಮನುಗ್ರಹಮ್ ॥೭೯॥**

ವ್ಯವಸಾಯಗಾರರ ಬೀಜಧಾನ್ಯಗಳೂ ಆಹಾರಧಾನ್ಯಗಳೂ ಕ್ರಿಮಿ-ಕೀಟಾದಿಗಳಿಂದ ನಾಶವಾಗದಂತೆ ಸಂರಕ್ಷಿಸಲ್ಪಡುತ್ತಿವೆಯೇ? ರೈತರ ಅಭ್ಯುದಯಕ್ಕಾಗಿ ನೂರಕ್ಕೆ ಒಂದರಂತೆ ಮಾಸಿಕವೃದ್ಧಿಯನ್ನು ಪಡೆದುಕೊಂಡು (ನ್ಯಾಯವಾದ ಬಡ್ಡಿಯ ದರದಲ್ಲಿ) ಸಾಲವನ್ನು ಕೊಡುತ್ತಿರುವೆಯಾ?

**ಕಚ್ಚಿತ್ಸ್ವನುಷ್ಠಿತಾ ತಾತ ವಾರ್ತಾ ತೇ ಸಾಧುಭಿರ್ಜನೈಃ ।**
**ವಾರ್ತಾಯಾಂ ಸಂಶ್ರಿತಸ್ತಾತ ಲೋಕೋಽಯಂ ಸುಖಮೇಧತೇ ॥೮೦॥**

ಧರ್ಮಜ! ಕೃಷಿ, ವಾಣಿಜ್ಯ, ಪಶುಪಾಲನೆ ಮತ್ತು ಹಣ-ಕಾಸಿನ ವಹಿವಾಟು ಸಂಸ್ಥೆ–ಇವುಗಳು ರಾಜ್ಯದ ಮುಖ್ಯ ವ್ಯವಹಾರಾಂಗಗಳು. ಇವುಗಳ ಮೇಲ್ವಿಚಾರಣೆಯನ್ನು ನಂಬಿಕೆಗೆ ಅರ್ಹರಾದ ಸಜ್ಜನರು ನೋಡಿಕೊಳ್ಳುತ್ತಿರುವರೇ? ಈ ನಾಲ್ಕು ವ್ಯವಹಾರಗಳೂ ನಿರ್ಬಾಧಿತವಾಗಿ ಕ್ರಿಯಾಲೋಪವಿಲ್ಲದೇ ನಡೆದರೆ ದೇಶವು ಸುಭಿಕ್ಷವಾಗಿದ್ದು ಪ್ರಜೆಗಳೂ ಸುಖದಿಂದಿರುವರು.

**ಕಚ್ಚಿಚ್ಛೂರಾಃ ಕೃತಪ್ರಜ್ಞಾಃ ಪಞ್ಚ ಪಞ್ಚ ಸ್ವನುಷ್ಠಿತಾಃ ।**
**ಕ್ಷೇಮಂ ಕುರ್ವನ್ತಿ ಸಂಹತ್ಯ ರಾಜಞ್ಜನಪದೇ ತವ ॥೮೧॥**

ಧರ್ಮಜ! ಪ್ರತಿಯೊಂದು ಗ್ರಾಮದಲ್ಲಿಯೂ ನಿಷ್ಠರಾದ, ನ್ಯಾಯ

ಪರರಾದ, ಶೂರರಾದ, ಕೃತಪ್ರಜ್ಞರಾದ, ಧರ್ಮವಿದರಾದ ಐದೈದು ಮಂದಿ ಅಧಿಕಾರಿಗಳಿರಬೇಕು. (ಪ್ರಶಾಸ್ತಾ; ಸಮಾಹರ್ತಾ; ಸಂವಿಧಾತಾ; ಲೇಖಕ; ಸಾಕ್ಷೀ-ಇವರೇ ಆ ಐವರು ಅಧಿಕಾರಿಗಳು. ಇವರ ಕಾರ್ಯಗಳು: ಗ್ರಾಮರಕ್ಷಣೆ; ವ್ಯವಸಾಯ ಮತ್ತು ವಾಣಿಜ್ಯಗಳ ಮೇಲ್ವಿಚಾರಣೆ; ದುಷ್ಟ ಶಿಕ್ಷಣ-ಶಿಷ್ಟರಕ್ಷಣೆ ಇತ್ಯಾದಿಗಳು) ಇವರೈವರೂ ಒಗ್ಗಟ್ಟಿನಿಂದ ಕಾರ್ಯ ಮಾಡಿದರೆ ಗ್ರಾಮಗಳ ಅಭಿವೃದ್ಧಿಯಾಗಿ ಅದರಿಂದ ದೇಶದ ಅಭಿವೃದ್ಧಿಯೂ ಆಗುತ್ತದೆ. ನಿನ್ನ ದೇಶದಲ್ಲಿಯೂ ಹೀಗೆಯೇ ನಡೆಯುತ್ತಿದೆಯೇ?

**ಕಚ್ಚಿನ್ನಗರಗುಪ್ತ್ಯರ್ಥಂ ಗ್ರಾಮಾ ನಗರವತ್ಕೃತಾಃ ।**
**ಗ್ರಾಮವಚ್ಚ ಕೃತಾಃ ಪ್ರಾನ್ತಾಸ್ತೇ ಚ ಸರ್ವೇ ತ್ವದರ್ಪಣಾಃ ॥೮೨॥**

ನಗರಗಳ ರಕ್ಷಣೆಗೋಸ್ಕರ ಗ್ರಾಮಗಳಲ್ಲಿಯೂ ನಗರಗಳಲ್ಲಿರುವಂತೆಯೇ ಸೌಕರ್ಯಗಳನ್ನು ಏರ್ಪಡಿಸಿರುವೆಯಾ? ನಿನ್ನ ರಾಜ್ಯದಲ್ಲಿರುವ ಹಳ್ಳಿಗಳೂ, ಪ್ರಾಂತಗಳೂ, ಪುರಗಳೂ, ನಗರಗಳೂ, ದಿನ-ದಿನಕ್ಕೂ ಅಭಿವೃದ್ಧಿಯನ್ನು ಹೊಂದುತ್ತಿವೆಯೇ? ಅಭಿವೃದ್ಧಿಯನ್ನು ಹೊಂದುವುದೆಂದರೆ : ಹಳ್ಳಿಗಳು ಗ್ರಾಮಗಳಾಗಿಯೂ, ಗ್ರಾಮಗಳು ಪುರಗಳಾಗಿಯೂ, ಪುರಗಳು ನಗರಗಳಾಗಿಯೂ ಅಭಿವೃದ್ಧಿಹೊಂದುತ್ತಿರುವುವೇ? ಮತ್ತು ದೇಶದ ಗಡಿಯ ಪ್ರದೇಶ, ನಗರ, ಪುರ, ಗ್ರಾಮ ಮತ್ತು ಹಳ್ಳಿಗಳ ಅಧಿಕಾರಿಗಳು ನಿನ್ನ ಅಧೀನರಾಗಿಯೇ ಇರುವರಲ್ಲವೇ?

**ಕಚ್ಚಿದ್ಬಲೇನಾನುಗತಾಃ ಸಮಾನಿ ವಿಷಮಾಣಿ ಚ ।**
**ಪುರಾಣಿ ಚೌರಾನ್ನಿಘ್ನನ್ತಶ್ಚರನ್ತಿ ವಿಷಯೇ ತವ ॥೮೩॥**

ನಿನ್ನ ದೇಶದಲ್ಲಿ ಸೈನ್ಯಸಮೇತರಾದ ಅಧಿಕಾರಿಗಳು ಸಮವಾದ ಮತ್ತು ವಿಷಮವಾದ (ಹಳ್ಳ-ತಿಟ್ಟುಗಳಿಂದ ಕೂಡಿದ) ಪ್ರದೇಶಗಳಲ್ಲಿಯೂ ನಗರಗಳಲ್ಲಿಯೂ ಜನರಿಗೆ ತೊಂದರೆಕೊಡುವ ಕಳ್ಳರನ್ನೂ ದರೋಡೆಕಾರರನ್ನೂ ಅಡಗಿಸುತ್ತಾ ಸಂಚರಿಸುತ್ತಿರುತ್ತಾರೆಯೇ?

**ಕಚ್ಚಿತ್ ಸ್ತ್ರಿಯಃ ಸಾನ್ತ್ವಯಸಿ ಕಚ್ಚಿತ್ತಾಶ್ಚ ಸುರಕ್ಷಿತಾಃ ।**
**ಕಚ್ಚಿನ್ನ ಶ್ರದ್ದಧಾಸ್ಯಾಸಾಂ ಕಚ್ಚಿದ್ಗುಹ್ಯಂ ನ ಭಾಷಸೇ ॥೮೪॥**

ಸ್ತ್ರೀಯರನ್ನು ಸಂತೈಸಬೇಕು. ಅವರ ರಕ್ಷಣೆಯನ್ನು ಮಾಡಬೇಕು.

ಅವರಿಗೆ ಯಾವ ವಿಧವಾದ ಉಪದ್ರವಗಳು ಇಲ್ಲದಂತೆಯೂ ನೋಡಿಕೊಳ್ಳಬೇಕು. ಆದರೆ ಅವರಲ್ಲಿ ಹೆಚ್ಚು ನಂಬಿಕೆಯನ್ನಿಡಕೂಡದು ಮತ್ತು ಅವರೊಂದಿಗೆ ರಹಸ್ಯವಿಷಯಗಳನ್ನೂ ಹೇಳಬಾರದು. ಹೀಗೆಯೇ ನಡೆದುಕೊಳ್ಳುತ್ತಿರುವೆಯಾ?

**ಕಚ್ಚಿದಾತ್ಯಯಿಕಂ ಶ್ರುತ್ವಾ ತದರ್ಥಮನುಚಿನ್ತ್ಯ ಚ ।**
**ಪ್ರಿಯಾಣ್ಯನುಭವಞ್ಛೇಷೇ ನ ತ್ವಮನ್ತಃಪುರೇ ನೃಪ ॥೮೫॥**

ಪಾರ್ಥ! ಮುಂದೆ ಬರುವ ಅಪಾಯವನ್ನು ತಿಳಿದವನಾಗಿ, ಅದರ ವಿಷಯವಾಗಿ ಪರ್ಯಾಲೋಚಿಸಿ, ಬಳಿಕ ಅದರ ನಿವಾರಣೆಯ ಕಾರ್ಯವನ್ನು ಪೂರೈಸದೇ ಸುಖಲೋಲುಪನಾಗಿ ಅಂತಃಪುರದಲ್ಲಿ ಕಾಲಕಳೆಯುತ್ತಿಲ್ಲವಷ್ಟೇ?

**ಕಚ್ಚಿದ್ದ್ವೌ ಪ್ರಥಮೌ ಯಾಮೌ ರಾತ್ರೇಃ ಸುಪ್ತ್ವಾ ವಿಶಾಂಪತೇ ।**
**ಸಂಚಿನ್ತಯಸಿ ಧರ್ಮಾರ್ಥೌ ಯಾಮ ಉತ್ಥಾಯ ಪಶ್ಚಿಮೇ ॥೮೬॥**

ರಾತ್ರಿಯ ದ್ವಿತೀಯ-ತೃತೀಯಯಾಮಗಳಲ್ಲಿ ನಿದ್ರಿಸಿ, ಚತುರ್ಥಯಾಮದಲ್ಲಿ ಜಾಗ್ರತನಾಗಿ ಧರ್ಮಾರ್ಥವಿಷಯವನ್ನು ಚಿಂತಿಸುತ್ತಿರುವೆಯಾ?

**ಕಚ್ಚಿದರ್ಥಯಸೇ ನಿತ್ಯಂ ಮನುಷ್ಯಾನ್ಸಮಲಂಕೃತಃ ।**
**ಉತ್ಥಾಯ ಕಾಲೇ ಕಾಲಜ್ಞೈಃ ಸಹ ಪಾಣ್ಡವ ಮನ್ತ್ರಿಭಿಃ ॥೮೭॥**

ಪಾಂಡವ! ಬ್ರಾಹ್ಮಮುಹೂರ್ತದಲ್ಲೆದ್ದು, ಸ್ನಾನ-ಸಂಧ್ಯಾದಿಗಳನ್ನು ಮುಗಿಸಿ ಶುಚೀಭೂತನಾಗಿ, ಉತ್ತಮವಸ್ತ್ರಾಭರಣಗಳನ್ನು ಧರಿಸಿ, ಕಾಲಜ್ಞರಾದ ಮಂತ್ರಿಗಳೊಡನೆ ನಿತ್ಯವೂ ಪ್ರಜೆಗಳನ್ನು ಸಂಧಿಸುತ್ತಿರುವೆಯಾ?

**ಕಚ್ಚಿದ್ರಕ್ತಾಮ್ಬರಧರಾಃ ಖಡ್ಗಹಸ್ತಾಃ ಸ್ವಲಂಕೃತಾಃ ।**
**ಉಪಾಸತೇ ತ್ವಾಮಭಿತೋ ರಕ್ಷಣಾರ್ಥಮರಿಂದಮ ॥೮೮॥**

ಅರಿಂದಮನೇ! ಕೆಂಪಾದ ಉಡುಗೆಗಳನ್ನು ಧರಿಸಿರುವ, ಖಡ್ಗಪಾಣಿಗಳಾದ, ಅಲಂಕೃತರಾದ ಅಂಗರಕ್ಷಕರು ಸುತ್ತಲೂ ಇದ್ದು ಸರ್ವಕಾಲಗಳಲ್ಲಿಯೂ ನಿನ್ನನ್ನು ರಕ್ಷಿಸುತ್ತಿರುವರೇ?

**ಕಚ್ಚಿದ್ದಣ್ಡ್ಯೇಷು ಯಮವತ್ಪೂಜ್ಯೇಷು ಚ ವಿಶಾಂಪತೇ।**
**ಪರೀಕ್ಷ್ಯ ವರ್ತಸೇ ಸಮ್ಯಗಪ್ರಿಯೇಷು ಪ್ರಿಯೇಷು ಚ ॥೮೯॥**

ಸರ್ವಸಮವರ್ತಿಯಾದ ಯಮನಂತೆ ದಂಡ್ಯರಲ್ಲಿಯೂ, ಪೂಜ್ಯರಲ್ಲಿಯೂ ಯಥಾನ್ಯಾಯವಾಗಿ ನಡೆದುಕೊಳ್ಳಬೇಕು. ನ್ಯಾಯವಿಮರ್ಶೆಗಳನ್ನು ಮಾಡುವಾಗ ವಾದಿ-ಪ್ರತಿವಾದಿಗಳು ನಿನಗೆ ಪ್ರಿಯರಾಗಿರಲಿ, ಅಪ್ರಿಯರಾಗಿರಲಿ–ಪೂರ್ಣವಿಮರ್ಶೆಯನ್ನು ಮಾಡಿ ನಿಷ್ಪಕ್ಷಪಾತವಾಗಿ ತೀರ್ಪನ್ನು ಕೊಡಬೇಕು. ಹಾಗೆ ಮಾಡುತ್ತಿರುವೆಯಾ?

**ಕಚ್ಚಿಚ್ಛಾರೀರಮಾಬಾಧಮೌಷಧೈರ್ನಿಯಮೇನ ವಾ ।**
**ಮಾನಸಂ ವೃದ್ಧಸೇವಾಭಿಃ ಸದಾ ಪಾರ್ಥಾಪಕರ್ಷಸಿ ॥೯೦॥**

ಪಾಂಡವ! ಶಾರೀರಕವಾದ ವ್ಯಾಧಿಗಳನ್ನು ಔಷಧಗಳ ಸೇವನೆಯಿಂದಲೂ, ಪಥ್ಯಾದಿಗಳಿಂದಲೂ ಹೋಗಲಾಡಿಸಿಕೊಳ್ಳಬೇಕು. ಮಾನಸಿಕವ್ಯಾಧಿಯನ್ನು ವೃದ್ಧರ ಸೇವೆಯನ್ನು ಮಾಡುತ್ತಾ ಅವರ ಹಿತೋಕ್ತಿಯಂತೆ ನಡೆಯುತ್ತಾ ಹೋಗಲಾಡಿಸಿಕೊಳ್ಳಬೇಕು.

**ಕಚ್ಚಿದ್ವೈದ್ಯಾಶ್ಚಿಕಿತ್ಸಾಯಾಮಷ್ಟಾಙ್ಗಾಯಾಂ ವಿಶಾರದಾಃ।**
**ಸುಹೃದಶ್ಚಾನುರಕ್ತಾಶ್ಚ ಶರೀರೇ ತೇ ಹಿತಾಃ ಸದಾ ॥೯೧॥**

ನಿನ್ನ ಶರೀರರಕ್ಷಣೆಗಾಗಿಯೇ ಪ್ರತ್ಯೇಕವಾಗಿ ವೈದ್ಯರನ್ನು ಇಟ್ಟುಕೊಳ್ಳಬೇಕು. ಅವರು ಅಷ್ಟಾಂಗಚಿಕಿತ್ಸೆಯಲ್ಲಿಯೂ ಪರಿಣತರಾಗಿರಬೇಕು. ನಿದಾನ, ಪೂರ್ವಲಿಂಗ, ರೂಪ, ಅಪಶಯ, ಸಂಪ್ರಾಪ್ತಿ, ಔಷಧ, ರೋಗ, ಪರಿಚಾರಕ–ಇವುಗಳು ಅಷ್ಟಾಂಗಗಳು. (ನಾಡೀ, ಮಲ, ಮೂತ್ರ, ಜಿಹ್ವಾ, ನೇತ್ರ, ರೂಪ, ಶಬ್ದ, ಸ್ಪರ್ಶ–ಇವೂ ಅಷ್ಟಾಂಗಗಳು.) ವೈದ್ಯನಾದವನಿಗೆ ಇವುಗಳಲ್ಲಿ ಪೂರ್ಣವಾದ ಪರಿಶ್ರಮವಿರಬೇಕು. ರಾಜವೈದ್ಯನು ನಿನ್ನ ಶರೀರದ ಹಿತವನ್ನೇ ಸದಾ ಬಯಸುವವನಾಗಿಯೂ ಇರಬೇಕು.

**ಕಚ್ಚಿನ್ನ ಲೋಭಾನ್ಮೋಹಾದ್ವಾ ಮಾನಾದ್ವಾಪಿ ವಿಶಾಂಪತೇ।**
**ಅರ್ಥಿಪ್ರತ್ಯರ್ಥಿನಃ ಪ್ರಾಪ್ತಾನ್ನ ಪಶ್ಯಸಿ ಕಥಂಚನ ॥೯೨॥**

ಲೋಭದಿಂದಾಗಲೀ, ಮೋಹದಿಂದಾಗಲೀ, ಅಹಂಕಾರದಿಂದಾಗಲೀ

ಕೂಡಿದವನಾಗಿ ನಿನ್ನ ಬಳಿಗೆ ಬರುವ ಅರ್ಥಿ-ಪ್ರತ್ಯರ್ಥಿಗಳನ್ನು (ವಾದಿ-ಪ್ರತಿ ವಾದಿಗಳನ್ನು) ನೋಡಿ ಅವರ ದೂರಿನ ಕಾರಣವೇನೆಂಬುದನ್ನು ಪರಿಶೀಲಿ ಸದೇ ಮತ್ತು ನ್ಯಾಯವಿಮರ್ಶೆಯನ್ನು ಮಾಡದೇ ಕಳುಹಿಸುತ್ತಿಲ್ಲ ತಾನೇ?

**ಕಚ್ಚಿನ್ನ ಲೋಭಾನ್ಮೋಹಾದ್ವಾ ವಿಶ್ರಮ್ಭಾತ್ಪ್ರಣಯೇನ ವಾ ।**
**ಆಶ್ರಿತಾನಾಂ ಮನುಷ್ಯಾಣಾಂ ವೃತ್ತಿಂ ತ್ವಂ ಸಂರುಣತ್ಸಿ ವೈ ॥೯೩॥**

ಲೋಭ-ಮೋಹಗಳಿಂದಾಗಲೀ, ವಿಶ್ವಾಸದಿಂದಾಗಲೀ, ಪ್ರೀತಿ ಯಿಂದಾಗಲೀ ನಿನ್ನಲ್ಲಿ ಆಶ್ರಯಪಡೆದಿರುವವರ ಜೀವನವೃತ್ತಿಯನ್ನು ಯಾವ ಕಾರಣದಿಂದಲೂ ಪ್ರತಿಬಂಧಿಸುತ್ತಿಲ್ಲ ತಾನೇ?

**ಕಚ್ಚಿತ್ಪೌರಾ ನ ಸಹಿತಾ ಯೇ ಚ ತೇ ರಾಷ್ಟ್ರವಾಸಿನಃ ।**
**ತ್ವಯಾ ಸಹ ವಿರುಧ್ಯನ್ತೇ ಪರೈಃ ಕ್ರೀತಾಃ ಕಥಂಚನ ॥೯೪॥**

ಶತ್ರುಪಕ್ಷದವರು ತೋರಿಸುವ ಆಮಿಷಕ್ಕೆ ಮನಸೋತು ತಮ್ಮನ್ನು ತಾವೇ ಶತ್ರುಗಳಿಗೆ ಮಾರಿಕೊಂಡಿರುವ ನಿನ್ನ ರಾಷ್ಟ್ರವಾಸಿಗಳಾದ ಪ್ರಜೆ ಗಳೆಲ್ಲರೂ ಒಟ್ಟುಗೂಡಿ ನಿನ್ನನ್ನು ವಿರೋಧಿಸುತ್ತಿಲ್ಲ ತಾನೇ? (ಶತ್ರುಪಕ್ಷ ದವರು ನಿನ್ನ ಪ್ರಜೆಗಳನ್ನು ಧನ-ಧಾನ್ಯಾದಿಗಳನ್ನಿತ್ತು ಒಲಿಸಿಕೊಂಡು, ನಿನ್ನ ವಿರುದ್ಧವಾಗಿ ದಂಗೆಯೇಳಲು ಅವಕಾಶವೀಯಬಾರದು.)

**ಕಚ್ಚಿನ್ನ ದುರ್ಬಲಃ ಶತ್ರುರ್ಬಲೇನ ಪರಿಪೀಡಿತಃ ।**
**ಮನ್ತ್ರೇಣ ಬಲವಾನ್ಕಶ್ಚಿದುಭಾಭ್ಯಾಂ ಚ ಕಥಂಚನ ॥೯೫॥**

ದುರ್ಬಲಶತ್ರುವು ಬಲಪ್ರಯೋಗದಿಂದ ಪೀಡಿಸಲ್ಪಡುತ್ತಿರುವನಲ್ಲವೇ? ಅಂತೆಯೇ ಬಲಿಷ್ಠನಾದ ಶತ್ರುವು ಒಳ್ಳೆಯ ಮಂತ್ರಾಲೋಚನೆಯಿಂದ ಮಾಡಿದ ಕಾರ್ಯದಿಂದ ಅಥವಾ ಅಭಿಚಾರಾದಿ ಪ್ರಯೋಗದ ಪರಿಣಾಮ ವಾಗಿ ಪರಾಭವವನ್ನು ಹೊಂದುತ್ತಿರುವನಲ್ಲವೇ? ಈ ಎರಡು ಮಾರ್ಗಗಳನ್ನು ಅನುಸರಿಸಿಯಾದರೂ ಶತ್ರುವನ್ನು ನಿರ್ಮೂಲಮಾಡಲೇಬೇಕು. ವೈರಿಯು ಸೇಡನ್ನು ತೀರಿಸಿಕೊಳ್ಳಲು ನಿನ್ನನ್ನೇ ಸಂಹಾರಮಾಡಲೂ ಪ್ರಯತ್ನಿಸುತ್ತಾನೆ. ಹೀಗಾಗದಂತೆ ನೋಡಿಕೊಳ್ಳಬೇಕು. ಶತ್ರುವು ದುರ್ಬಲನಾಗಿದ್ದರೂ ನಿಗ್ರ ಹಿಸಲೇಬೇಕು. ಒಂದು ವೇಳೆ ನಿಗ್ರಹಿಸಲಾಗದಿದ್ದರೂ ಅವನ ವಿಷಯದಲ್ಲಿ

ಎಚ್ಚರಿಕೆಯಿಂದಿರಬೇಕು. ಅಂತಹ ಶತ್ರುವು ನಿನಗಾರೂ ಇಲ್ಲದಂತೆ ನೋಡಿಕೊಳ್ಳುತ್ತಿರುವೆಯಲ್ಲವೇ? ಯುಧಿಷ್ಠಿರ!

**ಕಚ್ಚಿತ್ಸರ್ವೇಽನುರಕ್ತಾಸ್ತ್ವಾಂ ಭೂಮಿಪಾಲಾಃ ಪ್ರಧಾನತಃ।**
**ಕಚ್ಚಿತ್ಪ್ರಾಣಾಂಸ್ತ್ವದರ್ಥೇಷು ಸಂತ್ಯಜನ್ತಿ ತ್ವಯಾದೃತಾಃ ॥೯೬॥**

ಧರ್ಮಜ! ನಿನ್ನ ಅಧೀನಕ್ಕೆ ಒಳಗಾಗಿರುವ ಆಶ್ರಿತರಾಜರು ನಿನ್ನಲ್ಲಿ ಅನುರಕ್ತರಾಗಿರುವರೇ? ನಿನ್ನಿಂದ ಸಮ್ಮಾನಿತರಾದ ಆಶ್ರಿತರಾಜರು ನಿನಗಾಗಿ ಪ್ರಾಣಾರ್ಪಣೆಮಾಡಲೂ ಸಿದ್ಧರಿರುವರೇ?

**ಕಚ್ಚಿತ್ತೇ ಸರ್ವವಿದ್ಯಾಸು ಗುಣತೋಽರ್ಚಾ ಪ್ರವರ್ತತೇ ।**
**ಬ್ರಾಹ್ಮಣಾನಾಂ ಚ ಸಾಧೂನಾಂ ತವ ನೈಃಶ್ರೇಯಸೀ ಶುಭಾ ।**
**ದಕ್ಷಿಣಾಸ್ತ್ವಂ ದದಾಸ್ಯೇಷಾಂ ನಿತ್ಯಂ ಸ್ವರ್ಗಾಪವರ್ಗದಾಃ ॥೯೭॥**

ನೀನು ಬ್ರಾಹ್ಮಣರನ್ನು ಅವರ ತಪಸ್ಸು-ವಿದ್ಯೆ ಇವುಗಳಿಗೆ ಅನುಗುಣವಾಗಿ ಪುರಸ್ಕರಿಸುವುದರಿಂದ ನಿಶ್ಚಯವಾಗಿಯೂ ನಿನಗೆ ಶ್ರೇಯಸ್ಸುಂಟಾಗುತ್ತದೆ. ಬ್ರಾಹ್ಮಣರಿಗೆ ನೀನು ದಾನ-ದಕ್ಷಿಣೆಗಳನ್ನು ಕೊಟ್ಟು ಅವರನ್ನು ಸಂತೃಪ್ತಿಪಡಿಸುತ್ತಿರುವೆಯಲ್ಲವೇ? ಅವರನ್ನು ಸಂತೃಪ್ತಿಪಡಿಸುವುದು ಸ್ವರ್ಗ-ಮೋಕ್ಷಗಳ ಫಲವನ್ನೀಯುತ್ತದೆ.

**ಕಚ್ಚಿದ್ಧರ್ಮೇ ತ್ರಯೀಮೂಲೇ ಪೂರ್ವೈರಾಚರಿತೇ ಜನೈಃ ।**
**ಯತಮಾನಸ್ತಥಾ ಕರ್ತುಂ ತಸ್ಮಿನ್ಕರ್ಮಣಿ ವರ್ತಸೇ ॥೯೮॥**

ಮೂರು ವೇದಗಳೇ ಆಧಾರಭೂತವಾಗಿರುವ, ನಿನ್ನ ಪಿತೃ-ಪಿತಾಮಹ-ಪ್ರಪಿತಾಮಹರಿಂದಲೂ ಆಚರಿಸಲ್ಪಡುತ್ತಿದ್ದ ಧರ್ಮಾಚರಣೆಯಲ್ಲಿ ನಂಬಿಕೆಯನ್ನಿಟ್ಟು ವೇದಪ್ರತಿಪಾದ್ಯವಾದ ಕರ್ಮಮಾರ್ಗದಲ್ಲಿಯೇ ಪ್ರಯತ್ನಪೂರ್ವಕವಾಗಿ ನಡೆಯುತ್ತಿರುವೆಯಾ?

**ಕಚ್ಚಿತ್ತವ ಗೃಹೇಽನ್ನಾನಿ ಸ್ವಾದೂನ್ಯಶ್ನನ್ತಿ ವೈ ದ್ವಿಜಾಃ।**
**ಗುಣವನ್ತಿ ಗುಣೋಪೇತಾಸ್ತವಾಧ್ಯಕ್ಷಂ ಸದಕ್ಷಿಣಮ್ ॥೯೯॥**

ಸದ್ಗುಣೋಪೇತರಾದ ಬ್ರಾಹ್ಮಣರು ನಿನ್ನ ಮನೆಯಲ್ಲಿ ಸುಮಧುರ

ವಾದ ಗುಣಯುಕ್ತವಾದ ಭೋಜನವನ್ನು ಮಾಡುತ್ತಿರುವರೇ? ನಿನ್ನಿಂದ ಯಥೋಚಿತವಾಗಿ ದಕ್ಷಿಣೆಯನ್ನು ಪಡೆಯುತ್ತಿರುವರೇ?

**ಕಚ್ಚಿತ್ಕ್ರತೂನೇಕಚಿತ್ತೋ ವಾಜಪೇಯಾಂಶ್ಚ ಸರ್ವಶಃ ।**
**ಪುಣ್ಡರೀಕಾಂಶ್ಚ ಕಾರ್ತ್ಸ್ನ್ಯೇನ ಯತಸೇ ಕರ್ತುಮಾತ್ಮವಾನ್ ॥**

ಪಾಂಡವ! ಧರ್ಮೈಕಚಿತ್ತನಾಗಿ ವಾಜಪೇಯ-ಪುಂಡರೀಕಾದಿ ಯಜ್ಞಗಳನ್ನು ಯಾವ ವಿಧವಾದ ಲೋಪ-ದೋಷಗಳಿಗೂ ಅವಕಾಶವಿಲ್ಲದಂತೆ ಪರಿಪೂರ್ಣವಾಗಿ ಮಾಡಲು ಪ್ರಯತ್ನಿಸುತ್ತಿರುವೆಯಲ್ಲವೇ?

**ಕಚ್ಚಿಜ್ಜ್ಞಾತೀನ್ಗುರೂನ್ವೃದ್ಧಾನ್ದೈವತಾಂಸ್ತಾಪಸಾನಪಿ ।**
**ಚೈತ್ಯಾಂಶ್ಚ ವೃಕ್ಷಾನ್ಕಲ್ಯಾಣಾನ್ಬ್ರಾಹ್ಮಣಾಂಶ್ಚ ನಮಸ್ಯಸಿ ॥೧೦೧॥**

ಜ್ಞಾತಿಗಳನ್ನೂ, ಆಚಾರ್ಯರನ್ನೂ, ವೃದ್ಧರನ್ನೂ, ದೇವತೆಗಳನ್ನೂ, ತಪಸ್ವಿಗಳನ್ನೂ, ಮಂಗಳಕರವಾದ ಅಶ್ವತ್ಥಾದಿ ವೃಕ್ಷಗಳನ್ನೂ, ಬ್ರಾಹ್ಮಣರನ್ನೂ ನಮಸ್ಕರಿಸುತ್ತಿರುವೆಯಲ್ಲವೇ?

**ಕಚ್ಚಿಚ್ಛೋಕೋ ನ ಮನ್ಯುರ್ವಾ ತ್ವಯಾ ಪ್ರೋತ್ಪಾದ್ಯತೇಽನಘ ।**
**ಅಪಿ ಮಙ್ಗಲಹಸ್ತಶ್ಚ ಜನಃ ಪಾರ್ಶ್ವೇ ನು ತಿಷ್ಠತಿ ॥೧೦೨॥**

ನಿಷ್ಪಾಪನೇ! ನಿಷ್ಕಾರಣವಾಗಿ ಯಾರಿಗೇ ಆಗಲೀ ನೀನು ದುಃಖವನ್ನಾಗಲೀ-ಕೋಪವನ್ನಾಗಲೀ ಉಂಟುಮಾಡುತ್ತಿಲ್ಲ ತಾನೇ? ಸ್ವಸ್ತಿವಾಚನಮಾಡುವ ಪುರೋಹಿತರು ಪೂರ್ಣಕುಂಭಾದಿ ಮಂಗಳದ್ರವ್ಯಸಹಿತರಾಗಿ ನಿನ್ನ ಬಳಿಯಲ್ಲಿರುತ್ತಾರಲ್ಲವೇ? ಇದರಿಂದ ನಿನಗೆ ಶ್ರೇಯಃ-ಪ್ರೇಯಗಳುಂಟಾಗುವುವು.

**ಕಚ್ಚಿದೇಷಾ ಚ ತೇ ಬುದ್ಧಿರ್ವೃತ್ತಿರೇಷಾ ಚ ತೇಽನಘ ।**
**ಆಯುಷ್ಯಾ ಚ ಯಶಸ್ಯಾ ಚ ಧರ್ಮಕಾಮಾರ್ಥದರ್ಶಿನೀ ॥೧೦೩॥**

**ಏತಯಾ ವರ್ತಮಾನಸ್ಯ ಬುದ್ಧ್ಯಾ ರಾಷ್ಟ್ರಂ ನ ಸೀದತಿ ।**
**ವಿಜಿತ್ಯ ಚ ಮಹೀಂ ರಾಜಾ ಸೋಽತ್ಯನ್ತಸುಖಮೇಧತೇ ॥೧೦೪॥**

ಪಾಪರಹಿತನೇ! ನಾನು ಮೇಲೆ ಹೇಳಿರುವ ರೀತಿಯಲ್ಲಿಯೇ ನಿನ್ನ ಬುದ್ಧಿ-ವೃತ್ತಿಗಳು ಇರುತ್ತಿವೆಯಲ್ಲವೇ? ಹೀಗೆ ರಾಜ್ಯಾಡಳಿತವನ್ನು ನಡೆಸಿ

ದರೆ ಆಯುಷ್ಯವು ಹೆಚ್ಚುವುದು. ಯಶಸ್ಸು ದಿಗಂತದವರೆಗೂ ವ್ಯಾಪಿಸುವುದು. ಧರ್ಮಾರ್ಥ-ಕಾಮಗಳೂ ಸಾಧಿತವಾಗುವುವು. ಪ್ರಪಂಚವನ್ನೇ ಗೆದ್ದು ಸುಖ-ಸಂತೋಷಗಳಿಂದಿರಬಹುದು. ಈತಿಬಾಧೆಗಳೂ ಇರುವುದಿಲ್ಲ."

ಯುಧಿಷ್ಠಿರನು ಏಕಾಗ್ರಚಿತ್ತನಾಗಿ ನಾರದರ ಉಪದೇಶವನ್ನು ಕೇಳುತ್ತಿದ್ದನು. ನಾರದರು ಮುಂದುವರಿದು ಹೇಳುತ್ತಾರೆ :

**ಕಚ್ಚಿದಾರ್ಯೋ ವಿಶುದ್ಧಾತ್ಮಾ ಕ್ಷಾರಿತಶ್ಚೌರಕರ್ಮಣಿ ।**
**ಅದೃಷ್ಟಶಾಸ್ತ್ರಕುಶಲೈರ್ನ ಲೋಭಾದ್ವಧ್ಯತೇ ಶುಚಿಃ ॥೧೦೫॥**

"ಪಾರ್ಥ! ನಿನ್ನ ರಾಜ್ಯದಲ್ಲಿ ಪರಿಶುದ್ಧಾತ್ಮರಾದ, ಮಾನವಂತರಾದ ಆರ್ಯರ ಮೇಲೆ ಕಳ್ಳತನದ ಆಪಾದನೆಯನ್ನು ಹೊರಿಸಿ, ನಿಷ್ಕಳಂಕರಾದ ಅವರನ್ನು ನಿನ್ನ ಮೂರ್ಖಮಂತ್ರಿಗಳು ಲೋಭದಿಂದಲೋ ಮಂದಬುದ್ಧಿಯಿಂದಲೋ ಹಿಂಸಿಸದಂತೆ ನೋಡಿಕೊಳ್ಳುತ್ತಿರುವೆಯಲ್ಲವೇ?

**ದುಷ್ಟೋ ಗೃಹೀತಸ್ತತ್ಕಾರೀ ತಜ್ಜ್ಞೈರ್ದೃಷ್ಟಃ ಸಕಾರಣಃ ।**
**ಕಚ್ಚಿನ್ನ ಮುಚ್ಯತೇ ಸ್ತೇನೋ ದ್ರವ್ಯಲೋಭಾನ್ನರರ್ಷಭ ॥೧೦೬॥**

ನರೋತ್ತಮ! ನಿನ್ನ ಅಧಿಕಾರಿಗಳು ಕಳ್ಳತನಮಾಡಿದವರನ್ನು ವಸ್ತು ಸಮೇತವಾಗಿ ಹಿಡಿದು ಅನಂತರದಲ್ಲಿ ದ್ರವ್ಯಲೋಭದಿಂದ ಲಂಚವನ್ನು ಪಡೆದು ಅವರನ್ನು ಬಿಟ್ಟುಬಿಡದಂತೆ ನೋಡಿಕೊಳ್ಳುತ್ತಿರುವೆಯಲ್ಲವೇ?

**ಉತ್ಪನ್ನಾನ್ಕಚ್ಚಿದಾಢ್ಯಸ್ಯ ದರಿದ್ರಸ್ಯ ಚ ಭಾರತ ।**
**ಅರ್ಥಾನ್ನ ಮಿಥ್ಯಾ ಪಶ್ಯನ್ತಿ ತವಾಮಾತ್ಯಾ ಹೃತಾ ಜನೈಃ ॥೧೦೭॥**

ನ್ಯಾಯಾಲಯಕ್ಕೆ ಐಶ್ವರ್ಯವಂತರು-ಬಡವರು ವಾದಿ-ಪ್ರತಿವಾದಿ ಗಳಾಗಿ ಬಂದಾಗ ನಿನ್ನಿಂದ ನಿಯೋಜಿತರಾದ ನ್ಯಾಯಾಧೀಶರು ಹಣದಾಸೆಗೆ ಒಳಗಾಗದೇ ನಿಷ್ಪಕ್ಷಪಾತವಾಗಿ ನ್ಯಾಯವಾದ ತೀರ್ಪನ್ನು ಕೊಡುತ್ತಿರು ವರಲ್ಲವೇ?

ಧರ್ಮಜ! ಹಿಂದೆಯೇ ನಾನು ಹೇಳಿದಂತೆ :

**ನಾಸ್ತಿಕ್ಯಮನೃತಂ ಕ್ರೋಧಂ ಪ್ರಮಾದಂ ದೀರ್ಘಸೂತ್ರತಾಮ್ ।**
**ಅದರ್ಶನಂ ಜ್ಞಾನವತಾಮಾಲಸ್ಯಂ ಪಞ್ಚವೃತ್ತತಾಮ್ ॥೧೦೮॥**

**ಏಕಚಿನ್ತನಮರ್ಥಾನಾಮನರ್ಥಜ್ಞೈಶ್ಚ ಚಿನ್ತನಮ್ ।**
**ನಿಶ್ಚಿತಾನಾಮನಾರಮ್ಭಂ ಮನ್ತ್ರಸ್ಯಾಪರಿರಕ್ಷಣಮ್ ।**
**ಮಙ್ಗಲಾದ್ಯಪ್ರಯೋಗಂ ಚ ಪ್ರತ್ಯುತ್ಥಾನಂ ಚ ಸರ್ವತಃ ॥೧೦೯॥**

ನಾಸ್ತಿಕ್ಯಂ :- ಪರಲೋಕದಲ್ಲಿ ನಂಬಿಕೆಯಿಲ್ಲದಿರುವುದು ; ಅನೃತಂ :– ಸುಳ್ಳುಹೇಳುವುದು ; ಕ್ರೋಧಂ :- ಕೋಪಿಷ್ಠನಾಗಿರುವುದು ಪ್ರಮಾದಃ :– ಅವಧಾನವಿಲ್ಲದಿರುವುದು ; ದೀರ್ಘಸೂತ್ರತಾ :- ಕಾರ್ಯವನ್ನು ಬಹಳ ನಿಧಾನವಾಗಿ ಮಾಡುವುದು ; ಜ್ಞಾನವತಾಮದರ್ಶನಂ:– ಜ್ಞಾನಿಗಳ ದರ್ಶನ ಮಾಡದಿರುವುದು ; ಆಲಸ್ಯಂ :- ಪಾಲುಮಾರಿಕೆ ; ಪಂಚವೃತ್ತಿತಾ :– ಪಂಚೇಂದ್ರಿಯಪರವಶನಾಗುವುದು ; ಏಕಚಿಂತನಮರ್ಥಾನಾಂ :– ವಿಷಯಗಳನ್ನು ಕುರಿತು ಒಬ್ಬನೇ ಸಮಾಲೋಚಿಸು ವುದು ; ಅನರ್ಥಜ್ಞೈಶ್ಚಚಿನ್ತನಂ :– ವಿಷಯವನ್ನೇ ತಿಳಿಯದವರೊಡನೆ ಸಮಾಲೋಚಿಸುವುದು ; ನಿಶ್ಚಿತಾನಾಮನಾರಂಭಃ :– ಮಾಡಬೇಕೆಂದು ನಿಶ್ಚಯಿಸಿದುದನ್ನು ಮಾಡದಿರುವುದು ; ಮನ್ತ್ರಸ್ಯಾಪರಿರಕ್ಷಣಂ :– ರಹಸ್ಯವಿಷಯಗಳನ್ನು ಗೋಪ್ಯವಾಗಿಡಲು ಅಸಮರ್ಥನಾಗಿರುವುದು ; ಮಂಗಲಾದ್ಯಪ್ರಯೋಗಃ :– ಮಂಗಲಕಾರ್ಯ- ದೇವಪೂಜಾದಿಗಳನ್ನು ಮಾಡದಿರುವುದು ; ಪ್ರತ್ಯುತ್ಥಾನಂ ಚ ಸರ್ವತಃ :– ಒಂದೇ ಕಾಲದಲ್ಲಿ ನಾಲ್ಕು ದಿಕ್ಕುಗಳಿಗೂ ದಂಡಯಾತ್ರೆಗಾಗಿ ಸೈನ್ಯಗಳನ್ನು ಕಳುಹಿಸುವುದು–ಇವು ಹದಿನಾಲ್ಕು ರಾಜದೋಷಗಳು.

**ಕಚ್ಚಿತ್ತ್ವಂ ವರ್ಜಯಸ್ಯೇತಾನ್ರಾಜದೋಷಾಂಶ್ಚತುರ್ದಶ ।**
**ಪ್ರಾಯಶೋ ಯೈರ್ವಿನಶ್ಯನ್ತಿ ಕೃತಮೂಲಾಪಿ ಪಾರ್ಥಿವಾಃ ॥೧೧೦॥**

ರಾಜರು ರೂಢಮೂಲರಾಗಿದ್ದರೂ, ಸುಪ್ರಸಿದ್ಧರಾಗಿದ್ದರೂ, ಪರಾಕ್ರಮಿಗಳಾಗಿದ್ದರೂ–ಪ್ರಾಯಶಃ ಈ ಹದಿನಾಲ್ಕು ದೋಷಗಳಿಂದಲೇ ವಿನಾಶಹೊಂದುತ್ತಾರೆ. ಆದುದರಿಂದ ಈ ಹದಿನಾಲ್ಕು ದೋಷಗಳನ್ನೂ ನೀನು ವರ್ಜಿಸಿರುವೆಯಲ್ಲವೇ?"

(ನಾರದರು ಒಂದೆರಡು ನಿಮಿಷಗಳು ಮೌನದಿಂದ ಕುಳಿತಿದ್ದು ಅನಂತರ ಧರ್ಮಜನನ್ನು ಪ್ರಶ್ನಿಸುತ್ತಾರೆ.)

**ಕಚ್ಚಿತ್ತೇ ಸಫಲಾ ವೇದಾಃ ಕಚ್ಚಿತ್ತೇ ಸಫಲಂ ಧನಮ್ ।**
**ಕಚ್ಚಿತ್ತೇ ಸಫಲಾ ದಾರಾಃ ಕಚ್ಚಿತ್ತೇ ಸಫಲಂ ಶ್ರುತಮ್ ॥೧೧೧॥**

"ಧರ್ಮಜ! ವೇದಗಳು ನಿನ್ನ ವಿಷಯದಲ್ಲಿ ಫಲದಾಯಕಗಳಾಗಿರುವುವೇ? ಐಶ್ವರ್ಯವು ಸಫಲವಾಗಿರುವುದೇ? ನಿನ್ನ ಪತ್ನಿಯರು ಸಫಲರಾಗಿರುವರೇ? ಶಾಸ್ತ್ರಾರ್ಥಜನ್ಯಜ್ಞಾನವು ಫಲದಾಯಕವಾಗಿರುವುದೇ?"

ನಾರದರು ಕೇಳಿದ ಪ್ರಶ್ನೆಗಳ ಅಂತರಾರ್ಥವು ಯುಧಿಷ್ಠಿರನಿಗೆ ತಿಳಿಯಲಿಲ್ಲ. ಸಂಶಯಪರಿಹಾರಕ್ಕಾಗಿ ಅವನು ನಾರದರನ್ನೇ ಪ್ರಶ್ನಿಸುತ್ತಾನೆ :

**ಕಥಂ ವೈ ಸಫಲಾ ವೇದಾಃ ಕಥಂ ವೈ ಸಫಲಂ ಧನಮ್ ।**
**ಕಥಂ ವೈ ಸಫಲಾ ದಾರಾಃ ಕಥಂ ವೈ ಸಫಲಂ ಶ್ರುತಮ್ ॥೧೧೨॥**

"ಪೂಜ್ಯರೇ! ಮಹರ್ಷಿಗಳೇ! ವೇದ, ಧನ, ಪತ್ನೀ, ಶಾಸ್ತ್ರಾರ್ಥಗಳ ತಿಳಿವಳಿಕೆ–ಇವುಗಳು ಯಾವ ರೂಪದಲ್ಲಿ ಸಫಲಗಳೆನ್ನಿಸಿಕೊಳ್ಳುತ್ತವೆ?"

ನಾರದರು ಹೇಳುತ್ತಾರೆ :

**ಅಗ್ನಿಹೋತ್ರಫಲಾ ವೇದಾ ದತ್ತಭುಕ್ತಫಲಂ ಧನಮ್ ।**
**ರತಿಪುತ್ರಫಲಾ ದಾರಾಃ ಶೀಲವೃತ್ತಫಲಂ ಶ್ರುತಮ್ ॥೧೧೩॥**

"ಯುಧಿಷ್ಠಿರ! ಕರ್ಮಕಾಂಡವನ್ನು ವೇದವು ಬೋಧಿಸುತ್ತದೆ. ವೇದಾಧ್ಯಯನವನ್ನು ಮಾಡಿ ಕರ್ಮಾನುಷ್ಠಾನಗಳನ್ನು ಮಾಡಿದರೆ ವೇದಗಳ ಫಲವನ್ನು ಹೊಂದಿದಂತಾಗುತ್ತದೆ. ವೇದಪ್ರತಿಪಾದ್ಯಗಳಾದ ಕಾರ್ಯಗಳೆಂದರೆ ಅಗ್ನಿಹೋತ್ರಾದಿಗಳು. ಆರ್ಜಿಸಿದ ಧನವನ್ನು ಪರರಿಗೂ ದಾನಮಾಡಬೇಕು ಮತ್ತು ಧನದಿಂದ ತಾನೂ ಸುಖಪಡಬೇಕು. ಆಗಲೇ ಧನದ ಪ್ರಯೋಜನವನ್ನು ಹೊಂದಿದಂತಾಗುವುದು. ಭಾರ್ಯೆಯೊಡನೆ ರತಿಸುಖವನ್ನನುಭವಿಸುವುದು ಮತ್ತು ಅವಳಲ್ಲಿ ಮಕ್ಕಳನ್ನು ಪಡೆಯುವುದು–ಪತ್ನಿಯ ಫಲವೆನ್ನುತ್ತಾರೆ. ಮಾನವನು ಶಾಸ್ತ್ರಾರ್ಥಗಳನ್ನು ತಿಳಿದು ನಯ-ವಿನಯ-ಸದ್ಗುಣ-ಸದ್ವೃತ್ತಸಂಪನ್ನನಾದರೆ ಮಾತ್ರ ಅವನಿಗೆ ಶಾಸ್ತ್ರಾರ್ಥಗಳ ಅಧ್ಯಯನವು ಫಲಕೊಟ್ಟಿದೆಯೆಂದು ತಿಳಿಯಬಹುದು."

ಹೀಗೆಂದು ಹೇಳಿ, ನಾರದರು ಪುನಃ ಧರ್ಮರಾಜನನ್ನು ರಾಜ್ಯಭಾರದ ವಿಷಯವಾಗಿ ಪ್ರಶ್ನಿಸತೊಡಗಿದರು :

**ಕಚ್ಚಿದಭ್ಯಾಗತಾ ದೂರಾದ್ವಣಿಜೋ ಲಾಭಕಾರಣಾತ್ ।**
**ಯಥೋಕ್ತಮವಹಾರ್ಯನ್ತೇ ಶುಲ್ಕಂ ಶುಲ್ಕೋಪಜೀವಿಭಿಃ ॥**

"ಧರ್ಮರಾಜ! ನಿನ್ನ ದೇಶಕ್ಕೆ ದೇಶಾಂತರಗಳಿಂದ ಲಾಭವನ್ನು ಗಳಿಸಲು ಬರುವ ವರ್ತಕರಿಂದ ತೆರಿಗೆಯ ಅಧಿಕಾರಿಗಳು ಯಥೋಚಿತವಾದ ತೆರಿಗೆಯನ್ನು ತೆಗೆದುಕೊಳ್ಳುತ್ತಿರುವರೇ?

**ಕಚ್ಚಿತ್ತೇ ಪುರುಷಾ ರಾಜನ್ಪುರೇ ರಾಷ್ಟ್ರೇ ಚ ಮಾನಿತಾಃ।**
**ಉಪಾನಯನ್ತಿ ಪಣ್ಯಾನಿ ಉಪಧಾಭಿರವಞ್ಚಿತಾಃ ॥೧೧೬॥**

ನಿನ್ನ ದೇಶದಲ್ಲಿರುವ ವರ್ತಕರು ನಿನ್ನಿಂದ ಸಮ್ಮಾನಿತರಾಗಿ, ಅಧಿಕಾರಿಗಳಿಂದಲೂ ಮತ್ತು ಕೊಳ್ಳುವವರಿಂದಲೂ ವಂಚಿತರಾಗದೇ, ಪರದೇಶದ ವಸ್ತುಗಳನ್ನು ತಂದು–ನಿನ್ನ ದೇಶದಲ್ಲಿ ವಿಕ್ರಯಮಾಡುತ್ತಿರುವರೇ?

ಅಥವಾ ನಿನ್ನ ಅಧಿಕಾರಿಗಳು ರಾಜ್ಯದ ಎಲ್ಲೆಡೆಗಳಲ್ಲಿಯೂ ಗೌರವಿಸಲ್ಪಟ್ಟವರಾಗಿ, ಲಂಚಕ್ಕೆ ಒಳಗಾಗದೇ ಜನಗಳಿಗೆ ಅವಶ್ಯವಾದ ವಸ್ತುಗಳು ತೊಂದರೆಯಿಲ್ಲದೆ ಕ್ರಯಕ್ಕೆ ಸಿಕ್ಕುವಂತೆ ನೋಡಿಕೊಳ್ಳುತ್ತಾರೆಯೇ?

**ಕಚ್ಚಿಚ್ಛೃಣೋಷಿ ವೃದ್ಧಾನಾಂ ಧರ್ಮಾರ್ಥಸಹಿತಾ ಗಿರಃ ।**
**ನಿತ್ಯಮರ್ಥವಿದಾಂ ತಾತ ಯಥಾ ಧರ್ಮಾರ್ಥದರ್ಶಿನಾಮ್ ॥೧೧೭॥**

ಧರ್ಮಾರ್ಥದರ್ಶಿಗಳಾದ, ವಿಶೇಷಾನುಭವಿಗಳಾದ ವೃದ್ಧರ ಮುಖಾರವಿಂದಗಳಿಂದ ಧರ್ಮಾರ್ಥಬೋಧಕಗಳಾದ ಮಾತುಗಳನ್ನು ಪ್ರತಿನಿತ್ಯವೂ ಕೇಳುತ್ತಿರುವೆಯಾ?

**ಕಚ್ಚಿತ್ತೇ ಕೃಷಿತನ್ತ್ರೇಷು ಗೋಷು ಪುಷ್ಪಫಲೇಷು ಚ ।**
**ಧರ್ಮಾರ್ಥಂ ಚ ದ್ವಿಜಾತಿಭ್ಯೋ ದೀಯೇತೇ ಮಧುಸರ್ಪಿಷೀ ॥೧೧೮॥**

ಕೃಷಿಯಿಂದ ಉತ್ಪನ್ನವಾಗುವ ಆರ್ದ್ರ-ಶುಷ್ಕಧಾನ್ಯಗಳು ಉಗ್ರಾಣಕ್ಕೆ

ಬರುವ ಕಾಲದಲ್ಲಿಯೂ, ಹಸುಗಳು ಈಯುವ ಕಾಲದಲ್ಲಿಯೂ, ವೃಕ್ಷಗಳು ಪುಷ್ಪ-ಫಲಭರಿತವಾಗುವ ಕಾಲದಲ್ಲಿಯೂ ಧರ್ಮಸಂಚಯನಾರ್ಥವಾಗಿ ಬ್ರಾಹ್ಮಣರಿಗೆ ನಿನ್ನಿಂದ ಮಧ್ವಾಜ್ಯಗಳು (ಮಧುಪರ್ಕವು) ಸಲ್ಲುತ್ತಿವೆಯೇ?

**ದ್ರವ್ಯೋಪಕರಣಂ ಕಿಂಚಿತ್ಸರ್ವದಾ ಸರ್ವಶಿಲ್ಪಿನಾಮ್ ।**
**ಚಾತುರ್ಮಾಸ್ಯಾವರಂ ಸಮ್ಯಙ್ನಿಯತಂ ಸಮ್ಪ್ರಯಚ್ಛಸಿ ॥೧೧೯॥**

ಧರ್ಮಜ! ನಿನ್ನ ದೇಶದಲ್ಲಿರುವ ಶಿಲ್ಪಿಗಳಿಗೆ ನಾಲ್ಕು ತಿಂಗಳಿಗೆ ಸಾಕಾಗುವಷ್ಟಾದರೂ ವೇತನವನ್ನು ಮುಂಗಡವಾಗಿ ಕೊಡುತ್ತಿರುವೆಯಾ? ಅವರಿಗೆ ಬೇಕಾಗುವ ಉಪಕರಣಗಳನ್ನು ಒದಗಿಸಿರುವೆಯಾ?

**ಕಚ್ಚಿತ್ಕೃತಂ ವಿಜಾನೀಷೇ ಕರ್ತಾರಂ ಚ ಪ್ರಶಂಸಸಿ ।**
**ಸತಾಂ ಮಧ್ಯೇ ಮಹಾರಾಜ ಸತ್ಕರೋಷಿ ಚ ಪೂಜಯನ್ ॥೧೨೦॥**

ಬೇರೆಯವರು ಮಾಡಿದ ಮಹಾಕಾರ್ಯಗಳನ್ನು ತಿಳಿದುಕೊಳ್ಳುತ್ತಿರುವೆಯಾ? ಅವರು ಮಾಡಿದ ಮಹಾಕಾರ್ಯಗಳನ್ನು ಸತ್ಪುರುಷರ ಮುಂದೆ ಶ್ಲಾಘಿಸುತ್ತಿರುವೆಯಾ? ಅವರಿಗೆ ಯಥೋಚಿತವಾದ ಬಹುಮಾನಗಳನ್ನೂ ಕೊಟ್ಟು ಪ್ರೋತ್ಸಾಹಿಸುತ್ತಿರುವೆಯಾ?

**ಕಚ್ಚಿತ್ಸೂತ್ರಾಣಿ ಸರ್ವಾಣಿ ಗೃಹ್ಣಾಸಿ ಭರತರ್ಷಭ।**
**ಹಸ್ತಿಸೂತ್ರಾಶ್ವಸೂತ್ರಾಣಿ ರಥಸೂತ್ರಾಣಿ ವಾ ವಿಭೋ ॥೧೨೧॥**
**ಕಚ್ಚಿದಭ್ಯಸ್ಯತೇ ಸಮ್ಯಗ್ಗೃಹೇ ತೇ ಭರತರ್ಷಭ।**
**ಧನುರ್ವೇದಸ್ಯ ಸೂತ್ರಂ ವೈ ಯನ್ತ್ರಸೂತ್ರಂ ಚ ನಾಗರಮ್ ॥೧೨೨॥**

ವಿಭುವೇ! ಮಹರ್ಷಿಪ್ರಣೀತಗಳಾದ ಗಜಲಕ್ಷಣ, ಅಶ್ವಲಕ್ಷಣ, ರಥಲಕ್ಷಣ–ಮುಂತಾದ ಲಕ್ಷಣಶಾಸ್ತ್ರಗಳನ್ನು ತಿಳಿದಿರುವೆಯಾ? ಧನುರ್ವೇದ, ಯಂತ್ರಸೂತ್ರ ಮತ್ತು ನಾಗರಿಕನೀತಿಸೂತ್ರಗಳನ್ನೂ ಅಭ್ಯಾಸ ಮಾಡಿರುವೆಯಾ? ನಿನ್ನ ಮನೆಯಲ್ಲಿ ಈ ವಿದ್ಯೆಗಳ ಅಭ್ಯಾಸಕ್ಕೆ ಸೌಕರ್ಯವನ್ನು ಕಲ್ಪಿಸಿರುವೆಯಾ?

**ಕಚ್ಚಿದಸ್ತ್ರಾಣಿ ಸರ್ವಾಣಿ ಬ್ರಹ್ಮದಣ್ಡಶ್ಚ ತೇಽನಘ ।**
**ವಿಷಯೋಗಾಸ್ತಥಾ ಸರ್ವೇ ವಿದಿತಾಃ ಶತ್ರುನಾಶನಾಃ ॥೧೨೩॥**

ನಾನಾವಿಧವಾದ ಅಸ್ತ್ರಪ್ರಯೋಗಗಳು, ಬ್ರಹ್ಮದಂಡಪ್ರಯೋಗದ ವಿಧಾನಗಳು ನಿನಗೆ ತಿಳಿದಿವೆಯೇ? ಶತ್ರುವಿನಾಶಕಾರಕವಾದ ವಿಷಪ್ರಯೋಗವಿಧಾನಗಳನ್ನು ತಿಳಿದಿರುವೆಯಾ? ಶತ್ರುವಿನಾಶಕ್ಕಾಗಿ ಇವೆಲ್ಲವನ್ನೂ ತಿಳಿದಿರಬೇಕು.

**ಕಚ್ಚಿದಗ್ನಿಭಯಾಚ್ಚೈವ ಸರ್ವಂ ವ್ಯಾಲಭಯಾತ್ತಥಾ ।**
**ರೋಗರಕ್ಷೋಭಯಾಚ್ಚೈವ ರಾಷ್ಟ್ರಂ ಸ್ವಂ ಪರಿರಕ್ಷಸಿ ॥೧೨೪॥**

ಪಾರ್ಥ! ದೇಶವನ್ನು ಸಂರಕ್ಷಿಸಲು ಅಗ್ನಿಶಾಮಕಯಂತ್ರಗಳನ್ನು ಸಿದ್ಧಪಡಿಸಬೇಕು. ಸರ್ಪದಂಶನದಿಂದ ಉಂಟಾಗುವ ಮೃತ್ಯುವನ್ನು ನಿವಾರಿಸಲು ಮಂತ್ರೌಷಧಗಳ ಸಿದ್ಧತೆಯಿರಬೇಕು. ಅನೇಕರೀತಿಯ ರೋಗಗಳನ್ನು ನಿವಾರಿಸಲು ದೇಶದಲ್ಲಿ ವೈದ್ಯರಿರಬೇಕು. ಪಿಶಾಚಾದಿಗಳ ಭಯನಿವಾರಣೆಗಾಗಿ ಅಥರ್ವಪ್ರಕ್ರಿಯೆಗಳನ್ನು ತಿಳಿದಿರುವ ಮಂತ್ರಜ್ಞರಿರಬೇಕು. ದೇಶದ ರಕ್ಷಣೆಗಾಗಿ ಈ ಎಲ್ಲ ಸಿದ್ಧತೆಗಳೂ ಸರ್ವಕಾಲದಲ್ಲಿಯೂ ಇರಬೇಕು. ಹಾಗೆ ಮಾಡುತ್ತಿರುವೆಯಾ?

**ಕಚ್ಚಿದನ್ಧಾಂಶ್ಚ ಮೂಕಾಂಶ್ಚ ಪಙ್ಗೂನ್ವ್ಯಙ್ಗಾನಬಾನ್ಧವಾನ್ ।**
**ಪಿತೇವ ಪಾಸಿ ಧರ್ಮಜ್ಞ ತಥಾ ಪ್ರವ್ರಜಿತಾನಪಿ ॥೧೨೫॥**

ನಿನ್ನ ಮತ್ತೊಂದು ಮುಖ್ಯಕರ್ತವ್ಯವಿದೆ, ಧರ್ಮಜ! ಕುರುಡರನ್ನೂ, ಮೂಗರನ್ನೂ, ಹೆಳವರನ್ನೂ, ಅಂಗವಿಕಲರನ್ನೂ, ಅನಾಥರನ್ನೂ, ಸಂನ್ಯಾಸಿಗಳನ್ನೂ–ತಂದೆಯು ಮಕ್ಕಳನ್ನು ಕಾಪಾಡುವಂತೆ–ಧರ್ಮಜ್ಞನಾದ ನೀನು ಕಾಪಾಡಬೇಕು.

**ಷಡನರ್ಥಾ ಮಹಾರಾಜ ಕಚ್ಚಿತ್ತೇ ಪೃಷ್ಠತಃ ಕೃತಾಃ ।**
**ನಿದ್ರಾಲಸ್ಯಂ ಭಯಂ ಕ್ರೋಧೋಽಮಾರ್ದವಂ ದೀರ್ಘಸೂತ್ರತಾ ॥**

ಮಹಾರಾಜ! ಅನರ್ಥಕಾರಿಗಳಾದ ಆರು ದೋಷಗಳನ್ನು ಪರಿತ್ಯಜಿಸಿರುವೆಯಲ್ಲವೇ? ಅತಿನಿದ್ರೆ, ಸೋಮಾರಿತನ, ಭಯ, ಕೋಪ, ಕಠೋರತೆ, ಕಾರ್ಯಗಳನ್ನು ಬಹಳ ನಿಧಾನವಾಗಿ ಮಾಡುವುದು–ಈ ಆರೂ ಮಹಾದೋಷಗಳು. ಇವುಗಳನ್ನು ರಾಜನಾದವನು ಖಂಡಿತವಾಗಿಯೂ ಪರಿತ್ಯಜಿಸಬೇಕು.”

ಜನಮೇಜಯ! ಮಹಾತ್ಮನಾದ ಕುರುಕುಲಶ್ರೇಷ್ಠನಾದ ಯುಧಿಷ್ಠಿರನು, ಬ್ರಾಹ್ಮಣಶ್ರೇಷ್ಠರಾದ ನಾರದರು ಹೇಳಿದ ಮಾತುಗಳನ್ನು ಕೇಳಿ ಅತಿ ಸಂತುಷ್ಟನಾಗಿ, ಸಿಂಹಾಸನದಿಂದಿಳಿದು ಮಹರ್ಷಿಗಳಾದ ನಾರದರ ದಿವ್ಯಪಾದ ಗಳಿಗೆ ಅಭಿವಾದನಪೂರ್ವಕವಾಗಿ ಪ್ರಣಾಮಮಾಡಿ ನಾರದರಿಗೆ ಹೇಳಿದನು :

"ಮಹರ್ಷಿಗಳೇ! ತಾವು ಹೇಳಿದಂತೆಯೇ ಮಾಡುತ್ತೇನೆ. ತಮ್ಮ ಸಮೀಚೀನವಾದ ಪ್ರವಚನದಿಂದಾಗಿ ನನ್ನ ಜ್ಞಾನವು ಮತ್ತಷ್ಟು ವೃದ್ಧಿಹೊಂದಿತು."

ಜನಮೇಜಯ! ಯುಧಿಷ್ಠಿರನು ನಾರದರೊಡನೆ ಹೀಗೆ ಹೇಳಿದುದಲ್ಲದೇ ಅವರು ಹೇಳಿದ ರೀತಿಯಲ್ಲಿಯೇ ರಾಜ್ಯಭಾರವನ್ನು ಮಾಡುತ್ತಿದ್ದು, ಸಮುದ್ರಾಂತವಾದ ಪೃಥ್ವಿಗೆ ಅಧಿಪತಿಯಾದನು.

ಅನಂತರ ನಾರದರು ತಾವು ಹೇಳಿದ ಪ್ರವಚನದ ಫಲಶ್ರುತಿಯನ್ನು ಹೇಳುತ್ತಾರೆ :

**ಏವಂ ಯೋ ವರ್ತತೇ ರಾಜಾ ಚಾತುರ್ವರ್ಣ್ಯಸ್ಯ ರಕ್ಷಣೇ ।**
**ಸ ವಿಹೃತ್ಯೇಹ ಸುಸುಖೀ ಶಕ್ರಸ್ಯೈತಿ ಸಲೋಕತಾಮ್ ॥೧೨॥**

"ಯಾವ ರಾಜನು ಬ್ರಹ್ಮ-ಕ್ಷತ್ರ-ವೈಶ್ಯ-ಶೂದ್ರರೂಪವಾದ ಚಾತುರ್ವರ್ಣ್ಯಗಳ ರಕ್ಷಣೆಯಲ್ಲಿ ನಿರತನಾಗಿರುತ್ತಾ ಹಿಂದೆ ಹೇಳಿದ ನೀತಿಯನ್ನನುಸರಿಸಿ ರಾಜ್ಯವನ್ನಾಳುವನೋ–ಅವನು ಇಹದಲ್ಲಿ ಸೌಖ್ಯವನ್ನೂ, ಪರದಲ್ಲಿ ಇಂದ್ರನೊಡನೆ ಸಾಲೋಕ್ಯವನ್ನೂ ಎಂದರೆ ಇಂದ್ರಲೋಕವನ್ನೂ, ಪಡೆಯುವನೆಂಬುದರಲ್ಲಿ ಯಾವ ಸಂಶಯವೂ ಇಲ್ಲ."

೫ನೆಯ ಅಧ್ಯಾಯವು ಮುಗಿಯಿತು.

೬ನೆಯ ಅಧ್ಯಾಯ ಲೋಕಪಾಲಸಭಾಖ್ಯಾನಪರ್ವ (ಮುಂದುವರಿದಿದೆ.)

## ದಿವ್ಯಸಭೆಯ ವಿಷಯದಲ್ಲಿ ಯುಧಿಷ್ಠಿರನ ಜಿಜ್ಞಾಸೆ

"ಜನಮೇಜಯ! ನಾರದರು ಮಾಡಿದ ಉಪದೇಶದಿಂದ ಪರಮ ಸಂತುಷ್ಟನಾದ ಧರ್ಮಜನು ಮಹರ್ಷಿಗಳನ್ನು ಯಥಾಯೋಗ್ಯವಾಗಿ ಸಂಪೂಜಿಸಿ ಅವರ ಅನುಜ್ಞೆಯನ್ನು ಪಡೆದು ಉತ್ತರಕೊಟ್ಟನು :

"ಮಹರ್ಷಿಗಳೇ! ತಾವು ಈಗ ಹೇಳಿದ ಧರ್ಮಾರ್ಥ-ಕಾಮ-ಮೋಕ್ಷ ಸಾಧಕಗಳಾದ ರಾಜನೀತಿಗಳು ನ್ಯಾಯೋಪೇತವೂ, ಅನುಸರಣೀಯವೂ ಆಗಿವೆ. ನನ್ನ ವಿಷಯದಲ್ಲಿ ಹೇಳುವುದಾದರೆ ತಾವು ಹೇಳಿದ ನೀತಿಗಳೆಲ್ಲವನ್ನೂ ಸಾಧ್ಯವಾದಮಟ್ಟಿಗೂ ಅನುಸರಿಸುತ್ತಿದ್ದೇನೆ. ನಿಶ್ಚಯ ವಾಗಿಯೂ ನಮ್ಮ ಹಿರಿಯರು ಅನುಸರಿಸುತ್ತಿದ್ದ ಮಾರ್ಗವು ಫಲದಾಯಕ ವಾಗಿಯೂ, ಯುಕ್ತಾಯುಕ್ತಾ ವಿವೇಚನೆಯಿಂದ ಕೂಡಿದುದಾಗಿಯೂ ಮತ್ತು ನಿರ್ದಿಷ್ಟವಾದ ಧ್ಯೇಯಸಾಧಕವಾಗಿಯೂ ಇದ್ದಿತೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಅದೇ ಮಾರ್ಗವನ್ನೇ ಅನುಸರಿಸಿ ನಾವೂ ನಡೆಯಬೇಕೆಂಬ ಪೂರ್ಣವಾದ ಆಶಯವು ನಮಗಿದೆ. ಆದರೆ ಜಿತೇಂದ್ರಿಯರಾದ ಆ ಮಹಾನುಭಾವರಂತೆಯೇ ನಡೆಯಲು ನಾವು ಸಮರ್ಥರಲ್ಲ."

ಸಂಭಾಷಣೆಗಳಾದನಂತರ ನಾರದರು ಶಾಂತಚಿತ್ತರಾಗಿ ಆಸನದಲ್ಲಿ ಉಪವಿಷ್ಟರಾಗಿದ್ದರು. ಅನುಜರ ಮಧ್ಯದಲ್ಲಿದ್ದ ಯುಧಿಷ್ಠಿರನೂ ಮುಂದೇನು ಮಾತನಾಡಬೇಕೆಂದು ಕ್ಷಣಕಾಲ ಯೋಚಿಸಿದನು. ಸರ್ವಜ್ಞರಾದ ನಾರದರಿಂದ ಸಾಧ್ಯವಾದಷ್ಟು ತಿಳಿವಳಿಕೆಯನ್ನು ಗ್ರಹಿಸಬೇಕೆಂಬುದೇ ಧರ್ಮಜನ ಆಶಯವಾಗಿತ್ತು. ನಾರದರಂತಹ ಜ್ಞಾನಿಗಳ ದರ್ಶನವು ಪದೇ-ಪದೇ ಲಭಿಸುವುದೇನು? ಯುಧಿಷ್ಠಿರನು ತನ್ನ ಬಳಿಯಲ್ಲಿ ಶಾಂತಮನಸ್ಕರಾಗಿ ಕುಳಿತಿದ್ದ ನಾರದರನ್ನು ಪುನಃ ಪುನಃ ಪ್ರಶ್ನಿಸತೊಡಗಿದನು :
"ಪೂಜ್ಯರೇ! ವಾಯುವೇಗ-ಮನೋವೇಗಗಳ ಗತಿಯನ್ನೂ ಮೀರಿ ಸಂಚರಿಸುವ ಸಾಮರ್ಥ್ಯವಿರುವ ತಾವು ಬ್ರಹ್ಮನಿರ್ಮಿತವಾದ ಅಖಂಡಭೂಮಂಡಲವನ್ನೂ ನೋಡಿರುವಿರಿ. ಬ್ರಾಹ್ಮಣೋತ್ತಮರೇ! ತಾವು ನೋಡಿರುವೆಡೆಗಳಲ್ಲಿ ಮಯನಿರ್ಮಿತವಾದ ಈ ಸಭೆಗೆ ಸದೃಶವಾದ ಅಥವಾ ಇದಕ್ಕಿಂತಲೂ ಮಿಗಿಲಾದ ಸಭಾಮಂಟಪಗಳು ಬ್ರಹ್ಮಾಂಡದ ಯಾವ ಯಾವ ಭಾಗಗಳಲ್ಲಿವೆ? ಅವುಗಳ ಸೊಬಗೇನು? ನಿರ್ಮಾಪಕರಾರು? ವಿಸ್ತಾರವೆಷ್ಟಿದೆ?–ಎಲ್ಲವನ್ನೂ ವಿಶದವಾಗಿ ತಿಳಿಸಿರಿ."

ಯುಧಿಷ್ಠಿರನ ಮಾತುಗಳನ್ನು ಕೇಳಿ ನಾರದರು ಮುಗುಳ್ನಗೆಯನ್ನು ಬೀರುತ್ತಾ ತಾವು ನೋಡಿದ ಸಭೆಗಳೆಲ್ಲವನ್ನೂ ಸ್ಮರಿಸಿಕೊಂಡು ಸುಮಧುರವಾದ ಮಾತುಗಳಿಂದ ಹೇಳತೊಡಗಿದರು.:

"ಮಗು! ಮನುಷ್ಯಲೋಕದಲ್ಲಿ ಈ ಸಭಾಮಂದಿರದಂತೆ ಸ್ವರ್ಣಭೂಷಿತವಾದ, ನವರತ್ನಗಳಿಂದ ಅಲಂಕೃತವಾದ ಬೇರೊಂದು ಸಭಾಮಂದಿರವನ್ನು ನಾನು ನೋಡಿಯೂ ಇಲ್ಲ.; ಕೇಳಿಯೂ ಇಲ್ಲ. ಆದರೆ ದೇವಲೋಕದಲ್ಲಿ ಹಲವಾರು ಸಭಾಮಂದಿರಗಳಿವೆ. ಅವುಗಳಲ್ಲಿ ಯಮನ ಸಭಾಮಂದಿರ, ವರುಣನದು, ಇಂದ್ರನದು, ಕುಬೇರನದು ಮತ್ತು ಕುಳಿತೊಡನೆಯೇ ಕಷ್ಟವನ್ನು ಪರಿಹರಿಸುವ ಬ್ರಹ್ಮನ ಸಭಾಮಂದಿರ–ಇವುಗಳು ಅತ್ಯುತ್ತಮವಾಗಿವೆ. ಶ್ರೇಷ್ಠವಾಗಿವೆ ಮತ್ತು ಮನೋಹರವೂ ಆಗಿವೆ. ಆ ಸಭಾಮಂದಿರಗಳು ದೇವ ಮತ್ತು ಮಾನವ ಶಿಲ್ಪಶಾಸ್ತ್ರಗಳ ಪ್ರಕಾರ ನಿರ್ಮಿತವಾಗಿವೆ. ಪ್ರಪಂಚದ ನಾನಾಭಾಗಗಳಲ್ಲಿರುವ ಕಲಾವೈಶಿಷ್ಟ್ಯಗಳನ್ನೆಲ್ಲಾ ಆ ಸಭಾಮಂದಿರಗಳಲ್ಲಿ ಕಾಣಬಹುದಾಗಿದೆ. ಆ ಸಭಾ ಮಂದಿರಗಳು ಪಿತೃದೇವತೆಗಳಿಂದಲೂ, ಸಾಧ್ಯರಿಂದಲೂ, ದೇವತೆಗಳಿಂದಲೂ, ಜಿತೇಂದ್ರಿಯರಾದ ಬ್ರಹ್ಮರ್ಷಿಗಳಿಂದಲೂ, ಶಾಂತರಾದ ಮುನಿಗಳಿಂದಲೂ ಸರ್ವಕಾಲದಲ್ಲಿಯೂ ನಿಬಿಡವಾಗಿರುತ್ತವೆ. ನೀನು ಆ ಸಭಾಮಂದಿರಗಳ ಸೊಬಗನ್ನು ಕೇಳಲು ಇಚ್ಛೆಯುಳ್ಳವನಾಗಿದ್ದರೆ ಹೇಳುವೆನು, ಧರ್ಮಜ!"

ಯುಧಿಷ್ಠಿರನು ಅವೆಲ್ಲವನ್ನೂ ತಿಳಿದುಕೊಳ್ಳಬೇಕೆಂಬ ಇಚ್ಛೆಯಿಂದಲ್ಲವೇ ಪ್ರಶ್ನಿಸಿರುವುದು? ನಾರದರು ಹೇಳುವ ಇಚ್ಛೆಯನ್ನು ಸೂಚಿಸಿದೊಡ ನೆಯೇ–ಧರ್ಮಜನು ಪ್ರಾಂಜಲಿಯಾಗಿ ಅನುಜರಿಂದೊಡಗೂಡಿ ಆ ಸಭಾಮಂದಿರಗಳ ವಿಷಯವನ್ನು ಕೇಳಲು ಸನ್ನದ್ಧನಾದನು.

"ಮಹರ್ಷಿಗಳೇ! ನನಗೆ ಆ ಸಭಾಮಂದಿರಗಳ ಸೊಬಗನ್ನು ಅವಶ್ಯವಾಗಿ ಹೇಳಿರಿ. ನಾವು ಅವುಗಳನ್ನು ತಿಳಿಯಲು ಬಹಳ ಉತ್ಸುಕರಾಗಿದ್ದೇವೆ. ಯಾವ ಯಾವ ಸಭಾಮಂದಿರವು ಯಾವ ಯಾವ ವಸ್ತುಗಳಿಂದ ನಿರ್ಮಿತವಾಗಿವೆ? ಅವುಗಳ ವಿಸ್ತಾರವೆಷ್ಟು? ಉದ್ದ-ಅಗಲಗಳೆಷ್ಟು? ಬ್ರಹ್ಮನ ಸಭೆಯಲ್ಲಿ ಪಿತಾಮಹನನ್ನು ಉಪಾಸನೆಮಾಡುತ್ತಿರುವವರಾರು? ವಾಸವನ ಸಭೆಯಲ್ಲಿ ಅವನನ್ನು ಉಪಾಸನೆಮಾಡತಕ್ಕವರಾರು? ವೈವಸ್ವತನ ಸಭೆಯಲ್ಲಿ ಯಮನನ್ನು ಉಪಾಸನೆಮಾಡುತ್ತಾ ಯಾರು ಕುಳಿತಿದ್ದಾರೆ? ವರುಣ ಮತ್ತು ಕುಬೇರರನ್ನು ಉಪಾಸನೆಮಾಡುವವರಾರೆಂಬುದನ್ನು ವಿಸ್ತಾರವಾಗಿಯೇ ತಿಳಿಸಿರಿ. ಆ ಎಲ್ಲ ಸಭೆಗಳ ವಿವರಣೆಗಳನ್ನೂ ತಿಳಿದಿರುವ ತಮ್ಮಿಂದ ನಾವೆ

ಲ್ಲರೂ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇವೆ. ಈ ವಿಷಯವನ್ನು ಆಮೂಲಾಗ್ರವಾಗಿ ತಿಳಿದುಕೊಳ್ಳಬೇಕೆಂಬುದರಲ್ಲಿ ನಮಗೆ ಹೆಚ್ಚಿನ ಕುತೂಹಲವಿದೆ."

ಪಾಂಡವರು ಹೀಗೆ ಪ್ರಾರ್ಥಿಸಲಾಗಿ, ನಾರದರು ಯುಧಿಷ್ಠಿರನನ್ನು ಕುರಿತು ಹೇಳಿದರು : "ಯುಧಿಷ್ಠಿರ! ನಿನ್ನ ಅಭಿಲಾಷೆಯಂತೆಯೇ ಆ ದಿವ್ಯ ಸಭೆಗಳ ವರ್ಣನೆಯನ್ನು ಅನುಕ್ರಮವಾಗಿ ಮಾಡುವೆನು. ಎಲ್ಲರೂ ಸಾವಧಾನಚಿತ್ತರಾಗಿ ಕೇಳಿರಿ."

ಓನೆಯ ಅಧ್ಯಾಯವು ಮುಗಿಯಿತು.

ಒನೆಯ ಅಧ್ಯಾಯ ಲೋಕಪಾಲಸಭಾಖ್ಯಾನಪರ್ವ (ಮುಂದುವರಿದಿದೆ.)

## ಇಂದ್ರಸಭೆಯ ವರ್ಣನೆ

ಜನಮೇಜಯ! ನಾರದರು ಮೊದಲು ಇಂದ್ರಸಭೆಯ ಸೊಬಗನ್ನು ವರ್ಣಿಸಲು ಪ್ರಾರಂಭಿಸಿದರು. ಯುಧಿಷ್ಠಿರನೇ ಆದಿಯಾಗಿ ಸಭಾಮಂದಿರದಲ್ಲಿ ನೆರೆದಿದ್ದ ಸಕಲರೂ ನಾರದರು ಹೇಳುತ್ತಿದ್ದುದನ್ನು ತದೇಕಚಿತ್ತರಾಗಿ ಕೇಳುತ್ತಿದ್ದರು.

"ಯುಧಿಷ್ಠಿರ! ಇಂದ್ರಸಭೆಯು ಪ್ರಫುಲ್ಲವಾದ ಕಾಂತಿಯಿಂದ ಕೂಡಿರುವುದು. ತಾನು ಮಾಡಿದ ಸತ್ಕರ್ಮದ ಫಲವಾಗಿ ಇಂದ್ರನು ಆ ದಿವ್ಯಸಭೆಯನ್ನು ಪಡೆದನು. ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ ಆ ಸಭಾಮಂದಿರವು ವಿಶ್ವಕರ್ಮನಿಂದ ನಿರ್ಮಿತವಾಯಿತು. ಆ ಮಹಾಸಭಾಮಂದಿರವು ನೂರೈವತ್ತು ಯೋಜನಗಳಷ್ಟು ಉದ್ದವಾಗಿಯೂ, ನೂರು ಯೋಜನಗಳಷ್ಟು ಅಗಲವಾಗಿಯೂ ಇರುವುದಲ್ಲದೇ–ಐದು ಯೋಜನಗಳಷ್ಟು ಎತ್ತರವಾಗಿಯೂ ಇರುವುದು. ಆ ದಿವ್ಯಸಭಾಮಂದಿರಕ್ಕೆ ಇಚ್ಛೆಯಿದ್ದಲ್ಲಿಗೆ ಹೋಗಿಬರುವ ಸಾಮರ್ಥ್ಯವೂ ಇರುವುದು. ಅದಕ್ಕಿರುವ ಅಸಾಧಾರಣಶಕ್ತಿಯು ವರ್ಣನಾತೀತವಾದುದು. ಆ ಸಭೆಯಲ್ಲಿ ಆಶ್ರಯಹೊಂದಿರುವವರಿಗೆ ದೌರ್ಬಲ್ಯ, ಮುಪ್ಪು, ದುಃಖ, ಭಯಗಳು ಉಂಟಾಗುವುದೇ ಇಲ್ಲ. ಆಯಾಸವನ್ನೂ ಪರಿಹಾರಮಾಡುತ್ತದೆ. ಇಷ್ಟು ಮಾತ್ರವಲ್ಲದೇ ಅದರಲ್ಲಿ ಆಶ್ರಯಪಡೆದವರಿಗೆ ಅದು ಸರ್ವದಾ ಮಂಗಳವನ್ನೇ ಉಂಟುಮಾಡುತ್ತದೆ."

ನಾರದರು ಮುಂದುವರಿದು ಹೇಳಿದರು :

“ಆ ಸಭಾಮಂದಿರದಲ್ಲಿ ಸುಂದರವಾದ ಹಲವು ಕೊಠಡಿಗಳಿವೆ. ಅವುಗಳಲ್ಲಿ ರತ್ನಖಚಿತವಾದ ಆಸನಗಳಿವೆ. ಸಭಾಭವನವು ದೇವವೃಕ್ಷಗಳಿಂದ ಅಲಂಕರಿಸಲ್ಪಟ್ಟಿದೆ. ಸಭಾಮಂದಿರದ ಮಧ್ಯಭಾಗದಲ್ಲಿ ಎತ್ತರವಾದ, ಸುಂದರವಾದ ಮತ್ತು ಸ್ವರ್ಣಮಯವಾದ ಸಿಂಹಾಸನವಿದೆ. ಆ ಸಿಂಹಾಸನದಲ್ಲಿ ದೇವಾಧಿಪತಿಯಾದ ಇಂದ್ರನು ರತ್ನಖಚಿತವಾದ ಕಿರೀಟವನ್ನೂ, ಕನಕಾಂಗದ-ಕೇಯೂರಗಳನ್ನೂ, ಶ್ವೇತವಸ್ತ್ರಗಳನ್ನೂ, ವಿವಿಧವರ್ಣಗಳಿಂದ ಕೂಡಿರುವ ಸುಗಂಧಮಯವಾದ ದೇವಸುಮಮಾಲೆಗಳನ್ನೂ ಧರಿಸಿದವನಾಗಿ, ಲಜ್ಜಾ-ಕೀರ್ತಿ-ದ್ಯುತಿಗಳಿಂದ ಕೂಡಿದವನಾಗಿ ಶಚೀದೇವಿಯೊಡನೆ ಕುಳಿತುಕೊಳ್ಳುತ್ತಾನೆ. ಸಪ್ತಮರುತ್ತುಗಳೂ, ಗೃಹಮೇಧಿದೇವತೆಗಳೂ ದಿವ್ಯಾಂಬರಗಳನ್ನು ಧರಿಸಿದವರಾಗಿ ಮಹಾತ್ಮನಾದ, ಶತಕ್ರತುವಾದ ದೇವೇಂದ್ರನನ್ನು ಸಮ್ಮಾನಿಸುತ್ತಾರೆ.

ಸಿದ್ಧರೂ, ದೇವರ್ಷಿಗಳೂ, ಸಾಧ್ಯರೂ, ದೇವಗಣಗಳೂ ಮತ್ತು ಮರುತ್ವಂತರೂ ಸುವರ್ಣಮಯವಾದ ಹಾರಗಳನ್ನು ಧರಿಸಿದವರಾಗಿ, ಸ್ವಯಂಪ್ರಕಾಶರಾಗಿ, ದಿವ್ಯವಾದ ರೂಪಗಳನ್ನು ಧರಿಸಿ, ದಿವ್ಯಾಂಬರಗಳಿಂದಲೂ–ದಿವ್ಯಾಭರಣಗಳಿಂದಲೂ ಅಲಂಕೃತರಾಗಿ, ನೂರಾರು ಅನುಚರರಿಂದೊಡಗೂಡಿ ಮಹಾತ್ಮನಾದ ದೇವರಾಜನಾದ–ಅರಿಂದಮನಾದ ಇಂದ್ರನನ್ನು ಉಪಾಸನೆಮಾಡುತ್ತಾರೆ.

ಪರಿಶುದ್ಧರಾದ, ಪಾಪರಹಿತರಾದ, ಅಗ್ನಿಗೆ ಸಮಾನವಾದ ತೇಜಸ್ಸುಳ್ಳ, ಶೋಕರಹಿತರಾದ, ಸೋಮಯಾಗಗಳನ್ನು ಮಾಡಿರುವ ದೇವರ್ಷಿಗಳೂ ಸಿಂಹಾಸನಾರೂಢನಾದ ದೇವೇಂದ್ರನನ್ನು ಸಮ್ಮಾನಿಸುತ್ತಾರೆ. ಪರಾಶರ, ಪರ್ವತ, ಸಾವರ್ಣಿ, ಗಾಲವ, ಶಂಖ, ಲಿಖಿತ, ಗೌರಶಿರಸ, ದುರ್ವಾಸ, ಕ್ರೋಧನ, ಶ್ಯೇನ, ದೀರ್ಘತಮಸ, ಪವಿತ್ರಪಾಣಿ, ಸಾವರ್ಣಿ, ಯಾಜ್ಞವಲ್ಕ್ಯ, ಭಾಲುಕಿ, ಉದ್ದಾಲಕ, ಶ್ವೇತಕೇತು, ತಾಂಡ್ಯ, ಭಾಂಡಾಯನಿ, ಹವಿಷ್ಮಂತ, ಗರಿಷ್ಠ, ಹರಿಶ್ಚಂದ್ರ, ಹೃದ್ಯ, ಉದರಶಾಂಡಿಲ್ಯ, ಪಾರಾಶರ್ಯ, ಕೃಷೀವಲ, ವಾತಸ್ಕಂಧ, ವಿಶಾಖ, ವಿಧಾತಾ, ಕಾಲ, ಕರಾಲದಂತ, ತ್ವಷ್ಟಾ,

ವಿಶ್ವಕರ್ಮಾ, ತುಂಬುರು ಮತ್ತು ಅಯೋನಿಜರು, ಯೋನಿಜರು, ವಾಯುಭಕ್ಷರು, ಹುತಾಶರು ಇವರೆಲ್ಲರೂ ಸರ್ವಕಾಲಗಳಲ್ಲಿಯೂ ಸರ್ವಲೋಕೇಶ್ವರನಾದ ದೇವೇಂದ್ರನನ್ನು ಆರಾಧನೆಮಾಡುತ್ತಾರೆ. ಸಹದೇವ, ಸುನೀಥ, ವಾಲ್ಮೀಕಿ, ಸತ್ಯವಾದಿಯಾದ ಶಮೀಕ, ಸತ್ಯಪ್ರತಿಜ್ಞನಾದ ಪ್ರಚೇತಸ, ಮೇಧಾತಿಥಿ, ವಾಮದೇವ, ಪುಲಸ್ತ್ಯ, ಪುಲಹ, ಕ್ರತು, ಮರುತ್ತ, ಮರೀಚಿ, ಸ್ಥಾಣು, ಕಕ್ಷೀವಂತ, ಗೌತಮ, ತಾರ್ಕ್ಷ್ಯ, ವೈಶ್ವಾನರ, ಕಾಲಕವೃಕ್ಷೀಯ, ಆಶ್ರಾವ್ಯ, ಹಿರಣ್ಮಯ, ಸಂವರ್ತ, ದೇವಹವ್ಯ, ವಿಷ್ವಕ್ಸೇನ–ಇವರುಗಳೂ ದೇವಾಧಿಪತಿಯಾದ ಇಂದ್ರನನ್ನು ಆ ಮಹಾಸಭೆಯಲ್ಲಿ ಆರಾಧಿಸುತ್ತಾರೆ. ದಿವ್ಯಜಲಾಧಿದೇವತೆಗಳು, ಓಷಧಿಗಳು, ಶ್ರದ್ಧಾ, ಮೇಧಾ, ಸರಸ್ವತೀ, ಅರ್ಥ, ಧರ್ಮ, ಕಾಮ, ಮಿಂಚು, ಮೇಘಗಳು, ಗಾಳಿ, ಸಿಡಿಲು–ಇತ್ಯಾದಿಗಳ ಅಧಿದೇವತೆಗಳೂ ಇಂದ್ರನನ್ನು ಆರಾಧಿಸುತ್ತಾರೆ. ಪೂರ್ವದಿಕ್ಕು, ಯಜ್ಞಗಳ ಹವಿಸ್ಸುಗಳನ್ನೊಯ್ಯುವ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ, ನಿರ್ಮಂಥ್ಯ, ವೈದ್ಯುತ, ಶೂರ, ಸಂವರ್ತ, ಲೌಕಿಕ, ಜಾಠರ, ವಿಷಗ, ಕ್ರವ್ಯಾದ, ಕ್ಷೇಮವಂತ, ವೈಷ್ಣವ, ದಸ್ಯುಮಂತ, ಬಲದ, ಶಾಂತ, ಪುಷ್ಟ, ವಿಭಾವಸು, ಜ್ಯೋತಿಷ್ಮಂತ, ಭರತ, ಭದ್ರ, ಸ್ವಿಷ್ಟಕೃತ್, ವಸುಮಂತ, ಕ್ರತು, ಸೋಮ, ಪಿತೃಮಂತ, ಅಂಗಿರಸರೆಂಬ ಇಪ್ಪತ್ತೇಳು ಅಗ್ನಿಗಳು, ಅಗ್ನೀಷೋಮರು, ಇಂದ್ರಾಗ್ನಿಗಳು, ಮಿತ್ರ, ಸವಿತೃ, ಅರ್ಯಮಾ, ಭಗ, ವಿಶ್ವೇದೇವತೆಗಳು, ಸಾಧ್ಯರು, ಗುರು, ಶುಕ್ರ, ವಿಶ್ವಾವಸು, ಚಿತ್ರಸೇನ, ಸುಮನ, ತರುಣ, ಯಜ್ಞಗಳ ಅಧಿದೇವತೆಗಳು, ದಕ್ಷಿಣೆಯ ಅಧಿದೇವತೆಗಳು–ಇವರೆಲ್ಲರೂ ಇಂದ್ರನನ್ನು ಪೂಜಿಸುತ್ತಾರೆ. ಮನೋಹರವಾದ ಸೌಂದರ್ಯದಿಂದ ಕೂಡಿರುವ ಅಪ್ಸರೆಯರೂ, ಗಂಧರ್ವರೂ ನೃತ್ಯ-ವಾದಿತ್ರ-ಗೀತ-ಹಾಸ್ಯಗಳಿಂದಲೂ, ಮಂಗಲಸ್ತುತಿಗಳಿಂದಲೂ, ಇಂದ್ರನ ಕರ್ಮ-ವಿಕ್ರಮಪ್ರಶಂಸೆಗಳಿಂದಲೂ ಇಂದ್ರನನ್ನು ಆರಾಧಿಸುತ್ತಾರೆ. ಇವರೇ ಅಲ್ಲದೇ ಇನ್ನೂ ಅನೇಕಬ್ರಹ್ಮರ್ಷಿಗಳೂ, ರಾಜರ್ಷಿಗಳೂ, ದೇವರ್ಷಿಗಳೂ, ದಿವ್ಯಾಭರಣಗಳನ್ನು ಧರಿಸಿ, ದೇವಮಾಲೆಗಳಿಂದ ಅಲಂಕೃತರಾಗಿ, ವಿಮಾನಾರೂಢರಾಗಿ ಬಂದು ಇಂದ್ರನನ್ನು ಆರಾಧಿಸಿ ಹೊರಟುಹೋಗುತ್ತಾರೆ. ಗುರು-

ಶುಕ್ರರು ಯಾವಾಗಲೂ ಇಂದ್ರನ ಸಮೀಪದಲ್ಲಿಯೇ ಇರುತ್ತಾರೆ. ಬ್ರಹ್ಮ ಸದೃಶರಾದ ಸಪ್ತರ್ಷಿಗಳೂ, ಭೃಗುಮಹರ್ಷಿಯೂ ಚಂದ್ರಪ್ರಭೆಗೆ ಸಮನಾದ ಪ್ರಕಾಶವುಳ್ಳ ದೇವಯಾನಗಳಲ್ಲಿ ಕುಳಿತು ಇಂದ್ರಸಭೆಗೆ ಬಂದು ಅವನನ್ನು ಪೂಜಿಸಿ ಹೊರಟುಹೋಗುತ್ತಾರೆ.

ಅದೇ 'ಪುಷ್ಕರಮಾಲಿನೀ' ಎಂಬ ಇಂದ್ರನ ಸಭಾಭವನ. ನಾನು ಅದನ್ನು ಪ್ರತ್ಯಕ್ಷವಾಗಿ ಕಂಡಿದ್ದೇನೆ. ಯುಧಿಷ್ಠಿರ! ಮುಂದೆ ಯಮರಾಜನ ಸಭಾಭವನದ ವರ್ಣನೆಯನ್ನು ಕೇಳುವವನಾಗು."

ಒನೆಯ ಅಧ್ಯಾಯವು ಮುಗಿಯಿತು.

ಲನೆಯ ಅಧ್ಯಾಯ ಲೋಕಪಾಲಸಭಾಖ್ಯಾನಪರ್ವ(ಮುಂದುವರಿದಿದೆ.)

## ವೈವಸ್ವತನ ಸಭಾವರ್ಣನೆ

"ಯುಧಿಷ್ಠಿರ! ಇನ್ನು ವಿಶ್ವಕರ್ಮನಿರ್ಮಿತವಾದ ಯಮನ ಸಭಾಮಂದಿರದ ಸೊಬಗನ್ನು ವರ್ಣಿಸುವೆನು. ಪುಟಕ್ಕೆ ಹಾಕಿದ ಚಿನ್ನದಂತೆ ಥಳ-ಥಳಿಸುವ ಆ ಸಭಾಮಂದಿರದ ಸುತ್ತಳತೆಯು ನೂರು ಯೋಜನಗಳಿಗಿಂತಲೂ ಹೆಚ್ಚಾಗಿದೆ. ಸೂರ್ಯನಂತೆ ತನ್ನ ತೇಜಸ್ಸಿನಿಂದ ಬೆಳಗುತ್ತಿರುವ ಆ ಸಭೆಯಲ್ಲಿ ಯಾರು ಯಾರಿಗೆ ಏನೇನು ಬೇಕೋ ಅವೆಲ್ಲವೂ ಸಿದ್ಧವಾಗಿರುವುದು. ಆ ಸಭೆಯು ತಾನಿಚ್ಛಿಸುವ ರೂಪವನ್ನು ಪಡೆದುಕೊಳ್ಳಬಲ್ಲುದು. ಮೇಲಾಗಿ ಆ ಸಭೆಯು ಸಮವಾತಾವರಣದಿಂದ ಕೂಡಿರುತ್ತದೆ. ಅಲ್ಲಿ ಕುಳಿತವರಿಗೆ ಹೆಚ್ಚು ಚಳಿಯೂ ಆಗುವುದಿಲ್ಲ.; ಹೆಚ್ಚು ಸೆಕೆಯೂ ಆಗುವುದಿಲ್ಲ.; ಹೃದಯಾನಂದಕರವಾದ ವಾತಾವರಣವಿರುತ್ತದೆ. ಅಲ್ಲಿ ಆಶ್ರಯವನ್ನು ಪಡೆದಿರುವವರಿಗೆ ದುಃಖವಿರುವುದಿಲ್ಲ. ಮುಪ್ಪಿನ ಭಯವಿಲ್ಲ. ಹಸಿವು-ಬಾಯಾರಿಕೆಗಳುಂಟಾಗುವುದಿಲ್ಲ. ಮನಸ್ಸಿಗೆ ಹಿತವಲ್ಲದ ಯಾವುದೊಂದು ಕಾರ್ಯವೂ ಅಲ್ಲಿ ನಡೆಯುವುದಿಲ್ಲ. ಕೆಟ್ಟ ಕೆಲಸಗಳು ನಡೆಯುವುದಿಲ್ಲ. ಅಲ್ಲಿ ಕುಳಿತಿರುವವರಿಗೆ ಯಾವ ವಿಧವಾದ ದುಷ್ಟಯೋಚನೆಗಳೂ ಉಂಟಾಗುವುದಿಲ್ಲ. ದೇವ-ಮಾನವರು ಇಚ್ಛಿಸ ಬಹುದಾದ ಸಕಲವಸ್ತುಗಳೂ ಅಲ್ಲಿ ಸರ್ವದಾ ಸಿದ್ಧವಾಗಿರುತ್ತವೆ. ಸುಖ ಸಾಧಕಗಳಾದ ಸಕಲವಸ್ತುಗಳೂ ಅನೇಕವಿಧವಾದ ಸ್ವಾದುಭಕ್ಷ್ಯಗಳೂ,

ಭೋಜ್ಯ-ಪಾನೀಯಗಳೂ, ಲೇಹ್ಯ-ಚೋಷ್ಯಗಳೂ ಸಿದ್ಧವಾಗಿರುತ್ತವೆ. ಅಲ್ಲಿರುವ ಹೂವಿನ ಮಾಲೆಗಳು ಅತ್ಯಮೋಘವಾದ ಸುಗಂಧವನ್ನು ಹೊರಸೂಸುತ್ತವೆ. ಆ ಸಭಾಭವನದ ಸುತ್ತಲೂ ಇರುವ ವೃಕ್ಷಗಳು ಆಶ್ರಯಪಡೆಯುವವರಿಗೆ ಕೇಳಿದ ಪದಾರ್ಥಗಳನ್ನು ಕೊಡಲು ಸಮರ್ಥವಾಗಿವೆ. ಅವರ ಉಪಯೋಗಕ್ಕಾಗಿ ನಿರ್ಮಲವಾದ ಉಷ್ಣ-ಶೀತೋದಕಗಳು ಸದಾ ಸಿದ್ಧವಾಗಿರುವುವು.

ಆ ಸಭಾಮಂದಿರದಲ್ಲಿ ಶುದ್ಧಾತ್ಮರಾದ ಅನೇಕಸಹಸ್ರರಾಜರ್ಷಿಗಳೂ ಬ್ರಹ್ಮರ್ಷಿಗಳೂ ಸದಾಕಾಲದಲ್ಲಿಯೂ ಉಪಸ್ಥಿತರಾಗಿದ್ದು ವಿವಸ್ವಂತನ ಮಗನಾದ ಯಮರಾಜನ ಸೇವೆಯನ್ನು ಮಾಡುತ್ತಾರೆ. ಅವರಲ್ಲಿ ಸುಪ್ರಸಿದ್ಧರಾದ ಕೆಲವರ ನಾಮಧೇಯಗಳನ್ನು ಹೇಳುವೆನು.; ಕೇಳು, ಯುಧಿಷ್ಠಿರ! ಅವರ ನಾಮಗಳ ಉಚ್ಚಾರಣೆಯೂ ಮತ್ತು ಶ್ರವಣವೂ ಪಾಪಹಾರಿಯಾದುದು.

ಯಯಾತಿ, ನಹುಷ, ಪೂರು, ಮಾಂಧಾತಾ, ಸೋಮಕ, ನೃಗ, ತ್ರಸದಸ್ಯು, ಕೃತವೀರ್ಯ, ಶ್ರುತಶ್ರವಸ, ಅರಿಷ್ಟನೇಮಿ, ಸಿದ್ಧ, ಕೃತವೇಗ, ಕೃತಿ, ನಿಮಿ, ಪ್ರತರ್ದನ, ಶಿಬಿ, ಮತ್ಸ್ಯ, ಪೃಥುಲಾಕ್ಷ, ಬೃಹದ್ರಥ, ವಾರ್ತ, ಮರುತ್ತ, ಕುಶಿಕ, ಸಾಂಕಾಶ್ಯ, ಸಾಂಕೃತಿ, ಧ್ರುವ, ಚತುರಶ್ವ, ಸದಶ್ವೋರ್ಮಿ, ಕಾರ್ತವೀರ್ಯ, ಭರತ, ಸುರಥ, ಸುನೀಥ, ನಿಶಠ, ನಲ, ದಿವೋದಾಸ, ಸುಮನಸ, ಅಂಬರೀಷ, ಭಗೀರಥ, ವ್ಯಶ್ವ, ಸದಶ್ವ, ವಧ್ಯಶ್ವ, ಪೃಥುವೇಗ, ಪೃಥುಶ್ರವಸ, ಪೃಷದಶ್ವ, ವಸುಮನಸ, ಕ್ಷುಪ, ರುಷದ್ರು, ವೃಷಸೇನ, ಪುರುಕುತ್ಸ, ಆರ್ಷ್ಟಿಷೇಣ, ದಿಲೀಪ, ಉಶೀನರ, ಔಶೀನರಿ, ಪುಂಡರೀಕ, ಶರ್ಯಾತಿ, ಶರಭ, ಶುಚಿ, ಅಂಗ, ಅರಿಷ್ಟ, ವೇನ, ದುಷ್ಯಂತ, ಸೃಂಜಯ, ಜಯ, ಭಾಂಗಾಸುರಿ, ಸುನೀಥ, ನಿಷಧ, ವಹೀನರ, ಕರಂಧಮ, ಬಾಹ್ಲಿಕ, ಸುದ್ಯುಮ್ನ, ಮಧು, ಐಲ, ಮರುತ್ತ, ಕಪೋತರೋಮಾ, ತೃಣಕ, ಸಹದೇವ, ಅರ್ಜುನ, ವ್ಯಶ್ವ, ಸಾಶ್ವ, ಕೃಶಾಶ್ವ, ಶಶಬಿಂದು, ದಶರಥ, ಕಕುತ್ಸ್ಥ, ಪ್ರವರ್ಧನ, ಅಲರ್ಕ, ಕಕ್ಷಸೇನ, ಗಯ, ಗೌರಾಶ್ವ, ವೈನ್ಯ, ವಾರಿಸೇನ, ಪುರುಜಿತ್, ಜನಮೇಜಯ, ಪರಶುರಾಮ, ನಾಭಾಗ, ಸಗರ, ಭೂರಿದ್ಯುಮ್ನ, ಮಹಾಶ್ವ, ಪೃಥಾಶ್ವ, ಜನಕ, ಬ್ರಹ್ಮದತ್ತ, ತ್ರಿಗರ್ತ, ಉಪರಿಚರ, ಇಂದ್ರದ್ಯುಮ್ನ, ಭೀಮಜಾನು, ಗೌರಪೃಷ್ಠ, ಅನಘ, ಲಯ,

ಪದ್ಮ, ಮುಚುಕುಂದ, ಪ್ರಸೇನಜಿತ್, ಅರಿಷ್ಟನೇಮಿ, ಪೃಥುಲಾಶ್ವ, ಅಷ್ಟಕ, ಮತ್ಸ್ಯ-ನೀಪ-ಗಯವಂಶಗಳ ನೂರಾರು ರಾಜರೂ, ಧೃತರಾಷ್ಟ್ರರೆಂಬ ಹೆಸರಿನ ನೂರು ಮಂದಿ ಅರಸರೂ, ಜನಮೇಜಯರೆಂಬ ಹೆಸರಿನ ಎಂಬತ್ತು ರಾಜರೂ, ಬ್ರಹ್ಮದತ್ತ ಎಂಬ ಹೆಸರಿನ ನೂರು ರಾಜರೂ, ವೀರೀ ಮತ್ತು ಈರೀ ಎಂಬ ಹೆಸರಿನ ನೂರು ರಾಜರೂ, ಭೀಷ್ಮರೆಂಬ ಹೆಸರಿನ ಇನ್ನೂರು ರಾಜರೂ, ಭೀಮ ಎಂಬ ಹೆಸರಿನ ನೂರು ರಾಜರೂ, ಪ್ರತಿವಿಂಧ್ಯ ಎಂಬ ಹೆಸರಿನ ನೂರು ರಾಜರೂ, ನೂರು ನಾಗರಾಜರೂ, ನೂರು ಹಯವಂಶದ ರಾಜರೂ, ನೂರು ಪಲಾಶಾಧಿಪತಿಗಳೂ, ನೂರು ಕಾಶ-ಕುಶಾಧಿಪತಿಗಳೂ, ರಾಜಾಧಿರಾಜನಾದ ಶಾಂತನು ಮತ್ತು ನಿಮ್ಮ ತಂದೆಯಾದ ಪಾಂಡುರಾಜ, ಉಶಂಗವ, ಶತರಥ, ದೇವರಾಜ, ಜಯದ್ರಥ, ಮಂತ್ರಿಸಮೇತನಾದ ವೃಷದರ್ಭ, ಶಶಬಿಂದು ಎಂಬ ಹೆಸರಿನ ಸಾವಿರಾರು ರಾಜರೂ–ಇವರೇ ಅಲ್ಲದೇ ಅಶ್ವಮೇಧಯಾಗಗಳನ್ನು ಮಾಡಿ, ಸಾವಿರಾರು ಮಂದಿ ಬ್ರಾಹ್ಮಣರಿಗೆ ಭೂರಿದಕ್ಷಿಣೆಗಳನ್ನು ವಿತರಣೆಮಾಡಿದ ನೂರಾರು ರಾಜರೂ ಆ ಸಭೆಯಲ್ಲಿ ಉಪವಿಷ್ಟರಾಗಿ ವೈವಸ್ವತನನ್ನು ಆರಾಧನೆಮಾಡುತ್ತಾರೆ.

ಅಗಸ್ತ್ಯ, ಮತಂಗ, ಕಾಲ, ಮೃತ್ಯು, ಯಜ್ಞಕರ್ತರು, ಸಿದ್ಧರು, ಯೋಗಿಗಳು, ಪಿತೃದೇವತೆಗಳಲ್ಲಿ ಮುಖ್ಯರಾದ ಅಗ್ನಿಷ್ವಾತ್ತರು, ಫೇನಪರು, ಊಷ್ಮಪರು, ಸ್ವಧಾವಂತರು, ಬರ್ಹಿಷದರು ಮತ್ತು ಇತರ ಮೂರ್ತಿಮಂತರಾದ ಪಿತೃದೇವತೆಗಳೂ ಸದಾ ಯಮನ ಸೇವೆಮಾಡುತ್ತಿರುತ್ತಾರೆ.

ಕಾಲಚಕ್ರ (ಸಂವತ್ಸರಾದಿ ಕಾಲವಿಭಾಗಗಳಿಗೆ ಅಭಿಮಾನಿದೇವತೆ), ಹವ್ಯವಾಹನ, ಬಹುಕಷ್ಟಸಾಧ್ಯವಾದ ಕಾರ್ಯಗಳನ್ನು ಮಾಡಿದ ಮಾನವರು, ದಕ್ಷಿಣಾಯನದಲ್ಲಿ ಮರಣಹೊಂದಿದವರು, ಚರಾಚರಪ್ರಾಣಿಗಳ ವಯಸ್ಸಿನ ಗಣನೆಯಲ್ಲಿ ನಿಯುಕ್ತರಾದ ಯಮಕಿಂಕರರು, ಶಿಂಶುಪ, ಪಲಾಶ, ಕಾಶ, ಕುಶ–ಇವುಗಳ ಅಧಿದೇವತೆಗಳು–ಇವರೆಲ್ಲರೂ ಯಮನ ಸಭೆಯಲ್ಲಿ ಉಪವಿಷ್ಟರಾಗಿ ಅವನನ್ನು ಆರಾಧಿಸುತ್ತಾರೆ. ಪಿತೃರಾಜನಾದ ಯಮನ ಸಭಾಮಂದಿರದಲ್ಲಿ ಇನ್ನೂ ಅನೇಕಸಹಸ್ರ ಸಭಾಸದರಿದ್ದಾರೆ. ಆದರೆ ಅವರೆಲ್ಲರ ಹೆಸರುಗಳನ್ನೂ ಅಥವಾ ಅವರು ಮಾಡಿರುವ ಕಾರ್ಯಗಳನ್ನೂ ವರ್ಣಿಸಲು ನನಗೂ ಸಾಧ್ಯವಿಲ್ಲ, ಯುಧಿಷ್ಠಿರ!

ವಿಶಾಲವಾದ ಆ ಸಭಾಮಂದಿರವು ಒಡೆಯನಾದ ಯಮದೇವನ ಇಚ್ಛೆಯನ್ನೇ ಅನುಸರಿಸಿ ಎಲ್ಲಿ ಬೇಕಾದರೂ ಹೋಗಬಲ್ಲುದು. ವಿಶ್ವಕರ್ಮನು ಅನೇಕವರ್ಷಗಳ ಕಾಲ ತಪಶ್ಚರಣೆಮಾಡಿ ಆ ಸಭಾಮಂದಿರವನ್ನು ನಿರ್ಮಿಸಿರುವನು.

ಸಭೆಯು ಸ್ವಪ್ರಕಾಶದಿಂದ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿರುವುದು. ಪುಣ್ಯಕಾರ್ಯಗಳನ್ನು ಮಾಡಿ ಪರಿಶುದ್ಧರಾದ, ಉಗ್ರತಪಸ್ಸುಗಳನ್ನು ಮಾಡಿರುವ, ಸತ್ಯವ್ರತರಾದ, ಶಾಂತರಾದ, ಸುವ್ರತರಾದ ಸಂನ್ಯಾಸಿಗಳು ಆ ಸಭೆಯಲ್ಲಿ ಯಮನ ಸೇವೆಯನ್ನು ಮಾಡುತ್ತಿರುತ್ತಾರೆ. ಅವರು ತೇಜಃಪುಂಜಯುಕ್ತವಾದ ಶರೀರಗಳಿಂದಲೂ–ಶುಭ್ರವಾದ ವಸ್ತ್ರಗಳಿಂದಲೂ ಶೋಭಿಸುತ್ತಾ, ಅಂಗದಗಳನ್ನು ಧರಿಸಿದವರಾಗಿಯೂ, ಜಾಜ್ವಲ್ಯಮಾನವಾದ ಕರ್ಣಕುಂಡಲಗಳನ್ನು ಧರಿಸಿದವರಾಗಿಯೂ, ತಾವು ಮಾಡಿದ ಪುಣ್ಯಕರ್ಮಗಳ ಲಾಂಛನಗಳನ್ನು ಹೊಂದಿದವರಾಗಿಯೂ ಇರುತ್ತಾರೆ.

ಗಂಧರ್ವಾಪ್ಸರೆಯರು ಆ ಸಭಾಮಂದಿರದ ಸುತ್ತಲೂ ನೆರೆದು ಹಾಡುಗಾರಿಕೆಯಿಂದಲೂ, ವೀಣಾದಿ ವಾದ್ಯವಿಶೇಷಗಳಿಂದಲೂ, ಹಾಸ್ಯ-ನೃತ್ಯಗಳಿಂದಲೂ ಯಮದೇವನನ್ನು ತೃಪ್ತಿಪಡಿಸುತ್ತಾರೆ. ದೇವಪರಿಮಳವೂ, ಸುಮಧುರಗಾನವೂ, ದೇವಸುಮಮಾಲೆಗಳೂ ಆ ಸಭಾಭವನಕ್ಕೆ ಅಪರಿಮಿತವಾದ ಸೊಬಗನ್ನು ಕೊಡುತ್ತವೆ.

ಸುಂದರವಾದ ರೂಪಗಳನ್ನು ಧರಿಸಿರುವ, ಜಿತೇಂದ್ರಿಯರಾದ ಕೋಟ್ಯನುಕೋಟಿ ಧರ್ಮಾತ್ಮರು ಅನುದಿನವೂ ಯಮಧರ್ಮನ ಉಪಾಸನೆಯನ್ನು ಮಾಡುತ್ತಿರುತ್ತಾರೆ. ಪಿತೃರಾಜನಾದ ಯಮಧರ್ಮನ ಸಭೆಯು ಇಂತಹ ವಿಶಿಷ್ಟವಾದ ಸೌಂದರ್ಯದಿಂದ ಕೂಡಿರುವುದು. ಮುಂದೆ ನಾನು ವರುಣನ ಪುಷ್ಕರಮಾಲಿನೀಸಭೆಯ ಸೊಬಗನ್ನು ವರ್ಣಿಸುವೆನು ಕೇಳು, ಯುಧಿಷ್ಠಿರ!"

ಲನೆಯ ಅಧ್ಯಾಯವು ಮುಗಿಯಿತು.

೯ನೆಯ ಅಧ್ಯಾಯ ಲೋಕಪಾಲಸಭಾಖ್ಯಾನಪರ್ವ(ಮುಂದುವರಿದಿದೆ.)

## ವರುಣಸಭಾವರ್ಣನೆ

ಪಾರಿಕ್ಷಿತ! ವರುಣದೇವನ ಸಭೆಗೂ 'ಪುಷ್ಕರಮಾಲಿನೀ' ಎಂದೇ

ಹೆಸರು. ನಾರದರು ವರುಣನ ಸಭೆಯ ಸೊಬಗನ್ನು ವರ್ಣಿಸಲು ಮೊದಲಿಟ್ಟರು.

"ಯುಧಿಷ್ಠಿರ! ವರುಣನ ಸಭೆಯ ಸೊಬಗನ್ನು ಏನೆಂದು ವರ್ಣಿಸಲಿ? ಕಾಂತಿಯಲ್ಲಿ ಅದಕ್ಕೆ ಸಮಾನವಾದ ಸಭೆಯು ಮತ್ತೊಂದಿಲ್ಲವೆಂದೇ ಹೇಳ ಬಹುದು. ಯಮನ ಸಭೆಯಂತೆಯೇ ಅದರ ಉದ್ದ-ಅಗಲ ಮತ್ತು ಎತ್ತರಗಳಿವೆ. ಅದನ್ನೂ ದೇವಶಿಲ್ಪಿಯಾದ ವಿಶ್ವಕರ್ಮನೇ ನಿರ್ಮಾಣಮಾಡಿರುವನು. ಅದರ ಮತ್ತೊಂದು ವೈಶಿಷ್ಟ್ಯವೇನೆಂದರೆ : ಆ ಮಹಾಸಭೆಯನ್ನು ವಿಶ್ವಕರ್ಮನು ನೀರಿನೊಳಗೆ ನಿರ್ಮಿಸಿದ್ದಾನೆ. ಆ ಸಭಾಮಂದಿರದ ಸುತ್ತಲೂ ನವರತ್ನಗಳಿಂದ ನಿರ್ಮಿತವಾದ ಫಲ-ಪುಷ್ಪಭರಿತವಾದ ದೇವವೃಕ್ಷಗಳಿವೆ. ನೀಲಿ, ಹಳದಿ, ಕಪ್ಪು, ಬಿಳುಪು ಮತ್ತು ಕೆಂಪುಬಣ್ಣಗಳಿಂದ ಪರಿಶೋಭಿಸುತ್ತಿರುವ ಲತಾಗುಲ್ಮಗಳು ಆ ಮಂದಿರದ ಸುತ್ತಲೂ ಇವೆ. ಆ ಲತಾಕುಂಜಗಳಲ್ಲಿ ಸಾವಿರಾರು ಜಾತಿಗಳ ನಾನಾವಿಧವಾದ ಪಕ್ಷಿಗಳು ವಾಸಮಾಡುತ್ತಿದ್ದು, ಸರ್ವಕಾಲಗಳಲ್ಲಿಯೂ ಇಂಪಾದ ಧ್ವನಿಗಳನ್ನು ಮಾಡುತ್ತಿರುತ್ತವೆ. ಅಲ್ಲಿಯ ವಾತಾವರಣವು ಸಮಶೀತೋಷ್ಣಗಳಿಂದ ಕೂಡಿರುವುದಲ್ಲದೇ ಹೆಚ್ಚು ಆಹ್ಲಾದಕರವೂ ಆಗಿರುವುದು. ಶ್ವೇತವರ್ಣದ ಆ ಭವ್ಯಭವನದಲ್ಲಿ ನೂರಾರು ಸುಂದರವಾದ ಕೊಠಡಿಗಳೂ, ಆ ಕೊಠಡಿಗಳಲ್ಲಿ ಸುಂದರವಾದ ದಿವ್ಯಾಸನಗಳೂ ಇವೆ. ಸಭಾಮಂದಿರದ ನಡುಭಾಗದಲ್ಲಿರುವ ರತ್ನಸಿಂಹಾಸನದಲ್ಲಿ ವರುಣನು ದಿವ್ಯಾಂಬರಧರನಾಗಿ, ದಿವ್ಯಾಭರಣಗಳನ್ನು ಧರಿಸಿ ವಾರುಣಿಯ ಸಮೇತನಾಗಿ ಕುಳಿತುಕೊಳ್ಳುತ್ತಾನೆ. ದಿವ್ಯಮಾಲೆಗಳನ್ನು ಧರಿಸಿರುವ ದಿವ್ಯಗಂಧಾನುಲೇಪ ಮಾಡಿಕೊಂಡಿರುವ ಆದಿತ್ಯರು ಜಲಾಧಿಪತಿಯಾದ ವರುಣನ ಸೇವೆಯಲ್ಲಿ ನಿರತರಾಗಿರುತ್ತಾರೆ. ವಾಸುಕಿ, ತಕ್ಷಕ, ಐರಾವತ, ಕೃಷ್ಣ, ಲೋಹಿತ, ಪದ್ಮ, ಚಿತ್ರ, ಕಂಬಲ, ಅಶ್ವತರ, ಧೃತರಾಷ್ಟ್ರ, ಬಲಾಹಕ, ಮಣಿಮಂತ, ಕುಂಡಧಾರ, ಕರ್ಕೋಟಕ, ಧನಂಜಯ, ಪಾಣಿಮಂತ, ಪ್ರಹ್ಲಾದ, ಮೂಷಿಕಾದ, ಜನಮೇಜಯ–ಮುಂತಾದ ಸರ್ಪರಾಜರು ಫಣಾಮಂಡಲಗಳಿಂದ ವಿಭೂಷಿತರಾಗಿ ಸದಾಕಾಲದಲ್ಲಿಯೂ ವರುಣನ ಸಾನ್ನಿಧ್ಯದಲ್ಲಿರುತ್ತಾರೆ.

ವಿರೋಚನನ ಮಗನಾದ ಬಲಿ, ನರಕಾಸುರ, ಪ್ರಹ್ಲಾದ, ವಿಪ್ರಚಿತ್ತಿ,

ಕಾಲಖಂಜ ಎಂಬ ರಾಕ್ಷಸರೂ–ಸುಹನು, ದುರ್ಮುಖ, ಶಂಖ, ಸುಮನಸ, ಸುಮತಿ, ಘಟೋದರ, ಮಹಾಪಾರ್ಶ್ವ, ಕ್ರಥನ, ಪಿಠರ, ವಿಶ್ವರೂಪ, ಸ್ವರೂಪ, ಮಹಾಶಿರಸ, ದಶಗ್ರೀವ, ವಾಲೀ, ಮೇಘವಾನಸ, ದಶಾವರ, ಟಿಟ್ಟಿಭ, ವಿಟಭೂತ, ಸಂಹ್ರಾದ, ಇಂದ್ರತಾಪನ–ಇವರೇ ಮೊದಲಾದ ದೈತ್ಯ-ದಾನವನಾಯಕರೂ ಕರ್ಣಕುಂಡಲಗಳನ್ನೂ, ಮಾಲೆಗಳನ್ನೂ, ದಿವ್ಯಾಂಬರಗಳನ್ನೂ ಧರಿಸಿದವರಾಗಿ ಪಾಶಾಯುಧನಾದ ವರುಣನ ಸಭಾ ಮಂದಿರದಲ್ಲಿರುತ್ತಾರೆ.

ನಾಲ್ಕು ಸಮುದ್ರಗಳು, ಭಾಗೀರಥೀ, ಕಾಲಿಂದೀ, ವಿದಿಶಾ, ವೇಣಾ, ನರ್ಮದಾ, ವೇಗವಾಹಿನೀ, ವಿಪಾಶಾ, ಶತದ್ರು, ಚಂದ್ರಭಾಗ, ಸರಸ್ವತೀ, ಇರಾವತೀ, ವಿತಸ್ತಾ, ಸಿಂಧು, ದೇವನದೀ, ಗೋದಾವರೀ, ಕೃಷ್ಣವೇಣಾ, ಕಾವೇರಿ, ಕಿಂಪುನಾ, ವಿಶಲ್ಯಾ, ವೈತರಣೀ, ತೃತೀಯಾ, ಜ್ಯೇಷ್ಠಿಲಾ, ಮಹಾನದವೆಂದು ಪ್ರಸಿದ್ಧಿಯಾದ ಶೋಣ, ಮಹಾನದೀ, ಚರ್ಮಣ್ವತೀ, ಪರ್ಣಾಶಾ, ಸರಯೂ, ವಾರವತ್ಯಾ, ಲಾಂಗಲೀ, ಕರತೋಯಾ, ಆತ್ರೇಯೀ, ಲೌಹಿತ್ಯ, ಲಂಘತೀ, ಗೋಮತೀ, ಸಂಧ್ಯಾ, ತ್ರಿಸ್ರೋತಸೀ–ಮುಂತಾದ ಅನೇಕ ನದೀ-ನದಗಳೂ, ತೀರ್ಥ-ತಟಾಕಗಳೂ, ದಶದಿಕ್ಕುಗಳೂ, ಭೂಮಿಯೂ, ಪರ್ವತಗಳೂ ದಿವ್ಯಶರೀರಗಳನ್ನು ಧರಿಸಿ ವರುಣನನ್ನು ಆರಾಧಿಸುತ್ತಿರುತ್ತಾರೆ.

ಸಕಲಜಲಚರಪ್ರಾಣಿಗಳೂ ವರುಣನ ಸೇವೆಯಲ್ಲಿ ನಿರತವಾಗಿರುತ್ತವೆ. ಗಂಧರ್ವರೂ, ಅಪ್ಸರೆಯರೂ ತಮ್ಮ ದಿವ್ಯಗಾನ-ನಾಟ್ಯಾದಿಗಳಿಂದ ವರುಣನ ಸೇವೆಯನ್ನು ಮಾಡುತ್ತಾರೆ. ಸುವರ್ಣಶೃಂಗಗಳನ್ನು ಧರಿಸಿರುವ ಅನೇಕ ಪರ್ವತಗಳ ಅಧಿದೇವತೆಗಳು ವರುಣನ ಸಭಾಮಂದಿರದಲ್ಲಿ ಕುಳಿತು, ಅವನ ಗುಣಕಥನಗಳನ್ನು ಮಾಡುತ್ತಿರುತ್ತಾರೆ. ವರುಣನ ಮಂತ್ರಿಯಾದ ಸುನಾಭನು ಪುತ್ರ-ಪೌತ್ರಸಮೇತನಾಗಿ ಮತ್ತು 'ಗೋ' ಎಂಬ ಪುಷ್ಕರತೀರ್ಥಸಮೇತವಾಗಿ ಯಾವಾಗಲೂ ವರುಣನ ಆಜ್ಞಾಪಾಲಕನಾಗಿರುತ್ತಾನೆ.

ಅವರೆಲ್ಲರೂ ಸಶರೀರರಾಗಿ ಬಂದು ವರುಣನನ್ನು ಆರಾಧಿಸುತ್ತಿರುತ್ತಾರೆ.

ಯುಧಿಷ್ಠಿರ! ನಾನು ಲೋಕಸಂಚಾರವನ್ನು ಮಾಡುತ್ತಿರುವಾಗ ವರುಣನ ದಿವ್ಯವಾದ ಭವ್ಯಮಂದಿರವನ್ನು ನೋಡಿ ಆನಂದಿಸಿದೆನು. ಮುಂದೆ ಕುಬೇರನ ಸಭಾಭವನದ ಸೊಬಗನ್ನು ವರ್ಣಿಸುವೆನು, ಕೇಳು."

೯ನೆಯ ಅಧ್ಯಾಯವು ಮುಗಿಯಿತು.

೧೦ನೆಯ ಅಧ್ಯಾಯ ಲೋಕಪಾಲಸಭಾಖ್ಯಾನಪರ್ವ(ಮುಂದುವರಿದಿದೆ.)

## ಕುಬೇರಸಭಾವರ್ಣನೆ

"ಧರ್ಮಜ! ಕುಬೇರನ ಸಭೆಯ ಸೊಬಗನ್ನು ಹೇಳುವೆನು ಕೇಳು. ಅತ್ಯಂತಜಾಜ್ವಲ್ಯಮಾನವಾಗಿರುವ ಆ ಭವನವು ನೂರು ಯೋಜನಗಳಷ್ಟು ಉದ್ದವಾಗಿಯೂ, ಎಪ್ಪತ್ತು ಯೋಜನಗಳಷ್ಟು ಅಗಲವಾಗಿಯೂ ಇರುವುದು. ಆ ಸಭೆಯನ್ನು ಕುಬೇರನು ತನ್ನ ತಪಃಪ್ರಭಾವದಿಂದ ನಿರ್ಮಿಸಿರುವನು. ರಮ್ಯವಾದ, ಕಾಂತಿಯಲ್ಲಿ ಕೈಲಾಸಶಿಖರಕ್ಕೆ ಸಮಾನವಾಗಿರುವ ಆ ಭವನವು ಚಂದ್ರನ ಬೆಳಕನ್ನೂ ನಿಸ್ತೇಜವನ್ನಾಗಿ ಮಾಡಿಬಿಡುತ್ತದೆ. ಆ ಸಭಾಭವನವನ್ನು ಗುಹ್ಯಕರು ಹೊತ್ತು ನಿಂತಿದ್ದಾರೆ. ಆ ಭವನವು ಪ್ರೇಕ್ಷಕರಿಗೆ–ನಿರಾಲಂಬವಾಗಿ, ಆಕಾಶದ ಮಧ್ಯದಲ್ಲಿ ನಿರ್ಮಿಸಿರುವಂತೆ–ಕಾಣುತ್ತದೆ. ಸ್ವರ್ಣಮಯ ಪ್ರಾಸಾದಗಳಿಂದ ಆ ಸಭೆಯು ಹೆಚ್ಚು ಸುಂದರವಾಗಿ ಕಾಣುತ್ತದೆ. ನವರತ್ನಗಳಿಂದ ಕೂಡಿದ ಭಿತ್ತಿಗಳಿಂದಲೇ ನಿರ್ಮಿತವಾಗಿರುವ ಆ ಮಹಾಸಭೆಯು ದಿವ್ಯಗಂಧವನ್ನು ಯಾವಾಗಲೂ ಹೊರಸೂಸುತ್ತಿರುತ್ತದೆ. ಬಿಳಿಯ ಮೋಡಗಳ ಕಾಂತಿಯಿಂದ ಕೂಡಿರುವ ಆ ದಿವ್ಯಭವನವು ಪ್ರೇಕ್ಷಕರಿಗೆ ಆಕಾಶದಲ್ಲಿ ಚಲಿಸುತ್ತಿರುವಂತೆಯೇ ಕಾಣುತ್ತದೆ. ಸ್ವರ್ಣಮಯವಾಗಿರುವ ಅದರ ಪ್ರಾಸಾದಗಳು ಮಿಂಚಿನ ಪಜ್ಕ್ತಿಗಳಿಂದ ಕೂಡಿರುವಂತೆ ಭ್ರಾಂತಿಯನ್ನುಂಟುಮಾಡುತ್ತವೆ.

ಆ ಸಭಾಭವನದಲ್ಲಿ ರತ್ನಗಂಬಳಿಯಿಂದ ಕೂಡಿದ, ಸೂರ್ಯನಿಗೆ ಸಮಾನವಾದ ಪ್ರಭೆಯುಳ್ಳ ದಿವ್ಯವಾದ ಪಾದೋಪಧಾನವುಳ್ಳ ಸಿಂಹಾಸನ ದಲ್ಲಿ ಕುಬೇರನು ದಿವ್ಯಾಂಬರಗಳನ್ನೂ, ಅಂಗದ-ಕೇಯೂರಗಳನ್ನೂ ಥಳ-ಥಳಿಸುವ ಕರ್ಣಕುಂಡಲಗಳನ್ನೂ ಧರಿಸಿದವನಾಗಿ ಸಹಸ್ರಪತ್ನಿಯರಿಂದ ಸಮೇತನಾಗಿ ಕುಳಿತುಕೊಳ್ಳುತ್ತಾನೆ.

ವಾಯುದೇವನು ಎತ್ತರವಾದ ಮಂದಾರವೃಕ್ಷಗಳಿರುವ ಕಾನನಗಳಲ್ಲಿಯೂ ಸೌಗಂಧಿಕಪುಷ್ಪಗಳಿರುವ ವನಗಳಲ್ಲಿಯೂ, ತಾಮರಸಗಳಿರುವ 'ಅಲಕಾ' ಎಂಬ ದೇವನದಿಯ ದಂಡೆಯಲ್ಲಿಯೂ, ನಂದನವನದಲ್ಲಿಯೂ ಸಂಚರಿಸಿ, ಅಲ್ಲಿನ ಸೌರಭಗಳೆಲ್ಲವನ್ನೂ ಹೊತ್ತು ಕುಬೇರನ ಬಳಿಗೆ ಬಂದು ಸೇವೆಮಾಡುತ್ತಿರುತ್ತಾನೆ. ಗಂಧರ್ವರಿಂದಲೂ, ಅಪ್ಸರೆಯರಿಂದಲೂ ಕೂಡಿರುವ ದೇವತೆಗಳು ಆ ಸಭಾಭವನದಲ್ಲಿ ಏಕಕಂಠದಿಂದ ಕುಬೇರನನ್ನು ಸ್ತೋತ್ರಮಾಡುತ್ತಿರುತ್ತಾರೆ.

ನೃತ್ಯ-ಗಾನವಿಶಾರದೆಯರಾದ ಮಿಶ್ರಕೇಶೀ, ರಂಭಾ, ಚಿತ್ರಸೇನಾ, ಶುಚಿಸ್ಮಿತಾ, ಚಾರುನೇತ್ರಾ, ಘೃತಾಚೀ, ಮೇನಕಾ, ಪುಂಜಿಕಸ್ಥಲಾ, ವಿಶ್ವಾಚೀ, ಸಹಜನ್ಯಾ, ಪ್ರಮ್ಲೋಚಾ, ಉರ್ವಶೀ, ಇರಾ, ವರ್ಗಾ, ಸೌರಭೇಯೀ, ಸಮೀಚೀ, ಬುದ್ಬುದಾ, ಲತಾ–ಇವರೇ ಮುಂತಾದ ಸಾವಿರಾರು ಅಪ್ಸರೆಯರು ಕುಬೇರನ ಸೇವೆಯಲ್ಲಿ ನಿರತರಾಗಿರುತ್ತಾರೆ.

ಆ ಭವನವು ಯಾವಾಗಲೂ ನೃತ್ಯಪದವಿನ್ಯಾಸಗಳ ಧ್ವನಿಗಳಿಂದಲೂ, ಸುಮಧುರಗಾನಗಳಿಂದಲೂ, ವೀಣಾ-ಮೃದಂಗಾದಿ ವಾದ್ಯಗಳ ಧ್ವನಿಗಳಿಂದಲೂ ತುಂಬಿಹೋಗಿರುತ್ತದೆ.

ಕಿನ್ನರರೆಂಬ ಗಂಧರ್ವರೂ, ನರರೆಂಬ ಗಂಧರ್ವರೂ, ಮಣಿಭದ್ರ, ಧನದ, ಶ್ವೇತಭದ್ರ, ಗುಹ್ಯಕ, ಕಶೇರಕ, ಗಂಡಕಂಡೂ, ಪ್ರದ್ಯೋತ, ಕುಸ್ತುಂಬುರು, ಪಿಶಾಚ, ಗಜಕರ್ಣ, ವಿಶಾಲಕ, ವರಾಹಕರ್ಣ, ತಾಮ್ರೋಷ್ಠ, ಫಲಕಕ್ಷ, ಫಲೋದಕ, ಹಂಸಚೂಡ, ಶಿಖಾವರ್ತ, ಹೇಮನೇತ್ರ, ವಿಭೀಷಣ, ಪುಷ್ಪಾನನ, ಪಿಂಗಲಕ, ಶೋಣಿತೋದ, ಪ್ರವಾಲಕ, ವೃಕ್ಷವಾಸೀ, ಅನಿಕೇತ, ಚೀರವಾಸಸ–ಇವರೇ ಮುಂತಾದ ಅಸಂಖ್ಯಾತರಾದ ಯಕ್ಷರೂ ಕುಬೇರನನ್ನು ಸೇವಿಸಲು ಆ ಮಹಾಸಭೆಗೆ ಅನುದಿನವೂ ಹೋಗುತ್ತಾರೆ.

ನಿಧಿಯ ರೂಪದಲ್ಲಿ ಮಹಾಲಕ್ಷ್ಮಿಯೂ ಮತ್ತು ಕುಬೇರನ ಮಗನಾದ ನಲಕೂಬರನೂ ಅಲ್ಲಿಯೇ ಇರುತ್ತಾರೆ. ನಾನು ಮತ್ತು ನನ್ನಂತೆಯೇ ಇರುವ ಇತರ ಋಷಿ-ಮಹರ್ಷಿಗಳೆಲ್ಲರೂ ಕುಬೇರನ ಸಭೆಗೆ ಆಗಿಂದಾಗ್ಗೆ

ಹೋಗುತ್ತಿರುತ್ತೇವೆ. ಅನೇಕ ಬ್ರಹ್ಮರ್ಷಿಗಳೂ, ದೇವರ್ಷಿಗಳೂ ಅಲ್ಲಿರುತ್ತಾರೆ. ಅನೇಕರಾಕ್ಷಸರೂ, ಗಂಧರ್ವರೂ ಕುಬೇರನ ಸೇವೆಯಲ್ಲಿ ನಿರತರಾಗಿರುತ್ತಾರೆ.

ಉಮಾಪತಿಯಾದ, ತ್ರಿಣೇತ್ರನಾದ, ತ್ರಿಶೂಲಧಾರಿಯಾದ, ಭಗನೇತ್ರನಾಶಕನಾದ ಪರಮೇಶ್ವರನು–ಕುಬ್ಜರಿಂದಲೂ, ವಿಕಟರಿಂದಲೂ, ರಕ್ತನೇತ್ರರಿಂದಲೂ, ಮೇದೋಮಾಂಸಭಕ್ಷಕರಿಂದಲೂ, ಉಗ್ರರಿಂದಲೂ ಕೂಡಿರುವ ಭೂತಸಂಘಾತದಿಂದ ಪರಿವೃತನಾಗಿ, ಪಾರ್ವತೀಸಮೇತನಾಗಿ ಕುಬೇರನ ಸಮೀಪದಲ್ಲಿರುತ್ತಾನೆ.

ವಿಶ್ವಾವಸು, ಹಾಹಾ, ಹೂಹೂ, ತುಂಬುರು, ಪರ್ವತ, ಶೈಲೂಷ, ಗೀತಜ್ಞನಾದ ಚಿತ್ರಸೇನ, ಚಿತ್ರರಥ–ಇವರೇ ಮುಂತಾದ ಸಾವಿರಾರು ಗಂಧರ್ವರು ದಿವ್ಯಾಂಬರಧರರಾಗಿ ಕುಬೇರನ ಸೇವೆಯಲ್ಲಿ ಆದರದಿಂದ ನಿರತರಾಗಿರುತ್ತಾರೆ.

ವಿದ್ಯಾಧರರಿಗೆ ಅಧಿಪತಿಯಾದ ಚಕ್ರಧರ್ಮನು ಅನುಜರಿಂದಲೂ, ಬಂಧು-ಮಿತ್ರರಿಂದಲೂ ಕೂಡಿದವನಾಗಿ ಕುಬೇರನ ಸೇವೆಮಾಡುತ್ತಾನೆ. ಭಗದತ್ತನೇ ಮೊದಲಾದ ರಾಜರೂ ಅಲ್ಲಿ ಕುಬೇರನ ಸೇವೆಯನ್ನು ಮಾಡುತ್ತಿರುತ್ತಾರೆ.

ಕಿನ್ನರಾಧಿಪತಿಯಾದ ಭಗದತ್ತನೂ, ಕಿಂಪುರುಷರ ಅಧಿಪತಿಯಾದ ದ್ರುಮನೂ, ರಾಕ್ಷಸರ ನಾಯಕರೂ, ಮಹೇಂದ್ರನೂ, ಗಂಧಮಾದನನೂ, ತಮ್ಮ-ತಮ್ಮ ಪರಿವಾರಗಳೊಡನೆ ಕುಬೇರನನ್ನು ಸೇವಿಸುತ್ತಿರುತ್ತಾರೆ.

ಧರ್ಮಾತ್ಮನಾದ ವಿಭೀಷಣನೂ ತನ್ನ ಹಿರಿಯಣ್ಣನಾದ ಕುಬೇರನ ಸೇವೆಮಾಡುತ್ತಿರುತ್ತಾನೆ.

ಹಿಮವಂತ, ಪಾರಿಯಾತ್ರ, ವಿಂಧ್ಯ, ಕೈಲಾಸ, ಮಂದರ, ಮಲಯ, ದರ್ದುರ, ಮಹೇಂದ್ರ, ಗಂಧಮಾದನ, ಇಂದ್ರಕೀಲ, ಸುನಾಭ, ಪೂರ್ವ ತೀರದ ಪರ್ವತಗಳು ಮತ್ತು ಪಶ್ಚಿಮತೀರದ ಪರ್ವತಗಳು, ಇವುಗಳಲ್ಲದೇ ಇನ್ನೂ ನೂರಾರು ಪರ್ವತಗಳ ಅಧಿದೇವತೆಗಳು–ಮೇರುಪರ್ವತದ ಅಧಿ

ದೇವತೆಯನ್ನು ಮುಂದುಮಾಡಿಕೊಂಡು ಧನಾಧಿಪತಿಯಾದ ಕುಬೇರನನ್ನು ಸೇವಿಸುತ್ತಿರುತ್ತಾರೆ.

ಭಗವಾನ್ ನಂದೀಶ್ವರ, ಮಹಾಕಾಲ, ಶಂಕುಕರ್ಣಪ್ರಮುಖರಾದ ಪಾರಿಷದರು, ಕಾಷ್ಠ, ಕುಟೀಮುಖ, ದಂತೀ, ವಿಜಯ–ಇವರೆಲ್ಲರೂ ಕುಬೇರನ ಸೇವೆಯಲ್ಲಿ ನಿರತರಾಗಿರುತ್ತಾರೆ. ಬಿಳಿಯ ವೃಷಭವು ಯಾವಾಗಲೂ ಆ ಸುಂದರಭವನದ ಸಮೀಪದಲ್ಲಿ ಗರ್ಜನೆಯನ್ನು ಮಾಡುತ್ತಿರುತ್ತದೆ. ಇವರುಗಳಲ್ಲದೇ ಇನ್ನೂ ಅನೇಕರಾಕ್ಷಸರೂ, ಪಿಶಾಚರೂ ಕುಬೇರನ ಸೇವೆಯನ್ನು ಮಾಡುತ್ತಿರುತ್ತಾರೆ.

ಧನಾಧಿಪನಾದ ಕುಬೇರನು ಭೂತಗಣಗಳಿಂದ ಪರಿವೃತನಾದ, ತ್ರಿಲೋಕಪಾವನನಾದ, ಬಹುರೂಪನಾದ, ಉಮಾಪತಿಯಾದ, ದೇವದೇವನಾದ ಶಿವನನ್ನು ಮೊದಲು ನಮಸ್ಕರಿಸಿ, ಅವನ ಅನುಜ್ಞೆಯನ್ನು ಪಡೆದು ಸಿಂಹಾಸನದಲ್ಲಿ ಕುಳಿತುಕೊಳ್ಳುತ್ತಾನೆ. ಕುಬೇರನ ಪರಮಮಿತ್ರನಾದ ಶಂಕರನು ಪದೇ-ಪದೇ ಕುಬೇರನ ಸಭೆಗೆ ಬರುತ್ತಿರುತ್ತಾನೆ.

ನವನಿಧಿಗಳಿಗೂ ರತ್ನಪ್ರಾಯಗಳಾದ ಶಂಖ, ಪದ್ಮ ಎಂಬ ಮಹಾನಿಧಿಗಳ ಅಧಿದೇವತೆಗಳು ಇತರ ಅನೇಕಮಹಾನಿಧಿಗಳ ಅಧಿದೇವತೆಗಳೊಡನೆ ಕುಬೇರನನ್ನು ಸೇವಿಸುತ್ತಿರುತ್ತಾರೆ.

ಅಂತಹ ಬಹುರಮ್ಯವಾದ, ಆಕಾಶದಲ್ಲಿ ಸಂಚರಿಸಲು ಸಾಮರ್ಥ್ಯವಿರುವ ಕುಬೇರನ ಸಭೆಯನ್ನು ನಾನು ನೋಡಿದ್ದೇನೆ. ಮುಂದೆ ನಾನು ಪಿತಾಮಹನ ಸಭೆಯ ಸೊಬಗನ್ನು ವರ್ಣಿಸುತ್ತೇನೆ. ಏಕಾಗ್ರಚಿತ್ತನಾಗಿ ಕೇಳು, ಯುಧಿಷ್ಠಿರ!"

೧೦ನೆಯ ಅಧ್ಯಾಯವು ಮುಗಿಯಿತು.

೧೧ನೆಯ ಅಧ್ಯಾಯ ಲೋಕಪಾಲಸಭಾಖ್ಯಾನಪರ್ವ (ಮುಂದುವರಿದಿದೆ.)

## ಬ್ರಹ್ಮಸಭಾವರ್ಣನೆ

"ಧರ್ಮಜ! ಬ್ರಹ್ಮಸಭೆಯ ಸೊಬಗನ್ನು ಹೇಳುವೆನು ; ಕೇಳು. ಬ್ರಹ್ಮಸಭೆಯ ಸ್ವರೂಪವು ಇಂತಹುದೆಂದು ನಿಶ್ಚಯಮಾಡಿ ಹೇಳಲು ಯಾರಿಂದಲೂ ಸಾಧ್ಯವೇ ಇಲ್ಲ.

ಕೃತಯುಗದಲ್ಲಿ ಸೂರ್ಯದೇವನು ಒಮ್ಮೆ ಭೂಲೋಕಕ್ಕಿಳಿದನು. ಅವನು ಬ್ರಹ್ಮಸಭೆಯ ಸೊಬಗನ್ನು ನೋಡಿ ಆನಂದಭರಿತನಾಗಿ, ಭೂಲೋಕದಲ್ಲಿ ನೋಡುವುದೇನಿದೆಯೆಂಬುದನ್ನು ಪರಿಶೀಲಿಸುವ ಸಲುವಾಗಿ ಮನುಷ್ಯ ರೂಪಿನಿಂದ ಭೂಮಿಯನ್ನು ಸುತ್ತುತ್ತಿದ್ದನು. ಆ ಸಂದರ್ಭದಲ್ಲಿ ಸೂರ್ಯ ದೇವನು ನನ್ನೊಡನೆ ಅಪ್ರಮೇಯವಾದ, ಅನಿರ್ದೇಶ್ಯವಾದ, ಸರ್ವಭೂತಗಳ ಮನಸ್ಸುಗಳನ್ನೂ ಮೋಹಗೊಳಿಸುವ, ಬ್ರಹ್ಮನ ಮನಃಸಂಕಲ್ಪಮಾತ್ರದಿಂದಲೇ ನಿರ್ಮಿತವಾದ ಆ ಮಹಾಸಭೆಯ ವಿಷಯವನ್ನು ತಿಳಿಸಿದನು.

ಧರ್ಮಜ! ಬ್ರಹ್ಮಸಭೆಯ ಸೊಬಗನ್ನು ಸೂರ್ಯನಿಂದ ಕೇಳಿ ಆನಂದ ಭರಿತನಾದ ನಾನು ಸೂರ್ಯದೇವನನ್ನು ಪ್ರಶ್ನಿಸಿದೆನು.: "ಸೂರ್ಯದೇವ! ನನಗೂ ಬ್ರಹ್ಮಸಭೆಯನ್ನು ನೋಡಲು ಬಹಳ ಆಸೆಯುಂಟಾಗಿದೆ. ಯಾವ ವಿಧವಾದ ತಪಸ್ಸಿನಿಂದ ಅಥವಾ ಜ್ಯೋತಿಷ್ಟೋಮಾದಿ ಯಜ್ಞ-ಯಾಗಾದಿಗಳಿಂದ, ಓಷಧಿಗಳ ಪ್ರಭಾವದಿಂದ ಆ ಮಹಾಸಭೆಯನ್ನು ಪ್ರವೇಶಿಸಬಹುದು?"

ನನ್ನ ಮಾತನ್ನು ಕೇಳಿ ಸಹಸ್ರಾಂಶುವಾದ ಪಾಪಹರನಾದ ಸೂರ್ಯದೇವನು ಹೇಳಿದನು : "ಒಂದು ಸಾವಿರ ವರ್ಷಗಳ ಕಾಲ ಅನನ್ಯಚಿತ್ತನಾಗಿ ಬ್ರಹ್ಮೋಪಾಸನೆಯನ್ನು ಮಾಡಿದಲ್ಲಿ ನೀನು ಬ್ರಹ್ಮಸಭೆಯನ್ನು ಪ್ರವೇಶಮಾಡಬಹುದು."

ಸೂರ್ಯನ ವಚನದಂತೆ ಒಡನೆಯೇ ನಾನು ಹಿಮವತ್ಪರ್ವತಕ್ಕೆ ಹೋಗಿ, ಒಂದು ಸಾವಿರ ವರ್ಷಗಳ ಕಾಲ ತದೇಕಚಿತ್ತನಾಗಿ ಬ್ರಹ್ಮೋಪಾಸನೆಯನ್ನು ಮಾಡಿದೆನು. ಉಪಾಸನೆಯು ಮುಗಿಯುತ್ತಿದ್ದಂತೆಯೇ ಭಗವಾನ್ ಸೂರ್ಯದೇವನು ನನ್ನನ್ನು ಬ್ರಹ್ಮಸಭೆಗೆ ಕೊಂಡೊಯ್ದನು."

ನಾರದರಿಗೆ ಬ್ರಹ್ಮಸಭೆಯನ್ನು ನೆನೆದೊಡನೆಯೇ ಶರೀರವು ಪುಳಕಿತವಾಗಿ ಮುಂದೆ ಹೇಳತೊಡಗಿದರು : "ಧರ್ಮಜ! ಬ್ರಹ್ಮಸಭೆಯ ಸೊಬಗನ್ನು ಹೀಗಿರುವುದೆಂದು ನಿರ್ದೇಶಮಾಡಿ ಅಥವಾ ನಿರ್ಧರಿಸಿ ಹೇಳುವ ಸಾಧ್ಯತೆಯೇ ಇಲ್ಲ. ಪ್ರತಿಯೊಂದು ಕ್ಷಣದಲ್ಲಿಯೂ ಆ ಮಹಾಸಭೆಯು ಒಂದೊಂದು ವಿಧವಾಗಿ ಮಾರ್ಪಡುವುದು. ಅದರ ಉದ್ದ, ಅಗಲ ಅಥವಾ ಸುತ್ತಳತೆ

ಗಳನ್ನು ಹೇಳುವ ಸಾಧ್ಯತೆಯೂ ಇಲ್ಲ. ನಾನು ಅಂತಹ ದಿವ್ಯಸಭೆಯನ್ನು ಹಿಂದೆ ಎಲ್ಲಿಯೂ ಕಂಡಿರಲಿಲ್ಲ. ಅದರಲ್ಲಿರುವ ಸರ್ವರೂ ಸುಖಿಗಳಾಗಿರುತ್ತಾರೆ. ಅಲ್ಲಿ ಚಳಿಯೂ ಇಲ್ಲ. ಸೆಕೆಯೂ ಇಲ್ಲ. ಹಸಿವು, ಬಾಯಾರಿಕೆ, ಆಯಾಸ–ಇವುಗಳೆಲ್ಲವೂ ಅಲ್ಲಿ ಮಾಯವಾಗಿ ಹೋಗಿಬಿಡುತ್ತವೆ. ಜಾಜ್ವಲ್ಯಮಾನವಾದ ಕಾಂತಿಯಿಂದ ಕೂಡಿರುವ ಮಣಿಗಳಿಂದ ಆ ಮಹಾಸಭೆಯು ನಿರ್ಮಿತವಾದಂತೆ ಕಾಣುತ್ತದೆ. ಆ ಮಹಾಸಭೆಯಲ್ಲಿ ಸ್ತಂಭಗಳಿರುವುದಿಲ್ಲ. ಅದಕ್ಕೆ ವಿನಾಶವೆಂಬುದೇ ಇಲ್ಲ. ಶಾಶ್ವತವಾದ ಸಭೆಯು ಸೂರ್ಯ-ಚಂದ್ರಾಗ್ನಿಗಳ ಕಾಂತಿಗಳನ್ನೂ ಮಲಿನಗೊಳಿಸುವ ಸಾಮರ್ಥ್ಯವುಳ್ಳದ್ದಾಗಿದೆ. ನಾಕಪೃಷ್ಠದಲ್ಲಿರುವ ಆ ಸಭೆಯು ಸ್ವಪ್ರಭೆಯಿಂದ ಸೂರ್ಯನನ್ನು ಭರ್ತ್ಸನೆ ಮಾಡುತ್ತಿರುವಂತೆ ಕಾಣುತ್ತದೆ.

ಆ ಸಭಾಮಂದಿರದ ಮಧ್ಯದಲ್ಲಿ ದೇವದೇವನಾದ ಪರಬ್ರಹ್ಮನು ಇಚ್ಛಾ ಮಾತ್ರದಿಂದ ಜಗತ್ಸೃಷ್ಟಿಯನ್ನು ಮಾಡುತ್ತಾ ಏಕಾಕಿಯಾಗಿ ಕುಳಿತಿದ್ದಾನೆ. ಅವನನ್ನು ಅನುಸರಿಸಿ ಇನ್ನೂ ಅನೇಕಪ್ರಜಾಪತಿಗಳೂ ಆ ಸಭೆಯಲ್ಲಿ ಉಪವಿಷ್ಟರಾಗಿದ್ದಾರೆ. ದಕ್ಷ, ಪ್ರಚೇತಸ, ಪುಲಹ, ಮರೀಚಿ, ಕಶ್ಯಪ, ಭೃಗು, ಅತ್ರಿ, ವಸಿಷ್ಠ, ಗೌತಮ, ಅಂಗಿರಸ, ಪುಲಸ್ತ್ಯ, ಕ್ರತು, ಪ್ರಹ್ಲಾದ, ಕರ್ದಮ, ಅಥರ್ವಾಂಗಿರಸರು, ಸೂರ್ಯಕಿರಣಗಳನ್ನು ಪಾನಮಾಡುವ ವಾಲಖಿಲ್ಯ–ಇವರೆಲ್ಲರೂ ಬ್ರಹ್ಮನ ಸೇವೆಯಲ್ಲಿ ನಿರತರಾಗಿರುತ್ತಾರೆ. ಮನಸ್ಸು, ಅಂತರಿಕ್ಷ, ವಿದ್ಯೆಗಳು, ವಾಯು, ತೇಜಸ್ಸು, ಜಲ, ಭೂಮಿ, ಶಬ್ದ-ಸ್ಪರ್ಶಗಳು, ರೂಪ, ರಸ, ಗಂಧ, ಪ್ರಕೃತಿ, ವಿಕೃತಿ ಮತ್ತು ಸೃಷ್ಟಿಗೆ ಕಾರಣವಾದ ಇತರ ವಸ್ತುಗಳ ಅಧಿದೇವತೆಗಳೂ ಬ್ರಹ್ಮನ ಸೇವೆಯಲ್ಲಿ ನಿರತರಾಗಿರುತ್ತಾರೆ.

ಅಗಸ್ತ್ಯ, ಮಾರ್ಕಂಡೇಯ, ಜಮದಗ್ನಿ, ಭರದ್ವಾಜ, ಸಂವರ್ತ, ಚ್ಯವನ, ದುರ್ವಾಸ, ಋಷ್ಯಶೃಂಗ, ಯೋಗಾಚಾರ್ಯರಾದ ಸನತ್ಕುಮಾರರು, ಅಸಿತ, ದೇವಲ, ಜೈಗೀಷವ್ಯ, ಜಿತಶತ್ರುವಾದ ಋಷಭ, ಮಹಾವೀರ್ಯನಾದ ಮಣಿ–ಇವರೆಲ್ಲರೂ ಬ್ರಹ್ಮನ ಸೇವೆಯಲ್ಲಿ ನಿರತರಾಗಿರುತ್ತಾರೆ.

ಅಷ್ಟಾಂಗಗಳಿಂದ ಯುಕ್ತವಾದ ಆಯುರ್ವೇದವು ಮೂರ್ತಿಮತ್ತಾಗಿ ಬಂದು ಬ್ರಹ್ಮನನ್ನು ಸೇವಿಸುತ್ತದೆ.

ಇಪ್ಪತ್ತೇಳು ನಕ್ಷತ್ರಗಳಿಂದ ಸಮೇತನಾದ ಚಂದ್ರನೂ, ಕಿರಣಗಳಿಂದೊಡಗೂಡಿದ ಸೂರ್ಯನೂ, ಸಪ್ತಮರುತ್ತುಗಳೂ, ಕ್ರತುಗಳೂ, ಸಂಕಲ್ಪ, ಪ್ರಾಣ–ಇವರೆಲ್ಲರೂ ಮೂರ್ತಿಮಂತರಾಗಿ ಬ್ರಹ್ಮಸಭೆಗೆ ಬಂದು ಪರಬ್ರಹ್ಮನನ್ನು ಉಪಾಸನೆಮಾಡುತ್ತಿರುತ್ತಾರೆ.

ಅರ್ಥ, ಧರ್ಮ, ಕಾಮ, ಹರ್ಷ, ದ್ವೇಷ, ತಪಸ್ಸು, ದಮ–ಇವುಗಳೂ ಮೂರ್ತಿಮತ್ತಾಗಿ ಬಂದು ಬ್ರಹ್ಮನ ಸೇವೆಯನ್ನು ಮಾಡುತ್ತವೆ.

ಹಂಸ, ಹಾಹಾ, ಹೂಹೂ, ವಿಶ್ವಾವಸು, ವರರುಚಿ, ವೃಷಣ, ತುಂಬುರು–ಈ ಏಳು ಗಂಧರ್ವಪ್ರಮುಖರೂ, ಇಪ್ಪತ್ತು ವಿಧವಾದ ಅಪ್ಸರೋಗಣಗಳೂ, ಸಮಸ್ತಲೋಕಪಾಲರೂ, ಶುಕ್ರ, ಬೃಹಸ್ಪತಿ, ಬುಧ, ಅಂಗಾರಕ, ಶನೈಶ್ಚರ, ರಾಹು, ಕೇತು–ಇವರುಗಳೂ, ಮಂತ್ರ, ರಥಂತರ ಸಾಮ, ಹರಿಮಂತ, ವಸುಮಂತ, ದ್ವಾದಶಾದಿತ್ಯರು, ಅಗ್ನೀಷೋಮರು, ಮರುತ್ತುಗಳು, ವಿಶ್ವಕರ್ಮಾ, ವಸುಗಳು, ಪಿತೃಗಣಗಳು, ಹವಿಸ್ಸುಗಳು, ಋಕ್ಸಾಮ-ಯಜುಸ್ಸುಗಳು, ಅಥರ್ವವೇದ, ಸರ್ವಶಾಸ್ತ್ರಗಳು, ಇತಿಹಾಸಗಳು, ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥಶಾಸ್ತ್ರಗಳು, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೌತಿಷ, ಕಲ್ಪಗಳು, ಗ್ರಹಗಳು, ಯಜ್ಞಗಳು, ಸೋಮ, ಸಮಸ್ತದೇವತೆಗಳು–ಇವರೆಲ್ಲರೂ ಬ್ರಹ್ಮನ ಸಭೆಯಲ್ಲಿ ಬ್ರಹ್ಮೋಪಾಸನೆಯನ್ನು ಮಾಡುತ್ತಿರುತ್ತಾರೆ.

ಸಾವಿತ್ರೀ, ದುರ್ಗತರಣೀ, ಅಕಾರ-ಉಕಾರ-ಮಕಾರ-ಅರ್ಧಮಾತ್ರಾ-ನಾದ-ಬಿಂದು-ಶಕ್ತಿರೂಪಗಳಾದ ಸಪ್ತವಾಣಿಗಳು ; ಅಥವಾ ಸಂಸ್ಕೃತ, ಪ್ರಾಕೃತ, ಪೈಶಾಚೀ, ಅಪಭ್ರಂಶ, ಲಲಿತ, ಮಾಗಧ, ಗದ್ಯ–ಈ ಏಳು ವಿಧವಾದ ವಾಣಿಗಳು, ಮೇಧಾ, ಧೃತಿ, ಶ್ರುತಿ, ಪ್ರಜ್ಞಾ, ಬುದ್ಧಿ, ಯಶಸ್ಸು, ಕ್ಷಮಾ, ಸಾಮ, ಸ್ತುತಿ, ಗೀತ, ವಿವಿಧಗಾಥೆಗಳು, ತರ್ಕಯುಕ್ತವಾದ ಭಾಷ್ಯಗಳು–ಇವೆಲ್ಲವೂ ಮೂರ್ತಿಮತ್ತಾಗಿ ಬಂದು ಬ್ರಹ್ಮೋಪಾಸನೆಯನ್ನು ಮಾಡುತ್ತವೆ.

ವಿವಿಧನಾಟಕಗಳೂ, ವಿವಿಧಕಾವ್ಯಗಳೂ, ಕಥೆಗಳೂ, ಆಖ್ಯಾಯಿಕೆಗಳೂ, ಕಾರಿಕೆಗಳೂ ಮೂರ್ತಿಮತ್ತಾಗಿ ಬಂದು ಬ್ರಹ್ಮನನ್ನು ಉಪಾಸನೆ ಮಾಡುತ್ತವೆ. ಗುರುಪೂಜೆಮಾಡಿದ ಪುಣ್ಯವಂತರೂ ಅಲ್ಲಿರುತ್ತಾರೆ.

ಕ್ಷಣ, ಲವ, ಮುಹೂರ್ತ, ಹಗಲು, ರಾತ್ರಿ, ಪಕ್ಷ, ಮಾಸ, ಋತುಗಳು, ಷಷ್ಟಿಸಂವತ್ಸರಗಳು, ಪಂಚಸಂವತ್ಸರದ ಯುಗಗಳು, ಮಾನುಷ-ಪೈತ್ರ-ದೈವ-ಬ್ರಾಹ್ಮಗಳೆಂಬ ನಾಲ್ಕು ಅಹೋರಾತ್ರಿಗಳು, ದಿವ್ಯವಾದ ಮತ್ತು ಶಾಶ್ವತವಾದ ಕಾಲಚಕ್ರ, ಧರ್ಮಚಕ್ರ–ಇವುಗಳೂ ಬ್ರಹ್ಮನನ್ನು ಆರಾಧನೆಮಾಡುತ್ತವೆ.

ಅದಿತಿ, ದಿತಿ, ದನು, ಸುರಸಾ, ವಿನತಾ, ಇರಾ, ಕಾಲಿಕಾ, ಸುರಭೀ, ಸರಮಾ, ಗೌತಮೀ, ಪ್ರಭಾ, ಕದ್ರೂ, ದೇವಮಾತೃಗಳು, ರುದ್ರಾಣೀ, ಶ್ರೀ, ಲಕ್ಷ್ಮೀ, ಭದ್ರಾ, ಪುಷ್ಟೀ, ಅಪರಾ, ಷಷ್ಠೀ, ಪೃಥ್ವೀ, ಗಂಗಾ, ಹ್ರೀ, ಸ್ವಾಹಾ, ಕೀರ್ತಿ, ಸುರಾದೇವಿ, ಶಚೀ, ಪುಷ್ಟೀ, ಅರುಂಧತೀ, ಸಂವೃತ್ತಿ, ಆಶಾ, ನಿಯತಿ, ಸೃಷ್ಟಿ, ರತಿ–ಇವರೇ ಮೊದಲಾದ ದೇವಿಯರು ಪರಬ್ರಹ್ಮನನ್ನು ಉಪಾಸನೆಮಾಡುತ್ತಾರೆ.

ಆದಿತ್ಯರು, ವಸುಗಳು, ರುದ್ರರು, ಮರುತ್ತುಗಳು, ಅಶ್ವಿನೀದೇವತೆಗಳು, ವಿಶ್ವೇದೇವತೆಗಳು, ಸಾಧ್ಯರು, ಪಿತೃದೇವತೆಗಳು, ಅಗ್ನಿಷ್ವಾತ್ತಾದಿ ಸಪ್ತಪಿತೃಗಳು–ಇವರೆಲ್ಲರೂ ಬ್ರಹ್ಮಸಭೆಯಲ್ಲಿ ಬ್ರಹ್ಮನನ್ನು ಆರಾಧಿಸುತ್ತಿರುತ್ತಾರೆ.

ಸಪ್ತವಿಧಗಳಾದ ಪಿತೃದೇವತೆಗಳಲ್ಲಿ ನಾಲ್ಕು ಗಣದವರು ಮೂರ್ತಿಮಂತರಾಗಿಯೂ–ಉಳಿದ ಮೂರು ಗಣದವರು ತೇಜೋರೂಪರಾಗಿಯೂ ಇರುತ್ತಾರೆ. ಲೋಕಪ್ರಸಿದ್ಧರಾದ ವೈರಾಜಸರು, ಅಗ್ನಿಷ್ವಾತ್ತರು ಮತ್ತು ಗಾರ್ಹಪತ್ಯರು ಸ್ವರ್ಗಸಂಚಾರಿಗಳಾಗಿರುತ್ತಾರೆ. ಸೋಮಪರು, ಏಕಶೃಂಗರು, ಚತುರ್ವೇದರು ಮತ್ತು ಕಲಾ ಎಂಬುವರು ಚಾತುರ್ವರ್ಣ್ಯದವರಿಂದ ಪೂಜಿಸಲ್ಪಡುತ್ತಿರುತ್ತಾರೆ. ಸೋಮರಸದಿಂದ ತೃಪ್ತರಾದ ಅವರು ಸೋಮನನ್ನು ಸೋಮರಸದಿಂದಲೇ ಸಂತುಷ್ಟಿಗೊಳಿಸುತ್ತಾರೆ. ಆ ಪಿತೃದೇವತೆಗಳೆಲ್ಲರೂ ಜಗತ್ಸೃಷ್ಟಿಗೆ ಕಾರಣನಾದ ಪರಬ್ರಹ್ಮನ ಆರಾಧನೆಯನ್ನು

ಮಾಡುತ್ತಿರುತ್ತಾರೆ. ರಾಕ್ಷಸರು, ಪಿಶಾಚರು, ದಾನವರು, ಗುಹ್ಯಕರು, ನಾಗಗಳು, ಗರುಡಪಕ್ಷಿಗಳು, ಅನೇಕಜಾತಿಗಳ ಪ್ರಾಣಿಗಳು, ಸ್ಥಾವರ-ಜಂಗಮಗಳೂ, ಮೂರ್ತಿಮಂತರಾಗಿ ಬ್ರಹ್ಮನ ಆರಾಧನೆಯಲ್ಲಿ ಆಸಕ್ತರಾಗಿರುತ್ತಾರೆ. ಪುರಂದರ, ವರುಣ, ಕುಬೇರ, ಯಮ, ಉಮಾಸಹಿತನಾದ ಮಹೇಶ್ವರ, ಮಹಾಸೇನ, ನಾರಾಯಣ, ದೇವರ್ಷಿಗಳು, ವಾಲಖಿಲ್ಯರು–ಇವರುಗಳನ್ನೂ, ಯೋನಿಜರಾದ, ಅಯೋನಿಜರಾದ ಮಹರ್ಷಿಗಳನ್ನೂ ಮತ್ತು ಪ್ರಪಂಚದಲ್ಲಿರುವ ಸಕಲ ಚರಾಚರಾತ್ಮಕವಾದ ಸ್ಥಾವರ-ಜಂಗಮಗಳನ್ನೂ ನಾವು ಬ್ರಹ್ಮನ ಸಭೆಯಲ್ಲಿ ಕಾಣಬಹುದಾಗಿದೆ. ಊರ್ಧ್ವರೇತಸ್ಕರಾದ ಎಂಬತ್ತೆಂಟು ಸಾವಿರ ಬ್ರಹ್ಮರ್ಷಿಗಳನ್ನೂ, ಸಂತಾನವನ್ನು ಹೊಂದಿರುವ ಮಹಾತಪಸ್ವಿಗಳೆನಿಸಿರುವ ಐವತ್ತು ಸಾವಿರ ಮಹರ್ಷಿಗಳನ್ನೂ ನಾನಲ್ಲಿ ನೋಡಿದೆನು. ಯುಧಿಷ್ಠಿರ! ಸ್ವರ್ಗವಾಸಿಗಳಾದ ಎಲ್ಲ ದೇವತೆಗಳೂ ಆಗಿಂದಾಗ್ಗೆ ಬ್ರಹ್ಮನ ಸಭೆಗೆ ಹೋಗಿ ಅವನನ್ನು ಆರಾಧಿಸುತ್ತಾರೆ. ಅತಿಥಿಗಳಾಗಿ ಬರುವ ದೇವತೆಗಳನ್ನೂ, ದೈತ್ಯರನ್ನೂ, ದ್ವಿಜರನ್ನೂ, ಯಕ್ಷರನ್ನೂ, ಸುಪರ್ಣರನ್ನೂ, ಕಾಲೇಯರನ್ನೂ, ಗಂಧರ್ವರನ್ನೂ, ಅಪ್ಸರೆಯರನ್ನೂ-ಲೋಕಪಿತಾಮಹನಾದ, ದಯಾಳುವಾದ ಬ್ರಹ್ಮನು ಸವಿಮಾತುಗಳಿಂದ ಸಂತೈಸಿ ಅವರವರ ಇಚ್ಛಾನುಸಾರವಾಗಿ ಅರ್ಥ-ಕಾಮಗಳನ್ನು ದಯಪಾಲಿಸುತ್ತಾನೆ. ಆ ಮಹಾಸಭೆಯು ಯಾವಾಗಲೂ ಅತಿಥಿಗಳಿಂದ ತುಂಬಿಹೋಗಿರುತ್ತದೆ. ಋಷಿ-ಮಹರ್ಷಿಗಳಿಂದ ಸಂಸೇವ್ಯಮಾನನಾದ ಬ್ರಹ್ಮನ ಸಾನ್ನಿಧ್ಯವನ್ನು ಹೊಂದಿರುವ ಮತ್ತು ಸಕಲರಿಗೂ ಸುಖಪ್ರದವಾದ ಆ ಸಭೆಯು ತೇಜೋಮಯವಾಗಿ ಪ್ರಕಾಶಿಸುತ್ತಿರುತ್ತದೆ.

ಯುಧಿಷ್ಠಿರ! ನಿನ್ನ ಈ ಸಭೆಗೆ ಸಮಾನವಾದ ಬೇರೊಂದು ಸಭೆಯು ಈ ಮನುಷ್ಯಲೋಕದಲ್ಲಿ ಮತ್ತೊಂದಿಲ್ಲವೆಂಬುದರಲ್ಲಿ ಸಂಶಯವೇ ಇಲ್ಲ. ಅಂತೆಯೇ ಬ್ರಹ್ಮಸಭೆಗೆ ಸಮನಾದ ಮತ್ತೊಂದು ಸಭೆಯು ಚತುರ್ದಶಭುವನಗಳಲ್ಲಿಯೇ ಬೇರೊಂದಿಲ್ಲ."

ಗಗನೆಯ ಅಧ್ಯಾಯವು ಮುಗಿಯಿತು.

೧೨ನೆಯ ಅಧ್ಯಾಯ ಲೋಕಪಾಲಸಭಾಖ್ಯಾನಪರ್ವ (ಮುಂದುವರಿದಿದೆ.)

## ಹರಿಶ್ಚಂದ್ರನ ಮಹಿಮೆ :
## ಯುಧಿಷ್ಠಿರನಿಗೆ ಪಾಂಡುವಿನ ಸಂದೇಶ

ಜನಮೇಜಯ! ನಾರದರು ಲೋಕಪಾಲರ ಸಭಾಖ್ಯಾನವನ್ನು ಮುಗಿಸಿದೊಡನೆಯೇ ತದೇಕಚಿತ್ತನಾಗಿ ಕೇಳುತ್ತಿದ್ದ ಯುಧಿಷ್ಠಿರನು ನಾರದರನ್ನು ಪುನಃ ಪ್ರಶ್ನಿಸಿದನು :

ಪ್ರಾಯಶೋ ರಾಜಲೋಕಸ್ತೇ ಕಥಿತೋ ವದತಾಂ ವರ।
ವೈವಸ್ವತಸಭಾಯಾಂ ತು ಯಥಾ ವದಸಿ ಮೇ ಪ್ರಭೋ ॥೧॥

ವರುಣಸ್ಯ ಸಭಾಯಾಂ ತು ನಾಗಾಸ್ತೇ ಕಥಿತಾ ವಿಭೋ।
ದೈತ್ಯೇನ್ದ್ರಾಶ್ಚಾಪಿ ಭೂಯಿಷ್ಠಾಃ ಸರಿತಃ ಸಾಗರಾಸ್ತಥಾ ॥೨॥
ತಥಾ ಧನಪತೇರ್ಯಕ್ಷಗುಹ್ಯಕಾ ರಾಕ್ಷಸಾಸ್ತಥಾ।
ಗನ್ಧರ್ವಾಪ್ಸರಸಶ್ಚೈವ ಭಗವಾಂಶ್ಚ ವೃಷಧ್ವಜಃ ॥೩॥
ಪಿತಾಮಹಸಭಾಯಾಂ ತು ಕಥಿತಾಸ್ತೇ ಮಹರ್ಷಯಃ।
ಸರ್ವೇ ದೇವನಿಕಾಯಾಶ್ಚ ಸರ್ವಶಾಸ್ತ್ರಾಣಿ ಚೈವ ಹ ॥೪॥
ಶಕ್ರಸ್ಯ ತು ಸಭಾಯಾಂ ತು ದೇವಾಃ ಸಂಕೀರ್ತಿತಾ ಮುನೇ।
ಉದ್ದೇಶತಶ್ಚ ಗನ್ಧರ್ವಾ ವಿವಿಧಾಶ್ಚ ಮಹರ್ಷಯಃ ॥೫॥
ಏಕ ಏವ ತು ರಾಜರ್ಷಿರ್ಹರಿಶ್ಚನ್ದ್ರೋ ಮಹಾಮುನೇ।
ಕಥಿತಸ್ತೇ ಸಭಾಯಾಂ ವೈ ದೇವೇನ್ದ್ರಸ್ಯ ಮಹಾತ್ಮನಃ ॥೬॥

ಕಿಂ ಕರ್ಮ ತೇನಾಚರಿತಂ ತಪೋ ವಾ ನಿಯತವ್ರತ।
ಯೇನಾಸೌ ಸಹ ಶಕ್ರೇಣ ಸ್ಪರ್ಧತೇ ಸುಮಹಾಯಶಾಃ ॥೭॥

ಪಿತೃಲೋಕಗತಶ್ಚೈವ ತ್ವಯಾ ವಿಪ್ರ ಪಿತಾ ಮಮ।
ದೃಷ್ಟಃ ಪಾಣ್ಡುರ್ಮಹಾಭಾಗಃ ಕಥಂ ವಾಪಿ ಸಮಾಗತಃ ॥೮॥

ಕಿಮುಕ್ತವಾಂಶ್ಚ ಭಗವಂಸ್ತನ್ಮಮಾಚಕ್ಷ್ವ ಸುವ್ರತ।
ತ್ವತ್ತಃ ಶ್ರೋತುಂ ಸರ್ವಮಿದಂ ಪರಂ ಕೌತೂಹಲಂ ಹಿ ಮೇ ॥೯॥

"ಮಹರ್ಷಿಗಳೇ! ನೀವು ಇಂದ್ರಾದಿ ದೇವಸಭಾಮಂದಿರಗಳ ವರ್ಣನೆಯನ್ನು ಮಾಡಿದುದು ಸರಿಯಷ್ಟೆ. ಆ ಸಭೆಗಳಲ್ಲಿ ಭಾಗವಹಿಸುವವರು ಯಾರೆಂಬುದನ್ನು ವಿಶದವಾಗಿ ತಿಳಿಸಿರುವಿರಿ. ಅದರಂತೆ ಸಾಮಾನ್ಯವಾಗಿ ಪ್ರಪಂಚದ ರಾಜರೆಲ್ಲರೂ ಯಮಧರ್ಮನ ಸಭೆಯಲ್ಲಿ ಉಪವಿಷ್ಟ ರಾಗಿರುತ್ತಾರೆ. ನಾಗರಾಜರೂ, ಹಲವು ದೈತ್ಯರೂ, ನದೀ-ನದ-ಸಮುದ್ರಗಳ ಅಧಿದೇವತೆಗಳೂ ವರುಣನ ಸಭೆಯಲ್ಲಿ ಉಪವಿಷ್ಟರಾಗಿರುತ್ತಾರೆ. ಯಕ್ಷರು, ಗುಹ್ಯಕರು, ರಾಕ್ಷಸರು, ಗಂಧರ್ವಾಪ್ಸರೆಯರು, ಪರಮೇಶ್ವರ–ಇವರೆಲ್ಲರೂ ಕುಬೇರನ ಭವನದಲ್ಲಿರು ತ್ತಾರೆ. ಬ್ರಹ್ಮರ್ಷಿಗಳೂ, ಸಕಲದೇವತೆಗಳೂ, ಸಕಲವಿದ್ಯಾಧಿದೇವತೆಗಳೂ ಬ್ರಹ್ಮನ ಭವನದಲ್ಲಿ ಕುಳಿತು ಬ್ರಹ್ಮೋಪಾಸನೆ ಯನ್ನು ಮಾಡುತ್ತಿರುತ್ತಾರೆ. ಇಂದ್ರನ ಭವನದಲ್ಲಿಯೂ ಅನೇಕಗಂಧರ್ವರೂ, ದೇವತೆಗಳೂ, ಋಷಿ-ಮಹರ್ಷಿಗಳೂ ಇರುತ್ತಾರೆಂದು ತಿಳಿಸಿರುತ್ತೀರಿ. ಅವರುಗಳ ಜೊತೆಯಲ್ಲಿ ಇಂದ್ರಭವನದಲ್ಲಿ ರಾಜರ್ಷಿಯಾದ ಹರಿಶ್ಚಂದ್ರನು ಮಾತ್ರ ಇರುವನೆಂದು ತಿಳಿಸಿರುತ್ತೀರಿ. ಮಹರ್ಷೇ! ಹರಿಶ್ಚಂದ್ರನು ಇಂದ್ರಭವನದಲ್ಲಿ ಕುಳಿತುಕೊಳ್ಳುವ ಸಾಮರ್ಥ್ಯವನ್ನು ಹೇಗೆ ಪಡೆದನು? ಅವನು ಮಾಡಿದ ತಪಸ್ಸಾವುದು? ಯಾವ ತಪಃಫಲದಿಂದ ಅವನು ಇಂದ್ರನಿಗೆ ಸಮಾನನೆನಿಸಿದನು?

ಮಹಾನುಭಾವರೇ! ಯಮನ ಭವನದಲ್ಲಿರುವ ನಮ್ಮ ತಂದೆಯಾದ ಪಾಂಡುವನ್ನು ತಾವು ಯಾವಾಗ ನೋಡಿದಿರಿ? ತಮ್ಮೊಡನೆ ನಮ್ಮ ತಂದೆಯು ನಮ್ಮ ವಿಷಯವಾಗಿ ಏನಾದರೂ ಹೇಳಿರುವನೇ? ದಯೆಯಿಟ್ಟು ತಿಳಿಸಿರಿ. ಈ ಎಲ್ಲ ವಿವರಣೆಯನ್ನೂ ಕೇಳಬೇಕೆಂಬ ಕುತೂಹಲವುಳ್ಳವನಾಗಿರುವೆನು."

"ಯುಧಿಷ್ಠಿರ! ಹರಿಶ್ಚಂದ್ರನ ವಿಷಯವಾಗಿ ನೀನು ಕೇಳಿದ ಪ್ರಶ್ನೆಗಳಿಗೆ ಉತ್ತರವೀಯುವೆನು ಮತ್ತು ಅವನ ಸಾಮರ್ಥ್ಯವೆಷ್ಟೆಂಬುದನ್ನೂ ವಿವರಿಸಿ ಹೇಳುವೆನು. ಭೂಲೋಕದಲ್ಲಿ ಹರಿಶ್ಚಂದ್ರನು ಸಮರ್ಥನಾದ, ಬಲಶಾಲಿಯಾದ ರಾಜನಾಗಿದ್ದನು. ರಾಜನು ಮಾತ್ರವಲ್ಲ.; ಚಕ್ರವರ್ತಿಯೂ ಆಗಿದ್ದನು. ಪ್ರಪಂಚದಲ್ಲಿರುವ ರಾಜರೆಲ್ಲರೂ ಅವನ ಆಜ್ಞಾಧಾರಕರಾಗಿರು ತ್ತಿದ್ದರು. ಅವನ ಸಾಮರ್ಥ್ಯವೆಷ್ಟಿತ್ತೆಂದರೆ.: ಏಕಾಕಿಯಾಗಿ ದಿವ್ಯರಥಾ ರೂಢನಾಗಿ ಹೊರಟು ತನ್ನ ಭುಜಬಲ-ಪರಾಕ್ರಮಗಳಿಂದ ಜಂಬೂ-ಕುಶ-

ಶಾಕ-ಕ್ರೌಂಚ-ಶಾಲ್ಮಲೀ-ಪ್ಲಕ್ಷ-ಪುಷ್ಕರಗಳೆಂಬ ಏಳು ದ್ವೀಪಗಳನ್ನೂ ಗೆದ್ದು ಚಕ್ರಾಧಿಪತಿಯಾದನು.

ಗಿರಿ-ದುರ್ಗ-ಪರ್ವತ-ಕಾನನ-ನದೀ-ನದಸಮೇತವಾಗಿ ಸಕಲರಾಜ್ಯ ಗಳನ್ನೂ ಹರಿಶ್ಚಂದ್ರನು ಗೆದ್ದು ರಾಜಸೂಯವೆಂಬ ಯಾಗವನ್ನು ಮಾಡಿದನು.

ಆ ಯಾಗಕ್ಕೆ ಪರಾಜಿತರಾದ ರಾಜರೆಲ್ಲರೂ ಯಥೇಚ್ಛವಾಗಿ ಕಪ್ಪ-ಕಾಣಿಕೆಗಳನ್ನು ತಂದು ಅರ್ಪಿಸಿದರು. ಆಶ್ರಿತರಾಜರೆಲ್ಲರೂ ಬಂದು ಯಜ್ಞಾಂಗವಾಗಿ ನಡೆದ ಭೋಜನ-ದಕ್ಷಿಣೆಗಳ ವಿತರಣಾಕಾರ್ಯದಲ್ಲಿ ನಿಯೋಜಿತರಾಗಿದ್ದರು.

ಆ ಯಾಗಸಮಾರಂಭದಲ್ಲಿ ಹರಿಶ್ಚಂದ್ರನು ಋತ್ವಿಜರು ಅಪೇಕ್ಷಿಸಿದ ದಕ್ಷಿಣಾದ್ರವ್ಯಕ್ಕೆ ಐದು ಪಟ್ಟು ಹೆಚ್ಚಾಗಿ ದಕ್ಷಿಣೆಯನ್ನು ಕೊಟ್ಟು ಅವರನ್ನು ಸಂತೋಷಗೊಳಿಸಿದನು. ಯಾಗದ ಸಮಾರೋಪವಾದಮೇಲೆ ದೇಶ-ವಿದೇಶಗಳಿಂದ ಬಂದಿದ್ದ ಸಾವಿರಾರು ಬ್ರಾಹ್ಮಣರಿಗೆ ಹೇರಳವಾದ ದಕ್ಷಿಣೆಯನ್ನು ಕೊಟ್ಟು ಪುರಸ್ಕರಿಸಿ ಬೀಳ್ಕೊಟ್ಟನು. ತಮ್ಮ ಅಪೇಕ್ಷೆಗಿಂತಲೂ ಹೆಚ್ಚಿನ ದಕ್ಷಿಣೆಗಳನ್ನೂ, ರತ್ನಾಭರಣಗಳನ್ನೂ ಪಡೆದ ವಿಪ್ರರು :

**ತೇಜಸ್ವೀ ಚ ಯಶಸ್ವೀ ಚ ನೃಪೇಭ್ಯೋಽಧಿಕೋಽಭವತ್ ।**

"ತೇಜಸ್ವಿಯೂ, ಯಶಸ್ವಿಯೂ ಆದ ಹರಿಶ್ಚಂದ್ರನು ಸಕಲರಾಜರಿಗೂ ಶ್ರೇಷ್ಠನೆನಿಸಿದನು"–ಎಂದು ಹೇಳುತ್ತಾ ತಮ್ಮ-ತಮ್ಮ ದೇಶಗಳಿಗೆ ಹಿಂದಿರುಗಿದರು.

ಈ ಕಾರಣದಿಂದಲೇ ಹರಿಶ್ಚಂದ್ರನು ಇತರ ಸಾವಿರಾರು ರಾಜರ ಮಧ್ಯದಲ್ಲಿ ಎಲ್ಲರನ್ನೂ ಅತಿಶಯಿಸಿ ವಿರಾಜಮಾನನಾಗಿರುತ್ತಾನೆ. ರಾಜ ಸೂಯಯಾಗವನ್ನು ಮಾಡಿದೊಡನೆಯೇ ಅಲ್ಲಿಗೆ ಬಂದಿದ್ದ ರಾಜರೆಲ್ಲರೂ ಅವನನ್ನು ಚಕ್ರವರ್ತಿಯ ಸಿಂಹಾಸನದಲ್ಲಿ ಕುಳ್ಳಿರಿಸಿ ಅಭಿಷೇಚಿಸಿದರು.

**ಯೇ ಚಾನ್ಯೇ ಚ ಮಹೀಪಾಲಾ ರಾಜಸೂಯಂ ಮಹಾಕ್ರತುಮ್**
**ಯಜನ್ತೇ ತೇ ಸಹೇನ್ದ್ರೇಣ ಮೋದನ್ತೇ ಭರತರ್ಷಭ ॥೨೦॥**

ಭರತಶ್ರೇಷ್ಠನೇ! ರಾಜಸೂಯಯಾಗವನ್ನು ಯಾರು ಮಾಡುತ್ತಾರೆಯೋ ಅವರು ಇಹಲೋಕದಲ್ಲಿ ಚಕ್ರವರ್ತಿಗಳಾಗಿ, ಪರಲೋಕದಲ್ಲಿ ಇಂದ್ರನಿಗೆ ಸಮಾನರಾಗಿ ಇಂದ್ರಸಭೆಯಲ್ಲಿ ಇಂದ್ರನೊಡನೆ ಉಪವಿಷ್ಟರಾಗುತ್ತಾರೆ.

**ಯೇ ಚಾಪಿ ನಿಧನಂ ಪ್ರಾಪ್ತಾಃ ಸಂಗ್ರಾಮೇಷ್ವಪಲಾಯಿನಃ।**
**ತೇ ತತ್ಸದನಮಾಸಾದ್ಯ ಮೋದನ್ತೇ ಭರತರ್ಷಭ ॥೨೧॥**

ಯುದ್ಧಮಾಡುತ್ತಿರುವಾಗ ಪರಾಙ್ಮುಖರಾಗದೇ ಹೋರಾಡಿ ಮಡಿಯುವ ಯೋಧರೂ ಸಹ ಇಂದ್ರನೊಡನೆ ಸುಖೋಪಭೋಗಗಳನ್ನು ಅನುಭವಿಸುತ್ತಾ ಸಂತುಷ್ಟರಾಗಿರುತ್ತಾರೆ.

**ತಪಸಾ ಯೇ ಚ ತೀವ್ರೇಣ ತ್ಯಜನ್ತೀಹ ಕಲೇವರಮ್।**
**ತೇ ತತ್ಸ್ಥಾನಂ ಸಮಾಸಾದ್ಯ ಶ್ರೀಮನ್ತೋ ಭಾನ್ತಿ ನಿತ್ಯಶಃ ॥೨೨॥**

ಕಠೋರವಾದ ತಪಶ್ಚರಣೆಮಾಡಿ ದೇಹತ್ಯಾಗಮಾಡಿದವರೂ ಸಹ ಇಂದ್ರನ ಆ ಮಹಾಸಭೆಗೆ ಹೋಗಿ ತೇಜೋರೂಪವನ್ನು ಧರಿಸಿ, ಇಂದ್ರನೊಡನೆ ವಿರಾಜಿಸುತ್ತಾರೆ.

ನಿಮ್ಮ ತಂದೆಯಾದ ಪಾಂಡುವು ಇಂದ್ರನ ಸಭೆಯಲ್ಲಿ ವಿರಾಜಮಾನನಾಗಿದ್ದ ಹರಿಶ್ಚಂದ್ರನನ್ನು ಕಂಡು ವಿಸ್ಮಿತನಾಗಿ, ನಿನಗೆ ಕೆಲವು ವಿಷಯಗಳನ್ನು ತಿಳಿಸಲು ಹೇಳಿರುತ್ತಾನೆ. ನಾನು ಮನುಷ್ಯಲೋಕದ ಸಂಚಾರವನ್ನು ಕೈಗೊಳ್ಳುವೆನೆಂಬ ವಾರ್ತೆಯನ್ನು ನಿಮ್ಮ ತಂದೆಯು ತಿಳಿದವನಾಗಿ ನನ್ನ ಬಳಿಗೆ ಬಂದು ಇಂತೆಂದನು :

"ಪೂಜ್ಯರೇ! ನನ್ನ ಮಗನಾದ ಯುಧಿಷ್ಠಿರನಿಗೆ ಹೀಗೆಂದು ತಿಳಿಸಿರಿ :

ಭಾರತ! ನೀನು ಪ್ರಪಂಚವನ್ನೇ ಗೆಲ್ಲಲು ಸಮರ್ಥನಾಗಿರುವೆ. ಸಮರ್ಥರಾದ ನಿನ್ನ ಅನುಜರು ನಿನ್ನ ಆಜ್ಞಾಪರಿಪಾಲಕರಾಗಿರುವರು. ಸಕಲ ದೇಶಗಳನ್ನೂ ಗೆದ್ದನಂತರ ನೀನು ರಾಜಸೂಯಯಾಗವನ್ನು ಮಾಡು. ನೀನು ನನ್ನ ಮಗನೇ ಆಗಿರುವುದರಿಂದ ನೀನು ಮಾಡಿದ ರಾಜಸೂಯಯಾಗದ ಪುಣ್ಯವು ನನಗೂ ಲಭಿಸಿ, ನಾನೂ ಹರಿಶ್ಚಂದ್ರನಂತೆ ಇಂದ್ರಸಭೆಯಲ್ಲಿ ಅಗಣಿತವರ್ಷಗಳ ಕಾಲ ಸುಖ-ಸಂತೋಷಗಳಿಂದಿರುವೆನು."

ಹೀಗೆ ಪ್ರಾರ್ಥಿಸಿದ ನಿಮ್ಮ ತಂದೆಗೆ ಉತ್ತರವಾಗಿ ನಾನು–"ಭೂಲೋಕಕ್ಕೆ ಹೋದಾಗ ನೀನು ಹೇಳಿರುವ ವಾರ್ತೆಯನ್ನು ಯುಧಿಷ್ಠಿರನಿಗೆ ಅಗತ್ಯವಾಗಿ ಹೇಳುವೆನು"–ಎಂದು ಹೇಳಿ ಅವನನ್ನು ಸಂತೈಸಿದೆನು. ಅದರಂತೆಯೇ ನಿನಗೂ ತಿಳಿಸಿರುವೆನು. ಧರ್ಮಜ! ನಿಮ್ಮ ತಂದೆಯ ಇಚ್ಛೆಯನ್ನು ಪೂರ್ಣಮಾಡು.

ಯುಧಿಷ್ಠಿರ! ನೀನು ರಾಜಸೂಯಯಾಗವನ್ನು ಮಾಡಿದೆಯಾದರೆ ನಿನ್ನ ಪೂರ್ವಜರಿಂದ ಸಮೇತನಾಗಿ ನೀನೂ ಇಂದ್ರಸಭೆಗೆ ಹೋಗಲು ಸಮರ್ಥನಾಗುವೆ. ಆದರೆ ಆ ಯಾಗದಲ್ಲಿರುವ ಕೆಲವು ತೊಂದರೆಗಳನ್ನೂ ತಿಳಿಸುವೆನು, ಕೇಳು.

ಆ ಮಹಾಯಾಗಕ್ಕೆ ವಿಘ್ನಗಳು ಅನೇಕವಾಗಿ ಬರುವುವು. ಬ್ರಹ್ಮರಾಕ್ಷಸರು ಯಾಗವು ಪ್ರಾರಂಭವಾದೊಡನೆಯೇ ಮಂತ್ರಲೋಪ-ಕ್ರಿಯಾಲೋಪ ಗಳಾಗುವುದನ್ನೇ ನಿರೀಕ್ಷಿಸುತ್ತಿರುವರು. ಹಾಗೇನಾದರೂ ಆಯಿತೆಂದರೆ ಒಡನೆಯೇ ಸಕಲವನ್ನೂ ಧ್ವಂಸಮಾಡಿಬಿಡುವರು. ಆ ಯಾಗವು ಪ್ರಾರಂಭವಾದಾಗಲೇ ಯುದ್ಧಭಯವೂ ಉಂಟು. ಅನೇಕರಾಜರು ಆಶ್ರಿತರಾಗಲು ಒಪ್ಪದೇ ಪ್ರತಿಭಟಿಸಿ ಯುದ್ಧಮಾಡುವರು. ಅನೇಕಕ್ಷತ್ರಿಯರ ವಿನಾಶವಾಗುವುದು. ಕೆಲವು ವೇಳೆ ವಿಶ್ವಸಮರವೇ ಉಂಟಾಗಿ, ಸರ್ವವಿನಾಶವೂ ಆಗಿಬಿಡಬಹುದು. ಒಂದು ಸಣ್ಣ ಪ್ರತಿಬಂಧಕವೂ ಪ್ರಪಂಚವನ್ನೇ ವಿನಾಶಮಾಡಬಹುದು. ಇವೆಲ್ಲವನ್ನೂ ಪರಿಪೂರ್ಣವಾಗಿ ಪರ್ಯಾಲೋಚಿಸಿ ಕಾರ್ಯಮಾಡು. ನಿನಗೆ ಹಿತಕರವೆನಿಸುವ ಮಾರ್ಗವನ್ನು ಅನುಸರಿಸು. ನಿನ್ನ ರಾಜ್ಯದಲ್ಲಿರುವ ಚಾತುರ್ವರ್ಣ್ಯದವರ ರಕ್ಷಣೆಯಲ್ಲಿ ಸದಾ ಜಾಗರೂಕನಾಗಿರು. ನಿನಗೆ ಮಂಗಳವಾಗಲಿ. ಬ್ರಾಹ್ಮಣರನ್ನು ಭೋಜನದಿಂದಲೂ, ದಾನ-ದಕ್ಷಿಣೆಗಳಿಂದಲೂ ಸಂತುಷ್ಟರನ್ನಾಗಿ ಮಾಡು.

ಧರ್ಮಜ! ನೀನು ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರಿಸಿದೆನಲ್ಲವೇ? ಇನ್ನು ನಾನು ನಿನ್ನ ಅನುಮತಿಯನ್ನು ಪಡೆದು ದ್ವಾರವತಿಗೆ ಹೊರಡುವೆನು."

ನಾರದರು ಹೀಗೆ ಹೇಳಿ ತಮ್ಮೊಡನೆ ಬಂದಿದ್ದ ಋಷಿಗಳೊಡನೆ ಯುಧಿಷ್ಠಿರನ ಸಭೆಯನ್ನು ಬಿಟ್ಟು ಹೊರಟರು. ಧರ್ಮರಾಜನೂ ಸಿಂಹಾಸನ

ದಿಂದಿಳಿದು, ಮಹಾದ್ವಾರದವರೆಗೂ ಮಹರ್ಷಿಗಳೊಡನೆ ಹೋಗಿ, ಅವರನ್ನು ಬೀಳ್ಕೊಟ್ಟು, ತಮ್ಮಂದಿರೊಡಗೂಡಿ, ಮಹಾಕ್ರತುವಾದ ರಾಜಸೂಯಯಾಗದ ವಿಷಯವಾಗಿ ಸಮಾಲೋಚಿಸಿದನು.

೧೨ನೆಯ ಅಧ್ಯಾಯವು ಮುಗಿಯಿತು.

೧೩ನೆಯ ಅಧ್ಯಾಯ ರಾಜಸೂಯಾರಮ್ಭಪರ್ವ

## ಯುಧಿಷ್ಠಿರನಿಂದ ರಾಜಸೂಯಯಾಗದ ಸಂಕಲ್ಪ : ಅದಕ್ಕಾಗಿ ಅನುಜರೊಡನೆ, ಮಂತ್ರಿಗಳೊಡನೆ, ಋಷಿ-ಮಹರ್ಷಿಗಳೊಡನೆ ಮತ್ತು ಶ್ರೀಕೃಷ್ಣನೊಡನೆ ಸಮಾಲೋಚನೆ

ವೈಶಂಪಾಯನರು ಹೇಳುತ್ತಾರೆ :

**ಋಷೇಸ್ತದ್ವಚನಂ ಶ್ರುತ್ವಾ ನಿಶಶ್ವಾಸ ಯುಧಿಷ್ಠಿರಃ**
**ಚಿನ್ತಯನ್ರಾಜಸೂಯೇಷ್ಟಿಂ ನ ಲೇಭೇ ಶರ್ಮ ಭಾರತ ॥೧॥**

ಜನಮೇಜಯ! ನಾರದರ ಮಾತನ್ನು ಕೇಳಿ ಯುಧಿಷ್ಠಿರನು ದೀರ್ಘವಾಗಿ ನಿಟ್ಟುಸಿರುಬಿಟ್ಟನು. ರಾಜಸೂಯಯಾಗದ ವಿಷಯವನ್ನೇ ಚಿಂತಿಸುತ್ತಿದ್ದ ಅವನಿಗೆ ಮನಃಶಾಂತಿಯೆಂಬುದೇ ಇರಲಿಲ್ಲ. ರಾಜಸೂಯಯಾಗಮಾಡಿದ ಮಹಾತ್ಮರಾದ ರಾಜರ್ಷಿಗಳ ಮಹಿಮೆಯನ್ನೂ ಯಾಜ್ಞಿಕರಿಗೆ ಪುಣ್ಯಕರ್ಮಗಳ ಮೂಲಕವಾಗಿ ಪ್ರಾಪ್ತವಾಗುವ ಪುಣ್ಯಲೋಕಗಳನ್ನೂ, ರಾಜಸೂಯಯಾಗವನ್ನು ಮಾಡಿದ ಹರಿಶ್ಚಂದ್ರನು ಇಂದ್ರನ ಸಭೆಯಲ್ಲಿ ವಿಶೇಷವಾಗಿ ತನ್ನ ತೇಜಸ್ಸಿನಿಂದ ಬೆಳಗುತ್ತಿದ್ದುದನ್ನೂ ನಾರದರಿಂದ ತಿಳಿದು ಯುಧಿಷ್ಠಿರನಿಗೂ ರಾಜಸೂಯಯಾಗವನ್ನು ಮಾಡುವ ಅಪೇಕ್ಷೆಯಾಯಿತು. ಅನಂತರ ಯುಧಿಷ್ಠಿರನು ಅಮಾತ್ಯರ ಮತ್ತು ಪ್ರಜೆಗಳ ಅಭಿಪ್ರಾಯಗಳನ್ನು ಪಡೆಯಲು ಸಭೆಯನ್ನು ಕರೆದನು. ಬಂದ ಸಭ್ಯರನ್ನು ಸತ್ಕರಿಸಿ, ಅವರಿಂದ ತಾನೂ ರಾಜಮರ್ಯಾದೆಯನ್ನು ಸ್ವೀಕರಿಸಿ, ಸಕಲರೂ ಶಾಂತರಾಗಿ ಉಪವಿಷ್ಟರಾದನಂತರ, ಅವರೆಲ್ಲರಿಗೂ ತನ್ನ ಮನಸ್ಸಿನ ಆಶಯ ವನ್ನು ವಿವರಿಸಿ ಹೇಳಿದನು. ಅವರೊಡನೆ ವಿಪುಲವಾದ ಚರ್ಚೆಯಾದನಂತರ

ಅವರ ಪೂರ್ಣವಾದ ಬೆಂಬಲದೊಡನೆ ರಾಜಸೂಯಯಾಗವನ್ನು ಮಾಡಬೇಕೆಂದು ಕಡೆಯ ನಿರ್ಧಾರಕ್ಕೆ ಬಂದನು.

ಪ್ರಜೆಗಳ ಮತ್ತು ಅಮಾತ್ಯರ ಪೂರ್ಣಸಹಕಾರವಿದ್ದರೂ ಯುಧಿಷ್ಠಿರನಿಗೆ ಒಂದೊಂದು ಬಾರಿ–'ರಾಜಸೂಯವನ್ನು ಮಾಡುವುದು ಸಾಧುವೇ?' ಎಂಬ ಶಂಕೆಯುಂಟಾಗುತ್ತಿತ್ತು. ಅದಕ್ಕೆ ಕಾರಣ : ನಾರದರು ರಾಜಸೂಯದಿಂದ ಉಂಟಾಗಬಹುದಾದ ಅಪಾಯಗಳನ್ನೂ ವಿವರಿಸಿ ಹೇಳಿದ್ದುದೇ ಆಗಿದ್ದಿತು. ಯುಧಿಷ್ಠಿರನು ಸ್ವಾಭಾವಿಕವಾಗಿಯೇ ಧರ್ಮಭೀರುವು. ಅಹಂಕಾರ ಮತ್ತು ಕೋಪಗಳು ಅವನ ಸಮೀಪದಲ್ಲಿ ಕೂಡ ಸುಳಿದಾಡುತ್ತಿರಲಿಲ್ಲ.



ಸರ್ವಲೋಕಗಳಿಗೂ ಹಿತವನ್ನುಂಟುಮಾಡಬೇಕೆಂಬುದೇ ಅವನ ಪೂರ್ಣಧ್ಯೇಯವಾಗಿದ್ದಿತು. ಸ್ವಲ್ಪವಾದರೂ ತಾರತಮ್ಯವಿಲ್ಲದೇ ಸಕಲಪ್ರಜೆಗಳನ್ನೂ ತನ್ನ ಮಕ್ಕಳಂತೆಯೇ ಪಾಲನೆಮಾಡುತ್ತಿದ್ದನು. 'ಕೋಪ ಮತ್ತು ಅಹಂಕಾರಗಳನ್ನು ಬದಿಗೊತ್ತಿ – ನಮ್ಮ ರಾಜ್ಯದಲ್ಲಿ ಯಾರು-ಯಾರಿಗೆ

ಏನೇನು ಸೌಕರ್ಯಗಳು ಬೇಕೋ ಎಲ್ಲವನ್ನೂ ಒದಗಿಸಿ ಕೊಡಿರಿ. ಧರ್ಮದಿಂದ ನಡೆಯಿರಿ'–ಎಂದು ಯುಧಿಷ್ಠಿರನು ತನ್ನ ಅಧಿಕಾರಿಗಳಿಗೆ ಪ್ರತಿಕ್ಷಣದಲ್ಲಿಯೂ ಹೇಳುತ್ತಿದ್ದನು.

'ಧರ್ಮಜ! ನೀನೇ ಧನ್ಯ ; ಧರ್ಮಜ! ಸಾಧು-ಸಾಧು'–ಎಂಬ ಮಾತುಗಳು ಎಲ್ಲೆಲ್ಲಿಯೂ ಕೇಳಿಬರುತ್ತಿದ್ದುವು.

ಅಂತಹ ಧರ್ಮಾತ್ಮನಾದ ಯುಧಿಷ್ಠಿರನನ್ನು ಅವನ ಪ್ರಜೆಗಳೆಲ್ಲರೂ ತಮ್ಮ ತಂದೆಯೆಂದೇ ಭಾವಿಸಿದ್ದರು. ಧರ್ಮಜನ ಬಗೆಗೆ ದ್ವೇಷಭಾವದಿಂದ ಯಾವೊಬ್ಬನೂ ಇರಲಿಲ್ಲ. ಅರ್ಥಾತ್ ಅವನಿಗೆ ಶತ್ರುಗಳೇ ಇರಲಿಲ್ಲ. ಆದುದರಿಂದಲೇ ಅವನಿಗೆ 'ಅಜಾತಶತ್ರು' ಎಂದೂ ಹೆಸರಾಯಿತು.

ನಿಶ್ಚಯವಾಗಿಯೂ ಧರ್ಮರಾಜನು ಪ್ರಜೆಗಳನ್ನು ತನ್ನ ಸಂಸಾರಕ್ಕೆ ಸೇರಿದವರೆಂದೇ ಭಾವಿಸಿದ್ದನು. ಭೀಮನು ಅಣ್ಣನ ಆಜ್ಞಾಧಾರಕನಾಗಿ ಧರ್ಮದಿಂದ ರಾಜ್ಯಶಾಸನಮಾಡುತ್ತಿದ್ದನು. ಅರ್ಜುನನು ಪರಾಕ್ರಮದಿಂದ ಶತ್ರುಗಳ ಅಹಂಕಾರವನ್ನು ಮುರಿಯುತ್ತಿದ್ದನು. ಸಹದೇವನು ನ್ಯಾಯಾಂಗ ಶಾಖೆಯನ್ನು ವಹಿಸಿಕೊಂಡು ಸಕಲಪ್ರಜೆಗಳಿಗೂ ನಿಷ್ಪಕ್ಷಪಾತವಾಗಿ ನ್ಯಾಯವು ದೊರೆಯುವಂತೆ ವ್ಯವಸ್ಥೆಯನ್ನು ಮಾಡಿದ್ದನು. ನಕುಲನು ಸಕಲರಲ್ಲಿಯೂ ವಿನಯಶಾಲಿಯಾಗಿರುತ್ತಿದ್ದನು.

ಈ ವಿಧವಾದ ಸುವ್ಯವಸ್ಥೆಯ ಕಾರಣದಿಂದಾಗಿ ದೇಶದ ಪ್ರಜೆಗಳಲ್ಲಿ ಪರಸ್ಪರಕಲಹಗಳಿರಲಿಲ್ಲ. ಎಲ್ಲರೂ ತಮ್ಮ ವರ್ಣಾಶ್ರಮಗಳಿಗೆ ಉಕ್ತವಾದ ಧರ್ಮಗಳಿಗೆ ಅನುಸಾರವಾಗಿಯೇ ನಡೆಯುತ್ತಿದ್ದರು. ಮಳೆಯು ಕಾಲಕ್ಕೆ ಸರಿಯಾಗಿ ಬರುತ್ತಿದ್ದುದರಿಂದ ಕ್ಷಾಮ-ಡಾಮರಗಳ ಭಯವಿರಲಿಲ್ಲ. ಯಜ್ಞ-ಯಾಗಾದಿಗಳಿಗೆ ಬೇಕಾದ ಪದಾರ್ಥಗಳು ಹೇರಳವಾಗಿ ಸಿಕ್ಕುತ್ತಿದ್ದುವು. ವ್ಯವಸಾಯವೂ– ವ್ಯಾಪಾರವೂ ಚೆನ್ನಾಗಿ ನಡೆಯುತ್ತಿದ್ದುವು. ಧರ್ಮಾತ್ಮನಾದ ಯುಧಿಷ್ಠಿರನ ಆಳ್ವಿಕೆಯಲ್ಲಿ ಜನರಿಗೆ ಚಿಂತೆಯಿರಲಿಲ್ಲ. ಬಲಾತ್ಕಾರವಾಗಿ ತೆರಿಗೆಗಳ ಸುಲಿಗೆಯಿರಲಿಲ್ಲ. ಅಗ್ನಿಭಯವಾಗಲೀ, ವಿಷಭಯವಾಗಲೀ, ಮಾಟ-ಮಾಯಗಳ ಭಯವಾಗಲೀ ಇರಲಿಲ್ಲ. ಕಳ್ಳರಿಂದಾಗಲೀ, ವಂಚಕರಿಂದಾಗಲೀ ಅಥವಾ ರಾಜನಿಗೆ ಪ್ರಿಯರಾದವರಿಂದಾಗಲೀ–ಜನರಿಗೆ ಯಾವ ವಿಧವಾದ ಭಯವೂ ಇರಲಿಲ್ಲ.

ಸಂಧಿ-ವಿಗ್ರಹಾದಿಗಳಿಂದ ನಿರ್ಜಿತರಾದ ಆಶ್ರಿತರಾಜರು ಧರ್ಮರಾಜನಿಗೆ ಪ್ರಿಯವನ್ನುಂಟುಮಾಡುವ ಆಶಯದಿಂದ ತಮ್ಮ ದೇಶಗಳ ವರ್ತಕರನ್ನು ಇಂದ್ರಪ್ರಸ್ಥಕ್ಕೆ ಕರೆತಂದು, ಅವರಿಂದ ತೆರಿಗೆಗಳನ್ನು ಕೊಡಿಸುತ್ತಿದ್ದರು. ಕೇವಲ ಸುಖೋಪಭೋಗಗಳಲ್ಲಿ ಆಸಕ್ತರಾದವರಿಗೂ, ಲೋಭಿಗಳಿಗೂ ಧರ್ಮಜನ ದೇಶದಲ್ಲಿ ಯಾವ ಪ್ರತಿಕೂಲವೂ ಇರಲಿಲ್ಲ. ರಾಜಾಧಿರಾಜನಾದ ಯುಧಿಷ್ಠಿರನು ಎಲ್ಲ ವಿಷಯಗಳನ್ನೂ ಬಹಳ ತಾಳ್ಮೆಯಿಂದ ಪರಿಶೀಲಿಸುತ್ತಿದ್ದನು. ಆದುದರಿಂದಲೇ ಅವನು ಗೆದ್ದ ದೇಶಗಳ ಪ್ರಜೆಗಳೆಲ್ಲರೂ ತಮ್ಮ ತಂದೆ-ತಾಯಿಗಳಿಗಿಂತಲೂ ಹೆಚ್ಚು ಅನುರಾಗವನ್ನು ಧರ್ಮಜನಲ್ಲಿ ತೋರುತ್ತಿದ್ದರು.

ಧರ್ಮಜನು ಮಂತ್ರಿಗಳನ್ನೂ, ಅನುಜರನ್ನೂ ಕರೆಯಿಸಿ ರಾಜಸೂಯಯಾಗದ ವಿಷಯವಾಗಿ ಪುನಃ ಪುನಃ ಸಮಾಲೋಚನೆಯನ್ನು ನಡೆಸುತ್ತಿದ್ದನು. ಅವರೆಲ್ಲರೂ ಧರ್ಮಜನಿಗೆ ಇಂತೆಂದರು : “ಒಂದು ರಾಜ್ಯದ ಅಧಿಪತಿಯಾಗಿರುವವನು ರಾಜಸೂಯಯಾಗದ ಮೂಲಕ ಚಕ್ರವರ್ತಿಯಾಗಬೇಕೆಂದು ಇಚ್ಛಿಸುವುದು ಸ್ವಾಭಾವಿಕವಾಗಿಯೇ ಇದೆ. ಮಹಾರಾಜ! ವರುಣನು ಜಲಾಧಿಪತಿಯಾಗಿರುವಂತೆ – ರಾಜನು ಅಖಂಡಪ್ರದೇಶಕ್ಕೂ ಅಧಿಪತಿಯಾಗಬೇಕು. ಅಂತಹ ಚಕ್ರವರ್ತಿಸ್ಥಾನಕ್ಕೆ ನೀನು ಯೋಗ್ಯನೆಂಬುದೂ, ಇದಕ್ಕಾಗಿ ರಾಜಸೂಯಯಾಗವನ್ನು ನಡೆಸಲು ಕಾಲವೀಗ ಸನ್ನಿಹಿತವಾಗಿದೆಯೆಂಬುದೂ ನಮ್ಮೆಲ್ಲರ ಅಭಿಪ್ರಾಯವೂ ಆಗಿದೆ. ಮಹರ್ಷಿಗಳು ಸಾಮವೇದದ ಆರು ಮಹಾಮಂತ್ರಗಳಿಂದ ಈ ಯಾಗದ ಆರು ಅಗ್ನಿಗಳನ್ನು ಪ್ರತಿಷ್ಠಾಪಿಸುವ ಕಾಲವು ನಿಶ್ಚಯವಾಗಿಯೂ ಸನ್ನಿಹಿತವಾಗಿದೆ.

**ದರ್ವೀಹೋಮಾನುಪಾದಾಯ ಸರ್ವಾನ್ಯಃ ಪ್ರಾಪ್ನುತೇ ಕ್ರತೂನ್।**
**ಅಭಿಷೇಕಂ ಚ ಯಸ್ಯಾನ್ತೇ ಸರ್ವಜಿತ್ತೇನ ಚೋಚ್ಯತೇ ॥೨೪॥**

ರಾಜಸೂಯಯಾಗಾನಂತರ ಅಭಿಷಿಕ್ತನಾಗಿ ಚಕ್ರವರ್ತಿಯಾಗುವ ರಾಜನು ಅಗ್ನಿಹೋತ್ರಾದಿ ಇತರ ಯಾಗಗಳ ಫಲಗಳೆಲ್ಲವನ್ನೂ ಕೇವಲ ಈ ಯಾಗದಿಂದಲೇ ಪಡೆಯುತ್ತಾನೆ. ಆದುದರಿಂದಲೇ ಅವನಿಗೆ ‘ಸರ್ವಜಿತ್’ ಎಂದು ಹೆಸರು ಬರುವುದು.

ಮಹಾರಾಜ! ನೀನು ಈ ಯಾಗಮಾಡಲು ಸಮರ್ಥನಾಗಿರುವೆ. ನಾವೆಲ್ಲರೂ ನಿನಗೆ ವಿಧೇಯರಾಗಿರುತ್ತೇವೆ. ಆದುದರಿಂದ ಯಾವ ವಿಧವಾದ ಶಂಕೆಯನ್ನೂ ಇಟ್ಟುಕೊಳ್ಳದೇ, ಪುನಃ ಪುನಃ ವಿಚಾರಮಾಡಲು ಹೋಗದೇ ಈ ಯಾಗವನ್ನು ಒಡನೆಯೇ ಮಾಡಲು ನಿಶ್ಚಯಿಸು."

ಈ ರೀತಿಯಾಗಿ ಯುಧಿಷ್ಠಿರನ ಸುಹೃದರು ಸಾಮೂಹಿಕವಾಗಿಯೂ, ಪ್ರತ್ಯೇಕ-ಪ್ರತ್ಯೇಕವಾಗಿಯೂ ಹೇಳುತ್ತಿದ್ದರು.

ಹಿತಚಿಂತಕರು ಹೇಳಿದ ಸಾಹಸಪೂರ್ಣವಾದ ಮತ್ತು ಪ್ರಿಯವಾದ ಮಾತುಗಳನ್ನು ಶ್ರೇಷ್ಠನಾದ ಯುಧಿಷ್ಠಿರನು ಗ್ರಹಣಮಾಡಿಕೊಂಡನು. ಸುಹೃದರ ಮಾತುಗಳನ್ನೂ ಕೇಳಿ ತನಗೆ ರಾಜಸೂಯಯಾಗವನ್ನು ಮಾಡಲು ಇರುವ ಸಾಮರ್ಥ್ಯವನ್ನೂ ಮನಗಂಡು ರಾಜಸೂಯಯಾಗವನ್ನು ಮಾಡಲು ನಿಶ್ಚಯಿಸಿದನು. ಕೆಲವು ದಿನಗಳು ಕಳೆದನಂತರ ಪುನಃ ಅನುಜರನ್ನೂ, ಋತ್ವಿಜರನ್ನೂ, ಧೌಮ್ಯ-ದ್ವೈಪಾಯನರನ್ನೂ, ಅಮಾತ್ಯರನ್ನೂ ಕರೆಯಿಸಿ ಹೇಳಿದನು : "ಚಕ್ರವರ್ತಿಪದವಿಗೆ ಒಯ್ಯುವ ರಾಜಸೂಯವೆಂಬ ಮಹಾಯಾಗವನ್ನು ಮಾಡಬೇಕೆಂಬ ನನ್ನ ಆಕಾಂಕ್ಷೆಯು ಹೇಗೆ ಪೂರ್ಣವಾಗುವುದು? ದಯೆಯಿಟ್ಟು ಹೇಳಿರಿ."

ರಾಜೀವಲೋಚನ! ಜನಮೇಜಯ! ರಾಜನಿಂದ ಹೀಗೆ ಕೇಳಲ್ಪಟ್ಟ ಧೌಮ್ಯ-ದ್ವೈಪಾಯನಾದಿಗಳು ಯುಧಿಷ್ಠಿರನಿಗೆ ಸ್ಪಷ್ಟವಾಗಿ ಹೇಳಿದರು :

"ಮಹಾರಾಜ! ಈ ಯಾಗವನ್ನು ಮಾಡಲು ಬೇಕಾದ ಸಕಲಸದ್ಗುಣಗಳೂ ನಿನ್ನಲ್ಲಿವೆಯಾದುದರಿಂದ ನಿನ್ನ ಇಚ್ಛೆಯು ನಿರಾತಂಕವಾಗಿ ಪೂರ್ಣವಾಗುವುದು."

ಋತ್ವಿಜರೂ ಮತ್ತು ಮಹರ್ಷಿಗಳೂ ಯುಧಿಷ್ಠಿರನಿಗೆ ಹೀಗೆ ಹೇಳಲಾಗಿ, ಧರ್ಮಜನ ಅನುಜರಾದ ಭೀಮಾದಿಗಳೂ ಮತ್ತು ಅಮಾತ್ಯ-ಸೇನಾಪ್ರಮುಖರೂ ಮಹರ್ಷಿಗಳ ಆ ಮಾತುಗಳನ್ನು ಆದರದಿಂದ ಅನುಮೋದಿಸಿದರು.

ಯುಧಿಷ್ಠಿರನು ಋತ್ವಿಜರ ಅಭಿಪ್ರಾಯವನ್ನು ಗೌರವಿಸಿ ಅವರೆಲ್ಲ

ರನ್ನೂ ಸತ್ಕರಿಸಿ ಬೀಳ್ಕೊಟ್ಟು ಏಕಾಂತದಲ್ಲಿ ಕುಳಿತು ಪುನಃ ತನ್ನಲ್ಲಿಯೇ ಆಲೋಚಿಸತೊಡಗಿದನು.

ಯುಧಿಷ್ಠಿರನಿಗೆ ಅವರಿತ್ತ ಸಲಹೆಗಳಿಂದ ತೃಪ್ತಿಯುಂಟಾಗಲಿಲ್ಲ. ಅನುಜರಾಗಲೀ, ಅಮಾತ್ಯರಾಗಲೀ ತನ್ನ ಮೇಲಿಟ್ಟಿರುವ ಅಪಾರಗೌರವದಿಂದ ಅಥವಾ ಪ್ರೇಮದಿಂದ ತಾನು ಉದ್ದೇಶಿಸಿರುವ ಕಾರ್ಯಕ್ಕೆ ಕಾರ್ಯದ ಮಹತ್ತ್ವವೇನೆಂಬುದನ್ನು ಪರ್ಯಾಲೋಚಿಸದೆಯೇ ಬೆಂಬಲವೀಯುತ್ತಿರಬಹುದೆಂಬ ಶಂಕೆಯು ಧರ್ಮಾತ್ಮನಾದ ಯುಧಿಷ್ಠಿರನಿಗೆ ಉಂಟಾಗಿದ್ದಿರಬಹುದು. ಅದರಿಂದಾಗಿ ಪುನಃ ಪುನಃ ತನ್ನಲ್ಲಿಯೇ ಆಲೋಚಿಸಿದನು. 'ತಾನು ಮಾಡುವ ಕಾರ್ಯದಿಂದ ಲೋಕಕ್ಕೆ ಹಿತವಾಗಬೇಕೇ ಹೊರತು ಕಿಂಚಿತ್ತಾದರೂ ಅಹಿತವಾಗಕೂಡದು. ತನ್ನ ಈಗಿನ ಆದಾಯ-ವ್ಯಯಗಳೆಷ್ಟಿವೆ? ಈಗ ಬರುತ್ತಿರುವ ಆದಾಯದಲ್ಲಿಯೇ ಮಹಾಯಾಗವನ್ನು ನಡೆಸಲು ಸಾಧ್ಯವಿದೆಯೇ? ಮಹಾಯಾಗದ ನೆಪದಿಂದ ಜನಗಳ ಮೇಲೆ ಹೆಚ್ಚಿನ ತೆರಿಗೆಯನ್ನು ಹಾಕಬಾರದು. ಯಾಗಕ್ಕೆ ಯಾವ ಮಾರ್ಗದಿಂದ ದ್ರವ್ಯಸಂಗ್ರಹಣವಾಗಬಹುದು?'–ಇವೇ ಮುಂತಾದ ಯೋಚನಾತರಂಗಗಳು ಯುಧಿಷ್ಠಿರನ ಮನದಲ್ಲಿ ಕ್ಷಣ-ಕ್ಷಣಕ್ಕೂ ಉದ್ಭೂತವಾಗುತ್ತಿದ್ದುವು. ಕಡೆಗೆ ಯುಧಿಷ್ಠಿರನು ಒಂದು ನಿಶ್ಚಯಕ್ಕೆ ಬಂದನು.

"ಈ ಮಹಾಯಜ್ಞವನ್ನು ನಾನೇ ಸಂಕಲ್ಪಿಸಿ ಮಾಡತಕ್ಕದ್ದಲ್ಲ. ಇದರ ವಿಷಯವಾಗಿ ನಿರ್ಣಯಮಾಡಲು ಶ್ರೀಕೃಷ್ಣನ ಅಭಿಪ್ರಾಯವನ್ನೇ ತೆಗೆದುಕೊಳ್ಳಬೇಕು."

ಯುಧಿಷ್ಠಿರನು ಹೀಗೆ ನಿಶ್ಚಯಿಸಿ, ಸಕಲಲೋಕಗಳಲ್ಲಿಯೂ ಶ್ರೀಕೃಷ್ಣನೇ ಶ್ರೇಷ್ಠನಾದವನೆಂದು ಭಾವಿಸಿ, ಅಪ್ರಮೇಯನಾದ, ಮಹಾಬಾಹುವಾದ, ಹುಟ್ಟು-ಸಾವುಗಳಿಲ್ಲದ, ಇಚ್ಛಾಮಾತ್ರದಿಂದ ಜನ್ಮತಾಳಿರುವ ಹರಿಯನ್ನು ಮನದಲ್ಲಿಯೇ ಧ್ಯಾನಮಾಡಿದನು.

ಸರ್ವಜ್ಞನಾದ ಶ್ರೀಕೃಷ್ಣನಿಗೆ ತಿಳಿಯದಿರುವ ವಿಷಯವೇ ಇಲ್ಲ. ಅವನು ಸಾಧಿಸಲಾಗದಿರುವ ಕಾರ್ಯವಿಲ್ಲ ಮತ್ತು ಅವನು ಭಕ್ತರಿಗೆ ಅವಲಂಬನವೀಯಲು ಯಾವಾಗಲೂ ಸಿದ್ಧನಾಗಿರುತ್ತಾನೆ. ಅಂತಹ ಪರಾತ್ಪರನಾದ ಶ್ರೀಕೃಷ್ಣನನ್ನು ಕರೆಯಿಸಬೇಕೆಂದು ನಿಶ್ಚಯಿಸಿ, ಯುಧಿಷ್ಠಿ

ರನು–ಕಾರ್ಯಾರಂಭದಲ್ಲಿ ಪೂಜ್ಯಗುರುಗಳಲ್ಲಿ ನಿವೇದಿಸಿಕೊಳ್ಳುವಂತೆ– ಸಕಲಚರಾಚರಗಳಿಗೂ ಗುರುವಾದ ಶ್ರೀಕೃಷ್ಣನಿಗೆ ಶೀಘ್ರಗಾಮಿಯಾದ ದೂತನ ಮೂಲಕ ಹೇಳಿಕಳುಹಿಸಿದನು.

ದೂತನು ದ್ವಾರವತಿಗೆ ಬಂದು ಯುಧಿಷ್ಠಿರನ ಆದೇಶವನ್ನು ಶ್ರೀಕೃಷ್ಣನಿಗೆ ತಿಳಿಸಿದೊಡನೆಯೇ ಪಾಂಡವಪ್ರಿಯನಾದ ಶ್ರೀಕೃಷ್ಣನು ಸ್ವಲ್ಪವೂ ತಡಮಾಡದೆ, ಪಾರ್ಥನನ್ನು ನೋಡುವ ಆಕಾಂಕ್ಷೆಯಿಂದ ಶೀಘ್ರಗಾಮಿಗಳಾದ ಕುದುರೆಗಳನ್ನು ಕಟ್ಟಿದ ತನ್ನ ರಥವನ್ನೇರಿ, ದೂತನಾದ ಇಂದ್ರಸೇನ ನಿಂದೊಡಗೂಡಿ ಅನೇಕ ನದೀ-ನದ-ದುರ್ಗಗಳನ್ನು ದಾಟಿ ಇಂದ್ರಪ್ರಸ್ಥವನ್ನು ಸೇರಿದನು.



ರಥದಿಂದಿಳಿದೊಡನೆಯೇ ಸ್ವಲ್ಪವೂ ತಡಮಾಡದೇ ಯುಧಿಷ್ಠಿರನನ್ನು ಸಂದರ್ಶಿಸಿದನು. ಆ ಸಮಯದಲ್ಲಿ ಯುಧಿಷ್ಠಿರನಿಗುಂಟಾದ ಆನಂದಕ್ಕೆ ಪಾರವೇ ಇರಲಿಲ್ಲ. ಶ್ರೀಕೃಷ್ಣನನ್ನು ಪ್ರೇಮಾದರಗಳಿಂದ ಸ್ವಾಗತಿಸಿ,

ಸತ್ಕರಿಸಿ, ಯೋಗ-ಕ್ಷೇಮಗಳನ್ನು ವಿಚಾರಿಸಿದನು. ಭೀಮಸೇನನೂ ಬಂದು ಶ್ರೀಕೃಷ್ಣನನ್ನು ಆದರದಿಂದ ಸ್ವಾಗತಿಸಿದನಂತರ, ಕುಂತೀದೇವಿಯನ್ನು ಕಾಣಲು ಶ್ರೀಕೃಷ್ಣನು ಅಂತಃಪುರಕ್ಕೆ ಪ್ರವೇಶಿಸಿದನು. ಕುಂತಿಯ ಆಶೀರ್ವಾದಗಳನ್ನೂ ಪಡೆದು, ತನ್ನನ್ನು ನೋಡಲು ಕಾದಿದ್ದ ನಕುಲ-ಸಹದೇವರನ್ನು ಆಶೀರ್ವದಿಸಿ, ತನ್ನ ಪ್ರೇಮಾಲಿಂಗನಕ್ಕಾಗಿ ಕಾದಿದ್ದ ಅರ್ಜುನನೊಡನೆ ಒಂದೆರಡು ದಿನಗಳು ಭವ್ಯಮಂದಿರದಲ್ಲಿ ವಿಶ್ರಾಂತಿಯನ್ನು ಪಡೆದನು. ಶ್ರೀಕೃಷ್ಣನಿಗೆ ಪ್ರಯಾಣದ ಆಯಾಸವು ಪರಿಹಾರವಾಯಿತೆಂದು ತಿಳಿದನಂತರ ಯುಧಿಷ್ಠಿರನು ಅವನನ್ನು ಸಮಾಲೋಚನಾಮಂದಿರಕ್ಕೆ ಕರೆದೊಯ್ದು ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ಹೇಳಿದನು :

"ದೇವಕೀನಂದನನೇ! ರಾಜಸೂಯಯಾಗವನ್ನು ಮಾಡಬೇಕೆಂದು ನನಗೆ ಇಚ್ಛೆಯುಂಟಾಗಿದೆ. ಆದರೆ ಇಚ್ಛೆಯುಂಟಾಗಿದೆಯೆಂದಮಾತ್ರದಿಂದ ಆ ಮಹಾಯಾಗವು ಮಾಡತಕ್ಕದ್ದಲ್ಲ. ಸರ್ವಜ್ಞನಾದ ನಿನಗೆ, ಈ ಯಾಗವನ್ನು ನಾನು ಮಾಡಬಹುದೇ? ಹೇಗೆ ಮಾಡಬಹುದು? ಹೇಗೆ ಮಾಡಬೇಕು? ಯಾವಾಗ ಮಾಡಬೇಕು? ಎಂಬ ವಿಷಯಗಳು ಪೂರ್ಣವಾಗಿ ತಿಳಿದಿವೆ, ವಾಸುದೇವ!

**ಯಸ್ಮಿನ್ಸರ್ವಂ ಸಮ್ಭವತಿ ಯಶ್ಚ ಸರ್ವತ್ರ ಪೂಜ್ಯತೇ।**
**ಯಶ್ಚ ಸರ್ವೇಶ್ವರೋ ರಾಜಾ ರಾಜಸೂಯಂ ಸ ವಿನ್ದತೇ ॥೪೭॥**

ಯಾವನು ಎಲ್ಲವನ್ನೂ ಸಾಧಿಸಬಲ್ಲನೋ, ಯಾವನು ಎಲ್ಲರಿಂದಲೂ ಪೂಜಿಸಲ್ಪಡುವನೋ ಮತ್ತು ಯಾವನು ರಾಜರಿಗೆಲ್ಲಾ ರಾಜನಾಗಿರುವನೋ–ಅವನು ಮಾತ್ರ ಈ ಯಾಗವನ್ನು ಮಾಡಲು ಅರ್ಹನಾಗಿರುತ್ತಾನೆ. ಈ ಅರ್ಹತೆಗಳೆಲ್ಲವೂ ನನ್ನಲ್ಲಿವೆಯೇ? ಎಂಬ ವಿಷಯದಲ್ಲಿ ಶಂಕಿತನಾಗಿರುವೆನು. ನನ್ನ ಅಮಾತ್ಯರೂ, ಮಿತ್ರರೂ, ಹಿತಚಿಂತಕರೂ–ನಾನು ಈ ಯಾಗವನ್ನು ಮಾಡಬೇಕೆಂಬ ಅಭಿಪ್ರಾಯವನ್ನು ಸೂಚಿಸಿರುತ್ತಾರೆ. ಆದರೆ ಅವರೆಲ್ಲರ ಸಲಹೆಗಳನ್ನೂ ಕೆಲವು ಕಾರಣಗಳಿಂದ ಸ್ವೀಕರಿಸಲು ಸಾಧ್ಯವಿಲ್ಲ. ಏಕೆಂದರೆ :

**ಕೇಚಿದ್ಧಿ ಸೌಹೃದಾದೇವ ನ ದೋಷಂ ಪರಿಚಕ್ಷತೇ।**
**ಸ್ವಾರ್ಥಹೇತೋಸ್ತಥೈವಾನ್ಯೇ ಪ್ರಿಯಮೇವ ವದನ್ತ್ಯುತ ॥೪೯॥**

**ಪ್ರಿಯಮೇವ ಪರೀಪ್ಸನ್ತೇ ಕೇಚಿದಾತ್ಮನಿ ಯದ್ಧಿತಮ್**
**ಏವಮ್ಪ್ರಾಯಾಶ್ಚ ದೃಶ್ಯನ್ತೇ ಜನವಾದಾಃ ಪ್ರಯೋಜನೇ ॥೫೦॥**

ಕೆಲವರು ನನ್ನ ಮೇಲಿನ ವಿಶೇಷಾಭಿಮಾನದಿಂದ ಕಾರ್ಯಸಾಧನೆಯಲ್ಲಿರುವ ಕಷ್ಟಗಳೇನೆಂಬುದನ್ನು ಸೂಚಿಸಲು ಅಥವಾ ಕಾಣಲು ಅಸಮರ್ಥರಾಗುತ್ತಾರೆ. ಮತ್ತೆ ಕೆಲವರು ಸ್ವಾರ್ಥದ ಕಾರಣದಿಂದ ನನಗೆ ಪ್ರಿಯವಾಗುವುದನ್ನೇ ಹೇಳುತ್ತಾರೆ. ಇನ್ನೂ ಕೆಲವರು ತಮಗೆ ಅನುಕೂಲವೆನಿಸಿದುದನ್ನು ಮಾಡಲು ಹೇಳುತ್ತಾರೆ. ಈ ಕಾರಣದಿಂದಾಗಿ ಅವರ ಸಲಹೆಗಳಂತೆ ನಡೆಯಲು ನನ್ನ ಮನಸ್ಸು ಒಡಂಬಡದಾಗಿದೆ.

ಕೃಷ್ಣ! ನಿನ್ನಲ್ಲಿ ಆ ವಿಧವಾದ ಅಭಿಪ್ರಾಯಗಳಿರುವುದಕ್ಕೆ ಕಾರಣವಿಲ್ಲ. ನೀನು ಕಾರ್ಯ-ಕಾರಣಗಳೆರಡರಿಂದಲೂ ಮುಕ್ತನಾಗಿರುವೆ. ಕಾಮ-ಕ್ರೋಧಾದಿಗಳನ್ನೂ ತ್ಯಜಿಸಿರುವವನು ನೀನು. ಆದುದರಿಂದ ನೀನೊಬ್ಬನೇ ಈ ವಿಷಯದಲ್ಲಿ ನಿರ್ದಿಷ್ಟವಾದ ಸಲಹೆಯನ್ನು ಕೊಡಲು ಸಮರ್ಥನಾಗಿರುವೆ. ನಾನೇನು ಮಾಡಬೇಕೆಂಬುದನ್ನೂ–ರಾಜಸೂಯಯಾಗದ ಸಾಧನೆಯು ಹೇಗೆಂಬುದನ್ನೂ ತಿಳಿಸು, ವಾಸುದೇವ!"

ಗಿ೩ನೆಯ ಅಧ್ಯಾಯವು ಮುಗಿಯಿತು.

ಗಿ೪ನೆಯ ಅಧ್ಯಾಯ ರಾಜಸೂಯಾರಮ್ಭಪರ್ವ (ಮುಂದುವರಿದಿದೆ.)

### ಶ್ರೀಕೃಷ್ಣನು ರಾಜಸೂಯಯಾಗಾರಂಭಕ್ಕೆ ಸಮ್ಮತಿಸಿದುದು

ಭಗವಂತನಾದ ಶ್ರೀಕೃಷ್ಣನು ಹೇಳುತ್ತಾನೆ :

**ಸರ್ವೈರ್ಗುಣೈರ್ಮಹಾರಾಜ ರಾಜಸೂಯಂ ತ್ವಮರ್ಹಸಿ**
**ಜಾನತಸ್ತ್ವೇವ ತೇ ಸರ್ವಂ ಕಿಂಚಿದ್ವಕ್ಷ್ಯಾಮಿ ಭಾರತ ॥೧॥**

"ಧರ್ಮಜ! ರಾಜಸೂಯಯಾಗವನ್ನು ಮಾಡಲು ಇರಬೇಕಾದ ಸಕಲಗುಣಗಳೂ ನಿನ್ನಲ್ಲಿವೆ. ಮೇಲಾಗಿ ನೀನು ಸಕಲವನ್ನೂ ತಿಳಿದವನಾಗಿರುವೆ. ಹಾಗಿದ್ದರೂ ನಾನೂ ಕೆಲವು ವಿಷಯಗಳನ್ನು ಹೇಳುವೆನು, ಕೇಳು :

ಈಗ ಕ್ಷತ್ರಿಯರೆಂದು ಹೇಳಿಸಿಕೊಳ್ಳಲ್ಪಡುತ್ತಿರುವವರು ಹಿಂದೆ ಭಗ

ವಂತನಾದ ಜಾಮದಗ್ನ್ಯರಾಮನಿಂದ ವಧಿಸಲ್ಪಟ್ಟ ಕ್ಷತ್ರಿಯರಲ್ಲಿ ಅಳಿದು-ಉಳಿದವರ ಸಂತತಿಯವರು. ರಾಜಸೂಯಯಾಗವನ್ನು ಕ್ಷತ್ರಿಯನಾದವನು ಮಾಡಬೇಕೆಂದು ಆದೇಶರೂಪವಾಗಿ ಕ್ಷತ್ರಿಯಪರಂಪರೆಯಲ್ಲಿ ಹೇಳುವ ರೂಢಿಯು ಬೆಳೆದುಬಂದಿರುವ ವಿಷಯವು ನಿನಗೂ ತಿಳಿದಿರುವುದು. ಈ ಕ್ಷತ್ರಿಯರು ತಾವೆಲ್ಲರೂ ಐಲ ಮತ್ತು ಇಕ್ಷ್ವಾಕುವಂಶಗಳವರೆಂದು ಹೇಳಿಕೊಳ್ಳುತ್ತಾರೆ. ಐಲ ಮತ್ತು ಇಕ್ಷ್ವಾಕುವಂಶಗಳಲ್ಲಿಯೂ ನೂರಾರು ಕವಲುಗಳೊಡೆದು ಹೋಗಿರುವುದು. ಯಯಾತಿ ಮತ್ತು ಭೋಜವಂಶಗಳ ಕೀರ್ತಿಯು ಶಾಶ್ವತವಾಗಿ ಉಳಿದಿರುವುದು ಮತ್ತು ಆ ಪೀಳಿಗೆಯವರೂ ಇಂದು ಅನೇಕಜನರಿದ್ದಾರೆ. ಎಲ್ಲ ಕ್ಷತ್ರಿಯರೂ ಆ ವಂಶದವರ ಇತಿಹಾಸಗಳನ್ನೇ ಹೇಳುತ್ತಾ ಶ್ಲಾಘನೆಮಾಡುತ್ತಿರುತ್ತಾರೆ.

ಆದರೆ ಇತ್ತೀಚೆಗೆ ಜರಾಸಂಧನೆಂಬ ರಾಜನು ಹಿಂದಿನ ರಾಜರ ಕೀರ್ತಿಯನ್ನು ತಿರಸ್ಕರಿಸುತ್ತಾ, ಅನೇಕದೇಶಗಳನ್ನು ಆಕ್ರಮಿಸಿ, ಅನೇಕರಾಜರ ತಲೆಗಳನ್ನು ಮೆಟ್ಟಿ, ಜಗತ್ತಿನ ಮಧ್ಯಭಾಗದಲ್ಲಿರುವ ಗಿರಿವ್ರಜಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದಾನೆ. ನಮ್ಮ ರಾಜಧಾನಿಯನ್ನೂ ಆಕ್ರಮಿಸಿ, ನಮ್ಮ ಮೇಲೆಯೂ ಹಗೆತನವನ್ನು ತಾಳಿದ್ದಾನೆ.

ಯಾವ ರಾಜನು ಎಲ್ಲ ರಾಜರಿಗೂ ರಾಜನಾಗಿರುವನೋ ಮತ್ತು ಪ್ರಪಂಚದ ಸಕಲರಾಜ್ಯಗಳೂ ಯಾವಾತನ ಸ್ವಾಧೀನದಲ್ಲಿರುವುವೋ–ಅಂತಹವನೇ 'ಚಕ್ರವರ್ತಿ' ಎಂದು ಕರೆಯಲ್ಪಡುವನು.

ಧರ್ಮಜ! ಇಂದು ಅನೇಕರಾಜರು ಆ ಜರಾಸಂಧನ ಆಶ್ರಯದಲ್ಲಿರುತ್ತಾರೆ. ಮಹಾಪರಾಕ್ರಮಿಯಾದ ಶಿಶುಪಾಲನು ಜರಾಸಂಧನ ಸೇನಾಧಿಪತಿಯಾಗಿದ್ದಾನೆ. ಮಾಯಾಯುದ್ಧದಲ್ಲಿ ವಿಶೇಷಪರಿಶ್ರಮವನ್ನು ಪಡೆದಿರುವ ಮಹಾಪರಾಕ್ರಮಿಯಾದ, ಕರೂಷರಾಜನಾದ ದಂತವಕ್ತ್ರನೂ–ಶಿಷ್ಯನು ಗುರುವಿನ ಆಶ್ರಯಪಡೆಯುವಂತೆ–ಜರಾಸಂಧನ ಆಶ್ರಯವನ್ನು ಪಡೆದಿದ್ದಾನೆ.

ಶೂರರಾದ ಹಂಸ-ಡಿಂಭಕರೂ, ದಂತವಕ್ತ್ರ, ಕರಭ, ಮೇಘವಾಹನ–

ಇವರುಗಳೂ ಜರಾಸಂಧನ ಆಶ್ರಿತರಾಗಿದ್ದಾರೆ. ನಿನ್ನ ತಂದೆಯ ಮಿತ್ರನಾದ ಭಗದತ್ತನ ಹೆಸರನ್ನು ಕೇಳಿರುವೆಯಲ್ಲವೇ? ಅವನಾದರೂ ಸಾಮಾನ್ಯನಲ್ಲ. ಅವನ ತಲೆಯಲ್ಲಿ ಮಣಿಯಿದೆಯೆಂದೂ ಹೇಳುತ್ತಾರೆ. ಅಸಾಧಾರಣ ಪರಾಕ್ರಮವುಳ್ಳ, ಮುರ ಮತ್ತು ನರಕದೇಶಗಳನ್ನು ಆಳುವ ಭಗದತ್ತನು ಯವನರಾಜ್ಯವನ್ನೂ, ವರುಣನಂತೆ ಪಶ್ಚಿಮದೇಶಗಳನ್ನೂ ಪರಿಪಾಲಿಸುತ್ತಿದ್ದಾನೆ. ಅಂತಹ ಪರಾಕ್ರಮಶಾಲಿಯೂ ಜರಾಸಂಧನಿಗೆ ಮಣಿದಿರುವನು. ಆದರೆ ಅವನು ಅಂತಃಕರಣದಲ್ಲಿ ನಿನ್ನ ಮೇಲೆ ಹೆಚ್ಚು ಸ್ನೇಹವನ್ನಿಟ್ಟಿರುತ್ತಾನೆ. ತಂದೆಯು ಮಗನನ್ನು ಪ್ರೀತಿಸುವಂತೆ–ನಿನ್ನನ್ನು ಪ್ರೀತಿಸುತ್ತಾನೆ.




ಕೆಲವು ಪಶ್ಚಿಮರಾಷ್ಟ್ರಗಳನ್ನೂ ಮತ್ತು ದಕ್ಷಿಣರಾಷ್ಟ್ರಗಳನ್ನೂ ಆಳುತ್ತಿರುವ ಕುಂತಿಭೋಜವಂಶಪ್ರದೀಪನಾದ, ನಿನ್ನ ಸೋದರಮಾವನಾದ ಪುರುಜಿತನೂ ನಿನ್ನ ವಿಷಯದಲ್ಲಿ ಹೆಚ್ಚು ಅಭಿಮಾನವುಳ್ಳವನಾಗಿದ್ದಾನೆ.

ಧರ್ಮಜ! ನನ್ನ ಪ್ರತಿಕೃತಿಯೊಬ್ಬನು ಪೌಂಡ್ರಕವಾಸುದೇವನೆಂದು ಲೋಕದಲ್ಲಿ ವಿಖ್ಯಾತನಾಗಿದ್ದಾನೆ. ದುರ್ಮತಿಯಾದ ಅವನು ತಾನೇ ಪರಮಾತ್ಮನ ಅವತಾರವೆಂದೂ ಹೇಳಿಕೊಳ್ಳುತ್ತಿದ್ದಾನೆ. ನನ್ನಂತೆಯೇ ಶಂಖ-ಚಕ್ರಾದಿ ಲಾಂಛನಗಳನ್ನೂ ಧರಿಸುತ್ತಾನೆ. ಭೂಲೋಕದ ಪುರುಷೋತ್ತಮನೆಂದೂ ಹೇಳಿಕೊಳ್ಳುತ್ತಾನೆ. ಅವನು ವಂಗ-ಪುಂಡ್ರ-ಕಿರಾತರಿಗೆ ಅಧಿಪತಿಯೂ ಮಹಾಬಲಶಾಲಿಯೂ ಅಹುದು. ಚೇದಿವಂಶಜನಾದ ಆ ದುರುಳನನ್ನು ನಾನು ಮೊದಲೇ ಸಂಹಾರಮಾಡದೇ ಬಿಟ್ಟುಬಿಟ್ಟೆನು. ಇಂದವನು ಜರಾಸಂಧನೊಡನೆ ಸೇರಿರುತ್ತಾನೆ.

ಭೋಜರುಗಳಿಗೆ ಅಧಿಪತಿಯು ಭೀಷ್ಮಕ. ಅವನು ಇಂದ್ರನೊಡನೆ ಮೈತ್ರಿಯನ್ನು ಸಂಪಾದಿಸಿರುತ್ತಾನೆ. ಭೂಮಂಡಲದ ನಾಲ್ಕನೆಯ ಒಂದು ಭಾಗವೇ ಅವನ ಆಳ್ವಿಕೆಗೆ ಸೇರಿದೆ. ಅವನು ಚಾತುರ್ಯದಿಂದಲೇ ಪಾಂಡ್ಯರನ್ನೂ, ಕ್ರಥರನ್ನೂ, ಕೈಶಿಕರನ್ನೂ ಗೆದ್ದಿರುವನು. ಅವನ ಸಹೋದರನ ಹೆಸರು ಆಕೃತಿ. ಪರಾಕ್ರಮದಲ್ಲಿ ಪರಶುರಾಮನಿಗೆ ಸಮಾನನು. ಮಾಗಧನಿಗೆ ಅವನು ಆಶ್ರಿತನಾಗಿರುವನು. ಆ ಇಬ್ಬರೂ ನಮಗೆ ಬಂಧುಗಳಾಗಬೇಕು. ಈ ಕಾರಣದಿಂದ ಅವರಿಗೆ ಹಿತವಾಗುವ ಕಾರ್ಯಗಳನ್ನೇ ನಾವು ಸರ್ವದಾ ಮಾಡುತ್ತಿರುವೆವು. ಹೀಗಿದ್ದರೂ ಅವರು ನಮ್ಮ ವಿಷಯದಲ್ಲಿ ಔದಾಸೀನ್ಯವನ್ನು ತಾಳಿ, ನಮಗೆ ಅಪ್ರಿಯವನ್ನೇ ಮಾಡುತ್ತಿರುವರು. ಮೇಲಾಗಿ ತಮ್ಮ ಪರಾಕ್ರಮವೆಷ್ಟೆಂಬುದನ್ನೂ ಮನಗಾಣದೇ ತಮ್ಮ ವಂಶದ ಕೀರ್ತಿಯನ್ನೂ ಲೆಕ್ಕಿಸದೇ, ಭೀಷ್ಮಕ ಮತ್ತು ಆಕೃತಿಗಳು ಜರಾಸಂಧನ ಕೀರ್ತಿಗೆ ಮರುಳಾಗಿ ಅವನ ಆಶ್ರಿತರಾಜರಾಗಿರುತ್ತಾರೆ.

ಯುಧಿಷ್ಠಿರ! ಜರಾಸಂಧನು ಸಕಲರಿಗೂ ಭಯಂಕರನಾಗಿದ್ದಾನೆ. ಅವನಿಗೆ ಹೆದರಿ ಭೋಜವಂಶದ ಹದಿನೆಂಟು ಪಂಗಡದವರು ಪಶ್ಚಿಮದಿಕ್ಕಿಗೆ ಓಡಿಹೋದರು. ಅವರೇ ಅಲ್ಲದೇ ಶೂರಸೇನರು, ಭದ್ರಕಾರರು, ಬೋಧರು, ಶಾಲ್ವರು, ಪಟಚ್ಚರರು, ಸುಸ್ಥಲರು, ಸುಕುಟ್ಟರು, ಕುಲಿಂದರು, ಕುಂತಿಗಳು, ಶಾಲ್ವಾಯನರು ತಮ್ಮ ಸೋದರರಿಂದಲೂ ಮತ್ತು ಸೇವಕರಿಂದಲೂ ಸಮೇತರಾಗಿ ದಕ್ಷಿಣದಿಕ್ಕಿಗೆ ಪಲಾಯನಮಾಡಿದರು. ಅಂತೆಯೇ ದಕ್ಷಿಣ

ಪಾಂಚಾಲದವರು, ಪೂರ್ವಕುಂತೀಪ್ರದೇಶದಲ್ಲಿದ್ದ ಕೋಸಲರು, ಮತ್ಸ್ಯರು ಇವರೆಲ್ಲರೂ ಜರಾಸಂಧನ ಭಯದಿಂದ ಉತ್ತರದೇಶವನ್ನು ತ್ಯಜಿಸಿ ದಕ್ಷಿಣಕ್ಕೆ ಹೋಗಿ ನೆಲೆಸಿದರು.

ಕೆಲವು ವರ್ಷಗಳ ಹಿಂದೆ ಕಂಸನು ಯಾದವರನ್ನು ಪರಾಜಯಗೊಳಿಸಿ ಜರಾಸಂಧನ ಆಸ್ತಿ, ಪ್ರಾಪ್ತಿ ಎಂಬಿಬ್ಬರು ಕುಮಾರಿಯರನ್ನು ಮದುವೆಯಾದನು. ಅವರು ಸಹದೇವನ ತಂಗಿಯರು. ಈ ವಿಧವಾದ ಸಂಬಂಧವನ್ನು ಬೆಳೆಸಿದನಂತರ ಕಂಸನು ಬಹಳವಾಗಿ ಕೊಬ್ಬಿಹೋದನು. ಅವನೂ ತನ್ನ ಸಂಬಂಧಿಗಳೆಲ್ಲರಿಗೂ ನಾನಾವಿಧವಾದ ಚಿತ್ರಹಿಂಸೆಯನ್ನು ಕೊಡಲು ಪ್ರಾರಂಭಿಸಿದನು. ಅವನ ಕಿರುಕುಳವನ್ನು ತಾಳಲಾರದೇ ಭೋಜವಂಶದ ಅರಸರು ನಮ್ಮನ್ನು ಆಶ್ರಯಿಸಿದರು. ಆ ಸಮಯದಲ್ಲಿ ನಾನು ಸಂಕರ್ಷಣನ ಸಹಾಯದಿಂದ 'ಸುತನು' ಎಂಬ ಹೆಸರಿನ ಆಹುಕನ ಮಗಳನ್ನು ಅಕ್ರೂರನಿಗೆ ಕೊಟ್ಟು ಮದುವೆಮಾಡಿಸಿದುದಲ್ಲದೇ ಕಂಸ-ಸುನಾಮರಿಬ್ಬರನ್ನೂ ವಧಿಸಿ ನಮ್ಮ ಜ್ಞಾತಿ-ಬಾಂಧವರೆಲ್ಲರಿಗೂ ಹಿತವನ್ನುಂಟುಮಾಡಿದೆನು. ಅದರಿಂದಾಗಿ ತತ್ಕಾಲದಲ್ಲಿ ವೈರಿಯ ಉಪಶಮನವಾದರೂ ಕಂಸನ ಮಾವನಾದ ಜರಾಸಂಧನು ನಮ್ಮ ಮೇಲೆ ಯುದ್ಧಕ್ಕೆ ಸಿದ್ಧನಾದನು.

ಆ ಸಮಯದಲ್ಲಿ ನಾವೆಲ್ಲರೂ ಸೇರಿ ಪರ್ಯಾಲೋಚಿಸಿದೆವು. ಭಯಂಕರ ಶಸ್ತ್ರಾಸ್ತ್ರಗಳಿಂದ ಅವ್ಯಾಹತವಾಗಿ ಮುನ್ನೂರು ವರ್ಷಗಳ ಕಾಲ ಯುದ್ಧಮಾಡಿದರೂ ಜರಾಸಂಧನನ್ನು ಗೆಲ್ಲುವ ಸಾಧ್ಯತೆಯಿಲ್ಲವೆಂಬ ನಿರ್ಧಾರಕ್ಕೆ ಬಂದೆವು. ಇದಕ್ಕೊಂದು ಕಾರಣವಿದೆ, ಯುಧಿಷ್ಠಿರ! ಜರಾಸಂಧನಿಗೆ ಹಂಸ ಮತ್ತು ಡಿಂಭಕ ಎಂಬ ಇಬ್ಬರು ಮಿತ್ರರಿದ್ದರು. ಅವರು ಮಹಾಪರಾಕ್ರಮಿಗಳು. ದೇವತೆಗಳಂತೆ ಅಮರರಾಗಿಯೇ ಇದ್ದರು. ಅವರಿಬ್ಬರಿಗೂ ಸಾವೇ ಇಲ್ಲದಿರಬಹುದೆಂದು ನಾವೆಲ್ಲರೂ ಶಂಕಿತರಾಗಿದ್ದೆವು. ಅವರು ಯಾವ ವಿಧವಾದ ಶಸ್ತ್ರಾಸ್ತ್ರಗಳಿಂದಲೂ ಕೊಲ್ಲಲ್ಪಡತಕ್ಕವರಾಗಿರಲಿಲ್ಲ. ಹಂಸ-ಡಿಂಭಕರೂ ಮತ್ತು ಜರಾಸಂಧನೂ ಮೂರು ಲೋಕಗಳನ್ನೂ ಗೆಲ್ಲಬಲ್ಲರೆಂದು ನಾನೂ ಭಾವಿಸಿದ್ದೆನು. ಇದು ಕೇವಲ ನನ್ನ ಅಭಿಪ್ರಾಯವೆಂದು ತಿಳಿಯಬೇಡ. ಭೂವಲಯದ ಸಕಲರಾಜರೂ ಇದೇ ಅಭಿಪ್ರಾಯವುಳ್ಳವರಾಗಿದ್ದರು.

ಆದರೆ, ಮರ್ತ್ಯರಾಗಿ ಹುಟ್ಟಿದ ಮೇಲೆ ಎಂದಾದರೊಂದು ದಿನ ಯಾವುದಾದರೂ ಕಾರಣದಿಂದ ಮೃತ್ಯುವನ್ನು ಅಪ್ಪಲೇ ಬೇಕಲ್ಲವೇ? ವೀರಾಧಿವೀರರಾದ ಆ ಹಂಸ-ಡಿಂಭಕರನ್ನೂ ಮೃತ್ಯುದೇವತೆಯು ಹೇಗೆ ತನ್ನ ವಶಪಡಿಸಿಕೊಂಡಳೆಂಬ ವಿಷಯವನ್ನು ಹೇಳುವೆನು, ಕೇಳು!

ನಮ್ಮ ಶತ್ರುಸಮೂಹದಲ್ಲಿ ಹಂಸನೆಂಬ ಮತ್ತೊಬ್ಬ ರಾಜನೂ ಇದ್ದನು. ಅವನ ಉಪಟಳವೂ ಹೆಚ್ಚಾಗಿದ್ದಿತು. ಅವನನ್ನು ಹೇಗಾದರೂ ಮಾಡಿ ಸಂಹರಿಸಬೇಕೆಂಬ ದೃಢನಿಶ್ಚಯದಿಂದ ನಮ್ಮಣ್ಣನಾದ ಬಲರಾಮನು ಅವನೊಡನೆ ಹದಿನೆಂಟು ದಿನಗಳವರೆಗೆ ಹೋರಾಡಿ ಅವನನ್ನು ಸಂಹರಿಸಿದನು. ಹಂಸನು ಬಲರಾಮನಿಂದ ಸಂಹರಿಸಲ್ಪಟ್ಟನೆಂಬ ವಾರ್ತೆಯು ದೇಶ-ವಿದೇಶಗಳಲ್ಲೆಲ್ಲಾ ಹರಡಿತು.

ಹಂಸನು ಯುದ್ಧದಲ್ಲಿ ಮಡಿದನೆಂಬ ವಾರ್ತೆಯನ್ನು ಕೇಳಿದೊಡನೆಯೇ ಡಿಂಭಕನಿಗೆ ಅತಿಯಾದ ದುಃಖವಾಯಿತು. ಬಲರಾಮನಿಗೆ ಹಂಸನನ್ನು ಸಂಹರಿಸಲು ಸಾಧ್ಯವಾಯಿತೇ?–ಎಂಬ ವಿವೇಚನೆಯನ್ನೂ ಮಾಡದೇ ಹಂಸನು ತೀರಿಹೋದನಂತರ ತಾನುಳಿಯಲಾರೆನೆಂದು ಡಿಂಭಕನು ನಿಶ್ಚಯಿಸಿ ಯಮುನೆಯಲ್ಲಿ ಬಿದ್ದು ಅಸುವನ್ನು ನೀಗಿಕೊಂಡನು. ಡಿಂಭಕನು ತನ್ನ ಮೇಲಿನ ಅಂತಃಕರಣದ ಕಾರಣದಿಂದಾಗಿ ಯಮುನೆಯಲ್ಲಿ ಬಿದ್ದು ಪ್ರಾಣ ತ್ಯಾಗಮಾಡಿಕೊಂಡನೆಂಬ ವಿಷಯವು ಹಂಸನಿಗೆ ತಿಳಿಯಿತು. ತನಗಾಗಿ ಡಿಂಭಕನು ಪ್ರಾಣತ್ಯಾಗಮಾಡಿರುವುದರಿಂದ ಅವನನ್ನು ಬಿಟ್ಟು ತಾನೂ ಭೂಮಿಯಲ್ಲುಳಿಯಬಾರದೆಂದು ನಿಶ್ಚಯಿಸಿ ಹಂಸನೂ ಯಮುನೆಯಲ್ಲಿ ಬಿದ್ದು ಆತ್ಮಹತ್ಯೆಮಾಡಿಕೊಂಡನು. ಈ ರೀತಿಯಾಗಿ ಇಬ್ಬರೂ ಪ್ರಾಣತೊರೆದರು. ಮೃತ್ಯುವಿನ ಪವಾಡವು ಹೇಗಿದೆಯೆಂಬುದನ್ನು ನೋಡಿದೆಯಾ? ಯುಧಿಷ್ಠಿರ!

ತನ್ನ ಎಡ-ಬಲತೋಳುಗಳಂತಿದ್ದ ಹಂಸ-ಡಿಂಭಕರು ಯಮುನೆ ಯಲ್ಲಿ ಬಿದ್ದು ಅಸುವನ್ನು ತೊರೆದರೆಂದು ತಿಳಿದು ಜರಾಸಂಧನು ಮುಂದೇನು ಮಾಡಬೇಕೆಂಬುದನ್ನು ತಿಳಿಯದೇ ತನ್ನ ನಗರಿಗೆ ಹಿಂದಿರುಗಿ ದನು. ಜರಾಸಂಧನು ಹೊರಟುಹೋದನೆಂದು ತಿಳಿದೊಡನೆಯೇ ನಾವೆ ಲ್ಲರೂ ಆನಂದಭರಿತರಾಗಿ ಮಧುರೆಯಲ್ಲಿಯೇ ವಾಸಮಾಡತೊಡಗಿದೆವು.

ಆದರೆ ಶತ್ರುವಿನ ನಿರ್ಗಮನದಿಂದ ನಮಗುಂಟಾಗಿದ್ದ ಆನಂದವು ಹೆಚ್ಚುಕಾಲ ಉಳಿಯಲಿಲ್ಲ. ಜರಾಸಂಧನ ಮಗಳು ತನ್ನ ತಂದೆಯ ಬಳಿಗೆ ಹೋಗಿ ರೋದನಮಾಡುತ್ತಾ–"ನನ್ನ ಗಂಡನಾದ ಕಂಸರಾಜನನ್ನು ಸಂಹರಿಸಿದವನ ಪತ್ನಿಗೂ ನನ್ನಂತೆಯೇ ದುಃಖವನ್ನುಂಟುಮಾಡದೇ ಕುಳಿತಿರುವೆಯಲ್ಲಾ? ತಂದೆಯೇ! ಒಡನೆಯೇ ಹೋಗಿ ಅವನನ್ನು ಸಂಹರಿಸು. ಅಲ್ಲಿಯವರೆಗೂ ನನ್ನ ಮನಸ್ಸಿಗೆ ಶಾಂತಿಯು ಸಿಗದು"–ಎಂದು ಬಿಕ್ಕಿ-ಬಿಕ್ಕಿ ಅಳುತ್ತಾ ಹೇಳಿದಳು.

ಗೂಢಚಾರರಿಂದ ಆ ವಾರ್ತೆಯನ್ನು ತಿಳಿದ ನಾವು ಮುಂದಾಗುವ ಪರಿಣಾಮವನ್ನು ಸಮಾಲೋಚಿಸಿ ಚಿಂತೆಗೊಳಗಾದೆವು. ನಮ್ಮಲ್ಲಿದ್ದ ಐಶ್ವರ್ಯದಲ್ಲಿ–ಎಷ್ಟು ಸಾಧ್ಯವೋ–ಯಾವುದು ಅತಿಮುಖ್ಯವೋ–ಅವುಗಳನ್ನು ಮಾತ್ರವೇ ಸಂಗ್ರಹಿಸಿಕೊಂಡು ನಮ್ಮ ಬಂಧು-ದಾಯಾದರ ಸಮೇತರಾಗಿ ಜರಾಸಂಧನು ಬಂದುಬಿಡುವನೆಂಬ ಭಯದ ಕಾರಣದಿಂದ ಪಶ್ಚಿಮದಿಕ್ಕಿನ ಕಡೆಗೆ ಪಲಾಯನಮಾಡಿದೆವು.

ಯುಧಿಷ್ಠಿರ! ರೈವತಕಪರ್ವತದ ತಪ್ಪಲಿನಲ್ಲಿ ಅತಿಸುಂದರವಾದ ಕುಶಸ್ಥಲೀ ಎಂಬ ಪಟ್ಟಣವಿದೆ. ಅಲ್ಲಿಗೆ ಹೋಗಿ ನಾವೆಲ್ಲರೂ ನೆಲೆಸಿದೆವು. ಆ ನಗರಿಯ ಕೋಟೆ-ಕೊತ್ತಲಗಳನ್ನು ಬಹಳ ಭದ್ರವಾಗಿ ಕಟ್ಟಿದೆವು. ದೇವತೆಗಳಿಗೂ ಕೂಡ ಆ ನಗರಿಯನ್ನು ಪ್ರವೇಶಿಸಲು ಸಾಧ್ಯವಿಲ್ಲದಷ್ಟು ಭದ್ರವಾಗಿ ನಿರ್ಮಿಸಿರುವೆವು. ಆ ಕೋಟೆಯೊಳಗೆ ನಿಂತು ಹೆಂಗಸರು ಕೂಡ ಯುದ್ಧಮಾಡಿ ಶತ್ರುಗಳನ್ನು ಪರಾಜಯಗೊಳಿಸಬಹುದು. ಇನ್ನು ವೃಷ್ಣಿವೀರರ ವಿಷಯದಲ್ಲಿ ಹೇಳುವುದೇನಿದೆ? ನಾವೀಗ ಯಾವ ವಿಧವಾದ ಈತಿಬಾಧೆಗಳೂ ಇಲ್ಲದೇ ಆ ಸುಂದರನಗರಿಯಲ್ಲಿ ವಾಸಮಾಡುತ್ತಿದ್ದೇವೆ.

ದುರ್ಗಮವಾದ ಕೋಟೆಯೊಳಗಿದ್ದ ಯದುವಂಶದ ರಾಜಕುಮಾರರು ಜರಾಸಂಧನ ಭಯವು ಇನ್ನಿಲ್ಲವೆಂಬ ಭರವಸೆಯಿಂದ ಆನಂದಭರಿತರಾಗಿದ್ದಾರೆ.

ಯುಧಿಷ್ಠಿರ! ನಾವೆಲ್ಲರೂ ಮಹಾಪರಾಕ್ರಮಿಗಳೇ ಆಗಿರುತ್ತೇವೆ. ಆದರೂ ಜರಾಸಂಧನ ಭಯದಿಂದಾಗಿ ಮಥುರೆಯನ್ನು ಬಿಟ್ಟು ಮೂರು

ಯೋಜನಗಳಷ್ಟು ಉದ್ದವಾಗಿರುವ ರೈವತಕಪರ್ವತಕ್ಕೆ ಹೋಗಿ ಸೇರಿಕೊಂಡಿರುವೆವೆಂದಮೇಲೆ ಜರಾಸಂಧನ ಪರಾಕ್ರಮವೆಷ್ಟೆಂಬುದನ್ನು ನೀನೇ ಊಹಿಸಬಹುದಾಗಿದೆ. ಮೂರು ಯೋಜನಗಳ ಪರ್ವತದ ಪಂಕ್ತಿಯಲ್ಲಿ ಪ್ರತಿಯೊಂದು ಯೋಜನದ ಮಧ್ಯದಲ್ಲೂ ಇಪ್ಪತ್ತೊಂದು ಸೇನಾನೆಲೆಗಳನ್ನು ಸ್ಥಾಪಿಸಿರುತ್ತೇವೆ. ಒಂದೊಂದು ಯೋಜನದ ಎಲ್ಲೆಯಲ್ಲಿಯೂ ದೊಡ್ಡ-ದೊಡ್ಡ ಮಹಾದ್ವಾರಗಳನ್ನೂ, ನೂರು ಉಪದ್ವಾರಗಳನ್ನೂ ನಿರ್ಮಿಸಿರುತ್ತೇವೆ. ಆ ನೂರು ಉಪದ್ವಾರಗಳಲ್ಲಿಯೂ ಪರಾಕ್ರಮಿಗಳಾದ ಯೋಧರು ಸದಾಕಾಲದಲ್ಲಿಯೂ ಕಾವಲಿರುತ್ತಾರೆ. ಯುದ್ಧದಲ್ಲಿ ಅಪ್ರತಿಮರೆನಿಸಿದ ಯಾದವರ ಹದಿನೆಂಟು ಒಳಪಂಗಡಗಳ ಕ್ಷತ್ರಿಯರೂ ನಗರದ ರಕ್ಷಣೆಯಲ್ಲಿ ಸಿದ್ಧರಾಗಿ ನಿಂತಿದ್ದಾರೆ.

ಧರ್ಮಜ! ನಮ್ಮ ಜ್ಞಾತಿ-ಬಾಂಧವರ ಸಂಖ್ಯೆಯು ಹದಿನೆಂಟು ಸಾವಿರವಾಗುತ್ತದೆ. ಆಹುಕನೊಬ್ಬನಿಗೇ ದೇವಸಮಾನರಾದ ನೂರು ಮಂದಿ ಮಕ್ಕಳಿದ್ದಾರೆ. ಅನುಜಸಹಿತನಾದ ಚಾರುದೇಷ್ಣ, ಚಕ್ರದೇವ, ಸಾತ್ಯಕಿ, ನಾನು, ನಮ್ಮಣ್ಣ ಬಲದೇವ, ನನ್ನ ಇಬ್ಬರು ಮಕ್ಕಳು ಸಾಂಬ ಮತ್ತು ಪ್ರದ್ಯುಮ್ನರು–ಈ ಏಳು ಮಂದಿ ಅತಿರಥರಿದ್ದೇವೆ.

ಕೃತವರ್ಮಾ, ಅನಾಧೃಷ್ಟಿ, ಸಮೀಕ, ಸಮಿತಿಂಜಯ, ಕಂಕ, ಶಂಕು ಮತ್ತು ಕುಂತಿ–ಈ ಏಳು ಮಂದಿ ಮಹಾರಥರು ನಮ್ಮಲ್ಲಿರುತ್ತಾರೆ. ಮಹಾಪರಾಕ್ರಮಿಯಾದ ಅಂಧಕಭೋಜ ಮತ್ತು ಅವನ ಇಬ್ಬರು ಮಕ್ಕಳೂ ನಮ್ಮ ವಂಶಕ್ಕೇ ಸೇರಿದವರಾಗಿರುತ್ತಾರೆ. ಅವರೆಲ್ಲರೂ ಸಿಡಿಲಿನಂತಹ ಪರಾಕ್ರಮವುಳ್ಳವರಾಗಿದ್ದಾರೆ. ಆ ಮಹಾರಥರೆಲ್ಲರೂ ಕುಶಸ್ಥಲಿಯ ಮಧ್ಯದಲ್ಲಿ ವೃಷ್ಣಿಕುಲದವರೊಡನೆ ಸೇರಿಕೊಂಡಿದ್ದಾರೆ. ಇದರಿಂದಾಗಿ ಜರಾಸಂಧನ ಶೌರ್ಯವೆಷ್ಟೆಂಬುದನ್ನು ನೀನು ಊಹಿಸಬಹುದಾಗಿದೆ.

ಭಾರತ! ನೀನೊಬ್ಬನೇ ನಿಶ್ಚಯವಾಗಿಯೂ ಚಕ್ರವರ್ತಿಯಾಗಲು ಅರ್ಹನು. ಭೂಮಂಡಲದ ಎಲ್ಲ ರಾಜರ ಮೇಲೆಯೂ ಸಾರ್ವಭೌಮತ್ವ ವನ್ನು ಸ್ಥಾಪಿಸುವುದು ನಿನಗೆ ಯುಕ್ತವಾಗಿದೆ. ಆದರೆ ಜರಾಸಂಧನು ಎಲ್ಲಿಯ ವರೆಗೆ ಜೀವಿಸಿರುವನೋ ಅಲ್ಲಿಯವರೆಗೂ ರಾಜಸೂಯಯಾಗವನ್ನು ಮಾಡುವ

ಅಥವಾ ಭೂಮಂಡಲದಲ್ಲಿ ಸಾರ್ವಭೌಮತ್ವವನ್ನು ಸ್ಥಾಪಿಸುವ ಆಶಯವು ಕೈಗೂಡಲಾರದೆಂಬುದೇ ನನ್ನ ನಿಶ್ಚಿತಾಭಿಪ್ರಾಯವಾಗಿದೆ.

ಸಿಂಹವು ಆನೆಗಳನ್ನು ಕೊಂದು ಪರ್ವತದ ಗುಹೆಗಳಲ್ಲಿಡುವಂತೆ–ಜರಾಸಂಧನು ಅನೇಕರಾಜರನ್ನು ಸೆರೆಹಿಡಿದು ತನ್ನ ರಾಜ್ಯದ ಕಾರಾಗೃಹದಲ್ಲಿಟ್ಟಿರುತ್ತಾನೆ.

ರಾಜರೆಲ್ಲರನ್ನೂ ಗೆದ್ದು ಅವರನ್ನು ಯಜ್ಞಪಶುಗಳನ್ನಾಗಿ ಮಾಡಿ ಯಾಗಮಾಡಬೇಕೆಂಬುದೇ ಅವನ ಆಶಯವೂ ಆಗಿದೆ. ಅದಕ್ಕಾಗಿ ದೇವದೇವನಾದ ಉಮಾಪತಿಯನ್ನು ಉಗ್ರತಪಸ್ಸಿನಿಂದ ಒಲಿಸಿಕೊಂಡಿರುತ್ತಾನೆ. ಉಮಾಪತಿಯ ಅನುಗ್ರಹದಿಂದಲೇ ಅವನಿಗೆ ಸಕಲರಾಜರನ್ನೂ ಪರಾಜಿತರನ್ನಾಗಿ ಮಾಡಲು ಶಕ್ಯವಾಗಿದೆ. ರಾಜರೆಲ್ಲರನ್ನೂ ಗೆದ್ದು, ಸೆರೆಹಿಡಿದು ತಂದು, ತನ್ನ ದೇಶದ ಸೆರೆಮನೆಗಳನ್ನು ತುಂಬಿಬಿಟ್ಟಿದ್ದಾನೆ. ನಾವೂ ಸಹ ಅವನ ಭಯದಿಂದಲೇ ಮಥುರೆಯನ್ನು ಬಿಟ್ಟು ದ್ವಾರವತಿಗೆ ಪಲಾಯನಮಾಡಿದೆವು.

ಆದುದರಿಂದ ನಿನಗೆ ರಾಜಸೂಯಯಾಗಮಾಡುವ ಆಶಯವಿರುವುದಾದರೆ–ಮೊದಲು ನೀನು ಜರಾಸಂಧನು ಸೆರೆಹಿಡಿದಿರುವ ರಾಜರೆಲ್ಲರ ಬಂಧವಿಮೋಚನೆ ಮಾಡಿಸಬೇಕು ಮತ್ತು ಜರಾಸಂಧನನ್ನು ಯಮಪುರಿಗೆ ಕಳುಹಿಸಬೇಕು. ಹಾಗೆ ಮಾಡದಿದ್ದರೆ ನಿನ್ನ ಆಶಯವು ಖಂಡಿತವಾಗಿಯೂ ಪೂರ್ಣವಾಗುವುದಿಲ್ಲ. ಕಡೆಯ ಮಾತನ್ನೂ ಹೇಳುವೆನು ಕೇಳು, ಯುಧಿಷ್ಠಿರ! ನೀನು ರಾಜಸೂಯಯಾಗವನ್ನು ಮಾಡಬೇಕಾದರೆ ಮೊದಲು ಈ ಕಾರ್ಯವನ್ನು (ಜರಾಸಂಧನ ವಧೆಯನ್ನು) ಮಾಡಬೇಕು. ಬೇರೆಯ ಉಪಾಯವೇ ಇಲ್ಲ.

ಇದು ನನ್ನ ಸ್ಪಷ್ಟವಾದ ಅಭಿಪ್ರಾಯ, ಧರ್ಮಜ! ನೀನು ಸಕಲವನ್ನೂ ಪರ್ಯಾಲೋಚಿಸಿ ನಿನ್ನ ನಿರ್ಧಾರವೇನೆಂಬುದನ್ನು ತಿಳಿಸು.”

೧೪ನೆಯ ಅಧ್ಯಾಯವು ಮುಗಿಯಿತು.

೧೫ನೆಯ ಅಧ್ಯಾಯ ರಾಜಸೂಯಾರಮ್ಭಪರ್ವ (ಮುಂದುವರಿದಿದೆ.)

## ಜರಾಸಂಧನ ವಿಷಯದಲ್ಲಿ ಯುಧಿಷ್ಠಿರ-ಭೀಮ-ಕೃಷ್ಣರ ಸಂಭಾಷಣೆ

ಮಹಾಬಾಹುವೇ! ಪಾರಿಕ್ಷಿತ! ಯುಧಿಷ್ಠಿರನು ವಾಸುದೇವನಿಗೆ ಹೇಳುತ್ತಾನೆ :

"ಶ್ರೀಕೃಷ್ಣ! ಇದುವರೆಗೆ ಯಾರೂ ನನಗೆ ತಿಳಿಯಪಡಿಸದಿದ್ದ ಅನೇಕ ವಿಷಯಗಳನ್ನು ನೀನು ಹೇಳಿರುವೆ. ಸಂಶಯಗಳನ್ನು ನಿವಾರಣೆಮಾಡುವ ಸಾಮರ್ಥ್ಯವು ನಿನಗೊಬ್ಬನಿಗಲ್ಲದೇ ಮತ್ತಾರಿಗೂ ಇರುವುದಿಲ್ಲ.

**ಗೃಹೇ ಗೃಹೇ ಹಿ ರಾಜಾನಃ ಸ್ವಸ್ಯ ಸ್ವಸ್ಯ ಪ್ರಿಯಂಕರಾಃ**
**ನ ಚ ಸಾಮ್ರಾಜ್ಯಮಾಪ್ತಾಸ್ತೇ ಸಮ್ರಾಟ್ಶಬ್ದೋ ಹಿ ಕೃಚ್ಛ್ರಭಾಕ್ ॥೨॥**

ಪ್ರತಿಯೊಂದು ದೇಶದಲ್ಲಿಯೂ ರಾಜರಿರುತ್ತಾರೆ. ಆದರೆ ಅವರೆಲ್ಲರೂ ತಮಗೆ ಪ್ರಿಯವಾಗುವ ಕಾರ್ಯಗಳನ್ನು ಮಾಡಿಕೊಳ್ಳಲು ಆಸಕ್ತರಾಗಿರುತ್ತಾರೆ. ಆ ನೂರಾರು ಮಂದಿ ರಾಜರಲ್ಲಿ ಯಾರೂ 'ಸಮ್ರಾಟ್' ಎಂಬ ಕೀರ್ತಿಯನ್ನು ಪಡೆದಿರುವುದಿಲ್ಲ. ಕೃಷ್ಣ! ನಿಶ್ಚಯವಾಗಿಯೂ 'ಸಮ್ರಾಟ್' ಎಂಬ ಹೆಸರನ್ನು ಪಡೆಯುವುದು ಬಹಳ ಕಷ್ಟಸಾಧ್ಯವಲ್ಲವೇ?

**ಕಥಂ ಪರಾನುಭಾವಜ್ಞಃ ಸ್ವಂ ಪ್ರಶಂಸಿತುಮರ್ಹತಿ।**
**ಪರೇಣ ಸಮವೇತಸ್ತು ಯಃ ಪ್ರಶಸ್ಯಃ ಸ ಪೂಜ್ಯತೇ ॥೩॥**

ಇತರರ ಪರಾಕ್ರಮವೆಷ್ಟೆಂಬುದನ್ನು ತಿಳಿದಿರುವವನು ಹೇಗೆತಾನೇ ಸ್ವಬಲವನ್ನು ಪ್ರಶಂಸೆಮಾಡಿಕೊಳ್ಳುವನು? ಪ್ರಬಲರಾದ ತನ್ನ ಶತ್ರುಗಳಿಂದಲೇ ಯಾವನು ಪ್ರಶಂಸಿಸಲ್ಪಡುವನೋ–ಅಂತಹವನೇ ನಿಶ್ಚಯವಾಗಿಯೂ ಪರಾಕ್ರಮಿಯು ಮತ್ತು ಪೂಜಾರ್ಹನು.

**ವಿಶಾಲಾ ಬಹುಲಾ ಭೂಮಿರ್ಬಹುರತ್ನಸಮಾಚಿತಾ।**
**ದೂರಂ ಗತ್ವಾ ವಿಜಾನಾತಿ ಶ್ರೇಯೋ ವೃಷ್ಣಿಕುಲೋದ್ವಹ ॥೪॥**

ವೃಷ್ಣಿಕುಲಾವತಂಸ! ಈ ಭೂಲೋಕವು ಬಹುವಿಸ್ತಾರವಾಗಿದೆ

ಮತ್ತು ಅನೇಕವಿಧವಾದ ರತ್ನಗಳಿಂದ (ರಾಜಶ್ರೇಷ್ಠರಿಂದ) ಸಮೃದ್ಧವಾಗಿದೆ. ಈ ವಿಶಾಲವಾದ ಪ್ರಪಂಚದ ಪರ್ಯಟನೆಯಿಂದ ಮಾತ್ರವೇ ನಮಗೆ ನಾನಾ ದೇಶಗಳ ಮತ್ತು ಅರಸರ ವಿಷಯಗಳು ತಿಳಿಯುವುವು. ಅವರ ಪರಾಕ್ರಮಗಳ ಅರಿವೂ ನಮಗುಂಟಾಗುವುದು.

ನಾವೇ ಮಹಾಪರಾಕ್ರಮಿಗಳೆಂಬ ಭ್ರಾಂತಿಯು ನಮಗಿದ್ದಿತು. ನೀನು ವಿಷಯಗಳೆಲ್ಲವನ್ನೂ ಕೂಲಂಕಷವಾಗಿ ಹೇಳಿದನಂತರ ನಮಗಿಂತಲೂ ಹೆಚ್ಚಿನ ಪರಾಕ್ರಮಿಗಳು ಅನೇಕರಿದ್ದಾರೆಂಬ ಅರಿವಾಯಿತು.

**ಶಮಮೇವ ಪರಂ ಮನ್ಯೇ ಶಮಾತ್ಕ್ಷೇಮಂ ಭವೇನ್ಮಮ**
**ಆರಮ್ಭೇ ಪಾರಮೇಷ್ಠ್ಯೇ ತು ನ ಪ್ರಾಪ್ಯಮಿತಿ ಮೇ ಮತಿಃ ॥೫॥**

ಕೃಷ್ಣ! ಕಷ್ಟಸಾಧ್ಯವಾದ ಆಶೋತ್ತರಗಳನ್ನು ಹೊಂದುವುದಕ್ಕಿಂತಲೂ ಮನಸ್ಸಿಗೆ ಶಾಂತಿಯನ್ನು ತಂದುಕೊಳ್ಳುವುದೇ ಉತ್ತಮವೆಂದು ನನಗನಿಸುತ್ತಿದೆ. ಶಮದಿಂದಲೇ ನಮಗೆ ಕ್ಷೇಮವುಂಟಾಗುತ್ತದೆ. ರಾಜಸೂಯಯಾಗವನ್ನು ಪ್ರಾರಂಭಿಸಿದರೆ ಅದರ ಫಲವನ್ನು ಅನುಭವಿಸಲಾರೆನೆಂದೇ ನನಗೆ ಭಾಸವಾಗುತ್ತಿದೆ.

ಆದರೆ ಈ ಸಭಾಸದರು–ಸರ್ವರಾಜರನ್ನೂ ಜಯಿಸಲು ನಾವು ಸಮರ್ಥರಾಗಿರುವೆವೆಂದು–ಅಭಿಪ್ರಾಯಪಡುತ್ತಾರೆ. ಮುಂದೆ ಯಾವಾಗ ಲಾದರೂ ನಮ್ಮ ಕುಲದಲ್ಲಿ ಮಹಾಪರಾಕ್ರಮಿಯಾದವನು, ಸಮ್ರಾಟ್ ಪದವಿಗೆ ಅರ್ಹನಾದವನು ಹುಟ್ಟಬಹುದು–ಎಂದು ನಾನು ಅಭಿಪ್ರಾಯಪಡುತ್ತೇನೆ. ಏಕೆಂದರೆ: ಜರಾಸಂಧನ ವಿಷಯವಾಗಿ ನೀನು ಹೇಳಿದುದನ್ನು ಕೇಳಿ ನಾನೂ ಭಯಪಟ್ಟಿದ್ದೇನೆ. ಅವನ ದುರುಳತನವನ್ನು ನಮ್ಮಿಂದಲೂ ದಮನಮಾಡಲು ಸಾಧ್ಯವಿಲ್ಲವೆಂಬ ನಿಶ್ಚಯಕ್ಕೆ ಬಂದಿರುತ್ತೇನೆ.

ಮಹಾನುಭಾವನೇ! ನಾನು ನಿಶ್ಚಯವಾಗಿಯೂ ದುರ್ಬಲನು. ನಿನ್ನ ಭುಜಬಲದ ಆಶ್ರಯವನ್ನು ಅವಲಂಬಿಸಿ ನಾನಿದ್ದೇನೆ. ನಮಗೆ ಆಶ್ರಯ ಭೂತನಾದ ನೀನೇ ಜರಾಸಂಧನಿಗೆ ಹೆದರಿರುವಾಗ ನಮ್ಮಂತಹವರು ಅವನ ವಿಷಯದಲ್ಲಿ ಭೀತರಾಗುವುದು ಸ್ವಾಭಾವಿಕವೇ ಆಗಿದೆಯಲ್ಲವೇ? ನನಗೆ ಆಶ್ರಯದಾತನಾದ ನಿನಗಿಂತಲೂ ಹೆಚ್ಚು ಪರಾಕ್ರಮವುಳ್ಳ ಜರಾಸಂಧನು

ನನಗೆ ಸಮಾನನಾದವನೆಂದು ನಾನು ಹೇಗೆತಾನೇ ಭಾವಿಸಲಿ? ಮಾಧವ! ನಿನ್ನಿಂದ ಪರಾಜಿತನಾಗದೇ ಅಥವಾ ಕೊಲ್ಲಲ್ಪಡದೇ ಇರುವ ಜರಾಸಂಧನು ಬಲರಾಮನಿಂದಾಗಲೀ, ಭೀಮಸೇನನಿಂದಾಗಲೀ, ಅರ್ಜುನನಿಂದಾಗಲೀ ಪರಾಜಿತನಾಗುವನೇ? ಈ ಸಂಶಯವು ನನ್ನನ್ನು ಕ್ಷಣ-ಕ್ಷಣಕ್ಕೂ ಬಾಧಿಸುತ್ತಿದೆ. ಈ ವಿಷಯವನ್ನೇ ನಾನು ಪದೇ-ಪದೇ ತರ್ಕಿಸುತ್ತಿದ್ದೇನೆ. ಕೇಶವ! ನನಗೆ ಸಕಲಕಾರ್ಯಗಳಲ್ಲಿಯೂ ನೀನೇ ಪ್ರಮಾಣಭೂತನಾಗಿರುವೆ. ನನ್ನೀ ಸಂಶಯವನ್ನು ನಿವಾರಣೆಮಾಡಲಾರೆಯಾ?"

ಅಣ್ಣನಾಡಿದ ಮಾತುಗಳನ್ನು ಕೇಳಿ ಭೀಮನೆದ್ದು ಹೇಳಿದನು :

**ಅನಾರಮ್ಭಪರೋ ರಾಜಾ ವಲ್ಮೀಕ ಇವ ಸೀದತಿ।**
**ದುರ್ಬಲಶ್ಚಾನುಪಾಯೇನ ಬಲಿನಂ ಯೋಽಧಿತಿಷ್ಠತಿ ॥೧೧॥**

**ಅತನ್ದ್ರಿತಶ್ಚ ಪ್ರಾಯೇಣ ದುರ್ಬಲೋ ಬಲಿನಂ ರಿಪುಮ್ ।**
**ಜಯೇತ್ಸಮ್ಯಕ್ಪ್ರಯೋಗೇಣ ನೀತ್ಯಾರ್ಥಾನಾತ್ಮನೋ ಹಿತಾನ್ ॥೧೨॥**

"ಮಹಾರಾಜ! ಯಾವಾತನು ಪ್ರಯತ್ನವನ್ನೇ ಮಾಡದಿರುವನೋ ಮತ್ತು ದುರ್ಬಲನಾಗಿ ಸಹಾಯಕರಿಲ್ಲದೇ ಏಕಾಕಿಯಾಗಿ ಪ್ರಬಲಶತ್ರುವಿನ ಮೇಲೆ ಮುನ್ನುಗ್ಗಿಹೋಗುವನೋ–ಅಂತಹವನು ಮಣ್ಣಿನ ಹುತ್ತದಂತೆ ಶತ್ರುವಿನ ಕೈಯಲ್ಲಿ ವಿನಾಶಹೊಂದುತ್ತಾನೆ. ಕೆಲವು ಸಮಯದಲ್ಲಿ ದುರ್ಬಲ ನಾಗಿದ್ದರೂ ಜಾಗ್ರತನಾಗಿದ್ದು ಸಮಯೋಚಿತವಾಗಿ ಚತುರೋಪಾಯ ಗಳನ್ನೂ ಪ್ರಯೋಗಿಸುವವನು ಜಯಶಾಲಿಯಾಗುತ್ತಾನೆಂಬ ವಿಷಯವನ್ನು ನಾವು ಕೇಳಿರುತ್ತೇವೆ.

**ಕೃಷ್ಣೇ ನಯೋ ಮಯಿ ಬಲಂ ಜಯಃ ಪಾರ್ಥೇ ಧನಂಜಯೇ।**
**ಮಾಗಧಂ ಸಾಧಯಿಷ್ಯಾಮ ಇಷ್ಟಿಂ ತ್ರಯ ಇವಾಗ್ನಯಃ ॥೧೩॥**

ಪ್ರಕೃತದಲ್ಲಿ ಶ್ರೀಕೃಷ್ಣನು ಸಕಲನೀತಿಗಳನ್ನೂ ಬಲ್ಲವನಾಗಿದ್ದಾನೆ. ಜರಾಸಂಧನ ವಧೆಗೆ ಸಾಕಷ್ಟು ಬಲವು ನನ್ನಲ್ಲಿದೆ. ಅರ್ಜುನನಿದ್ದೆಡೆಯಲ್ಲಿ ವಿಜಯವೆಂಬುದು ಖಂಡಿತವಾಗಿಯೂ ಸಿದ್ಧವಾಗಿರುವುದು. ದಕ್ಷಿಣಾಗ್ನಿ-ಗಾರ್ಹಪತ್ಯ-ಆಹವನೀಯಗಳೆಂಬ ಮೂರು ಅಗ್ನಿಗಳು ಯಾಗವನ್ನು ಸಾಧಿಸು

ವಂತೆ–ನಾವು ಮೂವರೂ ಹೋಗಿ ಜರಾಸಂಧನನ್ನು ವಧಿಸಿ ಜಯವನ್ನು ಸಾಧಿಸುವೆವು."

ಭೀಮನು ಹೀಗೆ ಹೇಳಿದನಂತರ ಶ್ರೀಕೃಷ್ಣನು ಧರ್ಮಜನಿಗೆ ಹೇಳುತ್ತಾನೆ :

**ಅರ್ಥಾನಾರಭತೇ ಬಾಲೋ ನಾನುಬನ್ಧಮವೇಕ್ಷತೇ।**
**ತಸ್ಮಾದರಿಂ ನ ಮೃಷ್ಯನ್ತಿ ಬಾಲಮರ್ಥಪರಾಯಣಮ್ ॥೧೪॥**

"ಧರ್ಮಜ! ಅವ್ಯುತ್ಪನ್ನನಾಗಿರುವವನು, ಬಾಲ್ಯದ ಚಾಪಲ್ಯವುಳ್ಳವನು ಮುಂದೇನಾಗುವುದೆಂಬುದನ್ನು ವಿವೇಚಿಸದೇ ತನ್ನ ಇಚ್ಛೆಯನ್ನು ನೆರವೇರಿಸಿ ಕೊಳ್ಳಲು ಆಸಕ್ತನಾಗಿರುತ್ತಾನೆ. ಆದರೆ ಸ್ವಾರ್ಥಿಯಾದ ವೈರಿಯು ಬಾಲನೆಂದಾಗಲೀ, ತಿಳಿವಳಿಕೆಯಿಲ್ಲದವನೆಂದಾಗಲೀ ಕ್ಷಮಾರ್ಹನಾಗಲಾರನು. ಆದುದರಿಂದ ಪ್ರತಿಯೊಂದು ಕಾರ್ಯವನ್ನೂ ಸಂಪೂರ್ಣವಾಗಿ ವಿವೇಚಿಸಿಮಾಡಬೇಕು.

**ಜಿತ್ವಾ ಜಯ್ಯಾನ್ ಯೌವನಾಶ್ವಿಃ ಪಾಲನಾಚ್ಚ ಭಗೀರಥಃ।**
**ಕಾರ್ತವೀರ್ಯಸ್ತಪೋವೀರ್ಯಾದ್ಬಲಾತ್ತು ಭರತೋ ವಿಭುಃ ॥೧೫॥**

**ಋದ್ಧ್ಯಾ ಮರುತ್ತಸ್ತಾನ್ಪಞ್ಚ ಸಮ್ರಾಜಸ್ತ್ವನುಶುಶ್ರುಮ।**
**ಸಾಮ್ರಾಜ್ಯಮಿಚ್ಛತಸ್ತೇ ತು ಸರ್ವಾಕಾರಂ ಯುಧಿಷ್ಠಿರ ॥೧೬॥**

**ನಿಗ್ರಾಹ್ಯಲಕ್ಷಣಂ ಪ್ರಾಪ್ತಿರ್ಧರ್ಮಾರ್ಥನಯಲಕ್ಷಣೈಃ ॥೧೭॥**

ಕೃತಯುಗದಲ್ಲಿ ಯುವನಾಶ್ವನ ಮಗನಾದ ಮಾಂಧಾತನು ಶತ್ರುಗಳೆಲ್ಲರನ್ನೂ ಜಯಿಸಿ ಚಕ್ರವರ್ತಿಯಾದನು. ಭಗೀರಥನು ತನ್ನ ಪ್ರಜೆಗಳ ವಿಷಯದಲ್ಲಿ ಅತ್ಯಂತದಯಾಪರನಾಗಿದ್ದುದರಿಂದ ಚಕ್ರವರ್ತಿಯಾದನು. ಕಾರ್ತವೀರ್ಯನು ತಪಸ್ಸಿನ ಶಕ್ತಿಯಿಂದ ಚಕ್ರವರ್ತಿಯಾದನು. ಭರತನು ಭುಜಬಲ-ಪರಾಕ್ರಮಗಳಿಂದಲೂ, ಮರುತ್ತನು ಧನಸಮೃದ್ಧಿಯಿಂದಲೂ ಚಕ್ರಾಧಿಪತಿಗಳೆನಿಸಿದರು.

ಯುಧಿಷ್ಠಿರ! ನಿನ್ನ ವಿಷಯದಲ್ಲಿ ಹೇಳುವುದಾದರೆ ಹಿಂದೆ ಹೇಳಿದ ಐವರಲ್ಲಿಯೂ ಇದ್ದ ಒಂದೊಂದು ಗುಣವೂ ಎಂದರೆ : ಯೌವನಾಶ್ವಿಗಿದ್ದ

ಶತ್ರುನಿಗ್ರಹಸಾಮರ್ಥ್ಯ.; ಭಗೀರಥನ ಪ್ರಜಾಪಾಲನೆ.; ಕಾರ್ತವೀರ್ಯನ ತಪಃಶಕ್ತಿ; ಭರತನ ಭುಜಬಲ-ಪರಾಕ್ರಮಗಳು.; ಮರುತ್ತನ ಸಮೃದ್ಧಿ-ಇವೆಲ್ಲವೂ ನಿನ್ನೊಬ್ಬನಲ್ಲಿಯೇ ಇವೆ. ಜರಾಸಂಧನಲ್ಲಿಯೂ ಚಕ್ರವರ್ತಿಗೆ ಇರಬೇಕಾದ ಗುಣಗಳಿಲ್ಲವೆಂದು ಭಾವಿಸಬೇಡ. ಅವನೂ ಸಹ ಚಕ್ರವರ್ತಿಯಾಗಲು ಅರ್ಹನೇ. ನೂರಾರು ಮಂದಿ ರಾಜರೂ ಅವನನ್ನು ಎದುರಿಸಲಾರದೇ ಹೋದರು. ಶತ್ರುನಿಗ್ರಹಗುಣವು ಅವನಲ್ಲಿದೆಯಾದುದ ರಿಂದ ಅವನೂ ಚಕ್ರವರ್ತಿಯಾಗಬಹುದು. ಕನಕಾಭರಣಗಳನ್ನು ಧರಿಸಿರುವ ರಾಜರು ಪದೇ-ಪದೇ ಅವನಿಗೆ ಕಪ್ಪ-ಕಾಣಿಕೆಗಳನ್ನು ಅರ್ಪಿಸಿ ಪೂಜಿಸುತ್ತಿರು ತ್ತಾರೆ. ಆದರೆ ಅವನು ಬಾಲ್ಯದಿಂದಲೂ ದುಷ್ಟಸ್ವಭಾವವುಳ್ಳವನಾಗಿರುವನು. ಅವನಿಗೆ ರಾಜರು ಕೊಡುವ ಕಪ್ಪ- ಕಾಣಿಕೆಗಳಿಂದ ಸಂತೋಷವಿಲ್ಲ. ಅವರನ್ನು ಪದೇ-ಪದೇ ಪೀಡಿಸುತ್ತಲೇ ಇರುತ್ತಾನೆ.

ಜರಾಸಂಧನಿಂದು ಪ್ರಧಾನಪುರುಷನಾಗಿದ್ದಾನೆ. ಪಟ್ಟಾಭಿಷಿಕ್ತರಾದ ರಾಜರನ್ನೆಲ್ಲಾ ಬಲಾತ್ಕಾರದಿಂದ ಸೆಳೆದುತಂದು ಸೆರೆಮನೆಗೆ ತಳ್ಳುತ್ತಿದ್ದಾನೆ. ಅವನಿಗೆ ಕಪ್ಪವನ್ನು ಸಮರ್ಪಿಸದ ರಾಜನನ್ನೇ ಪೃಥ್ವಿಯಲ್ಲಿ ನಾನು ಕಂಡಿಲ್ಲ. ಸುಮಾರು ಒಂದು ನೂರು ರಾಜರನ್ನು ಅವನು ತನ್ನ ಅಧೀನರನ್ನಾಗಿ ಮಾಡಿಕೊಂಡಿದ್ದಾನೆ. ಹೀಗಿರುವಾಗ ದುರ್ಬಲನಾದ ರಾಜನೊಬ್ಬನು ಅವನನ್ನು ಎದುರಿಸಲು ಹೇಗೆತಾನೇ ಸಾಧ್ಯವಾದೀತು?

ತಾನು ಜಯಿಸಿದ ರಾಜರೆಲ್ಲರನ್ನೂ ಶಿವಾಲಯದಲ್ಲಿ ಬಂಧಿಸಿಟ್ಟು– ಮೂಕಪ್ರಾಣಿಗಳನ್ನು ಮಾರಿಗೆ ಬಲಿಗೊಡುವಂತೆ–ಜರಾಸಂಧನು ರಾಜರನ್ನು ಬಲಿಗೊಡಲು ಯೋಚಿಸಿದ್ದಾನೆ. ಇದರಿಂದ ಅವನ ಅಧೀನರಾಗಿರುವ ರಾಜರಿಗೆ ಎಷ್ಟೊಂದು ದುಃಖವಾಗಿರಬಹುದೆಂಬುದನ್ನು ನೀನೇ ಯೋಚಿಸು, ಧರ್ಮಜ!

**ಕ್ಷತ್ರಿಯಃ ಶಸ್ತ್ರಮರಣೋ ಯದಾ ಭವತಿ ಸತ್ಕೃತಃ।**
**ತತಃ ಸ್ಮ ಮಾಗಧಂ ಸಂಖ್ಯೇ ಪ್ರತಿಬಾಧೇಮ ಯದ್ವಯಮ್ ॥೨೩॥**

ಕ್ಷತ್ರಿಯನಾದವನು ಯುದ್ಧದಲ್ಲಿ ಮಡಿದರೆ ಕೀರ್ತಿಮಂತನಾಗುವನು. ಕ್ಷತ್ರಿಯನನ್ನು ಯುದ್ಧದಲ್ಲಿ ಕೊಲ್ಲುವುದರಿಂದ ಅವನನ್ನು ಸತ್ಕರಿಸಿದಂತೆಯೇ ಆಗುತ್ತದೆ. ಆದುದರಿಂದ ನಾವು ಮೂವರೂ ಒಂದಾಗಿ ಜರಾಸಂಧನನ್ನು

ದ್ವಂದ್ವಯುದ್ಧಕ್ಕೆ ಆಹ್ವಾನಿಸಿ ಸಂಹರಿಸುತ್ತೇವೆ. ಈಗಾಗಲೇ ಎಂಬತ್ತಾರು ರಾಜರು ಅವನ ಅಧೀನಕ್ಕೊಳಪಟ್ಟಿರುವರು. ಇನ್ನೂ ಹದಿನಾಲ್ಕು ರಾಜರನ್ನು ಅವನು ಹಿಡಿದು ತರಬೇಕಾಗಿದೆ. ನೂರು ರಾಜರು ಅವನ ವಶರಾದೊಡನೆಯೇ ನರಮೇಧಕ್ಕೆ ಪ್ರಾರಂಭಿಸಿಬಿಡುತ್ತಾನೆ. ಆ ಕ್ರೂರಕರ್ಮವನ್ನು ತಡೆಯುವವನು ಅಪಾರಕೀರ್ತಿಯನ್ನು ಪಡೆಯುವುದರಲ್ಲಿ ಸಂಶಯವಿಲ್ಲ. ಯಾವನು ಜರಾಸಂಧನನ್ನು ಪರಾಜಯಗೊಳಿಸುವನೋ– ಅವನು ಚಕ್ರವರ್ತಿಯಾಗುವುದರಲ್ಲಿಯೂ ಸಂಶಯವಿಲ್ಲ, ಧರ್ಮಜ!"

೧೫ನೆಯ ಅಧ್ಯಾಯವು ಮುಗಿಯಿತು.

೧೬ನೆಯ ಅಧ್ಯಾಯ ರಾಜಸೂಯಾರಮ್ಭಪರ್ವ (ಮುಂದುವರಿದಿದೆ.)

**ಜರಾಸಂಧನ ಪರಾಕ್ರಮವನ್ನು ಕೇಳಿದ ಯುಧಿಷ್ಠಿರನಿಗೆ ರಾಜಸೂಯಯಾಗಮಾಡುವ ವಿಷಯದಲ್ಲಿ ನಿರುತ್ಸಾಹ : ರಾಜಸೂಯಯಾಗಮಾಡಲು ಅರ್ಜುನನಿಂದ ಪ್ರೋತ್ಸಾಹ**

ಯುಧಿಷ್ಠಿರನು ಹೇಳುತ್ತಾನೆ :

"ಬೇಡ ಕೃಷ್ಣ! ರಾಜಸೂಯಯಾಗವನ್ನು ಮಾಡುವುದೇ ಬೇಡ." ಧರ್ಮಭೀರುವಾದ ಯುಧಿಷ್ಠಿರನಿಂದ ಒಡನೆಯೇ ಆ ಮಾತುಗಳು ಹೊರಟುವು.

"ಏಕೆ ಧರ್ಮಜ?"–ಶ್ರೀಕೃಷ್ಣನು ಕೇಳಿದನು.

"ಕೃಷ್ಣ! ಚಕ್ರವರ್ತಿಯ ಪದವಿಗೆ ಆಸೆಪಟ್ಟು ಸ್ವಾರ್ಥಕ್ಕಾಗಿ ನಿಮ್ಮೆಲ್ಲರನ್ನೂ ಯಮರೂಪನಾಗಿರುವ ಜರಾಸಂಧನ ಬಳಿಗೆ ಹೇಗೆ ಕಳುಹಿಸಲಿ?

**ಭೀಮಾರ್ಜುನಾವುಭೌ ನೇತ್ರೇ ಮನೋ ಮನ್ಯೇ ಜನಾರ್ದನಮ್।**
**ಮನಶ್ಚಕ್ಷುರ್ವಿಹೀನಸ್ಯ ಕೀದೃಶಂ ಜೀವಿತಂ ಭವೇತ್ ॥೨॥**

ಭೀಮಾರ್ಜುನರನ್ನು ನನ್ನೆರಡು ಕಣ್ಣುಗಳೆಂದೇ ಭಾವಿಸಿದ್ದೇನೆ. ನಿನ್ನನ್ನು ನನ್ನ ಬುದ್ಧಿಸ್ವರೂಪನೆಂದು ಭಾವಿಸಿದ್ದೇನೆ. ಕಣ್ಣುಗಳನ್ನೂ, ಬುದ್ಧಿಯನ್ನೂ ಕಳೆದುಕೊಂಡ ಮೇಲೆ ಹೇಗೆತಾನೇ ನಾನು ಜೀವಿಸಿರಲಿ? ಭಯಂಕರಪರಾಕ್ರಮವುಳ್ಳ ಜರಾಸಂಧನನ್ನು ಯಮನೂ ಸಹ ಪರಾಜಯ

ಗೊಳಿಸಲಾರನು. ಅಂತಹವನ ಮುಂದೆ ನಿಮ್ಮ ಪರಾಕ್ರಮವು ನಿಷ್ಪ್ರಯೋಜಕವಾಗಿ ಹೋಗುವುದು. ರಾಜಸೂಯಯಾಗಮಾಡಲು ಆಸೆಪಟ್ಟು ಅನೇಕ ವಿಧವಾದ ಗಂಡಾಂತರಗಳಿಗೆ ಈಡಾಗಬೇಕಾಗುತ್ತದೆ. ಈ ಕಾರಣದಿಂದಾಗಿ ನಾನೀಗ ಉದ್ದೇಶಿಸಿರುವ ಕಾರ್ಯವನ್ನು ಕೈಬಿಡುವುದೇ ಲೇಸೆಂಬುದು ನನ್ನ ಅಭಿಪ್ರಾಯವಾಗಿದೆ. ಕೃಷ್ಣ! ಈ ಯಾಗವನ್ನು ಮಾಡದಿರುವುದೇ ನಮಗೆ ಶ್ರೇಯಸ್ಕರ. ಈ ಯಾಗವನ್ನು ಮಾಡಲು ಯತ್ನಿಸಿ ಅನೇಕ ಕಷ್ಟ-ಕೋಟಲೆಗಳಿಗೆ ಸಿಕ್ಕಿಕೊಳ್ಳುವುದಕ್ಕಿಂತಲೂ ಕರ್ಮಸಂನ್ಯಾಸವೇ ಉತ್ತಮವೆಂದು ತೋರುತ್ತದೆ. ನೀನು ಜರಾಸಂಧನ ವಿಷಯಗಳನ್ನು ಹೇಳಿದನಂತರ ನನ್ನ ಹೃದಯವು ಬಹಳವಾಗಿ ನೊಂದಿದೆ ಮತ್ತು ರಾಜಸೂಯಯಾಗದ ಸಾಧನೆಯಾಗಲಾರದೆಂದೂ ನನಗನ್ನಿಸುತ್ತಿದೆ.”

ಅಗ್ನಿದೇವನಿಂದ ಅಕ್ಷಯತೂಣೀರಗಳನ್ನೂ, ದಿವ್ಯರಥವನ್ನೂ, ಧ್ವಜವನ್ನೂ, ಗಾಂಡೀವವೆಂಬ ಧನುಸ್ಸನ್ನೂ, ಮಯನಿಂದ ದಿವ್ಯಸಭಾಭವನವನ್ನೂ ಪಡೆದಿದ್ದ ಅರ್ಜುನನು ಯುಧಿಷ್ಠಿರನ ಭೀರುತನದ ಮಾತುಗಳನ್ನು ಕೇಳಿ ಉದ್ವಿಗ್ನನಾಗಿ ಅಣ್ಣನನ್ನು ಕುರಿತು ಹೇಳಿದನು :

“ಅಣ್ಣ! ನಾನು ಗಾಂಡೀವವೆಂಬ ಮಹಾಧನುಸ್ಸನ್ನೂ, ಅಕ್ಷಯ ತೂಣೀರಗಳನ್ನೂ, ಮಹಾಸ್ತ್ರಗಳನ್ನೂ, ಅವುಗಳ ಪ್ರಯೋಗ ಸಾಮರ್ಥ್ಯವನ್ನೂ, ಅನೇಕಾನೇಕ ಮಿತ್ರರನ್ನೂ, ಅನೇಕರಾಜ್ಯಗಳನ್ನೂ ಮತ್ತು ಕೀರ್ತಿಯನ್ನೂ ಪಡೆದಿರುತ್ತೇನೆ. ಇವೆಲ್ಲವೂ ಕೇವಲ ಅಪೇಕ್ಷೆಯಿಂದ ಸಾಧಿತವಾದುವುಗಳಲ್ಲ. (ಕಷ್ಟಪಟ್ಟು ಗಳಿಸಿರುತ್ತೇನೆ.)

**ಕುಲೇ ಜನ್ಮ ಪ್ರಶಂಸನ್ತಿ ವೈದ್ಯಾಃ ಸಾಧು ಸುನಿಷ್ಠಿತಾಃ।**
**ಬಲೇನ ಸದೃಶಂ ನಾಸ್ತಿ ವೀರ್ಯಂ ತು ಮಮ ರೋಚತೇ ॥೮॥**

ಅನುಭವಿಗಳಾದ ವಿದ್ವಾಂಸರು ಉತ್ತಮಕುಲದಲ್ಲಿ ಜನ್ಮತಾಳುವುದನ್ನು ಬಹುವಾಗಿ ಪ್ರಶಂಸಿಸುತ್ತಾರೆ. ಆದರೆ ಸತ್ಕುಲದಲ್ಲಿ ಹುಟ್ಟುವುದಕ್ಕಿಂತಲೂ ಮಿಗಿಲಾದುದು ಪರಾಕ್ರಮವೆಂಬುದು ನನ್ನ ಅಭಿಪ್ರಾಯವಾಗಿದೆ. ಪರಾಕ್ರಮಕ್ಕಿಂತಲೂ ಮಿಗಿಲಾದ ವಿಷಯವೇ ಮತ್ತೊಂದಿರುವುದಿಲ್ಲ, ಮಹಾರಾಜ!

**ಕೃತವೀರ್ಯಕುಲೇ ಜಾತೋ ನಿರ್ವೀರ್ಯಃ ಕಿಂ ಕರಿಷ್ಯತಿ।**
**ನಿರ್ವೀರ್ಯೇ ತು ಕುಲೇ ಜಾತೋ ವೀರ್ಯವಾಂಸ್ತು ವಿಶಿಷ್ಯತೇ॥**

ಪರಾಕ್ರಮಿಗಳಿಗೆ ಹೆಸರಾಂತಕುಲದಲ್ಲಿ ನಿರ್ವೀರ್ಯನೊಬ್ಬನು ಹುಟ್ಟಿದರೆ ಅವನು ಏನು ತಾನೇ ಮಾಡಬಲ್ಲನು? ಸತ್ಕುಲಪ್ರಸೂತನಲ್ಲದಿದ್ದರೂ ದುರ್ಬಲರಾದವರ ವಂಶದಲ್ಲಿಯೇ ಹುಟ್ಟಿದ್ದರೂ–ಪರಾಕ್ರಮಿಯಾದವನು ಲೋಕದಲ್ಲಿ ಶ್ರೇಷ್ಠನೆನಿಸುತ್ತಾನೆ.

**ಕ್ಷತ್ರಿಯಃ ಸರ್ವಶೋ ರಾಜನ್ಯಸ್ಯ ವೃತ್ತಿರ್ದ್ವಿಷಜ್ಜಯೇ।**
**ಸರ್ವೈರ್ಗುಣೈರ್ವಿಹೀನೋಽಪಿ ವೀರ್ಯವಾನ್ಹಿ ತರೇದ್ರಿಪೂನ್॥**

ಮಹಾರಾಜ! ಯಾವನು ರಾಜ್ಯವನ್ನು ವಿಸ್ತರಿಸಿ ಶತ್ರುಗಳನ್ನು ದಮನಮಾಡಿ ತನ್ನ ಕೀರ್ತಿಯನ್ನು ಹೆಚ್ಚಿಸಿಕೊಳ್ಳುವನೋ–ಅವನೇ ನಿಜವಾದ ಕ್ಷತ್ರಿಯನು. ಪರಾಕ್ರಮವೊಂದಿದ್ದು ಬೇರಾವ ಒಳ್ಳೆಯ ಗುಣಗಳಿಲ್ಲದಿದ್ದರೂ ಶತ್ರುದಮನಮಾಡಲು ಅವನು ಸಮರ್ಥನಾಗುತ್ತಾನೆ.

**ಸರ್ವೈರಪಿ ಗುಣೈರ್ಯುಕ್ತೋ ನಿರ್ವೀರ್ಯಃ ಕಿಂ ಕರಿಷ್ಯತಿ।**
**ಗುಣೀಭೂತಾ ಗುಣಾಃ ಸರ್ವೇ ತಿಷ್ಠನ್ತಿ ಹಿ ಪರಾಕ್ರಮೇ ॥೧೧॥**

ಪರಾಕ್ರಮವೊಂದಿಲ್ಲದೇ ಸಕಲಗುಣಪರಿಪೂರ್ಣನಾಗಿದ್ದರೂ ಅವನು ಏನನ್ನೂ ಸಾಧಿಸಲಾರನು. ಪರಾಕ್ರಮಕ್ಕೆ ಇತರ ಗುಣಗಳು ಗೌಣವಾಗಿ ಉಳಿಯುವುವು.

**ಜಯಸ್ಯ ಹೇತುಃ ಸಿದ್ಧಿರ್ಹಿ ಕರ್ಮ ದೈವಂ ಚ ಸಂಶ್ರಿತಮ್।**
**ಸಂಯುಕ್ತೋ ಹಿ ಬಲೈಃ ಕಶ್ಚಿತ್ಪ್ರಮಾದಾನ್ನೋಪಯುಜ್ಯತೇ।**
**ತೇನ ದ್ವಾರೇಣ ಶತ್ರುಭ್ಯಃ ಕ್ಷೀಯತೇ ಸಬಲೋ ರಿಪುಃ ॥೧೩॥**

ಧ್ಯೇಯ, ಪ್ರಯತ್ನ ಮತ್ತು ಅದೃಷ್ಟ–ಇವುಗಳು ಜಯಕ್ಕೆ ಕಾರಣಗಳಾಗಿರುತ್ತವೆ. ಪರಾಕ್ರಮವೆಂಬುದು ಎಲ್ಲ ಗುಣಗಳಿಗಿಂತಲೂ ಶ್ರೇಷ್ಠವೆನಿಸಿದರೂ–ಪರಾಕ್ರಮಿಯು ಅವಿವೇಕದಿಂದ ವರ್ತಿಸಿದರೆ – ಜಯಶೀಲನಾಗಲಾರನು. ಈ ಕಾರಣದಿಂದಲೇ ಶತ್ರುವು ಪರಾಕ್ರಮಿಯೇ ಆಗಿದ್ದರೂ ಕೆಲವು ಸಮಯಗಳಲ್ಲಿ ತನ್ನ ಶೌರ್ಯಮದದಿಂದ ವಿವೇಕ ಶೂನ್ಯನಾಗಿ ಎದುರಾಳಿಯೊಡನೆ ಯುದ್ಧಮಾಡಿ ಪ್ರಾಣತ್ಯಾಗಮಾಡುತ್ತಾನೆ.

**ದೈನ್ಯಂ ಯಥಾ ಬಲವತಿ ತಥಾ ಮೋಹೋ ಬಲಾನ್ವಿತೇ।**
**ತಾವುಭೌ ನಾಶಕೌ ಹೇತೂ ರಾಜ್ಞಾ ತ್ಯಾಜ್ಯೌ ಜಯಾರ್ಥಿನಾ ॥೧೫॥**

ಪರಾಕ್ರಮಿಯಾದವನಿಗೆ ಕೆಲವು ಸಮಯಗಳಲ್ಲಿ ದೈನ್ಯವು ಹೇಗೆ ಉಂಟಾಗುವುದೋ ಹಾಗೆಯೇ ಮೋಹವೂ ಉಂಟಾಗುವುದು. ಆದುದರಿಂದ ವಿಜಯವನ್ನು ಇಚ್ಛಿಸುವ ರಾಜನು ದೈನ್ಯ-ಮೋಹಗಳೆರಡನ್ನೂ ಪರಿತ್ಯಜಿಸಬೇಕು.

ರಾಜಸೂಯದ ಕಾರಣದಿಂದ ನಾವು ಜರಾಸಂಧನನ್ನು ಸಂಹರಿಸಲು ಯತ್ನಿಸಿ–ಕೃತಕೃತ್ಯರಾಗಿ, ಅವನು ದುರುದ್ದೇಶದಿಂದ ಬಂಧಿಸಿಟ್ಟಿರುವ ರಾಜರ ಬಂಧವಿಮೋಚನೆಯನ್ನು ಮಾಡಿದರೆ ಅದಕ್ಕಿಂತಲೂ ಯಶಸ್ಕರವಾದ ಕಾರ್ಯವು ಬೇರಾವುದೂ ಇರುವುದಿಲ್ಲ.

**ಅನಾರಮ್ಭೋ ಹಿ ನಿಯತೋ ಭವೇದಗುಣನಿಶ್ಚಯಃ।**
**ಗುಣಾನ್ನಿಃಸಂಶಯಾದ್ರಾಜನ್ನೈರ್ಗುಣ್ಯಂ ಮನ್ಯಸೇ ಕಥಮ್ ॥೧೬॥**

ಒಂದು ವೇಳೆ ಜರಾಸಂಧನ ಪರಾಕ್ರಮಕ್ಕೆ ಹೆದರಿ ರಾಜಸೂಯಯಾಗವನ್ನು ಮಾಡದೇ ನಾವು ತಟಸ್ಥರಾದಲ್ಲಿ ಪ್ರಪಂಚವು ನಮ್ಮನ್ನು ಅಸಮರ್ಥರೆಂದೇ ಸಾರುತ್ತದೆ. ನಾವು ನಿಶ್ಚಯವಾಗಿಯೂ ಜರಾಸಂಧನನ್ನು ವಧಿಸುವ ಸಾಮರ್ಥ್ಯವನ್ನು ಪಡೆದಿರುತ್ತೇವೆ. ನಾವು ಗುಣವಂತರು ಅಥವಾ ಸಮರ್ಥರೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ನಮ್ಮಲ್ಲಿ ನಿಸ್ಸಂಶಯವಾಗಿರುವ, ಚಿರಸ್ಥಾಯಿಯಾಗಿರುವ ಗುಣಕ್ಕಿಂತಲೂ (ಸಾಮರ್ಥ್ಯಕ್ಕಿಂತಲೂ) ನಿರ್ಗುಣರಂತೆ (ಸಾಮರ್ಥ್ಯವಿಲ್ಲದವರಂತೆ) ಇರುವುದೇ ಉತ್ತಮವೆಂದು ನೀನು ಹೇಗೆ ತಾನೇ ಭಾವಿಸುವೆ?

**ಕಾಷಾಯಂ ಸುಲಭಂ ಪಶ್ಚಾನ್ಮುನೀನಾಂ ಶಮಮಿಚ್ಛತಾಮ್।**
**ಸಾಮ್ರಾಜ್ಯಂ ತು ಭವೇಚ್ಛಕ್ಯಂ ವಯಂ ಯೋತ್ಸ್ಯಾಮಹೇ ಪರಾನ್।**

ನಾವು ಅಶಕ್ತರೆಂಬುದು ನಿಶ್ಚಯವಾದರೆ ಶಾಂತಿಯನ್ನೇ ಅಭಿಲಾಷಿಸುವ ಮುನಿಗಳ ಕಾಷಾಯವಸ್ತ್ರವನ್ನು ತೊಟ್ಟುಕೊಳ್ಳುವುದು ಬಹಳ ಸುಲಭ. ಆ ಮೊದಲೇ ನಾವು ಕಾಷಾಯವಸ್ತ್ರವನ್ನು ತೊಟ್ಟುಕೊಳ್ಳುವ ಅರ್ಥಾತ್ ವಿರಾಗಿ

ಗಳಾಗುವ ಕಾರಣವಿಲ್ಲ. ನಾವು ಸಾಮ್ರಾಜ್ಯವನ್ನು ಕಟ್ಟಲು ಸಮರ್ಥರಾಗಿದ್ದೇವೆ. ಆದುದರಿಂದ ಶತ್ರುಗಳೊಡನೆ ಅವಶ್ಯವಾಗಿ ಯುದ್ಧಮಾಡೋಣ."

೧೫ನೆಯ ಅಧ್ಯಾಯವು ಮುಗಿಯಿತು.



## ಶ್ರೀಕೃಷ್ಣನ ಸಲಹೆಯಂತೆ ಯುಧಿಷ್ಠಿರನು ಅರ್ಜುನನ ಅಭಿಪ್ರಾಯಕ್ಕೆ ಮನ್ನಣೆಯನ್ನಿತ್ತುದು : ಶ್ರೀಕೃಷ್ಣನಿಂದ ಜರಾಸಂಧೋಪಾಖ್ಯಾನಕಥನ

"ಜನಮೇಜಯ! ಅರ್ಜುನನು ಹೇಳಿದ ಮಾತುಗಳನ್ನು ಶ್ಲಾಘಿಸುತ್ತಾ ಶ್ರೀಕೃಷ್ಣನು ಹೇಳಿದನು :

**ಜಾತಸ್ಯ ಭಾರತೇ ವಂಶೇ ತಥಾ ಕುನ್ತ್ಯಾಃ ಸುತಸ್ಯ ಚ**
**ಯಾ ವೈ ಯುಕ್ತಾ ಮತಿಃ ಸೇಯಮರ್ಜುನೇನ ಪ್ರದರ್ಶಿತಾ ॥೧॥**

"ಭರತಕುಲೋತ್ಪನ್ನನಾದ, ಕುಂತೀಪುತ್ರನಾದ ರಾಜಪುತ್ರನಿಗೆ ಯಾವ ರೀತಿಯಾದ ವಿವೇಚನಾಪೂರ್ಣವಾದ ಬುದ್ಧಿಯಿರಬೇಕೋ–ಅಂತಹ ಪ್ರಜ್ಞಾವಿಶೇಷವನ್ನೇ ಅರ್ಜುನನಿಂದು ತನ್ನ ವೀರವಾಣಿಯಿಂದ ಪ್ರಕಟಪಡಿಸಿದ್ದಾನೆ.

**ನ ಸ್ಮ ಮೃತ್ಯುಂ ವಯಂ ವಿದ್ಮ ರಾತ್ರೌ ವಾ ಯದಿ ವಾ ದಿವಾ**
**ನ ಚಾಪಿ ಕಞ್ಚಿದಮರಮಯುದ್ಧೇನಾನುಶುಶ್ರುಮ ॥೨॥**
**ಏತಾವದೇವ ಪುರುಷೈಃ ಕಾರ್ಯಂ ಹೃದಯತೋಷಣಮ್**
**ನಯೇನ ವಿಧಿದೃಷ್ಟೇನ ಯದುಪಕ್ರಮತೇ ಪರಾನ್ ॥೩॥**

ಯುಧಿಷ್ಠಿರ! ಮರಣವು ಯಾವಾಗ ಸನ್ನಿಹಿತವಾಗುವುದೆಂಬ ವಿಷಯವು ನಮಗೆ ತಿಳಿಯದು. ರಾತ್ರಿಯಲ್ಲಿ ಬರುವುದೋ–ಹಗಲಿನಲ್ಲಿ ಬರುವುದೋ ಎಂಬುದನ್ನೂ ನಾವರಿಯೆವು. ಯುದ್ಧವನ್ನು ಮಾಡದ ಮಾತ್ರದಿಂದ ಮಾನವನಿಗೆ ಅಮರತ್ವವು ಪ್ರಾಪ್ತಿಯಾಗುವುದೆಂಬ ವಿಷಯವನ್ನೂ ನಾವು ಕೇಳರಿಯೆವು. ಆದುದರಿಂದ ಮಾನವನಿಗೆ ಮೃತ್ಯುವು ಎಂದಿದ್ದರೂ ಸಿದ್ಧವಾಗಿಯೇ ಇದೆ. ಯುದ್ಧಮಾಡಿದರೆ ಮರಣವು

ಸನ್ನಿಹಿತವಾಗುವುದೆಂದು ಭಯಪಡಬೇಕಾಗಿಲ್ಲ. ಇದರಿಂದಾಗಿ ಸ್ವಧರ್ಮವಿಹಿತವಾದ ದುಷ್ಟಶಿಕ್ಷಣ-ಶಿಷ್ಟಪರಿಪಾಲನೆಗಳನ್ನು ಬಿಡಬೇಕಾಗಿಲ್ಲ. ರಾಜನೀತಿಯನ್ನು ಅನುಸರಿಸಿ ಕಾಲ-ದೇಶ-ವರ್ತಮಾನಗಳನ್ನು ಪರಿಶೀಲಿಸಿ ಶತ್ರುವನ್ನು ಆಕ್ರಮಣಮಾಡಲೇಬೇಕು.

**ಸುನಯಸ್ಯಾನಪಾಯಸ್ಯ ಸಂಯೋಗೇ ಪರಮಃ ಕ್ರಮಃ।**
**ಸಂಗತ್ಯಾ ಜಾಯತೇಽಸಾಮ್ಯಂ ಸಾಮ್ಯಂ ಚ ನ ಭವೇದ್ವಯೋಃ ॥**

ರಾಜನೀತಿಗೆ ಅನುಸಾರವಾಗಿ ನಡೆಯುವುದರಿಂದಲೂ, ದೈವಬಲದಿಂದಲೂ ಪ್ರಾರಂಭಿಸಿದ ಕಾರ್ಯವು ಫಲದಾಯಕವಾಗುತ್ತದೆ. ಒಂದು ವೇಳೆ ಎರಡು ಪಕ್ಷಗಳವರೂ ರಾಜನೀತಿ ಮತ್ತು ದೈವಬಲಗಳಿಂದ ಕೂಡಿರುವರೆಂದು ಹೇಳುವುದಾದರೂ ಸೆಣೆಸಾಡುವ ಎರಡು ಪಕ್ಷಗಳಲ್ಲಿ ಏರು–ಪೇರುಗಳುಂಟಾಗಿಯೇ ಆಗುತ್ತವೆ. ಎರಡು ಪಕ್ಷಗಳೂ ಎಂದೂ ಸಾಮ್ಯದಿಂದಿರಲಾರವು.

**ಅನಯಸ್ಯಾನುಪಾಯಸ್ಯ ಸಂಯುಗೇ ಪರಮಃ ಕ್ಷಯಃ।**
**ಸಂಶಯೋ ಜಾಯತೇ ಸಾಮ್ಯಾಜ್ಜಯಶ್ಚ ನ ಭವೇದ್ದ್ವಯೋಃ ॥೫॥**

ಯಾವ ಸಮಯದಲ್ಲಿ ಏನು ಮಾಡಬೇಕೆಂಬ ವಿವೇಚನೆಯಿಲ್ಲದೇ ನೀತಿವಿರುದ್ಧವಾಗಿ ಕಾರ್ಯಮಾಡುವುದರಿಂದ ಯುದ್ಧದಲ್ಲಿ ಅಪಜಯವೂ, ಸರ್ವನಾಶವೂ ಉಂಟಾಗುವುದು. ಎರಡು ಪಕ್ಷಗಳೂ ಸೋಲಲೂ ಸಾಧ್ಯವಿಲ್ಲ ಅಥವಾ ಗೆಲ್ಲಲೂ ಸಾಧ್ಯವಿಲ್ಲ. ಹೀಗಿರುವಾಗ ನಾವು ಸರಿಯಾದ ವ್ಯವಸ್ಥೆಯನ್ನು ಮಾಡಿಕೊಂಡು ರಾಜನೀತಿಗೆ ಅನುಸಾರವಾಗಿ ಶತ್ರುವನ್ನು ಆಕ್ರಮಣಮಾಡಬಾರದೇಕೆ? ತುಂಬಿ ಹರಿಯುವ ಹೊಳೆಯು ದಂಡೆಗಳಲ್ಲಿರುವ ವೃಕ್ಷಗಳನ್ನು ಮೂಲಸಮೇತವಾಗಿ ಕಿತ್ತು ಕೊಚ್ಚಿಕೊಂಡು ಹೋಗುವಂತೆ–ಶತ್ರುವನ್ನು ನಿರ್ಮೂಲಮಾಡಲು ಯತ್ನಿಸಬಾರದೇಕೆ? ಧರ್ಮಜ!

ನಮ್ಮಲ್ಲಿರುವ ದೋಷಗಳನ್ನು ತಿದ್ದಿಕೊಂಡು (ನಮ್ಮ ದೌರ್ಬಲ್ಯವನ್ನು ಹೊರಗೆಡಹದೆ), ಶತ್ರುವಿನಲ್ಲಿ ಇರುವ ಅವಗುಣವೇನೆಂಬುದನ್ನೂ ಮತ್ತು

ದೌರ್ಬಲ್ಯವೇನೆಂಬುದನ್ನೂ ತಿಳಿದು ಕಾರ್ಯಮಾಡಿದರೆ ನಮಗೆ ಜಯವಾಗಲಾರದೇ? ಖಂಡಿತವಾಗಿಯೂ ಜಯವು ಲಭಿಸುವುದೆಂಬುದು ನನ್ನ ನಿಶ್ಚಿತಾಭಿಪ್ರಾಯವಾಗಿದೆ.

**ವ್ಯೂಢಾನೀಕೈರತಿಬಲೈರ್ನ ಯುದ್ಧ್ಯೇದರಿಭಿಃ ಸಹ।**
**ಇತಿ ಬುದ್ಧಿಮತಾಂ ನೀತಿಸ್ತನ್ಮಮಾಪೀಹ ರೋಚತೇ ॥೭॥**

ಯುಧಿಷ್ಠಿರ! ಶತ್ರುವು ಮಹಾಪರಾಕ್ರಮಿಯಾಗಿರುವಾಗ, ಸೈನ್ಯ ಸಮೇತನಾಗಿರುವಾಗ–ಅವನೊಡನೆ ಯುದ್ಧಮಾಡಲು ಹೋಗಕೂಡ ದೆಂಬುದು ನೀತಿಜ್ಞರ ಮತ ; ಇದು ನನಗೂ ಅಭಿಮತವೇ. ಹಾಗಾದರೆ ಶತ್ರುವನ್ನು ಪರಾಜಯಗೊಳಿಸುವ ವಿಧಾನವೇನೆಂದು ನೀನು ಕೇಳಬಹುದು.

**ಅನವದ್ಯಾ ಹ್ಯಸಮ್ಬುದ್ಧಾಃ ಪ್ರವಿಷ್ಟಾಃ ಶತ್ರುಸದ್ಮ ತತ್।**
**ಶತ್ರುದೇಹಮುಪಾಕ್ರಮ್ಯ ತಂ ಕಾಮಂ ಪ್ರಾಪ್ನುಯಾಮಹೇ ॥೮॥**

ನಾವು ಯಾವ ವಿಧವಾದ ಸಂಶಯಕ್ಕೂ ಆಸ್ಪದಕೊಡದೇ ಶತ್ರುವಿನ ಅರಮನೆಯನ್ನು ಪ್ರವೇಶಿಸಿ, ಅವನನ್ನು ದ್ವಂದ್ವಯುದ್ಧಕ್ಕೆ ಕರೆದು ಸಂಹಾರ ಮಾಡಬೇಕು. ಹೀಗೆ ಮಾಡುವುದರಿಂದ ನಮಗಾವ ಕಳಂಕವೂ ಉಂಟಾಗುವುದಿಲ್ಲ.

**ಏಕೋ ಹ್ಯೇವ ಶ್ರಿಯಂ ನಿತ್ಯಂ ಬಿಭರ್ತಿ ಪುರುಷರ್ಷಭ।**
**ಅನ್ತರಾತ್ಮೇವ ಭೂತಾನಾಂ ತತ್ಕ್ಷಯಂ ನೈವ ಲಕ್ಷಯೇ ॥೯॥**

ಕುಂತೀಪುತ್ರ! ಸರ್ವಭೂತಗಳ ಹೃದಯದಲ್ಲಿಯೂ ಅಂತರ್ಯಾಮಿ ಯಾಗಿ ಪ್ರಕಾಶಿಸುವ ಪರಮಾತ್ಮನಂತೆ–ಇಂದು ಪೃಥ್ವಿಯಲ್ಲಿ ಪುರುಷ ಶ್ರೇಷ್ಠನಾದ ಜರಾಸಂಧನೊಬ್ಬನೇ ಅಬಾಧಿತವಾದ ಕೀರ್ತಿಯಿಂದ ಪ್ರಕಾಶಿ ಸುತ್ತಿದ್ದಾನೆ. ಮೇಲೆ ಹೇಳಿರುವ ಉಪಾಯವನ್ನು ಬಿಟ್ಟು ಅವನ ಅವಸಾನಕ್ಕೆ ಬೇರೆ ಉಪಾಯವೇ ನನಗೆ ತಿಳಿಯದಾಗಿದೆ.

**ಅಥ ವೈನಂ ನಿಹತ್ಯಾಜೌ ಶೇಷೇಣಾಪಿ ಸಮಾಹತಾಃ।**
**ಪ್ರಾಪ್ನುಯಾಮ ತತಃ ಸ್ವರ್ಗಂ ಜ್ಞಾತಿತ್ರಾಣಪರಾಯಣಾಃ ॥೧೦॥**

ಧರ್ಮಜ! ನಾವು ನಮ್ಮ ಬಾಂಧವರ ಹಿತರಕ್ಷಣೆಗಾಗಿ ಜರಾಸಂಧ

ನನ್ನು ಸಂಹರಿಸೋಣ ಅಥವಾ ಅವನಿಂದ ಸಂಹರಿಸಲ್ಪಟ್ಟವರಾಗಿ ಸ್ವರ್ಗಕ್ಕಾದರೂ ಹೋಗೋಣ. ಈ ಎರಡೂ ನನಗೆ ಇಷ್ಟವೇ ಆಗಿರುತ್ತದೆ."

ಶ್ರೀಕೃಷ್ಣನು ಹೇಳಿದ ಧೈರ್ಯೋತ್ಸಾಹಪೂರ್ಣವಾದ ಮಾತುಗಳನ್ನು ಕೇಳಿ ಧರ್ಮರಾಜನಿಗೂ ಸ್ವಲ್ಪ ಧೈರ್ಯವುಂಟಾಯಿತು. ಮಹಾಪರಾಕ್ರಮಿಯಾದ ಜರಾಸಂಧನ ಇತಿಹಾಸವನ್ನು ಕೇಳಬೇಕೆಂಬ ಕುತೂಹಲವುಂಟಾಗಿ ಶ್ರೀಕೃಷ್ಣನನ್ನು ಪ್ರಶ್ನಿಸಿದನು :

"ಶ್ರೀಕೃಷ್ಣ! ಜರಾಸಂಧನೆಂಬುವನಾರು? ಮಹಾಮಹಿಮನಾದ, ದೇವದೇವನಾದ, ಅಗ್ನಿಸದೃಶನಾದ ನಿನ್ನನ್ನು ಸ್ಪರ್ಶಮಾಡಿಯೂ–ಬೆಂಕಿಯಲ್ಲಿ ಬಿದ್ದ ಶಲಭದಂತೆ ಭಸ್ಮವಾಗಿ ಹೋಗದ–ಜರಾಸಂಧನ ಪರಾಕ್ರಮವಾದರೂ ಎಷ್ಟಿರುವುದು? ಇವೆಲ್ಲವನ್ನೂ ವಿವರವಾಗಿ ಹೇಳು, ಕೃಷ್ಣ!"

"ಯುಧಿಷ್ಠಿರ! ಜರಾಸಂಧನಾರು? ಅವನ ಪರಾಕ್ರಮವೆಷ್ಟು? ಅವನು ನಮ್ಮ ವಿಷಯದಲ್ಲಿ ಅನೇಕವಾದ ಅಪರಾಧಗಳನ್ನು ಎಸಗಿದ್ದರೂ ನಾವೇಕೆ ಅವನನ್ನು ಕೊಲ್ಲದೇ ಬಿಟ್ಟಿರುವೆವು?–ಇವೆಲ್ಲವನ್ನೂ ವಿಸ್ತಾರವಾಗಿಯೇ ಹೇಳುವೆನು, ಕೇಳು :

ಮಹಾಪರಾಕ್ರಮಿಯಾದ ಬೃಹದ್ರಥನೆಂಬ ರಾಜನೊಬ್ಬನಿದ್ದನು. ಅವನು ಮಗಧದೇಶಕ್ಕೆ ಅಧಿಪತಿ. ಯುದ್ಧದಲ್ಲಿ ತನ್ನನ್ನು ಯಾರೂ ಎದುರಿಸಲು ಸಾಧ್ಯವೇ ಇಲ್ಲವೆಂಬ ಅಹಂಕಾರವು ಅವನಿಗಿದ್ದಿತು. ಮೂರು ಅಕ್ಷೌಹಿಣೀಸೈನ್ಯಗಳು ಅವನಲ್ಲಿದ್ದುದೂ ಅದಕ್ಕೆ ಒಂದು ಕಾರಣ. ರೂಪ ಸಂಪನ್ನನಾಗಿಯೂ, ವೀರ್ಯಸಂಪನ್ನನಾಗಿಯೂ, ಶ್ರೀಮಂತನಾಗಿಯೂ, ಅತುಲಪರಾಕ್ರಮಶಾಲಿಯಾಗಿಯೂ, ನಿತ್ಯವೂ ನಾನಾವಿಧವಾದ ಯಾಗಗಳನ್ನು ಮಾಡುವವನಾಗಿಯೂ ಇದ್ದ ಬೃಹದ್ರಥನು ಭೂಲೋಕದಲ್ಲಿ ಎರಡನೆಯ ಇಂದ್ರನಂತೆಯೇ ಪ್ರಭಾವಶಾಲಿಯೂ ಆಗಿದ್ದನು. ತೇಜಸ್ಸಿನಲ್ಲಿ ಸೂರ್ಯನಿಗೆ ಸಮಾನನೆನಿಸಿದ್ದನು. ಕ್ಷಮೆಯಲ್ಲಿ ಪೃಥ್ವಿಗೂ, ಕೋಪದಲ್ಲಿ ಯಮನಿಗೂ, ಐಶ್ವರ್ಯದಲ್ಲಿ ಕುಬೇರನಿಗೂ ಸಮಾನನೆನಿಸಿದ್ದನು. ಸೂರ್ಯನ ಕಿರಣಗಳು ಪ್ರಪಂಚದಲ್ಲೆಲ್ಲಾ ಪ್ರಸರಿಸುವಂತೆ–ಬೃಹದ್ರಥನ ಸದ್ಗುಣಗಳ ಕೀರ್ತಿಯು ಬ್ರಹ್ಮಾಂಡದಲ್ಲೆಲ್ಲಾ ವ್ಯಾಪಿಸಿತ್ತು.

ಬೃಹದ್ರಥನು ಕಡುಚೆಲುವೆಯರಾಗಿದ್ದ ಕಾಶೀರಾಜನ ಇಬ್ಬರು ಅವಳಿ ಹೆಣ್ಣುಮಕ್ಕಳನ್ನು ಮದುವೆಯಾದನು. ಅವರಿಬ್ಬರಿಗೂ ಏಕಾಂತದಲ್ಲಿ–'ನಾನು ನಿಮ್ಮಿಬ್ಬರನ್ನೂ ಒಂದೇ ಸಮನಾದ ಪ್ರೀತಿಯಿಂದ ಕಾಣುವೆನು. ತಾರತಮ್ಯದೃಷ್ಟಿಯಿಂದ ನೋಡುವುದಿಲ್ಲ'–ಎಂಬ ಭಾಷೆಯನ್ನಿತ್ತಿದ್ದನು. ಆ ಇಬ್ಬರು ಚೆಲುವೆಯರೊಡನೆ ಬೃಹದ್ರಥನು–ಎರಡು ಹೆಣ್ಣಾನೆಗಳೊಡನೆ ವಿಹರಿಸುವ ಸಲಗದಂತೆ ಅಥವಾ ಶರೀರವನ್ನು ಧರಿಸಿರುವ ಸಮುದ್ರರಾಜನು ಗಂಗಾ-ಯಮುನೆಯರೊಡನೆ ವಿಹರಿಸುವಂತೆ–ಅನೇಕವರ್ಷಗಳ ಕಾಲ ಆನಂದದಿಂದ ಸುಖ-ಭೋಗಗಳನ್ನು ಅನುಭವಿಸುತ್ತಿದ್ದನು.

ಬೃಹದ್ರಥನು ತನ್ನ ಯಮಳಪತ್ನಿಯರೊಡನೆ ಎಷ್ಟೇ ಸುಖೋಪ ಭೋಗಗಳನ್ನನುಭವಿಸಿದರೂ ವಂಶವನ್ನು ಮುಂದುವರಿಸುವ ಸಂತಾನಫಲವು ಲಭಿಸದೆಯೇ ರಾಜನ ಯೌವನವು ಕಳೆದುಹೋಯಿತು. ಪುತ್ರಕಾಮನಾಗಿ ಅನೇಕವಿಧವಾದ ಇಷ್ಟಿಗಳನ್ನು ಮಾಡಿದರೂ ಪ್ರಯೋಜನವಾಗಲಿಲ್ಲ.

ಒಂದು ದಿನ ರಾಜಸಭೆಯಲ್ಲಿ ಬೃಹದ್ರಥನು ಕುಳಿತಿರುವಾಗ ರಾಜ ಸೇವಕನು ಬಂದು ಕಾಕ್ಷೀವಂತನ ಮಗನಾದ, ಗೌತಮವಂಶಪ್ರದೀಪನಾದ ಚಂಡಕೌಶಿಕನು ತಪಶ್ಚರ್ಯೆಯಿಂದ ವಿರತನಾಗಿ, ತೀರ್ಥಯಾತ್ರೆಗಳಲ್ಲಿ ಆಸಕ್ತಿ ಹೊಂದಿರುವನೆಂದೂ ದೇಶಸಂಚಾರಮಾಡುತ್ತಾ ನಗರದ ಸಮೀಪದಲ್ಲಿರುವ ವೃಕ್ಷವೊಂದರ ಕೆಳಗೆ ಉಪವಿಷ್ಟನಾಗಿರುವನೆಂದೂ ನಿವೇದಿಸಿದನು.

ರಾಜಸೇವಕನು ಹೇಳಿದ ವಾರ್ತೆಯನ್ನು ಕೇಳಿದೊಡನೆಯೇ ಬೃಹದ್ರಥನು ಪತ್ನಿಯರಿಂದೊಡಗೂಡಿ ಚಂಡಕೌಶಿಕನ ಬಳಿಗೆ ಧಾವಿಸಿ, ಭಕ್ತಿ ಪೂರ್ವಕವಾಗಿ ಯಥೋಚಿತವಾಗಿ ಪೂಜೆಗೈದನು. ಸತ್ಯಸಂಕಲ್ಪನಾದ ಮತ್ತು ಸತ್ಯನಿಷ್ಠನಾದ ಮಹರ್ಷಿಯು ರಾಜನು ಮಾಡಿದ ಪೂಜೆಯಿಂದ ಸಂತುಷ್ಟನಾಗಿ ಹೇಳಿದನು :

"ಮಹಾರಾಜ! ನೀನು ಮಾಡಿರುವ ಪೂಜೆಯಿಂದ ಸಂತುಷ್ಟನಾಗಿರು ವೆನು. ನಿನಗೆ ಬೇಕಾದ ಒಂದು ವರವನ್ನು ಕೇಳು ; ಅನುಗ್ರಹಿಸುವೆನು."

ಮಹರ್ಷಿಯ ಮಾತುಗಳನ್ನು ಕೇಳಿ ರಾಜನ ಕಣ್ಣುಗಳಿಂದ ಅಶ್ರು

ಗಳು ಉದುರಿದುವು. ಪತ್ನಿಯರೊಡನೆ ಮಹರ್ಷಿಗೆ ಪುನಃ ಪುನಃ ಪ್ರಣಾಮ ಮಾಡಿ ಗದ್ಗದಧ್ವನಿಯಿಂದ ಹೇಳಿದನು :

"ಪೂಜ್ಯನೇ! ನಾನು ನನ್ನ ರಾಜ್ಯ-ಕೋಶಗಳೆಲ್ಲವನ್ನೂ ಬಿಟ್ಟು ತಪಶ್ಚರಣೆಮಾಡಲು ಕಾಡಿಗೆ ಹೊರಡಲು ಸಿದ್ಧನಾಗಿರುವೆನು. ವಂಶಾಭಿವೃದ್ಧಿಗೊಂದು ಸಂತಾನವಿಲ್ಲದೇ ನನಗೆ ಜೀವನದಲ್ಲಿಯೇ ಬಹಳ ಬೇಸರವಾಗಿದೆ. ಮಹರ್ಷೇ! ಹೀಗಿರುವಾಗ ರಾಜ್ಯ-ಕೋಶಗಳಿಂದಾಗಲೀ, ನೀವು ಕೊಡಲಿರುವ ವರದಿಂದಾಗಲೀ ನಿರ್ಭಾಗ್ಯನಾದ ನನಗೆ ಪ್ರಯೋಜನವೇನು?"

ದೈನ್ಯದಿಂದ ಕೂಡಿದ ಬೃಹದ್ರಥರಾಜನ ನುಡಿಗಳನ್ನು ಕೇಳಿದ ಮಹರ್ಷಿಯು ಆ ಮಾವಿನ ಮರದ ಕೆಳಭಾಗದಲ್ಲಿಯೇ ಕುಳಿತು ಅಂತರ್ಮುಖನಾಗಿ ಧ್ಯಾನಾಸಕ್ತನಾದನು. ಆ ಸಮಯಕ್ಕೆ ಸರಿಯಾಗಿ ಒಂದು ಆಮ್ರಫಲವು ಮಹರ್ಷಿಯ ತೊಡೆಯ ಮೇಲೆ ಬಿದ್ದಿತು. ಆಗ ಗಾಳಿಯೂ ಬೀಸುತ್ತಿರಲಿಲ್ಲ. ಶುಕಾದಿ ಪಕ್ಷಿಗಳಿಂದಲೂ ಆ ಹಣ್ಣು ಕಚ್ಚಲ್ಪಟ್ಟಿರಲಿಲ್ಲ. ಮಹರ್ಷಿಯ ಇಚ್ಛಾಮಾತ್ರದಿಂದಲೇ ಬಿದ್ದಿದ್ದಿತು. ಪ್ರಾಜ್ಞನಾದ ಮಹಾಮುನಿಯು ಅದನ್ನು ಕೈಗೆ ತೆಗೆದುಕೊಂಡು ಅಪ್ರತಿಮಸಾಹಸದಿಂದ ಕೂಡಿದ ಪುತ್ರನೊಬ್ಬನ ಪ್ರಾಪ್ತಿಗಾಗಿ ಹಣ್ಣನ್ನು ಮಂತ್ರದಿಂದ ಅಭಿಮಂತ್ರಿಸಿ, ರಾಜನಿಗೆ ಹೇಳಿದನು :

"ಮಹಾರಾಜ! ಈ ಹಣ್ಣನ್ನು ಸ್ವೀಕರಿಸು. ಇನ್ನು ಮುಂದೆ ನೀನು ಜೀವನದಲ್ಲಿ ಬೇಸರಪಡುವ ಕಾರಣವಿಲ್ಲ. ಸಂತಾನಪ್ರಾಪ್ತಿಯಾಗಲಿಲ್ಲವೆಂಬ ಕಾರಣದಿಂದ ಅರಣ್ಯಕ್ಕೂ ಹೋಗಬೇಕಾಗಿಲ್ಲ. ನಿನ್ನ ಇಷ್ಟಾರ್ಥವು ನೆರವೇರುವುದು."

ಮಹರ್ಷಿಯ ಮಾತುಗಳನ್ನು ಕೇಳಿ ಬೃಹದ್ರಥನು ಸಂತೋಷಭರಿತನಾಗಿ ಚಂಡಕೌಶಿಕನ ಪಾದಾರವಿಂದಗಳಿಗೆ ಪುನಃ ನಮಿಸಿ, ಆಮ್ರಫಲವನ್ನು ಸ್ವೀಕರಿಸಿ, ಪತ್ನಿಯರೊಡನೆ ಅರಮನೆಗೆ ತೆರಳಿದನು.

ಇಬ್ಬರು ಹೆಂಡಿರಲ್ಲಿ ಮಾವಿನಹಣ್ಣನ್ನು ಯಾರಿಗೆ ಕೊಡುವುದೆಂಬ ಸಮಸ್ಯೆಯು ರಾಜನಿಗುಂಟಾಯಿತು. ಇಬ್ಬರನ್ನೂ ತಾರತಮ್ಯವಿಲ್ಲದೇ ಪ್ರೀತಿಸುವುದಾಗಿ ಏಕಾಂತದಲ್ಲಿ ಇಬ್ಬರಿಗೂ ಭಾಷೆಯನ್ನಿತ್ತಿದ್ದನಲ್ಲವೇ? ತನ್ನ ಪ್ರತಿಜ್ಞಾವಚನವನ್ನು ನೆನೆದು ಬೃಹದ್ರಥನು ಋಷಿದತ್ತವಾದ ಆಮ್ರಫಲವನ್ನು

ಇಬ್ಬರೂ ಒಂದೇ ಸಮನಾಗಿ ಹಂಚಿಕೊಳ್ಳುವಂತೆ ಹೇಳಿ ತನ್ನ ಪತ್ನಿಯರಿಗಿತ್ತನು. ಅನುಪಮಸೌಂದರ್ಯದಿಂದ ಕೂಡಿದ್ದ ಅವನ ಮಡದಿಯರು ಹಣ್ಣನ್ನು ರಾಜನಿಂದ ಸ್ವೀಕರಿಸಿ, ಅದನ್ನು ಅರ್ಧಕ್ಕೆ ಸರಿಯಾಗಿ ಕತ್ತರಿಸಿ ಭಕ್ತಿಪೂರ್ವಕವಾಗಿ ಭಕ್ಷಿಸಿದರು.

ಚಂಡಕೌಶಿಕನ ಸತ್ಯವಚನದಂತೆ ಆಮ್ರಫಲಭಕ್ಷಣದ ಫಲವಾಗಿ ಇಬ್ಬರು ರಾಣಿಯರೂ ಗರ್ಭವತಿಯರಾದರು. ಗರ್ಭವತಿಯರಾದ ಮಡದಿಯರನ್ನು ಕಂಡು ರಾಜನ ಆನಂದಕ್ಕೆ ಪಾರವೇ ಇಲ್ಲವಾಯಿತು.



ನವಮಾಸಗಳು ತುಂಬಿದನಂತರ ಇಬ್ಬರು ರಾಣಿಯರೂ ಏಕಕಾಲದಲ್ಲಿಯೇ ಪ್ರಸವಿಸಿದರು. ಮಹರ್ಷಿಯಿತ್ತ ಪೂರ್ಣಫಲವನ್ನು ಸಮಾರ್ಧ ಮಾಡಿ ರಾಣಿಯರು ಭಕ್ಷಿಸಿದ್ದರಲ್ಲವೇ? ಅವರ ಫಲವಾಗಿ ಇಬ್ಬರು ರಾಣಿಯರಿಗೂ ಸಮಾರ್ಧದ ಶಿಶುವಿನ ಜನನವೇ ಆಯಿತು. ಎಂದರೆ ಒಂದು ಕಣ್ಣು, ಒಂದು ಕೈ, ಒಂದು ಕಾಲು, ಒಂದು ಕಿವಿ–ಹೀಗೆ ಅರ್ಧಕ್ಕೆ ಸರಿಯಾಗಿ

ಸೀಳಿದ ಮಗುವು ಇಬ್ಬರಿಗೂ ಜನಿಸಿತು. ಅಂತಹ ದುರವಸ್ಥೆಯ ಶಿಶುವನ್ನು ಕಂಡು ಇಬ್ಬರು ರಾಣಿಯರೂ ನಡುಗಿದರು. ಎರಡು ಭಾಗಗಳೂ ಸಜೀವವಾಗಿದ್ದುವು. ಅವರಿಗೆ ಏನು ಮಾಡಬೇಕೆಂಬುದೇ ತಿಳಿಯದಾಯಿತು. ಕಟ್ಟಕಡೆಗೆ ಇಬ್ಬರು ರಾಣಿಯರೂ ಪರಸ್ಪರವಾಗಿ ಸಮಾಲೋಚಿಸಿ, ಆ ಎರಡು ಭಾಗಗಳನ್ನೂ ವಿಸರ್ಜಿಸಲು ನಿಶ್ಚಯಿಸಿದರು. ರಾಣಿಯರ ಆಜ್ಞೆಯಂತೆ ಇಬ್ಬರು ದಾಸಿಯರು ಶಿಶುವಿನ ಎರಡು ಭಾಗಗಳನ್ನೂ ಬಟ್ಟೆಯಲ್ಲಿ ಸುತ್ತಿ ಅರಮನೆಯ ಹಿಂದಿನ ಬಾಗಿಲಿನಿಂದ ಹೊರಕ್ಕೆ ಕೊಂಡೊಯ್ದು ಎಸೆದುಬಿಟ್ಟರು.



ದಾದಿಯರು ಶಿಶುಶಕಲಗಳನ್ನು ವಿಸರ್ಜಿಸಿದ ಸ್ವಲ್ಪಹೊತ್ತಿನ ಮೇಲೆ ಅದೇ ಸ್ಥಳಕ್ಕೆ ರಕ್ತ-ಮಾಂಸಭಕ್ಷಕಳಾದ 'ಜರಾ' ಎಂಬ ರಾಕ್ಷಸಿಯು ಬಂದು ವಸ್ತ್ರಗಳಿಂದ ಆಚ್ಛಾದಿತವಾಗಿದ್ದ ಶಿಶುಶಕಲಗಳನ್ನು ಕೈಗೆತ್ತಿಕೊಂಡಳು. ಮೇಲೆ ಹೊದಿಸಿದ್ದ ಬಟ್ಟೆಗಳನ್ನು ತೆಗೆದುಹಾಕಿ, ಕೊಂಡೊಯ್ಯಲು ಅನುಕೂಲ ವಾಗುವಂತೆ ಎರಡು ಭಾಗಗಳನ್ನೂ ಸೇರಿಸಿಬಿಟ್ಟಳು. ಯುಧಿಷ್ಠಿರ! ಇದೇ

ವಿಧಿಯ ಪವಾಡ. ಒಡನೆಯೇ ಅದು ಪೂರ್ಣವಾದ ಶಿಶುವಾಗಿ ಮಾರ್ಪಟ್ಟು ರಾಕ್ಷಸಿಯಿಂದ ಎತ್ತಲಾರದಷ್ಟು ಭಾರವಾಯಿತು. ರಾಕ್ಷಸಿಯು ಅತ್ಯಾಶ್ಚರ್ಯ ದಿಂದ ಕಣ್ಣುಗಳನ್ನಗಲಿಸಿ ಶಿಶುವನ್ನು ನೋಡಿದಳು. ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಶರೀರಬಲದಿಂದ ಕೂಡಿದ್ದ ಮಗುವನ್ನು ಎತ್ತಿಕೊಂಡು ಹೋಗಲು ಅವಳಿಗೆ ಸಾಧ್ಯವಾಗಲಿಲ್ಲ. ಮರುಕ್ಷಣದಲ್ಲಿಯೇ ಆ ಶಿಶುವು ತನ್ನ ಕೆಂಪಾದ ಮುಷ್ಟಿಯನ್ನು ಬಾಯೊಳಗಿಟ್ಟುಕೊಂಡು, ಮೋಡವು ಗುಡುಗುವ ರೀತಿಯಲ್ಲಿ ಗರ್ಜನೆಮಾಡುತ್ತಾ ಅಳತೊಡಗಿತು. ಆ ಮಹಾಶಬ್ದವನ್ನು ಕೇಳಿ ಅರಮನೆಯೊಳಗಿದ್ದವರೆಲ್ಲರೂ ಭೀತರಾಗಿ ರಾಜನೊಡನೆ ಹೊರಬಂದರು. ಅಬಲೆಯರಾದ, ನಿರಾಶೆಯಿಂದ ತೊಳಲುತ್ತಿದ್ದ ಇಬ್ಬರು ರಾಣಿಯರೂ ಉಕ್ಕಿಬರುತ್ತಿದ್ದ ಸ್ತನ್ಯದಿಂದ ಕೂಡಿದವರಾಗಿ ಹೊರಗೆ ಬಂದರು. ರಾಕ್ಷಸಿಯು ಆ ಇಬ್ಬರು ರಾಜಕುಮಾರಿಯರ ದುರವಸ್ಥೆಯನ್ನೂ, ರಾಜನ ಆಕಾಂಕ್ಷೆಯನ್ನೂ ಮತ್ತು ತನ್ನೊಡನಿದ್ದ ಹೃಷ್ಟ-ಪುಷ್ಟವಾದ ಮಗುವನ್ನೂ ನೋಡಿ ಹೀಗೆಂದು ಆಲೋಚಿಸಿದಳು :

"ನಾನು ಈ ರಾಜನ ರಾಜ್ಯದಲ್ಲಿದ್ದು ಇವನ ಆಶ್ರಯದಲ್ಲಿ ಜೀವಿಸು ತ್ತಿದ್ದೇನೆ. ಈ ರಾಜನಾದರೋ ಸಂತಾನವಾಗಬೇಕೆಂಬ ಮಹಾಕಾಂಕ್ಷೆ ಯಿಂದಿರುತ್ತಾನೆ. ಇಂತಹ ಧರ್ಮಾತ್ಮನ ಶಿಶುವನ್ನು ಕೊಲ್ಲುವುದು ನನಗೆ ಯೋಗ್ಯವೆನಿಸುವುದಿಲ್ಲ."

ಹೀಗೆ ಯೋಚಿಸಿ–ಸೂರ್ಯದೇವನನ್ನು ಮೋಡಗಳು ಮುಚ್ಚುವಂತೆ–ಶಿಶುವನ್ನು ತನ್ನುಡಿಯಲ್ಲಿಟ್ಟು ಎರಡು ಕೈಗಳಿಂದಲೂ ಅಪ್ಪಿಕೊಂಡು ಮಾನವಿಯ ಶರೀರವನ್ನು ಹೊಂದಿದವಳಾಗಿ ರಾಜನ ಸಮೀಪಕ್ಕೆ ಬಂದು ಇಂತೆಂದಳು :

"ಬೃಹದ್ರಥ! ಇದು ನಿನ್ನ ಮಗುವಾಗಿದೆ. ನಾನು ಕೊಡುತ್ತಿರುವ ಈ ಮಗುವನ್ನು ಸ್ವೀಕರಿಸು. ನಿನ್ನ ಇಬ್ಬರು ಮಡದಿಯರಲ್ಲಿ ಈ ಮಗುವಿನ ಎರಡು ಭಾಗಗಳು ಹುಟ್ಟಿದುವು. ಈ ಎರಡು ಭಾಗಗಳೂ ಅರಮನೆಯ ದಾದಿಯರಿಂದ ವಿಸರ್ಜಿಸಲ್ಪಟ್ಟುವು. ಹಾಗೆ ವಿಸರ್ಜಿತವಾದ ಶಿಶುಶಕಲಗಳನ್ನು ಜೋಡಿಸಿ ನಾನೀ ಶಿಶುವನ್ನು ರಕ್ಷಿಸಿರುವೆನು."

ಪಕ್ಕದಲ್ಲಿಯೇ ನಿಂತಿದ್ದ ರಾಜನ ಮಡದಿಯರು ಒಡನೆಯೇ ರಾಕ್ಷಸಿಯ

ಉಡಿಯಲ್ಲಿದ್ದ ಮಗುವನ್ನು ಎತ್ತಿಕೊಂಡು ಪ್ರಸ್ರವಿಸುತ್ತಿದ್ದ ಸ್ತನ್ಯದಿಂದ ಮಗುವನ್ನು ಅಭಿಷೇಚಿಸಿದರು.

ರಾಜನು ಎಲ್ಲವನ್ನೂ ತಿಳಿದು ಆನಂದಭರಿತನಾದನು. ಸುವರ್ಣದ ಕಾಂತಿಯಿಂದ ಪ್ರಕಾಶಿಸುತ್ತಿದ್ದ, ಮಾನವಿಯ ರೂಪವನ್ನು ಧರಿಸಿದ್ದ ರಾಕ್ಷಸಿಗೆ ಹೇಳಿದನು :

"ಕಮಲಗರ್ಭಾಭೆಯೇ! (ಕಮಲದ ಕಾಂತಿಯಂತೆ ಪ್ರಕಾಶವುಳ್ಳವಳೇ!) ಸಂತಾನಪ್ರಾಪ್ತಿಯ ಆಕಾಂಕ್ಷೆಯಿಂದ ಪರಿತಪಿಸುತ್ತಿದ್ದ ನನಗೆ ಶಿಶುವನ್ನಿತ್ತು ಆನಂದಸಾಗರದಲ್ಲಿ ಮುಳುಗಿಸಿರುವ ನೀನಾರು? ನಿನ್ನನ್ನು ಇಚ್ಛಾನುಸಾರವಾಗಿ ಸಂಚರಿಸುವ ದೇವತೆಯೆಂದೇ ಭಾವಿಸಲೇ?"

೧೭ನೆಯ ಅಧ್ಯಾಯವು ಮುಗಿಯಿತು.

೧೮ನೆಯ ಅಧ್ಯಾಯ ರಾಜಸೂಯಾರಮ್ಭಪರ್ವ (ಮುಂದುವರಿದಿದೆ.)

## ಜರೆಯು ರಾಜನಿಗೆ ತನ್ನ ಪರಿಚಯವನ್ನು ಮಾಡಿಕೊಟ್ಟುದು : ರಾಜನು ಅವಳ ಸ್ಮರಣಾರ್ಥವಾಗಿ ಶಿಶುವಿಗೆ ಜರಾಸಂಧನೆಂದು ನಾಮಕರಣ ಮಾಡಿದುದು

ಶ್ರೀಕೃಷ್ಣನು ಹೇಳುತ್ತಾನೆ :

"ಯುಧಿಷ್ಠಿರ! ರಾಜನ ಪ್ರಶ್ನೆಗೆ ಜರೆಯು ಉತ್ತರಿಸಿದಳು :

**ಜರಾ ನಾಮಾಸ್ಮಿ ಭದ್ರಂ ತೇ ರಾಕ್ಷಸೀ ಕಾಮರೂಪಿಣೀ।**
**ತವ ವೇಶ್ಮನಿ ರಾಜೇನ್ದ್ರ ಪೂಜಿತಾ ನ್ಯವಸಂ ಸುಖಮ್ ॥೧॥**

**ಗೃಹೇ ಗೃಹೇ ಮನುಷ್ಯಾಣಾಂ ನಿತ್ಯಂ ತಿಷ್ಠಾಮಿ ರಾಕ್ಷಸೀ।**
**ಗೃಹದೇವೀತಿ ನಾಮ್ನಾ ವೈ ಪುರಾ ಸೃಷ್ಟಾ ಸ್ವಯಂಭುವಾ ॥೨॥**

**ದಾನವಾನಾಂ ವಿನಾಶಾಯ ಸ್ಥಾಪಿತಾ ದಿವ್ಯರೂಪಿಣೀ।**
**ಯೋ ಮಾಂ ಭಕ್ತ್ಯಾ ಲಿಖೇತ್ಕುಡ್ಯೇ ಸಪುತ್ರಾಂ ಯೌವನಾನ್ವಿತಾಮ್ ॥೩॥**

**ಗೃಹೇ ತಸ್ಯ ಭವೇದ್ವೃದ್ಧಿರನ್ಯಥಾ ಕ್ಷಯಮಾಪ್ನುಯಾತ್।**
**ತ್ವದ್ಗೃಹೇ ತಿಷ್ಠಮಾನಾಹಂ ಪೂಜಿತಾಹಂ ಸದಾ ವಿಭೋ ॥೪॥**

ಲಿಖಿತಾ ಚೈವ ಕುಡ್ಯೇಷು ಪುತ್ರೈರ್ಬಹುಭಿರಾವೃತಾ।
ಗನ್ಧಪುಷ್ಪೈಸ್ತಥಾ ಧೂಪೈರ್ಭಕ್ಷ್ಯಭೋಜ್ಯೈಃ ಸುಪೂಜಿತಾ ॥೫॥

ಸಾಹಂ ಪ್ರತ್ಯುಪಕಾರಾರ್ಥಂ ಚಿನ್ತಯಾಮ್ಯನಿಶಂ ತವ।
ತವೇಮೇ ಪುತ್ರಶಕಲೇ ದೃಷ್ಟವತ್ಯಸ್ಮಿ ಧಾರ್ಮಿಕ ॥೬॥

ಸಂಶ್ಲೇಷಿತೇ ಮಯಾ ದೈವಾತ್ಕುಮಾರಃ ಸಮಪದ್ಯತ।
ತವ ಭಾಗ್ಯಾನ್ಮಹಾರಾಜ ಹೇತುಮಾತ್ರಮಹಂ ತ್ವಿಹ ॥೭॥

ಮೇರುಂ ವಾ ಖಾದಿತುಂ ಶಕ್ತಾ ಕಿಂ ಪುನಸ್ತವ ಬಾಲಕಮ್।
ಗೃಹಸಮ್ಪೂಜನಾತ್ತುಷ್ಟ್ಯಾ ಮಯಾ ಪ್ರತ್ಯರ್ಪಿತಸ್ತವ ॥೮॥



"ಮಹಾರಾಜ! ನಿನಗೆ ಮಂಗಳವಾಗಲಿ, ಯಾವ ಸಮಯದಲ್ಲಾದರೂ, ಯಾವ ರೂಪವನ್ನಾದರೂ ಪಡೆಯಲು ಸಾಮರ್ಥ್ಯವಿರುವ 'ಜರಾ' ಎಂಬ ಹೆಸರಿನ ರಾಕ್ಷಸಿಯು ನಾನು. ನಿಮ್ಮೆಲ್ಲರಿಂದಲೂ ಸತ್ಕೃತಳಾಗಿ ನಿನ್ನ ಮನೆಯಲ್ಲಿಯೇ ವಾಸಮಾಡುತ್ತಿರುವೆನು. ಪ್ರತಿನಿತ್ಯವೂ ನಾನು ಮಾನವರ ಮನೆಗಳಿಗೆ ಹೋಗುತ್ತಿರುವೆನು. ನನ್ನ ಸೃಷ್ಟಿಗೆ ಕಾರಣನಾದ ಪರಬ್ರಹ್ಮನು

ನನಗೆ ಗೃಹದೇವಿಯೆಂದೇ ಹೆಸರನ್ನಿಟ್ಟಿರುವನು. ದಾನವರ ವಿನಾಶಕ್ಕಾಗಿ ನಾನು ಈ ಪ್ರಪಂಚಕ್ಕೆ ಕಳುಹಿಸಲ್ಪಟ್ಟಿರುವೆನು. ಯಾವನು ತನ್ನ ಮನೆಯಲ್ಲಿ ಸಣ್ಣ-ಸಣ್ಣ ಮಕ್ಕಳಿಂದ ಪರಿವೃತಳಾದ, ಯೌವನವತಿಯಾದ ನನ್ನ ಆಕಾರದ ಚಿತ್ರವನ್ನು ಗೋಡೆಯ ಮೇಲೆ ಬರೆಯಿಸಿ ನನ್ನನ್ನು ಆರಾಧಿಸುವನೋ–ಅವನಿಗೆ ಸಂಪತ್ಸಮೃದ್ಧಿಯುಂಟಾಗುವುದು. ನನ್ನನ್ನು ತಿರಸ್ಕರಿಸಿದವನಿಗೆ ವಿನಾಶವು ನಿಶ್ಚಯ. ನಿನ್ನ ಅರಮನೆಯಲ್ಲಿಯೂ ಶಿಶುಗಳೊಡನೆ ನನ್ನ ಚಿತ್ರವನ್ನು ಬರೆಯಿಸಿ ಆರಾಧಿಸುತ್ತಿರುವಿರಿ. ಪ್ರತಿನಿತ್ಯವೂ ನನ್ನನ್ನು ಗಂಧ-ಪುಷ್ಪಾದಿಗಳಿಂದ ಅರ್ಚಿಸಿ, ಭಕ್ಷ್ಯ-ಭೋಜ್ಯಾದಿಗಳನ್ನು ನಿವೇದನಮಾಡುತ್ತಿರುವಿರಿ. ನಿಮ್ಮ ಪೂಜೆಯಿಂದ ಸುಪ್ರೀತಳಾಗಿರುವ ನಾನು ನಿಮಗೇನಾದರೂ ಒಳ್ಳೆಯದನ್ನು ಮಾಡಬೇಕೆಂದು ಅನುದಿನವೂ ಯೋಚಿಸುತ್ತಿದ್ದೆನು. ಆ ಸಮಯದಲ್ಲಿಯೇ ನಿನ್ನ ಅರಮನೆಯ ಹೊರಗಡೆಯಲ್ಲಿ ಶಿಶುಶಕಲಗಳನ್ನು ಕಂಡೆನು. ಎರಡು ಶಕಲಗಳನ್ನೂ ಜೋಡಿಸಲಾಗಿ ಸರ್ವಾಂಗಸುಂದರವಾದ ಶಿಶುವು ಪ್ರಾದುರ್ಭವಿಸಿತು. ಇದು ಕೇವಲ ನಿನ್ನ ಸೌಭಾಗ್ಯದ ಕಾರಣದಿಂದಲೇ ನಡೆದಿರುವುದು. ಈ ವಿಷಯದಲ್ಲಿ ನಾನು ಕೇವಲ ನಿಮಿತ್ತಮಾತ್ರಳು. ಮೇರುಪರ್ವತವನ್ನಾದರೂ ಕಬಳಿಸುವ ಸಾಮರ್ಥ್ಯವಿರುವ ನನಗೆ ಈ ನಿನ್ನ ಶಿಶುವನ್ನು ಭಕ್ಷಿಸುವುದು ಅಸಾಧ್ಯವಾಗಿದ್ದಿತೇ? ನಿನ್ನ ಮನೆಯಲ್ಲಿ ಅನುದಿನವೂ ಮಾಡುತ್ತಿರುವ ಪೂಜೆಯಿಂದ ನಾನು ಸುಪ್ರೀತಳಾಗಿದ್ದೇನೆ. ಈ ಕಾರಣದಿಂದಲೇ ಈ ಶಿಶುವನ್ನು ಭಕ್ಷಿಸದೇ ನಿನಗರ್ಪಿಸುತ್ತಿದ್ದೇನೆ."

ಜರೆಯು ಹೀಗೆ ಹೇಳಿ ನಿಂತಲ್ಲಿಯೇ ಅಂತರ್ಧಾನಹೊಂದಿದಳು. ಮಗುವಿನೊಡನೆಯೂ, ಮಡದಿಯರೊಡನೆಯೂ ಬೃಹದ್ರಥನು ಅರಮನೆಯನ್ನು ಪ್ರವೇಶಿಸಿದನು. ಪುರೋಹಿತರನ್ನು ಕರೆಯಿಸಿ, ಶಿಶುವಿಗೆ ಜಾತಕರ್ಮ-ನಾಮಕರಣಾದಿಗಳನ್ನು ಯಥಾಶಾಸ್ತ್ರವಾಗಿ ನೆರವೇರಿಸಿದನು. ಜರೆಯು ಮಾಡಿದ ಉಪಕಾರವನ್ನು ಅನುದಿನವೂ ಸ್ಮರಿಸಲು ಪಿತಾಮಹಸಮನಾದ ಬೃಹದ್ರಥನು ಹೇಳಿದನು :

**ಜರಯಾ ಸಂಧಿತೋ ಯಸ್ಮಾಜ್ಜರಾಸಂಧೋ ಭವತ್ವಯಮ್ ॥೧೧॥**

“ ‘ಜರಾ’ ಎಂಬುವಳಿಂದ ಈ ಶಿಶುವಿನ ದೇಹಾರ್ಧಭಾಗಗಳು ಸೇರಿಸಲ್ಪಟ್ಟುದರಿಂದ ಇವನು ‘ಜರಾಸಂಧ’ನೇ ಆಗಲಿ.”

ತನ್ನ ರಾಜ್ಯದ ಪ್ರತಿಯೊಬ್ಬ ಪ್ರಜೆಯೂ ಜರೆಯು ಹೇಳಿದ ರೀತಿಯಲ್ಲಿ ‘ಗೃಹದೇವತೆ’ಯನ್ನು ಆರಾಧಿಸುವಂತೆ ಆಜ್ಞಾಪಿಸಿದನು.

ಘೃತಹೋಮದಿಂದ ಯಜ್ಞೇಶ್ವರನು ಪ್ರಜ್ವಲಿಸುವಂತೆ–ರಾಣಿಯರಿಬ್ಬರ ಪೋಷಣೆಯಿಂದ ಶಿಶುವು ಪ್ರವೃದ್ಧಿಯನ್ನು ಹೊಂದಿತು. ಶುಕ್ಲಪಕ್ಷದ ಚಂದ್ರನು ದಿನ-ದಿನಕ್ಕೂ ಆಹ್ಲಾದವನ್ನು ಹೆಚ್ಚಿಸುವಂತೆ–ಬಲಸಂಪನ್ನನಾದ ಜರಾಸಂಧನು ಮಾತಾ-ಪಿತೃಗಳಿಗೆ ಆಹ್ಲಾದವನ್ನುಂಟುಮಾಡುತ್ತಿದ್ದನು.”

೧೮ನೆಯ ಅಧ್ಯಾಯವು ಮುಗಿಯಿತು.

೧೯ನೆಯ ಅಧ್ಯಾಯ ರಾಜಸೂಯಾರಮ್ಭಪರ್ವ (ಮುಂದುವರಿದಿದೆ.)

## ಚಂಡಕೌಶಿಕಮುನಿಯಿಂದ ಜರಾಸಂಧನ ಭವಿಷ್ಯಕಥನ : ಜರಾಸಂಧನ ರಾಜ್ಯಾಭಿಷೇಕ : ಬೃಹದ್ರಥನು ಅರಣ್ಯಕ್ಕೆ ತೆರಳಿದುದು

ಶ್ರೀಕೃಷ್ಣನು ಮುಂದುವರಿದು ಹೇಳಿದನು :

“ಧರ್ಮಜ! ಕೆಲವು ವರ್ಷಗಳನಂತರ ಮಹಾತಪಸ್ವಿಯಾದ ಚಂಡಕೌಶಿಕನು ಪುನಃ ಮಗಧರಾಜ್ಯಕ್ಕೆ ಬಂದನು. ಬೃಹದ್ರಥನು ಆ ವಿಷಯವನ್ನು ತಿಳಿದು ಮಹಾನಂದದಿಂದ ಪತ್ನೀ-ಪುತ್ರ-ಪುರೋಹಿತಾಮಾತ್ಯರಿಂದ ಸಮೇತನಾಗಿ ಮಹರ್ಷಿಯನ್ನು ಸ್ವಾಗತಿಸಲು ಅರಮನೆಯಿಂದ ಹೊರಟು, ಚಂಡಕೌಶಿಕನ ಸಮೀಪಕ್ಕೆ ಬಂದು, ಪತ್ನೀ-ಪುತ್ರರೊಡನೆ ಸಾಷ್ಟಾಂಗಪ್ರಣಾಮಗಳನ್ನು ಮಾಡಿ, ತಪಸ್ವಿಯನ್ನು ಅರ್ಘ್ಯ ಪಾದ್ಯಾಚಮನೀಯ-ಫಲಾದಿಗಳಿಂದ ಸತ್ಕರಿಸಿ, ತನ್ನ ಅಖಂಡಸಾಮ್ರಾಜ್ಯವನ್ನೂ, ಪುತ್ರನನ್ನೂ ಮಹರ್ಷಿಯ ಪಾದಾರವಿಂದಗಳಲ್ಲಿ ಸಮರ್ಪಿಸಿದನು.

ರಾಜನು ಮಾಡಿದ ಭಕ್ತಿಪೂರ್ವಕವಾದ ಪೂಜೆಯಿಂದ ಋಷಿಯು ಸಂತುಷ್ಟನಾಗಿ ಬೃಹದ್ರಥನನ್ನು ಸಂಬೋಧಿಸಿ ಹೇಳಿದನು :

“ಮಹಾರಾಜ! ನನ್ನ ಜ್ಞಾನದೃಷ್ಟಿಯಿಂದ ಏನೇನು ನಡೆಯಿತೆಂಬು

ದೆಲ್ಲವನ್ನೂ ವಿವರವಾಗಿ ತಿಳಿದುಕೊಂಡಿರುವೆನು. ನಿನ್ನ ಮಗನು ಮುಂದೇನಾಗುವನೆಂಬುದನ್ನೂ ಮತ್ತು ಅವನ ರೂಪ-ಸತ್ತ್ವ-ಬಲ-ಪರಾಕ್ರಮಗಳು ಎಷ್ಟೆಂಬುದನ್ನೂ ಹೇಳುವೆನು, ಕೇಳು. ಇವನು ಶ್ರೀಮಂತನಾಗಿ, ಪರಾಕ್ರಮದಿಂದ ಕೂಡಿದವನಾಗಿ ಸಕಲವನ್ನೂ ಸಾಧಿಸುವನು. ಇದರಲ್ಲಾವ ಸಂಶಯವೂ ಇಲ್ಲ. ಗರುಡನ ವೇಗವನ್ನು ಉಳಿದ ಪಕ್ಷಿಗಳು ಅನುಕರಿಸಲು ಸಾಧ್ಯವಾಗಲಾರದಲ್ಲವೇ? ಅಂತೆಯೇ ನಿನ್ನ ಮಗನ ಪರಾಕ್ರಮಕ್ಕೆ ಇತರ ಯಾವ ರಾಜರ ಪರಾಕ್ರಮವೂ ಸಾಟಿಯಾಗಲಾರದು. ಇವನನ್ನು ಎದುರಿಸಿ ಬರುವ ರಾಜರೆಲ್ಲರೂ ಪರಾಭವಹೊಂದುವರು.

ಮಹಾರಾಜ! ಪರ್ವತದಲ್ಲಿರುವ ದೊಡ್ಡ ಬಂಡೆಯನ್ನು ಅಲ್ಲಿ ಹರಿಯುವ ಮಹಾಪ್ರವಾಹದಿಂದಲೂ ಕದಲಿಸಲು ಸಾಧ್ಯವಾಗಲಾರ ದಲ್ಲವೇ? ಹಾಗೆಯೇ ದೇವತೆಗಳು ಪ್ರಯೋಗಿಸುವ ಮಹಾಸ್ತ್ರಗಳೂ ನಿನ್ನ ಮಗನ ಶರೀರದ ಮೇಲೆ ಒಂದು ಸಣ್ಣ ಗಾಯವನ್ನು ಮಾಡಲೂ ಸಮರ್ಥವಾಗುವುದಿಲ್ಲ. ಕಿರೀಟವನ್ನು ಧರಿಸಿರುವ ಸಕಲರಾಜರ ತಲೆಗಳನ್ನೂ ಮೆಟ್ಟಿ ಇವನು ಪ್ರಕಾಶಿಸುವನು. ಸೂರ್ಯಪ್ರಕಾಶದಲ್ಲಿ ಇತರ ತೇಜಸ್ಸುಗಳ ಪ್ರಕಾಶವು ವಿಲೀನವಾಗಿಹೋಗುವಂತೆ–ಇವನ ಅಪ್ರತಿಹತವಾದ ಕೀರ್ತಿಯು ಇತರ ರಾಜರ ತೇಜಸ್ಸನ್ನು ಲುಪ್ತಗೊಳಿಸಿಬಿಡುವುದು. ಅಗಾಧವಾದ ಸೈನ್ಯಸಂಪತ್ತಿಯಿರುವವನೂ, ಮಹಾಪರಾಕ್ರಮವುಳ್ಳವನೂ ಕೂಡ ನಿನ್ನ ಮಗನ ಎದುರಾಗಿ ಬಂದಾಗ–ಬೆಂಕಿಯ ಮುಂದೆ ಬಂದ ಪತಂಗದ ಹುಳುಗಳು ವಿನಾಶಹೊಂದುವಂತೆ–ವಿನಾಶಹೊಂದುವನು. ಸಮುದ್ರ ರಾಜನು ನದೀ-ನದಗಳ ಮಳೆಗಾಲದ ಮಹಾಪ್ರವಾಹಗಳೆಲ್ಲವನ್ನೂ ನುಂಗಿಬಿಡುವಂತೆ–ಈ ಶಿಶುವು ರಾಜರೆಲ್ಲರ ಪರಾಕ್ರಮವನ್ನೂ–ಯಶಃಕೀರ್ತಿ ಗಳನ್ನೂ ಅಪಹರಿಸಿಬಿಡುವುದು. ಪೃಥ್ವಿಯು ಸಕಲವಿಧವಾದ ಸಸ್ಯಗಳನ್ನೂ ಧರಿಸಿರುವಂತೆ ಮತ್ತು ಒಳ್ಳೆಯದನ್ನೂ ಮತ್ತು ಕೆಟ್ಟದ್ದನ್ನೂ ತಾರತಮ್ಯವಿಲ್ಲದೇ ಹೊತ್ತಿರುವಂತೆ–ಈ ನಿನ್ನ ಮಗನೂ ಕೂಡ ನಾಲ್ಕು ವರ್ಣದವರನ್ನೂ ನಿಷ್ಪಕ್ಷಪಾತವಾಗಿ ಸಂರಕ್ಷಿಸುತ್ತಾ ರಾಜ್ಯವನ್ನಾಳುವನು.

ಶರೀರವನ್ನು ಹೊಂದಿರುವ ಸಕಲಪ್ರಾಣಿಗಳೂ ಮತ್ತು ಮಾನವರೂ ಆತ್ಮಭೂತನಾದ ವಾಯುವನ್ನು ಅವಲಂಬಿಸಿರುವಂತೆ–ಸಕಲರಾಜರೂ ಈ

ನಿನ್ನ ಮಗನ ಆಜ್ಞಾನುವರ್ತಿಗಳಾಗಿರುವರು ಅಥವಾ ನಿನ್ನ ಮಗನನ್ನು ಅವಲಂಬಿಸಿ ಜೀವಿಸುವರು. ಮಗಧರಾಜ್ಯದ ರಾಜಕುಮಾರನಾದ, ಮಹಾನುಭಾವನಾದ ಈ ನಿನ್ನ ಮಗನು–ಪರಾತ್ಪರನಾದ, ತ್ರಿಪುರಭಂಜಕನಾದ, ರುದ್ರನೆಂಬ ಅಂಕಿತದಿಂದ ಸಕಲರಿಂದಲೂ ಆರಾಧಿಸಲ್ಪಡುವ ಹರನನ್ನು ಪ್ರತ್ಯಕ್ಷವಾಗಿಯೇ ನೋಡುವನು. ಇಂತಹ ಮಗನನ್ನು ಪಡೆದಿರುವ ನೀನು ನಿಶ್ಚಯವಾಗಿಯೂ ಧನ್ಯ, ಬೃಹದ್ರಥ! ನಾನಿನ್ನು ಹೋಗಿಬರುವೆನು. ನಿಮ್ಮೆಲ್ಲರಿಗೂ ಮಂಗಳವಾಗಲಿ"–ಎಂದು ಹೇಳಿ ಬೃಹದ್ರಥನನ್ನು ಬೀಳ್ಕೊಟ್ಟು ಸ್ವಕಾರ್ಯಸಾಧನೆಗೆ ಮಹರ್ಷಿಯು ಹೊರಟುಹೋದನು.

ಮಹರ್ಷಿಯು ಮಗನ ಭವಿಷ್ಯದ ವಿಷಯವಾಗಿ ಹೇಳಿದ ಮಾತುಗಳನ್ನು ಬಾರಿ-ಬಾರಿಗೂ ಸ್ಮರಿಸುತ್ತಾ ಅರಮನೆಯ ಕಡೆಗೆ ಬರುತ್ತಿದ್ದ ಬೃಹದ್ರಥನ ಆನಂದಕ್ಕೆ ಪಾರವೇ ಇರಲಿಲ್ಲ. ಅರಮನೆಯನ್ನು ಸೇರಿದೊಡನೆಯೇ ಬಂಧು-ಮಿತ್ರ-ಪುರೋಹಿತರನ್ನೂ ಕರೆಯಿಸಿ, ಸಮಾಲೋಚಿಸಿ, ಶುಭಮುಹೂರ್ತದಲ್ಲಿ ಜರಾಸಂಧನಿಗೆ ಪಟ್ಟಾಭಿಷೇಕ ಮಹೋತ್ಸವವನ್ನು ವಿಜೃಂಭಣೆಯಿಂದ ನೆರವೇರಿಸಿದನು.

ಸುಸಂಸ್ಕೃತನಾದ ಬೃಹದ್ರಥನಿಗೆ ವಯೋನುಗುಣವಾಗಿ ಪ್ರಾಪಂಚಿಕ ಸುಖಗಳಲ್ಲಿ ನಿರಾಸಕ್ತಿಯುಂಟಾಯಿತು.

ಜರಾಸಂಧನು ಪಟ್ಟಾಭಿಷಿಕ್ತನಾದನಂತರ, ಬೃಹದ್ರಥನು ತನ್ನ ಇಬ್ಬರು ಪತ್ನಿಯರಿಂದೊಡಗೂಡಿ ಅರಣ್ಯಕ್ಕೆ ಹೋಗಿ, ಅಲ್ಲೊಂದು ಆಶ್ರಮವನ್ನು ಕಟ್ಟಿಕೊಂಡು ತಪಶ್ಚರಣೆಯಲ್ಲಿ ನಿರತನಾದನು.

ಇತ್ತಲಾಗಿ ಜರಾಸಂಧನು ತನ್ನ ಭುಜಬಲ-ಪರಾಕ್ರಮಗಳಿಂದ ಸಕಲ ರಾಜರನ್ನೂ ಗೆದ್ದು, ಅವರನ್ನು ತನ್ನ ಆಶ್ರಿತರನ್ನಾಗಿ ಮಾಡಿಕೊಂಡು ದರ್ಪದಿಂದ ರಾಜ್ಯವಾಳತೊಡಗಿದನು.

ಬಹಳ ವರ್ಷಗಳವರೆಗೆ ತಪಶ್ಚರಣೆಮಾಡಿದನಂತರ ರಾಜನಾದ ಬೃಹದ್ರಥನು ಪತ್ನಿಯರೊಡನೆ ಸ್ವರ್ಗಾರೋಹಣಮಾಡಿದನು.

ಮಹರ್ಷಿಯಾದ ಚಂಡಕೌಶಿಕನು ಹೇಳಿದಂತೆಯೇ ಜರಾಸಂಧನು ಸಕಲರಾಜರನ್ನೂ ಗೆದ್ದು–ತಂದೆಯಾದವನು ಮಕ್ಕಳನ್ನು ಪೋಷಣೆಮಾಡು

ವಂತೆ–ತನ್ನ ಸಾಮ್ರಾಜ್ಯದ ಪ್ರಜೆಗಳೆಲ್ಲರನ್ನೂ ಅಕ್ಕರೆಯಿಂದ ಪೋಷಿಸುತ್ತಿದ್ದನು.”

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ.:

“ಮಹಾರಾಜ! ಶ್ರೀಕೃಷ್ಣನು ಕಂಸನನ್ನು ಕೊಂದನಂತರ ಕೃಷ್ಣ-ಜರಾಸಂಧರಲ್ಲಿ ಹೆಚ್ಚಿನ ವೈಷಮ್ಯವುಂಟಾಯಿತು. ತನ್ನ ಅಳಿಯನಾದ ಕಂಸನನ್ನು ಕೊಂದ ಕೃಷ್ಣನ ಮೇಲೆ ಕೋಪಗೊಂಡು ಮಹಾಪರಾಕ್ರಮಿಯಾದ ಜರಾಸಂಧನು ತನ್ನ ಅದ್ಭುತವಾದ ಗದೆಯನ್ನು ತೊಂಬತ್ತೊಂಬತ್ತು ಬಾರಿ ಗರ-ಗರನೆ ತಿರುಗಿಸಿ, ತನ್ನ ರಾಜಧಾನಿಯಾದ ಗಿರಿವ್ರಜದಿಂದ ಶ್ರೀಕೃಷ್ಣನು ವಾಸಿಸುತ್ತಿದ್ದ ಮಥುರಾಪಟ್ಟಣದ ಕಡೆಗೆ ಬೀಸಿ ಎಸೆದನು. ಆ ಸಮಯದಲ್ಲಿ ಶ್ರೀಕೃಷ್ಣನು ಮಥುರೆಯಲ್ಲಿಯೇ ವಾಸವಾಗಿದ್ದನು. ರಭಸದಿಂದ ಸುತ್ತುತ್ತಾ ಮಹಾರವದಿಂದ ಬಂದ ಆ ಗದೆಯು ಗಿರಿವ್ರಜದಿಂದ ತೊಂಬತ್ತೊಂಬತ್ತು ಯೋಜನಗಳಷ್ಟು ದೂರದಲ್ಲಿದ್ದ ಮಥುರಾಪಟ್ಟಣದ ಕಡೆಗೆ ರಭಸದಿಂದ ಬಂದು ಮಥುರೆಯ ಸಮೀಪದಲ್ಲಿ ಬಿದ್ದಿತು. ಮಥುರೆಯ ಪ್ರಜೆಗಳು ಅದನ್ನು ನೋಡಿ ಭ್ರಾಂತರಾಗಿ ತಮ್ಮ ಪಟ್ಟಣದ ಬಳಿಯಲ್ಲಿ ಗದೆಯು ಬಿದ್ದಿರುವುದನ್ನು ಶ್ರೀಕೃಷ್ಣನಿಗೆ ತಿಳಿಸಿದರು. ಮಥುರೆಯ ಸಮೀಪದಲ್ಲಿ ಜರಾಸಂಧನ ಗದೆಯು ಬಿದ್ದಿದ್ದ ಆ ಪ್ರದೇಶಕ್ಕೆ **‘ಗದಾವಸಾನ’** ಎಂದೇ ಹೆಸರಾಯಿತು. ಶ್ರೀಕೃಷ್ಣನು ಮುಂದುವರಿದು ಹೇಳಿದನು: “ಯುಧಿಷ್ಠಿರ! ನಾನು ಹಿಂದೆಯೇ ಹೇಳಿದಂತೆ ಜರಾಸಂಧನಿಗೆ ಶಸ್ತ್ರಗಳಿಂದ ಜಯಿಸಲಸಾಧ್ಯರಾಗಿದ್ದ ಹಂಸ-ಡಿಂಭಕರ ಸಹಕಾರವೂ ಪೂರ್ಣವಾಗಿದ್ದಿತು. ಹಂಸ-ಡಿಂಭಕರೂ ಸಾಮಾನ್ಯರಲ್ಲ. ಯುದ್ಧನೀತಿವಿಶಾರದರು. ಮಹಾಪರಾಕ್ರಮಿಗಳು. ಜರಾಸಂಧ, ಹಂಸ, ಡಿಂಭಕ–ಈ ಮೂವರ ಪರಾಕ್ರಮದ ಎದುರಿನಲ್ಲಿ ಮೂರು ಲೋಕಗಳ ವೀರರ ಪರಾಕ್ರಮವೂ ಸಾಟಿಯಾಗಲಾರದೆಂದೇ ನನ್ನ ಅಭಿಪ್ರಾಯ. ಈ ಕಾರಣದಿಂದಲೇ ಮಹಾಪರಾಕ್ರಮಿಗಳೆಂದು ವಿಖ್ಯಾತರಾಗಿದ್ದ ಕುಕ್ಕುರ, ಅಂಧಕ ಮತ್ತು ವೃಷ್ಣಿವಂಶಗಳ ವೀರರೂ ರಾಜನೀತಿಜ್ಞರ ಸಲಹೆಯಂತೆ ಜರಾಸಂಧನ ಮೇಲೆ ಯುದ್ಧಕ್ಕೆ ಹೋಗಲಿಲ್ಲ.”

೧೯ನೆಯ ಅಧ್ಯಾಯವು ಮುಗಿಯಿತು.

## ಯುಧಿಷ್ಠಿರನ ಅನುಮತಿಯನ್ನು ಪಡೆದು ಮಗಧರಾಜ್ಯಕ್ಕೆ ಕೃಷ್ಣಾರ್ಜುನ-ಭೀಮರ ಪ್ರಯಾಣ

ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೇಳುತ್ತಾನೆ :

"ಯುಧಿಷ್ಠಿರ! ಹಂಸ-ಡಿಂಭಕರು ಮೃತ್ಯುವಿನ ಮಾಯಾಜಾಲಕ್ಕೆ ಸಿಕ್ಕಿ ಮರಣವನ್ನೈದಿದರು. ಕಂಸನನ್ನೂ, ಅವನ ಅನುಯಾಯಿಗಳನ್ನೂ ನಾನೇ ಸಂಹರಿಸಿದೆನು. ಈಗ ಜರಾಸಂಧನ ವಧೆಯ ಕಾಲವೂ ಸನ್ನಿಹಿತವಾಗಿರುವುದು.

ಜರಾಸಂಧನು ಯುದ್ಧದಲ್ಲಿ ಅಪರಾಜಿತನು. ದೇವ-ದಾನವರೆಲ್ಲರೂ ಒಂದಾಗಿ ಯುದ್ಧಮಾಡಿದರೂ ಅವನನ್ನು ಸಮರದಲ್ಲಿ ಸೋಲಿಸುವ ಸಾಧ್ಯತೆಯಿಲ್ಲ. ಆದುದರಿಂದ ನಿರಾಯುಧನಾಗಿರುವಾಗ ಅವನನ್ನು ದ್ವಂದ್ವಯುದ್ಧಕ್ಕೆ ಕರೆದು ಸಂಹರಿಸಬೇಕೆಂಬುದೇ ನನ್ನ ಅಭಿಪ್ರಾಯವಾಗಿದೆ.

**ಮಯಿ ನೀತಿರ್ಬಲಂ ಭೀಮೇ ರಕ್ಷಿತಾ ಚಾವಯೋರ್ಜಯಃ।**
**ಮಾಗಧಂ ಸಾಧಯಿಷ್ಯಾಮ ಇಷ್ಟಿಂ ತ್ರಯ ಇವಾಗ್ನಯಃ ॥೩॥**

ಧರ್ಮಜ! ಹಿಂದೆ ಭೀಮನು ಹೇಳಿದಂತೆ ನಾನು ರಾಜನೀತಿಯನ್ನು ಚೆನ್ನಾಗಿ ಬಲ್ಲೆನು. ಶತ್ರುವಿನ ವಿಷಯದಲ್ಲಿ ಯಾವಾಗ ಹೇಗೆ ನಡೆದುಕೊಳ್ಳಬೇಕೆಂಬುದು ನನಗೆ ತಿಳಿದಿರುವುದು. ಮಹಾವೀರ್ಯನಾದ ಭೀಮನಲ್ಲಿ ಜರಾಸಂಧನನ್ನು ಸಂಹಾರಮಾಡುವ ಭುಜ ಬಲ-ಪರಾಕ್ರಮಗಳಿವೆ. ನಮ್ಮಿಬ್ಬರ ರಕ್ಷಣೆಗೂ ಅರ್ಜುನನಿದ್ದಾನೆ. ದಕ್ಷಿಣಾಗ್ನಿ-ಗಾರ್ಹಪತ್ಯ-ಆಹವನೀಯಗಳೆಂಬ ಅಗ್ನಿತ್ರಯಗಳು ಮಹಾ ಯಾಗವನ್ನು ಸಾಧಿಸಿಕೊಡುವಂತೆ–ನಾವು ಮೂವರೂ ಜರಾಸಂಧನ ವಿನಾಶವೆಂಬ ಮಹಾಕಾರ್ಯವನ್ನು ಸಾಧಿಸುವೆವು. ಅರ್ಥಾತ್ ಜರಾಸಂಧನ ವಿನಾಶವನ್ನು ನಾವು ಮಾಡಿಯೇ ತೀರುತ್ತೇವೆ.

**ತ್ರಿಭಿರಾಸಾದಿತೋಽಸ್ಮಾಭಿರ್ವಿಜನೇ ಸ ನರಾಧಿಪಃ।**
**ನ ಸಂದೇಹೋ ಯಥಾ ಯುದ್ಧಮೇಕೇನಾಪ್ಯುಪಯಾಸ್ಯತಿ ॥೪॥**

**ಅವಮಾನಾಚ್ಚ ಲೋಭಾಚ್ಚ ಬಾಹುವೀರ್ಯಾಚ್ಚ ದರ್ಪಿತಃ।**
**ಭೀಮಸೇನೇನ ಯುದ್ಧಾಯ ಧ್ರುವಮಪ್ಯುಪಯಾಸ್ಯತಿ ॥೫॥**

ನಾವು ಮೂವರೂ ರಹಸ್ಯವಾಗಿ ಅರಮನೆಯೊಳಗೆ ಹೋಗಿ ಜರಾಸಂಧನನ್ನು ದ್ವಂದ್ವಯುದ್ಧಕ್ಕೆ ಕರೆದರೆ ಮೂವರಲ್ಲಿ ಒಬ್ಬರನ್ನು ಅವನು ದ್ವಂದ್ವಯುದ್ಧಕ್ಕೆ ಕರೆಯುವನು. ಅವನು ಭೀಮನನ್ನೇ ಕರೆಯುವನೆಂದೂ ನನಗೆ ನಿಶ್ಚಯವಿದೆ. ಏಕೆಂದರೆ : ನನ್ನನ್ನಾಗಲೀ ಅಥವಾ ಅರ್ಜುನನನ್ನಾಗಲೀ ಕರೆದರೆ–'ಮಹಾಪರಾಕ್ರಮಿಯಾದ ಜರಾಸಂಧನು ತನಗೆ ಅಸಮಾನರನ್ನು ದ್ವಂದ್ವಯುದ್ಧಕ್ಕೆ ಕರೆದು ಸೋಲಿಸಿದನು'–ಎಂಬ ಆಪಾದನೆಯು ಬರುವುದೆಂದು ಅವನು ಭಾವಿಸುತ್ತಾನೆ. ಅದೂ ಅಲ್ಲದೇ ಅವನಿಗೆ ಶೌರ್ಯಮದವಿರುವುದರಿಂದ ನಮ್ಮಿಬ್ಬರನ್ನೂ ತಿರಸ್ಕರಿಸಿ ಭೀಮನನ್ನೇ ದ್ವಂದ್ವಯುದ್ಧಕ್ಕೆ ಕರೆಯುವುದರಲ್ಲಿ ಯಾವ ಸಂಶಯವೂ ಇಲ್ಲ.

ಬ್ರಹ್ಮಸೃಷ್ಟವಾದ ಜಗತ್ತಿನ ವಿನಾಶಕ್ಕೆ ಕಾಲಯಮನೊಬ್ಬನು ಸಾಕಾಗುವಂತೆ–ಮಹಾಬಲನಾದ ಜರಾಸಂಧನ ವಿನಾಶಕ್ಕೆ ಮಹಾಬಾಹುವಾದ ಭೀಮನೊಬ್ಬನೇ ಸಾಕು.

**ಯದಿ ಮೇ ಹೃದಯಂ ವೇತ್ಸಿ ಯದಿ ತೇ ಪ್ರತ್ಯಯೋ ಮಯಿ।**
**ಭೀಮಸೇನಾರ್ಜುನೌ ಶೀಘ್ರಂ ನ್ಯಾಸಭೂತೌ ಪ್ರಯಚ್ಛ ಮೇ ॥೬॥**

ಯುಧಿಷ್ಠಿರ! ನನ್ನ ಹೃದಯವನ್ನು ನೀನು ತಿಳಿದವನಾಗಿದ್ದರೆ ಮತ್ತು ನನ್ನಲ್ಲಿ ನಿನಗೆ ನಂಬಿಕೆಯಿರುವುದಾದರೆ–ಈ ನಿನ್ನ ಇಬ್ಬರು ಸಹೋದರರನ್ನೂ ಸಾವಕಾಶಮಾಡದೇ ನ್ಯಾಸರೂಪವಾಗಿ ನನ್ನೊಡನೆ ಕಳುಹಿಸು."

ಜನಮೇಜಯ! ಭಗವಂತನಿಂದ ಹೀಗೆಂದು ಕೇಳಲ್ಪಟ್ಟ ಯುಧಿಷ್ಠಿರನು ವಿಕಸಿತವಾದ ಮುಖಾರವಿಂದಗಳಿಂದ ಕೂಡಿದ್ದ ಭೀಮಾರ್ಜುನರನ್ನು ಒಮ್ಮೆ ನೋಡಿ, ಶ್ರೀಕೃಷ್ಣನನ್ನು ಕುರಿತು ಹೇಳಿದನು :

"ಅಚ್ಯುತ! ಇಂತಹ ಮಾತನ್ನು ಮಾತ್ರ ಆಡಬೇಡ. ಮಹಾನು ಭಾವನೇ! ನೀನು ಪಾಂಡವರಿಗೆ ಒಡೆಯನು. ನಾವು ನಿನ್ನನ್ನು ಅವಲಂಬಿ ಸಿಯೇ ಜೀವಿಸಿದ್ದೇವೆ. ನೀನು ಹೇಳಿರುವುದೆಲ್ಲವೂ ರಾಜನೀತಿಜ್ಞರ ಅಭಿ

ಪ್ರಾಯಕ್ಕೆ ಅನುಸಾರವಾಗಿಯೇ ಇರುವುದು. ವಿಜಯಲಕ್ಷ್ಮಿಯು ಯಾರ ವಿಷಯದಲ್ಲಿ ಪರಾಙ್ಮುಖಳಾಗಿರುವಳೋ–ಅಂತಹವರ ವಿಷಯದಲ್ಲಿ ನೀನೂ ಔದಾಸೀನ್ಯವನ್ನೇ ಹೊಂದುವೆ. ನೀನೀಗ ಜರಾಸಂಧನ ವಧೆಗೆ ಅಗ್ರಸ್ಥಾನವನ್ನು ವಹಿಸಿ ಹೊರಟಿರುವುದರಿಂದಲೇ ಜರಾಸಂಧನ ವಧೆಯು ನಿಶ್ಚಿತವೆಂದೂ–ವಿಜಯಲಕ್ಷ್ಮಿಯು ನಮಗೆ ಒಲಿಯುವುದು ಖಂಡಿತ ವೆಂದೂ–ನಿಶ್ಚಯಿಸಬಹುದಾಗಿದೆ. ನಿನ್ನ ಆಜ್ಞಾಪಾಲಕನಾಗಿರುವ ನಾನು ಜರಾಸಂಧನ ವಧೆಯಾಯಿತೆಂದೂ, ಅವನಿಂದ ಬಂಧಿತರಾದ ರಾಜರೆಲ್ಲರ ಬಿಡುಗಡೆಯಾಯಿತೆಂದೂ ಮತ್ತು ನಾನು ಉದ್ದೇಶಿಸಿರುವ ರಾಜಸೂಯ ಯಾಗವು ಪೂರ್ಣವಾಯಿತೆಂದೂ–ಭಾವಿಸಿದ್ದೇನೆ. ಜನಾರ್ದನ! ಈ ಕಾರ್ಯವು ಶೀಘ್ರವಾಗಿ ಪೂರೈಸುವಂತೆ ಜಾಗರೂಕತೆಯಿಂದ ಕಾರ್ಯಮಾಡಬೇಕು. ಏಕೆಂದರೆ :

**ತ್ರಿಭಿರ್ಭವದ್ಭಿರ್ಹಿ ವಿನಾ ನಾಹಂ ಜೀವಿತುಮುತ್ಸಹೇ।**
**ಧರ್ಮಕಾರ್ಯಾರ್ಥರಹಿತೋ ರೋಗಾರ್ತ ಇವ ದುಃಖಿತಃ ॥೧೩॥**

ಧರ್ಮ-ಕಾಮಾರ್ಥಗಳಿಂದ ರಹಿತನಾದ, ರೋಗಪೀಡಿತನಾದ, ದುಃಖಿತನಾದ ಮನಷ್ಯನಿಗೆ ಜೀವನದಲ್ಲಿ ಹೇಗೆ ಆಸಕ್ತಿಯಿರುವುದಿಲ್ಲವೋ–ಅದರಂತೆ ಕೃಷ್ಣಾರ್ಜುನ-ಭೀಮರನ್ನು ಬಿಟ್ಟು ಜೀವಿಸಲು ನನಗೆ ಉತ್ಸಾಹವೇ ಇರುವುದಿಲ್ಲ.

**ನ ಶೌರಿಣಾ ವಿನಾ ಪಾರ್ಥೋ ನ ಶೌರಿಃ ಪಾಣ್ಡವಂ ವಿನಾ।**
**ನಾಜೇಯೋऽಸ್ತ್ಯನಯೋರ್ಲೋಕೇ ಕೃಷ್ಣಯೋರಿತಿ ಮೇ ಮತಿಃ॥**

**ಅಯಂ ಚ ಬಲಿನಾಂ ಶ್ರೇಷ್ಠಃ ಶ್ರೀಮಾನಪಿ ವೃಕೋದರಃ**
**ಯುವಾಭ್ಯಾಂ ಸಹಿತೋ ವೀರಃ ಕಿಂ ನ ಕುರ್ಯಾನ್ಮಹಾಯಶಾಃ॥**

ಪಾರ್ಥನಿಲ್ಲದೇ ನೀನು ಜೀವಿಸಿರಲಾರೆ ; ನೀನಿಲ್ಲದೇ ಪಾರ್ಥನೂ ಜೀವಿಸಿರಲಾರನು. ನೀವಿಬ್ಬರೂ ಸೇರಿದರೆ ಪ್ರಪಂಚದಲ್ಲಿ ಜಯಿಸಲಾಗದ ಮಹಾವೀರನೇ ಇರುವುದಿಲ್ಲ. ಭೀಮನಾದರೋ ಶ್ರೀಮಂತನೂ, ಬಲಿಷ್ಠರಲ್ಲಿ ಅಗ್ರಗಣ್ಯನೂ ಆಗಿರುವನು. ನಿಮ್ಮಿಬ್ಬರ ಬೆಂಬಲದಿಂದ ಕೂಡಿರುವ ಭೀಮನು ಏನನ್ನು ತಾನೇ ಸಾಧಿಸಲಾರನು?

**ಸುಪ್ರಣೀತೋ ಬಲೌಘೋ ಹಿ ಕುರುತೇ ಕಾರ್ಯಮುತ್ತಮಮ್**
**ಅನ್ಧಂ ಬಲಂ ಜಡಂ ಪ್ರಾಹುಃ ಪ್ರಣೇತವ್ಯಂ ವಿಚಕ್ಷಣೈಃ ॥೧೬॥**

ಚತುರನಾದ ಸೇನಾಪತಿಯಿಂದ ವಿಚಕ್ಷಣೆಯಿಂದ ನಡೆಸಲ್ಪಟ್ಟ ಸೈನ್ಯಗಳು ಅದ್ಭುತಕಾರ್ಯಗಳನ್ನು ಮಾಡುವುವು. ಸರಿಯಾದ ನೇತಾರನಿಲ್ಲದ ಸೈನ್ಯವನ್ನು ಜಡವೆಂಬುದಾಗಿಯೂ ಕುರುಡೆಂಬುದಾಗಿಯೂ ನೀತಿಶಾಸ್ತ್ರಜ್ಞರು ಹೇಳುತ್ತಾರೆ. ಈ ಕಾರಣದಿಂದ ಸೈನ್ಯಗಳು ಯಾವಾಗಲೂ ಅನುಭವಿಯಾದ ದಂಡನಾಯಕನ ನೇತೃತ್ವದಲ್ಲಿರಬೇಕು.

**ಯತೋ ಹಿ ನಿಮ್ನಂ ಭವತಿ ನಯನ್ತಿ ಹಿ ತತೋ ಜಲಮ್**
**ಯತಶ್ಛಿದ್ರಂ ತತಶ್ಚಾಪಿ ನಯನ್ತೇ ಧೀವರಾ ಜಲಮ್ ॥೧೭॥**

ತಗ್ಗಾದ ಪ್ರದೇಶಕ್ಕೇ ನೀರನ್ನು ಹರಿಸುವುದು ಸ್ವಾಭಾವಿಕ. ತಗ್ಗಾದ ಪ್ರದೇಶಕ್ಕೆ ಹರಿದುಹೋಗುತ್ತಿರುವ ಕಾಲುವೆಗಳಲ್ಲಿ ಸಣ್ಣ-ಸಣ್ಣ ರಂಧ್ರಗಳ ಮೂಲಕವೂ ಬೆಸ್ತರು ನೀರು ಹಾಯಿಸಿ, ಮೀನುಹಿಡಿಯಲು ಪ್ರಯತ್ನಿಸುವಂತೆ–ಬುದ್ಧಿವಂತನಾದ, ನಿಷ್ಣಾತನಾದ ದಂಡನಾಯಕನು ಶತ್ರುವಿನಲ್ಲಿರುವ ಅಲ್ಪವಾದ ನ್ಯೂನತೆಯನ್ನೂ ಕಂಡುಕೊಂಡು ಆ ಮೂಲಕವಾಗಿಯೇ ಶತ್ರುವನ್ನು ಎದುರಿಸುತ್ತಾನೆ.

**ತಸ್ಮಾನ್ನಯವಿಧಾನಜ್ಞಂ ಪುರುಷಂ ಲೋಕವಿಶ್ರುತಮ್**
**ವಯಮಾಶ್ರಿತ್ಯ ಗೋವಿನ್ದಂ ಯತಾಮಃ ಕಾರ್ಯಸಿದ್ಧಯೇ ॥೧೮॥**

**ಏವಂ ಪ್ರಜ್ಞಾನಯಬಲಂ ಕ್ರಿಯೋಪಾಯಸಮನ್ವಿತಮ್ ।**
**ಪುರಸ್ಕುರ್ವೀತ ಕಾರ್ಯೇಷು ಕೃಷ್ಣಂ ಕಾರ್ಯಾರ್ಥಸಿದ್ಧಯೇ ॥೧೯॥**

ಆದುದರಿಂದ ನಾವು ನಯವಿಧಾನಜ್ಞನಾದ, ಲೋಕವಿಶ್ರುತನಾದ, ಪರಮಪುರುಷನಾದ ಗೋವಿಂದನನ್ನು ಆಶ್ರಯಿಸಿ ನಮ್ಮ ಕಾರ್ಯಸಿದ್ಧಿಗಾಗಿ ಪ್ರಯತ್ನಿಸೋಣ. ಶ್ರೀಕೃಷ್ಣನನ್ನು ನಮ್ಮ ನಾಯಕನನ್ನಾಗಿ ಮಾಡಿಕೊಂಡು ನಮ್ಮ ಕಾರ್ಯವನ್ನು ಸಾಧಿಸೋಣ. ಜಯವನ್ನು ಅಪೇಕ್ಷಿಸುವ ಪ್ರತಿಯೊಬ್ಬನೂ ಕಾರ್ಯಸಿದ್ಧಿಗಾಗಿ ನಯ-ಬಲಗಳಿಂದ ಕೂಡಿರುವ, ಕ್ರಿಯೋಪಾಯಗಳನ್ನು ತಿಳಿದಿರುವ ಶ್ರೀಕೃಷ್ಣನನ್ನು ಪುರಸ್ಕರಿಸಲೇಬೇಕು.

ಶ್ರೀಕೃಷ್ಣ! ಕಾರ್ಯದ ಸಿದ್ಧಿಗಾಗಿ ನಿನ್ನನ್ನೇ ಅನುಸರಿಸಿ ಧನಂಜಯನು ಬರಲಿ ಮತ್ತು ಧನಂಜಯನನ್ನು ಅನುಸರಿಸಿ ಭೀಮನೂ ಬರಲಿ.

**ನಯೋ ಜಯೋ ಬಲಂ ಚೈವ ವಿಕ್ರಮೇ ಸಿದ್ಧಿಮೇಷ್ಯತಿ ॥೨೦॥**

ಪರಾಕ್ರಮದಿಂದ ಶತ್ರುಗಳನ್ನು ಗೆಲ್ಲುವ ಕಾರ್ಯದಲ್ಲಿ ನಯ, ಜಯ, ಬಲ–ಇವು ಮೂರೂ ಸಿದ್ಧಿಹೊಂದುತ್ತವೆ."

ಜನಮೇಜಯ! ಯುಧಿಷ್ಠಿರನು ವಿಪುಲೌಜಸ್ಕರಾದ ತನ್ನ ತಮ್ಮಂದಿರಿಗೆ ಜರಾಸಂಧನ ವಧೆಗಾಗಿ ಶ್ರೀಕೃಷ್ಣನೊಡನೆ ಪ್ರಯಾಣಮಾಡಲು ಅನುಮತಿಯನ್ನಿತ್ತನಂತರ ಶ್ರೀಕೃಷ್ಣನೂ ಮತ್ತು ಭೀಮಾರ್ಜುನರೂ ಮಗಧ ದೇಶಕ್ಕೆ ಹೊರಡಲು ಸಿದ್ಧರಾದರು. ಹೊರಡುವ ಮೊದಲು ಆ ಮೂವರೂ ತೇಜಸ್ವಿಗಳಾದ ಸ್ನಾತಕಬ್ರಾಹ್ಮಣರ ವೇಷ-ಭೂಷಣಗಳನ್ನು ಧರಿಸಿ, ಮನೋಜ್ಞವಾದ ಮತ್ತು ಪ್ರೋತ್ಸಾಹಕರವಾದ ಸುಹೃದರ ಮಾತುಗಳಿಂದ ಅಭಿನಂದಿಸಲ್ಪಟ್ಟವರಾಗಿ ಮಗಧದೇಶಕ್ಕೆ ಹೊರಟರು.

ಮಹಾಸತ್ತ್ವರಾದ ಕೃಷ್ಣಾರ್ಜುನ-ಭೀಮರು ಸೂರ್ಯ-ಚಂದ್ರಾಗ್ನಿಗಳಂತೆ ಪ್ರಕಾಶಿಸುತ್ತಿದ್ದರು. ಜರಾಸಂಧನಿಂದ ಬಂಧಿತರಾಗಿದ್ದ ತಮ್ಮ ಬಂಧುಗಳ ಬಂಧನವನ್ನು ನೆನೆದಂತೆಲ್ಲಾ ಅವರಲ್ಲಿ ಕೋಪಾಗ್ನಿಯೂ ಆವಿರ್ಭವಿಸಿ, ಅವರ ಮುಖಾರವಿಂದಗಳು ಮತ್ತಷ್ಟು ಪ್ರಜ್ವಲಿಸಿದುವು.

ಅಪಜಯವೆಂಬುದನ್ನೇ ಅರಿಯದ ಕೃಷ್ಣಾರ್ಜುನರು ಭೀಮನೊಡನೆ ಮಗಧರಾಜನ ಪಟ್ಟಣಕ್ಕೆ ಪ್ರಯಾಣಮಾಡುತ್ತಿರುವುದನ್ನು ಕಂಡ ಯುಧಿಷ್ಠಿರನು ಜರಾಸಂಧನ ವಧೆಯಾಯಿತೆಂದೇ ಭಾವಿಸಿ ಆನಂದತುಂದಿಲನಾದನು.

ಜನಮೇಜಯ! ಕೃಷ್ಣಾರ್ಜುನರೆಂದರೆ ಸಾಮಾನ್ಯರಲ್ಲ.

**ಈಶೌ ಹಿ ತೌ ಮಹಾತ್ಮಾನೌ ಸರ್ವಕಾರ್ಯಪ್ರವರ್ತಿನೌ ।**
**ಧರ್ಮಕಾಮಾರ್ಥಲೋಕಾನಾಂ ಕಾರ್ಯಾಣಾಂ ಚ ಪ್ರವರ್ತಕೌ ॥**

ಅವರೇ ನರ-ನಾರಾಯಣರು. ಪ್ರಪಂಚಕ್ಕೇ ಈಶರು (ಒಡೆಯರು). ಸರ್ವಕಾರ್ಯಗಳಿಗೂ ಪ್ರೇರಕರಾದ ಪರಮಾತ್ಮರು. ಧರ್ಮ-ಕಾಮಾರ್ಥ

ಗಳ ಸಾಧನಗಳಲ್ಲಿ ಪ್ರವೃತ್ತರಾದ ಜನರ ಕಾರ್ಯಗಳಿಗೆ ಪ್ರವರ್ತಕರೂ ಕೃಷ್ಣಾರ್ಜುನರೇ ಆಗಿರುತ್ತಾರೆ.

ಕುರುದೇಶದಿಂದ ಹೊರಟ ಕೃಷ್ಣಾರ್ಜುನ-ಭೀಮರು ಕುರುಜಾಂಗಲ ದೇಶದ ಮಧ್ಯದಲ್ಲಿ ನಡೆದುಹೋಗುತ್ತಾ ಕೆಂದಾವರೆಗಳಿಂದಲೂ, ಅರಳಿದ ಕಮಲಗಳಿಂದಲೂ ಕೂಡಿದ್ದ ಪದ್ಮಸರಸ್ಸನ್ನು ದಾಟಿ, ಮುಂದೆ ಕಾಲಕೂಟ ವೆಂಬ ಪರ್ವತವನ್ನೂ ಹತ್ತಿ-ಇಳಿದು, ಕಾಲಕೂಟಪರ್ವತದಲ್ಲಿಯೇ ಹುಟ್ಟಿಹರಿಯುತ್ತಿದ್ದ ಗಂಡಕೀ, ಮಹಾಶೋಣ, ಸದಾನೀರಾ–ಮುಂತಾದ ನದಿಗಳನ್ನೂ ದಾಟಿದರು. ಅಲ್ಲಿಂದ ಮುಂದೆ ಸರಯೂನದಿಯನ್ನೂ ದಾಟಿ, ಶ್ರೀರಾಮಚಂದ್ರನ ರಾಜ್ಯವಾಗಿದ್ದ ಪೂರ್ವಕೋಸಲವನ್ನು ಸಂದರ್ಶಿಸಿದರು. ಕೋಸಲವನ್ನು ದಾಟಿ ಮುಂದೆ ಮಿಥಿಲೆಯನ್ನೂ, ಆ ದೇಶದಲ್ಲಿದ್ದ ಮಾಲಾ ಮತ್ತು ಚರ್ಮಣ್ವತೀ–ಎಂಬ ನದಿಗಳನ್ನೂ ದಾಟಿದವರಾಗಿ ಮೂವರು ಮಹಾವೀರರೂ ಲೋಕಪಾವನೆಯಾದ ಗಂಗೆಯನ್ನೂ, ಶೋಣಭದ್ರಾನದಿ ಯನ್ನೂ ದಾಟಿದನಂತರ ಪೂರ್ವದಿಕ್ಕಿನ ಕಡೆಗೆ ಹೊರಟರು. ಕಟ್ಟಕಡೆಗೆ ಮಗಧದೇಶದ ಗಡಿಪ್ರದೇಶಕ್ಕೆ ಬಂದು, ಕೆಲವು ದಿನಗಳು ಪ್ರಯಾಣ ಮಾಡಿದನಂತರ ಕುಶ-ಚೀರಾಂಬರಗಳನ್ನು ಧರಿಸಿದ್ದ ಕೃಷ್ಣಾರ್ಜುನ-ಭೀಮರು ಗೋರಥಪರ್ವತಕ್ಕೆ ಹೋಗಿ ಸಾವಿರಾರು ಗೋವುಗಳಿಂದ ತುಂಬಿ ತೃಣ-ಜಲಗಳಿಂದಲೂ ಸಮೃದ್ಧವಾಗಿ, ನಾನಾವೃಕ್ಷಗಳಿಂದಲೂ–ಲತೆ ಗಳಿಂದಲೂ ಪರಿಶೋಭಿಸುತ್ತಿದ್ದ ಜರಾಸಂಧನ ರಾಜಧಾನಿಯನ್ನು ಕಂಡರು.

೨೦ನೆಯ ಅಧ್ಯಾಯವು ಮುಗಿಯಿತು.

೨೧ನೆಯ ಅಧ್ಯಾಯ ಜರಾಸಂಧವಧಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನಿಂದ ಮಗಧರಾಜಧಾನಿಯ ಪ್ರಶಂಸೆ : ಕೃಷ್ಣಾರ್ಜುನ–ಭೀಮರಿಂದ ರಾಜಸಭಾಭವನಪ್ರವೇಶ : ಶ್ರೀಕೃಷ್ಣ-ಜರಾಸಂಧರ ಸಂವಾದ

ಜನಮೇಜಯ! ಗೋರಥಪರ್ವತದ ಮೇಲೆ ನಿಂತು ಮೂವರೂ ಜರಾಸಂಧನ ರಾಜಧಾನಿಯನ್ನು ವೀಕ್ಷಿಸಿದರು. ಶ್ರೀಕೃಷ್ಣನೇ ಆ ಪಟ್ಟಣದ

ಸೊಬಗನ್ನು ವರ್ಣಿಸಲು ಮೊದಲಿಟ್ಟನು : "ನೋಡು, ಪಾರ್ಥ! ಈ ಪಟ್ಟಣದ ಸೊಬಗು ಹೇಗಿದೆ! ಜನರಿಂದಲೂ, ಹಸು ಮುಂತಾದ ಪ್ರಾಣಿಗಳಿಂದಲೂ ನಿಬಿಡವಾಗಿದೆ. ನೀರಿಗಾಗಲೀ, ಆಹಾರಕ್ಕಾಗಲೀ ಈ ಪಟ್ಟಣದಲ್ಲಿ ಕ್ಷಾಮವೆಂಬುದೇ ಇಲ್ಲ. ಸೌಧಗಳೆಲ್ಲವೂ ಸಾಲು-ಸಾಲಾಗಿ ಕಟ್ಟಲ್ಪಟ್ಟು ನೇತ್ರಾನಂದವನ್ನುಂಟುಮಾಡುತ್ತಿವೆ. ಈ ಪಟ್ಟಣದಲ್ಲಿ ಯಾವ ವಿಧವಾದ ಈತಿಬಾಧೆಗಳೂ ಇರುವುದಿಲ್ಲ. ಪಟ್ಟಣದ ಸುತ್ತಲೂ ಎತ್ತರವಾದ ಶಿಖರಗಳಿಂದಲೂ, ಅನೇಕವೃಕ್ಷಗಳಿಂದಲೂ, ಲತೆಗಳಿಂದಲೂ ನಿಬಿಡವಾಗಿರುವ–ಒಂದನ್ನೊಂದು ಸೇರಿಕೊಂಡಂತೆಯೇ ಇರುವ ವೈಹಾರ, ವರಾಹ, ವೃಷಭ, ಋಷಿಗಿರಿ ಮತ್ತು ಚೈತ್ಯಕಪರ್ವತಗಳು ಈ ಗಿರಿವ್ರಜಪಟ್ಟಣವನ್ನು ಸಂರಕ್ಷಿಸುತ್ತಿರುವಂತೆ ಕಾಣುತ್ತಿವೆಯಲ್ಲವೇ? ಈ ಪರ್ವತಗಳ ಮಧ್ಯಭಾಗದಲ್ಲಿ ಸುಂದರವಾದ ಕಾನನಗಳಿವೆ. ಆ ಕಾಡುಗಳಲ್ಲಿ ಸುಗಂಧವನ್ನು ಹೊರಸೂಸುವ ಲೋಧ್ರವೃಕ್ಷಗಳಿದ್ದು, ಆ ವೃಕ್ಷಗಳೆಲ್ಲವೂ ನಯನಾನಂದಕರವಾದ, ಸುವಾಸನೆಯಿಂದ ಕೂಡಿರುವ ಪುಷ್ಪಗುಚ್ಛವನ್ನು ಹೊಂದಿ ಪ್ರೇಕ್ಷಕರಿಗೆ ಅತ್ಯಾನಂದವನ್ನುಂಟುಮಾಡುತ್ತಿವೆ.

ಇದೇ ಸ್ಥಳದಲ್ಲಿಯೇ ಮಹರ್ಷಿಗಳಾದ ಗೌತಮರು ಶೂದ್ರಸ್ತ್ರೀಯಾದ ಔಶೀನರಿಯಲ್ಲಿ ಕಾಕ್ಷೀವಂತನೇ ಮೊದಲಾದ ಸುಪ್ರಸಿದ್ಧರಾದ ಮಕ್ಕಳನ್ನು ಪಡೆದರು. ಮಹಾತ್ಮರಾದ ಗೌತಮರು ರಾಜನ ವಿಶ್ವಾಸಕ್ಕೆ ಕಟ್ಟುಬಿದ್ದು ಇಲ್ಲಿಯೇ ಆಶ್ರಮದಲ್ಲಿ ವಾಸವಾಗಿದ್ದುಕೊಂಡು ಮಗಧವಂಶದ ರಾಜರನ್ನು ಅನುಗ್ರಹಿಸುತ್ತಿದ್ದಾರೆ. ಅವರು ಇಲ್ಲಿ ಉಪಸ್ಥಿತರಾಗಿರುವುದೇ ಮಗಧವಂಶದ ಅರಸರಿಗೆ ಅನುಗ್ರಹರೂಪವಾಗಿದೆ. ಗೌತಮರ ಆಶ್ರಮಕ್ಕೆ ಹಿಂದಿನ ಕಾಲದಲ್ಲಿ ಅಂಗ, ವಂಗ ಮುಂತಾದ ದೇಶಗಳ ಅರಸರು ಬಂದು ಅನೇಕ ದಿನಗಳು ವಿಶ್ರಾಂತಿಸುಖವನ್ನನುಭವಿಸುತ್ತಾ ಇರುತ್ತಿದ್ದರು. ಅಲ್ಲಿ ನೋಡು, ಅರ್ಜುನ! ಈ ಆಶ್ರಮದ ಸುತ್ತಲೂ ಅಶ್ವತ್ಥವೃಕ್ಷಗಳೂ, ಲೋಧ್ರವೃಕ್ಷಗಳೂ ಸೊಂಪಾಗಿ ಬೆಳೆದು ಎಷ್ಟು ಸುಂದರವಾಗಿ ಕಾಣುತ್ತಿದೆ!

ಇದೇ ಸ್ಥಳದಲ್ಲಿ ಹಿಂದೆ ಅರ್ಬುದ, ಶಕ್ರವಾಪೀ ಎಂಬ ಶತ್ರುತಾಪನ ರಾದ ನಾಗಶ್ರೇಷ್ಠರೂ, ಸ್ವಸ್ತಿಕ ಮತ್ತು ಮಣಿನಾಗರೂ ವಾಸವಾಗಿದ್ದರು.

ಮನುವು ಈ ಮಗಧರಾಜ್ಯದಲ್ಲಿ ಎಂದೆಂದಿಗೂ ಕ್ಷಾಮ-ಡಾಮರಗಳುಂಟಾಗದಂತೆ ಅನುಗ್ರಹಿಸಿರುವನು. ಕೌಶಿಕ ಮತ್ತು ಮಣಿಮಂತರೂ ಅನೇಕವಿಧವಾದ ವರಗಳನ್ನಿತ್ತು ಈ ಪಟ್ಟಣವನ್ನು ಅನುಗ್ರಹಿಸಿರುವರು.

ಇಂತಹ ಸುಂದರವಾದ ಮತ್ತು ದುರ್ಗಮವಾದ ರಾಜಧಾನಿಯಲ್ಲಿ ಅನುಪಮವಾದ ಅರ್ಥಸಿದ್ಧಿಯ ಅಭಿಲಾಷೆಯಿಂದ ಜರಾಸಂಧನು ರಾಜ್ಯಭಾರವನ್ನು ಮಾಡುತ್ತಿದ್ದಾನೆ. ಅಂತಹವನ ದರ್ಪವನ್ನು ನಾವಿಂದು ಮುರಿಯಲು ಹೊರಟಿದ್ದೇವೆ."

ಜನಮೇಜಯ! ಭೀಮಾರ್ಜುನ-ಕೃಷ್ಣರು ದುರ್ಗಮವಾಗಿದ್ದ ಗಿರಿವ್ರಜವನ್ನು ಸಮೀಪಿಸಿದರು. ಹಿಂದೆಯೇ ಹೇಳಿದಂತೆ ಆ ಸುಂದರನಗರಿಯಲ್ಲಿ ಚಾತುರ್ವರ್ಣ್ಯದವರೂ ಹೃಷ್ಟ-ಪುಷ್ಟರಾಗಿ, ಯಾವ ವಿಧವಾದ ಈತಿಬಾಧೆಗಳೂ ಇಲ್ಲದೇ ಸಂತೋಷದಿಂದಿದ್ದರು.

ನಗರವನ್ನು ಸಮೀಪಿಸಿದ ಶ್ರೀಕೃಷ್ಣಾರ್ಜುನ-ಭೀಮರು ಮಹಾದ್ವಾರದ ಮೂಲಕವಾಗಿ ಗಿರಿವ್ರಜವನ್ನು ಪ್ರವೇಶಿಸಲಿಲ್ಲ. ಬೇರೊಂದು ದಾರಿಯನ್ನೇ ನಿರ್ಮಿಸಿದರು. ಮಗಧದೇಶದ ರಾಜರಿಂದಲೂ – ಜನರಿಂದಲೂ ಆರಾಧಿಸಲ್ಪಡುತ್ತಿದ್ದ, ಗಿರಿವ್ರಜಕ್ಕೆ ಕಲಶಪ್ರಾಯವಾಗಿದ್ದ ಚೈತ್ಯಕಪರ್ವತವನ್ನು ಮೂವರೂ ಹತ್ತಿದರು. ಆ ಪರ್ವತದ ಮೇಲೆ ಮೂರು ನಗಾರಿಗಳಿದ್ದುವು. ಪದೇ-ಪದೇ ಪ್ರಜೆಗಳನ್ನು ಹಿಂಸಿಸುತ್ತಿದ್ದ ವೃಷಭರೂಪಿಯಾದ ರಾಕ್ಷಸನೊಬ್ಬನನ್ನು ಬೃಹದ್ರಥನು ಸಂಹಾರಮಾಡಿ ಅವನ ಚರ್ಮದಿಂದ ಆ ಮೂರು ನಗಾರಿಗಳನ್ನೂ ಮಾಡಿಸಿದ್ದನು. ಆ ನಗಾರಿಗಳನ್ನು ಒಮ್ಮೆ ಬಾರಿಸಿದರೆ ಅವುಗಳ ಶಬ್ದವು ಒಂದು ತಿಂಗಳ ಪರ್ಯಂತವೂ ಪ್ರತಿಧ್ವನಿತವಾಗುತ್ತಿತ್ತು. ಅಂತಹ ನಗಾರಿಗಳನ್ನೂ ಭೀಮಾರ್ಜುನರು ಒಡೆದುಹಾಕಿದರು. ಅದರಿಂದಾಗಿ ತಾವು ಕೊಲ್ಲಲಿದ್ದ ಜರಾಸಂಧನ ತಲೆಯನ್ನು ಮೆಟ್ಟಿದಂತೆಯೇ ಭಾವಿಸಿದರು.

ಅನಂತರ ಮಗಧದೇಶೀಯರಿಗೆ ಬಹುಪ್ರಿಯವಾಗಿದ್ದ ಚೈತ್ಯಕಪರ್ವತದ ಶಿಖರವನ್ನು ಹತ್ತಿದರು. ಜರಾಸಂಧನ ವಧೆಯಲ್ಲಿಯೇ ಇಚ್ಛೆಯುಳ್ಳವರಾಗಿದ್ದ ಕೃಷ್ಣಾರ್ಜುನ-ಭೀಮರು ಚೈತ್ಯಕಪರ್ವತದ ಶಿಖರವನ್ನೂ ಧ್ವಂಸ ಮಾಡಿದರು. ಚೈತ್ಯಕಪರ್ವತದ ವಿಶಾಲವಾಗಿದ್ದ ಆ ಶಿಖರವು ಬಹಳ ಕಾಲ

ದಿಂದಲೂ ವಿಜೃಂಭಿಸುತ್ತಿದ್ದಿತು. ಸುದೃಢವಾಗಿದ್ದಿತು. ಗಂಧ-ಮಾಲ್ಯಾದಿಗಳಿಂದ ಆ ಶಿಖರವನ್ನು ಪ್ರತಿನಿತ್ಯವೂ ಮಾಗಧರು ಪೂಜಿಸುತ್ತಿದ್ದರು. ಅಂತಹ ಸುಪ್ರತಿಷ್ಠಿತವಾಗಿದ್ದ ಚೈತ್ಯಕಪರ್ವತದ ಶಿಖರವನ್ನು ಮಹಾಬಾಹುಗಳಾದ ಕೃಷ್ಣಾರ್ಜುನ-ಭೀಮರು ಧ್ವಂಸಮಾಡಿ ಕೆಳಗುರುಳಿಸಿ, ತಾವು ಮಾಡಿದ ಕಾರ್ಯದಿಂದ ಅತ್ಯಂತಹೃಷ್ಟರಾಗಿ, ಬೇರೆಯ ಮಾರ್ಗವನ್ನೇ ಕಲ್ಪಿಸಿಕೊಂಡು ರಾಜಧಾನಿಯನ್ನು ಪ್ರವೇಶಿಸಿದರು.

ಆ ವೇಳೆಗೆ ಸರಿಯಾಗಿ ನಗರದಲ್ಲಿ ಅನೇಕವಿಧವಾದ, ಅಶುಭಸೂಚಕಗಳಾದ ಉಲ್ಕಾಪಾತ, ಅಗ್ನಿಪ್ರಕೋಪ – ಮುಂತಾದುವು ತಲೆದೋರಿದುವು. ಶಕುನವಿಜ್ಞಾನವನ್ನು ತಿಳಿದಿದ್ದ ವೇದಪಾರಂಗತರಾದ ಬ್ರಾಹ್ಮಣರು ಜರಾಸಂಧನಿಗೆ ಆ ವಿಷಯವನ್ನು ತಿಳಿಸಿದರು.

ಜರಾಸಂಧನನ್ನು ಆನೆಯ ಮೇಲೆ ಕುಳ್ಳಿರಿಸಿ ಶಾಂತಿಗಾಗಿ ನಾಲ್ಕು ದಿಕ್ಕುಗಳಲ್ಲಿಯೂ ಪರ್ಯಗ್ನಿಕರಣಗಳನ್ನು ಮಾಡಿದರು.

ಒಡನೆಯೇ ಶೂರನಾದ ಜರಾಸಂಧನು ಅರಿಷ್ಟನಿವಾರಣೆಗಾಗಿ ನಾನಾ ವಿಧವಾದ ಹೋಮ-ಹವನಗಳನ್ನು ಮಾಡಿ, ಉಪವಾಸವ್ರತವನ್ನು ಕೈಗೊಂಡನು.

ಜರಾಸಂಧನೊಡನೆ ಯುದ್ಧಮಾಡಲು ಉತ್ಸುಕರಾಗಿದ್ದ, ನಿರಾಯುಧರಾಗಿದ್ದ, ತಮ್ಮ ಬಾಹುಗಳನ್ನೇ ಶಸ್ತ್ರಾಸ್ತ್ರಗಳನ್ನಾಗಿ ಹೊಂದಿದ್ದ, ಸ್ನಾತಕವ್ರತವೇಷಧಾರಿಗಳಾಗಿದ್ದ ಭೀಮಾರ್ಜುನ-ಕೃಷ್ಣರು ಜರಾಸಂಧನ ರಾಜಧಾನಿಯನ್ನು ಪ್ರವೇಶಿಸಿದರು. ಅವರು ರಾಜಬೀದಿಯಲ್ಲಿ ನಡೆದುಬರುತ್ತಿದ್ದಾಗ ಅಲ್ಲಿದ್ದ ಹಲವಾರು ಅಂಗಡಿಗಳನ್ನು ಕಂಡರು. ಪ್ರತಿಯೊಂದು ಅಂಗಡಿಯೂ ಆಕರ್ಷಣೀಯವಾಗಿದ್ದಿತು. ಅಂಗಡಿಗಳಲ್ಲಿ ಯಥೇಚ್ಛವಾಗಿ ಜನೋಪಯೋಗಿಯಾದ ವಸ್ತುಗಳು ತುಂಬಿದ್ದುವು. ಹಲವು ಬಗೆಯ ತಿಂಡಿ-ತಿನಿಸುಗಳ ಅಂಗಡಿಗಳೂ, ಹೂವಿನ ಅಂಗಡಿಗಳೂ ಇದ್ದುವು. ಅವುಗಳೆಲ್ಲವನ್ನೂ ನೋಡುತ್ತಾ ಮೂವರೂ ಅರಮನೆಯ ಕಡೆಗೆ ಮುಂದುವರಿದರು. ಒಂದು ಹೂವಿನ ಅಂಗಡಿಯಲ್ಲಿದ್ದ ನಯನಮನೋಹರವಾಗಿದ್ದ ಮತ್ತು ಸುಗಂಧಪೂರಿತವಾಗಿದ್ದ ಮಾಲೆಗಳನ್ನು ಭೀಮ-ಪಾರ್ಥ-ಕೃಷ್ಣರು ಕಂಡು, ಆ ಮಾಲೆಗಳಿಗೆ ಯಾವ ವಿಧವಾದ ಮೌಲ್ಯವನ್ನೂ ಕೊಡದೇ ಅವನ್ನು

ಹೂವಾಡಿಗನಿಂದ ಬಲಾತ್ಕಾರವಾಗಿ ತೆಗೆದುಕೊಂಡು, ತಮ್ಮ ಶರೀರವನ್ನು ಸಿಂಗರಿಸಿಕೊಂಡರು.

ಚಿತ್ರ-ವಿಚಿತ್ರವಾದ ವಸ್ತ್ರಗಳನ್ನೂ, ಮಾಲೆಗಳನ್ನೂ ಮತ್ತು ಕರ್ಣ-ಕುಂಡಲಗಳನ್ನೂ ಧರಿಸಿದವರಾಗಿ–ಹಿಮಾಲಯದ ಸಿಂಹಗಳು ದನದ ಕೊಟ್ಟಿಗೆಯೊಳಗೆ ನುಗ್ಗುವಂತೆ–ಮಹಾಪರಾಕ್ರಮಿಗಳಾದ ಕೃಷ್ಣಾರ್ಜುನ-



ಭೀಮರು ಜರಾಸಂಧನ ಅರಮನೆಯನ್ನು ಪ್ರವೇಶಿಸಿದರು. ಚಂದನಾಗುರುಗಳಿಂದ ಲೇಪಿತವಾಗಿದ್ದ ಅವರ ತೋಳುಗಳು ಶಾಲವೃಕ್ಷದ ದೊಡ್ಡ ರೆಂಬೆಗಳಂತೆ ಕಾಣುತ್ತಿದ್ದುವು. ಮದಗಜಗಳಂತಿದ್ದ, ವಿಶಾಲವಕ್ಷರಾದ ಆ ಮೂವರು ಮಹಾಪುರುಷರನ್ನು ಕಂಡು ಮಗಧರಾಜನ ಪ್ರಜೆಗಳು ಸಂಭ್ರಾಂತರಾದರು. ಜನನಿಬಿಡವಾಗಿದ್ದ ಅರಮನೆಯ ಮೂರು ಮಹಾದ್ವಾರಗಳನ್ನೂ ದಾಟಿದನಂತರ ಕೃಷ್ಣಾರ್ಜುನ-ಭೀಮರು ಮಂದಸ್ಮಿತರಾಗಿ ಜರಾಸಂಧನು ಕುಳಿತಿದ್ದ ಸಭಾಂಗಣವನ್ನೇ ಪ್ರವೇಶಿಸಿದರು. ಸ್ನಾತಕರ ವೇಷಧರಿಸಿದ್ದ ಮೂವರನ್ನೂ ಕಂಡೊಡನೆಯೇ ಜರಾಸಂಧನು ಸಿಂಹಾಸನದಿಂದ ಮೇಲೆದ್ದು, ಅರ್ಘ್ಯ-ಪಾದ್ಯಾದಿಗಳನ್ನೂ, ಮಧುಪರ್ಕವನ್ನೂ ಅರ್ಪಿಸಿ, ಸತ್ಕಾರಕ್ಕೆ

ಯೋಗ್ಯರಾದ ಅತಿಥಿಗಳನ್ನು ಕುರಿತು–"ತಮ್ಮೆಲ್ಲರಿಗೂ ಆದರದ ಸ್ವಾಗತವಿದೆ. ದಯೆಯಿಟ್ಟು ಇತ್ತ ದಯಮಾಡಿಸಿರಿ"–ಎಂದು ವಿನೀತನಾಗಿ ಹೇಳಿದನು. ಅವನ ಆದರದ ನುಡಿಗಳಿಗೆ ಭೀಮಾರ್ಜುನರು ಉತ್ತರವನ್ನೀಯದೇ ಮೌನವಾಗಿ ನಿಂತಿದ್ದರು.

ಅವರ ಮಧ್ಯದಲ್ಲಿದ್ದ ಮಹಾಬುದ್ಧಿವಂತನಾದ, ನೀತಿವಿಶಾರದನಾದ ಶ್ರೀಕೃಷ್ಣನು ಮಾತ್ರ ಜರಾಸಂಧನನ್ನು ಕುರಿತು ಹೇಳಿದನು :

"ರಾಜಾಧಿರಾಜ! ಈ ಇಬ್ಬರೂ ಮಹತ್ತಾದ ಒಂದು ವ್ರತಾನುಷ್ಠಾನದಲ್ಲಿರುವುದರಿಂದ ಇವರೀಗ ಮೌನಿಗಳಾಗಿರುವರು. ಇವರು ಈಗ ನಿನ್ನೊಡನೆ ಮಾತನಾಡುವುದಿಲ್ಲ. ಇಂದು ಮಧ್ಯರಾತ್ರಿಯವರೆಗೂ ಇವರು ಮೌನವ್ರತದಲ್ಲಿಯೇ ಇರುವರು. ಬಳಿಕ ನಿನ್ನೊಡನೆ ಮಾತನಾಡುವರು."

ಶ್ರೀಕೃಷ್ಣನ ಮಾತುಗಳನ್ನು ಕೇಳಿದ ಜರಾಸಂಧನು ಬಂದಿದ್ದ ಅತಿಥಿಗಳಿಗೆ ಯಾಗಶಾಲೆಯಲ್ಲಿ ಬಿಡಾರಮಾಡಿಕೊಟ್ಟು ತನ್ನ ಅಂತಃಪುರಕ್ಕೆ ತೆರಳಿದನು.

ಅರ್ಧರಾತ್ರಿಯು ಸಮೀಪಿಸಿತು. ಒಡನೆಯೇ ರಾಜನು ಅರಮನೆಯಿಂದ ಹೊರಬಂದು ಬ್ರಾಹ್ಮಣವೇಷಧಾರಿಗಳಾಗಿದ್ದ ಅತಿಥಿಗಳ ಸಮೀಪಕ್ಕೆ ಬಂದನು.

ಜನಮೇಜಯ! ಸ್ನಾತಕರಾದ ಬ್ರಾಹ್ಮಣರು ತನ್ನ ಅತಿಥಿಗಳಾಗಿದ್ದಾಗ ಜರಾಸಂಧನು ಯಾವ ಹೊತ್ತಿನಲ್ಲಾದರೂ ಆದರದಿಂದ ಸ್ವಾಗತಿಸುವನೆಂಬ ವಿಷಯವು ಲೋಕಪ್ರಸಿದ್ಧವಾಗಿದ್ದಿತು. ಅರ್ಧರಾತ್ರಿಯಲ್ಲಾದರೂ ಅವರನ್ನು ಪುರಸ್ಕರಿಸಿ ಸೇವೆಮಾಡುತ್ತಿದ್ದನು.

ಕೃಷ್ಣಾರ್ಜುನ-ಭೀಮರು ಧರಿಸಿದ್ದ ವಿಚಿತ್ರತರವಾದ ವಸ್ತ್ರಗಳನ್ನು ಕಂಡು ರಾಜನು ವಿಸ್ಮಿತನಾದನು. ಆದರೂ ಸೇವೆಮಾಡಲು ಅವರ ಸಮೀಪದಲ್ಲಿ ನಿಂತನು. ಆ ವೇಳೆಯಲ್ಲಿ ತಮ್ಮನ್ನು ಸತ್ಕರಿಸಲು ಬಂದ ಜರಾಸಂಧನನ್ನು ಕಂಡು ಭೀಮಾರ್ಜುನರು ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾ 'ಸ್ವಸ್ತ್ಯಸ್ತು ಕುಶಲಂ ರಾಜನ್' – 'ಮಹಾರಾಜ! ನಿನಗೆ ಮಂಗಳವುಂಟಾಗಲಿ! (ಮಹಾರಾಜ! ನಿನಗೆ ಮೋಕ್ಷವು ಸುಗಮವಾಗಲಿ!)' ಎಂದು ಹರಸಿದರು.

**('ಸ್ವಸ್ತ್ಯಸ್ತು ಕುಶಲಂ ರಾಜನ್'ಎಂದು ಭೀಮಾರ್ಜುನರು ಹೇಳಿದರು. 'ಸ್ವಸ್ತಿ-ಅಸ್ತು-ಕುಶಲಂ-ರಾಜನ್' ಈ ಪದಸಮೂಹವು ಸಾಮಾನ್ಯವಾಗಿ– 'ಮಹಾರಾಜ! ನಿನಗೆ ಮಂಗಳವಾಗಲಿ' – ಎಂಬ ಅರ್ಥವನ್ನೇ ಕೊಡುತ್ತದೆ. ಆದರೆ ವ್ಯಾಖ್ಯಾನಕಾರರು ಈ ಅರ್ಥವನ್ನು ಒಪ್ಪುವುದಿಲ್ಲ. ಅವರು ಇದೇ ಪದಸಮೂಹಕ್ಕೆ ಬೇರೆಯ ಅರ್ಥವನ್ನೇ ಕಲ್ಪಿಸಿ ಪ್ರಕೃತಸಂದರ್ಭಕ್ಕೆ ಹೊಂದಿಕೊಳ್ಳುವ ರೀತಿಯಲ್ಲಿ ಅರ್ಥಮಾಡಿದ್ದಾರೆ.**

**ಕುಶಲಂ ಸ್ವಸ್ತಿ, ಕುಶಲಂ=ನಿರ್ವಿಘ್ನಂ, ಸ್ವಸ್ತಿ=ಸುತರಾಂ ಯತ್ ಅಸ್ತಿ ತತ್‌ಸ್ವಸ್ತಿ ಅರ್ಥಾತ್ ಅವಿನಾಶಿ ಮೋಕ್ಷಪದಂ ಅಸ್ತು, 'ನಿನಗೆ ನಿರ್ವಿಘ್ನವಾಗಿ ಅವಿನಾಶಿಯಾದ ಮೋಕ್ಷವು ಸಿಕ್ಕಲಿ' ಎಂದು ವ್ಯಾಖ್ಯಾನಕಾರರು ವ್ಯಾಖ್ಯಾನಮಾಡಿರುತ್ತಾರೆ.)**

ಬ್ರಾಹ್ಮಣವೇಷದಲ್ಲಿದ್ದ ಭೀಮ-ಪಾರ್ಥ-ಶ್ರೀಕೃಷ್ಣರನ್ನು ಜರಾಸಂಧನು ಕುಳಿತುಕೊಳ್ಳಲು ಹೇಳಿದನು. ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ ಮೂರು ಅಗ್ನಿಗಳಂತೆ ಪ್ರಜ್ವಲಿಸುತ್ತಿದ್ದ ಮೂವರೂ ಜರಾಸಂಧನ ಎದುರಿನಲ್ಲಿ ಕುಳಿತರು.

ಜರಾಸಂಧನಿಗೆ ತನ್ನ ಎದುರಿನಲ್ಲಿ ಕುಳಿತಿರುವವರು ಬ್ರಾಹ್ಮಣವೇಷಧಾರಿಗಳೆಂಬುದರ ಅರಿವಾಗಿದ್ದಿತು. ಅವರಾರೆಂಬುದನ್ನು ನಿರ್ಧರಿಸಲು ಮೂವರನ್ನೂ ಕೇಳಿದನು :

**ನ ಸ್ನಾತಕವ್ರತಾ ವಿಪ್ರಾ ಬಹಿರ್ಮಾಲ್ಯಾನುಲೇಪನಾಃ।**
**ಭವನ್ತೀತಿ ನೃಲೋಕೇಽಸ್ಮಿನ್ವಿದಿತಂ ಮಮ ಸರ್ವಶಃ ॥೪೨॥**

"ಸ್ನಾತಕವ್ರತಾನುಷ್ಠಾನಮಾಡುವ ಬ್ರಾಹ್ಮಣರು ತಮ್ಮ ಶರೀರಕ್ಕೆ ಯಾವ ವಿಧವಾದ ಅಲಂಕಾರವನ್ನೂ ಮಾಡಿಕೊಳ್ಳುವುದಿಲ್ಲವೆಂಬುದೂ, ಕಸ್ತೂರೀ-ಚಂದನಾದಿಗಳನ್ನೂ ಲೇಪನಮಾಡಿಕೊಳ್ಳುವುದಿಲ್ಲವೆಂಬುದೂ ಲೋಕಪ್ರಸಿದ್ಧವಾಗಿದೆ. ಈ ವಿಷಯವು ನನಗೂ ತಿಳಿದಿರುವುದು.

ಆದರೆ ನೀವು ಮಾತ್ರ ಸುಗಂಧಮಾಲೆಗಳನ್ನು ಧರಿಸಿರುವಿರಿ. ಪೀತಾಂಬರಗಳನ್ನು ಉಟ್ಟಿರುವಿರಿ. ಚಂದನಾದಿ ಸುಗಂಧದ್ರವ್ಯಗಳನ್ನೂ ಲೇಪನ ಮಾಡಿಕೊಂಡಿರುವಿರಿ. ನಿಮ್ಮ ಕೈಗಳಲ್ಲಿ ಧನುಸ್ಸನ್ನು ಹಿಡಿದ ಚಿಹ್ನೆಗಳಿವೆ.

ನೀವು ಬ್ರಾಹ್ಮಣರೆಂದು ಹೇಳಿಕೊಂಡರೂ ನಿಮ್ಮಲ್ಲಿ ಕ್ಷತ್ರಿಯರಿಗಿರುವ ಶೌರ್ಯವಿದೆ. ನೀವಾರೆಂಬುದನ್ನು ನಿಶ್ಚಯವಾಗಿ ಹೇಳಿರಿ. 'ಸತ್ಯಂ ರಾಜಸು ಶೋಭತೇ' – ಸತ್ಯಭಾಷಣವು ರಾಜರಲ್ಲಿ ಬಹುವಾಗಿ ಶೋಭಿಸುತ್ತದೆ.

ಚೈತ್ಯಕಪರ್ವತದ ಶಿಖರವನ್ನು ಉರುಳಿಸಿ, ಕುಮಾರ್ಗದಿಂದ ನಗರವನ್ನೇಕೆ ಪ್ರವೇಶಿಸಿದಿರಿ? ಶಿಖರವನ್ನು ಉರುಳಿಸುವುದರಿಂದ ರಾಜಕೋಪಕ್ಕೆ ಬಲಿಯಾಗುವಿರೆಂಬ ಅರಿವಾಗಲಿಲ್ಲವೇ?

**ವದಧ್ವಂ ವಾಚಿ ವೀರ್ಯಂ ಚ ಬ್ರಾಹ್ಮಣಸ್ಯ ವಿಶೇಷತಃ।**
**ಕರ್ಮ ಚೈತದ್ವಿಲಿಙ್ಗಸ್ಥಂ ಕಿಂ ವೋಽದ್ಯ ಪ್ರಸಮೀಕ್ಷಿತಮ್ ॥೪೬॥**

ಬ್ರಾಹ್ಮಣನಾದವನಿಗೆ ವಿಶೇಷವಾಗಿ ವಾಕ್ಶಕ್ತಿಯಿರುವುದೇ ಹೊರತು ಕ್ರಿಯಾಶಕ್ತಿಯಿರುವುದಿಲ್ಲ. ಕ್ರಿಯಾಶಕ್ತಿಯಿರುವುದು ಕ್ಷತ್ರಿಯನಿಗೆ ಮಾತ್ರ. ನೀವು ಯಾವ ವರ್ಣದವರೆಂದು ಹೇಳಿಕೊಳ್ಳುತ್ತಿರುವಿರೋ–ಆ ವರ್ಣದವರಿಗೆ ಉಚಿತವಾಗಿರುವ ಕಾರ್ಯವನ್ನು ನೀವು ಮಾಡಿರುವುದಿಲ್ಲ. ಆದುದರಿಂದ ನೀವು ಯಾರು? ನಿಮ್ಮ ಧ್ಯೇಯೋದ್ದೇಶಗಳಾದರೂ ಏನು? – ಎಂಬುದನ್ನು ಸ್ಪಷ್ಟವಾಗಿ ಹೇಳಿರಿ.

ನೀವು ಕುತ್ಸಿತಮಾರ್ಗದಿಂದ ನಗರಪ್ರವೇಶವನ್ನು ಮಾಡಿರುವುದೇ ಅಲ್ಲದೇ ಅರಮನೆಗೆ ಬಂದಾಗ ನನ್ನ ಪೂಜೆಯನ್ನೂ ಸ್ವೀಕರಿಸಲಿಲ್ಲ. ಇದಕ್ಕಾದರೂ ಕಾರಣವೇನು? ನನ್ನನ್ನರಸಿ ಏಕೆ ಬಂದಿರುವಿರಿ? ಎಲ್ಲವನ್ನೂ ವಿಶದವಾಗಿ ತಿಳಿಸಿರಿ."

ಜರಾಸಂಧನ ಮಾತುಗಳನ್ನು ಕೇಳಿ ನೀತಿವಿಶಾರದನಾದ ಶ್ರೀಕೃಷ್ಣನು ಯಥಾಸೂಕ್ತವಾಗಿ ಉತ್ತರಿಸಿದನು.:

"ಮಹಾರಾಜ! ನಮ್ಮನ್ನು ನೀನು ಸ್ನಾತಕವ್ರತಾನುಷ್ಠಾತೃಗಳೆಂದೇ ಭಾವಿಸು. ಆದರೆ ಸ್ನಾತಕವ್ರತವು ಬ್ರಾಹ್ಮಣರಿಗೆ ಮಾತ್ರವೇ ಹೇಳಲ್ಪಟ್ಟಿರುವುದಿಲ್ಲ. ನನಗೆ ತಿಳಿದಿರುವಂತೆ ಈ ವ್ರತವನ್ನು ಕ್ಷತ್ರಿಯ-ವೈಶ್ಯರೂ ಆಚರಿಸಬಹುದಾಗಿದೆ. ಆದರೆ ಆಯಾ ವರ್ಣದವರು ಈ ವ್ರತಾಚರಣೆಯನ್ನು ಮಾಡುವಾಗ ಅನುಸರಿಸಬೇಕಾದ ಅನೇಕನಿಯಮಗಳೂ ಇವೆ ಮತ್ತು ಅದ ರಿಂದ ಉಂಟಾಗುವ ಫಲವೂ ಆಯಾ ವರ್ಣದ ಧರ್ಮಾನುಸಾರವಾಗಿಯೇ

ಲಭಿಸುವುದು. ಕ್ಷತ್ರಿಯನು ಈ ವ್ರತಾನುಷ್ಠಾನವನ್ನು ಮಾಡುವುದರಿಂದ ಶ್ರೀಮಂತನಾಗುತ್ತಾನೆ. ಪುಷ್ಪಮಾಲೆಯನ್ನು ಧರಿಸಿದವರಿಗೆ ಯಶಸ್ಸು ಸಿದ್ಧಿಸುತ್ತದೆ. ಈ ಕಾರಣದಿಂದಲೇ ನಾವು ಪುಷ್ಪಮಾಲಿಕೆಗಳನ್ನು ಧರಿಸಿದ್ದೇವೆ. ನೀನು ಹೇಳಿದಂತೆಯೇ ಕ್ಷತ್ರಿಯರು ತಮ್ಮ ಶೌರ್ಯವನ್ನು ಬಾಹುಗಳಿಂದ ತೋರುವರೇ ಹೊರತು ಮಾತಿನಿಂದ ತೋರುವುದಿಲ್ಲ. ಆದುದರಿಂದ ಕ್ಷತ್ರಿಯನಾಡುವ ಮಾತುಗಳು ತೀಕ್ಷ್ಣವಾಗಿರುವುದಿಲ್ಲ. ಚತುರ್ಮುಖನು ತನ್ನ ಬಲವನ್ನೇ ಕ್ಷತ್ರಿಯನ ಭುಜಗಳಲ್ಲಿ ನಿಕ್ಷೇಪಿಸಿರುತ್ತಾನೆ. ಕ್ಷತ್ರಿಯಬಲವನ್ನು ನೀನು ನೋಡಬೇಕೆಂದು ಆಶಿಸುವೆಯಾದರೆ ಇಂದೇ ಅದನ್ನೂ ಕಾಣುವೆ, ಜರಾಸಂಧ!

**ಅದ್ವಾರೇಣ ರಿಪೋರ್ಗೇಹಂ ದ್ವಾರೇಣ ಸುಹೃದೋ ಗೃಹಾನ್**
**ಪ್ರವಿಶನ್ತಿ ನರಾ ಧೀರಾಃ ದ್ವಾರಾಣ್ಯೇತಾನಿ ಧರ್ಮತಃ ॥೫೩॥**

ನಾವು ಕುತ್ಸಿತಮಾರ್ಗದಿಂದ ನಗರಪ್ರವೇಶವನ್ನು ಮಾಡಿದೆವೆಂದು ಹೇಳಿದೆಯಲ್ಲವೇ? ಯಾವಾಗಲೂ ಧೀರರಾದವರು ಶತ್ರುಗಳ ಮನೆಯನ್ನು ಪ್ರವೇಶಿಸಬೇಕಾದರೆ ಮಹಾದ್ವಾರದ ಮೂಲಕ ಪ್ರವೇಶಿಸುವುದಿಲ್ಲ. ಮಿತ್ರರಾದವರ ಮನೆಯನ್ನು ಮಾತ್ರವೇ ಮಹಾದ್ವಾರದ ಮೂಲಕ ಪ್ರವೇಶಿಸುತ್ತಾರೆ. ಇದು ಧರ್ಮಸಮ್ಮತವಾಗಿಯೂ ಇದೆ. ನಿನ್ನ ಸತ್ಕಾರವನ್ನು ಸ್ವೀಕರಿಸದಿರುವ ವಿಷಯವಾಗಿ ಹೇಳುವುದಾದರೆ :

**ಕಾರ್ಯವನ್ತೋ ಗೃಹಾನೇತ್ಯ ಶತ್ರುತೋ ನಾರ್ಹಣಾಂ ವಯಮ್**
**ಪ್ರತಿಗೃಹ್ಣೀಮ ತದ್ವಿದ್ಧಿ ಏತನ್ನಃ ಶಾಶ್ವತಂ ವ್ರತಮ್ ॥೫೪॥**

ನಾವು ಒಂದು ಕಾರ್ಯದ ನಿಮಿತ್ತವಾಗಿ ಇಲ್ಲಿಗೆ ಬಂದಿರುವೆವು. ಮೇಲಾಗಿ ನಾವು ಶತ್ರುಗಳಿಂದ ಕೊಡಲ್ಪಡುವ ಸತ್ಕಾರವನ್ನು ಸ್ವೀಕರಿಸುವುದಿಲ್ಲವೆಂಬುದನ್ನೂ ಮನಗಾಣು. ಇದು ನಮ್ಮ ಸನಾತನವಾದ ವ್ರತವಾಗಿರುವುದು."

ಇಗನೆಯ ಅಧ್ಯಾಯವು ಮುಗಿಯಿತು.

## ಜರಾಸಂಧ-ಕೃಷ್ಣರ ಸಂವಾದ : ಜರಾಸಂಧನ ಯುದ್ಧಸಿದ್ಧತೆ : ಜರಾಸಂಧನೊಡನೆ ಶ್ರೀಕೃಷ್ಣನ ವೈರದ ಮೂಲಕಾರಣದ ಕಥನ

ಪಾರಿಕ್ಷಿತ! ಕೃಷ್ಣನ ಮಾತಿನಲ್ಲಿ ಜರಾಸಂಧನನ್ನು ಯುದ್ಧಕ್ಕೆ ಆಹ್ವಾನಿಸುವ ಅಭಿಪ್ರಾಯವು ಮೂಡಿದ್ದಿತು. ಅದನ್ನು ಜರಾಸಂಧನು ಗ್ರಹಿಸಿದನು.

ಭೀಮ-ಪಾರ್ಥ-ಶ್ರೀಕೃಷ್ಣರು ಸ್ನಾತಕವೇಷಧಾರಿಗಳಾಗಿ ಬಂದಿರುವರಲ್ಲವೇ? ಜರಾಸಂಧನು ಅವರನ್ನು ಸ್ನಾತಕರೆಂದೇ ಬಗೆದು ಉತ್ತರಿಸಿದನು :

"ನಾನು ನನ್ನ ಹಿಂದಿನ ಆಗು-ಹೋಗುಗಳನ್ನು ಹಲವು ಬಾರಿ ಸ್ಮರಿಸಿಕೊಂಡರೂ ನಿಮ್ಮೊಡನೆ ಹಗೆತನವನ್ನು ಕಟ್ಟಿಕೊಂಡ ಪ್ರಸಂಗವು ನನ್ನ ಸ್ಮರಣೆಗೆ ಬಾರದಾಗಿದೆ. ನಾನು ನಿಮಗೆ ಯಾವ ವಿಧದಲ್ಲಿಯೂ, ಯಾವ ಕಾಲದಲ್ಲಿಯೂ ತೊಂದರೆಯನ್ನುಂಟುಮಾಡಿರುವುದಿಲ್ಲ. ಹೀಗಿರುವಾಗ ನಿಷ್ಕಳಂಕನಾದ, ಪಾಪರಹಿತನಾದ ನನ್ನನ್ನು 'ವೈರೀ' ಎಂದೇಕೆ ಭಾವಿಸುವಿರಿ? ನಿಮ್ಮ ಆರೋಪಣೆಯಿಂದಾಗಿ ನನ್ನ ಮನಸ್ಸು ಬಹಳವಾಗಿ ತಲ್ಲಣಿಸುತ್ತಿದೆ. ಏಕೆಂದರೆ : ಕ್ಷತ್ರಿಯನಾದವನು ಅತಿರಥ-ಮಹಾರಥನೆನಿಸಿದ್ದರೂ, ನೀತಿಶಾಸ್ತ್ರ ವಿಶಾರದನಾಗಿದ್ದರೂ ಧರ್ಮಾರ್ಥ-ಕಾಮ-ಮೋಕ್ಷಗಳಿಗೆ ಸಾಧನಭೂತರಾದ ಬ್ರಾಹ್ಮಣರನ್ನು ಹಿಂಸಿಸುವುದರಿಂದ ಪಾಪಭೂಯಿಷ್ಠನಾಗುತ್ತಾನೆ. ಅಂತಹವನಿಗೆ ಶ್ರೇಯಃ-ಪ್ರೇಯಗಳು ಖಂಡಿತವಾಗಿಯೂ ಲಭಿಸುವುದಿಲ್ಲ.

**ತ್ರೈಲೋಕ್ಯೇ ಕ್ಷತ್ರಧರ್ಮೋ ಹಿ ಶ್ರೇಯಾನ್ವೈ ಸಾಧುಚಾರಿಣಾಮ್।**
**ನಾನ್ಯಂ ಧರ್ಮಂ ಪ್ರಶಂಸನ್ತಿ ಯೇ ಚ ಧರ್ಮವಿದೋ ಜನಾಃ ॥೫॥**

ಸತ್ಕರ್ಮನಿಷ್ಠರಾದ ಕ್ಷತ್ರಿಯರಿಗೆ ಕ್ಷತ್ರಧರ್ಮವೇ ಮೂರು ಲೋಕಗಳಲ್ಲಿಯೂ ಅತ್ಯಂತಶ್ರೇಷ್ಠವಾದುದು. ಧರ್ಮವಿದರಾದವರು ಕ್ಷತ್ರಧರ್ಮವನ್ನು ಬಿಟ್ಟು ಬೇರಾವ ಧರ್ಮವನ್ನೂ ಪ್ರಶಂಸೆಮಾಡುವುದಿಲ್ಲ.

ಅಂತಹ ಕ್ಷತ್ರಧರ್ಮದಲ್ಲಿ ನಿರತನಾಗಿರುವ ನಾನು ನನ್ನ ಆಳ್ವಿಕೆಗೆ

ಒಳಪಟ್ಟಿರುವ ಪ್ರಜೆಗಳನ್ನು ಯಾವ ರೀತಿಯಲ್ಲಿಯೂ ಹಿಂಸಿಸುತ್ತಿಲ್ಲ. ನೀವು ಪ್ರಮಾದದಿಂದಾಗಿ ವಾಸ್ತವಾಂಶಕ್ಕೆ ವೈಪರೀತ್ಯವನ್ನು ಕಲ್ಪಿಸಿಕೊಂಡು ಹೇಳುತ್ತಿರುವಿರಿ."

ಶ್ರೀಕೃಷ್ಣನು ಹೇಳುತ್ತಾನೆ :

"ಮಹಾಬಾಹುವೇ! ಕ್ಷತ್ರಿಯವಂಶಕ್ಕೆ ತಿಲಕಪ್ರಾಯನಾಗಿರುವ, ಧರ್ಮಜ್ಞನಾದ ರಾಜನೊಬ್ಬನಿರುವನು. ಅವನು ತನ್ನ ವಂಶದ ಗೌರವವನ್ನು ಉಳಿಸಿಕೊಳ್ಳಬೇಕೆಂಬ ಅಭಿಲಾಷೆಯಿಂದಾಗಿ ನಿನ್ನಲ್ಲಿಗೆ ನಮ್ಮನ್ನು ಕಳುಹಿಸಿಕೊಟ್ಟಿರುವನು. ಅವನ ಆಜ್ಞಾಧಾರಕರಾಗಿ ನಾವಿಲ್ಲಿಗೆ ಬಂದಿರುವೆವು. ಜರಾಸಂಧ! ನೀನು ಪಾಪರಹಿತನೆಂದೂ, ನಿನ್ನ ಆಶ್ರಿತರಿಗೆ ಯಾವಾಗಲೂ ತೊಂದರೆಯನ್ನುಂಟುಮಾಡಿಲ್ಲವೆಂದೂ ಹೇಳಿದೆಯಲ್ಲವೇ? ನೀನು ಪ್ರಪಂಚದ ನೂರಾರು ರಾಜ-ಮಹಾರಾಜರನ್ನು ಗೆದ್ದು, ಸೆರೆಹಿಡಿದು ತಂದಿರುವೆ. ನೀನು ರಾಜರನ್ನು ಗೆಲ್ಲಬಹುದು. ಅವರನ್ನು ಆಶ್ರಿತರನ್ನಾಗಿಯೂ ಮಾಡಿಕೊಳ್ಳಬಹುದು. ಆದರೆ ಧರ್ಮಾತ್ಮರಾದ ರಾಜರನ್ನು ಬಂದಿಗಳಂತೆ ಸೆರೆಹಿಡಿದಿಟ್ಟಿರುವುದು ಪಾಪಕಾರ್ಯವಾಗುವುದಿಲ್ಲವೇ? ಈ ವಿಷಯದಲ್ಲಿ ನೀನು ನಿರಪರಾಧಿಯೆಂದು ಹೇಗೆ ತಾನೇ ಹೇಳಿಕೊಳ್ಳುವೆ? ಜರಾಸಂಧ! ಇದಕ್ಕಿಂತಲೂ ಮಿಗಿಲಾಗಿ ಆ ರಾಜರನ್ನು ನೀನು ಬಂದಿಗಳನ್ನಾಗಿಯೇ ಸೆರೆಯಲ್ಲಿಟ್ಟಿರುವುದಿಲ್ಲ. ಅವರೆಲ್ಲರನ್ನೂ ರುದ್ರದೇವನಿಗೆ ಆಹುತಿಕೊಡಲೂ ನಿಶ್ಚಯಿಸಿ, ರಾಜರನ್ನು ಯಾಗಪಶುಗಳನ್ನಾಗಿ ಪರಿವರ್ತನೆಮಾಡಲಿರುವೆಯಲ್ಲವೇ? ಇದಕ್ಕಿಂತಲೂ ಕ್ರೂರಕರ್ಮವು ಮತ್ತೊಂದಿರುವುದೇ?

ಉದಾಸೀನತೆಯಿಂದಿದ್ದರೆ ನೀನು ಮಾಡಲಿರುವ ಈ ಕ್ರೂರಕರ್ಮದಲ್ಲಿ ನಾವೂ ಭಾಗಿಗಳಾದಂತಾಗುತ್ತದೆ. ನಾವು ಧರ್ಮಜ್ಞರಾಗಿರುವುದರಿಂದ ಧರ್ಮರಕ್ಷಣೆಯೇ ನಮ್ಮ ಮುಖ್ಯಕರ್ತವ್ಯವಾಗಿದೆ. ಧರ್ಮರಕ್ಷಣೆಯನ್ನು ಮಾಡಲು ಸಾಮರ್ಥ್ಯವಿರುವಾಗ ನೀನು ಮಾಡುತ್ತಿರುವ ಅಧರ್ಮಕಾರ್ಯವನ್ನು ನಾವು ಪ್ರತಿಬಂಧಿಸದಿದ್ದರೆ–ನಾವೂ ಈ ಅಕಾರ್ಯವನ್ನು

ಸಮ್ಮತಿಸಿದಂತಾಗುತ್ತದೆ. ಮೇಲಾಗಿ ನೀನು ಮಾಡಲಿರುವ ಕಾರ್ಯದಲ್ಲಿ ಲೇಶವಾದರೂ ಧರ್ಮವಿದೆಯೇ? – ಎಂಬುದನ್ನು ಪರ್ಯಾಲೋಚಿಸಿದರೆ :

**ಮನುಷ್ಯಾಣಾಂ ಸಮಾಲಮ್ಭೋ ನ ಚ ದೃಷ್ಟಃ ಕದಾಚನ**
**ಸ ಕಥಂ ಮಾನುಷೈರ್ದೇವಂ ಯಷ್ಟುಮಿಚ್ಛಸಿ ಶಂಕರಮ್ ॥೧೧॥**

ಮಹಾರಾಜ! ದೇವತೆಗಳಿಗೆ ನರಬಲಿಕೊಡುವುದನ್ನು ನಾವಿದುವರೆಗೂ ಕಂಡೂ ಇಲ್ಲ ; ಕೇಳಿಯೂ ಇಲ್ಲ. ಹೀಗಿರುವಾಗ ನೀನು ಯಾವ ಕಾರಣದಿಂದಾಗಿ ದೇವದೇವನಾದ ಶಂಕರನಿಗೆ ನರಬಲಿಯನ್ನು ಕೊಡಲು ನಿಶ್ಚಯಿಸಿರುವೆ?

**ಸವರ್ಣೋ ಹಿ ಸವರ್ಣಾನಾಂ ಪಶುಸಂಜ್ಞಾಂ ಕರಿಷ್ಯಸಿ।**
**ಕೋಽನ್ಯ ಏವಂ ಯಥಾ ಹಿ ತ್ವಂ ಜರಾಸಂಧ ವೃಥಾಮತಿಃ ॥೧೨॥**

ಜರಾಸಂಧ! ನೀನು ನಿನ್ನ ವಂಶೀಯರಾದ (ನಿನ್ನ ವರ್ಣದವರೇ ಆದ) ಕ್ಷತ್ರಿಯರನ್ನೇ ಬಲಿಪಶುಗಳಂತೆ ಭಾವಿಸಿರುವೆಯಲ್ಲಾ! ಇಂತಹ ಹೀನಬುದ್ಧಿಯುಳ್ಳ ರಾಜನು ನಿನ್ನ ಹೊರತಾಗಿ ಬೇರಾವನಿದ್ದಾನೆ?

**ಯಸ್ಯಾಂ ಯಸ್ಯಾಮವಸ್ಥಾಯಾಂ ಯದ್ಯತ್ಕರ್ಮ ಕರೋತಿ ಯಃ।**
**ತಸ್ಯಾಂ ತಸ್ಯಾಮವಸ್ಥಾಯಾಂ ತತ್ಫಲಂ ಸಮವಾಪ್ನುಯಾತ್ ॥೧೩॥**

ಯಾವನು ಯಾವ ಯಾವ ಕಾಲದಲ್ಲಿ ಯಾವ ಯಾವ ಕಾರ್ಯವನ್ನು ಮಾಡುವನೋ ಅವನು ಆಯಾ ಕಾಲಕ್ಕೆ ಅನುಗುಣವಾದ ಮತ್ತು ಆಯಾ ಕರ್ಮಕ್ಕೆ ಅನುಗುಣವಾದ ಫಲವನ್ನೇ ಹೊಂದುತ್ತಾನೆ.

ಕಷ್ಟಕ್ಕೊಳಗಾಗಿರುವ ನಮ್ಮ ಬಾಂಧವರ ರಕ್ಷಣೆಗಾಗಿಯೂ, ನಮ್ಮ ಕೀರ್ತಿಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿಯೂ, ನಮ್ಮ ಬಂಧುಗಳ ಕೊಲೆಗಾರನಾದ ನಿನ್ನನ್ನು ಸಂಹರಿಸುವ ಸಲುವಾಗಿಯೂ – ನಾವಿಲ್ಲಿಗೆ ಬಂದಿರುತ್ತೇವೆ. ಪ್ರಪಂಚದಲ್ಲಿ ನಿನಗೆ ಸಮಾನರು ಬೇರೊಬ್ಬರಿಲ್ಲವೆಂದು ನೀನು ಎಣಿಸಿರುವೆಯಲ್ಲವೇ? ನಿನ್ನ ಈ ನಿರ್ಧಾರವು ನಿನಗಾಗಿರುವ ಬುದ್ಧಿವಿಪ್ಲವಕ್ಕೆ ದ್ಯೋತಕವಾಗಿದೆ.

ತನ್ನ ವಂಶದ ಪ್ರತಿಷ್ಠೆಯು ಎಷ್ಟೆಂಬುದನ್ನು ತಿಳಿದಿರುವ ಮಹಾತ್ಮ

ನಾದ ಯಾವ ಕ್ಷತ್ರಿಯರಾಜನು ತಾನೇ ರಣಾಂಗಣದಲ್ಲಿ ಅಸುವನ್ನು ತೊರೆದು ಅವ್ಯಯವಾದ ಸ್ವರ್ಗಕ್ಕೆ ಹೋಗಲು ಇಚ್ಛಿಸದಿರುವನು? ಸ್ವರ್ಗಪ್ರಾಪ್ತಿಗಾಗಿ ಅನೇಕ ಯಜ್ಞ-ಯಾಗಾದಿಗಳನ್ನೂ ಮಾಡುತ್ತಾರೆ. ಆದರೆ:

**ಸ್ವರ್ಗಂ ಹ್ಯೇವ ಸಮಾಸ್ಥಾಯ ರಣಯಜ್ಞೇಷು ದೀಕ್ಷಿತಾಃ।**
**ಜಯನ್ತಿ ಕ್ಷತ್ರಿಯಾ ಲೋಕಾಂಸ್ತದ್ವಿದ್ಧಿ ಮನುಜರ್ಷಭ ॥೧೭॥**

ಮನುಜಶ್ರೇಷ್ಠನೇ! ಕ್ಷತ್ರಿಯನಾದವನು ಸಮರವನ್ನೇ ಒಂದು ಯಜ್ಞವನ್ನಾಗಿ ಭಾವಿಸಿ ಸ್ವರ್ಗೈಕದೃಷ್ಟಿಯುಳ್ಳವನಾಗಿ ಬ್ರಹ್ಮಾಂಡವನ್ನೇ ಜಯಿಸುತ್ತಾನೆ. (ಉತ್ತಮಲೋಕಗಳನ್ನು ಪಡೆಯುತ್ತಾನೆ.)

**ಸ್ವರ್ಗಯೋನಿರ್ಮಹದ್ಬ್ರಹ್ಮ ಸ್ವರ್ಗಯೋನಿರ್ಮಹದ್ಯಶಃ।**
**ಸ್ವರ್ಗಯೋನಿಸ್ತಪೋ ಯುದ್ಧೇ ಮೃತ್ಯುಃ ಸೋಽವ್ಯಭಿಚಾರವಾನ್ ॥೧೮॥**

ವೇದಾಧ್ಯಯನವನ್ನು ಮಾಡುವುದು, ತಪಶ್ಚರ್ಯೆಯನ್ನು ಮಾಡುವುದು–ಇವೆಲ್ಲವೂ ಸ್ವರ್ಗಪ್ರಾಪ್ತಿಗೆ ಸಾಧನಗಳಾಗುತ್ತವೆ. ಆದರೆ ವೇದಾಧ್ಯಯನ, ಯಶಸ್ಸಿನ ಆರ್ಜನೆ (ಯಶಃಪ್ರಾಪ್ತಿ), ತಪಶ್ಚರ್ಯೆ – ಈ ಮೂರು ಕ್ರಿಯೆಗಳಿಂದಲೂ ಕೆಲವೊಂದು ಕಾರಣಗಳಿಂದ (ವೇದವನ್ನು ಸರಿಯಾಗಿ ಉಚ್ಚಾರಣೆ ಮಾಡದಿರುವುದು, ಅಪಸ್ವರವನ್ನು ಹೇಳುವುದು – ಇತ್ಯಾದಿ ದೋಷಗಳಿಂದ) ಸ್ವರ್ಗಪ್ರಾಪ್ತಿಯಾಗದಿರಬಹುದು. ಆದರೆ ರಣಾಂಗಣದಲ್ಲಿ ಅಸುವನ್ನು ನೀಗುವುದರಿಂದ ಸ್ವರ್ಗಪ್ರಾಪ್ತಿಯು ಶತಶಃಸಿದ್ಧ. ಇದರಲ್ಲಾವ ಸಂಶಯವೂ ಇಲ್ಲ. ಇಂದ್ರನ ಪ್ರಾಸಾದವಾದ ವೈಜಯಂತವೆಂಬ ಅರಮನೆಯನ್ನು ಪ್ರವೇಶಿಸಲು ಯುದ್ಧದಲ್ಲಿ ಅಸುವನ್ನು ನೀಗುವುದೇ ಸರಿಯಾದ ಮಾರ್ಗ. ಈ ವಿಧವಾದ ನಿಶ್ಚಯವನ್ನು ಮಾಡಿಯೇ ಶತಕ್ರತುವು ಅಸುರರೆಲ್ಲರನ್ನೂ ಜಯಿಸಿ ತ್ರೈಲೋಕ್ಯಾಧಿಪತಿಯಾದನು.

ಜರಾಸಂಧ! ನಮ್ಮೊಡನೆ ಮಾಡಲಿರುವ ಯುದ್ಧವೂ ನಿನಗೆ ಸ್ವರ್ಗ ಪ್ರಾಪ್ತಿಗೆ ಸಾಧಕವಾಗುತ್ತದೆ. ಸೆಣೆಸಾಟದಲ್ಲಿಯೂ ಪಾತ್ರಾಪಾತ್ರಗಳನ್ನು ವಿವೇಚಿಸಬೇಕು. ಅಸಂಖ್ಯಾತವಾದ ಮಗಧಸೈನ್ಯದಿಂದ ಕೂಡಿರುವ ನೀನು ನಿನ್ನೊಬ್ಬನಲ್ಲಿಯೇ ಮಹಾಪರಾಕ್ರಮವಿರುವುದೆಂದು ಭಾವಿಸಿ–ಇತರ ರಾಜ

ರನ್ನೆಂದಿಗೂ ತುಚ್ಛೀಕರಿಸಬಾರದು. ಪರಾಕ್ರಮವೆಂಬುದು ಪ್ರತಿಯೊಬ್ಬನಲ್ಲಿಯೂ ಇರುವುದು. ಕೆಲವರಲ್ಲಿ ನಿನಗೆ ಸಮಾನವಾದ ಪರಾಕ್ರಮವಿರಬಹುದು ಮತ್ತೆ ಕೆಲವರಲ್ಲಿ ನಿನ್ನಲ್ಲಿರುವುದಕ್ಕಿಂತಲೂ, ಮಿಗಿಲಾದ ಪರಾಕ್ರಮವೇ ಇರಬಹುದು. ಅಂತಹ ಪರಾಕ್ರಮಿಗಳು, ಸಾಹಸಿಗಳು ಪ್ರಕಾಶಕ್ಕೆ ಬರುವವರೆಗೂ ನೀನು ಪರಾಕ್ರಮದಲ್ಲಿ ಅದ್ವಿತೀಯನೆಂಬ ಭ್ರಾಂತಿಯನ್ನು ಹೊಂದಿರುವೆ.

ಮಾಗಧ! ಇಂದು ನಾವು ನಿನ್ನನ್ನು ಎದುರಿಸಲು ಬಂದಿರುತ್ತೇವೆ. ಈ ಕಡೆಯ ಸನ್ನಿವೇಶದಲ್ಲಿಯೂ ನಾವು ನಿನ್ನನ್ನೆಚ್ಚರಿಸುವ ಇಚ್ಛೆಯುಳ್ಳವರಾಗಿದ್ದೇವೆ.

ಜರಾಸಂಧ! ಬುದ್ಧಿಹೀನನಾಗಿ ನಿನಗೆ ಸಮಾನವಾದ ಪರಾಕ್ರಮವಿರುವ ವರನ್ನು ಅನಾದರಣೆ ಮಾಡಬೇಡ. ನಿನ್ನ ಪ್ರೌಢಿಮೆಯನ್ನು ಬದಿಗಿಡು. ನಿನ್ನ ಅಹಂಕಾರದ ಕಾರಣದಿಂದಾಗಿ ಬಂಧು-ಮಿತ್ರ-ಸುತಾಮಾತ್ಯ-ಸೇನಾ ಪತಿಗಳೊಡನೆ ನೀನು ಯಮಾಲಯಕ್ಕೆ ಹೋಗಬೇಕಾದೀತು. ಅದಕ್ಕೆ ಅವಕಾಶವನ್ನೀಯಬೇಡ. ದಂಭೋದ್ಭವ, ಕಾರ್ತವೀರ್ಯ, ಉತ್ತರ, ಬೃಹದ್ರಥ–ಇವರೆಲ್ಲರೂ ನಿನ್ನಂತೆಯೇ ತಮಗಿಂತಲೂ ಶ್ರೇಷ್ಠರೆನಿಸಿದವರನ್ನು ಅನಾದರಣೆಮಾಡಿದ ಕಾರಣದಿಂದಾಗಿ ವಿನಾಶಹೊಂದಿದರು.

ನೀನು ಬಂಧನದಲ್ಲಿಟ್ಟಿರುವ ರಾಜರ ವಿಮೋಚನೆಗಾಗಿ ಬಂದಿರುವ ನಾವು ಬ್ರಾಹ್ಮಣರಲ್ಲ. ನಾನೇ ಹೃಷೀಕೇಶನು. ನನ್ನನ್ನು ಶೌರಿಯೆಂದೂ ಕರೆಯುತ್ತಾರೆ. ನನ್ನೊಡನೆ ಬಂದಿರುವ ಈ ಇಬ್ಬರೂ ಮಾನವರಲ್ಲಿಯೇ ಮಹಾಪರಾಕ್ರಮಿಗಳಾಗಿರುವ ಭೀಮಾರ್ಜುನರು. ಪಾಂಡುವಿನ ಮಕ್ಕಳು. ನಾನಿವರಿಗೆ ಸೋದರಮಾವನ ಮಗನಾಗಬೇಕು. ನಿನಗೆ ಶತ್ರುವಾದ ಶ್ರೀಕೃಷ್ಣನೇ ನಾನು. ನಾವು ಮೂವರೂ ನಿನ್ನನ್ನು ಎದುರಿಸಲು ಬಂದಿರುತ್ತೇವೆ. ನಮ್ಮೊಡನೆ ಯುದ್ಧಮಾಡಿ ಯಮಾಲಯವನ್ನಾದರೂ ಸೇರು ; ಅಥವಾ ಬಂಧಿಸಿಟ್ಟಿರುವ ರಾಜರನ್ನು ಬಿಡುಗಡೆಮಾಡಿ ಪ್ರಾಣವನ್ನಾದರೂ ರಕ್ಷಣೆಮಾಡಿಕೋ. ಈ ಎರಡು ಮಾರ್ಗಗಳನ್ನು ಬಿಟ್ಟು ಬೇರಾವ ಮಾರ್ಗವೂ ನಿನಗಿರುವುದಿಲ್ಲ."

ಜರಾಸಂಧನೂ ವೀರೋಚಿತವಾದ ರೀತಿಯಲ್ಲಿಯೇ ಉತ್ತರಿಸಿದನು :

"ಹೃಷೀಕೇಶ! ನಾನು ಯಾವೊಬ್ಬ ರಾಜನನ್ನೂ ಮೊದಲು ಪರಾಭವಗೊಳಿಸದೇ ಬಂಧಿಸಿರುವುದಿಲ್ಲ. ನಾನು ನನ್ನ ಸೆರೆಮನೆಯಲ್ಲಿ ಬಂಧಿಸಿಟ್ಟಿರುವ ಪ್ರತಿಯೊಬ್ಬ ರಾಜನೂ ಪರಾಕ್ರಮಿಯಾಗಿದ್ದಾನೆ. ಆದರೂ ಯುದ್ಧದಲ್ಲಿ ನನ್ನಿಂದ ಪರಾಭವವನ್ನು ಹೊಂದಿದ್ದಾನೆ. ಪರಾಕ್ರಮದಿಂದ ಇತರ ರಾಜರೊಡನೆ ಕಾದಾಡಿ, ಅವರನ್ನು ಪರಾಭವಗೊಳಿಸಿ, ಪರಾಜಿತರಾದ ರಾಜರನ್ನು ದಾಸರಂತೆ ಕಾಣುವುದು ಕ್ಷತ್ರಿಯಧರ್ಮಕ್ಕೆ ಉಚಿತವಾಗಿಯೇ ಇದೆ. ಪರಾಜಿತರಾದ ರಾಜರೆಲ್ಲರನ್ನೂ ಬಂಧಿಸಿ, ಪಶುಪತಿಗೆ ಬಲಿಕೊಡಬೇಕೆಂದು ನಿಶ್ಚಯಿಸಿರುವ ನಾನು ಇಂದು ಕೇವಲ ಪ್ರಾಣಭಯಕ್ಕಾಗಿ ಅವರನ್ನು ವಿಮೋಚನೆಮಾಡಲೇ? ಕೃಷ್ಣ! ಕ್ಷತ್ರಿಯಾಧಮನಿಗೆ ಅದು ಸರಿಯೆನಿಸಬಹುದೇ ಹೊರತು ಕ್ಷತ್ರಿಯಸತ್ತಮನಿಗದು ಸರಿಯೆನಿಸಲಾರದು. ಸೈನ್ಯಸಮೇತನಾಗಿ ಅಥವಾ ಸೈನ್ಯವಿಲ್ಲದೆಯೇ ಏಕಾಕಿಯಾಗಿ ಯುದ್ಧಮಾಡಲು ಸಿದ್ಧನಿರುವೆನು. ನೀವು ಮೂವರೂ ಏಕಕಾಲದಲ್ಲಿ ನನ್ನ ಮೇಲೆ ಬೀಳುವುದಾದರೂ, ಇಬ್ಬರು ಮೇಲೆ ಬೀಳುವುದಾದರೂ ಅಥವಾ ಒಬ್ಬನೇ ಮೇಲೆ ಬೀಳುವುದಾದರೂ ಎದುರಿಸಲು ಸಿದ್ಧನಿರುವೆನು, ಕೃಷ್ಣ!"

ಹೀಗೆ ಹೇಳಿ ಜರಾಸಂಧನು ತನ್ನ ಮಗನಾದ ಸಹದೇವನಿಗೆ ರಾಜ್ಯಾಭಿಷೇಕಮಾಡುವಂತೆ ಮಂತ್ರಿಗಳಿಗೆ ಆಜ್ಞೆಯನ್ನಿತ್ತನು. ಯುದ್ಧವು ಆರಂಭವಾಗುವ ಮೊದಲು, ಹಂಸ-ಡಿಂಭಕರೆಂದು ಲೋಕದಲ್ಲಿ ಪ್ರಸಿದ್ಧರಾಗಿದ್ದ, ಹಿಂದೆ ಯುದ್ಧದಲ್ಲಿ ಮೃತರಾದ ಕೌಶಿಕ-ಚಿತ್ರಸೇನರೆಂಬ ತನ್ನ ಸೇನಾಪತಿಗಳನ್ನು ಸ್ಮರಿಸಿಕೊಂಡನು.

ಜನಮೇಜಯ! ಪುರುಷಶಾರ್ದೂಲನಾದ, ಸತ್ಯಸಂಕಲ್ಪನಾದ, ದುಂದುಭಿಭಂಜಕನಾದ, ಹಲಧರಸೋದರನಾದ, ಆತ್ಮಜ್ಞಾನಿಗಳಿಗೆಲ್ಲರಿಗೂ ನೇತಾರನಾದ ಶೌರಿಯು ಬ್ರಹ್ಮನ ಸಂಕಲ್ಪಾನುಸಾರವಾಗಿ ಮಹಾಪರಾಕ್ರಮಿಯಾದ ಜರಾಸಂಧನು ಭೀಮನಿಂದಲೇ ಹತನಾಗಬೇಕೆಂದೂ–ಯಾದವರಿಂದ ಜರಾಸಂಧನು ಅವಸಾನಹೊಂದಕೂಡದೆಂದೂ ನಿಶ್ಚಯಿಸಿದನೇ

ಹೊರತು–ಪರಾತ್ಪರನಾದ ಶ್ರೀಕೃಷ್ಣನಿಗೆ ಜರಾಸಂಧನನ್ನು ಸಂಹರಿಸಲು ಶಕ್ತಿ ಪರಾಕ್ರಮಗಳು ಇಲ್ಲದಿರಲಿಲ್ಲ."

೨೨ನೆಯ ಅಧ್ಯಾಯವು ಮುಗಿಯಿತು.

೨೩ನೆಯ ಅಧ್ಯಾಯ ಜರಾಸಂಧವಧಪರ್ವ (ಮುಂದುವರಿದಿದೆ.)

## ಭೀಮಸೇನನೊಡನೆ ಯುದ್ಧಮಾಡಲು ಜರಾಸಂಧನ ನಿಶ್ಚಯ : ಭೀಮ–ಜರಾಸಂಧರ ದ್ವಂದ್ವಯುದ್ಧ : ಜರಾಸಂಧನ ಪರಾಜಯ

"ಜನಮೇಜಯ! ಜರಾಸಂಧರಾಜನು ಆಗಮಿಸಿರುವ 'ಅತಿಥಿ'ಗಳೊಡನೆ ಯುದ್ಧಮಾಡಲು ನಿಶ್ಚಯಿಸಿದನಂತರದಲ್ಲಿ ವಾಗ್ಮಿಯಾದ ಅಧೋಕ್ಷಜನಾದ ಶ್ರೀಕೃಷ್ಣನು ಜರಾಸಂಧನಿಗೆ ಹೇಳಿದನು :

"ಜರಾಸಂಧ! ನಮ್ಮ ಮೂವರಲ್ಲಿ ನೀನು ಯಾರೊಡನೆ ಯುದ್ಧ ಮಾಡಲು ಇಚ್ಛಿಸುವೆ?"

ಸಿಂಹವು ಆನೆಯೊಡನೆ ಸೆಣೆಸುವುದೇ ಹೊರತು ಚಿರತೆಯೊಡನೆ ಸೆಣೆಸಲಾರದು. ಕೃಷ್ಣಾರ್ಜುನರಿಬ್ಬರೂ ಅಪ್ರತಿಮಸಾಹಸಿಗಳಾಗಿದ್ದರೂ ಜರಾಸಂಧನ ದೃಷ್ಟಿಯಲ್ಲಿ ಅವರು ಅವನಿಗೆ ಅಸಮಾನರು. ಆದುದರಿಂದ ಜರಾಸಂಧನು ಭೀಮನೊಡನೆಯೇ ದ್ವಂದ್ವಯುದ್ಧಮಾಡುವ ತನ್ನ ಆಶಯವನ್ನು ವ್ಯಕ್ತಪಡಿಸಿದನು.

ರಾಜನು ಯುದ್ಧಕ್ಕೆ ಸಿದ್ಧನಾಗಿರುವ ವಾರ್ತೆಯು ತಿಳಿದೊಡನೆಯೇ ಪುರೋಹಿತನೊಬ್ಬನು ಗೋರೋಚನವನ್ನೂ, ಪುಷ್ಪಹಾರವನ್ನೂ, ನವಚೇತನವನ್ನೀಯುವ ಮತ್ತು ಶರೀರದ ವೇದನೆಯನ್ನು ಕ್ಷಣಮಾತ್ರದಲ್ಲಿ ನಿವಾರಣೆಮಾಡುವ ಓಷಧಿವಿಶೇಷಗಳನ್ನೂ, ಇನ್ನೂ ಇತರ ಮಂಗಳದ್ರವ್ಯಗಳನ್ನೂ ತಂದು ಜರಾಸಂಧನಿಗೆ ಅರ್ಪಿಸಿದನು. ಬ್ರಾಹ್ಮಣರು ರಾಜನ ವಿಜಯಕ್ಕಾಗಿ ಹವನಾದಿಗಳನ್ನು ನಡೆಸಿ ಆಶೀರ್ವದಿಸಿದರು.

ಜರಾಸಂಧನು ತನ್ನ ಕಿರೀಟವನ್ನು ತೆಗೆದಿಟ್ಟು, ಮುಡಿಯನ್ನು ಬಿಗಿದು – ಎಲ್ಲೆಯನ್ನು ಮೀರಿ ಬರುವ ಸಮುದ್ರರಾಜನಂತೆ–ಭೀಮನೊಡನೆ ದ್ವಂದ್ವ ಯುದ್ಧಕ್ಕೆ ಸಿದ್ಧನಾಗಿ ನಿಂತನು. ಎದುರಾಳಿಯಾದ ಭೀಮನನ್ನು ಕುರಿತು

"ಭೀಮಸೇನ! ನಾನು ನಿನ್ನೊಡನೆ ಮಾತ್ರವೇ ದ್ವಂದ್ವಯುದ್ಧಮಾಡಲು ಇಚ್ಛಿಸುತ್ತೇನೆ. ಏಕೆಂದರೆ : ನನಗಿಂತಲೂ ಹೆಚ್ಚು ಬಲಶಾಲಿಗಳಾದವರೊಡನೆ ಸೆಣಸಾಡಿ ಸೋಲುವುದೂ ಯಶಸ್ಕರ" – ಎಂದು ಹೇಳುತ್ತಾ – ಹಿಂದೆ ಬಲಾಸುರನು ಇಂದ್ರನ ಮೇಲೆ ನುಗ್ಗಿಹೋದಂತೆ–ಭೀಮನೆಡೆಗೆ ರಭಸದಿಂದ ನುಗ್ಗಿದನು. ಭೀಮನೂ ಶ್ರೀಕೃಷ್ಣನೊಡನೆ ಸಮಾಲೋಚಿಸಿ, ಶ್ರೀಕೃಷ್ಣನು ಮಾಡಿದ ಸ್ವಸ್ತಿವಾಚನವನ್ನು ನತಶಿರನಾಗಿ ಸ್ವೀಕರಿಸಿ, ನುಗ್ಗಿಬರುತ್ತಿದ್ದ ಜರಾಸಂಧನನ್ನು ಮಾರ್ಗಮಧ್ಯದಲ್ಲಿಯೇ ತಡೆದು ನಿಲ್ಲಿಸಿದನು.



ಅತುಲಭುಜಬಲ-ಪರಾಕ್ರಮಗಳಿಂದ ಕೂಡಿದ್ದ ಭೀಮ-ಜರಾಸಂಧರು ಒಬ್ಬರು ಮತ್ತೊಬ್ಬರನ್ನು ಪರಾಜಯಗೊಳಿಸುವ ಅಮಿತೋತ್ಸಾಹದಿಂದ ಕೂಡಿದವರಾಗಿ, ಬಾಹುಗಳನ್ನೇ ಆಯುಧಗಳನ್ನಾಗಿ ಮಾಡಿಕೊಂಡು ದ್ವಂದ್ವಯುದ್ಧವನ್ನು ಪ್ರಾರಂಭಿಸಿದರು.

ಮೊದಲು ಇಬ್ಬರೂ ಕೈಗಳನ್ನು ಪರಸ್ಪರ ಹಿಡಿದುಕೊಂಡು, ಅನಂತರ

ದಲ್ಲಿ ಕಾಲುಗಳನ್ನು ಮುಟ್ಟಿ ನಮಸ್ಕರಿಸಿದರು. ಒಬ್ಬರ ತೋಳುಗಳನ್ನು ಮತ್ತೊಬ್ಬರು ಬಲವಾಗಿ ಹಿಡಿಯುವರು. ಒಬ್ಬರ ಕಾಲುಗಳಿಂದ ಮತ್ತೊಬ್ಬರ ಕಾಲುಗಳನ್ನು ತಿರುಗಿಸುವರು. ಇಬ್ಬರೂ ದೂರ ಸರಿದು ನಿಂತು ತಮ್ಮ ಎರಡು ಭುಜಗಳನ್ನೂ ಅಪ್ಪಳಿಸಿಕೊಳ್ಳುವರು. ಆ ಧ್ವನಿಯು ಅಲ್ಲಿ ನೆರೆದಿದ್ದವರ ಹೃದಯಗಳಲ್ಲಿ ಕಂಪನವನ್ನುಂಟುಮಾಡುವುದಾಗಿದ್ದಿತು. ಒಬ್ಬರು ಮತ್ತೊಬ್ಬರ ಕತ್ತು ಹಿಡಿದು ಬಲವಾಗಿ ನೂಕುವರು. ನಖಾದಿ-ಶಿಖಾಂತದವರೆಗೂ ಒಬ್ಬರು ಮತ್ತೊಬ್ಬರ ಅಂಗಾಂಗಗಳನ್ನು ಅದುಮಿ ಹಿಡಿದು ಘಾಸಿಪಡಿಸುವರು. ಕೆಲವು ಸಮಯಗಳಲ್ಲಿ ಇಬ್ಬರೂ ತಮ್ಮ ಬಾಹುಪಾಶಗಳಿಂದ ಪರಸ್ಪರವಾಗಿ ಬಿಗಿದಪ್ಪುವರು. ಒಬ್ಬರು ಮತ್ತೊಬ್ಬರನ್ನು ಮೇಲೆತ್ತಿ ಅಪ್ಪಳಿಸುವರು. ತಲೆಯನ್ನು ತಲೆಗೂ, ಹಣೆಯನ್ನು ಹಣೆಗೂ ರಭಸವಾಗಿ ಡಿಕ್ಕಿಹೊಡೆದು (ಎರಡು ಕಲ್ಲುಗಳನ್ನು ಬಲವಾಗಿ ಕುಟ್ಟಿದರೆ ಕಿಡಿಗಳು ಬರುವ ರೀತಿಯಲ್ಲಿ) ಮಿಂಚಿನ ಪ್ರಕಾಶವು ಹೊರಸೂಸುವಂತೆ ಮಾಡುವರು. ಒಬ್ಬರು ಮತ್ತೊಬ್ಬರನ್ನು ನಾನಾವಿಧವಾದ 'ಪಟ್ಟು'ಗಳಲ್ಲಿ ಹಿಡಿದು ಕೆಳಗಪ್ಪಳಿಸಿ ಒದೆಯುವರು. ಅದರಿಂದಾಗಿ ಇಬ್ಬರ ನರಕೋಟಿಗಳೂ ಜರ್ಝರಿತವಾಗುತ್ತಿದ್ದುವು. ತಮ್ಮ ಬಲವಾದ ಮುಷ್ಟಿಗಳಿಂದ ಒಬ್ಬರು ಮತ್ತೊಬ್ಬರ ವಿಶಾಲವಾದ ವಕ್ಷಃಸ್ಥಳವನ್ನು ಪ್ರಹರಿಸುವರು. ಅವರು ಗುಡುಗಿನಂತೆ ಗರ್ಜನೆಮಾಡುತ್ತಾ ತಮ್ಮ ನೀಳವಾದ ಬಾಹುಗಳಿಂದ ಯುದ್ಧಮಾಡುತ್ತಿರುವುದನ್ನು ನೋಡಿದರೆ–ಮದಿಸಿದ ಎರಡು ಆನೆಗಳು ಸೊಂಡಿಲುಗಳನ್ನು ಮೇಲೆತ್ತಿ ಕಾಳಗವಾಡುತ್ತಿರುವಂತೆ ಕಾಣುತ್ತಿದ್ದಿತು. ಒಬ್ಬರು ಮತ್ತೊಬ್ಬರ ಪ್ರಹಾರಗಳಿಂದಲೂ ಸೆಳೆದಾಟಗಳಿಂದಲೂ ಕುಪಿತರಾಗಿ–ಎರಡು ಮದಿಸಿದ ಸಿಂಹಗಳು ಪರಸ್ಪರವಾಗಿ ಅವಲೋಕಿಸುತ್ತಾ ನಿಲ್ಲುವಂತೆ ಕ್ಷಣಕಾಲ ದುರ-ದುರನೆ ನೋಡುತ್ತಾ ನಿಲ್ಲುವರು. ಒಬ್ಬರು ಮತ್ತೊಬ್ಬರ ಸೊಂಟವನ್ನು ಹಿಡಿದು ಮೇಲೆತ್ತಿ ಬಹುದೂರಕ್ಕೆ ಬಿಸಾಡುವರು. ಇಬ್ಬರೂ ಮಲ್ಲಯುದ್ಧದಲ್ಲಿ ಪ್ರವೀಣರಾಗಿದ್ದರು. ಒಬ್ಬರು ಮತ್ತೊಬ್ಬರನ್ನು ಸೆಳೆದು ಕೆಳಕ್ಕೆ ಕೆಡುಹಿ ರಭಸದಿಂದ ಅಪ್ಪಳಿಸುತ್ತಿದ್ದರು.

ಪೃಷ್ಠಬಂಧವೆಂಬ ವರಸೆಯನ್ನು ಪ್ರಯೋಗಿಸಿ, ಒಬ್ಬನು ಕೆಳಮುಖವಾಗಿ ಮಲಗಿದಾಗ ಮತ್ತೊಬ್ಬನು ಅವನನ್ನು ಮೇಲ್ಮುಖಮಾಡಲು ಬಹು

ವಾಗಿ ಪ್ರಯತ್ನಿಸುವರು. ಸಂಪೂರ್ಣಮೂರ್ಛನಾ, ಪೂರ್ಣಕುಂಭ ಇವೇ ಮುಂತಾದ ಬಹುಕ್ಲಿಷ್ಟವಾದ ವರಸೆಗಳ ಪ್ರಯೋಗಗಳನ್ನೂ ಮಾಡುವರು. ಹಾಗಲಕಾಯಿ, ಸೌತೇಕಾಯಿ ಮುಂತಾದ ತರಕಾರಿಗಳನ್ನು ಮುರಿಯುವ ರೀತಿಯಲ್ಲಿ ಒಬ್ಬರು ಮತ್ತೊಬ್ಬರ ದೇಹವನ್ನು ಬಗ್ಗಿಸುತ್ತಿದ್ದರು. ಶರೀರದ ಒಂದು ಭಾಗಕ್ಕೆ ಹೊಡೆಯುವ ತೋರಿಕೆಯನ್ನು ಪ್ರಕಟಿಸಿ, ಎದುರಾಳಿಯು ಆ ಅವಯವದ ನಿಗೂಹನಕ್ಕೆ ಪ್ರಯತ್ನಿಸಿದಾಗ ಮತ್ತೊಂದು ಅವಯವಕ್ಕೆ ಪ್ರಹರಿಸುವರು.

ಅತ್ಯದ್ಭುತವಾದ ಮತ್ತು ಭಯಂಕರವಾದ ಆ ಕಾಳಗವನ್ನು ನೋಡಲು ಬ್ರಹ್ಮ-ಕ್ಷತ್ರ-ವೈಶ್ಯ-ಶೂದ್ರರೂ, ಸ್ತ್ರೀ-ವೃದ್ಧ-ಬಾಲರೂ ಅಸಂಖ್ಯಾತಸಂಖ್ಯೆಯಲ್ಲಿ ನೆರೆದಿದ್ದರು. ಆ ಅಖಂಡಜನಸ್ತೋಮವೂ ಬಹಳ ನಿಬಿಡವಾಗಿದ್ದಿತು.

ಇಬ್ಬರು ಜಟ್ಟಿಗಳೂ ಮಾಡುತ್ತಿದ್ದ ಭುಜಪ್ರಹಾರ, ಒಬ್ಬರು ಮತ್ತೊಬ್ಬರ ಕುತ್ತಿಗೆಯನ್ನು ಹಿಡಿದು ನೆಲಕ್ಕುರುಳಿಸುವುದು–ಮುಂತಾದುವುಗಳಿಂದುಂಟಾದ ಮಹಾಶಬ್ದವು ಸಿಡಿಲು ಮತ್ತು ಪರ್ವತಗಳ ಘರ್ಷಣೆಯಿಂದುಂಟಾಗುವ ಶಬ್ದವನ್ನು ಅನುಕರಿಸುತ್ತಿದ್ದಿತು.

ಹೀಗೆ ಕಾಳಗಮಾಡುವುದರಲ್ಲಿ ಇಬ್ಬರಿಗೂ ಉತ್ಸಾಹವಿತ್ತು.; ಹರ್ಷವಿತ್ತು. ಒಬ್ಬರು ಮತ್ತೊಬ್ಬರನ್ನು ಪರಾಭವಗೊಳಿಸುವುದರಲ್ಲಿ ಆಸಕ್ತರಾಗಿ ಪ್ರತಿಯೊಂದು ವರಸೆಗಳ ಪ್ರಯೋಗಗಳಲ್ಲಿಯೂ ಆಕಸ್ಮಿಕವಾಗಿ ಉಂಟಾಗಬಹುದಾಗಿದ್ದ ನ್ಯೂನತೆಗಳನ್ನು ಬಹಳ ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಹಿಂದೆ ವೃತ್ರ-ವಾಸವರು ಕಾಳಗವಾಡಿದಂತೆ ಕಾಳಗಮಾಡುತ್ತಾ, ಕೆಲವು ಸಮಯಗಳಲ್ಲಿ ಅತ್ತಲಿತ್ತ ಪರಸ್ಪರ ಸೆಳೆದಾಟದ ರಭಸದಿಂದಾಗಿ ಪ್ರೇಕ್ಷಕರನ್ನು ಭೀತರನ್ನಾಗಿ ಮಾಡಿ, ಬಹಳ ದೂರ ಹಿಂದೆ ಸರಿಯುವಂತೆ ಮಾಡುತ್ತಿದ್ದರು. ಒಬ್ಬರು ಮತ್ತೊಬ್ಬರನ್ನು ಬಿಗಿದಪ್ಪಿ ಹಿಸುಕಿಬಿಡುವರು. ಮರುಕ್ಷಣದಲ್ಲಿಯೇ ಬಹಳ ದೂರಕ್ಕೆ ತಳ್ಳಿಬಿಡುವರು. ಎದುರಾಳಿಯು ಚೇತರಿಸಿಕೊಂಡು ಬರುವುದರೊಳಗಾಗಿ ಪುನಃ ಚಂಗನೆ ಹಾರಿ, ಅವನ ಮೇಲೆ ಬಿದ್ದು ನೆಲಕ್ಕೆ ಧುಮುಕುವರು. ಕೆಳಕ್ಕೆ ಬಿದ್ದವನನ್ನು ಮೊಣಕಾಲುಗಳಿಂದ ಗುದ್ದುವರು. ಒಬ್ಬರು ಮತ್ತೊಬ್ಬರನ್ನು ಕುರಿತು ಉದ್ವೇಗಕರವಾದ ಮಾತುಗಳ

ನ್ನಾಡುತ್ತಾ ಕಲ್ಲಿನಂತೆ ಕಠಿನವಾದ ತಮ್ಮ ಮುಷ್ಟಿಗಳಿಂದ ಪರಸ್ಪರವಾಗಿ ಪ್ರಹರಿಸುವರು. ಕೆಲವು ವೇಳೆ ಕಬ್ಬಿಣದ ತುಂಡಿಗೆ ಸಮಾನವಾಗಿದ್ದ ದೀರ್ಘಬಾಹುಗಳಿಂದಲೇ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುವರು. ಪ್ರೇಕ್ಷಕರಿಗೆ ಆ ಸಮರವು ಬಹಳ ಭಯಂಕರವಾಗಿ ಕಾಣುತ್ತಿದ್ದಿತು.

ಕಾರ್ತಿಕಶುಕ್ಲಪ್ರಥಮೆಯ ದಿನ ಆರಂಭವಾದ ಸಮರವು ಕ್ಷಣಕಾಲವಾದರೂ ವಿರಾಮವಿಲ್ಲದೇ ಕಾರ್ತಿಕಶುಕ್ಲತ್ರಯೋದಶಿಯ ಪೂರ್ತಿ ಅಂದರೆ ಹದಿಮೂರು ದಿವಸಗಳ ಕಾಲ ಅವಿಚ್ಛಿನ್ನವಾಗಿ ನಡೆಯಿತು. ಇಬ್ಬರಲ್ಲಿ ಯಾರೊಬ್ಬರಿಗೂ ಅನ್ನಾಹಾರಗಳ ಪರಿವೆಯೇ ಇರಲಿಲ್ಲ. ಚತುರ್ದಶಿಯ ದಿವಸ ರಾತ್ರಿ ಜರಾಸಂಧನು ಸೋತು-ಸೊಪ್ಪಾಗಿ ಕಾಳಗದಿಂದ ಹಿಮ್ಮೆಟ್ಟಿದನು.

ಆದರೆ ಶ್ರೀಕೃಷ್ಣನಿಗೆ ಆ ಸಮಯದಲ್ಲಿ ಜರಾಸಂಧನನ್ನು ವಿಶ್ರಾಂತಿಗಾಗಿ ಬಿಡುವ ಇಚ್ಛೆಯಿರಲಿಲ್ಲ. ಅದನ್ನು ಭೀಮನಿಗೆ ಸೂಚಿಸುವ ಸಲುವಾಗಿ ಇಂಗಿತಾರ್ಥವನ್ನಿಟ್ಟು ಹೇಳಿದನು :

"ಕುಂತೀಪುತ್ರ! ಶತ್ರುವು ಬಹುವಾಗಿ ಬಳಲಿರುವಾಗ ಅವನನ್ನು ಹಿಂಸಿಸಬಾರದು. ಏಕೆಂದರೆ : ಇಂತಹ ಸಮಯದಲ್ಲಿ ಪುನಃ ಪ್ರಹರಿಸಿಬಿಟ್ಟರೆ ಶತ್ರುವು ವಿನಾಶಹೊಂದಿಬಿಡಬಹುದು. ಆದುದರಿಂದ ಇಂದು ಅತಿಯಾಗಿ ಬಳಲಿರುವ ಈ ರಾಜನನ್ನು ಹಿಂಸಿಸಬೇಡ. ಇದಕ್ಕೆ ಬದಲಾಗಿ ಅವನು ಸಾಯದ ರೀತಿಯಲ್ಲಿ ಇದುವರೆಗೂ ಪ್ರಹರಿಸಿದಂತೆ ಮಾತ್ರವೇ ಪ್ರಹರಿಸುತ್ತಿರು."

ಶ್ರೀಕೃಷ್ಣನ ಆ ಮಾತುಗಳ ಇಂಗಿತಾರ್ಥವು ಭೀಮನಿಗೆ ತಿಳಿಯಿತು. ಒಡನೆಯೇ ಭೀಮಸೇನನು ಮಹಾಪರಾಕ್ರಮದಿಂದ ಜರಾಸಂಧನನ್ನು ಸಂಹರಿಸಲು ನಿಶ್ಚಯಿಸಿ, ಅದಕ್ಕಾಗಿ ತನ್ನ ಸಂಪೂರ್ಣಶಕ್ತಿಯನ್ನೂ ವಿನಿಯೋಗಿಸಿದನು."

೨೩ನೆಯ ಅಧ್ಯಾಯವು ಮುಗಿಯಿತು.

೨೪ನೆಯ ಅಧ್ಯಾಯ ಜರಾಸಂಧವಧಪರ್ವ (ಮುಂದುವರಿದಿದೆ)

## ಭೀಮನಿಂದ ಜರಾಸಂಧನ ವಧೆ : ರಾಜರ ವಿಮುಕ್ತಿ : ಇಂದ್ರಪ್ರಸ್ಥಕ್ಕೆ ಕೃಷ್ಣಾರ್ಜುನ-ಭೀಮರ ಪುನರಾಗಮನ : ಶ್ರೀಕೃಷ್ಣನ ದ್ವಾರಕಾಪ್ರಯಾಣ

ಜನಮೇಜಯ! ಜರಾಸಂಧನನ್ನು ಸಂಹರಿಸಲು ನಿಶ್ಚಯಿಸಿದ ಭೀಮಸೇನನು ಶ್ರೀಕೃಷ್ಣನಿಗೆ ಹೇಳಿದನು :

"ಶ್ರೀಕೃಷ್ಣ! ಈ ಮೂಢನು ಇಷ್ಟು ಬಳಲಿದ್ದರೂ ಇನ್ನೂ ಸಾಕಷ್ಟು ಪರಾಕ್ರಮವುಳ್ಳವನಾಗಿ ಸಮರಯೋಗ್ಯವಾದ ಉಡುಪನ್ನು ಧರಿಸಿ ನನ್ನೆದುರಿನಲ್ಲಿಯೇ ನಿಂತಿರುವನು. ಆದುದರಿಂದ ಇವನನ್ನು ನಾನೆಂದಿಗೂ ಕ್ಷಮಿಸಲಾರೆನು."

ವೃಕೋದರನು ಹೀಗೆ ಹೇಳಲಾಗಿ ಪುರುಷವ್ಯಾಘ್ರನಾದ ಶ್ರೀಕೃಷ್ಣನು ಜರಾಸಂಧನನ್ನು ಸಾಧ್ಯವಾದಷ್ಟು ಬೇಗ ವಧೆಮಾಡಿಸಬೇಕೆಂಬ ಇಚ್ಛೆಯಿಂದ ಭೀಮಸೇನನನ್ನು ಅವಸರಪಡಿಸುತ್ತಾ ಹೇಳಿದನು :

**ಯತ್ತೇ ದೈವಂ ಪರಂ ಸತ್ತ್ವಂ ಯಚ್ಚ ತೇ ಮಾತರಿಶ್ವನಃ।**
**ಬಲಂ ಭೀಮ ಜರಾಸಂಧೇ ದರ್ಶಯಾಶು ತದದ್ಯ ನಃ ॥೪॥**

"ಭೀಮಸೇನ! ನೀನು ಜರಾಸಂಧನನ್ನು ಕೊಲ್ಲಲು ಇಚ್ಛಿಸುವೆಯಾದರೆ – ದೈವದತ್ತವಾದ, ಉತ್ಕೃಷ್ಟವಾದ ನಿನ್ನ ಬಲವನ್ನೂ, ನಿಮ್ಮ ತಂದೆಯಾದ ವಾಯುದೇವನಿಂದ ಅನುಗೃಹೀತವಾಗಿರುವ ಬಲವನ್ನೂ ಸಂಕಲನಮಾಡಿ, ಜರಾಸಂಧನ ಮೇಲೆ ಪ್ರಯೋಗಿಸಿ ನಿನ್ನ ಬಲವೆಷ್ಟೆಂಬುದನ್ನು ನಮಗೆ ತೋರಿಸು."

ಶ್ರೀಕೃಷ್ಣನ ಮಾತನ್ನು ಕೇಳಿದೊಡನೆಯೇ ಭೀಮಸೇನನ ಬಲವು ಇಮ್ಮಡಿಯಾಯಿತು. ಎದುರಾಗಿ ನಿಂತಿದ್ದ ಜರಾಸಂಧನನ್ನು ಹಿಡಿದು ನೂರು ಬಾರಿ ಗರ-ಗರನೆ ತಿರುಗಿಸಿ, ಬಹಳ ರಭಸದಿಂದ ತನ್ನ ಎರಡು ಮಂಡಿಗಳ ಮೇಲೆ ಅವನ ಪೃಷ್ಠಭಾಗವನ್ನು ಅಪ್ಪಳಿಸಿ, ಎರಡು ಕಾಲುಗಳನ್ನೂ ಹಿಡಿದು, ಅವನ ಮಹಾಕಾಯವನ್ನು ಎರಡು ಭಾಗಗಳಾಗಿ ಸೀಳಿ ಸಂಹರಿಸಿದನು. ಜರಾಸಂಧನ ಸಂಹಾರಕಾಲದಲ್ಲಿ ಭೀಮನು ಮಾಡಿದ ವಿಜಯನಾದವು,

ಪ್ರಾಣಬಿಡುವಾಗ ಜರಾಸಂಧನು ಮಾಡಿದ ಮಹತ್ತಾದ ಆರ್ತನಾದದೊಡನೆ ಸೇರಿ ಘೋರಶಬ್ದವುಂಟಾಗಿ ಸಕಲಚರಾಚರಪ್ರಾಣಿಗಳ ಹೃದಯಗಳಲ್ಲಿಯೂ ಕಂಪನವನ್ನುಂಟುಮಾಡಿತು. ಮಗಧರಾಜ್ಯದ ಪ್ರಜೆಗಳು ಆ ಮಹಾರವವನ್ನು ಕೇಳಿ ಮೂಕರಾದರು. ಭೀತರಾದ ಅನೇಕ ಗರ್ಭಿಣೀಸ್ತ್ರೀಯರಿಗೆ ಗರ್ಭಪಾತವಾಯಿತು. ಹಿಮವಂತನೇನಾದರೂ ಕುಸಿದುಬೀಳುತ್ತಿರುವನೋ ಅಥವಾ ಭೂಮಿಯೇ ಒಡೆದುಹೋಗುತ್ತಿರುವುದೋ–ಎಂಬ ಭ್ರಾಂತಿಯು ಮಗಧರಾಜ್ಯದ ಪ್ರಜೆಗಳಿಗುಂಟಾಯಿತು.

ಕೃಷ್ಣಾರ್ಜುನ-ಭೀಮರು, ಅರಮನೆಯ ದ್ವಾರದ ಬಳಿಯಲ್ಲಿ, ಪ್ರಾಣರಹಿತನಾಗಿದ್ದರೂ ಮಲಗಿದ್ದವನಂತೆ ಕಾಣುತ್ತಿದ್ದ ಜರಾಸಂಧನನ್ನು ಬಿಟ್ಟು ರಾಜದ್ವಾರದಿಂದ ಹೊರಕ್ಕೆ ಬಂದರು.

ಸಮೀಪದಲ್ಲಿಯೇ ನಿಂತಿದ್ದ ಜರಾಸಂಧನ ರಥವನ್ನು ಸಜ್ಜುಗೊಳಿಸುವಂತೆ ಶ್ರೀಕೃಷ್ಣನು ಆಜ್ಞಾಪಿಸಿ, ಭೀಮಾರ್ಜುನರೊಡನೆ ರಥವನ್ನೇರಿ ಕಾರಾಗೃಹದ ಬಳಿಗೆ ಹೋಗಿ, ಅಲ್ಲಿ ಬಂದಿಗಳಾಗಿದ್ದ ರಾಜರೆಲ್ಲರನ್ನೂ ವಿಮೋಚನಗೊಳಿಸಿದನು. ಮಹಾವಿಪತ್ತಿನಿಂದ ವಿಮುಕ್ತಿ ಹೊಂದಿದ ರಾಜರು ಅತ್ಯಧಿಕಸಂತೋಷದಿಂದ ತಾವು ಧರಿಸಿದ್ದ ಅಮೋಘವಾದ ರತ್ನಹಾರ-ಕನಕಾಂಗದ-ಕೇಯೂರಗಳನ್ನೇ ಶ್ರೀಕೃಷ್ಣನಿಗೆ ಕಾಣಿಕೆಯಾಗಿ ಸಮರ್ಪಿಸಿದರು.

ಶ್ರೀಕೃಷ್ಣನು ಅಜೇಯನಾದ ತನ್ನ ಶತ್ರುವನ್ನು ಗೆದ್ದಿದ್ದರೂ ಅಕ್ಷತನಾಗಿದ್ದನು. ಅವನ ಶರೀರಕ್ಕೆ ಒಂದು ಪೆಟ್ಟೂ ಬಿದ್ದಿರಲಿಲ್ಲ. ಶಸ್ತ್ರಸಂಪನ್ನನಾಗಿದ್ದ ಇಂತಹ ಮಹಾನುಭಾವನು ತನ್ನಿಂದ ವಿಮುಕ್ತರಾದ ರಾಜ-ಮಹಾರಾಜರಿಂದ ಕೂಡಿದವನಾಗಿ ಗಿರಿವ್ರಜದಿಂದ ಹೊರಕ್ಕೆ ಬಂದನು.

'ಸೋದರ್ಯವಾನ್' ಎಂಬ ಹೆಸರಿನ ಜರಾಸಂಧನ ಆ ಮಹಾರಥದಲ್ಲಿ ಸೋದರರಾದ ಭೀಮಾರ್ಜುನರಿಬ್ಬರೂ ಕುಳಿತರು. ಆ ಮಹಾರಥದಲ್ಲಿ ಇಬ್ಬರು ಯೋಧರು ಕುಳಿತು ಯುದ್ಧಮಾಡಬಹುದಾಗಿದ್ದಿತು. ಅದೇ ಮಹಾರಥದಲ್ಲಿಯೇ ಶ್ರೀಕೃಷ್ಣನು ಸಾರಥಿಯಾಗಿ ಕುಳಿತಿದ್ದನು. ಯುದ್ಧಗಳಲ್ಲಿ ಆಘಾತವನ್ನು ಎದುರಿಸುವುದು ಆ ರಥಕ್ಕೆ ಅಭ್ಯಾಸವಾಗಿದ್ದಿತು. ಆ ರಥದ ಮೇಲೆ ಕುಳಿತು ಯುದ್ಧಮಾಡುವವರು ಎಲ್ಲ ರಾಜರಿಂದಲೂ

ದುರ್ಜಯರಾಗುತ್ತಿದ್ದರು. (ಆ ರಥದ ಮೇಲೆ ಕುಳಿತು ಯುದ್ಧ ಮಾಡುವವರನ್ನು ಸೋಲಿಸುವ ಸಾಧ್ಯತೆಯೇ ಇರಲಿಲ್ಲ.) ಶ್ರೀಕೃಷ್ಣನ ಸಾರಥ್ಯದಲ್ಲಿ ಇಬ್ಬರು ಮಹಾಯೋಧರನ್ನು (ಭೀಮಾರ್ಜುನರನ್ನು) ಹೊತ್ತಿದ್ದ, ಶ್ರೇಷ್ಠವಾದ, ಸರ್ವಧನುಷ್ಮಂತರಿಂದಲೂ ದುರ್ಜಯವಾಗಿದ್ದ ಆ ಮಹಾರಥವು ಬಹುವಾಗಿ ಕಂಗೊಳಿಸಿತು.

ಹಿಂದಿನ ಕಾಲದಲ್ಲಿ ಅದೇ ರಥದ ಮೇಲೆಯೇ ಕುಳಿತು ಇಂದ್ರನೂ ಮತ್ತು ಮಹಾವಿಷ್ಣುವೂ ತಾರಕನೇ ಮೊದಲಾದ ಅಸುರರನ್ನು ಸಂಹಾರ ಮಾಡಿದ್ದರು.

ಅಂತಹ ಸುಪ್ರಸಿದ್ಧವಾದ ಮಹಾರಥವನ್ನೇರಿ ಶ್ರೀಕೃಷ್ಣನು ಪರ್ವತಗಳೇ ಕೋಟೆಯಾಗಿದ್ದ ಜರಾಸಂಧನ ರಾಜಧಾನಿಯಿಂದ ಹೊರಕ್ಕೆ ಬಂದನು. ಆ ಮಹಾರಥದ ಪ್ರಭೆಯು ಕಾದ ಚಿನ್ನದ ಕಾಂತಿಯನ್ನು ಅನುಕರಿಸುತ್ತಿದ್ದಿತು. ರಥದ ಸುತ್ತಲೂ 'ಕಣಿ-ಕಣಿ' ಶಬ್ದಮಾಡುತ್ತಿದ್ದ ಪುಟ್ಟಘಂಟೆಗಳಿದ್ದುವು. ಚಕ್ರಗಳ ಭ್ರಮಣೆಯ ಶಬ್ದವು ಗುಡುಗಿನ ಮಹಾರವವನ್ನು ಮೀರಿಸಿತ್ತು. ಅದರ ಮೇಲೆ ಹತ್ತಿ ಕುಳಿತು ಯುದ್ಧಮಾಡುವವನಿಗೆ ಪರಾಜಯವೆಂಬುದೇ ಇರಲಿಲ್ಲ. ಆ ರಥದ ಮೇಲೆಯೇ ಕುಳಿತು ಇಂದ್ರನು ತೊಂಬತ್ತೊಂಬತ್ತು ಮಂದಿ ಅಸುರರನ್ನು ಸಂಹರಿಸಿದ್ದನು.

ಅಂತಹ ಅಮೋಘವಾದ ರಥವನ್ನು ಪಡೆದ ಕೃಷ್ಣಾರ್ಜುನ-ಭೀಮರು ಅಮಿತಾನಂದವನ್ನು ಹೊಂದಿದರು. ರಥದ ಮೇಲೆ ಕುಳಿತು ಹೋಗುತ್ತಿದ್ದ ಆ ಮೂವರನ್ನೂ ಕಂಡು ಮಗಧದೇಶದ ಪ್ರಜೆಗಳು ಆಶ್ಚರ್ಯಚಕಿತರಾದರು. ದೇವಾಶ್ವಗಳಿಂದ ಕೂಡಿದ್ದ ಮತ್ತು ವಾಯುವಿನಂತೆ ವೇಗವಿದ್ದ ಆ ಮಹಾರಥವು ಶ್ರೀಕೃಷ್ಣನ ಸಾರಥ್ಯದಿಂದ ಇನ್ನೂ ಮಿಗಿಲಾಗಿ ಕಂಗೊಳಿಸಿತು. ಅದರ ಮೇಲಿದ್ದ ಧ್ವಜಪತಾಕೆಯು ದೇವನಿರ್ಮಿತವಾಗಿದ್ದಿತು. ಅದು ರಥದ ಮೇಲೆ ಕಾಣುತ್ತಿದ್ದಿತೇ ಹೊರತು ರಥದಲ್ಲಿ ಆ ಪತಾಕೆಯನ್ನು ಎಲ್ಲಿ ನಿಯೋಜಿಸಿರುವರೆಂಬುದು ಕಾಣುತ್ತಿರಲಿಲ್ಲ. ಕಾಮನಬಿಲ್ಲಿನ ಕಾಂತಿಯನ್ನು ಹೊಂದಿದ್ದ ಆ ಪತಾಕೆಯನ್ನು ಒಂದು ಯೋಜನದಾಚೆಯಿಂದಲೂ ಕಾಣಬಹುದಾಗಿದ್ದಿತು.

ಶ್ರೀಕೃಷ್ಣನು ಗಿರಿವ್ರಜದಿಂದ ಹೊರಕ್ಕೆ ಬರುವಾಗ ಗರುಡನನ್ನೊಮ್ಮೆ

ಸ್ಮರಿಸಿದನು. ಸ್ವಾಮಿಯು ಸ್ಮರಿಸಿದೊಡನೆಯೇ ಗರುಡನು ಶ್ರೀಕೃಷ್ಣನಿಗೆದುರಾಗಿ ಬಂದು ನಿಂತನು. ಗ್ರಾಮ-ನಗರಗಳಲ್ಲಿ ಸಕಲರಿಂದಲೂ ಪೂಜಿಸಲ್ಪಡುವ ದೊಡ್ಡದಾದ ಅಶ್ವತ್ಥವೃಕ್ಷದಂತೆ ಗರುಡನು ಆ ಸಮಯದಲ್ಲಿ ಪ್ರಕಾಶಿಸಿದನು.

ಸರ್ಪಭಕ್ಷಕನಾದ ಗರುಡನು ಜನಾರ್ದನನ ಇಂಗಿತವನ್ನರಿತವನಾಗಿ ನಾನಾವಿಧವಾದ ಭಯಂಕರಪ್ರಾಣಿಗಳೊಡನೆ ರಥದ ಮೇಲ್ಭಾಗದಲ್ಲಿದ್ದ ಪತಾಕೆಯಲ್ಲಿ ಉಪವಿಷ್ಟನಾದನು. ಗರುಡನ ಪತಾಕೆಯಿಂದ ಕೂಡಿದ ಆ ರಥವು ಇನ್ನೂ ಹೆಚ್ಚು ಪ್ರಭೆಯಿಂದ ಕೂಡಿದುದಾಗಿ ಮಧ್ಯಾಹ್ನದ ಸೂರ್ಯನಂತೆಯೇ ಪ್ರಜ್ವಲಿಸಿತು. ಅದರ ಕಾಂತಿಯನ್ನು ಪ್ರಾಣಿಗಳು ನೇರವಾಗಿ ವೀಕ್ಷಿಸಲು ಸಾಧ್ಯವಾಗುತ್ತಿರಲಿಲ್ಲ.

ಜನಮೇಜಯ! ಆ ಪತಾಕೆಯ ವೈಚಿತ್ರ್ಯವನ್ನು ಏನೆಂದು ಹೇಳಲಿ? ಎತ್ತರದಲ್ಲಿದ್ದ ಆ ಪತಾಕೆಯು ಮಾರ್ಗದಲ್ಲಿ ಯಾವ ವೃಕ್ಷಕ್ಕೂ ಸಿಕ್ಕಿಕೊಳ್ಳುತ್ತಿರಲಿಲ್ಲ. ಅದನ್ನು ಯಾವ ಶಸ್ತ್ರಾಸ್ತ್ರಗಳಿಂದಲೂ ಭೇದಿಸಲು ಸಾಧ್ಯವಿರಲಿಲ್ಲ. ಮೇಲಾಗಿ ಆ ಪತಾಕೆಯು ಎದುರಾಳಿಗಳಿಗೆಲ್ಲರಿಗೂ ಸ್ಪಷ್ಟವಾಗಿ ಕಾಣುತ್ತಿದ್ದಿತು.

ಮೇಘದಂತೆ ಧ್ವನಿಮಾಡುತ್ತಿದ್ದ ಆ ಮಹಾರಥದಲ್ಲಿ ಕುಳಿತು ಭೀಮಾರ್ಜುನರಿಂದೊಡಗೂಡಿದ ಪುರುಷವ್ಯಾಘ್ರನಾದ ಶ್ರೀಕೃಷ್ಣನು ನಗರದಿಂದ ಹೊರಕ್ಕೆ ಹೊರಟನು.

ಆ ರಥವು ವಾಸವನಿಂದ ವಸು ಎಂಬ ರಾಜನಿಗೆ ಕೊಡಲ್ಪಟ್ಟಿದ್ದಿತು. ವಸುವಿನಿಂದ-ಬೃಹದ್ರಥನಿಗೂ, ಬೃಹದ್ರಥನಿಂದ-ಜರಾಸಂಧನಿಗೂ ಅನುಕ್ರಮವಾಗಿ ಹಸ್ತಾಂತರವಾಯಿತು. ಅಂತಹ ದಿವ್ಯರಥದ ಮೇಲೆ ಕುಳಿತು ಮಹಾನುಭಾವನಾದ ಶ್ರೀಕೃಷ್ಣನು ಗಿರಿವ್ರಜದಿಂದ ಹೊರಗಡೆ ಬಂದು ಅಲ್ಲಿದ್ದ ಮೈದಾನದಲ್ಲಿ ಕ್ಷಣಕಾಲ ನಿಂತನು. ಗಿರಿವ್ರಜದ ನಾಗರಿಕರು ಬ್ರಾಹ್ಮಣಪುರಸ್ಸರರಾಗಿ ವಾಸುದೇವನನ್ನು ಆರಾಧಿಸಲು ಒಡನೆಯೇ ಬಂದರು. ಬಂಧವಿಮುಕ್ತರಾದ ರಾಜರೂ ಮಾಧವನನ್ನು ಯಥೋಚಿತವಾಗಿ ಪೂಜಿಸಿ ಸತ್ಕರಿಸಿ ಹೇಳಿದರು :

**ನೈತಚ್ಚಿತ್ರಂ ಮಹಾಬಾಹೋ ತ್ವಯಿ ದೇವಕಿನನ್ದನೇ।**
**ಭೀಮಾರ್ಜುನಬಲೋಪೇತೇ ಧರ್ಮಸ್ಯ ಪ್ರತಿಪಾಲನಮ್ ॥೩೨॥**

"ಮಹಾಬಾಹುವೇ! ಧರ್ಮದ ಪರಿಪಾಲನಾರ್ಥವಾಗಿ ಭೀಮಾರ್ಜುನ ಬಲಸಹಿತನಾದ, ದೇವಕೀನಂದನನಾದ ನೀನು ಹೀಗೆ ಮಾಡಿರುವುದರಲ್ಲಿ ಆಶ್ಚರ್ಯವೇನಿಲ್ಲ. ಇಂದು ನೀನು ಜರಾಸಂಧನೆಂಬ ಸರೋವರದ ದುಃಖವೆಂಬ ಕೆಸರಿನಲ್ಲಿ ಹುದುಗಿಕೊಂಡಿದ್ದ ರಾಜರನ್ನು ಬಿಡುಗಡೆಮಾಡಿರುತ್ತೀಯೆ. ಅಭೇದ್ಯವಾದ ಜರಾಸಂಧನ ದುರ್ಗದಲ್ಲಿ ನಾವು ಬಂಧಿತರಾಗಿ, ಭವಿಷ್ಯವನ್ನು ತಿಳಿಯದೇ ಯಾತನೆಪಡುತ್ತಿದ್ದೆವು. ನಮ್ಮ ಸಂಯೋಗದಿಂದಾಗಿ ನೀನಿಂದು ನಮ್ಮನ್ನು ವಿಮೋಚನೆಮಾಡಿ ಶಾಶ್ವತವಾದ ಕೀರ್ತಿಯನ್ನು ಗಳಿಸಿರುವೆ. ನೀನು ಮಾಡಿರುವ ಉಪಕಾರಕ್ಕಾಗಿ ನಾವೆಲ್ಲರೂ ನಿನ್ನನ್ನು ಮನಸಾರ ನಮಿಸುವೆವು. ನೀನು ಮಾಡಿರುವ ಮಹೋಪಕಾರಕ್ಕಾಗಿ ನಾವೇನು ಮಾಡಬೇಕೆಂಬುದನ್ನು ಆಜ್ಞಾಪಿಸು. ನೀನು ಮಾಡಲಿರುವ ಆಜ್ಞೆಯು ಎಷ್ಟೇ ಕಷ್ಟಸಾಧ್ಯವಾಗಿದ್ದರೂ ತಲೆಬಾಗಿ ನಿಂತಿರುವ ನಾವು ಆ ಕಾರ್ಯವನ್ನು ಸಾಧಿಸಿಕೊಡುತ್ತೇವೆ."

ರಾಜರ ವಿನಯಪೂರ್ವಕವಾದ ನುಡಿಗಳನ್ನು ಕೇಳಿ ಹೃಷೀಕೇಶನು ಅವರೆಲ್ಲರನ್ನೂ ಸಂತೈಸುತ್ತಾ, ಅವರಿಗೆ ಅಭಯವನ್ನೀಯುತ್ತಾ ಹೇಳಿದನು :

"ಧರ್ಮಾತ್ಮನಾದ ಯುಧಿಷ್ಠಿರನು ರಾಜಸೂಯಯಾಗಮಾಡಲು ನಿಶ್ಚಯಿಸಿರುತ್ತಾನೆ. ನೀವೆಲ್ಲರೂ ಅವನಿಗೆ ಸಂಪೂರ್ಣವಾದ ಬೆಂಬಲ ವನ್ನೀಯಬೇಕು. ಆ ಕಾರ್ಯವು ನನ್ನ ಕಾರ್ಯವೆಂದೇ ನೀವೆಲ್ಲರೂ ಭಾವಿಸಬೇಕು."

ಶ್ರೀಕೃಷ್ಣನ ಮಾತುಗಳನ್ನು ಕೇಳಿ ಎಲ್ಲ ರಾಜರೂ ಸಂತೋಷದಿಂದ **'ತಥಾಸ್ತು'** ಎಂದು ಪ್ರತಿವಚನವನ್ನಿತ್ತು ಹೇರಳವಾದ ಕನಕಾಭರಣಗಳನ್ನೂ, ವಜ್ರ-ವೈಡೂರ್ಯಗಳನ್ನೂ ಕಾಣಿಕೆಯನ್ನಾಗಿ ಅರ್ಪಿಸಿದರು. ಶ್ರೀಕೃಷ್ಣನು ರಾಜರ ಮೇಲಿನ ಕರುಣೆಯಿಂದಲೂ, ಅವರು ಮಾಡಿದ ಒತ್ತಾಯದಿಂದಲೂ ಅವನ್ನು ಸ್ವೀಕರಿಸಬೇಕಾಯಿತು.

ಅನಂತರದಲ್ಲಿ ಜರಾಸಂಧನ ಮಗನಾದ ಸಹದೇವನು–ಬಂಧುಗಳು, ಮಿತ್ರರು, ಅಮಾತ್ಯರು, ಸೇನಾಪತಿಗಳು ಮತ್ತು ದೇಶದ ಉನ್ನತಾಧಿಕಾರಿ

ಗಳು–ಇವರೆಲ್ಲರೊಡನೆ ಶ್ರೀಕೃಷ್ಣನಲ್ಲಿಗೆ ಬಂದು ಮಾನವರೂಪಿಯಾದ ಪರಮಾತ್ಮನಿಗೆ ಅನರ್ಘವಾದ ವಸ್ತ್ರಾಭರಣಗಳನ್ನೂ, ಶ್ರೇಷ್ಠವಾದ ರತ್ನಗಳನ್ನೂ ಅರ್ಪಿಸಿ ಸತ್ಕರಿಸಿದನು. ತನ್ನ ಮುಂದಿನ ಗತಿಯೇನಾಗುವುದೋ ಎಂದು ಭೀತನಾಗಿದ್ದ ಸಹದೇವನಿಗೆ ದಯಾಮಯನಾದ ಶ್ರೀಕೃಷ್ಣನು ಅಭಯಪ್ರದಾನಮಾಡಿ, ಅವನಿತ್ತ ಸತ್ಕಾರವನ್ನು ಆದರದಿಂದ ಸ್ವೀಕರಿಸಿ ಸಹದೇವನನ್ನು ಮಗಧರಾಜ್ಯಕ್ಕೆ ಪಟ್ಟಾಭಿಷಿಕ್ತನನ್ನಾಗಿ ಮಾಡಿದನು. ಭೀಮಾರ್ಜುನರೂ ಸಹದೇವನನ್ನು ಬಹಳ ಕರುಣೆಯಿಂದ ಸಂತೈಸಿದರು.

ಸಹದೇವನು ಅನೇಕ ರಾಜ-ಮಹಾರಾಜರ ಮತ್ತು ಶ್ರೀಕೃಷ್ಣ-ಭೀಮಾರ್ಜುನರ ಸಮ್ಮುಖದಲ್ಲಿ ಮಗಧರಾಜ್ಯದ ಸಿಂಹಾಸನಕ್ಕೆ ಅಧಿಪತಿಯಾಗಿ, ಶ್ರೀಕೃಷ್ಣನ ಮೈತ್ರಿಯನ್ನು ಗಳಿಸಿ, ಭೀಮ-ಪಾರ್ಥರ ಸಹಾನುಭೂತಿಯನ್ನೂ ಪಡೆದು, ಅಮಿತಾನಂದವನ್ನು ಹೊಂದಿ ಪರಿವಾರದೊಡನೆ ನಗರಿಗೆ ಹಿಂದಿರುಗಿದನು.

ಶ್ರೀಕೃಷ್ಣನೂ ಭೀಮ-ಪಾರ್ಥರಿಂದ ಸಮೇತನಾಗಿ, ರಾಜರಿತ್ತಿದ್ದ ಹೇರಳವಾದ ರತ್ನಾಭರಣಗಳನ್ನೂ ತೆಗೆದುಕೊಂಡು ಇಂದ್ರಪ್ರಸ್ಥಕ್ಕೆ ಹಿಂದಿರುಗಿದನು.

ಇಂದ್ರಪ್ರಸ್ಥಕ್ಕೆ ಬಂದೊಡನೆಯೇ ಶ್ರೀಕೃಷ್ಣನು ಭೀಮ-ಪಾರ್ಥರೊಡನೆ ಯುಧಿಷ್ಠಿರನಲ್ಲಿಗೆ ಹೋಗಿ, ಅವನನ್ನು ನಮಿಸಿ, ಆಶೀರ್ವಾದಗಳನ್ನು ಪಡೆದು ಅಮಿತೋತ್ಸಾಹದಿಂದ ಹೇಳಿದನು : "ಯುಧಿಷ್ಠಿರ! ಸುಯೋಗದಿಂದಾಗಿ ಭೀಮನು ಜರಾಸಂಧನನ್ನು ಸಂಹರಿಸಿದನು. ಬಂಧಿತರಾಗಿದ್ದ ರಾಜರೆಲ್ಲರೂ ಬಿಡುಗಡೆಹೊಂದಿದರು. ಭೀಮ-ಪಾರ್ಥರು ಒಂದು ಗಾಯವೂ ಇಲ್ಲದವರಾಗಿ ಕ್ಷೇಮದಿಂದ ಬಂದಿರುತ್ತಾರೆ."

ಆ ಮಾತುಗಳನ್ನು ಕೇಳಿ ಯುಧಿಷ್ಠಿರನು ಶ್ರೀಕೃಷ್ಣನನ್ನು ಬಹುವಾಗಿ ಕೊಂಡಾಡಿ ಪುರಸ್ಕರಿಸಿದನು. ಭೀಮಾರ್ಜುನರನ್ನು ಅಮಿತಾನಂದದಿಂದ ಆಲಿಂಗನಮಾಡಿಕೊಂಡನು. ಯುಧಿಷ್ಠಿರನು ತನ್ನ ಸಹೋದರರಿಂದೊಡಗೂಡಿ, ತನ್ನನ್ನು ನೋಡಲು ಬಂದಿದ್ದ ರಾಜರನ್ನು ಕಂಡು, ಅವರನ್ನು ಯಥಾಯೋಗ್ಯವಾಗಿ ಸತ್ಕರಿಸಿ, ಸವಿಮಾತುಗಳನ್ನಾಡಿ ಅವರವರ ದೇಶಗಳಿಗೆ ಬೀಳ್ಕೊಟ್ಟನು.

ಜನಮೇಜಯ! ಈ ರೀತಿಯಲ್ಲಿ ಮಹಾಮಹಿಮನಾದ, ನೀತಿ ವಿಶಾರದನಾದ ಜನಾರ್ದನನು ಪಾಂಡವರನ್ನು ನೆಪಮಾತ್ರಕ್ಕಿಟ್ಟುಕೊಂಡು ಜರಾಸಂಧನನ್ನು ಸಂಹರಿಸಿದನು. ಶ್ರೀಕೃಷ್ಣನ ಮಹಿಮೆಯು ಅಪಾರವಾದುದು. ಮಹಾರಾಜ! ದುಷ್ಟನಿಗ್ರಹವಾದನಂತರ ಶ್ರೀಕೃಷ್ಣನು ಯುಧಿಷ್ಠಿರನಿಂದಲೂ, ಪೃಥಾ-ದ್ರೌಪದೀ-ಸುಭದ್ರೆ ಯರಿಂದಲೂ, ಭೀಮಾರ್ಜುನ-ನಕುಲ-ಸಹದೇವರಿಂದಲೂ ಮತ್ತು ಧೌಮ್ಯರಿಂದಲೂ ಅನುಮತಿಯನ್ನು ಪಡೆದು-ಯುಧಿಷ್ಠಿರನಿಂದ ಕೊಡಲ್ಪಟ್ಟ, ವೇಗದಲ್ಲಿ ಮನೋವೇಗಕ್ಕೆ ಸದೃಶವಾದ, ದೇವನಿರ್ಮಿತವಾದ ರಥದಲ್ಲಿ ಕುಳಿತು ದಿಗಂತಗಳನ್ನೂ ಶಬ್ದಾಯಮಾನವನ್ನಾಗಿ ಮಾಡುತ್ತಾ ದ್ವಾರವತಿಗೆ ಹೊರಟನು.



ರಥದಲ್ಲಿ ಉಪವಿಷ್ಟನಾಗಿದ್ದ ಅಘಟಿತಘಟನಾಸಾಮರ್ಥ್ಯವುಳ್ಳ ಕೇಶವ

ನನ್ನು ಪಾಂಡವರೈವರೂ ಪ್ರದಕ್ಷಿಣೆಮಾಡಿದರು. ಕ್ಷಣಮಾತ್ರದಲ್ಲಿ ರಥವು ಅಗೋಚರವಾಗಿ ದ್ವಾರವತಿಯನ್ನು ಸೇರಿತು.

ಜರಾಸಂಧನ ವಧೆ, ಬಂಧಿತರಾಜರ ಬಿಡುಗಡೆ–ಇವು ಪಾಂಡವರ ಕೀರ್ತಿಯನ್ನು ಹೆಚ್ಚಿಸಿದುವು. ಜರಾಸಂಧನ ವಧೆಯಿಂದಾಗಿ ಅನೇಕ ರಾಜರು ತಮಗಿದ್ದ ಭೀತಿಯನ್ನು ತೊರೆದರು. ಪಾಂಡವರ ಕೀರ್ತಿಯು ಪ್ರಪಂಚದ ಎಲ್ಲೆಡೆಗಳಲ್ಲಿಯೂ ವ್ಯಾಪಿಸಿತು.

ಪಾಂಡವರೈವರೂ ದ್ರೌಪದಿಯನ್ನು ಸಂತೋಷಪಡಿಸುತ್ತಾ ಕಾಲವನ್ನು ಸುಖವಾಗಿ ಕಳೆಯುತ್ತಿದ್ದರು. ಯುಧಿಷ್ಠಿರನು ಧರ್ಮಾರ್ಥ-ಕಾಮಗಳ ಪ್ರಾಪ್ತಿಗೆ ಯೋಗ್ಯಗಳಾದ, ವಿಹಿತವಾದ ಕಾರ್ಯಗಳನ್ನು ಮಾಡುತ್ತಾ ಪ್ರಜೆಗಳನ್ನು ಧರ್ಮದಿಂದ ಪಾಲನೆಮಾಡುತ್ತಿದ್ದನು."

೨೪ನೆಯ ಅಧ್ಯಾಯವು ಮುಗಿಯಿತು.

೨೫ನೆಯ ಅಧ್ಯಾಯ ದಿಗ್ವಿಜಯಪರ್ವ

## ದಿಗ್ವಿಜಯಕ್ಕಾಗಿ ಅರ್ಜುನ–ಭೀಮ–ನಕುಲ–ಸಹದೇವರ ಪ್ರಯಾಣ

(ಜರಾಸಂಧನ ವಧೆಯಿಂದಾಗಿ ಪ್ರಬಲನಾದ ಶತ್ರುವೊಬ್ಬನ ನಿವಾರಣೆ ಯೇನೋ ಆದಂತಾಯಿತು. ಆದರೆ ಅಷ್ಟು ಮಾತ್ರದಿಂದಲೇ ಯುಧಿಷ್ಠಿರನು ಏಕಚಕ್ರಾಧಿಪತಿಯೆನಿಸಿಕೊಳ್ಳುವ ಸಾಧ್ಯತೆಯಿರಲಿಲ್ಲ. ಪ್ರಪಂಚದ ಸಕಲ ರಾಜರನ್ನೂ ಆಶ್ರಿತರನ್ನಾಗಿ ಮಾಡಿಕೊಂಡು, ಅವರೆಲ್ಲರಿಂದಲೂ ಕಪ್ಪ-ಕಾಣಿಕೆ ಗಳನ್ನು ಸ್ವೀಕರಿಸಿದನಂತರವೇ ಅವನು ಚಕ್ರಾಧಿಪತಿಯೆನಿಸಿಕೊಳ್ಳುವನು.)

"ಪಾರಿಕ್ಷಿತ! ಅದ್ಭುತವಾದ ಗಾಂಡೀವಧನುಸ್ಸನ್ನೂ, ಅಕ್ಷಯತೂಣೀರ ಗಳನ್ನೂ, ದಿವ್ಯರಥವನ್ನೂ ಮತ್ತು ದಿವ್ಯಸಭಾಮಂದಿರವನ್ನೂ ಸಂಪಾದಿಸಿದ್ದ ಅರ್ಜುನನು ಒಮ್ಮೆ ಯುಧಿಷ್ಠಿರನೊಡನೆ ಹೇಳಿದನು :

"ಅಗ್ರಜ! ದಿವ್ಯಧನುಸ್ಸು, ದಿವ್ಯಾಯುಧಗಳು, ಪರಾಕ್ರಮ, ಮಿತ್ರರು, ರಾಜ್ಯಗಳು, ಕೀರ್ತಿ, ಸೈನ್ಯ–ಇವೆಲ್ಲವೂ ಬಹುಕಷ್ಟದಿಂದ ಲಭ್ಯವಾಗ ತಕ್ಕವುಗಳು. ಇಚ್ಛಾಮಾತ್ರದಿಂದಲೇ ಲಭ್ಯವಾಗತಕ್ಕುವುಗಳಲ್ಲ. ಇವೆಲ್ಲವೂ ನಮಗಿಂದು ಲಭಿಸಿವೆ. ಇಷ್ಟು ಸೌಲಭ್ಯಗಳನ್ನಿಟ್ಟುಕೊಂಡಿರುವ ನಾವು

ಮಾಡಬೇಕಾದ ಕರ್ತವ್ಯವೂ ಬಹಳವಾಗಿದೆ. ಧನಾರ್ಜನೆಮಾಡಿ ಬೊಕ್ಕಸವನ್ನು ತುಂಬಬೇಕು. ಪ್ರಪಂಚದಲ್ಲಿರುವ ರಾಜರೆಲ್ಲರನ್ನೂ ಆಶ್ರಿತರನ್ನಾಗಿ ಮಾಡಿಕೊಂಡು ಅವರಿಂದ ಕಪ್ಪ-ಕಾಣಿಕೆಗಳನ್ನು ತಂದು ಬೊಕ್ಕಸವನ್ನು ತುಂಬಬೇಕು. ಇದು ನಮ್ಮ ಇಂದಿನ ಕರ್ತವ್ಯವಾಗಿದೆ. ಇದಕ್ಕಾಗಿ ನಾನು ಶುಕ್ಲಪಕ್ಷದ ಶುಭತಿಥಿ, ಶುಭವಾರ, ಶುಭನಕ್ಷತ್ರ, ಶುಭಯೋಗ, ಶುಭಕರಣಗಳಿಂದ ಯುಕ್ತವಾದ ದಿನದಂದು ನಿಧಿಗಳಿಗೆ ಒಡೆಯನಾದ ಕುಬೇರನ (ಉತ್ತರ) ದಿಕ್ಕಿನ ಕಡೆಗೆ ಜೈತ್ರಯಾತ್ರೆಗಾಗಿ ಹೊರಡಬೇಕೆಂದಿರುತ್ತೇನೆ."

ತಮ್ಮನ ಮಾತುಗಳನ್ನು ಕೇಳಿ ಯುಧಿಷ್ಠಿರನು ಸ್ನೇಹಯುಕ್ತವಾದ ಮತ್ತು ಗಂಭೀರವಾದ ವಾಣಿಯಿಂದ ಉತ್ತರಿಸಿದನು :

"ಅರ್ಜುನ! ಶತ್ರುಗಳನ್ನು ದುಃಖದಲ್ಲಿ ಮುಳುಗಿಸುವ ಸಲುವಾಗಿಯೂ, ಮಿತ್ರರಿಗೆ ಆನಂದವನ್ನುಂಟುಮಾಡುವ ಸಲುವಾಗಿಯೂ ಶುಭದಿನದಲ್ಲಿ ಬ್ರಾಹ್ಮಣರಿಂದ ಸ್ವಸ್ತಿವಾಚನಗಳನ್ನೂ, ಆಶೀರ್ವಾದಗಳನ್ನೂ ಪಡೆದು, ನಿನ್ನ ಇಚ್ಛೆಯಂತೆಯೇ ದಿಗ್ವಿಜಯಕ್ಕೆ ಹೋಗಿ ಬಾ. ನಿನಗೆ ವಿಜಯವು ನಿಶ್ಚಯವಾಗಿಯೂ ಸಿದ್ಧಿಸುವುದು. ನಿನ್ನ ಅಪೇಕ್ಷೆಗಳೆಲ್ಲವೂ ಕೈಗೂಡುವುವು."

ಯುಧಿಷ್ಠಿರನ ಅನುಮತಿಯನ್ನು ಪಡೆದನಂತರ ಅರ್ಜುನನು ತನ್ನ ಸುತ್ತಲೂ ನೆರೆದಿದ್ದ ಬಂಧು-ಮಿತ್ರರ ಶುಭಾಶಂಸನೆಗಳನ್ನೂ ಸ್ವೀಕರಿಸಿದವನಾಗಿ, ಅಗ್ನಿದತ್ತವಾದ ದಿವ್ಯರಥದಲ್ಲಿ ಕುಳಿತು, ಉತ್ತರದಿಕ್ಕಿನ ದಿಗ್ವಿಜಯಕ್ಕಾಗಿ ಸೈನ್ಯಸಮೇತನಾಗಿ ಹೊರಟನು.

ಅರ್ಜುನನನ್ನು ಹಿಂಬಾಲಿಸಿ ಭೀಮ-ನಕುಲ-ಸಹದೇವರೂ ಅಣ್ಣನಾದ ಯುಧಿಷ್ಠಿರನ ಅನುಮತಿಯನ್ನು ಪಡೆದು, ಸೈನ್ಯಸಮೇತರಾಗಿ ಹೊರಟರು. ಹಿಂದೆಯೇ ಹೇಳಿದಂತೆ ಅರ್ಜುನನು ಉತ್ತರದಿಕ್ಕಿಗೂ, ಭೀಮನು ಪೂರ್ವದಿಕ್ಕಿಗೂ, ಸಹದೇವನು ದಕ್ಷಿಣದಿಕ್ಕಿಗೂ, ನಕುಲನು ಪಶ್ಚಿಮದಿಕ್ಕಿಗೂ ಹೊರಟು, ಆಯಾ ದಿಕ್ಕುಗಳಲ್ಲಿದ್ದ ರಾಜರೆಲ್ಲರನ್ನೂ ಜಯಿಸಲು ನಿಶ್ಚಯಿಸಿದರು.

ಅನುಜರು ದಿಗ್ವಿಜಯಕ್ಕೆ ಹೊರಟುಹೋಗಿದ್ದ ಕಾಲದಲ್ಲಿ ಯುಧಿಷ್ಠಿರನು

ಬಂಧು-ಮಿತ್ರರ ಮಧ್ಯದಲ್ಲಿ ದಿವ್ಯಕಾಂತಿಯಿಂದ ಪ್ರಕಾಶಿಸುತ್ತಾ ಧರ್ಮದಿಂದ ರಾಜ್ಯಪಾಲನೆಯನ್ನು ಮಾಡುತ್ತಿದ್ದನು" – ಎಂದು ಹೇಳಿ ವೈಶಂಪಾಯನರು ಅಂದಿನ ಕಥೆಯನ್ನು ಮುಗಿಸಿದರು."

೨೫ನೆಯ ಅಧ್ಯಾಯವು ಮುಗಿಯಿತು.

೨೬ನೆಯ ಅಧ್ಯಾಯ ದಿಗ್ವಿಜಯಪರ್ವ (ಮುಂದುವರಿದಿದೆ.)

## ಉತ್ತರದಿಕ್ಕಿನ ದಿಗ್ವಿಜಯಕ್ಕಾಗಿ ಅರ್ಜುನನ ಪ್ರಯಾಣ : ಭಗದತ್ತನೇ ಮೊದಲಾದ ಸಕಲರಾಜರ ಪರಾಜಯ

ಜನಮೇಜಯನು ಹೇಳುತ್ತಾನೆ :

"ವೈಶಂಪಾಯನರೇ! ನಮ್ಮ ತಾತಂದಿರು ನಾಲ್ಕು ದಿಕ್ಕುಗಳನ್ನೂ ಹೇಗೆ ಜಯಿಸಿದರೆಂಬ ವಿಷಯವನ್ನು ವಿಶದವಾಗಿಯೇ ತಿಳಿಸಿರಿ. ಅವರ ಅಮೋಘವಾದ ಇತಿಹಾಸವನ್ನು ಕೇಳುತ್ತಿದ್ದಷ್ಟೂ ಮತ್ತೂ ವಿವರವಾಗಿ ಕೇಳಬೇಕೆಂಬ ಅಭಿಲಾಷೆಯುಂಟಾಗುತ್ತಿದೆ. ಅವರ ಇತಿಹಾಸವನ್ನು ಕೇಳುವುದರಲ್ಲಿ ನನಗೆ ತೃಪ್ತಿಯೆಂಬುದೇ ಇಲ್ಲ."

ಹೀಗೆಂದು ಜನಮೇಜಯನು ಹೇಳಿದ ಮಾತಿಗೆ ವೈಶಂಪಾಯನರು ಉತ್ತರಿಸಿದರು :

"ಜನಮೇಜಯ! ಈ ಭರತಖಂಡವು ಏಕಕಾಲದಲ್ಲಿ ಕುಂತೀಪುತ್ರರಿಂದ ಜಯಿಸಲ್ಪಟ್ಟಿತು. ಅವರಲ್ಲಿ ಧನಂಜಯನ ದಿಗ್ವಿಜಯವನ್ನು ಮೊದಲು ಹೇಳುವೆನು : ಕೇಳು."

ಎಂದು ಹೇಳಿ ಪಾರ್ಥನ ದಿಗ್ವಿಜಯದ ಕಥೆಯನ್ನು ಮಹರ್ಷಿಗಳು ಪ್ರಾರಂಭಿಸಿದರು :

"ಧನಂಜಯನು ಮೊಟ್ಟಮೊದಲು ಕುಲಿಂದರಾಜ್ಯದ ರಾಜರನ್ನು ಸೋಲಿಸಿದನು. ಅನಂತರದಲ್ಲಿ ಆನರ್ತರನ್ನೂ, ಕಾಲಕೂಟರನ್ನೂ ಪರಾಜಯಗೊಳಿಸಿ, ಸಸೈನ್ಯನಾಗಿ ಯುದ್ಧಕ್ಕೆ ಬಂದ ಸುಮಂಡಲನನ್ನು ಪರಾಜಯಗೊಳಿಸಿದನು. ಅಲ್ಲಿಂದ ಮುಂದೆ ಸುಮಂಡಲನ ಸಹಕಾರದಿಂದ ಶಾಕಲವೆಂಬ ದ್ವೀಪವನ್ನು ಸ್ವಾಧೀನಪಡಿಸಿಕೊಂಡು, ಪ್ರತಿವಿಂಧ್ಯನೆಂಬ ರಾಜನನ್ನೂ ಪರಾಜಯಗೊಳಿಸಿದನು. ಶಾಕಲದ್ವೀಪದಲ್ಲಿ ಅನೇಕರಾಜರಿದ್ದರು.

ಅವರೆಲ್ಲರೂ ಪುನಃ ಸೈನ್ಯಸಮೇತರಾಗಿ ಬಂದು ಅರ್ಜುನನನ್ನು ಪ್ರತಿಭಟಿಸಿದರು. ಎರಡು ಪಂಗಡಗಳಿಗೂ ಬಹಳ ಭಯಂಕರವಾದ ಯುದ್ಧವು ನಡೆಯಿತು. ಆದರೆ ಎಲ್ಲ ರಾಜರೂ ಕಡೆಯಲ್ಲಿ ಅರ್ಜುನನಿಂದ ಪರಾಜಿತರಾದರು. ಸೋತುಹೋದ ರಾಜರುಗಳಿಂದೊಡಗೂಡಿ ಮುಂದೆ ಅರ್ಜುನನು ಪ್ರಾಗ್ಜ್ಯೋತಿಷವೆಂಬ ರಾಜ್ಯಕ್ಕೆ ಮುತ್ತಿಗೆಹಾಕಿದನು. ಅಲ್ಲಿಯ ರಾಜನ ಹೆಸರು ಭಗದತ್ತ. ಅವನೊಡನೆ ನಡೆದ ಯುದ್ಧವೂ ಅತಿಭಯಂಕರವಾಗಿಯೇ ಇದ್ದಿತು. ಕಿರಾತರೂ–ಚೀನೀಯರೂ ಮತ್ತು ತೀರಪ್ರದೇಶದಲ್ಲಿದ್ದ ಅನೇಕಯೋಧರೂ ಭಗದತ್ತನಿಗೆ ಬೆಂಬಲಿಗರಾಗಿದ್ದರು. ಭಗದತ್ತನಿಗೂ ಅರ್ಜುನನಿಗೂ ಎಂಟು ದಿನಗಳ ಕಾಲ ಅವಿಚ್ಛಿನ್ನವಾದ ಸಮರವು ನಡೆಯಿತು. ಸ್ವಲ್ಪವಾದರೂ ಬಳಲಿಕೆಯಿಲ್ಲದೇ ಧೈರ್ಯೋತ್ಸಾಹಗಳಿಂದಲೇ ಗಾಂಡೀವವನ್ನು ಹಿಡಿದುನಿಂತಿದ್ದ ಅರ್ಜುನನನ್ನು ಶ್ಲಾಘಿಸಿ ಭಗದತ್ತನು ನಸುನಗುತ್ತಾ ಹೇಳಿದನು :

"ಪಾರ್ಥ! ಯುದ್ಧಕಲೆಯಲ್ಲಿ ವಿಶಾರದನಾದ ಮತ್ತು ಪಾಕಶಾಸನನಾದ ಇಂದ್ರನಿಗೆ ಮಗನಾದ ನಿನಗೆ ಈ ಅದ್ಭುತಪರಾಕ್ರಮವಿರುವುದು ಸಹಜವೇ ಆಗಿದೆ. ನಾನೂ ಕೂಡ ಇಂದ್ರನ ಮಿತ್ರನಾಗಿರುವುದು ಮಾತ್ರವಲ್ಲದೇ– ಯುದ್ಧಪರಿಶ್ರಮದಲ್ಲಿಯೂ ಇಂದ್ರನಿಗಿಂತಲೂ ಕಡಿಮೆಯವನಲ್ಲ. ಆದರೆ ನಿನ್ನೆದುರಿನಲ್ಲಿ ನಾನು ನಿಲ್ಲಲಾರದವನಾಗಿದ್ದೇನೆ. ಆದುದರಿಂದ, ನಾನೇನು ಮಾಡಬೇಕು? ನನ್ನಿಂದ ನೀನೇನನ್ನು ಅಭಿಲಾಷಿಸುವೆ? ತಿಳಿಸು. ನೀನೇನು ಹೇಳಿದರೂ ನಡೆಸಿಕೊಡಲು ಸಿದ್ಧನಾಗಿರುವೆನು."

"ಭಗದತ್ತ! ಕುರುವಂಶಪ್ರದೀಪನಾದ, ನೀತಿಶಾಸ್ತ್ರದಲ್ಲಿ ನಿಪುಣನಾದ, ಸತ್ಯನಿಷ್ಠನಾದ, ಯಜ್ಞನಿಷ್ಠನಾದ ಯುಧಿಷ್ಠಿರನನ್ನು ಚಕ್ರವರ್ತಿಯನ್ನಾಗಿ ಮಾಡಲು ನನಗೆ ಅಭಿಲಾಷೆಯಿದೆ. ಅವನಿಗೆ ನಿನ್ನಿಂದ ಕಪ್ಪವು ಕೊಡಲ್ಪಡಲಿ. ನೀನು ನನ್ನ ತಂದೆಯ ಮಿತ್ರನಾಗಿರುವೆ ಮತ್ತು ನನ್ನ ವಿಷಯದಲ್ಲಿ ಸುಪ್ರೀತನೂ ಆಗಿರುವೆ. ಆದುದರಿಂದ ನಾನು ನಿನಗೆ ಆಜ್ಞೆಮಾಡಲಾರೆನು. ನಿನ್ನ ಸಂತೋಷವಿದ್ದಷ್ಟು ಕಪ್ಪವನ್ನು ಕೊಡಬಹುದು, ಮಹಾರಾಜ!"

"ಕುಂತೀಪುತ್ರ! ನಿನ್ನ ಮೇಲೆ ನನಗೆ ಎಷ್ಟು ವಿಶ್ವಾಸವಿದೆಯೋ ಮತ್ತು ಗೌರವವಿದೆಯೋ ಯುಧಿಷ್ಠಿರನ ಮೇಲೆಯೂ ಅಷ್ಟೇ ವಿಶ್ವಾಸ-

ಗೌರವಗಳಿವೆ. ನೀನು ಹೇಳಿದುದೆಲ್ಲವನ್ನೂ ನಡೆಸಿಕೊಡಲು ನಾನು ಸಿದ್ಧನಿದ್ದೇನೆ. ಬೇರೇನಾದರೂ ಇಚ್ಛೆ ಇದ್ದರೂ ನಿಸ್ಸಂಕೋಚವಾಗಿ ಹೇಳು. ಸಂತೋಷದಿಂದ ಮಾಡುವೆನು."

೨೬ನೆಯ ಅಧ್ಯಾಯವು ಮುಗಿಯಿತು.

೨೭ನೆಯ ಅಧ್ಯಾಯ ದಿಗ್ವಿಜಯಪರ್ವ (ಮುಂದುವರಿದಿದೆ.)

## ಅರ್ಜುನನು ಪರ್ವತಪ್ರದೇಶದ ಅನೇಕರಾಜರನ್ನು ಗೆದ್ದುದು

"ಭಗದತ್ತಮಹಾರಾಜ! ನೀನು ಹೀಗೆ ಹೇಳಿದ ಮಾತ್ರದಿಂದಲೇ ನನ್ನ ಆಶಯಗಳೆಲ್ಲವೂ ಪೂರ್ಣವಾಯಿತೆಂದೇ ಭಾವಿಸುವೆನು" – ಎಂದು ಅರ್ಜುನನು ಭಗದತ್ತನನ್ನು ಆಶ್ವಸಿಸಿ, ಉತ್ತರದಿಕ್ಕನ್ನು ಹಿಡಿದು ಮುಂದೆ ಹೊರಟನು.

ಅಂತರ್ಗಿರಿ-ಬಹಿರ್ಗಿರಿ-ಉಪಗಿರಿಪ್ರದೇಶಗಳನ್ನು ಗೆದ್ದು, ಅಲ್ಲಿಯ ರಾಜರ ಪ್ರೀತಿ-ವಿಶ್ವಾಸಗಳನ್ನು ಗಳಿಸಿ, ಅವರನ್ನೂ ಕೂಡಿಕೊಂಡು ಉಲೂಕದ ಒಡೆಯನಾದ ಬೃಹಂತನೆಂಬ ರಾಜನೊಡನೆ ಯುದ್ಧಕ್ಕೆ ಸನ್ನದ್ಧನಾದನು. ರಣಭೇರಿಯ ಧ್ವನಿಯು ಭೂಮಿಯನ್ನೇ ನಡುಗಿಸಿತು. ರಥ-ಗಜಗಳ ಘೋರಧ್ವನಿಗಳು ಪಟ್ಟಣಿಗರ ಹೃದಯಗಳಲ್ಲಿ ಕಂಪನವನ್ನುಂಟು ಮಾಡುವುದಾಗಿದ್ದಿತು.

ಅರ್ಜುನನು ತನ್ನ ಪಟ್ಟಣಕ್ಕೆ ಮುತ್ತಿಗೆಹಾಕಿರುವನೆಂದು ತಿಳಿದೊಡನೆಯೇ ಬೃಹಂತನು ಚತುರಂಗಬಲಸಮೇತನಾಗಿ ಬಂದು ಅರ್ಜುನನು ಬಿಡುತ್ತಿದ್ದ ಬಾಣವೇಗವನ್ನು ಎದುರಿಸಿ ನಿಂತನು. ಅರ್ಜುನ-ಬೃಹಂತರ ಯುದ್ಧವು ಬಹುಭಯಂಕರವಾಗಿದ್ದಿತು. ಕಡೆಗೆ ಅರ್ಜುನನು ಬಿಡುತ್ತಿದ್ದ ತೀಕ್ಷ್ಣವಾದ ಬಾಣಗಳ ಆಘಾತವನ್ನು ಸಹಿಸಲು ಬೃಹಂತನಿಗೆ ಸಾಧ್ಯವಾಗದೇ ಹೋಯಿತು. ಪರ್ವತರಾಜನಾದ ಬೃಹಂತನು ತನ್ನಿಂದ ಅರ್ಜುನನನ್ನು ಸೋಲಿಸುವ ಸಾಧ್ಯತೆಯಿಲ್ಲವೆಂದು ನಿರ್ಧರಿಸಿ, ಯುದ್ಧದಿಂದ ವಿಮುಖನಾಗಿ ಹೇರಳವಾದ ಕಪ್ಪ-ಕಾಣಿಕೆಗಳನ್ನು ತಂದು ಅರ್ಜುನನಿಗೆ ಅರ್ಪಿಸಿದನು. ಅರ್ಜುನನು ಬೃಹಂತನ ರಾಜ್ಯವನ್ನು ಗೆದ್ದರೂ ರಾಜ್ಯವನ್ನು ಅವನಿಂದ ಕಿತ್ತುಕೊಳ್ಳದೇ ಅವನೊಡನೆ ಮೈತ್ರಿಯನ್ನೇ ಬೆಳೆಸಿ, ಅವನನ್ನೂ ಜೊತೆಯಲ್ಲಿ

ಕರೆದುಕೊಂಡು ಸೇನಾಬಿಂದುವೆಂಬ ಮತ್ತೊಬ್ಬ ರಾಜನ ಮೇಲೆ ದಾಳಿಮಾಡಿ ಅವನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದನು.

ಅನಂತರದಲ್ಲಿ ಅರ್ಜುನನು ಧರ್ಮರಾಜನ ಅಪ್ಪಣೆಯಂತೆ ಮೋದಾಪುರ, ವಾಮದೇವ, ಸುದಾಮಾನ, ಸುಸಂಕುಲ, ಉತ್ತರ ಉಲೂಕ–ಈ ರಾಜ್ಯಗಳನ್ನೂ ಗೆದ್ದನು. ಆ ಐದು ರಾಜ್ಯಗಳನ್ನೂ ಅರ್ಜುನನ ಸೈನಿಕರು ಹೋಗಿ ಗೆದ್ದುಬಂದರೇ ಹೊರತು ಅಲ್ಲಿಗೆ ಅರ್ಜುನನು ಹೋಗಲಿಲ್ಲ. ಸೇನಾಬಿಂದುವಿನ ರಾಜಧಾನಿಯಾದ ದೇವಪ್ರಸ್ಥದಲ್ಲಿಯೇ ತಾನೂ ಇದ್ದುಕೊಂಡು ಆ ಐದು ರಾಜ್ಯಗಳನ್ನೂ ಗೆದ್ದನು. ಗೆದ್ದ ರಾಜರೆಲ್ಲರನ್ನೂ ಕೂಡಿಕೊಂಡು ಮುಂದೆ ಅರ್ಜುನನು ಪುರುವಂಶದರಸನಾದ ವಿಷ್ವಗಶ್ವನ ಮೇಲೆ ಯುದ್ಧಕ್ಕೆ ಹೊರಟನು. ಪರ್ವತಪ್ರದೇಶದ ವೀರಯೋಧರನ್ನು ಧ್ವಂಸಮಾಡಿ, ವಿಷ್ವಗಶ್ವನನ್ನು ಸೋಲಿಸಿ, ಅವನ ರಾಜ್ಯವನ್ನು ಗೆದ್ದು, ಪರ್ವತಪ್ರದೇಶದಲ್ಲಿದ್ದ ಉತ್ಸವಸಂಕೇತರೆಂಬ ಏಳು ಜಾತಿಗಳ ನಾಯಕರನ್ನೂ ಸೋಲಿಸಿ, ಅವರೆಲ್ಲರನ್ನೂ ತನ್ನ ಆಶ್ರಿತರನ್ನಾಗಿ ಮಾಡಿಕೊಂಡನು.

ಕ್ಷತ್ರಿಯವಂಶಪ್ರದೀಪನಾದ ಅರ್ಜುನನು ಮುಂದೆ ಕಾಶ್ಮೀರದಲ್ಲಿದ್ದ ಕ್ಷತ್ರಿಯರಾಜನನ್ನು ಪರಾಜಯಗೊಳಿಸಿ, ಕಾಶ್ಮೀರದ ಸುತ್ತಲೂ ಇದ್ದ ಹತ್ತು ಮಂದಿ ಪಾಳೆಯಗಾರರನ್ನೂ ಮತ್ತು ಲೋಹಿತರನ್ನೂ ಸೋಲಿಸಿ, ತನ್ನ ಆಶ್ರಿತರನ್ನಾಗಿ ಮಾಡಿಕೊಂಡನು.

ಅರ್ಜುನನು ಎಲ್ಲ ರಾಜರ ಮೇಲೆಯೂ ಯುದ್ಧಮಾಡಿ ಅವರೆಲ್ಲರನ್ನೂ ಪರಾಜಯಗೊಳಿಸುತ್ತಿರುವ ವಿಷಯವನ್ನು ತಿಳಿದು ಕುಪಿತರಾದ ತ್ರಿಗರ್ತರು, ದಾರ್ವರು, ಕೋಕನದರು ಮತ್ತು ಇನ್ನೂ ಅನೇಕಕ್ಷತ್ರಿಯರಾಜರು ಒಟ್ಟಾಗಿ ಸೇರಿ ಸೈನ್ಯಸಮೇತರಾಗಿ ಬಂದು ಅರ್ಜುನನನ್ನು ಎದುರಿಸಿದರು. ಪಾರ್ಥನು ಅವರೆಲ್ಲರನ್ನೂ ಒಂದೆರಡು ದಿನಗಳಲ್ಲಿಯೇ ಪರಾಜಿತರನ್ನಾಗಿ ಮಾಡಿ ಸುಂದರವಾದ ಅಭಿಸಾರೀ ಎಂಬ ಪಟ್ಟಣವನ್ನು ತನ್ನ ವಶಪಡಿಸಿಕೊಂಡನು. ಉರಗ ರಾಜ್ಯಾಧಿಪತಿಯಾದ ರೋಚಮಾನನನ್ನು ಪರಾಜಯಗೊಳಿಸಿ ಮುಂದೆ ಚಿತ್ರಾಯುಧನಿಂದ ಸುರಕ್ಷಿತವಾಗಿದ್ದ ಸಿಂಹಪುರವನ್ನು ಸ್ವಾಧೀನಪಡಿಸಿಕೊಂಡನು. ಅಲ್ಲಿಂದ ಮುಂದೆ ಸುಹ್ಮ ಮತ್ತು ಚೋಲಗಳೆಂಬ ಪ್ರದೇಶಗಳಿಗೆ ಸೈನ್ಯಸಮೇತನಾಗಿ ಹೋಗಿ ಆ ದೇಶಗಳನ್ನೂ ಗೆದ್ದನು. ಬಳಿಕ ಬಲಿಷ್ಠರಾಗಿದ್ದ ಬಾಹ್ಲಿಕ

ರನ್ನು ಸೋಲಿಸಿ ತನ್ನ ಅಧೀನರನ್ನಾಗಿ ಮಾಡಿಕೊಂಡನು. ಅನಂತರದಲ್ಲಿ ಅರ್ಜುನನು ತನ್ನೊಡನೆ ಶಕ್ತಿಶಾಲಿಯಾದ ಸೈನ್ಯವನ್ನು ತೆಗೆದುಕೊಂಡು ದರದರನ್ನೂ, ಕಾಂಭೋಜರನ್ನೂ ಗೆದ್ದನು. ಅನಂತರದಲ್ಲಿ ಈಶಾನ್ಯದಿಕ್ಕಿನ ಕೊನೆಗೆ ಹೋಗಿ ಅಲ್ಲಿದ್ದ ಕಾಡುಜನರನ್ನೂ ಗೆದ್ದು ಅಲ್ಲಿನ ಆಡಳಿತವನ್ನು ಸುವ್ಯವಸ್ಥೆಗೊಳಿಸಿದನು. ಅಲ್ಲಿಂದ ಮುಂದೆ, ಅಲ್ಲಿಯೇ ಸಮೀಪದಲ್ಲಿದ್ದ ಲೋಹರೆಂಬ ಕಾಡುಜನರನ್ನೂ, ಪರಮಕಾಂಭೋಜರನ್ನೂ ಮತ್ತು ಉತ್ತರ ಋಷಿಕರನ್ನೂ ಗೆದ್ದನು. ಅದರಲ್ಲಿ ಉತ್ತರಋಷಿಕರೊಡನೆ ನಡೆದ ಕದನವು ಹೆಚ್ಚು ಭಯಂಕರವಾಗಿದ್ದಿತು. ನಿಶ್ಚಯವಾಗಿಯೂ ಆ ಯುದ್ಧವನ್ನು ದೇವ-ದಾನವರ ಯುದ್ಧಕ್ಕೆ ಹೋಲಿಸಬಹುದಾಗಿದ್ದಿತು. ಅರ್ಜುನನು ಸ್ವಭುಜ-ಬಲ-ಪರಾಕ್ರಮಗಳಿಂದ ಉತ್ತರಋಷಿಕರಾಜನನ್ನು ಸೋಲಿಸಿ, ಅವನಿಂದ ಗಿಳಿಗಳ ಉದರಪ್ರದೇಶದಂತೆ ಥಳಥಳಿಸುತ್ತಿದ್ದ ಎಂಟು ಕುದುರೆಗಳನ್ನೂ, ನವಿಲಿನ ಬಣ್ಣದಿಂದ ಕೂಡಿದ್ದ ಹಲವು ಕುದುರೆಗಳನ್ನೂ ಕಾಣಿಕೆಯನ್ನಾಗಿ ಸ್ವೀಕರಿಸಿದನು. ಆ ಪ್ರದೇಶದಲ್ಲಿ ಮಾತ್ರವೇ ಸಿಕ್ಕುವ ಆ ಕುದುರೆಗಳು ಶೀಘ್ರಗಾಮಿಗಳೂ ಆಗಿದ್ದುವು.

ಈ ರೀತಿಯಲ್ಲಿ ಅರ್ಜುನನು ಹಿಮಾಲಯದ ಮತ್ತು ನಿಷ್ಕುಟಪರ್ವತದ ತಪ್ಪಲಿನಲ್ಲಿದ್ದ ಸಕಲರಾಜರನ್ನೂ ಗೆದ್ದು, ಮುಂದೆ ಶ್ವೇತಪರ್ವತಕ್ಕೆ ಹೋಗಿ ಅಲ್ಲಿ ತನ್ನ ತಾತ್ಕಾಲಿಕವಾದ ಬಿಡಾರವನ್ನು ಮಾಡಿದನು."

೨೭ನೆಯ ಅಧ್ಯಾಯವು ಮುಗಿಯಿತು.

೨೮ನೆಯ ಅಧ್ಯಾಯ — ದಿಗ್ವಿಜಯಪರ್ವ (ಮುಂದುವರಿದಿದೆ.)

## ಅರ್ಜುನನು ಕಿಂಪುರುಷ, ಹಾಟಕ, ಉತ್ತರಕುರುಗಳನ್ನೂ ಗೆದ್ದು ಇಂದ್ರಪ್ರಸ್ಥಕ್ಕೆ ಹಿಂದಿರುಗಿದುದು

"ಮಹಾರಾಜ! ಅರ್ಜುನನು ಶ್ವೇತಪರ್ವತದಿಂದ ಹೊರಟು ಕಿಂಪುರುಷರ ದೇಶಕ್ಕೆ ಮುತ್ತಿಗೆಹಾಕಿ, ಆ ದೇಶದ ಅಧಿಪತಿಯಾದ ದ್ರುಮಪುತ್ರನೆಂಬ ರಾಜನೊಡನೆ ಹೋರಾಡಿ, ಅನೇಕಕ್ಷತ್ರಿಯರನ್ನು ಧ್ವಂಸಮಾಡಿ, ಆ ರಾಜನನ್ನೂ ಸೋಲಿಸಿ, ಕಿಂಪುರುಷದೇಶವನ್ನು ಸ್ವಾಧೀನಮಾಡಿಕೊಂಡನು. ಅನಂತರದಲ್ಲಿ ಏಕಾಗ್ರಚಿತ್ತನಾದ ಅರ್ಜುನನು ಗುಹ್ಯಕರಿಂದ ರಕ್ಷಿತವಾಗಿದ್ದ

ಹಾಟಕವೆಂಬ ದೇಶಕ್ಕೆ ಹೋಗಿ, ಅಲ್ಲಿಯ ರಾಜನನ್ನು ಸಾಮೋಪಾಯದಿಂದಲೇ ಗೆದ್ದನು. ಆ ಸ್ಥಳದಲ್ಲಿಯೇ ಪಾರ್ಥನು ದಿವ್ಯವಾದ ಮತ್ತು ಪವಿತ್ರತಮವಾದ ಮಾನಸಸರೋವರವನ್ನೂ, ಋಷಿಗಳಿಂದ ಸಂಸೇವ್ಯಮಾನವಾದ ಇನ್ನೂ ಅನೇಕಸರೋವರಗಳನ್ನೂ ಸಂದರ್ಶಿಸಿದನು. ಆ ಪ್ರದೇಶವು ಹಾಟಕದೇಶದ ಸಮೀಪದಲ್ಲಿದ್ದು ಗಂಧರ್ವರಿಂದ ರಕ್ಷಿತವಾಗಿದ್ದಿತು. ಅರ್ಜುನನು ಆ ದೇಶವನ್ನೂ ಗೆದ್ದು, ಆ ರಾಜ್ಯದ ಅಧಿಪತಿಯಿಂದ ತಿತ್ತಿರಿ, ಕಲ್ಮಾಷ, ಮಂಡೂಕಗಳೆಂಬ ಉತ್ತಮಜಾತಿಯ ಕುದುರೆಗಳನ್ನು ಕಾಣಿಕೆಯ ರೂಪದಲ್ಲಿ ಪಡೆದನು.

ಕಟ್ಟಕಡೆಗೆ ಅರ್ಜುನನು ಉತ್ತರಕುರುವರ್ಷದೇಶದ ಬಳಿಗೆ ಬಂದು ಅದನ್ನು ಜಯಿಸಲು ನಿಶ್ಚಯಿಸಿದನು. ಆ ದೇಶದ ಎಲ್ಲೆಯಲ್ಲಿದ್ದ ಮಹಾಕಾಯರಾದ, ಮಹಾಬಲಶಾಲಿಗಳಾದ ಗಡಿಯ ಸೇವಕರು ಅರ್ಜುನನ ಸಮೀಪಕ್ಕೆ ಬಂದು ನಗು-ನಗುತ್ತಲೇ ಹೇಳಿದರು :

"ಪಾರ್ಥ! ಈ ಉತ್ತರಕುರುವರ್ಷವನ್ನು ಗೆಲ್ಲಲು ನಿನಗೆ ಸಾಧ್ಯವಿಲ್ಲ. ನೀನು ಮಂಗಳವನ್ನೇ ಆಶಿಸುವೆಯಾದರೆ ಇದನ್ನು ಗೆಲ್ಲುವ ಹಂಬಲವನ್ನು ತೊರೆದು ಹಿಂದಿರುಗುವುದೇ ಶ್ರೇಯಸ್ಕರ. ನೀನೀಗ ಸ್ವಾಧೀನ ಪಡಿಸಿಕೊಂಡಿರುವ ದೇಶಗಳೇ ಸಾಕಷ್ಟಿವೆ. ಅವುಗಳಿಂದಲೇ ತೃಪ್ತನಾಗು. ಮಾನವನು ಈ ಪ್ರದೇಶದೊಳಗೆ ಕಾಲಿಟ್ಟನೆಂದರೆ ಖಂಡಿತವಾಗಿಯೂ ಒಡನೆಯೇ ವಿನಾಶಹೊಂದುವನು. ನಾವು ನಿನ್ನ ವಿಷಯದಲ್ಲಿ ಸುಪ್ರೀತರಾಗಿದ್ದೇವೆ. ಮೇಲಾಗಿ ನೀನು ಈ ದೇಶವನ್ನು ಗೆಲ್ಲಬೇಕೆಂದು ಹೊರಟರೆ ನಿನ್ನ ಕಣ್ಣಿಗೆ ಯಾವುದೂ ಗೋಚರವಾಗುವುದೂ ಇಲ್ಲ. ಉತ್ತರಕುರುಗಳು ಇಲ್ಲಿ ವಾಸಮಾಡುತ್ತಿದ್ದಾರೆ. ಇಲ್ಲಿ ಹಿಂದೆ ಯಾವಾಗಲೂ ಯುದ್ಧವು ನಡೆದಿರುವುದಿಲ್ಲ ; ಮುಂದೆಯೂ ನಡೆಯಲಾರದು. ಈ ಪ್ರದೇಶವನ್ನು ಸ್ವಾಧೀನಪಡಿಸಿಕೊಳ್ಳುವ ಒಂದು ವಿಷಯವನ್ನು ಬಿಟ್ಟು ಬೇರೇನಾದರೂ ಇದ್ದರೆ ತಿಳಿಸು. ನಾವದನ್ನು ಮಾಡಿಕೊಡುವೆವು."

ಗಡಿಯ ರಕ್ಷಕರ ಮಾತುಗಳನ್ನು ಕೇಳಿ ಅರ್ಜುನನು ಮಂದಸ್ಮಿತನಾಗಿಯೇ ಉತ್ತರಿಸಿದನು :

"ಮೇಧಾವಿಯಾದ, ಧರ್ಮಿಷ್ಠನಾದ ಯುಧಿಷ್ಠಿರನು ಏಕಚಕ್ರಾಧಿಪತಿ

ಯಾಗಬೇಕೆಂಬುದೇ ನನ್ನ ಆಶಯ. ಮಾನವರಿಗೆ ಈ ನಿಮ್ಮ ರಾಜ್ಯದಲ್ಲಿ ಪ್ರವೇಶಕ್ಕೆ ಅವಕಾಶವಿಲ್ಲದಿದ್ದರೆ ನಾನು ಮುನ್ನುಗ್ಗಿ ಬರಲಾರೆನು. ಆದರೆ ಯುಧಿಷ್ಠಿರನನ್ನು ಚಕ್ರವರ್ತಿಯನ್ನಾಗಿ ಅಂಗೀಕರಿಸುವ ಸಂಕೇತಕ್ಕಾಗಿ ಯಥೋಚಿತವಾದ ಕಾಣಿಕೆಯು ನಿಮ್ಮಿಂದ ಕೊಡಲ್ಪಡಬೇಕು."

ಅರ್ಜುನನ ಮಾತಿಗೆ ಸಮ್ಮತಿಸಿದ ಗಡಿಯ ರಕ್ಷಕರು ದಿವ್ಯವಾದ ಪೀತಾಂಬರಗಳನ್ನೂ, ದೇವಯೋಗ್ಯವಾದ ಆಭರಣಗಳನ್ನೂ, ರೇಷ್ಮೆಯ ವಸ್ತ್ರಗಳನ್ನೂ, ದಿವ್ಯವಾದ ಅಜಿನಗಳನ್ನೂ ತಂದು ಕಾಣಿಕೆಯ ರೂಪವಾಗಿ ಅರ್ಜುನನಿಗೆ ಸಮರ್ಪಿಸಿದರು.



ಈ ರೀತಿಯಲ್ಲಿ ಅರ್ಜುನನು ಉತ್ತರದಿಕ್ಕಿನಲ್ಲಿದ್ದ ಅನೇಕರಾಜರನ್ನೂ, ಪಾಳೆಯಗಾರರನ್ನೂ, ಕಾಡುಜನರನ್ನೂ ಎದುರಿಸಿ–ಯುದ್ಧಮಾಡಿ, ಅವರೆಲ್ಲ ರನ್ನೂ ಪರಾಜಯಗೊಳಿಸಿ ಸ್ವಾಧೀನಪಡಿಸಿಕೊಂಡು ಕಪ್ಪ-ಕಾಣಿಕೆಗಳ ರೂಪ ದಲ್ಲಿ ಹೇರಳವಾದ ರತ್ನಾಭರಣಗಳನ್ನೂ, ಸುವರ್ಣವನ್ನೂ, ದಿವ್ಯಾಂಬರ ಗಳನ್ನೂ, ಉತ್ತಮವಾಜಿಗಳನ್ನೂ ತೆಗೆದುಕೊಂಡು ಚತುರಂಗಬಲಸಮೇತ

ನಾಗಿ ಶಕ್ರಪ್ರಸ್ಥಕ್ಕೆ ಹಿಂದಿರುಗಿಬಂದು, ಸಿಂಹಾಸನಾರೂಢನಾಗಿದ್ದ ಯುಧಿಷ್ಠಿರನಿಗೆ ಎಲ್ಲವನ್ನೂ ಸಮರ್ಪಿಸಿದನು.

ಯುಧಿಷ್ಠಿರನ ಆನಂದಕ್ಕೆ ಪಾರವೇ ಇರಲಿಲ್ಲ. ಒಡನೆಯೇ ಸಿಂಹಾಸನದಿಂದಿಳಿದು ಪಾರ್ಥನನ್ನು ಬಾಚಿ-ತಬ್ಬಿ, ನೆತ್ತಿಯನ್ನು ಆಘ್ರಾಣಿಸಿ, ಸವಿಮಾತುಗಳನ್ನಾಡಿ ಅವನ ಅರಮನೆಗೆ ಕಳುಹಿಸಿಕೊಟ್ಟನು."

೨೮ನೆಯ ಅಧ್ಯಾಯವು ಮುಗಿಯಿತು.

೨೯ನೆಯ ಅಧ್ಯಾಯ ದಿಗ್ವಿಜಯಪರ್ವ (ಮುಂದುವರಿದಿದೆ)

## ಪೂರ್ವದಿಕ್ಕಿನ ವಿಜಯಕ್ಕಾಗಿ ಭೀಮನ ಪ್ರಯಾಣ : ಅನೇಕರಾಜರ ಪರಾಜಯ

"ಪಾರಿಕ್ಷಿತ! ಭೀಮಸೇನನೂ ಯುಧಿಷ್ಠಿರನ ಅನುಜ್ಞೆಯನ್ನು ಪಡೆದು ಪೂರ್ವದಿಕ್ಕಿನೆಡೆಗೆ ಹೊರಟನು. ಭರತವಂಶಪ್ರದೀಪನಾದ, ಮಹಾಪರಾಕ್ರಮಿಯಾದ ಮತ್ತು ಶತ್ರುಗಳ ದುಃಖವನ್ನು ಹೆಚ್ಚಿಸುವವನಾದ ಭೀಮಸೇನನು ಚತುರಂಗಬಲಸಮೇತನಾಗಿ ಮೊದಲು ಪಾಂಚಾಲದೇಶಕ್ಕೆ ಹೋಗಿ, ಪಾಂಚಾಲರನ್ನು ಸಾಮ-ದಾನಗಳಿಂದಲೇ ಆಶ್ರಿತರನ್ನಾಗಿ ಮಾಡಿಕೊಂಡು ಮುಂದೆ ಗಂಡಕರನ್ನೂ, ವಿದೇಹರನ್ನೂ ಬಲಪ್ರಯೋಗದಿಂದ ಜಯಿಸಿದನು. ಅಲ್ಲಿಂದ ಮುಂದೆ ದಶಾರ್ಣದೇಶಕ್ಕೆ ಮುತ್ತಿಗೆಹಾಕಿದನು. ದಶಾರ್ಣರ ಅಧಿಪತಿಯಾದ ಸುಧರ್ಮನಿಗೂ–ಭೀಮನಿಗೂ ಭಯಂಕರವಾದ ದ್ವಂದ್ವಯುದ್ಧವು ನಡೆದು, ಕಟ್ಟಕಡೆಗೆ ಭೀಮನು ಸುಧರ್ಮನ ಪರಾಕ್ರಮವನ್ನು ಪ್ರಶಂಸಿಸಿ, ಅವನನ್ನೇ ತನ್ನ ಸೈನ್ಯಕ್ಕೆ ದಂಡನಾಯಕನನ್ನಾಗಿ ಮಾಡಿಕೊಂಡು ಪುರಸ್ಕರಿಸಿದನು. ಅನಂತರದಲ್ಲಿ ಪೂರ್ವದ ಕಡೆಗೆ ಪ್ರಯಾಣಮಾಡುತ್ತಾ, ಅಶ್ವಮೇಧೇಶ್ವರನಾದ ರೋಚಮಾನನನ್ನು ರಣಾಂಗಣದಲ್ಲಿ ಸಂಧಿಸಿದನು. ಕೆಲವು ದಿನಗಳು ಇಬ್ಬರಿಗೂ ಭಯಂಕರವಾದ ಯುದ್ಧವು ನಡೆದನಂತರ ಭೀಮನು ರೋಚಮಾನನನ್ನು ಪರಾಜಯಗೊಳಿಸಿ, ಆ ದೇಶವನ್ನು ಸ್ವಾಧೀನಪಡಿಸಿಕೊಂಡನು. ಅಲ್ಲಿಂದ ಮುಂದೆ ಭೀಮನು ದಕ್ಷಿಣದಿಕ್ಕಿಗೆ ತಿರುಗಿದವನಾಗಿ ಪುಲಿಂದರಾಜ್ಯಕ್ಕೆ ಹೋಗಿ, ಸುಕುಮಾರ ಮತ್ತು ಸುಮಿತ್ರರೆಂಬ ರಾಜರನ್ನು ತನ್ನ ಆಶ್ರಿತರನ್ನಾಗಿ ಮಾಡಿಕೊಂಡನು.

ಅನಂತರದಲ್ಲಿ ಪರಾಜಿತರಾದ ರಾಜರಿಂದಲೂ ಮತ್ತು ಅವರ ಸೈನ್ಯದಿಂದಲೂ ಕೂಡಿದವನಾಗಿ, ಧರ್ಮರಾಜನ ಶಾಸನಾನುಸಾರವಾಗಿ ಶಿಶುಪಾಲನ ರಾಜ್ಯವಾದ ಚೇದಿರಾಜ್ಯವನ್ನು ಪ್ರವೇಶಿಸಿದನು. ಶಿಶುಪಾಲನು ಭೀಮಸೇನನ ಆಶಯವೇನೆಂಬುದನ್ನು ಅರಿತವನಾಗಿ, ಪಟ್ಟಣದಿಂದ ಹೊರಗಡೆ ಬಂದು, ಪಾಂಡುಸುತನನ್ನು ಸಂಧಿಸಿ, ಅವನನ್ನು ಆದರದಿಂದ ಸ್ವಾಗತಿಸಿದನು. ಇಬ್ಬರಿಗೂ ಪರಸ್ಪರ ಕುಶಲಪ್ರಶ್ನೆಗಳಾದನಂತರ ಶಿಶುಪಾಲನು ಚೇದಿರಾಜ್ಯವನ್ನು ಭೀಮಸೇನನಿಗೆ ಅರ್ಪಿಸಿ ಮಂದಹಾಸದಿಂದ ಕೇಳಿದನು :

"ಭೀಮಸೇನ! ನಿನಗೆ ಬೇರಾವ ಅಭಿಲಾಷೆಯಿದೆ?"

ರಾಜ್ಯವನ್ನು ಗೆಲ್ಲಲು ಬಂದ ಭೀಮಸೇನನಿಗೆ ಯಾವ ವಿಧವಾದ ಪ್ರತಿಭಟನೆಯನ್ನೂ ತೋರದೇ ರಾಜ್ಯವನ್ನೇ ಅರ್ಪಿಸಿಬಿಟ್ಟರೆ ಭೀಮಸೇನನು ಹೇಳುವುದೇನಿದೆ? ಕೇಳುವುದೇನಿದೆ? ಭೀಮಸೇನನು ಸಂತುಷ್ಟನಾಗಿ ಯುಧಿಷ್ಠಿರನು ಮಾಡಬೇಕೆಂದಿದ್ದ ರಾಜಸೂಯಯಾಗದ ವಿಷಯವನ್ನೂ ಅದಕ್ಕಾಗಿ ತಾನು ಹೊರಟಿರುವ ದಿಗ್ವಿಜಯದ ವಿಷಯವನ್ನೂ ವಿಶದವಾಗಿ ಶಿಶುಪಾಲನಿಗೆ ತಿಳಿಸಿ, ಶಿಶುಪಾಲನ ಪ್ರಾರ್ಥನೆಯನ್ನು ಅಂಗೀಕರಿಸಿ ಅವನ ರಾಜಧಾನಿಯಲ್ಲಿ ಮೂವತ್ತು ರಾತ್ರಿಗಳನ್ನು ಕಳೆದು, ಸೈನ್ಯಸಮೇತನಾಗಿ ಮುಂದೆ ಹೊರಟನು."

೨೯ನೆಯ ಅಧ್ಯಾಯವು ಮುಗಿಯಿತು.

೩೦ನೆಯ ಅಧ್ಯಾಯ ದಿಗ್ವಿಜಯಪರ್ವ (ಮುಂದುವರಿದಿದೆ.)

## ಭೀಮನು ಪೂರ್ವದಿಕ್ಕಿನ ರಾಜರನ್ನೆಲ್ಲಾ ಗೆದ್ದು ಇಂದ್ರಪ್ರಸ್ಥಕ್ಕೆ ಹಿಂದಿರುಗಿದುದು

"ಜನಮೇಜಯ! ಮಹಾಪರಾಕ್ರಮಿಯಾದ ಭೀಮಸೇನನು ಕುಮಾರವೆಂಬ ರಾಜ್ಯದ ಅಧಿಪತಿಯಾಗಿದ್ದ ಶ್ರೇಣಿಮಂತನನ್ನೂ, ಕೋಸಲರಾಜನಾದ ಬೃಹದ್ಬಲನನ್ನೂ ಪರಾಜಯಗೊಳಿಸಿದನು. ಅಯೋಧ್ಯೆಗೆ ಹೋಗಿ ಅಲ್ಲಿಯ ರಾಜನಾದ ದೀರ್ಘಯಜ್ಞನೆಂಬುವನನ್ನು ಪರಾಜಯಗೊಳಿಸಿ ಗೋಪಾಲಕಕ್ಷವನ್ನು ಸ್ವಾಧೀನಪಡಿಸಿಕೊಂಡು ಉತ್ತರಕೋಸಲಾಧಿಪತಿಯನ್ನೂ, ಮಲ್ಲರೆಂಬ ಜನಾಂಗದ ನಾಯಕನನ್ನೂ ತನ್ನ ಆಶ್ರಿತರನ್ನಾಗಿ ಮಾಡಿಕೊಂಡನು.

ಶೀತಲಪ್ರದೇಶವಾದ ಹಿಮವತ್ಪರ್ವತದ ತಪ್ಪಲಿನ ಒಂದು ಪಾರ್ಶ್ವದಲ್ಲಿದ್ದ ಜಲೋದ್ಭವಪ್ರದೇಶವನ್ನು ಆಕ್ರಮಿಸಿ, ಅಲ್ಲಿದ್ದ ರಾಜರನ್ನು ಅತ್ಯಲ್ಪಕಾಲದಲ್ಲಿಯೇ ಸೋಲಿಸಿ, ಯುಧಿಷ್ಠಿರನ ರಾಜ್ಯವನ್ನು ಇನ್ನೂ ವಿಸ್ತರಿಸಿದನು. ಭಲ್ಲಾಟರ ದೇಶಕ್ಕೆ ಮುತ್ತಿಗೆ ಹಾಕಿ, ಅಲ್ಲಿದ್ದ ರಾಜನನ್ನು ಸೋಲಿಸಿ ಆ ರಾಜ್ಯದ ಸಮೀಪದಲ್ಲಿದ್ದ ಶುಕ್ತಿಮಂತವೆಂಬ ಪರ್ವತವನ್ನೂ ಸ್ವಾಧೀನಪಡಿಸಿಕೊಂಡನು. ಅನಂತರದಲ್ಲಿ ಕಾಶಿಯ ರಾಜನಾದ ಸುಬಾಹುವನ್ನು ಸೋಲಿಸಿ ಸುಪಾರ್ಶ್ವವೆಂಬ ಪರ್ವತದ ಸುತ್ತಲೂ ಇದ್ದ ಕ್ರಥನೆಂಬ ರಾಜನ ರಾಜ್ಯವನ್ನು ತನ್ನ ವಶಪಡಿಸಿಕೊಂಡನು. ಮತ್ಸ್ಯರನ್ನೂ, ಮಹಾಬಲಶಾಲಿಗಳಾದ ಮಲದರನ್ನೂ ಸೋಲಿಸಿ ಅನಘ ಮತ್ತು ಅಭಯದೇಶಗಳನ್ನು ಜಯಿಸಿ–ಪಶುಪತಿಯ ಭೂಮಿಯನ್ನು (ನೇಪಾಳ ಪ್ರದೇಶ) ದಾಟಿ, ಮದಧಾರವೆಂಬ ಪರ್ವತಪ್ರದೇಶವನ್ನು ಗೆದ್ದು, ಸೋಮಧೇಯರೆಂಬುವರನ್ನು ಸೋಲಿಸಿ, ಬಳಿಕ ಭೀಮಸೇನನು ಉತ್ತರಾಭಿಮುಖವಾಗಿ ಹೊರಟನು. ಅಲ್ಲಿದ್ದ ವತ್ಸಭೂಮಿಯನ್ನು ಗೆದ್ದು ಭರ್ಗರೆಂಬ ಜನಾಂಗದ ಅಧಿಪತಿಯನ್ನೂ, ನಿಷಾದಾಧಿಪತಿಯನ್ನೂ ಪರಾಜಯಗೊಳಿಸಿ ಆ ಪ್ರದೇಶದ ಸುತ್ತಲೂ ಇದ್ದ ಮಣಿಮಂತನೇ ಮೊದಲಾದ ಅನೇಕರಾಜರನ್ನು ಆಶ್ರಿತರನ್ನಾಗಿ ಮಾಡಿಕೊಂಡನು. ಭೋಗವಂತವೆಂಬ ಪರ್ವತಕ್ಕೆ ಹೋಗಿ ಅದರ ತಪ್ಪಲಿನಲ್ಲಿದ್ದ ದಕ್ಷಿಣ ಮಲ್ಲರೆಂಬುವರನ್ನು ಗೆದ್ದು, ಶರ್ಮಕರೆಂಬುವರನ್ನೂ–ವರ್ಮಕರೆಂಬು ವರನ್ನೂ ಸಾಮೋಪಾಯದಿಂದಲೇ ಆಶ್ರಿತರನ್ನಾಗಿ ಮಾಡಿಕೊಂಡನು. ವಿದೇಹಾಧಿಪತಿಯಾಗಿದ್ದ ಜನಕನನ್ನು ಸೋಲಿಸಿ, ಶಕರೆಂಬುವರನ್ನೂ–ಬರ್ಬರರೆಂಬುವರನ್ನೂ ಕೌಟಿಲ್ಯದಿಂದ ಜಯಿಸಿದನು. ವಿದೇಹರಾಜ್ಯದಿಂದ ಹೊರಟು ಇಂದ್ರಪರ್ವತದ ಸಮೀಪಕ್ಕೆ ಹೋಗಿ, ಅಲ್ಲಿದ್ದ ಏಳು ಕಿರಾತರಾಜರನ್ನೂ ಸೋಲಿಸಿ ತನ್ನ ಆಶ್ರಿತರನ್ನಾಗಿ ಮಾಡಿಕೊಂಡನು.

ಆ ಪರ್ವತದ ಸಮೀಪದಲ್ಲಿದ್ದ, ಸೈನ್ಯಸಮೇತರಾದ ಸುಹ್ಮ-ಪ್ರಸುಹ್ಮ ರೆಂಬ ರಾಜರನ್ನು ಸೋಲಿಸಿ, ಮಗಧರಾಜ್ಯಕ್ಕೆ ಹೊರಟನು. ಮಾರ್ಗಮಧ್ಯ ದಲ್ಲಿದ್ದ ದಂಡ ಮತ್ತು ದಂಡಧಾರರೆಂಬ ರಾಜರನ್ನು ಸೋಲಿಸಿ ಗಿರಿವ್ರಜಕ್ಕೆ ಧಾವಿಸಿದನು. ಸಾಮೋಪಾಯದಿಂದಲೇ ಜರಾಸಂಧನ ಮಗನಾದ ಸಹ ದೇವನನ್ನು ಆಶ್ರಿತನನ್ನಾಗಿ ಮಾಡಿಕೊಂಡು, ಅವನಿಂದ ಕಪ್ಪ-ಕಾಣಿಕೆಗಳನ್ನು

ಸ್ವೀಕರಿಸಿ, ತಾನು ಅದುವರೆಗೂ ಆಶ್ರಿತರನ್ನಾಗಿ ಮಾಡಿಕೊಂಡಿದ್ದ ಸಕಲರಾಜರನ್ನೂ ಕೂಡಿಕೊಂಡು ಕರ್ಣನೆಂಬ ರಾಜನ ಮೇಲೆ ಯುದ್ಧಕ್ಕೆ ಹೊರಟನು. ಒಂದೆರಡು ದಿನಗಳಲ್ಲಿಯೇ ಕರ್ಣನನ್ನೂ ಸೋಲಿಸಿ, ಪರ್ವತಪ್ರದೇಶದಲ್ಲಿದ್ದ ನೂರಾರು ರಾಜರನ್ನು ಬಲಪ್ರದರ್ಶನದಿಂದಲೇ ಆಶ್ರಿತರನ್ನಾಗಿ ಮಾಡಿಕೊಂಡು, ಮೋದಗಿರಿಗೆ ಹೋಗಿ ಅಲ್ಲಿ ಪ್ರಬಲನಾಗಿದ್ದ ರಾಜನನ್ನು ಭುಜಬಲ-ಪರಾಕ್ರಮಗಳಿಂದ ಸಂಹರಿಸಿ ರಾಜ್ಯವನ್ನು ಸ್ವಾಧೀನಮಾಡಿಕೊಂಡು ಮುಂದೆ ಮಹಾಪರಾಕ್ರಮಿಯಾದ ಪುಂಡ್ರಾಧಿಪತಿಯಾದ ವಾಸುದೇವನನ್ನೂ ಕೌಶಿಕೀನದಿಯ ತೀರಪ್ರದೇಶವನ್ನಾಳುತ್ತಿದ್ದ ಮಹಾಪರಾಕ್ರಮಿಯಾಗಿದ್ದ ಮಹೌಜಸನೆಂಬ ರಾಜನನ್ನೂ ಸೋಲಿಸಿ, ವಂಗರಾಜ್ಯದ ಅಧಿಪತಿಯನ್ನೂ ಜಯಿಸಿ ಅವರೆಲ್ಲರನ್ನೂ ಆಶ್ರಿತರನ್ನಾಗಿ ಮಾಡಿಕೊಂಡನು. ಸಮುದ್ರಸೇನ, ಚಂದ್ರಸೇನ, ತಾಮ್ರಲಿಪ್ತ, ಕರ್ವಟಾಧಿಪತಿ, ಸುಹ್ಮಾಧಿಪತಿ ಮತ್ತು ಸಮುದ್ರತೀರಗಳಲ್ಲಿದ್ದ ಇತರ ರಾಜ್ಯಗಳ ಅಧಿಪತಿಗಳನ್ನೂ ಸೋಲಿಸಿ, ಅವರಿಂದಲೂ ಕಪ್ಪ-ಕಾಣಿಕೆಗಳನ್ನು ಯಥೇಚ್ಛವಾಗಿ ಪಡೆದು, ಮುಂದೆ ಮ್ಲೇಚ್ಛಾಧಿಪತಿಯನ್ನು ಪರಾಜಯಗೊಳಿಸಿದನು.

ಈ ರೀತಿಯಲ್ಲಿ ವಾಯುಕುಮಾರನು ಪೂರ್ವದಿಕ್ಕಿನ ಸಕಲರಾಜರನ್ನೂ ಸೋಲಿಸಿ ಕಪ್ಪ-ಕಾಣಿಕೆಗಳನ್ನು ಸ್ವೀಕರಿಸಿ, ಲೌಹಿತ್ಯರಾಜ್ಯವನ್ನು ಮುತ್ತಿದನು. ಅಲ್ಲಿದ್ದ ಮ್ಲೇಚ್ಛರಾಜರನ್ನು ಸೋಲಿಸಿ, ಅವರುಗಳಿಂದ ಸುವರ್ಣನಾಣ್ಯಗಳನ್ನೂ, ಗಂಧದ ಸಾಮಾನುಗಳನ್ನೂ, ಚಂದನಾಗುರುಗಳನ್ನೂ, ಒಳ್ಳೆಯ ವಸ್ತ್ರಗಳನ್ನೂ, ವಜ್ರ-ವೈಡೂರ್ಯಗಳನ್ನೂ, ಬೆಳ್ಳಿಯ ನಾಣ್ಯಗಳನ್ನೂ ಕಾಣಿಕೆಯನ್ನಾಗಿ ತೆಗೆದುಕೊಂಡನು. ಮ್ಲೇಚ್ಛರಾಜರು ಭೀಮಸೇನನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ, ಕೋಟಿಸಂಖ್ಯಾತವಾದ ಸುವರ್ಣನಾಣ್ಯಗಳಿಂದಲೂ, ವಜ್ರ-ವೈಡೂರ್ಯಗಳಿಂದಲೂ ಅಭಿಷೇಚಿಸಿದರು.

ಹೇರಳವಾದ ಧನ-ಕನಕ-ವಸ್ತುಗಳಿಂದ ಕೂಡಿದ ಭೀಮಸೇನನು ಇಂದ್ರಪ್ರಸ್ಥಕ್ಕೆ ಹಿಂದಿರುಗಿ, ತಾನು ತಂದ ಎಲ್ಲ ಕಪ್ಪ-ಕಾಣಿಕೆಗಳನ್ನೂ ಧರ್ಮಾತ್ಮನಾದ ಯುಧಿಷ್ಠಿರನ ಪಾದಾರವಿಂದಗಳಲ್ಲಿ ಸಮರ್ಪಿಸಿದನು.

ತಿ೦ನೆಯ ಅಧ್ಯಾಯವು ಮುಗಿಯಿತು.

೩೧ನೆಯ ಅಧ್ಯಾಯ ದಿಗ್ವಿಜಯಪರ್ವ (ಮುಂದುವರಿದಿದೆ.)

## ಸಹದೇವನಿಂದ ದಕ್ಷಿಣದಿಗ್ವಿಜಯ

ಜನಮೇಜಯ! ಯುಧಿಷ್ಠಿರನಿಂದ ಪ್ರೀತಿಪೂರ್ವಕವಾದ ಹಿತವಚನಗಳೊಡನೆ ಕಳುಹಿಸಲ್ಪಟ್ಟ ಸಹದೇವನು ದಕ್ಷಿಣಾಭಿಮುಖವಾಗಿ ದಿಗ್ವಿಜಯಕ್ಕೆ ಹೊರಟನು. ಮೊಟ್ಟಮೊದಲು ಶೂರಸೇನರನ್ನು ಪರಾಜಯಗೊಳಿಸಿ ಮತ್ಸ್ಯದೇಶಾಧಿಪತಿಯನ್ನು ತನ್ನ ಆಶ್ರಿತರಾಜನನ್ನಾಗಿ ಮಾಡಿಕೊಂಡನು. ಅಧಿರಾಜರಿಗೆ ಅಧಿಪತಿಯಾದ ದಂತವಕ್ತ್ರನನ್ನು ಸೋಲಿಸಿ, ಅವನಿಂದ ಯಥೇಚ್ಛವಾಗಿ ಕಪ್ಪ-ಕಾಣಿಕೆಗಳನ್ನು ಸ್ವೀಕರಿಸಿ, ಪುನಃ ಅವನಿಗೇ ಆ ರಾಜ್ಯದ ಆಧಿಪತ್ಯವನ್ನು ಬಿಟ್ಟುಕೊಟ್ಟನು.

ಅನಂತರದಲ್ಲಿ ಸಹದೇವನು ಮುಂದೆ ಹೊರಟು ಸುಕುಮಾರ-ಸುಮಿತ್ರ ರೆಂಬ ರಾಜರನ್ನು ಪರಾಜಯಗೊಳಿಸಿ, ಅಪರಮತ್ಸ್ಯರೆಂಬ ಹೆಸರಿನ ಅನೇಕ ನಾಯಕರನ್ನೂ, ಪಟಚ್ಚರರೆಂಬುವವರನ್ನೂ ಪರಾಜಯಗೊಳಿಸಿದನು.

ಸಹದೇವನು ಮುಂದೆ ತೆರಳಿ ನಿಷಾದರ ರಾಜ್ಯವನ್ನು ಗೆದ್ದು, ಗೋಶೃಂಗವೆಂಬ ಪರ್ವತವನ್ನು ತನ್ನ ವಶಪಡಿಸಿಕೊಂಡನು. ಒಂದೆರಡು ದಿನಗಳಲ್ಲಿಯೇ ಆ ಪರ್ವತದ ಸಮೀಪದಲ್ಲಿದ್ದ ಶ್ರೇಣಿಮಂತನೆಂಬ ರಾಜನೂ ಸಹದೇವನ ಅಧೀನನಾದನು. ಅನೇಕರಾಷ್ಟ್ರಗಳನ್ನು ಜಯಿಸಿದ ಸಹದೇವನು ಉತ್ಸಾಹದಿಂದ ಮುಂದೆ ಹೋಗುತ್ತಾ, ನರರಾಷ್ಟ್ರವೆಂಬ ಪ್ರಾಂತವನ್ನು ಗೆದ್ದು, ಕುಂತಿಭೋಜನ ಮೇಲೆ ದಂಡೆತ್ತಿಹೋದನು. ಕುಂತಿಭೋಜನು ಯುಧಿಷ್ಠಿರನ ಸಾರ್ವಭೌಮತ್ವವನ್ನು ಅತ್ಯಾದರದಿಂದ ಒಪ್ಪಿಕೊಂಡನಂತರ, ಸಹದೇವನು ಸೈನ್ಯಸಮೇತನಾಗಿ ಚರ್ಮಣ್ವತೀನದಿಯ ತೀರಕ್ಕೆ ಹೋಗಿ ಅಲ್ಲಿದ್ದ ಜಂಭಕನ ಮಗನ ರಾಜ್ಯಕ್ಕೆ ಮುತ್ತಿಗೆ ಹಾಕಿದನು. ಜಂಭಕರಾಜನನ್ನು ವಾಸುದೇವನು ಪರಾಜಯಗೊಳಿಸಿದ್ದ ವಿಷಯವು ಸಹದೇವನಿಗೆ ತಿಳಿದಿತ್ತು. ಜಂಭಕನ ಮಗನಿಗೂ–ಸಹದೇವನಿಗೂ ಘೋರಯುದ್ಧವು ನಡೆದು ಜಂಭಕನ ಮಗನು ಪರಾಜಿತನಾದನು. ಸಹದೇವನು ಇನ್ನೂ ದಕ್ಷಿಣಕ್ಕೆ ಹೋಗಿ, ಆ ಪ್ರದೇಶದಲ್ಲಿದ್ದ ಸೇಕರೆಂಬುವವರನ್ನೂ, ಅಪರಸೇಕರೆಂಬುವವ ರನ್ನೂ ಪರಾಜಯಗೊಳಿಸಿ, ಅವರುಗಳಿಂದ ಯಥೇಚ್ಛವಾದ ರತ್ನಾಭರಣ

ಗಳನ್ನು ಕಪ್ಪವಾಗಿ ತೆಗೆದುಕೊಂಡನು. ತಾನು ಪರಾಜಯಗೊಳಿಸಿದ್ದ ರಾಜರೆಲ್ಲರ ಸೈನ್ಯಗಳನ್ನೂ ತೆಗೆದುಕೊಂಡು ನರ್ಮದಾನದಿಯ ತೀರದಲ್ಲಿದ್ದ ಅವಂತಿದೇಶದ ಮೇಲೆ ದಾಳಿ ನಡೆಸಿ, ಅಲ್ಲಿನ ಸುಪ್ರಸಿದ್ಧ ರಾಜರಾದ ವಿಂದ-ಅನುವಿಂದರೆಂಬುವವರನ್ನೂ ಪರಾಜಯಗೊಳಿಸಿ, ಅವರಿಂದ ಯಥೇಚ್ಛವಾಗಿ ಧನವನ್ನು ಸಂಗ್ರಹಿಸಿದನು. ತರುವಾಯ ಸಹದೇವನು ಭೋಜಕಟವೆಂಬ ರಾಜಧಾನಿಗೆ ಮುತ್ತಿಗೆಹಾಕಿದನು. ಅಲ್ಲಿಯ ರಾಜನಾದ ಭೀಷ್ಮಕನಿಗೂ, ಸಹದೇವನಿಗೂ ಎರಡು ದಿನಗಳ ಘೋರಯುದ್ಧವು ನಡೆದು, ಕಡೆಗೆ ಭೀಷ್ಮಕನು ಪರಾಜಿತನಾದನು. ಅಲ್ಲಿಂದ ಮುಂದೆ ಸಹದೇವನು ಕೋಸಲೇಶ್ವರನನ್ನೂ, ವೇಣಾ ಎಂಬ ನದಿಯ ತೀರದಲ್ಲಿನ ರಾಜನನ್ನೂ, ಕಾಂತಾರಕರೆಂಬುವವರನ್ನೂ, ಪೂರ್ವಕೋಸಲರನ್ನೂ ಜಯಿಸಿದನು.

ತರುವಾಯ ಸಹದೇವನು ನಾಟಕೇಯರೆಂಬುವವರನ್ನೂ, ಹೇರಂಬಕರೆಂಬುವವರನ್ನೂ ಯುದ್ಧದಲ್ಲಿ ಸೋಲಿಸಿ, ಮಾರುಧವೆಂಬ ದೇಶವನ್ನು ತನ್ನ ವಶಪಡಿಸಿಕೊಂಡನು. ಸಹದೇವನ ಪರಾಕ್ರಮವನ್ನು ಕಂಡು ರಮ್ಯಗ್ರಾಮಾಧಿಪತಿಯು ಶರಣಾಗತನಾದನು. ಅನಂತರ ಸಹದೇವನು ಅರಣ್ಯಪ್ರದೇಶದ ನಾಯಕರಾಗಿದ್ದ ನಾಚೀನರೆಂಬುವವರನ್ನೂ ಅರ್ಬುಕರೆಂಬುವವರನ್ನೂ ಪರಾಜಯಗೊಳಿಸಿ, ವಾತಾಧಿಪತಿಯನ್ನು ತನ್ನ ಆಶ್ರಿತರಾಜನನ್ನಾಗಿ ಮಾಡಿಕೊಂಡು, ಪುಲಿಂದರನ್ನು ಸೋಲಿಸಿ, ಇನ್ನೂ ದಕ್ಷಿಣಕ್ಕೆ ತೆರಳಿ, ಪಾಂಡ್ಯದೇಶಾಧಿಪತಿಯೊಡನೆ ಒಂದು ದಿನದ ಯುದ್ಧಮಾಡಿ ಅವನನ್ನು ಪರಾಜಯಗೊಳಿಸಿ, ಅಲ್ಲಿಂದ ಮುಂದೆ ಲೋಕಪ್ರಸಿದ್ಧವಾದ ಕಿಷ್ಕಿಂಧಾಪಟ್ಟಣಕ್ಕೆ ತೆರಳಿ ಅಲ್ಲಿದ್ದ ಮೈಂದ-ದ್ವಿವಿದರೆಂಬ ಕಪಿರಾಜರೊಡನೆ ಏಳು ದಿನಗಳ ಕಾಲ ಅವಿಚ್ಛಿನ್ನವಾಗಿ ಹೋರಾಡಿದನು. ಮೈಂದ-ದ್ವಿವಿದರು ಪರಾಜಯಗೊಳ್ಳದಿದ್ದರೂ ಸಹದೇವನ ಸಾಮರ್ಥ್ಯಕ್ಕೆ ಮೆಚ್ಚಿ, ಯುದ್ಧವನ್ನು ನಿಲ್ಲಿಸಿ ಸಹದೇವನಿಗೆ ಹೇಳಿದರು :

**ಗಚ್ಛ ಪಾಣ್ಡವಶಾರ್ದೂಲ ರತ್ನಾನ್ಯಾದಾಯ ಸರ್ವಶಃ।**
**ಅವಿಘ್ನಮಸ್ತು ಕಾರ್ಯಾಯ ಧರ್ಮರಾಜಾಯ ಧೀಮತೇ ॥೨೦॥**

“ಪಾಂಡವಶಾರ್ದೂಲ! ನಿನಗೆ ಬೇಕಾದಷ್ಟು ರತ್ನಾಭರಣಗಳನ್ನು

ತೆಗೆದುಕೊಂಡು ಮುಂದೆ ಪ್ರಯಾಣಮಾಡು. ಧೀಮಂತನಾದ ಧರ್ಮರಾಜನ ಕಾರ್ಯಕ್ಕೆ ಯಾವ ವಿಧವಾದ ವಿಘ್ನವೂ ಬರದೆ ಅದು ನಿರ್ವಿಘ್ನವಾಗಿ ನೆರವೇರಲಿ" – ಹೀಗೆ ಹೇಳಿ ಹೇರಳವಾದ ಧನ-ಕನಕ-ವಸ್ತುಗಳನ್ನು ಅರ್ಪಿಸಿ ಕಳುಹಿಸಿಕೊಟ್ಟರು.

ಸಹದೇವನು ಕಪೀಶ್ವರರು ಕೊಟ್ಟ ಧನ-ಕನಕ-ವಸ್ತುಗಳೆಲ್ಲವನ್ನೂ ತೆಗೆಸಿಕೊಂಡು, ಮುಂದೆ ಮಾಹಿಷ್ಮತೀನಗರಕ್ಕೆ ಹೋಗಿ, ಅಲ್ಲಿಯ ರಾಜನಾದ ನೀಲನೊಡನೆ ಯುದ್ಧಸನ್ನದ್ಧನಾದನು. ಅವರಿಬ್ಬರಿಗೂ ನಡೆದ ಯುದ್ಧವು ಅಸಾಧಾರಣವೂ ಮತ್ತು ಭಯಂಕರವೂ ಆಗಿತ್ತು. ಯುದ್ಧದಲ್ಲಿ ಸಹದೇವನ ಪ್ರಾಣಕ್ಕೇ ಅಪಾಯವು ತಲೆದೋರಿತ್ತು. ಏಕೆಂದರೆ : ಮಹಾಮಹಿಮನಾದ ಯಜ್ಞೇಶ್ವರನೇ ನೀಲನ ಪಕ್ಷವನ್ನು ವಹಿಸಿ ಯುದ್ಧಮಾಡುತ್ತಿದ್ದನು. ಸಹದೇವನ ಅಖಂಡಸೈನ್ಯಸಮೂಹವೂ ಕ್ಷಣಮಾತ್ರದಲ್ಲಿ ಯಜ್ಞೇಶ್ವರನ ಜ್ವಾಲೆಗಳಿಂದ ಪರಿವೃತವಾಯಿತು. ರಥಗಳು, ಕುದುರೆಗಳು, ಆನೆಗಳು, ಕಾಲಾಳುಗಳು, ಕವಚಗಳು ಎಲ್ಲವೂ ಹೊತ್ತಿ ಉರಿಯಲು ಪ್ರಾರಂಭಿಸಿದುವು. ಆ ಅದ್ಭುತವನ್ನು ಕಂಡು ಸಹದೇವನು ಚಿಂತಾಮಗ್ನನಾದನು. ಮುಂದೇನು ಮಾಡಬೇಕೆಂಬುದೇ ಅವನಿಗೆ ತಿಳಿಯದಾಯಿತು.

ಯಜ್ಞ-ಯಾಗಾದಿಗಳನ್ನು ಮಾಡುವುದು ಯಜ್ಞೇಶ್ವರನ ಪ್ರೀತ್ಯರ್ಥವಾಗಿ. ಯುಧಿಷ್ಠಿರನು ರಾಜಸೂಯಯಾಗಮಾಡುವುದೂ ಯಜ್ಞೇಶ್ವರನ ಪ್ರೀತಿಗಾಗಿಯೇ. ಸಹದೇವನು ದಿಗ್ವಿಜಯಕ್ಕಾಗಿ ಬಂದಿರುವುದು ರಾಜಸೂಯಯಾಗದ ಕಾರಣಕ್ಕಾಗಿ. ಹೀಗಿದ್ದರೂ ಯಜ್ಞೇಶ್ವರನು ನೀಲರಾಜನೊಡನೆ ಸೇರಿ ಸಹದೇವನನ್ನು ಪರಾಭವಗೊಳಿಸಲು ಯತ್ನಿಸಿದುದು ಅನುಚಿತವಲ್ಲವೇ? ಈ ವಿಷಯವಾಗಿಯೇ ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ತಾಪಸೋತ್ತಮರೇ! ಯಜ್ಞೇಶ್ವರನ ಪ್ರೀತ್ಯರ್ಥವಾಗಿ ಕೈಗೊಂಡಿರುವ ರಾಜಸೂಯಯಾಗದ ಅಂಗವಾಗಿ ದಿಗ್ವಿಜಯಕ್ಕಾಗಿ ಬಂದಿದ್ದ ಸಹದೇವನಿಗೇಕೆ ಅಗ್ನಿದೇವನು ಉಪಟಳಕೊಟ್ಟನು? ದಯೆಯಿಟ್ಟು ತಿಳಿಸಿರಿ."

"ಮಹಾರಾಜ! ಅದಕ್ಕೊಂದು ಕಾರಣವಿದೆ. ಹಿಂದೆ ಮಾಹಿಷ್ಮತೀ

ಪಟ್ಟಣದಲ್ಲಿ ವಾಸವಾಗಿದ್ದ ಅಗ್ನಿಯು ಪರದಾರಾಸಕ್ತನೆಂಬ ಅಪವಾದವನ್ನು ಹೊಂದಿದ್ದನು. ಪಟ್ಟಣದ ಅಧಿಪತಿಯಾದ ನೀಲನಿಗೆ ಕಡುಚೆಲುವೆಯಾದ ಮಗಳೊಬ್ಬಳಿದ್ದಳು. ರಾಜನು ಹೋಮ-ಹವನಗಳಲ್ಲಿ ಉದ್ಯುಕ್ತನಾಗಿರುವಾಗ ಅವನ ಮಗಳು ಯಜ್ಞೇಶ್ವರನನ್ನು ಪ್ರಜ್ವಲಿಸುವಂತೆ ಮಾಡಲೋಸುಗ ಅಗ್ನಿ ಕುಂಡದ ಬಳಿಯಲ್ಲಿಯೇ ಇರುತ್ತಿದ್ದಳು. ಚೆಲುವೆಯಾದ ರಾಜಕನ್ಯೆಯ ಸಹವಾಸದಿಂದ ಸಂತುಷ್ಟನಾಗಿದ್ದ ಅಗ್ನಿದೇವನು, ರಾಜಕನ್ಯೆಯನ್ನುಳಿದು ಮತ್ತಾರಾದರೂ ಬಂದು ವ್ಯಜನದಿಂದ ಗಾಳಿಬೀಸಿದರೂ ಪ್ರಜ್ವಲಿಸುತ್ತಿರಲಿಲ್ಲ. ಧೂಮವು ಬಹಳವಾಗಿ ಸುತ್ತಿಕೊಂಡು ಯಜಮಾನ-ಯಾಜಕರಿಬ್ಬರೂ ಯಾಗಶಾಲೆಯಿಂದ ಹೊರಗೆ ಹೋಗುವಂತಾಗುತ್ತಿತ್ತು. ರಾಜಕನ್ಯೆಯ ಕೆಂದುಟಿಗಳನ್ನು ಸ್ಪರ್ಶಮಾಡಿ ಹೊರಟ ಗಾಳಿಯು ಸೋಂಕಿದೊಡನೆಯೇ ಯಜ್ಞೇಶ್ವರನು 'ಭುಗ್' ಎಂದು ಹೊತ್ತಿ ಉರಿಯುವನು. ಅದು ಮೊದಲಾಗಿ 'ಸುದರ್ಶನಾ' ಎಂಬ ಹೆಸರಿನ ಆ ರಾಜಪುತ್ರಿಯನ್ನು ಅಗ್ನಿದೇವನು ಕಾಮಿಸುತ್ತಿದ್ದನು. ಆ ವಿಷಯವು ನೀಲರಾಜನೇ ಮೊದಲಾಗಿ ಎಲ್ಲರಿಗೂ ತಿಳಿದುಹೋಯಿತು.

ಯಜ್ಞೇಶ್ವರನು ಬ್ರಾಹ್ಮಣರೂಪವನ್ನು ತಾಳಿ ರಾಜನಿಗೆ ತಿಳಿಯದಂತೆ ರಾಜಕನ್ಯೆಯೊಡನೆ ರಮಿಸತೊಡಗಿದನು.

ಏಕಾಂತದಲ್ಲಿ ಮಾಡುವ ಯಾವ ಕಾರ್ಯವೂ ಹೆಚ್ಚು ದಿನಗಳವರೆಗೆ ರಹಸ್ಯವಾಗಿ ಉಳಿಯುವುದಿಲ್ಲ. ಯಾವುದಾದರೊಂದು ಕಾರಣದಿಂದ ಬಹಿರಂಗವಾಗದೇ ಇರದು.

ಬ್ರಾಹ್ಮಣನೊಬ್ಬನು ತನ್ನ ಮಗಳೊಡನೆ ರಹಸ್ಯವಾಗಿ ರಮಿಸುತ್ತಿರುವನೆಂಬ ವಾರ್ತೆಯು ಕೆಲವು ದಿನಗಳಲ್ಲಿಯೇ ನೀಲರಾಜನಿಗೂ ತಿಳಿದು, ಆತನು ಕುಪಿತನಾಗಿ ಬ್ರಾಹ್ಮಣನಿಗೆ – ಅವನು ಮಾಡಿದ ಅಪರಾಧಕ್ಕಾಗಿ–ಯಥೋಚಿತವಾದ ಶಿಕ್ಷೆಯನ್ನೀಯುವಂತೆ ಆಜ್ಞಾಪಿಸಿದನು.

ರಾಜನ ಮಾತುಗಳನ್ನು ಕೇಳಿದೊಡನೆಯೇ ಯಜ್ಞೇಶ್ವರನು ಕುಪಿತನಾದನು. ಬ್ರಾಹ್ಮಣನ ಸುತ್ತಲೂ ಜ್ವಾಲೆಗಳು ಪ್ರಾದುರ್ಭವಿಸಿದುವು.

ರಾಜನು ವಿಸ್ಮಯಗೊಂಡನು. ಮುಂದೇನಾಗುವುದೋ ಎಂಬ

ಭಯದಿಂದ ಕಂಪಿಸುತ್ತಾ, ಬ್ರಾಹ್ಮಣನಿಗೆ ದೀರ್ಘದಂಡನಮಸ್ಕಾರವನ್ನು ಮಾಡಿದನು. ತನ್ನ ಮಗಳ ಸೌಂದರ್ಯಕ್ಕೆ ಆಕರ್ಷಿತನಾಗಿರುವವನು ಮಹಾಮಹಿಮನಾದ ಯಜ್ಞೇಶ್ವರನೆಂಬುದು ತಿಳಿದನಂತರ ನೀಲರಾಜನು ಬ್ರಾಹ್ಮಣರೂಪಿಯಾದ ಯಜ್ಞೇಶ್ವರನಿಗೇ ತನ್ನ ಮಗಳನ್ನು ಕೊಟ್ಟು ಯಥಾವಿಧಿಯಾಗಿ ವಿವಾಹವನ್ನು ಮಾಡಿದನು.

ತಾನು ಕಾಮಿಸಿ ಪ್ರೇಮಿಸಿದ ಚೆಲುವೆಯನ್ನು ಪಡೆದ ವಿಭಾವಸುವು ಸುಪ್ರೀತನಾಗಿ, ನೀಲರಾಜನನ್ನು ಸಂತೈಸಿ, ಬೇಕಾದ ವರವೊಂದನ್ನು ಕೇಳಿಕೊಳ್ಳುವಂತೆ ಹೇಳಿದನು.

"ಯುದ್ಧದಲ್ಲಿ ನಿಯೋಜಿತವಾದ ನನ್ನ ಚತುರಂಗಬಲವು ಯಾವ ಕಾರಣದಿಂದಲೂ ಭಯದಿಂದ ಹಿಮ್ಮೆಟ್ಟುವಂತಾಗಬಾರದು" – ಎಂದು ಕೇಳಿದ ರಾಜನ ಪ್ರಾರ್ಥನೆಗೆ ಅಗ್ನಿದೇವನು 'ತಥಾಸ್ತು' ಎಂದನು.

ಜನಮೇಜಯ! ಅಂದಿನ ದಿನದಿಂದ ಯಾವ ರಾಜನೇ ಆಗಲೀ–ಈ ವಿಷಯವನ್ನು ತಿಳಿಯದೇ ನೀಲರಾಜನ ಮೇಲೆ ದಂಡೆತ್ತಿಹೋದಕೂಡಲೇ ಅವನ ಸಕಲಸೈನ್ಯಸಮೂಹವನ್ನೂ ಹುತಾಶನನು ಕ್ಷಣಮಾತ್ರದಲ್ಲಿ ಭಸ್ಮ ಮಾಡಿಬಿಡುವನು. ಅದು ಮೊದಲ್ಗೊಂಡು ಮಾಹಿಷ್ಮತೀಪಟ್ಟಣದಲ್ಲಿ ಪುರುಷರು ತಮ್ಮ ಇಚ್ಛಾನುಸಾರವಾಗಿ ಯುವತಿಯರನ್ನು ಪಾಣಿಗ್ರಹಣಮಾಡಿಕೊಳ್ಳುವ ಸಾಧ್ಯತೆಯಿರಲಿಲ್ಲ. ಯುವತಿಯರು ಇಚ್ಛಿಸಿದರೆ ಮಾತ್ರವೇ ಪಾಣಿಗ್ರಹಣಮಾಡಿಕೊಳ್ಳಲು ಸಾಧ್ಯವಾಗುತ್ತಿತ್ತು. ಸ್ತ್ರೀಯರು ಸ್ವೇಚ್ಛೆಯಿಂದಿರುತ್ತಾ ತಮಗೆ ಇಷ್ಟರಾದವರನ್ನು ವರಿಸುತ್ತಿದ್ದರು. ಸ್ತ್ರೀಯರು ಸ್ವೇಚ್ಛಾಚಾರಿಗಳಾಗಿದ್ದರೂ ದೋಷಭಾಗಿಗಳಾಗುವುದಿಲ್ಲವೆಂಬ ಯಜ್ಞೇಶ್ವರನ ವರವೇ ಅದಕ್ಕೆ ಕಾರಣವಾಗಿದ್ದಿತು. ಶತ್ರುರಾಜರು ಅಗ್ನಿಯ ಭಯದಿಂದಾಗಿ ಮಾಹಿಷ್ಮತೀಪಟ್ಟಣದ ಮೇಲೆ ಆಕ್ರಮಣಮಾಡುವುದನ್ನು ಸಂಪೂರ್ಣವಾಗಿ ನಿಲ್ಲಿಸಿಬಿಟ್ಟರು. ಅದರಿಂದಾಗಿ ನೀಲರಾಜನಿಗೆ ಶತ್ರುಗಳಿಂದ ಭಯವೆಂಬುದೇ ಇರಲಿಲ್ಲ.

ಸಹದೇವನ ಸೈನ್ಯದ ಮೇಲೆ ಅಗ್ನಿದೇವನ ಜ್ವಾಲೆಗಳು ಆವರಿಸಿದುವು. ಸೈನಿಕರು ಭಯದಿಂದ ವಿಹ್ವಲರಾದರು. ಅದನ್ನು ಕಂಡು ಧರ್ಮಾತ್ಮನಾದ

ಸಹದೇವನು ಧೈರ್ಯಗೆಡಲಿಲ್ಲ. ಕೈ-ಕಾಲುಗಳನ್ನು ತೊಳೆದುಕೊಂಡು ಶುದ್ಧಾಚಮನವನ್ನು ಮಾಡಿ ಪರಿಶುದ್ಧನಾಗಿ, ಪರ್ವತದಂತೆ ಸುಸ್ಥಿರವಾಗಿ ನಿಂತು ಯಜ್ಞೇಶ್ವರನನ್ನು ಸ್ತೋತ್ರಮಾಡಲು ಉಪಕ್ರಮಿಸಿದನು :

ತ್ವದರ್ಥೋಽಯಂ ಸಮಾರಮ್ಭಃ ಕೃಷ್ಣವರ್ತ್ಮನ್ನಮೋಽಸ್ತು ತೇ ।
ಮುಖಂ ತ್ವಮಸಿ ದೇವಾನಾಂ ಯಜ್ಞಸ್ತ್ವಮಸಿ ಪಾವಕ ॥೪೧॥
ಪಾವನಾತ್ಪಾವಕಶ್ಚಾಸಿ ವಹನಾದ್ಧವ್ಯವಾಹನಃ।
ವೇದಾಸ್ತ್ವದರ್ಥಂ ಜಾತಾ ವೈ ಜಾತವೇದಾಸ್ತತೋ ಹ್ಯಸಿ ॥೪೨॥
ಚಿತ್ರಭಾನುಃ ಸುರೇಶಶ್ಚ ಅನಲಸ್ತ್ವಂ ವಿಭಾವಸೋ।
ಸ್ವರ್ಗದ್ವಾರಸ್ಪೃಶಶ್ಚಾಸಿ ಹುತಾಶೋ ಜ್ವಲನಃ ಶಿಖೀ ॥೪೩॥

ವೈಶ್ವಾನರಸ್ತ್ವಂ ಪಿಙ್ಗೇಶಃ ಪ್ಲವಙ್ಗೋ ಭೂರಿತೇಜಸಃ।
ಕುಮಾರಸೂಸ್ತ್ವಂ ಭಗವಾನ್ರುದ್ರಗರ್ಭೋ ಹಿರಣ್ಯಕೃತ್ ॥೪೪॥

ಅಗ್ನಿರ್ದದಾತು ಮೇ ತೇಜೋ ವಾಯುಃ ಪ್ರಾಣಂ ದದಾತು ಮೇ।
ಪೃಥಿವೀ ಬಲಮಾದಧ್ಯಾಚ್ಛಿವಂ ಚಾಪೋ ದಿಶನ್ತು ಮೇ ॥೪೫॥

ಅಪಾಂಗರ್ಭ ಮಹಾಸತ್ತ್ವ ಜಾತವೇದಃ ಸುರೇಶ್ವರ।
ದೇವಾನಾಂ ಮುಖಮಗ್ನೇ ತ್ವಂ ಸತ್ಯೇನ ವಿಪುನೀಹಿ ಮಾಮ್॥೪೬॥

ಋಷಿಭಿರ್ಬ್ರಾಹ್ಮಣೈಶ್ಚೈವ ದೈವತೈರಸುರೈರಪಿ।
ನಿತ್ಯಂ ಸುಹುತ ಯಜ್ಞೇಷು ಸತ್ಯೇನ ವಿಪುನೀಹಿ ಮಾಮ್ ॥೪೭॥

ಧೂಮಕೇತುಃ ಶಿಖೀ ಚ ತ್ವಂ ಪಾಪಹಾನಿಲಸಮ್ಭವಃ।
ಸರ್ವಪ್ರಾಣಿಷು ನಿತ್ಯಸ್ಥಃ ಸತ್ಯೇನ ವಿಪುನೀಹಿ ಮಾಮ್ ॥೪೮॥

ಏವಂ ಸ್ತುತೋಽಸಿ ಭಗವನ್ಪ್ರೀತೇನ ಶುಚಿನಾ ಮಯಾ।
ತುಷ್ಟಿಂ ಪುಷ್ಟಿಂ ಶ್ರುತಿಂ ಚೈವ ಪ್ರೀತಿಂ ಚಾಗ್ನೇ ಪ್ರಯಚ್ಛ ಮೇ॥

"ಕಪ್ಪಾದ ಧೂಮದಿಂದ ಆವೃತನಾಗಿರುವ ಯಜ್ಞೇಶ್ವರನೇ! ನಿನಗೆ ನಮಸ್ಕಾರವು. ಮಹಾನುಭಾವ! ನಿನ್ನ ಸಲುವಾಗಿಯೇ ಈ ಮಹಾಯಾಗ ವನ್ನು ಮಾಡಲು ಉಪಕ್ರಮಿಸಿದ್ದೇವೆ. 'ಅಗ್ನಿಮುಖಾ ವೈ ದೇವಾಃ' ಎಂದು ಶ್ರುತಿಗಳು ಸಾರುತ್ತಿವೆ. ನೀನು ಸಮಸ್ತದೇವತೆಗಳಿಗೂ ಮುಖ

ಸ್ವರೂಪನಾಗಿರುವೆ. ಯಜ್ಞವೂ ನೀನೇ ಆಗಿರುವೆ. ನೀನು ಪ್ರಪಂಚದ ಎಲ್ಲ ವಸ್ತುಗಳನ್ನೂ ಪವಿತ್ರಗೊಳಿಸುವ ಶಕ್ತಿಯುಳ್ಳವನಾದುದರಿಂದ ಪಾವಕನೆಂಬ ಅಭಿಧಾನವನ್ನು ಪಡೆದಿರುವೆ. ಯಜ್ಞ-ಯಾಗಾದಿಗಳಲ್ಲಿ ನಿನಗರ್ಪಿಸುವ ಹವಿಸ್ಸನ್ನು ದೇವತೆಗಳಿಗೆ ಒಯ್ಯುವುದರಿಂದ ನಿನ್ನನ್ನು ಹವ್ಯವಾಹನನೆಂದೂ ಕರೆಯುತ್ತಾರೆ. ಚತುರ್ವೇದಗಳು ಪ್ರಾದುರ್ಭೂತವಾಗಿರುವುದೂ ನಿನಗಾಗಿಯೇ. ಮಹಾನುಭಾವನೇ! 'ಜಾತವೇದಾಃ' ಎಂಬ ಪವಿತ್ರನಾಮವು ಈ ವಿಷಯವನ್ನು ಸ್ಪಷ್ಟಪಡಿಸಿದೆ. ನಿನ್ನನ್ನು ಚಿತ್ರಭಾನು, ಸುರೇಶ, ಅನಲ–ಎಂಬ ಪವಿತ್ರನಾಮಗಳಿಂದಲೂ ಕರೆಯುವರು. ನೀನು ಜ್ವಾಲೆಗಳ ಮೂಲಕ ಸ್ವರ್ಗದ್ವಾರವನ್ನೂ ಸ್ಪರ್ಶಿಸುವೆ. ಇದರಿಂದಲೇ ನಿನಗೆ ಹುತಾಶ, ಜ್ವಲನ, ಶಿಖೀ ಎಂಬ ನಾಮಧೇಯಗಳೂ ಉಕ್ತವಾಗಿವೆ.

ಪೂಜ್ಯನೇ! ವೈಶ್ವಾನರನೂ ನೀನೇ ಆಗಿರುವೆ. ಪಿಂಗೇಶ, ಪ್ಲವಂಗ, ಭೂರಿತೇಜಸ–ಎಂಬ ಪವಿತ್ರನಾಮಗಳೂ ನಿನಗೇ ಹೇಳಲ್ಪಟ್ಟಿವೆ. ಕುಮಾರ ಸ್ವಾಮಿಗೆ ಜನ್ಮದಾತನು ನೀನು. ಇದರಿಂದಲೇ ನಿನ್ನನ್ನು ರುದ್ರಗರ್ಭನೆಂದೂ, ಹಿರಣ್ಯಕೃತ್ ಎಂದೂ ಕರೆಯುತ್ತಾರೆ.

ಭೋ ಅಗ್ನಿದೇವ! ನೀನು ನನಗೆ ತೇಜಸ್ಸನ್ನು ದಯಪಾಲಿಸು. ವಾಯುದೇವನು ನನ್ನ ಪ್ರಾಣಗಳನ್ನು ರಕ್ಷಿಸಲಿ. ಪೃಥ್ವಿಯು ನನಗೆ ಪರಾಕ್ರಮವನ್ನೀಯಲಿ. ಜಲಾಧಿಪತಿಯು ಮಂಗಳವನ್ನುಂಟುಮಾಡಲಿ.

ನೀರಿಗೆ ಗರ್ಭಪ್ರಾಯನಾಗಿರತಕ್ಕವನೇ! (ನೀರಿನ ಉತ್ಪತ್ತಿಗೆ ಕಾರಣನಾದವನೇ!) ಮಹಾಸತ್ತ್ವವುಳ್ಳವನೇ! ಜಾತವೇದನೇ! ಸುರೇಶ್ವರನೇ! ನೀನು ದೇವತೆಗಳೆಲ್ಲರಿಗೂ ಮುಖಪ್ರಾಯನು. ನೀನು ಸತ್ಯವಚನದಿಂದ ನನ್ನನ್ನು ಪೂತನನ್ನಾಗಿ ಮಾಡು.

ಅನೇಕಮಹರ್ಷಿಗಳಿಂದಲೂ, ಬ್ರಾಹ್ಮಣರಿಂದಲೂ, ದೇವಾಸುರ ರಿಂದಲೂ ಯಜ್ಞ-ಯಾಗಾದಿಗಳಲ್ಲಿ ಅನುದಿನವೂ ಆಹುತಿಪೂರ್ವಕವಾಗಿ ಅರ್ಚಿಸಲ್ಪಡುವ ಅಗ್ನಿದೇವನೇ! ನೀನೇ ನನ್ನನ್ನು ಸತ್ಯವಾಕ್ಕಿನಿಂದ ಉದ್ಧರಿಸು.

ಧೂಮಕೇತು, ಶಿಖೀ–ಎಂಬ ಪವಿತ್ರನಾಮಗಳನ್ನೂ ಹೊಂದಿರುವ,

ಪಾಪಹರನಾದ, ಅನಿಲಸಂಭವನಾದ, ಸಕಲಪ್ರಾಣಿಗಳ ಹೃದಯ ಗಳಲ್ಲಿಯೂ ಜಠರಾಗ್ನಿಯ ರೂಪದಲ್ಲಿ ಸರ್ವದಾ ನಿಗೂಢನಾಗಿ ಕುಳಿತಿರುವ ಮಹಾನುಭಾವನೇ! ನನ್ನನ್ನು ಸತ್ಯವಚನದಿಂದ ಪರಿಶುದ್ಧನನ್ನಾಗಿ ಮಾಡು.

ಅಗ್ನಿದೇವ! ನಿನ್ನನ್ನು ನಾನು ಆದರಪೂರ್ವಕವಾಗಿ ಪರಿಶುದ್ಧನಾಗಿ ಸ್ತೋತ್ರಮಾಡುತ್ತಿದ್ದೇನೆ. ನೀನು ನನಗೆ ದಯಮಾಡಿ ತುಷ್ಟಿಯನ್ನೂ, ಪುಷ್ಟಿಯನ್ನೂ, ತಿಳಿವಳಿಕೆಯನ್ನೂ, ಪ್ರೀತಿಯನ್ನೂ ಅನುಗ್ರಹಿಸುವವನಾಗು."

**ಇತ್ಯೇವಂ ಮನ್ತ್ರಮಾಗ್ನೇಯಂ ಪಠನ್ಯೋ ಜುಹುಯಾದ್ವಿಭುಮ್।**
**ಋದ್ಧಿಮಾನ್ಸತತಂ ದಾನ್ತಃ ಸರ್ವಪಾಪೈಃ ಪ್ರಮುಚ್ಯತೇ ॥೫೦॥**

ಜನಮೇಜಯ! ಸಹದೇವನ ಮುಖಾರವಿಂದದಿಂದ ಹೊರಟ ಈ ಅಗ್ನಿಮಂತ್ರವನ್ನು ಪಠಿಸಿ ಜಿತೇಂದ್ರಿಯರಾಗಿ ಯಾರು ಯಜ್ಞೇಶ್ವರನಿಗೆ ಹೋಮಮಾಡುತ್ತಾರೆಯೋ ಅವರು ಶ್ರೇಯಃ-ಪ್ರೇಯಗಳನ್ನು ಪಡೆದು ಸರ್ವಪಾಪಗಳಿಂದಲೂ ವಿಮುಕ್ತರಾಗುತ್ತಾರೆ.

ಸಹದೇವನು ಪುನಃ ಅಗ್ನಿಯನ್ನು ಸ್ತುತಿಸಿದನು : "ದೇವದೇವ! ಹವ್ಯವಾಹನನೆಂದು ಪ್ರಸಿದ್ಧನಾಗಿರುವ ನೀನು ಹವ್ಯಕ್ಕೆ ಕಾರಣಭೂತವಾದ ಯಜ್ಞಕ್ಕೆ ತಡೆಮಾಡುವುದು ಖಂಡಿತವಾಗಿಯೂ ಯೋಗ್ಯವಲ್ಲ."

ಹೀಗೆ ಸ್ತೋತ್ರಮಾಡಿದ ಸಹದೇವನು ಜ್ವಾಲೆಗಳನ್ನು ಸುತ್ತಲೂ ಹರಡುತ್ತಿದ್ದ ಅಗ್ನಿದೇವನಿಗೆ ಅಭಿಮುಖನಾಗಿ, ಅನುದ್ವಿಗ್ನನಾಗಿ, ಸೈನಿಕರ ಮಧ್ಯದಲ್ಲಿ ಕುಶಾಸನದ ಮೇಲೆ ಕುಳಿತು ಅಗ್ನಿದೇವನನ್ನು ಪುನಃ ಪುನಃ ಧ್ಯಾನಮಾಡುತ್ತಿದ್ದನು.

ಸಮುದ್ರರಾಜನು ತನ್ನ ಉಬ್ಬರವಿಳಿತಗಳ ಕಾಲದಲ್ಲಿ ದಡವನ್ನು ಮೀರಿ ಪ್ರವಹಿಸದಂತೆ–ಅಗ್ನಿದೇವನೂ ದರ್ಭಾಸನದಲ್ಲಿ ಕುಳಿತಿದ್ದ ಸಹದೇವನನ್ನು ಅತಿಕ್ರಮಿಸಿ ಬರಲಿಲ್ಲ. ದಯಾಮಯನಾದ ಅಗ್ನಿದೇವನು ಸಶರೀರನಾಗಿ ಸಹದೇವನ ಬಳಿಗೆ ಬಂದು ಅವನನ್ನು ಪ್ರಿಯೋಕ್ತಿಗಳಿಂದ ಸಂತೈಸುತ್ತಾ ಹೇಳಿದನು :

“ಕುರುವಂಶಪ್ರದೀಪನೇ! ಮೇಲೇಳು. ನಾನು ನಿನ್ನನ್ನು ಪರೀಕ್ಷಿಸಲೋಸುಗ ಹೀಗೆ ಮಾಡಿದೆನು. ನಿನ್ನ ಧ್ಯೇಯೋದ್ದೇಶಗಳೆಲ್ಲವೂ ನನಗೆ ತಿಳಿದಿರುವುದು. ಧರ್ಮಜನ ಸಂಕಲ್ಪವೇನೆಂಬುದೂ ನನಗೆ ತಿಳಿದಿರುವುದು. ಆದರೆ ನೀಲರಾಜನ ವಂಶೀಯರು ಈ ರಾಜ್ಯದಲ್ಲಿ ಆಳುವ ಪರ್ಯಂತವೂ ನಾನು ಈ ರಾಜ್ಯದ ರಕ್ಷಣಾಭಾರವನ್ನು ವಹಿಸಿರುವೆನು. ಹೀಗೆಂದ ಮಾತ್ರಕ್ಕೆ ನಿನ್ನನ್ನು ಸೋಲಿಸಿಬಿಡುವೆನೆಂದು ಭಾವಿಸಬೇಡ. ನಿನ್ನ ಇಚ್ಛೆಯನ್ನೂ ಪೂರ್ಣಮಾಡುವೆನು.”

ಅಗ್ನಿದೇವನ ಆಶ್ವಾಸನೆಯಿಂದ ಸಂತಸಗೊಂಡ ಸಹದೇವನು ದರ್ಭಾಸನದಿಂದ ಮೇಲೆದ್ದು, ಅಗ್ನಿದೇವನನ್ನು ಯಥೋಚಿತವಾಗಿ ಉಪಚರಿಸಿದನು.

ಸಂತುಷ್ಟನಾದ ಯಜ್ಞೇಶ್ವರನು ಅಭಯಹಸ್ತವನ್ನು ತೋರುತ್ತಾ ಅದೃಶ್ಯನಾದನು.

ಸ್ವಲ್ಪಹೊತ್ತಿನಲ್ಲಿಯೇ ಅಗ್ನಿದೇವನ ಆಜ್ಞಾನುಸಾರವಾಗಿ ನೀಲರಾಜನು ಅರ್ಘ್ಯ-ಪಾದ್ಯಾದಿಗಳನ್ನೂ, ಅನರ್ಘವಾದ ವಸ್ತ್ರಾಭರಣಗಳನ್ನೂ ತಂದು ಸಹದೇವನನ್ನು ಉಪಚರಿಸಿದನು. ಸಹದೇವನು ಎಲ್ಲವನ್ನೂ ಸ್ವೀಕರಿಸಿ ಯುಧಿಷ್ಠಿರನಿಗೆ ಕಪ್ಪಕೊಡಲು ಹೇಳಿ, ನೀಲರಾಜನನ್ನು ಯುಧಿಷ್ಠಿರನ ಆಶ್ರಿತರಾಜನನ್ನಾಗಿ ಮಾಡಿಕೊಂಡು, ಮುಂದೆ ಇನ್ನೂ ದಕ್ಷಿಣದಿಕ್ಕಿನೆಡೆಗೆ ದಂಡಯಾತ್ರೆ ಹೊರಟನು.

ಅಮಿತೌಜಸ್ಕನಾದ ತ್ರಿಪುರಾಧಿಪತಿಯನ್ನು ಸೋಲಿಸಿದನಂತರದಲ್ಲಿ ಸಹದೇವನು ಪೌರವರಾಜ್ಯಕ್ಕೆ ಹೋಗಿ ಅಲ್ಲಿಯ ರಾಜನನ್ನೂ ಆಶ್ರಿತನನ್ನಾಗಿ ಮಾಡಿಕೊಂಡು, ಮುಂದೆ ಕೌಶಿಕಾಚಾರ್ಯನಾದ ಆಕೃತಿ ಎಂಬುವನನ್ನು ಸೋಲಿಸಿ, ಸೌರಾಷ್ಟ್ರಕ್ಕೆ ಹೋಗಿ ಅಲ್ಲಿಯ ರಾಜನನ್ನೂ ತನ್ನ ಅಧೀನನನ್ನಾಗಿ ಮಾಡಿಕೊಂಡನು. ಸೌರಾಷ್ಟ್ರದೇಶದ ರಾಜಧಾನಿಯಲ್ಲಿ ಒಂದೆರಡು ದಿನಗಳು ಬಿಡಾರಮಾಡಿ ತನ್ನ ರಾಯಭಾರಿಯನ್ನು ‘ಭೋಜಕಟ’ ಎಂಬ ರಾಜ್ಯಕ್ಕೆ ಅಧಿಪತಿಯಾದ ರುಕ್ಮಿರಾಜನ ಬಳಿಗೂ, ಅವನ ತಂದೆಯಾದ, ಮೇಧಾವಿಯಾದ ಭೀಷ್ಮಕನ ಬಳಿಗೂ ಕಳುಹಿಸಿಕೊಟ್ಟನು.

ರಾಯಭಾರಿಯಿಂದ ವಿಷಯಗಳೆಲ್ಲವನ್ನೂ ಗ್ರಹಿಸಿದನಂತರ ರುಕ್ಮಿ

ರಾಜನು ತನ್ನ ಮತ್ತು ಪಾಂಡವರ ಹಿತಚಿಂತಕನಾದ ಶ್ರೀಕೃಷ್ಣನ ಬಾಂಧವ್ಯವನ್ನು ಸ್ಮರಿಸಿದವನಾಗಿ, ಯುಧಿಷ್ಠಿರನ ಸಾರ್ವಭೌಮತ್ವವನ್ನೂ ಒಪ್ಪಿಕೊಂಡು ಧನ-ಕನಕ-ವಸ್ತುಗಳನ್ನು ಕಪ್ಪ-ಕಾಣಿಕೆಯನ್ನಾಗಿ ಸಹದೇವನಿಗೆ ಕಳುಹಿಸಿಕೊಟ್ಟನು.

ಸಹದೇವನು ರುಕ್ಮಿರಾಜನು ಕಳುಹಿಸಿದ ಅನರ್ಘವಸ್ತುಗಳೆಲ್ಲವನ್ನೂ ತೆಗೆಸಿಕೊಂಡು ಮುಂದೆ ಇನ್ನೂ ದಕ್ಷಿಣಕ್ಕೆ ಹೋಗಿ, ಶೂರ್ಪಾರಕ-ತಾಲಕಾಟ ದೇಶಗಳನ್ನು ಜಯಿಸಿ, ದಂಡಕಾರಣ್ಯಪ್ರದೇಶವನ್ನೂ ಸ್ವಾಧೀನಕ್ಕೆ ತೆಗೆದುಕೊಂಡನು.

ಅನಂತರದಲ್ಲಿ ಸಹದೇವನು ಸಮುದ್ರತೀರಪ್ರದೇಶದಲ್ಲಿದ್ದ ಅನೇಕ ಮ್ಲೇಚ್ಛರಾಜರನ್ನೂ, ನಿಷಾದರನ್ನೂ, ರಾಕ್ಷಸರನ್ನೂ, ಕರ್ಣಪ್ರಾವರಣರೆಂಬುವರನ್ನೂ, ನರ-ರಾಕ್ಷಸರಾದ ಕಾಲಮುಖರೆಂಬುವರನ್ನೂ, ಕೋಲಗಿರಿಯ ಪ್ರದೇಶದಲ್ಲಿದ್ದ ಕಾಡುಜನರ ನಾಯಕರನ್ನೂ, ಸುರಭೀ ಎಂಬ ಪಟ್ಟಣದ ಅಧಿಪತಿಯನ್ನೂ, ತಾಮ್ರ ಎಂಬ ಹೆಸರಿನ ದ್ವೀಪವನ್ನೂ, ರಾಮಕವೆಂಬ ಪರ್ವತವನ್ನೂ, ತಿಮಿಂಗಿಲನೆಂಬ ರಾಜನನ್ನೂ, ಏಕಪಾದರೆಂಬುವರನ್ನೂ, ಕೇರಳದೇಶದ ಕಾಡುಜನರನ್ನೂ, ಸಂಜಯಂತೀ ಎಂಬ ಪಟ್ಟಣವನ್ನೂ ಸ್ವಾಧೀನಪಡಿಸಿಕೊಂಡು ಪಾಖಂಡ ಮತ್ತು ಕರಹಾಟಕವೆಂಬ ಪ್ರದೇಶಗಳನ್ನು ದೂತರ ಮೂಲಕ ಸಂದೇಶ ಕಳುಹಿಸುವಿಕೆಯಿಂದಲೇ ಗೆದ್ದು, ಕಪ್ಪ-ಕಾಣಿಕೆಗಳನ್ನು ತೆಗೆದುಕೊಂಡನು. ಅಲ್ಲಿಂದ ಮುಂದೆ ಸಹದೇವನು ದಂಡಯಾತ್ರೆ ಹೊರಟು ಪಾಂಡ್ಯರನ್ನೂ, ದ್ರಾವಿಡರನ್ನೂ, ಉಂಡ್ರ-ಕೇರಳರನ್ನೂ, ಆಂಧ್ರರನ್ನೂ, ತಾಲವನರನ್ನೂ, ಕಲಿಂಗರನ್ನೂ, ಉಷ್ಟ್ರಕರ್ಣರನ್ನೂ ತನ್ನ ಅಧೀನರನ್ನಾಗಿ ಮಾಡಿಕೊಂಡು, ಯಥೇಚ್ಛವಾಗಿ ಕಪ್ಪ-ಕಾಣಿಕೆಗಳನ್ನು ಸಂಗ್ರಹಿಸಿದನು.

ಬಳಿಕ ಸಹದೇವನು ದಕ್ಷಿಣಸಮುದ್ರದ ತೀರಪ್ರದೇಶದಲ್ಲಿ ಹಿಡಿಂಬೆಯ ಮಗನಾದ ಘಟೋತ್ಕಚನನ್ನು ಲಂಕಾದ್ವೀಪದಲ್ಲಿ ರಾಜನಾಗಿದ್ದ ವಿಭೀಷಣನ ಬಳಿಗೆ ರಾಯಭಾರಿಯನ್ನಾಗಿ ಕಳುಹಿಸಿಕೊಟ್ಟನು.

ಮಹಾಮೇಧಾವಿಯಾದ ವಿಭೀಷಣನೂ ಕೂಡ ಎಲ್ಲವೂ ಕಾಲಾನು

ಗುಣವಾಗಿಯೇ ಇದೆಯೆಂದು ಭಾವಿಸಿ, ಯುಧಿಷ್ಠಿರನ ಸಾರ್ವಭೌಮತ್ವವನ್ನು ಒಪ್ಪಿಕೊಂಡವನಾಗಿ, ಯಥೇಚ್ಛವಾಗಿ ಕಪ್ಪ-ಕಾಣಿಕೆಗಳನ್ನು ಕಳುಹಿಸಿಕೊಟ್ಟನು. ಅವುಗಳೆಲ್ಲವನ್ನೂ ಸ್ವೀಕರಿಸಿದ ಸಹದೇವನು ಸಂತುಷ್ಟಹೃದಯನಾಗಿ ರಾಜಧಾನಿಗೆ ಹಿಂದಿರುಗಿದನು.



ಜನಮೇಜಯ! ಮೇಲೆ ಹೇಳಿದ ರೀತಿಯಲ್ಲಿ ಸಹದೇವನು ಸಾಮ-ದಾನ-ಭೇದ-ದಂಡಗಳೆಂಬ ಚತುರುಪಾಯಗಳ ಪ್ರಯೋಗಗಳಿಂದ ದಕ್ಷಿಣದಿಕ್ಕಿನ ರಾಜರೆಲ್ಲರನ್ನೂ ಗೆದ್ದು ಕಪ್ಪ-ಕಾಣಿಕೆಗಳನ್ನು ತೆಗೆದುಕೊಂಡು ಬಂದು ಯುಧಿಷ್ಠಿರನ ಪಾದಾರವಿಂದಗಳಲ್ಲಿ ಸಮರ್ಪಿಸಿ ಕೃತಕೃತ್ಯನಾದೆನೆಂದು ಭಾವಿಸಿದನು.

ಮೂವತ್ತೊಂದನೆಯ ಅಧ್ಯಾಯವು ಮುಗಿಯಿತು.

ಌ೨ನೆಯ ಅಧ್ಯಾಯ ದಿಗ್ವಿಜಯಪರ್ವ (ಮುಂದುವರಿದಿದೆ.)

## ನಕುಲನಿಂದ ಪಶ್ಚಿಮದಿಗ್ವಿಜಯ

ಜನಮೇಜಯ! ನಕುಲನ ದಿಗ್ವಿಜಯದ ವಿಷಯವನ್ನು ವಿಸ್ತರಿಸಿ ಹೇಳುವೆನು. ಹಿಂದೊಮ್ಮೆ ಪಶ್ಚಿಮದಿಕ್ಕಿನ ಎಲ್ಲ ರಾಜರನ್ನೂ ವಾಸುದೇವನು ಗೆದ್ದಿದ್ದನು. ಅದೇ ರಾಜ್ಯಗಳನ್ನೇ ನಕುಲನೂ ತನ್ನ ಪರಾಕ್ರಮದಿಂದ ಹೇಗೆ ಗೆದ್ದನೆಂಬುದನ್ನು ಕೇಳು.

ಮೇಧಾವಿಯಾದ ನಕುಲನು ಪ್ರಬಲವಾದ ಸೇನೆಯೊಡನೆ ಧರ್ಮರಾಜನ ಅನುಮತಿಯನ್ನು ಪಡೆದು ಖಾಂಡವಪ್ರಸ್ಥದಿಂದ ಪಶ್ಚಿಮದಿಕ್ಕಿಗೆ ಜೈತ್ರಯಾತ್ರೆಗಾಗಿ ಹೊರಟನು. ಅವನ ಸೈನ್ಯದ ಕಾಲುಗಳ ಸಪ್ಪಳವು ಭೂಮಿಯನ್ನೇ ನಡುಗಿಸುವುದಾಗಿದ್ದಿತು. ಸೈನ್ಯಗಳು ಪದೇ-ಪದೇ ಮಾಡುತ್ತಿದ್ದ ಜಯಘೋಷಗಳೂ, ರಥಚಕ್ರಗಳ ಕರ್ಕಶಧ್ವನಿಗಳೂ ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿತವಾಗುತ್ತಿದ್ದುವು.

ನಕುಲನು ಮೊಟ್ಟಮೊದಲು ಕಾರ್ತಿಕೇಯನಿಗೆ ಅತಿಪ್ರಿಯವಾಗಿದ್ದ, ಉತ್ತಮವಾದ ಹಸುಗಳಿಂದಲೂ, ಧನ-ಧಾನ್ಯಾದಿಗಳಿಂದಲೂ ತುಂಬಿದ್ದ ರೋಹಿತಕವೆಂಬ ಪರ್ವತಕ್ಕೆ ಮುತ್ತಿಗೆ ಹಾಕಿದನು. ಅಲ್ಲಿದ್ದ ಮಹಾಪರಾಕ್ರಮಿಗಳಾದ ಮತ್ತಮಯೂರಕರೆಂಬುವರಿಗೂ – ನಕುಲನಿಗೂ ಭಯಂಕರ ಯುದ್ಧವಾಗಿ ಕಟ್ಟಕಡೆಗೆ ನಕುಲನು ವಿಜಯಿಯಾಗಿ ಆ ಪ್ರದೇಶಗಳೆಲ್ಲವನ್ನೂ ಸ್ವಾಧೀನಪಡಿಸಿಕೊಂಡನು. ಅಲ್ಲಿಂದ ಮುಂದೆ ಹೊರಟು ಶರೀಷಕವೆಂಬ ಮರುಭೂಮಿಯನ್ನೂ, ಧಾನ್ಯಸಮೃದ್ಧವಾಗಿದ್ದ ಮಹೋತ್ಥವೆಂಬ ರಾಜ್ಯವನ್ನೂ ವಶಪಡಿಸಿಕೊಂಡನು.

ಅನಂತರದಲ್ಲಿ ನಕುಲನು ಆಕ್ರೋಶನೆಂಬ ರಾಜರ್ಷಿಯೊಡನೆ ಭಯಂಕರ ವಾದ ಯುದ್ಧಮಾಡಿ ಅವನನ್ನು ತನ್ನ ಆಶ್ರಿತರಾಜನನ್ನಾಗಿ ಮಾಡಿಕೊಂಡು, ದಶಾರ್ಣರೆಂಬುವರನ್ನೂ ಸೋಲಿಸಿ ಮುಂದುವರಿದು, ಶಿಬಿ-ತ್ರಿಗರ್ತ-ಅಂಬಷ್ಠ-ಮಾಲವರೆಂಬುವರನ್ನೂ, ಪಂಚಕರ್ಪಟರನ್ನೂ, ಮಾಧ್ಯಮಿಕರನ್ನೂ, ವಾಟಧಾನರೆಂಬ ಬ್ರಾಹ್ಮಣರನ್ನೂ ಸೋಲಿಸಿ ಅವರುಗಳಿಂದ ಕಪ್ಪ-ಕಾಣಿಕೆಗಳನ್ನು

ತೆಗೆದುಕೊಂಡು, ಪುನಃ ಬೇರೆಯ ಮಾರ್ಗದಿಂದ ಹಿಂದಕ್ಕೆ ತಿರುಗಿದವನಾಗಿ ಪುಷ್ಕರಾರಣ್ಯದಲ್ಲಿ ವಾಸಮಾಡುತ್ತಿದ್ದ ಉತ್ಸವ-ಸಂಕೇತರೆಂಬುವರನ್ನೂ ಸೋಲಿಸಿದನು.

ಬಳಿಕ ಸಿಂಧೂನದಿಯ ತೀರಪ್ರದೇಶದ ಗ್ರಾಮಗಳಲ್ಲಿದ್ದ ಮಹಾಪರಾಕ್ರಮಿಗಳಾದ ನಾಯಕರನ್ನು ಸೋಲಿಸಿ, ಮುಂದೆ ನಡೆದು ಸರಸ್ವತೀನದೀತೀರಕ್ಕೆ ಹೋಗಿ, ಅಲ್ಲಿದ್ದ ಆಭೀರಗಣಕ್ಕೆ ಸೇರಿದ ಶೂದ್ರರನ್ನು ಪರಾಜಯಗೊಳಿಸಿದನು.

ಅನಂತರದಲ್ಲಿ ನಕುಲನು ಸಮುದ್ರತೀರಪ್ರದೇಶದಲ್ಲಿದ್ದ ರಾಜನನ್ನು ಸೋಲಿಸಿ, ಅವನಿಂದಲೂ ಕಪ್ಪ-ಕಾಣಿಕೆಗಳನ್ನು ಸ್ವೀಕರಿಸಿ, ಸುತ್ತಲೂ ಇದ್ದ ಅನೇಕಪರ್ವತಪ್ರದೇಶಗಳನ್ನೂ ಸ್ವಾಧೀನಪಡಿಸಿಕೊಂಡು, ಅನಂತರ ಪಂಚನದಿಗಳು ಪ್ರವಹಿಸುವ ಪಂಜಾಬನ್ನು ಗೆದ್ದು, ಅಲ್ಲಿದ್ದ ಅಮರಪರ್ವತವನ್ನು ಸ್ವಾಧೀನಪಡಿಸಿಕೊಂಡು, ಉತ್ತರಜ್ಯೋತಿಷ ಮತ್ತು ದಿವ್ಯಕಟಗಳೆಂಬ ಪಟ್ಟಣಗಳನ್ನೂ ಹಿಡಿದು, ಅಲ್ಲಿಂದ ಮುಂದೆ ದ್ವಾರಪಾಲವೆಂಬ ನಗರಿಯನ್ನು ಬಹುಶೀಘ್ರವಾಗಿ ತನ್ನ ವಶಪಡಿಸಿಕೊಂಡನು.

ಅನಂತರ ನಕುಲನು ರಾಮಠರನ್ನೂ, ಹಾರಹೂಣರನ್ನೂ ಮತ್ತು ಪಶ್ಚಿಮದಿಕ್ಕಿನಲ್ಲಿದ್ದ ಇತರ ಅನೇಕ ಮ್ಲೇಚ್ಛರಾಜರನ್ನೂ ಗೆದ್ದು ಅಲ್ಲಿಂದಲೇ ವಾಸುದೇವನಿಗೆ ತಾನು ಬಂದಿರುವ ವಾರ್ತೆಯನ್ನು ಪ್ರತಿನಿಧಿಗಳ ಮೂಲಕ ಹೇಳಿಕಳುಹಿಸಿದನು.

ಶ್ರೀಕೃಷ್ಣನು ಒಡನೆಯೇ ಬಂದು ಯುಧಿಷ್ಠಿರನ ಸಾರ್ವಭೌಮತ್ವವನ್ನು ಒಪ್ಪಿಕೊಂಡು ಕಪ್ಪ-ಕಾಣಿಕೆಗಳನ್ನು ಪ್ರೀತಿಪೂರ್ವಕವಾಗಿ ಸಲ್ಲಿಸಿದನು.

ಮುಂದೆ ಪ್ರಯಾಣಹೊರಟ ನಕುಲನು ಶಾಕಲವೆಂಬ ಮದ್ರರಾಜಧಾನಿಗೆ ಹೋಗಿ ಅಲ್ಲಿಯ ರಾಜನಾದ ಶಲ್ಯನನ್ನು ಸಂಧಿಸಿದನು. ನಕುಲನ ಸೋದರಮಾವನಾದ ಶಲ್ಯನು ಪ್ರೇಮಪೂರ್ವಕವಾಗಿ ಯುಧಿಷ್ಠಿರನ ಸಾರ್ವಭೌಮತ್ವವನ್ನು ಒಪ್ಪಿಕೊಂಡು ನಕುಲನನ್ನು ಆದರದಿಂದ ಸತ್ಕರಿಸಿ, ಯಥೇಚ್ಛವಾಗಿ ಧನ-ಕನಕ-ವಸ್ತುಗಳನ್ನು ಕೊಟ್ಟು ಕಳುಹಿಸಿದನು.

ಅನಂತರದಲ್ಲಿ ನಕುಲನು ಸಮುದ್ರತೀರಪ್ರದೇಶದಲ್ಲಿದ್ದ, ಅಜೇಯರೆನಿಸಿದ್ದ ಮ್ಲೇಚ್ಛರನ್ನೂ, ಪಹ್ಲವರನ್ನೂ, ಬರ್ಬರ-ಕಿರಾತ-ಯವನ-ಶಕರನ್ನೂ ಪರಾಜಯಗೊಳಿಸಿ, ಯಥೇಚ್ಛವಾಗಿ ರತ್ನಾಭರಣಗಳನ್ನೂ ತೆಗೆದುಕೊಂಡು ರಾಜಧಾನಿಯಾದ ಇಂದ್ರಪ್ರಸ್ಥದ ಕಡೆಗೆ ಹಿಂದಿರುಗಿದನು.



ಜನಮೇಜಯ! ನಕುಲನು ತಂದ ಐಶ್ವರ್ಯವು ಅಪಾರವಾಗಿತ್ತು. ಹತ್ತುಸಾವಿರ ಆನೆಗಳು ನಕುಲನು ಸಂಪಾದಿಸಿದ ಧನ-ಕನಕ-ವಸ್ತುಗಳನ್ನು ಬಹಳ ಕಷ್ಟದಿಂದ ಇಂದ್ರಪ್ರಸ್ಥಕ್ಕೆ ಹೊತ್ತು ತಂದುವು.

ಆ ಅತುಲೈಶ್ವರ್ಯವನ್ನೂ ನಕುಲನು ಯುಧಿಷ್ಠಿರನ ಪಾದಾರವಿಂದಗಳಲ್ಲಿ ಅರ್ಪಿಸಿದನು.

ಈ ರೀತಿಯಾಗಿ ನಕುಲನು ವರುಣನ ದಿಕ್ಕಾದ, ಮೊದಲು ವಾಸುದೇವನಿಂದ ಜಯಿಸಲ್ಪಟ್ಟಿದ್ದ ಪಶ್ಚಿಮದಿಕ್ಕನ್ನು ಗೆದ್ದನು. ಹೀಗೆ ಅರ್ಜುನ-

ಭೀಮ-ಸಹದೇವ-ನಕುಲರು ನಾಲ್ಕು ದಿಕ್ಕುಗಳನ್ನೂ ಗೆದ್ದು, ಅಖಂಡಭಾರತದಲ್ಲಿ ಯುಧಿಷ್ಠಿರನ ಸಾರ್ವಭೌಮತ್ವವನ್ನು ಸ್ಥಾಪಿಸಿದರು."

ಏ೨ನೆಯ ಅಧ್ಯಾಯವು ಮುಗಿಯಿತು.

ಏಏನೆಯ ಅಧ್ಯಾಯ ರಾಜಸೂಯಪರ್ವ

## ಯುಧಿಷ್ಠಿರನ ರಾಜ್ಯಭಾರದ ಹಿರಿಮೆ : ಶ್ರೀಕೃಷ್ಣನ ಆಜ್ಞೆಯಂತೆ ಯುಧಿಷ್ಠಿರನು ಯಜ್ಞದೀಕ್ಷಿತನಾದುದು : ಸಮಸ್ತಬ್ರಾಹ್ಮಣರ, ರಾಜರ ಮತ್ತು ಸಂಬಂಧಿಗಳ ಆಗಮನಕ್ಕಾಗಿ ಆಮಂತ್ರಣ

"ಜನಮೇಜಯ! ರಕ್ಷಣೆ, ಸತ್ಯಪಾಲನೆ ಶತ್ರುನಿವಾರಣೆಗಳಲ್ಲಿ ಧರ್ಮಜನು ನಿಷ್ಠನಾಗಿದ್ದುದರಿಂದ ಅವನ ರಾಜ್ಯದ ಪ್ರಜೆಗಳು ಸ್ವಕರ್ಮನಿರತರಾಗಿದ್ದರು. ಧರ್ಮಜನು ಧರ್ಮವನ್ನೇ ಆಧಾರ ವನ್ನಾಗಿಟ್ಟುಕೊಂಡು ರಾಜ್ಯಶಾಸನಮಾಡುತ್ತಿದ್ದನು. ತೆರಿಗೆಗಳನ್ನು ಹಾಕಬೇಕಾದರೂ ಬಹಳವಾಗಿ ಪರಿಶೀಲಿಸಿ ಪ್ರಜೆಗಳಿಗೆ ಯಾವ ರೀತಿಯಲ್ಲಿಯೂ ತೊಂದರೆಯಾಗದ ರೀತಿಯಲ್ಲಿ ಹಾಕುತ್ತಿದ್ದನು. ಆ ವಿಧವಾದ ಧರ್ಮಪರಿಪಾಲನೆಯಿಂದ ಕಾಲಕಾಲಕ್ಕೆ ಪರ್ಜನ್ಯನು ಸಾಕಷ್ಟು ಮಳೆಗರೆಯುತ್ತಿದ್ದನು. ಅದರಿಂದ ಧಾನ್ಯಸಮೃದ್ಧಿಯಾಗುತ್ತಿದ್ದಿತು. ಅತಿವೃಷ್ಟಿಯಾಗಲೀ, ಅನಾವೃಷ್ಟಿಯಾಗಲೀ ಧರ್ಮಜನ ರಾಜ್ಯದಲ್ಲಿ ಉಂಟಾಗುತ್ತಿರಲಿಲ್ಲ. ಹಳ್ಳಿಗಳೂ, ಪಟ್ಟಣಗಳೂ ಸಂಪತ್ಸಮೃದ್ಧವಾಗಿದ್ದುವು. ಅಲ್ಲಿ ಆರಂಭಿಸಿದ ಪ್ರತಿಯೊಂದು ಒಳ್ಳೆಯ ಕಾರ್ಯವೂ ನಿರ್ವಿಘ್ನವಾಗಿ ಪೂರ್ಣವಾಗುತ್ತಿದ್ದಿತು. ಗೋರಕ್ಷಣೆ, ವ್ಯವಸಾಯ ಮತ್ತು ವಾಣಿಜ್ಯಗಳು ಹೆಚ್ಚು ಅಭಿವೃದ್ಧಿಹೊಂದಿದುವು. ಧರ್ಮಜನ ಆಡಳಿತದಲ್ಲಿ ಚೋರರೂ, ಮೋಸಗಾರರೂ ಇರಲಿಲ್ಲ. ರಾಜಾನುಬಂಧಿಗಳು ಸುಳ್ಳುಮಾತು ಗಳನ್ನಾಡುತ್ತಿರಲಿಲ್ಲ. ಯುಧಿಷ್ಠಿರನ ರಾಜ್ಯದಲ್ಲಿ ಕ್ಷಾಮ-ಡಾಮರಗಳ ಭಯವಿರಲಿಲ್ಲ. ಜನರಿಗೆ ರೋಗ-ರುಜಿನಗಳ ಬಾಧೆಯಿರಲಿಲ್ಲ. ಅಗ್ನಿಭಯವಿರಲಿಲ್ಲ. ಅಕಾಲಮರಣವೂ ಇರಲಿಲ್ಲ.

ಯುಧಿಷ್ಠಿರನ ಆಡಳಿತದ ಕಾಲದಲ್ಲಿ ಯಾವ ಸಾಮಂತರಾಜನೇ

ಆಗಲೀ ಉಪದ್ರವಕೊಡಲು ಅಥವಾ ಯುದ್ಧಮಾಡಲು ಬರುತ್ತಿರಲಿಲ್ಲ. ಆದರೆ ಕಪ್ಪ-ಕಾಣಿಕೆಗಳನ್ನು ಕೊಡುವ ಸಲುವಾಗಿ, ಧರ್ಮರಾಜನಿಗೆ ಏನಾದರೂ ಪ್ರಿಯವನ್ನುಂಟುಮಾಡಬೇಕೆಂಬ ಆಶಯದಿಂದ ಮಾತ್ರ ಅನೇಕ ರಾಜರು ಧರ್ಮಜನ ಬಳಿಗೆ ಬರುತ್ತಿದ್ದರು. ಧರ್ಮಮೂಲವಾದ ಧನಾಗಮದಿಂದಲೇ ಧರ್ಮಜನ ಬೊಕ್ಕಸವು ತುಂಬಿ ತುಳುಕುತ್ತಿದ್ದಿತು. ನೂರು ವರ್ಷಗಳು ಅವಿಚ್ಛಿನ್ನವಾಗಿ ವ್ಯಯಮಾಡಿದರೂ ಆ ಬೊಕ್ಕಸವನ್ನು ಬರಿದುಮಾಡುವ ಸಾಧ್ಯತೆಯಿರಲಿಲ್ಲ.

ಯುಧಿಷ್ಠಿರನು ತನ್ನ ಬೊಕ್ಕಸದಲ್ಲಿದ್ದ ಐಶ್ವರ್ಯದ ಪರಿಮಿತಿಯನ್ನೂ, ಉಗ್ರಾಣಗಳಲ್ಲಿನ ಧಾನ್ಯದ ಪರಿಮಿತಿಯನ್ನೂ ಪರಿಶೀಲಿಸಿ, ರಾಜಸೂಯಯಾಗವನ್ನು ಉಪಕ್ರಮಿಸಲು ನಿಶ್ಚಯಿಸಿದನು. ಅವನ ಬಂಧು-ಮಿತ್ರರೂ ಮತ್ತು ದೇಶದ ಉನ್ನತಾಧಿಕಾರಿಗಳೂ ಪ್ರತ್ಯೇಕ-ಪ್ರತ್ಯೇಕವಾಗಿಯೂ, ಸಾಮೂಹಿಕವಾಗಿಯೂ ಬಂದು – "ವಿಭುವೇ! ಸರ್ವರೀತಿಯಿಂದಲೂ ನೀನು ರಾಜಸೂಯಯಾಗವನ್ನು ಪ್ರಾರಂಭಿಸಲು ಈ ಸಮಯವು ಯೋಗ್ಯವಾಗಿದೆ. ಈ ಸುಸಮಯವು ಅತಿಕ್ರಮಿಸದ ರೀತಿಯಲ್ಲಿ ಯಾಗಕ್ಕೆ ಬೇಕಾಗುವ ಸಲಕರಣೆಗಳು ಸಿದ್ಧವಾಗುವಂತೆ ಆಜ್ಞೆಮಾಡುವವನಾಗು" – ಎಂದು ಸಲಹೆಗಳನ್ನು ನೀಡಲು ಉಪಕ್ರಮಿಸಿದರು. ಆ ಸಮಯಕ್ಕೆ ಸರಿಯಾಗಿ ಶ್ರೀಕೃಷ್ಣನೂ ಆಗಮಿಸಿದನು.

**ಋಷಿಃ ಪುರಾಣೋ ವೇದಾತ್ಮಾ ದೃಶ್ಯಶ್ಚೈವ ವಿಜಾನತಾಮ್।**
**ಜಗತಸ್ತಸ್ಥುಷಾಂ ಶ್ರೇಷ್ಠಃ ಪ್ರಭವಶ್ಚಾಪ್ಯಯಶ್ಚ ಹ ॥೧೦॥**

**ಭೂತಭವ್ಯಭವನ್ನಾಥಃ ಕೇಶವಃ ಕೇಶಿಸೂದನಃ।**
**ಪ್ರಾಕಾರಃ ಸರ್ವವೃಷ್ಣೀನಾಮಾಪತ್ಸ್ವಭಯದೋಽರಿಹಾ ॥೧೧॥**

ಋಷಿಯಾದ, ಪುರಾಣಪುರುಷನಾದ, ವೇದಾತ್ಮನಾದ, ಜ್ಞಾನಿಗಳಿಗೆ ಮಾತ್ರವೇ ಗೋಚರನಾಗುವ, ಪ್ರಪಂಚದಲ್ಲಿರುವ ಸಕಲಸ್ಥಾವರ-ಜಂಗಮಗಳಿಗೂ ಶ್ರೇಷ್ಠನಾದ, ಸಕಲಚರಾಚರಗಳಿಗೂ ಉತ್ಪತ್ತಿಸ್ಥಾನನಾದ ಮತ್ತು ಲಯಸ್ಥಾನನಾದ, ಭೂತ-ಭವಿಷ್ಯದ್ವರ್ತಮಾನಗಳಿಗೂ ಕಾರಣಭೂತನಾದ, ಕೇಶಿಸೂದನನಾದ, ವೃಷ್ಣಿಕುಲವೆಂಬ ಸೌಧಕ್ಕೆ ಪ್ರಾಕಾರಪ್ರಾಯನಾದ,

ಆಪತ್ತಿನಲ್ಲಿರುವವರಿಗೆ ಅಭಯದಾಯಕನಾದ, ಶತ್ರುಸೂದನನಾದ ಶ್ರೀಕೃಷ್ಣನು ಅನಕದುಂದುಭಿಯನ್ನು (ವಸುದೇವನನ್ನು) ದ್ವಾರಕೆಯ ರಕ್ಷಣೆಗೆ ಸೇನಾಧ್ಯಕ್ಷನನ್ನಾಗಿ ಸ್ಥಾಪಿಸಿ, ಯುಧಿಷ್ಠಿರನಿಗಾಗಿ ಯಥೇಚ್ಛವಾದ ಐಶ್ವರ್ಯವನ್ನು ದೊಡ್ಡ-ದೊಡ್ಡ ಪೆಟ್ಟಿಗೆಗಳಲ್ಲಿ ತೆಗೆಸಿಕೊಂಡು, ರಥ-ಗಜ-ತುರಗ-ಪದಾತಿಬಲಸಮೇತನಾಗಿ ಖಾಂಡವಪ್ರಸ್ಥಕ್ಕೆ ಆಗಮಿಸಿದನು. ತುಂಬಿ ತುಳುಕಾಡುತ್ತಿದ್ದ ಪಾಂಡವರ ಬೊಕ್ಕಸಕ್ಕೆ ಶ್ರೀಕೃಷ್ಣನು ತಂದ ಅಪಾರವಾದ ವಜ್ರ-ವೈಢೂರ್ಯ-ರತ್ನಾಭರಣಗಳೂ ಸೇರಿ ಶತ್ರುಗಳ ಹೃದಯಗಳಲ್ಲಿ ಅತಿಯಾದ ಸಂಕಟವನ್ನುಂಟುಮಾಡುವುದಾಗಿದ್ದಿತು.

**ಅಸೂರ್ಯಮಿವ ಸೂರ್ಯೇಣ ನಿವಾತಮಿವ ವಾಯುನಾ**
**ಕೃಷ್ಣೇನ ಸಮುಪೇತೇನ ಜಹೃಷೇ ಭಾರತಂ ಪುರಮ್ ॥೧೫॥**

ಸೂರ್ಯನಿಲ್ಲದ ಕಡೆಯಲ್ಲಿ ಸೂರ್ಯನು ಹುಟ್ಟುವುದರಿಂದಾಗುವ ಮತ್ತು ಗಾಳಿಯಿಲ್ಲದೆಯೇ ಸೂರ್ಯನ ತಾಪದಿಂದ ಪರಿತಪಿಸುತ್ತಿರುವವರ ಮೇಲೆ ಮಂದಮಾರುತವು ಬೀಸುವುದರಿಂದುಂಟಾಗುವ ಮಹಾನಂದವನ್ನು ಇಂದ್ರಪ್ರಸ್ಥನಿವಾಸಿಗಳು ಶ್ರೀಕೃಷ್ಣನ ಆಗಮನದಿಂದ ಪಡೆದರು.

ಅರಮನೆಯ ಮುಂದೆ ರಥದಿಂದ ಅವರೋಹಣಮಾಡಿದ ಶ್ರೀಕೇಶವನನ್ನು ಯುಧಿಷ್ಠಿರನು ಬಾಚಿ-ತಬ್ಬಿಕೊಂಡು ಆನಂದಬಾಷ್ಪಗಳನ್ನು ಸುರಿಸುತ್ತಾ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಸ್ವಾಗತಿಸಿ, ಯೋಗ-ಕ್ಷೇಮಗಳನ್ನು ವಿಚಾರಿಸಿದನು.

ಶ್ರೀಕೃಷ್ಣನನ್ನೂ ಮತ್ತು ಅವನ ಪರಿವಾರವನ್ನೂ ಯಥೋಚಿತವಾಗಿ ಉಪಚರಿಸಿದನಂತರ ಧೌಮ್ಯ-ದ್ವೈಪಾಯನ-ಭೀಮಾರ್ಜುನ-ನಕುಲ-ಸಹದೇವರಿಂದ ಪರಿವೃತನಾಗಿ ಕುಳಿತಿದ್ದ ಯುಧಿಷ್ಠಿರನು ಶ್ರೀಕೃಷ್ಣನನ್ನು ಕುರಿತು ಹೇಳಿದನು :

"ಕೃಷ್ಣ! ನಿನ್ನ ಅನುಗ್ರಹದಿಂದ ಈ ಅಖಂಡಭರತಖಂಡವೇ ನನ್ನ ಅಧೀನವಾಗಿರುತ್ತದೆ. ದಯಾಮಯನಾದ ನಿನ್ನ ಅನುಗ್ರಹದಿಂದಲೇ ನಾನಿಷ್ಟು ಐಶ್ವರ್ಯವನ್ನು ಸಂಪಾದಿಸಲು ಸಾಧ್ಯವಾಯಿತು. ಮಾಧವ! ಈ

ಅತುಲೈಶ್ವರ್ಯವೆಲ್ಲವನ್ನೂ ನಿನ್ನ ಅನುಮತಿಯನ್ನು ಪಡೆದು ಬ್ರಾಹ್ಮಣೋತ್ತಮರಿಗೆ ದಾನಮಾಡಬೇಕೆಂದಿರುವೆನು ಮತ್ತು ಯಜ್ಞ-ಯಾಗಾದಿಗಳಲ್ಲಿ ವಿನಿಯೋಗಿಸಬೇಕೆಂದಿರುವೆನು.

ಮಹಾನುಭಾವ! ನಿನ್ನೊಡಗೂಡಿ ಮತ್ತು ನನ್ನ ಅನುಜರಿಂದೊಡಗೂಡಿ ಸಂಕಲ್ಪಿಸಿರುವ ರಾಜಸೂಯಯಾಗವನ್ನು ಮಾಡಲು ಆಜ್ಞಾಪಿಸು.

ವಿಭುವೇ! ದೀರ್ಘಬಾಹುವೇ! ನೀನು ಈ ಯಾಗದ ಯಾಜಮಾನ್ಯವನ್ನು ವಹಿಸಬೇಕೆಂಬುದು ನನ್ನ ಅಭಿಲಾಷೆ. ಏಕೆಂದರೆ : ನೀನು ಯಾಜಮಾನ್ಯವನ್ನು ವಹಿಸಿದರೆ ನಾನು ಪಾಪದಿಂದ ವಿಮುಕ್ತಿಹೊಂದುವೆನೆಂಬ ಭರವಸೆಯು ನನಗಿದೆ. ದಯಾಮಯ! ನೀನು ಯಾಜಮಾನ್ಯ (ದೀಕ್ಷೆಯನ್ನು) ವನ್ನು ವಹಿಸಲು ಇಚ್ಛಿಸದಿದ್ದರೆ ತಮ್ಮಂದಿರೊಡನೆ ದೀಕ್ಷಿತನಾಗಲು ನನ್ನನ್ನು ಅನುಗ್ರಹಿಸು. ನಿನ್ನ ಅನುಗ್ರಹಮಾತ್ರದಿಂದಲೇ ನನಗೆ ಮಹಾಯಾಗವನ್ನು ಮಾಡಿದ ಫಲವು ಲಭಿಸುವುದು."

ಶ್ರೀಕೃಷ್ಣನು ಹೇಳುತ್ತಾನೆ :

"ಯುಧಿಷ್ಠಿರ! ನೀನಿಂದು 'ಚಕ್ರವರ್ತೀ' ಎನಿಸಿಕೊಳ್ಳಲು ಅರ್ಹನಾಗಿರುವೆ. ಆದುದರಿಂದ ರಾಜಸೂಯಮಹಾಯಾಗವು ನಿನ್ನಿಂದಲೇ ಮಾಡಲ್ಪಡಬೇಕು. ನೀನು ಆ ಮಹಾಯಾಗವನ್ನು ಮಾಡಿ ಅದರ ಫಲವನ್ನು ಪಡೆದೆಯಾದರೆ ನಮಗೂ ಆ ಫಲವು ಪ್ರಾಪ್ತವಾದಂತೆಯೇ ಆಗುವುದು. ಧರ್ಮಜ! ನಿನ್ನ ಶ್ರೇಯಸ್ಸನ್ನೇ ನಾನು ಸರ್ವದಾ ಅಪೇಕ್ಷಿಸುತ್ತೇನೆ. ಆದುದರಿಂದ ನೀನು ಅಭಿಲಾಷಿಸಿರುವ ಯಾಗವನ್ನು ಒಡನೆಯೇ ಪ್ರಾರಂಭಿಸು. ನನ್ನನ್ನೂ ಯಾವುದಾದರೊಂದು ಕಾರ್ಯಕ್ಕೆ ನಿಯೋಜಿಸು. ನಿನ್ನ ಆಜ್ಞಾಧಾರಕನಾಗಿ ಕಾರ್ಯಮಾಡುವೆನು."

"ದಯಾಮಯನೇ! ನಿನ್ನನ್ನು ಸ್ಮರಣೆಮಾಡಿದ ಮಾತ್ರದಿಂದಲೇ ನನ್ನ ಕಣ್ಣಮುಂದೆ ನೀನು ಪ್ರತ್ಯಕ್ಷನಾಗಿರುವೆ. ಇದರಿಂದಲೇ ನನ್ನ ಸಂಕಲ್ಪವು ಸಫಲವಾಯಿತೆಂದೂ – ಸಿದ್ಧಿಯಾಯಿತೆಂದೂ ಭಾವಿಸಿರುವೆನು."

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಜನಮೇಜಯ! ಕೃಷ್ಣ-ಪಾಂಡವರಲ್ಲಿದ್ದ ಪರಸ್ಪರಪ್ರೇಮವು ಅನಿರ್ವಾಚ್ಯವೂ – ಅನ್ಯಾದೃಶವೂ ಆಗಿದ್ದಿತು.

ಕೃಷ್ಣನ ಅನುಜ್ಞೆಯನ್ನು ಪಡೆದು ಯುಧಿಷ್ಠಿರನು ತಮ್ಮಂದಿರೊಡಗೂಡಿ ರಾಜಸೂಯಯಾಗಕ್ಕೆ ಬೇಕಾಗುವ ಎಲ್ಲ ಸಂಭಾರಗಳನ್ನೂ ಸಂಗ್ರಹಿಸಿಕೊಳ್ಳಲು ಉಪಕ್ರಮಿಸಿದನು. ಧರ್ಮಜನು ಸಹದೇವನಿಗೂ ಮತ್ತು ಅಮಾತ್ಯಶ್ರೇಷ್ಠರಿಗೂ ಹೇಳಿದನು :

“ನೀವುಗಳು ಈಗಲೇ ರಾಜಸೂಯಯಾಗಕ್ಕೆ ಬೇಕಾಗುವ ಸಾಧನಗಳೆಲ್ಲವನ್ನೂ ಧೌಮ್ಯರಿಂದ ತಿಳಿದು, ವಸ್ತುಗಳ ಶೇಖರಣೆಗಾಗಿ ಸೇವಕರನ್ನು ಕಳುಹಿಸಿರಿ. ಧೌಮ್ಯರಿಂದ ನಿರ್ದಿಷ್ಟವಾದ ವಸ್ತುಗಳೆಲ್ಲವೂ ಒಡನೆಯೇ ತರಲ್ಪಡಲಿ. ಇಂದ್ರಸೇನ, ವಿಶೋಕ, ಅರ್ಜುನನ ಸಾರಥಿಯಾದ ಪೂರು–ಇವರೆಲ್ಲರೂ ಆಹಾರಪದಾರ್ಥಗಳನ್ನು ತರುವ ಕಾರ್ಯದಲ್ಲಿಯೂ – ಬ್ರಾಹ್ಮಣರಿಗೆ ಪ್ರೀತಿಕರವಾದ, ರುಚಿಕರವಾದ ಭಕ್ಷ್ಯ-ಭೋಜ್ಯಗಳನ್ನು ಸಿದ್ಧಪಡಿಸುವ ಕಾರ್ಯದಲ್ಲಿಯೂ ನಿಯುಕ್ತರಾಗಲಿ.”

ಯುಧಿಷ್ಠಿರನ ಬಾಯಿಂದ ಆ ಮಾತುಗಳು ಹೊರ ಹೊರಟೊಡನೆಯೇ ಸಹದೇವನು ಮಂತ್ರಿಗಳ ನೆರವಿನಿಂದ ಸಕಲವನ್ನೂ ಸಿದ್ಧಪಡಿಸಿ ಧರ್ಮಜನಿಗೆ ತಿಳಿಯಪಡಿಸಿದನು.

ಕೃಷ್ಣದ್ವೈಪಾಯನರೇ ಮುಂದೆ ನಿಂತು–ಆ ಮಹಾಯಾಗಕ್ಕೆ ಶರೀರಧಾರಿಗಳಾದ ವೇದಗಳಂತೆಯೇ ಇದ್ದ, ನಿಷ್ಠರಾದ ಬ್ರಾಹ್ಮಣರನ್ನು ಋತ್ವಿಕ್ ಸ್ಥಾನಗಳಿಗೆ ವರಣಮಾಡಿದರು. ವ್ಯಾಸರೇ ಆ ಯಾಗಕ್ಕೆ ‘ಬ್ರಹ್ಮ’ರೂ ಆದರು. ಧನಂಜಯವಂಶಪ್ರದೀಪರಾದ ಸುಸಾಮಾ ಎಂಬುವರು ಉದ್ಗಾತೃಗಳಾದರು. ಯಾಜ್ಞವಲ್ಕ್ಯರು ಆ ಮಹಾಯಾಗಕ್ಕೆ ಅಧ್ವರ್ಯುಗಳಾದರು. ಧೌಮ್ಯರೂ ಮತ್ತು ವಸುವಿನ ಮಕ್ಕಳಾದ ಪೈಲರೂ ಪ್ರಧಾನಹೋತೃಗಳಾದರು. ವೇದ-ವೇದಾಂಗಪಾರಂಗತರಾದ ಆ ಮಹರ್ಷಿಗಳ ಮಕ್ಕಳೂ ಮತ್ತು ಶಿಷ್ಯರೂ ಯಾಗಕ್ಕೆ ಸಪ್ತಹೋತೃಗಳಾದರು.

ಬ್ರಾಹ್ಮಣೋತ್ತಮರೆಲ್ಲರೂ ಯಾಗಭೂಮಿಯಲ್ಲಿ ಕುಳಿತು ಮೊದಲು

ಪುಣ್ಯಾಹವಾಚನಪೂರ್ವಕವಾಗಿ ಯಜ್ಞಸಂಕಲ್ಪಮಾಡಿ, ಯಜ್ಞಭೂಮಿಯನ್ನು ಶಾಸ್ತ್ರೋಕ್ತವಾಗಿ ಶುದ್ಧಿಗೊಳಿಸಿ ಪೂಜಿಸಿದರು.

ಶಿಲ್ಪಿಗಳು ಬ್ರಾಹ್ಮಣರ ಆಜ್ಞೆಯಂತೆ ಪತ್ನೀಶಾಲಾದಿಗಳನ್ನು ಯಥಾವಿಧಿಯಾಗಿ ನಿರ್ಮಿಸಿದರು. ಯಾಗಶಾಲೆಯೊಳಗೇ ಇದ್ದ ಆ ಶಾಲೆಗಳೆಲ್ಲವೂ ಸುಗಂಧಯುಕ್ತವಾಗಿದ್ದು ದೇವತೆಗಳ ಆಲಯದಂತೆಯೇ ಸೊಬಗಿನಿಂದ ಕೂಡಿದ್ದುವು.

ಆ ಕಾರ್ಯಗಳೆಲ್ಲವೂ ಮುಗಿದನಂತರ ಯುಧಿಷ್ಠಿರನು ತನ್ನ ಮುಖ್ಯ ಸಲಹೆಗಾರನಾದ ಸಹದೇವನನ್ನು ಕರೆದು, ಒಡನೆಯೇ ಎಲ್ಲ ರಾಜರಿಗೂ ಆಹ್ವಾನವನ್ನು ಶೀಘ್ರಗಾಮಿಗಳ ಮೂಲಕ ಕಳುಹಿಸುವಂತೆ ಹೇಳಿದನು.

ಒಡನೆಯೇ ಸಹದೇವನು ಉತ್ತಮವಾರ್ತಾವಾಹಿಗಳನ್ನು ಕರೆಯಿಸಿ– "ನೀವೆಲ್ಲರೂ ಈ ಕ್ಷಣವೇ ಈ ಆಹ್ವಾನಪತ್ರಿಕೆಗಳೊಡನೆ ಹೊರಡಬೇಕು. ಒಂದೊಂದು ದೇಶಕ್ಕೂ ಒಬ್ಬೊಬ್ಬರು ಹೋಗಿ ಅಲ್ಲಿನ ರಾಜರಿಗೆ ಆಹ್ವಾನವನ್ನು ಕೊಡುವುದು ಮಾತ್ರವಲ್ಲದೇ, ಆಯಾ ದೇಶಗಳ ನಿವಾಸಿಗಳಾದ ಬ್ರಹ್ಮ-ಕ್ಷತ್ರಿಯ-ವೈಶ್ಯ-ಶೂದ್ರರನ್ನೂ ಅವರವರ ಪ್ರತಿನಿಧಿಗಳ ಮೂಲಕ ಈ ಮಹಾಯಾಗಕ್ಕೆ ಆಹ್ವಾನಿಸಬೇಕು" – ಎಂದು ಹೇಳಿದನು.

ಸಹದೇವನ ಆಜ್ಞಾನುಸಾರವಾಗಿ ವಾರ್ತಾವಾಹಿಗಳು ಒಡನೆಯೇ ನಾನಾದೇಶಗಳಿಗೆ ಹೋಗಿ ಅಲ್ಲಿಯ ರಾಜರಿಗೂ, ಪ್ರಜೆಗಳಿಗೂ ಆಹ್ವಾನಪತ್ರಿಕೆಗಳನ್ನಿತ್ತು, ತಮ್ಮೊಡನೆಯೇ ಅನೇಕರನ್ನು ಇಂದ್ರಪ್ರಸ್ಥಕ್ಕೆ ಕರೆತಂದರು.

ಸಕಲಸಂಭಾರಗಳೂ ಸಿದ್ಧವಾದೊಡನೆಯೇ ಬ್ರಾಹ್ಮಣರು ಯುಧಿಷ್ಠಿರನಿಗೆ ಶುಭಮುಹೂರ್ತದಲ್ಲಿ ರಾಜಸೂಯಯಾಗದ ದೀಕ್ಷೆಯನ್ನು ಕೊಟ್ಟರು. ಒಡನೆಯೇ ಯುಧಿಷ್ಠಿರನು ಸ್ವಸ್ತಿವಾಚನಮಾಡುತ್ತಿದ್ದ ಸಾವಿರಾರು ಮಂದಿ ಬ್ರಾಹ್ಮಣರೊಡನೆಯೂ, ಬಂಧು-ಮಿತ್ರರೊಡನೆಯೂ, ಅನೇಕರಾಜರೊಡನೆಯೂ ದೇಶದ ಉನ್ನತಾಧಿಕಾರಿಗಳೊಡನೆಯೂ ಕೂಡಿದವನಾಗಿ ಸಾಕ್ಷಾತ್ ಧರ್ಮದೇವನಂತೆಯೇ ಪ್ರಕಾಶಿಸುತ್ತಾ ಯಜ್ಞಮಂಟಪವನ್ನು ಪ್ರವೇಶಿಸಿದನು.

ಯುಧಿಷ್ಠಿರನ ಆಹ್ವಾನವನ್ನು ಅಂಗೀಕರಿಸಿ ಅಸಂಖ್ಯಾತರಾದ ಪಂಡಿತ

ಶ್ರೇಷ್ಠರು ಇಂದ್ರಪ್ರಸ್ಥಕ್ಕೆ ಆಗಮಿಸಿದರು. ಅವನ ಆಜ್ಞಾನುಸಾರವಾಗಿ ಸಾವಿರಾರು ಮಂದಿ ಶಿಲ್ಪಿಗಳು ಬಂದ ಅತಿಥಿಗಳೆಲ್ಲರಿಗೂ ಯಥೋಚಿತವಾಗಿ ಬಿಡಾರಗಳನ್ನು ನಿರ್ಮಾಣಮಾಡಿದರು. ಆ ಮನೆಗಳಲ್ಲಿ ಯಥೇಚ್ಛವಾದ ಆಹಾರಪದಾರ್ಥಗಳೂ, ವಸ್ತ್ರಾಭರಣಗಳೂ, ಸುಗಂಧಯುಕ್ತವಾದ ನಾನಾ ಜಾತಿಗಳ–ಎಲ್ಲ ಋತುಗಳ ಕುಸುಮಗಳೂ ಇದ್ದುವು. ಪ್ರತಿಯೊಂದು ಬಿಡಾರಗಳಲ್ಲಿಯೂ ಸೇವಕರುಗಳಿದ್ದರು.

ಧರ್ಮಜನಿಂದ ಉಪಚರಿಸಲ್ಪಟ್ಟ ಬ್ರಾಹ್ಮಣರು ಅನುದಿನವೂ ನಿಯತ ಕಾಲಗಳಲ್ಲಿ ಧರ್ಮಜಿಜ್ಞಾಸೆಯನ್ನು ಮಾಡುತ್ತಾ, ನೃತ್ಯ-ನಾಟಕಗಳನ್ನು ನೋಡುತ್ತಾ–ಆನಂದದಿಂದ ಕಾಲಕಳೆಯುತ್ತಿದ್ದರು.

ಎಲ್ಲೆಲ್ಲಿ ನೋಡಿದರೂ – 'ದೀಯತಾಂ' (ಯಥೇಚ್ಛವಾಗಿ ಕೊಡಿರಿ) 'ಭುಜ್ಯತಾಂ' (ಯಥೇಚ್ಛವಾಗಿ ಭೋಜನಮಾಡಿರಿ.) – ಎಂಬ ಶಬ್ದಗಳೇ ಕೇಳಿಬರುತ್ತಿದ್ದುವು. ಯುಧಿಷ್ಠಿರನು ಆ ಬ್ರಾಹ್ಮಣರೆಲ್ಲರಿಗೂ ಗೋವುಗಳನ್ನೂ, ರಾಜಮುದ್ರೆಗಳಿರುವ ಸುವರ್ಣನಾಣ್ಯಗಳನ್ನೂ, ಶಯ್ಯೆಗಳನ್ನೂ, ದಾಸಿಯರನ್ನೂ ಲಕ್ಷಗಳ ಸಂಖ್ಯೆಯಲ್ಲಿ ದಾನಮಾಡಿದನು.

ಈ ರೀತಿಯಲ್ಲಿ ಪ್ರಾರಂಭವಾದ, ಸ್ವರ್ಗದಲ್ಲಿನ ಇಂದ್ರನಂತೆ ಭೂಮಿಯಲ್ಲಿ ಏಕೈಕವೀರನಾಗಿದ್ದ ಯುಧಿಷ್ಠಿರನ ರಾಜಸೂಯಯಾಗವು ಕಂಗೊಳಿಸಿತು.

ಅನಂತರ ಧರ್ಮಾತ್ಮನಾದ ಯುಧಿಷ್ಠಿರನು ಭೀಷ್ಮ-ದ್ರೋಣ-ಕೃಪ-ವಿದುರ-ಧೃತರಾಷ್ಟ್ರರನ್ನೂ, ದುರ್ಯೋಧನಾದಿಗಳನ್ನೂ ಕರೆತರಲು ಹಸ್ತಿನಾಪುರಕ್ಕೆ ನಕುಲನನ್ನು ಕಳುಹಿಸಿಕೊಟ್ಟನು."

ಮೂವತ್ತಮೂರನೆಯ ಅಧ್ಯಾಯವು ಮುಗಿಯಿತು.

೩೪ನೆಯ ಅಧ್ಯಾಯ ರಾಜಸೂಯಪರ್ವ (ಮುಂದುವರಿದಿದೆ.)

## ರಾಜಸೂಯಯಾಗಕ್ಕೆ ದೇಶ–ವಿದೇಶಗಳಿಂದ ರಾಜರ ಆಗಮನ : ಕುರು–ಯದುಪ್ರಮುಖರ ಆಗಮನ : ಎಲ್ಲರಿಗೂ ಭೋಜನಾದಿಗಳ ವ್ಯವಸ್ಥೆ

"ಜನಮೇಜಯ! ಯುಧಿಷ್ಠಿರನ ಆಣತಿಯಂತೆ ನಕುಲನು ಧೃತ

ರಾಷ್ಟ್ರ-ಭೀಷ್ಮರೇ ಮೊದಲಾದ ಕುರುಪ್ರಮುಖರನ್ನು ರಾಜಸೂಯಯಾಗಕ್ಕೆ ಆಹ್ವಾನಿಸುವ ಸಲುವಾಗಿ ಹಸ್ತಿನಾಪುರಕ್ಕೆ ತೆರಳಿ, ಧೃತರಾಷ್ಟ್ರ-ಭೀಷ್ಮರನ್ನು ಯಥೋಚಿತವಾಗಿ ಗೌರವಿಸಿ, ಅವರನ್ನು ಯಾಗಕ್ಕೆ ಆಹ್ವಾನಿಸಿ, ಅನಂತರದಲ್ಲಿ ದ್ರೋಣ-ಕೃಪ-ಅಶ್ವತ್ಥಾಮರನ್ನೂ, ದುರ್ಯೋಧನಾದಿಗಳನ್ನೂ ಆಹ್ವಾನಿಸಿದನು.

ಅವರೆಲ್ಲರೂ ಯುಧಿಷ್ಠಿರನ ಆಹ್ವಾನವನ್ನು ಆದರದಿಂದ ಅಂಗೀಕರಿಸಿ ಇಂದ್ರಪ್ರಸ್ಥಕ್ಕೆ ಹೊರಟರು. ಯುಧಿಷ್ಠಿರನ ಆಹ್ವಾನಕ್ಕೆ ಮನ್ನಣೆಯನ್ನಿತ್ತು ಅಸಂಖ್ಯಾತವಾದ ರತ್ನಾಭರಣಗಳ ಸಮೇತರಾಗಿ ಇಂದ್ರಪ್ರಸ್ಥಕ್ಕೆ ಬಂದ ಕ್ಷತ್ರಿಯರ ಸಂಖ್ಯೆಯು ಅಪರಿಮಿತವಾಗಿದ್ದಿತು. ಅವರೆಲ್ಲರೂ ರಾಜಸೂಯ ಯಾಗವನ್ನೂ ಮತ್ತು ಮಯನಿರ್ಮಿತವಾದ ಸಭಾಮಂದಿರವನ್ನೂ ನೋಡುವ ಕುತೂಹಲದಿಂದ ಬಂದಿದ್ದರು.

ಧೃತರಾಷ್ಟ್ರ-ಭೀಷ್ಮ-ವಿದುರರೂ, ದುರ್ಯೋಧನನೇ ಮೊದಲಾದ ಧೃತರಾಷ್ಟ್ರನ ನೂರು ಮಂದಿ ಮಕ್ಕಳೂ, ಗಾಂಧಾರರಾಜನಾದ ಸುಬಲ, ಶಕುನಿ, ಅಚಲ, ವೃಷಕ, ಕರ್ಣ, ಶಲ್ಯ, ಬಾಹ್ಲಿಕ, ಸೋಮದತ್ತ, ಭೂರಿ, ಭೂರಿಶ್ರವ, ಶಲ, ಅಶ್ವತ್ಥಾಮಾ, ಕೃಪ, ದ್ರೋಣ, ಸಿಂಧುದೇಶದ ರಾಜನಾದ ಜಯದ್ರಥ, ದ್ರುಪದ ಮತ್ತು ಅವನ ಮಕ್ಕಳು, ಶಾಲ್ವ, ಪ್ರಾಗ್ಜ್ಯೋತಿಷ ರಾಜನಾದ ಭಗದತ್ತ ಮತ್ತು ಅವನೊಡನೆ ಬಂದ ಸಮುದ್ರತೀರವಾಸಿಗಳಾದ ಅನೇಕಮ್ಲೇಚ್ಛರಾಜರು, ಅನೇಕಪರ್ವತಪ್ರದೇಶಗಳ ರಾಜರು, ಬೃಹದ್ಬಲ, ಪೌಂಡ್ರಕವಾಸುದೇವ, ವಂಗ-ಕಲಿಂಗ-ಆಕರ್ಷ-ಕುಂತಲ-ಮಾಲವದೇಶಗಳ ರಾಜರು, ಆಂಧ್ರಕರು, ದ್ರಾವಿಡರು, ಸಿಂಹಲರು, ಕಾಶ್ಮೀರರಾಜ, ಕುಂತಿಭೋಜ, ಗೌರವಾಹನ, ಬಾಹ್ಲಿಕರು, ವಿರಾಟ ಮತ್ತು ಅವನ ಮಕ್ಕಳು, ಮಾವೇಲ್ಲ, ಶಿಶುಪಾಲ ಮತ್ತು ಅವನ ಮಗ, ಬಲರಾಮ, ಅನಿರುದ್ಧ, ಕಂಕ, ಸಾರಣ, ಗದ, ಪ್ರದ್ಯುಮ್ನ, ಸಾಂಬ, ಚಾರುದೇಷ್ಣ, ಉಲ್ಮುಕ, ನಿಶಠ, ಅಂಗಾವಹ ಮತ್ತು ಇನ್ನೂ ಅನೇಕರಾಜರೂ, ರಾಜಪುತ್ರರೂ ಯುಧಿಷ್ಠಿರನ ರಾಜಸೂಯಯಾಗಕ್ಕೆ ಬಿಜಯಮಾಡಿಸಿದರು.

ಯುಧಿಷ್ಠಿರನ ಆಜ್ಞೆಯಂತೆ ಅಲ್ಲಿಗೆ ಬಂದ ಭೂಪತಿಗಳೆಲ್ಲರಿಗೂ ಪ್ರತ್ಯೇಕ-ಪ್ರತ್ಯೇಕವಾದ ಸೌಧಗಳು ಸಿದ್ಧವಾಗಿದ್ದುವು. ಆ ಸೌಧಗಳಲ್ಲಿ

ತಿನ್ನಲು ಭಕ್ಷ್ಯ-ಭೋಜ್ಯಾದಿಗಳು ತುಂಬಿದ್ದುವು. ಸುತ್ತಲೂ ಇದ್ದ ಎತ್ತರವಾದ ವೃಕ್ಷಗಳಿಂದಲೂ, ಲತಾ-ಗುಲ್ಮಗಳಿಂದಲೂ, ಪುಟ್ಟ-ಪುಟ್ಟ ಸರೋವರ ಗಳಿಂದಲೂ ಆ ಸೌಧಗಳು ಕಂಗೊಳಿಸುತ್ತಿದ್ದುವು. ಅರಸರು ಉಪಯೋಗಿಸುವ ಸಕಲವಸ್ತುಗಳೂ ಆ ಸೌಧಗಳಲ್ಲಿ ತುಂಬಿದ್ದುವು. ಆ ಸೌಧಗಳ ಕಿಟಕಿಗಳನ್ನು ಸುವರ್ಣದ ರೇಕುಗಳಿಂದ ಅಲಂಕರಿಸಿದ್ದರು. ಆ ಸೌಧಗಳಿಗೆ ಹಲವು ಮಹಡಿಗಳಿದ್ದು, ಮೇಲೆ ಹತ್ತಲು ಹೆಚ್ಚು ಸುಲಭವಾಗುವಂತೆ ರತ್ನಖಚಿತವಾದ ಸೋಪಾನಗಳನ್ನು ನಿರ್ಮಿಸಲಾಗಿತ್ತು. ನೆಲದ ಮೇಲೆ ರತ್ನಗಂಬಳಿಗಳನ್ನು ಹಾಸಿದ್ದರು. ಅಲ್ಲಲ್ಲಿ ಸುಗಂಧಪೂರಿತವಾದ ಪುಷ್ಪಗುಚ್ಛಗಳನ್ನು ಕಟ್ಟಿದ್ದರು. ಆ ಸೌಧಗಳು ಉತ್ತಮವಾದ ಧೂಪಗಂಧದಿಂದ ತುಂಬಿದ್ದು ಅವುಗಳು ಹಂಸದಂತೆಯೂ ಮತ್ತು ಚಂದ್ರನಂತೆಯೂ ಶುಭ್ರವರ್ಣದಿಂದ ವಿರಾಜಿಸುತ್ತಿದ್ದುವು. ಒಂದು ಯೋಜನದ ದೂರದಿಂದಲೇ ಅವುಗಳನ್ನು ನೋಡಬಹುದಾಗಿತ್ತು.

ಆ ಸೌಧಗಳ ಮಹಾದ್ವಾರಗಳು ಬಹಳ ಸುಂದರವಾಗಿ ಮಾಡಲ್ಪಟ್ಟಿದ್ದುವಲ್ಲದೇ – ಅತಿವಿಶಾಲವಾಗಿಯೂ ಇದ್ದುವು.

ಅಮೋಘವಾದ ಮತ್ತು ಅಮೂಲ್ಯವಾದ ವಸ್ತುಗಳಿಂದ ನಿರ್ಮಿತವಾಗಿ ಆ ಸೌಧಗಳು ಹಿಮವತ್ಪರ್ವತದ ಶಿಖರಗಳಂತೆ ಪ್ರಕಾಶಮಾನವಾಗಿದ್ದುವು.

ಇಂದ್ರಪ್ರಸ್ಥಕ್ಕೆ ಬಂದ ರಾಜರು ವಿಶ್ರಾಂತಿಹೊಂದಿದ ಬಳಿಕ ಯುಧಿಷ್ಠಿರನನ್ನು ಕಂಡು, ಪುರಸ್ಕರಿಸಿ ಮತ್ತು ಅವನಿಂದಲೂ ಸತ್ಕೃತರಾಗಿ ತಮ್ಮ-ತಮ್ಮ ಬಿಡಾರಗಳಿಗೆ ಹೋಗಿ ತಂಗುತ್ತಿದ್ದರು.

ಸಾವಿರಾರು ಬ್ರಾಹ್ಮಣರಿಂದಲೂ, ಸದಸ್ಯರಿಂದಲೂ, ಋಷಿ-ಮಹರ್ಷಿ ಗಳಿಂದಲೂ, ರಾಜ-ಮಹಾರಾಜರಿಂದಲೂ ತುಂಬಿದ್ದ ಆ ಮಹಾಯಾಗ ಮಂಟಪವು ನಿಶ್ಚಯವಾಗಿಯೂ ದೇವತೆಗಳಿಂದ ನಿಬಿಡವಾಗಿದ್ದ ಸ್ವರ್ಗಲೋಕದಂತೆಯೇ ಪ್ರಕಾಶಿಸುತ್ತಿದ್ದಿತು."

ಇ೪ನೆಯ ಅಧ್ಯಾಯವು ಮುಗಿಯಿತು.

ಇ೫ನೆಯ ಅಧ್ಯಾಯ ರಾಜಸೂಯಪರ್ವ (ಮುಂದುವರಿದಿದೆ.)

## ರಾಜಸೂಯಯಾಗದ ವರ್ಣನೆ

"ಜನಮೇಜಯ! ಧರ್ಮಾತ್ಮನಾದ ಯುಧಿಷ್ಠಿರನು ಧೃತರಾಷ್ಟ್ರನ

ಬಳಿಗೆ ಬಂದು, ಭೀಷ್ಮ-ಧೃತರಾಷ್ಟ್ರರನ್ನು ಯಥೋಚಿತವಾಗಿ ಪೂಜಿಸಿ ಆಚಾರ್ಯರಾದ ದ್ರೋಣ-ಕೃಪರನ್ನು ಸತ್ಕರಿಸಿ, ಅವರೆಲ್ಲರನ್ನೂ ಉದ್ದೇಶಿಸಿ ಹೇಳಿದನು :

"ಈ ಮಹಾಯಾಗವು ಪರಿಪೂರ್ಣವಾಗುವಂತೆಯೂ, ಫಲದಾಯಕ ವಾಗುವಂತೆಯೂ ನನ್ನನ್ನು ಅನುಗ್ರಹಿಸಿರಿ. ಇಲ್ಲಿರುವ ಅಪರಿಮಿತವಾದ ಬೊಕ್ಕಸವು ತಮಗೆ ಸೇರಿದುದಾಗಿದೆ. ನೀವೆಲ್ಲರೂ ಪರಸ್ಪರ ಸಮಾಲೋಚಿಸಿ ಈ ಯಾಗವನ್ನು ವಿಹಿತವಾದ ರೀತಿಯಲ್ಲಿ ವಿತರಣೆಯಿಂದ ನಿರ್ವಹಿಸುವುದು ಹೇಗೆಂಬ ವಿಷಯದಲ್ಲಿ ದಯೆಯಿಟ್ಟು ಸಲಹೆಗಳನ್ನು ನೀಡಿರಿ."

ಹೀಗೆ ಹೇಳಿ ಯುಧಿಷ್ಠಿರನು ತನ್ನ ಬಂಧುಗಳನ್ನು ಒಂದೊಂದು ಕೆಲಸಕ್ಕೆ ನಿಯೋಜಿಸಿದನು.

ದುಃಶಾಸನನು ಭಕ್ಷ್ಯ-ಭೋಜ್ಯಾದಿಗಳ ಮತ್ತು ಭೋಜನದ ವ್ಯವಸ್ಥೆಯಲ್ಲಿ ನಿಯುಕ್ತನಾದನು. ಅಶ್ವತ್ಥಾಮನು ಬ್ರಾಹ್ಮಣರ ಯೋಗ-ಕ್ಷೇಮಗಳನ್ನು ನೋಡಿಕೊಳ್ಳಲು ನಿಯೋಜಿಸಲ್ಪಟ್ಟನು. ನೃಪತಿಗಳ ಆತಿಥ್ಯದ ಮೇಲ್ವಿಚಾರಣೆಯನ್ನು ಯುಧಿಷ್ಠಿರನ ಆದೇಶದಂತೆ ಸಂಜಯನು ವಹಿಸಿಕೊಂಡನು. ಭೀಷ್ಮ-ದ್ರೋಣರು ಯಜ್ಞದಲ್ಲಾಗಲೀ, ಬಂದಿರುವ ಅತಿಥಿಗಳ ಆತಿಥ್ಯದಲ್ಲಾಗಲೀ ಯಾವ ವಿಧವಾದ ಕ್ರಿಯಾಲೋಪಗಳೂ ಉಂಟಾಗದಂತೆ ನೋಡಿಕೊಳ್ಳಲು ನಿಯೋಜಿತರಾದರು. ಆಯಾ ಕಾಲಗಳಲ್ಲಿ ಮಾಡಬೇಕಾದ ಕರ್ತವ್ಯಗಳೇನೆಂಬುದನ್ನು ಅವರು ಧರ್ಮಜನಿಗೆ ಸೂಚಿಸು ತ್ತಿದ್ದರು. ಅವರು, ಕಪ್ಪ-ಕಾಣಿಕೆಗಳ ರೂಪದಲ್ಲಿ ಬಂದ ವಜ್ರ-ವೈಡೂರ್ಯಾದಿ ಗಳ, ಹವಳಗಳ ಮತ್ತು ಸುವರ್ಣನಾಣ್ಯಗಳ ಪರೀಕ್ಷಕರೂ ಆಗಿದ್ದರು. ಬ್ರಾಹ್ಮಣರಿಗೆ ಯಥೋಚಿತವಾದ ಭೂರಿ-ದಕ್ಷಿಣೆಗಳನ್ನು ಕೊಡುವುದು ಕೃಪಾಚಾರ್ಯರಿಗೆ ಸೇರಿದ್ದಿತು. ಬಾಹ್ಲಿಕ, ಧೃತರಾಷ್ಟ್ರ, ಜಯದ್ರಥ, ಸೋಮದತ್ತ–ಇವರು ಯಜ್ಞಶಾಲೆಯ ಅಧಿಪತಿಗಳಾದರು.

ಧರ್ಮಾತ್ಮನಾದ ವಿದುರನು ಬೊಕ್ಕಸದ ಹಣವನ್ನು ವಿನಿಯೋಗ ಮಾಡುವುದರಲ್ಲಿ ನಿಯೋಜಿಸಲ್ಪಟ್ಟನು. ರಾಜರು ತರುವ ಯಥೇಚ್ಛವಾದ ಕಪ್ಪ-ಕಾಣಿಕೆಗಳನ್ನು ಗಣನೆಮಾಡಿಸಿ ಬೊಕ್ಕಸಕ್ಕೆ ತುಂಬುವ ಕಾರ್ಯವು ದುರ್ಯೋಧನನಿಗೆ ಸೇರಿದ್ದಿತು.

ಯುಧಿಷ್ಠಿರನು ಶ್ರೀಕೃಷ್ಣನಿಗೆ ಮಾತ್ರ ಯಾವ ಕಾರ್ಯವನ್ನೂ ಹೇಳಲಿಲ್ಲ.

ಆದರೆ ಶ್ರೀಕೃಷ್ಣನು ತಾನಾಗಿಯೇ ಒಂದು ಕಾರ್ಯವನ್ನು ಹುಡುಕಿಕೊಂಡು ಮಾಡಲು ಉಪಕ್ರಮಿಸಿದನು.

**ಚರಣಕ್ಷಾಲನೇ ಕೃಷ್ಣೋ ಬ್ರಾಹ್ಮಣಾನಾಂ ಸ್ವಯಂ ಹ್ಯಭೂತ್।**
**ಸರ್ವಲೋಕಸಮಾವೃತ್ತಃ ಪಿಪ್ರೀಷುಃ ಫಲಮುತ್ತಮಮ್ ॥೧೦॥**

ಮಹಾನುಭಾವನಾದ, ಸರ್ವಲೋಕಗಳಿಗೂ – ಸರ್ವಲೋಕಗಳ ಚರಾಚರಪ್ರಾಣಿಗಳಿಗೂ ಅತೀತನಾದ ಶ್ರೀಕೃಷ್ಣನು – ಯಾರ ಪ್ರೇರಣೆಯೂ ಇಲ್ಲದೆಯೇ, ಉತ್ತಮವಾದ ಫಲವನ್ನು ಪಡೆಯುವ ಅಥವಾ ಧರ್ಮಜನಿಗೆ ಉತ್ತಮವಾದ ಫಲವು ಸಿಕ್ಕಬೇಕೆಂಬ ಅಭಿಲಾಷೆಯಿಂದ, ಇಂದ್ರಪ್ರಸ್ಥಕ್ಕೆ ಆಗಮಿಸಿದ್ದ ಬ್ರಾಹ್ಮಣೋತ್ತಮರ ಕಾಲುತೊಳೆಯುವ ಕಾರ್ಯದಲ್ಲಿ ಯಾವಾಗಲೂ ಉದ್ಯುಕ್ತನಾಗಿರುತ್ತಿದ್ದನು.

ಯುಧಿಷ್ಠಿರನ ಯಾಗವನ್ನೂ ಮತ್ತು ಸಭಾಭವನವನ್ನೂ ನೋಡಲು ಬಂದಿರುವ ರಾಜರಲ್ಲಿ ಯಾವ ರಾಜನೂ ಒಂದು ಸಾವಿರ ವರಹಗಳಿಗೆ ಕಡಿಮೆಯಾಗಿ ಕಪ್ಪವನ್ನು ತಂದಿರಲಿಲ್ಲ. ಪ್ರತಿಯೊಬ್ಬ ರಾಜನೂ ಹೇರಳವಾದ ರತ್ನಾಭರಣಗಳನ್ನು ಕಾಣಿಕೆಯ ರೂಪದಲ್ಲಿ ಕೊಟ್ಟು ಯುಧಿಷ್ಠಿರನನ್ನು ಗೌರವಿಸುತ್ತಿದ್ದನು. ಒಬ್ಬೊಬ್ಬ ರಾಜನೂ ತಾನು ಕೊಡಲಿರುವ ಕಪ್ಪ-ಕಾಣಿಕೆಗಳು ಆ ಯಾಗದ ವೆಚ್ಚಕ್ಕೆ ಸರಿತೂಗಬೇಕೆಂಬ ಅಭಿಲಾಷೆಯಿಂದ ಕೊಡುತ್ತಿದ್ದನು.

ಆ ಯಜ್ಞವೇದಿಕೆಯ ಸುತ್ತಲೂ ಇದ್ದ ಭವ್ಯಭವನಗಳ ಶಿಖರಗಳು ದೇವತೆಗಳ ವಿಮಾನಗಳ ಸಂಚಾರಕ್ಕೆ ಪ್ರತಿಬಂಧಕರೂಪದಲ್ಲಿದ್ದುವು. ಯಜ್ಞವನ್ನು ನೋಡಲು ವಿಮಾನಾರೂಢರಾಗಿ ಬಂದ ಇಂದ್ರಾದಿದೇವತೆಗಳು ಆ ಸೌಧಗಳ ಮೇಲೆಯೇ ತಮ್ಮ ವಿಮಾನಗಳನ್ನು ನಿಲ್ಲಿಸಿ, ಇಂದ್ರಪ್ರಸ್ಥದ ಸೊಬಗನ್ನು ಕೌತುಕದಿಂದ ವೀಕ್ಷಿಸುತ್ತಿದ್ದರು. ದೇವತೆಗಳ ವಿಮಾನಪಙ್ಕ್ತಿಗಳಿಂದ ಕೂಡಿದ್ದ ಸೌಧಗಳು ಇನ್ನೂ ಹೆಚ್ಚು ಕಾಂತಿಯಿಂದ ವಿರಾಜಿಸಿದುವು.

ವರುಣನ ಐಶ್ವರ್ಯಕ್ಕೆ ಸಮಾನವಾದ ಐಶ್ವರ್ಯದಿಂದ ಕೂಡಿದ್ದ

ಯುಧಿಷ್ಠಿರನು–ಆರಂಭಣೀಯ, ಕ್ಷತ್ರ, ಧೃತಿ, ವ್ಯುಷ್ಟಿ, ದ್ವಿರಾತ್ರ, ದಶಪೇಯಗಳೆಂಬ ಆರು ವಿಧವಾದ ಅಗ್ನಿಕುಂಡಗಳನ್ನು ಸ್ಥಾಪಿಸಿ ರಾಜಸೂಯಯಾಗವನ್ನು ಆರಂಭಿಸಿದನು.

ಅವನಿತ್ತ ಭೂರಿದಕ್ಷಿಣೆಗಳಿಂದಲೂ, ಷಡ್ರಸೋಪೇತವಾದ ಭಕ್ಷ್ಯ-ಭೋಜ್ಯ-ಲೇಹ್ಯ-ಚೋಷ್ಯಗಳಿಂದಲೂ ಬ್ರಾಹ್ಮಣರು ತೃಪ್ತಿಹೊಂದಿದರು. ಯಥೋಚಿತವಾದ ಉಪಚಾರಗಳಿಂದ ಸರ್ವವರ್ಣದವರೂ ಸಂತುಷ್ಟರಾದರು.

ಮಂತ್ರಶಿಕ್ಷಾವಿಶಾರದರಿಂದ ಅರ್ಪಿತವಾದ ಇಡಾ, ಆಜ್ಯಹೋಮ, ಆಹುತಿಗಳಿಂದ ದೇವತೆಗಳು ತೃಪ್ತಿಹೊಂದಿದರು.

ದೇವತೆಗಳು ಯಜ್ಞದ ಹವಿಸ್ಸುಗಳಿಂದ ತೃಪ್ತರಾದಂತೆ – ಬ್ರಾಹ್ಮಣರು ದಕ್ಷಿಣೆಗಳಿಂದಲೂ, ಮೃಷ್ಟಾನ್ನದಿಂದಲೂ, ಅಮಿತವಾದ ಧನಸಂಚಯನದಿಂದಲೂ ತೃಪ್ತರಾದರು. ಬ್ರಾಹ್ಮಣರೇ ಆದಿಯಾಗಿ ಎಲ್ಲ ವರ್ಣದವರೂ ಯುಧಿಷ್ಠಿರನು ಮಾಡಿದ ರಾಜಸೂಯಮಹಾಯಾಗದಿಂದ ಅಮಿತವಾದ ಆನಂದವನ್ನು ಪಡೆದರು.

ಜನಮೇಜಯ! ಒಟ್ಟಿನಲ್ಲಿ ಹೇಳುವುದಾದರೆ ಯುಧಿಷ್ಠಿರನು ಪ್ರಾರಂಭಿಸಿದ ರಾಜಸೂಯಯಾಗವು ಸರ್ವಾಂಗಪೂರ್ಣವಾಗಿ ಪರಿಸಮಾಪ್ತವಾಯಿತು."

ಽ೫ನೆಯ ಅಧ್ಯಾಯವು ಮುಗಿಯಿತು.

ಽ೬ನೆಯ ಅಧ್ಯಾಯ — ಅರ್ಘಾಭಿಹರಣಪರ್ವ

## ರಾಜಸೂಯಮಹಾಯಾಗದಲ್ಲಿ ಬ್ರಾಹ್ಮಣರ ಮತ್ತು ಕ್ಷತ್ರಿಯರ ಸಮಾಗಮ : ನಾರದರಿಂದ ಶ್ರೀಕೃಷ್ಣನ ಮಹಿಮೆಯ ಕಥನ : ಭೀಷ್ಮರ ಸಲಹೆಯಂತೆ ಶ್ರೀಕೃಷ್ಣನಿಗೆ ಅಗ್ರಪೂಜೆ

ಪಾರಿಕ್ಷಿತ! ರಾಜಸೂಯಮಹಾಯಾಗವು ಪೂರೈಸಿತು. ಅವಭೃಥ ಸ್ನಾನವೊಂದು ಉಳಿದಿತ್ತು. ಕಡೆಯ ದಿನ ದೀಕ್ಷಿತನಾಗಿರುವ ಧರ್ಮರಾಜನನ್ನು ಮಂತ್ರಪುರಸ್ಸರವಾಗಿ ಅಭಿಷೇಚಿಸಬೇಕಾಗಿತ್ತು. ಬ್ರಹ್ಮರ್ಷಿಗಳೂ,

ರಾಜರ್ಷಿಗಳೂ, ಆಹ್ವಾನಿತರಾಗಿ ಬಂದಿರುವ ರಾಜ-ಮಹಾರಾಜರೂ, ಪಂಡಿತೋತ್ತಮರೂ ಆ ಮಹಾಸಭೆಯಲ್ಲಿ ಆಸೀನರಾಗಿದ್ದರು. ನಾರದರೂ ಆಗಮಿಸಿದ್ದರು. ಆ ಮಹಾಸಭೆಯನ್ನು ದೇವಾಧಿದೇವತೆಗಳಿಂದ ಕೂಡಿರುವ ಬ್ರಹ್ಮನ ಸಭೆಗೆ ಹೋಲಿಸಬಹುದಾಗಿತ್ತು.

ಪ್ರತಿದಿನದಂತೆ ಆ ದಿನವೂ ಪಂಡಿತೋತ್ತಮರಲ್ಲಿ ಪರಸ್ಪರವಾಗಿ ವಾದ-ವಿವಾದಗಳು ಪ್ರಾರಂಭವಾದುವು. 'ಇದಮೇವಂ' – 'ಇದು ಹೀಗೆಯೇ ಸರಿ' – ಎನ್ನುವರೊಬ್ಬರು. 'ನ ಚಾಪ್ಯೇವಂ' – 'ಇದು ಹೀಗಾಗುವುದಿಲ್ಲ' – ಎನ್ನುವರು ಮತ್ತೊಬ್ಬರು. 'ಏವಂ ಚೈತತ್ ನ ಚಾನ್ಯಥಾ' - 'ಇದು ಹೀಗೆಯೇ ಆಗಬೇಕೇ ಹೊರತು ಬೇರೆಯ ರೀತಿಯಲ್ಲಿ ಆಗುವ ಸಾಧ್ಯತೆಯೇ ಇಲ್ಲ' – ಎನ್ನುವರು ಮಗದೊಬ್ಬರು.

**ಕೃಶಾನರ್ಥಾಂಸ್ತತಃ ಕೇಚಿದಕೃಶಾಂಸ್ತತ್ರ ಕುರ್ವತೇ।**
**ಅಕೃಶಾಂಶ್ಚ ಕೃಶಾಂಶ್ಚಕ್ರುರ್ಹೇತುಭಿಃ ಶಾಸ್ತ್ರನಿಶ್ಚಯೈಃ ॥೫॥**

ಈ ರೀತಿಯ ವಾದ-ವಿವಾದಗಳಲ್ಲಿ ಒಮ್ಮೆ ಒಬ್ಬರ ಧ್ವನಿಯು ಕುಗ್ಗುತ್ತಿದ್ದಿತು. ಮತ್ತೊಬ್ಬರು ಮುಂದೆ ಬಂದು ತಮ್ಮ ವಾಕ್ಪಟುತ್ವದಿಂದ ಎದುರಾಳಿಯ ಧ್ವನಿಯು ಕುಗ್ಗುವಂತೆ ಮಾಡುತ್ತಿದ್ದರು. ತಮ್ಮ ಯುಕ್ತಿಗಳಿಂದ ಹುರುಳಿಲ್ಲದ ವಿಷಯವನ್ನೂ ತಿರುಳುಳ್ಳ ವಿಷಯವೆಂದು ಸಾಧಿಸುತ್ತಿದ್ದರು. ಹಾಗೆಯೇ ಪ್ರಬಲವಾದ ವಿಷಯವನ್ನೂ ದುರ್ಬಲವನ್ನಾಗಿ ಮಾಡಿಬಿಡುತ್ತಿದ್ದರು.

**ತತ್ರ ಮೇಧಾವಿನಃ ಕೇಚಿದರ್ಥಮನ್ಯೈರುದೀರಿತಮ್।**
**ವಿಚಿಕ್ಷಿಪುರ್ಯಥಾ ಶ್ಯೇನಾ ನಭೋಗತಮಿವಾಮಿಷಮ್ ॥೬॥**

ಕೆಲವು ಮೇಧಾವಿಗಳಾದ ವಿಪಶ್ಚಿತರಿಗೆ ಇತರರು ಹೇಳುವ ವ್ಯಾಖ್ಯಾನಗಳಲ್ಲಿ ದೋಷಗಳನ್ನು ಹುಡುಕುವುದೇ ಸ್ವಭಾವವಾಗಿ ಹೋಗಿತ್ತು. ಯಾವ ರೀತಿಯಲ್ಲಿ ಆಕಾಶದಲ್ಲಿ ಹಾರಾಡುತ್ತಿರುವ ಗಿಡಗಪಕ್ಷಿಗಳು ಮಾಂಸದ ತುಂಡೊಂದನ್ನು ಕೊಕ್ಕುಗಳಿಂದ ಕಚ್ಚಿ ಎಷ್ಟು ರಭಸದಿಂದ ಎಳೆದಾಡುತ್ತವೆಯೋ–ಅಷ್ಟೇ ರಭಸದಿಂದ ವಿದ್ವಾಂಸರು ತಮ್ಮ ಎದುರಾಳಿಯೊಬ್ಬರು ಮಾಡುವ ವ್ಯಾಖ್ಯೆಯಲ್ಲಿ ಕಿಂಚಿದ್ದೋಷವನ್ನಾದರೂ ಹುಡುಕಿ ಅವರನ್ನು

ಖಂಡಿಸಲು ಅವರ ಮೇಲೆ ಬೀಳುತ್ತಿದ್ದರು. ವಾದ-ವಿವಾದಗಳೆಲ್ಲವೂ ಶಾಸ್ತ್ರಾರ್ಥಗಳ ಚೌಕಟ್ಟಿನಲ್ಲಿಯೇ ನಡೆಯುತ್ತಿದ್ದುವು.

ಮತ್ತೊಂದು ಗುಂಪಿನವರು ಧರ್ಮಜಿಜ್ಞಾಸೆಯಲ್ಲಿಯೇ ನಿರತರಾಗಿದ್ದರು. ಮತ್ತೆ ಕೆಲವರು ಶ್ರುತಿ-ಸ್ಮೃತಿ–ಭಾಷ್ಯಾದಿಗಳ ವಿವರಣೆ ಯಲ್ಲಿ ನಿರತರಾಗಿದ್ದರು.

ಜನಮೇಜಯ! ದೇವರ್ಷಿ-ಬ್ರಹ್ಮರ್ಷಿಗಳಿಂದಲೂ, ಪಂಡಿತೋತ್ತಮ ರಿಂದಲೂ, ರಾಜ-ಮಹಾರಾಜರಿಂದಲೂ ಕೂಡಿದ್ದ ಆ ಮಹಾಸಭೆಯು ನಿಶ್ಚಯವಾಗಿಯೂ ನಕ್ಷತ್ರಗಳಿಂದ ಕೂಡಿರುವ ಆಕಾಶದಂತೆಯೇ ವಿರಾಜಿಸುತ್ತಿತ್ತು. ಆ ಮಹಾಸಭೆಯಲ್ಲಿ ವ್ರತ-ನಿಯಮಗಳಿಲ್ಲದವನಾಗಲೀ, ದ್ವಿಜನಲ್ಲದವನಾಗಲೀ ಯಾರೂ ಇರಲಿಲ್ಲ.

ನಾರದರಿಗೆ ಯುಧಿಷ್ಠಿರನ ವೈಭವವನ್ನು ನೋಡಿ ಬಹಳ ಸಂತೋಷವಾಯಿತು. ಒಡನೆಯೇ ಮನಸ್ಸಿನಲ್ಲಿ ಒಂದು ಯೋಚನೆಯೂ ಉದ್ಭವಿಸಿತು. ದೇವರ್ಷಿಗಳಾದ ನಾರದರು ಹಿಂದೊಮ್ಮೆ ಬ್ರಹ್ಮಸಭೆಯಲ್ಲಿ ನಡೆದಿದ್ದ ವಿಷಯಗಳೆಲ್ಲವನ್ನೂ ಸ್ಮರಿಸಿಕೊಂಡರು. ದೇವತೆಗಳೆಲ್ಲರೂ ಮಾನುಷರೂಪಗಳನ್ನು ಧರಿಸಿ ಭೂಮಿಯಲ್ಲಿ ಅವತರಿಸಿರುವರೆಂಬುದರ ಅರಿವೂ ನಾರದರಿಗುಂಟಾಯಿತು.

ಒಡನೆಯೇ ನಾರದರು ಕಮಲಾಕ್ಷನಾದ ಹರಿಯನ್ನು ನೆನೆದರು. ಮಹಾಮಹಿಮನಾದ ಶ್ರೀಹರಿಯು ಹಿಂದೆ ದೇವತೆಗಳಿಗೆ ಹೇಳಿದ್ದ ಮಾತುಗಳೂ ನಾರದರ ಸ್ಮೃತಿಪಥದಲ್ಲಿ ಬಂದುವು.

**ಅನ್ಯೋನ್ಯಮಭಿನಿಘ್ನಂತಃ ಪುನರ್ಲೋಕಾನವಾಪ್ಸ್ಯಥ ॥೧೫॥**

'ಭೂಮಿಯಲ್ಲಿ ಮಾನುಷರೂಪಗಳಿಂದ ಅವತಾರಮಾಡಿ ಅಭೀಷ್ಟಸಿದ್ಧಿಯಾದನಂತರ ಪರಸ್ಪರವಾಗಿ ಕಾದಾಡಿ, ಪುನಃ ಸ್ವರ್ಗಲೋಕಕ್ಕೆ ಬನ್ನಿರಿ.' ಇದೇ ನಾರಾಯಣನ ಸಂದೇಶವಾಗಿದ್ದಿತು.

ಶಂಭುವಾದ, ಭೂತವಾಹನನಾದ ಶ್ರೀಹರಿಯು ದೇವತೆಗಳಿಗೆ ಈ ರೀತಿ ಯಾಗಿ ಸಂದೇಶನೀಡಿ, ಇಂದು ಯಾದವಕುಲದಲ್ಲಿ ಅವತರಿಸಿದ್ದಾನೆ. ಭೂಮಿ

ಯಲ್ಲಿ ಅಂಧಕ-ವೃಷ್ಣಿಗಳ ವಂಶದಲ್ಲಿ ಹುಟ್ಟಿ, ಸಕಲಸೌಭಾಗ್ಯಗಳನ್ನೂ ಹೊಂದಿ–ನಕ್ಷತ್ರಗಳ ಮಧ್ಯದಲ್ಲಿ ಚಂದ್ರನು ಪ್ರಕಾಶಿಸುವಂತೆ-ವಿರಾಜಿಸುತ್ತಿರುವ ವಿಷಯವೂ ನಾರದರಿಗೆ ತಿಳಿಯಿತು.

**ಯಸ್ಯ ಬಾಹುಬಲಂ ಸೇನ್ದ್ರಾಃ ಸುರಾಃ ಸರ್ವ ಉಪಾಸತೇ।**
**ಸೋಽಯಂ ಮಾನುಷವನ್ನಾಮ ಹರಿರಾಸ್ತೇಽರಿಮರ್ದನಃ ॥೧೮॥**

**ಅಹೋ ಬತ ಮಹದ್ಭೂತಂ ಸ್ವಯಂಭೂರ್ಯದಿದಂ ಸ್ವಯಮ್।**
**ಆದಾಸ್ಯತಿ ಪುನಃ ಕ್ಷತ್ರಮೇವಂ ಬಲಸಮನ್ವಿತಮ್ ॥೧೯॥**

"ಯಾವನ ಬಾಹುಬಲವನ್ನು ಇಂದ್ರನೇ ಮೊದಲಾದ ದೇವತೆಗಳೂ ಉಪಾಸನೆಮಾಡುತ್ತಾರೆಯೋ – ಅಂತಹ ಮಹಾನುಭಾವನಾದ, ಶತ್ರುಮರ್ದನನಾದ ಶ್ರೀಹರಿಯು ಮನುಷ್ಯರಂತೆಯೇ ತೋರ್ಪಡಿಸಿಕೊಂಡು ಇಲ್ಲಿ ಕುಳಿತಿದ್ದಾನೆ.

ದೇವತೆಗಳನ್ನು ಮಾನವಲೋಕಕ್ಕೆ ಬರಲು ನಿರ್ದೇಶಿಸಿದ ಮಹಾನುಭಾವನಾದ ಶ್ರೀಹರಿಯೇ ಇಂದು ದೇವತೆಗಳನ್ನು ಪುನಃ ಸ್ವರ್ಗಕ್ಕೆ ಒಯ್ಯುವ ಕಾರ್ಯದಲ್ಲಿ ಪ್ರವೃತ್ತನಾಗಿದ್ದಾನೆ" – ಎಂದು ನಾರದರು ನಿಶ್ಚಯಿಸಿದವರಾಗಿ ನಿಟ್ಟುಸಿರುಬಿಟ್ಟು, ಆ ಮಹಾಸಭೆಯಲ್ಲಿ ಮುಂದಿನ ಆಗು-ಹೋಗುಗಳನ್ನೇ ಯೋಚಿಸುತ್ತಾ ಕುಳಿತರು.

ಜನಮೇಜಯ! ಮಹಾಮಹಿಮರಾದ ನಾರದರಿಗೆ ಶ್ರೀಕೃಷ್ಣನು ಸರ್ವಾಂತರ್ಯಾಮಿಯೆಂಬುದೂ, ಪರಾತ್ಪರನೆಂಬುದೂ, ಪರಮಾತ್ಮನೆಂಬುದೂ ಮತ್ತು ಯಜ್ಞ-ಯಾಗಾದಿಗಳಲ್ಲಿ ಆ ಮಹಾನುಭಾವನನ್ನೇ ಸಕಲರೂ ಆರಾಧಿಸುತ್ತಾರೆಂಬ ವಿಷಯವೂ ತಿಳಿದಿದ್ದಿತು. ಮುಂದೇನಾಗ ಬಹುದೆಂಬುದನ್ನೂ ನಾರದರು ತರ್ಕಿಸಿದ್ದರು. ಮುಂದಾಗುವುದನ್ನು ತಿಳಿದಿದ್ದರೂ ಕೆಲವು ಭಯಾನಕದೃಶ್ಯಗಳು ಕಣ್ಮುಂದೆ ಬಂದಾಗ ಮನುಷ್ಯನು ಚಿಂತಾಮಗ್ನನಾಗುತ್ತಾನೆ. ಅಂತೆಯೇ ನಾರದರೂ ಆನಂದವೆಂಬ ಮಹಾಸಾಗರದಲ್ಲಿ ಮುಳುಗಿ ತೇಲುತ್ತಿದ್ದ ಆ ಮಹಾಸಭಾಮಧ್ಯದಲ್ಲಿ ಯೋಚನಾಮಗ್ನರಾಗಿ ಕುಳಿತಿದ್ದರು.

ಭೀಷ್ಮನು ಯುಧಿಷ್ಠಿರನಿಗೆ ಮುಂದಿನ ಕರ್ತವ್ಯವನ್ನು ನಿರ್ದೇಶ ಮಾಡುತ್ತಾ ಹೇಳಿದನು :

**ಆಚಾರ್ಯಮೃತ್ವಿಜಂ ಚೈವ ಸಂಯುಜಂ ಚ ಯುಧಿಷ್ಠಿರ।**
**ಸ್ನಾತಕಂ ಚ ಪ್ರಿಯಂ ಪ್ರಾಹುಃ ಷಡರ್ಘ್ಯಾರ್ಹಾನ್ನೃಪಂ ತಥಾ॥**

**ಏತಾನರ್ಘ್ಯಾನಭಿಗತಾನಾಹುಃ ಸಂವತ್ಸರೋಷಿತಾನ್।**
**ತ ಇಮೇ ಕಾಲಪೂಗಸ್ಯ ಮಹತೋಽಸ್ಮಾನುಪಾಗತಾಃ ॥೨೪॥**

"ಮಗು, ಯುಧಿಷ್ಠಿರ! ಬಂದಿರುವ ರಾಜರಲ್ಲಿ ಅವರವರ ಗೌರವ-ಮರ್ಯಾದೆಗಳಿಗೆ ಅನುಸಾರವಾಗಿ ಪರಮಶ್ರೇಷ್ಠರಿಂದ ಪ್ರಾರಂಭಿಸಿ ಅರ್ಘ್ಯವು ಕೊಡಲ್ಪಡಲಿ. ಆಚಾರ್ಯರು, ಋತ್ವಿಜರು, ಬಂಧುಗಳು, ಸ್ನಾತಕರು, ಮಿತ್ರರು ಮತ್ತು ರಾಜರು–ಇವರು ಅರ್ಘ್ಯಪ್ರದಾನಕ್ಕೆ ಅರ್ಹರೆಂದು ಹಿರಿಯರು ಹೇಳುತ್ತಾರೆ. ಒಂದು ವರ್ಷ ಕಳೆದ ಮೇಲೆ ಬಂದರೆ ಅವರಿಗೆ ಪುನಃ ಅರ್ಘ್ಯಪ್ರದಾನವನ್ನು ಮಾಡಬೇಕು. ಒಂದು ವರ್ಷ ಮಧುಪರ್ಕಪೂಜೆಯನ್ನು ಸಲ್ಲಿಸಿದ್ದು ವರ್ಷವು ತುಂಬುವುದರೊಳಗೆ ಅವರು ಮತ್ತೆ ಬಂದರೆ ಪುನಃ ಅವರಿಗೆ ಅರ್ಘ್ಯವನ್ನು (ಮಧುಪರ್ಕವನ್ನು) ಕೊಡಬೇಕಾಗಿಲ್ಲ. ಇಲ್ಲಿ ಬಂದಿರುವ ರಾಜರೆಲ್ಲರೂ ಅನೇಕವರ್ಷಗಳಾದ ಮೇಲೆ ಬಂದಿರುತ್ತಾರೆ."

ಭೀಷ್ಮನು ರಾಜರ ಕಡೆಗೆ ಕೈದೋರುತ್ತಾ ಹೇಳಿದನು : "ಯುಧಿಷ್ಠಿರ! ಇವರೆಲ್ಲರಿಗೂ ಅನುಕ್ರಮವಾಗಿ ಅರ್ಘ್ಯಪ್ರದಾನಮಾಡಿ ಸತ್ಕರಿಸು. ಆದರೆ ಮೊಟ್ಟಮೊದಲು ಸರ್ವಶ್ರೇಷ್ಠರಾದವರಿಗೇ ಪ್ರಥಮಾರ್ಘ್ಯವು ಕೊಡಲ್ಪಡಲಿ."

ಆ ಮಹಾಸಭೆಯಲ್ಲಿ ಸರ್ವಶ್ರೇಷ್ಠರು ಯಾರೆಂದು ನಿಶ್ಚಯಿಸುವುದು ಬಹಳ ಕಠಿನವಾದ ವಿಷಯ. ಶ್ರೇಷ್ಠರಾದವರನ್ನು ಸರ್ವರೂ ಒಪ್ಪಿಕೊಳ್ಳಲೇಬೇಕಾಗುವುದು. ಅಂತಹ ವ್ಯಕ್ತಿ ಯಾರು? ಧರ್ಮರಾಜನು ಆ ಸಮಸ್ಯೆಯ ಪರಿಹಾರಕ್ಕೆ ತಾನೇ ಯತ್ನಿಸಲಿಲ್ಲ. ಪಿತಾಮಹನಾದ ಭೀಷ್ಮನನ್ನೇ ಕೇಳಿದನು :

"ತಾತ! ನೀನು ಕುರುವಂಶಪ್ರದೀಪನು ಮತ್ತು ಕುರುವಂಶ

ಮುಖ್ಯನೂ ಆಗಿರುವೆ. ಈ ಮಹಾಸಭೆಯಲ್ಲಿ ನೀನು ಯಾರನ್ನು ಸರ್ವಶ್ರೇಷ್ಠರೆಂದು ಪರಿಗಣಿಸುವೆ ಮತ್ತು ಮೊದಲನೆಯ ಅರ್ಘ್ಯವು ಯಾರಿಗೆ ಕೊಡಲ್ಪಡಬೇಕು? ದಯಮಾಡಿ ತಿಳಿಸು."

ಭೀಷ್ಮನು ಕ್ಷಣಕಾಲ ಯೋಚಿಸಿದನು. ಶ್ರೀಕೃಷ್ಣನ ಹೊರತಾಗಿ ಸರ್ವಶ್ರೇಷ್ಠರು ಮತ್ತಾರೂ ಇಲ್ಲವೆಂದು ನಿಶ್ಚಯಿಸಿ ಹೇಳಿದನು :

**ಏಷ ಹ್ಯೇಷಾಂ ಸಮಸ್ತಾನಾಂ ತೇಜೋಬಲಪರಾಕ್ರಮೈಃ।**
**ಮಧ್ಯೇ ತಪನ್ನಿವಾಭಾತಿ ಜ್ಯೋತಿಷಾಮಿವ ಭಾಸ್ಕರಃ ॥೨೮॥**

**ಅಸೂರ್ಯಮಿವ ಸೂರ್ಯೇಣ ನಿರ್ವಾತಮಿವ ವಾಯುನಾ।**
**ಭಾಸಿತಂ ಹ್ಲಾದಿತಂ ಚೈವ ಕೃಷ್ಣೇನೇದಂ ಸದೋ ಹಿ ನಃ ॥೨೯॥**



"ಪ್ರಪಂಚದಲ್ಲಿ ಸ್ವಯಂಪ್ರಕಾಶವಿರುವ ಅಗ್ನಿ – ನಕ್ಷತ್ರಗಳಿಗೆ ಸೂರ್ಯನು ಪ್ರಭುವಾಗಿರುವಂತೆ–ಶ್ರೀಕೃಷ್ಣನು ಇಲ್ಲಿ ಸ್ವಶಕ್ತಿ-ಸಾಮರ್ಥ್ಯ

ಗಳಿಂದಲೂ, ವೀರ್ಯ-ಪರಾಕ್ರಮಗಳಿಂದಲೂ ಕೂಡಿ ಪ್ರಭುವಾಗಿ ಪ್ರಕಾಶಿಸುತ್ತಿರುವನು. ಸೂರ್ಯನಿಲ್ಲದೆಡೆಯಲ್ಲಿ ಸೂರ್ಯನು ಪ್ರಕಾಶಿಸಿದರೆ ಮತ್ತು ಗಾಳಿಯೇ ಇಲ್ಲದೆಡೆಯಲ್ಲಿ ಮಂದಮಾರುತವು ಬೀಸಿದರೆ ಉಂಟಾಗುವ ಮಹಾನಂದವು ಈ ಮಹಾನುಭಾವನ ಸಾನ್ನಿಧ್ಯದಿಂದ ಈ ಮಹಾಸಭೆಯಲ್ಲಿ ನಮಗುಂಟಾಗಿದೆ. ಆ ಪರಮಪುರುಷನೇ ಈ ಶ್ರೀಕೃಷ್ಣನು. ಇವನೇ ನಮ್ಮೆಲ್ಲರಿಗೂ ಶ್ರೇಷ್ಠನು. ಇವನಿಗೇ ಮೊದಲನೆಯ ಅರ್ಘ್ಯವು ಕೊಡಲ್ಪಡಲಿ."

ಪಿತಾಮಹನ ಮಾತುಗಳನ್ನು ಕೇಳಿದೊಡನೆಯೇ ಪಾಂಡವರ ಮುಖ ಕಮಲಗಳು ಅರಳಿದುವು. ಸಹದೇವನು ಪರಿಮಳಯುಕ್ತವಾದ ಮೊದಲ ನೆಯ ಅರ್ಘ್ಯವನ್ನು ವೃಷ್ಣಿಕುಲದೀಪಕನಾದ ಶ್ರೀಕೃಷ್ಣನಿಗೆ ಅರ್ಪಿಸಿದನು. ಶ್ರೀಕೃಷ್ಣನೂ ಅರ್ಘ್ಯವನ್ನು ಯಥಾಶಾಸ್ತ್ರವಾಗಿ ಸ್ವೀಕರಿಸಿದನು. ಎಲ್ಲ ಕರ್ಮಗಳೂ ಸಾಂಗವಾಗಿ ಪ್ರಶಾಂತವಾತಾವರಣದಲ್ಲಿ ಮುಗಿಯುವು ದರಲ್ಲಿತ್ತು. ಆದರೆ ಶಿಶುಪಾಲನಿಗೆ ಮಾತ್ರ ಶ್ರೀಕೃಷ್ಣನಿಗೆ ಮೊದಲನೆಯ ಅರ್ಘ್ಯವನ್ನು ಪ್ರದಾನಮಾಡಿದುದು ಸಹಿಸದಾಯಿತು. ಆ ಮಹಾಸಭೆಯಲ್ಲಿ ಭೀಷ್ಮನು ಹೇಳಿದುದನ್ನೂ, ಯುಧಿಷ್ಠಿರನು ಮಾಡಿದುದನ್ನೂ ಶಿಶುಪಾಲನು ಕಟುವಾಗಿ ಟೀಕಿಸಿದ್ದು ಮಾತ್ರವಲ್ಲದೇ–ಮಹಾಮಹಿಮನಾದ ವಾಸುದೇವನನ್ನು ತೆಗಳಲೂ ಪ್ರಾರಂಭಿಸಿದನು."

ಖ೬ನೆಯ ಅಧ್ಯಾಯವು ಮುಗಿಯಿತು.

ಖ೭ನೆಯ ಅಧ್ಯಾಯ ಅರ್ಘ್ಯಾಭಿಹರಣಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನಿಗೆ ಪ್ರಥಮಾರ್ಘ್ಯವನ್ನು ಸಮರ್ಪಿಸಿದುದಕ್ಕಾಗಿ ಶಿಶುಪಾಲನ ಆಕ್ಷೇಪ

"ಜನಮೇಜಯ! ಶಿಶುಪಾಲನ ಕಣ್ಣುಗಳು ಕೆಂಪಾದುವು. ತುಟಿಗಳು ಅದುರುತ್ತಿದ್ದುವು. ಗುಡುಗಿನಂತಹ ಗಡುಸಾದ ಧ್ವನಿಯಲ್ಲಿ ಮಾತನಾಡಲು ಮೊದಲಿಟ್ಟನು :

"ಕುರುಕುಲಾವತಂಸನೇ! ಧರ್ಮಜ! ಕ್ಷತ್ರಿಯವಂಶಸಂಭೂತರಾದ, ರಾಜಾಧಿರಾಜರಿಗೆ ಮಾತ್ರವೇ ಸಲ್ಲಬೇಕಾದ ಮೊದಲನೆಯ ಅರ್ಘ್ಯವನ್ನು

ವೃಷ್ಣಿಕುಲದಲ್ಲಿ ಹುಟ್ಟಿರುವ ಈ ಕೃಷ್ಣನು, ರಾಜಸಭೆಯ ಮಧ್ಯದಲ್ಲಿ ಪಡೆಯಲು ಖಂಡಿತವಾಗಿಯೂ ಯೋಗ್ಯನಲ್ಲ. ಮಹಾತ್ಮರಾದ ನೀವು ಹೀಗೆ ಮಾಡಬಾರದಾಗಿತ್ತು. ಯಾವ ಕಾರಣದಿಂದಾಗಿ ಪುಂಡರೀಕಾಕ್ಷನಿಗೆ ನೀನು ಮೊಟ್ಟಮೊದಲು ಅರ್ಘ್ಯಪ್ರದಾನವನ್ನು ಮಾಡಿದೆ? ಯುಧಿಷ್ಠಿರ! ಧರ್ಮಸೂಕ್ಷ್ಮವೇನೆಂಬುದನ್ನು ಬಾಲರಾದ ನೀವು ತಿಳಿದಿರಲಾರಿರಿ. ಆದರೆ ವಯೋವೃದ್ಧನಾದ ಈ ಗಾಂಗೇಯನೂ ನಿಮಗೆ ಅನುಚಿತವಾದ



ಸಲಹೆಯನ್ನಿತ್ತು ಧರ್ಮಭ್ರಷ್ಟನಾಗಿರುವನು. ಒಂದು ವೇಳೆ ನಿನ್ನಂತಹವನು ಅಧರ್ಮದಿಂದ ವರ್ತಿಸಿದರೂ - ನಿನಗೆ ಹಿತವನ್ನುಂಟುಮಾಡುವ ನೆಪದಿಂದ ಕೃಷ್ಣನಿಗೆ ಪ್ರಥಮಾರ್ಘ್ಯವನ್ನೀಯಲು ಸಲಹೆಮಾಡಿದ ಈ ಭೀಷ್ಮನು ನಿಶ್ಚಯವಾಗಿಯೂ ಸತ್ಪುರುಷರ ಅವಹೇಳನಕ್ಕೆ ಪಾತ್ರನಾಗಿದ್ದಾನೆ.

**ಕಥಂ ಹ್ಯರಾಜಾ ದಾಶಾರ್ಹೋ ಮಧ್ಯೇ ಸರ್ವಮಹೀಕ್ಷಿತಾಮ್।**
**ಅರ್ಹಣಾಮರ್ಹತಿ ತಥಾ ಯಥಾ ಯುಷ್ಮಾಭಿರರ್ಚಿತಃ ॥೫॥**

ರಾಜನಲ್ಲದ, ದಾಶಾರ್ಹಕುಲೋತ್ಪನ್ನನಾದ ಕೃಷ್ಣನು ಈ ರಾಜಾಧಿರಾಜರ ಮಧ್ಯದಲ್ಲಿ ನೀವು ಕೊಟ್ಟ ಅಗ್ರಪೂಜೆಯನ್ನು ಸ್ವೀಕರಿಸಲು ಹೇಗೆ ತಾನೇ ಯೋಗ್ಯನಾದಾನು?

ಯುಧಿಷ್ಠಿರ! ನೀನು ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಲು ಇದ್ದ ಕಾರಣಗಳಾದರೂ ಏನು? ಅಥವಾ ಅವನಲ್ಲಿರುವ ವಿಶೇಷವಾದ ಗುಣಗಳಾದರೂ ಯಾವುವು?

**ಅಥ ವಾ ಮನ್ಯಸೇ ಕೃಷ್ಣಂ ಸ್ಥವಿರಂ ಕುರುಪುಙ್ಗವ।**
**ವಸುದೇವೇ ಸ್ಥಿತೇ ವೃದ್ಧೇ ಕಥಮರ್ಹತಿ ತತ್ಸುತಃ ॥೬॥**

ವಯೋವೃದ್ಧನೆಂದು ಇವನಿಗೆ ಅಗ್ರಪೂಜೆಯನ್ನು ಮಾಡಿದೆಯೆಂದು ಭಾವಿಸೋಣವೇ? ಕೃಷ್ಣನ ತಂದೆಯಾದ ವಸುದೇವನೇ ಜೀವಿಸಿರುವಾಗ ಕೃಷ್ಣನನ್ನು ವೃದ್ಧನೆಂದು ನೀನು ಭಾವಿಸಲು ಸಾಧ್ಯವೇ ಇಲ್ಲ. ತಂದೆಯ ಕಣ್ಣೆದುರಿನಲ್ಲಿಯೇ ಮಗನನ್ನು ಪುರಸ್ಕರಿಸುವುದು ಲೋಕಮರ್ಯಾದೆಗೆ ವಿರುದ್ಧವಾಗಿದೆಯೆಂದೇ ಹೇಳಬಹುದಾಗಿದೆ.

**ಅಥ ವಾ ವಾಸುದೇವೋಽಪಿ ಪ್ರಿಯಕಾಮೋಽನುವೃತ್ತವಾನ್ ।**
**ದ್ರುಪದೇ ತಿಷ್ಠತಿ ಕಥಂ ಮಾಧವೋಽರ್ಹತಿ ಪೂಜನಮ್ ॥೭॥**

ಒಂದು ವೇಳೆ ವಾಸುದೇವನು ನಿನ್ನ ಹಿತಚಿಂತಕನೆಂದೂ, ಸದಾ ನಿನ್ನ ಅನುವರ್ತಿಯಾಗಿರುವನೆಂದೂ ತಿಳಿದು ಅಗ್ರಪೂಜೆಯನ್ನು ಮಾಡಿದೆಯಾ? ನಿಮ್ಮ ಅಭ್ಯುದಯವನ್ನೇ ಹಗಲಿರುಳೂ ಅಭಿಲಾಷಿಸುವ ನಿಮ್ಮ ಮಾವ ದ್ರುಪದನಿರುವಾಗ ಅವನನ್ನು ತಿರಸ್ಕರಿಸಿ ಕೃಷ್ಣನನ್ನೇಕೆ ಪೂಜಿಸಿದೆ?

**ಆಚಾರ್ಯಂ ಮನ್ಯಸೇ ಕೃಷ್ಣಮಥ ವಾ ಕುರುನನ್ದನ।**
**ದ್ರೋಣೇ ತಿಷ್ಠತಿ ವಾರ್ಷ್ಣೇಯಂ ಕಸ್ಮಾದರ್ಚಿತವಾನಸಿ ॥೮॥**

ಕೃಷ್ಣನನ್ನು ಗುರುವೆಂದು ಭಾವಿಸಿರುವೆಯಾ, ಧರ್ಮಜ? ಧನುರ್ವೇದವನ್ನು ಆಮೂಲಾಗ್ರವಾಗಿ ನಿಮ್ಮೆಲ್ಲರಿಗೂ ಉಪದೇಶಿಸಿರುವ ದ್ರೋಣರೇ ಇಲ್ಲಿರುವಾಗ ಕೃಷ್ಣನು ಹೇಗೆ ತಾನೇ ದ್ರೋಣರಿಗಿಂತಲೂ ಶ್ರೇಷ್ಠನಾದಾನು?

ಇವರೇ ಅಲ್ಲದೇ ಈ ಮಹಾಸಭೆಯಲ್ಲಿ ಇನ್ನೂ ಎಂತೆಂತಹ ಮಹಾನುಭಾವರಿದ್ದಾರೆ!

**ಋತ್ವಿಜಂ ಮನ್ಯಸೇ ಕೃಷ್ಣಮಥ ವಾ ಕುರುನನ್ದನ।**
**ದ್ವೈಪಾಯನೇ ಸ್ಥಿತೇ ವೃದ್ಧೇ ಕಥಂ ಕೃಷ್ಣೋಽರ್ಚಿತಸ್ತ್ವಯಾ ॥೯॥**

ಅಥವಾ ಕೃಷ್ಣನನ್ನು ಶ್ರೇಷ್ಠನಾದ ಋತ್ವಿಜನೆಂದು ಭಾವಿಸಿ ಅವನಿಗೆ ಪ್ರಥಮಾರ್ಘ್ಯವನ್ನು ಕೊಟ್ಟು ಮರ್ಯಾದೆಯನ್ನು ಮಾಡಿದೆಯಾ? ಋತ್ವಿಜರಲ್ಲಿ ಶ್ರೇಷ್ಠರಾದ, ವೃದ್ಧರಾದ ಕೃಷ್ಣದ್ವೈಪಾಯನರೇ ಇಲ್ಲಿ ಉಪಸ್ಥಿತರಾಗಿರುವಾಗ ಅವರನ್ನು ಬಿಟ್ಟು ಕೃಷ್ಣನು ನಿನ್ನಿಂದ ಪ್ರಥಮಾರ್ಘ್ಯದ ಮೂಲಕವಾಗಿ ಯಾವ ವಿಶೇಷ ಕಾರಣದಿಂದ ಗೌರವಿಸಲ್ಪಟ್ಟನು? ಸ್ವೇಚ್ಛಾಮರಣೆಯಾದ, ಪುರುಷಶ್ರೇಷ್ಠನಾದ, ಶಾಂತನುವಿನ ಪುತ್ರನಾದ ಭೀಷ್ಮನು ಇಲ್ಲಿಯೇ ಇರುವಾಗ ಕೃಷ್ಣನನ್ನು ಪ್ರಥಮಾರ್ಘ್ಯಪ್ರದಾನದಿಂದ ಹೇಗೆ ತಾನೇ ಗೌರವಿಸಿದೆ? ಕುರುನಂದನ! ಸರ್ವಶಾಸ್ತ್ರವಿಶಾರದನಾದ ಅಶ್ವತ್ಥಾಮನು ಇಲ್ಲಿಯೇ ಇರುವಾಗ–ಕೃಷ್ಣನು ಹೇಗೆತಾನೇ ನಿನ್ನಿಂದ ಗೌರವಿ ಸಲ್ಪಟ್ಟನು? ಪುರುಷಶ್ರೇಷ್ಠನಾದ ರಾಜೇಂದ್ರನಾದ ದುರ್ಯೋಧನನು ಇಲ್ಲಿಯೇ ಉಪಸ್ಥಿತನಾಗಿರುವಾಗ, ಭಾರತಾಚಾರ್ಯರಾದ ಕೃಪರೂ ಇಲ್ಲಿಯೇ ಉಪವಿಷ್ಟರಾಗಿರುವಾಗ–ಕೃಷ್ಣನನ್ನು ಪ್ರಥಮಾರ್ಘ್ಯಪ್ರದಾನದಿಂದ ಹೇಗೆತಾನೇ ಗೌರವಿಸಿದೆ? ಕಿಂಪುರುಷಾಚಾರ್ಯನಾದ ದ್ರುಮನನ್ನೂ ಕಡೆಗಣಿಸಿ ನೀನು ಕೃಷ್ಣನನ್ನು ಗೌರವಿಸಿರುವೆ. ಪಾಂಡುವಿಗೆ ಸಮಾನವಾದ ಪರಾಕ್ರಮವನ್ನೂ, ಶುಭಲಕ್ಷಣಗಳನ್ನೂ ಹೊಂದಿರುವ ಭೀಷ್ಮಕನಿಲ್ಲಿಯೇ ಇದ್ದಾನೆ. ರಾಜಶ್ರೇಷ್ಠನಾದ ರುಕ್ಮಿಯಿದ್ದಾನೆ. ಏಕಲವ್ಯನಿದ್ದಾನೆ. ಮದ್ರಾಧಿಪತಿ ಯಾದ ಶಲ್ಯನಿದ್ದಾನೆ. ಇವರೆಲ್ಲರನ್ನೂ ಕಡೆಗಣಿಸಿ ಕೃಷ್ಣನನ್ನು ನೀನು ಹೇಗೆ ಗೌರವಿಸಿದೆ? ಈ ಮಹಾಸಭೆಯಲ್ಲಿ ಉಪಸ್ಥಿತನಾಗಿರುವ ಕರ್ಣನೂ ಮಹಾಬಲನು. ಎಲ್ಲ ರಾಜರ ಪ್ರಶಂಸೆಗೂ ಪಾತ್ರನಾಗಿದ್ದಾನೆ. ಬ್ರಾಹ್ಮಣೋ ತ್ತಮನಾದ ಪರಶುರಾಮನ ಪ್ರಿಯಶಿಷ್ಯನಿವನು. ಇವನು ತನ್ನ ಭುಜಬಲ-ಪರಾಕ್ರಮಗಳನ್ನೇ ಅವಲಂಬಿಸಿ ಪೃಥ್ವಿಯ ಎಲ್ಲ ರಾಜರನ್ನೂ ಪರಾಜಯ

ಗೊಳಿಸಿದ್ದಾನೆ. ಇಂತಹ ಮಹಾಪರಾಕ್ರಮಿಯಾದ ಕರ್ಣನನ್ನೂ ಕಡೆಗಣಿಸಿ ಈ ಕೃಷ್ಣನನ್ನು ಪ್ರಥಮಾರ್ಘ್ಯಪ್ರದಾನದಿಂದ ಗೌರವಿಸಿದೆಯೇಕೆ?

**ನೈವರ್ತ್ವಿಜ್ನೈವ ಚಾಚಾರ್ಯೋ ನ ರಾಜಾ ಮಧುಸೂದನಃ।**
**ಅರ್ಚಿತಶ್ಚ ಕುರುಶ್ರೇಷ್ಠ ಕಿಮನ್ಯತ್ಪ್ರಿಯಕಾಮ್ಯಯಾ ॥೧೭॥**

ಈ ಮಾಧವನು ಋತ್ವಿಜನೂ ಅಲ್ಲ ; ಆಚಾರ್ಯನೂ ಅಲ್ಲ ಅಥವಾ ರಾಜನೂ ಅಲ್ಲ. ಇಂತಹವನಿಗೆ ಅಗ್ರಪೂಜೆಯನ್ನು ಕೊಟ್ಟ ನಿನ್ನ ಆಶಯವಾದರೂ ಏನು? ಧರ್ಮಜ! ಒಂದು ವೇಳೆ ನೀನು ಈ ಕೃಷ್ಣನಿಗೇ ಪ್ರಥಮಪೂಜೆಯನ್ನು ಸಲ್ಲಿಸಬೇಕೆಂದು ನಿಶ್ಚಯಮಾಡಿದ್ದರೆ ಈ ರಾಜರನ್ನೇಕೆ ಆಹ್ವಾನಿಸಿದೆ? ಎಲ್ಲರನ್ನೂ ಆಹ್ವಾನಿಸಿ ಇವರ ಸಮಕ್ಷದಲ್ಲಿಯೇ ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿದ್ದರಿಂದ ರಾಜರನ್ನೆಲ್ಲಾ ಅವಮಾನಪಡಿಸಿ ದಂತಾಗಲಿಲ್ಲವೇ? ರಾಜರನ್ನು ತಿರಸ್ಕರಿಸುವ ಸಲುವಾಗಿಯೇ ಹೀಗೆ ಮಾಡಿದೆಯಾ? ಯುಧಿಷ್ಠಿರ! ನೀನಿಂದು ಸಾರ್ವಭೌಮನಿರಬಹುದು ; ನಾವೆಲ್ಲರೂ ನಿನ್ನ ಸಾರ್ವಭೌಮತ್ವವನ್ನು ಒಪ್ಪಿರಬಹುದು ; ಆದರೆ ಕೇವಲ ಭೀತಿಯಿಂದ ನಿನ್ನ ಸಾರ್ವಭೌಮತ್ವವನ್ನು ನಾವು ಒಪ್ಪಿಕೊಂಡಿಲ್ಲವೆಂಬುದು ನೆನಪಿನಲ್ಲಿರಲಿ. ನಾವು ನಿನಗೆ ಕಪ್ಪ-ಕಾಣಿಕೆಗಳನ್ನು ಸಲ್ಲಿಸಿರುವುದು ಭಯದಿಂದಲೂ ಅಲ್ಲ ; ಯಾವ ವಿಧವಾದ ಪ್ರತಿಫಲಕ್ಕಾಗಿಯೂ ಅಲ್ಲ. ಅಥವಾ ನಿನಗೆ ಶರಣಾಗತರಾಗುವ ಇಚ್ಛೆಯಿಂದಲೂ ಅಲ್ಲ. ನೀನಾಗಿಯೇ ಸಾರ್ವಭೌಮತ್ವವನ್ನು ಆಶಿಸಿದ್ದರಿಂದಲೂ ಮತ್ತು ನೀನು ಧರ್ಮಾತ್ಮನೆಂಬ ಭಾವನೆಯಿಂದಲೂ ನಿನಗೆ ನಾವು ಕಪ್ಪ-ಕಾಣಿಕೆಗಳನ್ನು ಕೊಟ್ಟಿರುವೆವು.

ಪಾಂಡುಪುತ್ರ! ನಿನಗೆ ಕಪ್ಪ-ಕಾಣಿಕೆಗಳನ್ನಿತ್ತ ರಾಜರನ್ನು ಅವಮಾನ ಮಾಡಬೇಕೆಂಬ ಕಾರಣವೊಂದಲ್ಲದೇ ಮತ್ತಾವ ಕಾರಣದಿಂದ ನೀನು ರಾಜತ್ವದ ಕುರುಹೇ ಇಲ್ಲದ ಈ ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿದೆ?

ಅಯ್ಯೋ! ಈ ಧರ್ಮಪುತ್ರನಿಗೆ ಆಕಸ್ಮಿಕವಾಗಿ 'ಧರ್ಮಾತ್ಮ'ನೆಂಬ ಯಶಸ್ಸು ಬಂದಿತ್ತು. ನಮ್ಮೆಲ್ಲರ ಸಮಕ್ಷದಲ್ಲಿಯೇ ಇವನು ಧರ್ಮಭ್ರಷ್ಟನಾದ ಕೃಷ್ಣನನ್ನು ಪೂಜಿಸಿದನಲ್ಲವೇ? ಇವನಿಗೆ ಇನ್ನು ಮುಂದೆ ಪುರಸ್ಕಾರಕೊಡುವವರು ತಾನೇ ಯಾರಿದ್ದಾರೆ?

ವೃಷ್ಣಿಕುಲಕಳಂಕನಾದ ಈ ಕೃಷ್ಣನು ಮಹಾತ್ಮನಾದ ಜರಾಸಂಧನನ್ನು ವೀರಕ್ಷತ್ರಿಯರಿಗೆ ಉಚಿತವಲ್ಲದ ರೀತಿಯಲ್ಲಿ ವಧೆಮಾಡಿಸಿದನು."

ಶಿಶುಪಾಲನ ಕೋಪವು ಕ್ಷಣ-ಕ್ಷಣಕ್ಕೂ ಉಕ್ಕುತ್ತಿದ್ದಿತು. ಸಭೆಯು ಸ್ತಬ್ಧವಾಗಿತ್ತು. ಶಿಶುಪಾಲನ ಕರ್ಕಶವಾದ ಮಾತುಗಳು ಮುಂದುವರಿದುವು. ಶಿಶುಪಾಲನು ವಿಚಿತ್ರವಾಗಿ ನಗುತ್ತಾ ಮಾತನ್ನು ಮುಂದುವರಿಸಿದನು :

"ಅಹಹ! ಇಂದು ಧರ್ಮವು ಧರ್ಮರಾಜನಿಂದ ತಿರಸ್ಕೃತವಾಯಿತು. ಇಷ್ಟು ಮಾತ್ರವಲ್ಲದೇ ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿದ್ದರಿಂದ ಧರ್ಮಜನ ಕಾರ್ಪಣ್ಯದ ಪ್ರದರ್ಶನವೂ ಆದಂತಾಯಿತು.

ಎಲೈ ಕೃಷ್ಣ! ಒಂದು ವೇಳೆ ಈ ಕುಂತೀಪುತ್ರರು ನಿನ್ನ ವಿಷಯದಲ್ಲಿ ಭೀತರಾಗಿರಬಹುದು ಅಥವಾ ಈ ತಪಸ್ವಿಗಳು ಕೃಪಣತ್ವದಿಂದ ನಿನಗೆ ಅಗ್ರ ಪೂಜೆಯನ್ನು ಮಾಡಲು ಮುಂದೆ ಬಂದಿರಬಹುದು. ಆದರೆ ನೀನು ಈ ಸಮಯದಲ್ಲಿ ನಿನಗೆ ಉಚಿತವಾದ ಪೂಜೆಯು ಯಾವುದೆಂಬುದನ್ನು ತಿಳಿಯಪಡಿಸಬಹುದಾಗಿತ್ತಲ್ಲವೇ?

ಈ ಕೃಪಣರಿಂದ ಕೊಡಲ್ಪಟ್ಟ ಅಗ್ರಪೂಜೆಯನ್ನು ಪೂಜೆಗೆ ಅನರ್ಹನಾದ ನೀನು ಹೇಗೆ ತಾನೇ ಸ್ವೀಕರಿಸಿದೆ?

**ಅಯುಕ್ತಾಮಾತ್ಮನಃ ಪೂಜಾಂ ತ್ವಂ ಪುನರ್ಬಹುಮನ್ಯಸೇ।**
**ಹವಿಷಃ ಪ್ರಾಪ್ಯ ನಿಷ್ಯನ್ದಂ ಪ್ರಾಶಿತಾ ಶ್ವೇವ ನಿರ್ಜನೇ ॥೨೭॥**

ಈ ಅಗ್ರಪೂಜೆಯು ನಿನ್ನ ಅಂತಸ್ತನ್ನೂ ಗೌರವವನ್ನೂ ಹೆಚ್ಚಿಸಿಬಿಡುವು ದೆಂದು ತಿಳಿದೆಯಾ? ಕೃಷ್ಣ! ಪವಿತ್ರತಮವಾದ ಹವಿಸ್ಸಿನ ಪಾತ್ರೆಯನ್ನು ನಾಯಿಯು ಕಚ್ಚಿಕೊಂಡು ಹೋಗಿ ನಿರ್ಜನಪ್ರದೇಶದಲ್ಲಿ ತಿಂದುಬಿಟ್ಟ ಮಾತ್ರಕ್ಕೆ ನಾಯಿಯ ಅಂತಸ್ತು-ಗೌರವಗಳು ಹೆಚ್ಚಾದೀತೇ?

ನಿಶ್ಚಯವಾಗಿ ಹೇಳುವುದಾದರೆ–ಕೃಷ್ಣ! ಇಂದು ನಿನಗಿತ್ತ ಅಗ್ರಪೂಜೆ ಯಿಂದ ಈ ಕುಂತೀಪುತ್ರರು ಇಲ್ಲಿ ನೆರೆದಿರುವ ರಾಜಾಧಿರಾಜರನ್ನು ಅವಮಾನ ಮಾಡಿದಂತಾಗಿರುವುದಿಲ್ಲ. ನಿನ್ನನ್ನೇ ಅವಮಾನಪಡಿಸಿದಂತಾಗಿದೆ.

ರಾಜಲಕ್ಷಣಗಳೇ ಇಲ್ಲದ ನಿನಗೆ ರಾಜಾಧಿರಾಜರಿಗೆ ಉಚಿತವಾದ ಅಗ್ರ ಪೂಜೆಯನ್ನು ಕೊಟ್ಟಿರುವುದು ನಿನಗೆ ಅವಮಾನಮಾಡಿದಂತಾಗಲಿಲ್ಲವೇ?

ಮಾಧವ! ನಿನಗೆ ಸಲ್ಲಿಸಿದ ಅಗ್ರಪೂಜೆಯ ಪ್ರಯೋಜನ ಅಥವಾ ಫಲವೇನೆಂದು ಹೇಳಲೇ?

ನಪುಂಸಕನೊಬ್ಬನಿಗೆ ಕಡುಚೆಲುವೆಯೊಡನೆ ವಿವಾಹ ; ಕುರುಡನ ಮುಂದೆ ರೂಪದರ್ಶನಮಾಡುವುದು (ಕನ್ನಡಿಯನ್ನು ಹಿಡಿಯುವುದು). ಹಾಗೆಯೇ ರಾಜನಲ್ಲದ ನಿನಗೆ ರಾಜೋಚಿತವಾದ ಅಗ್ರಪೂಜೆ–ಇವೆಲ್ಲವೂ ಒಂದೇ ವಿಧವಾದ ಫಲವನ್ನು ಕೊಡುತ್ತವೆ. (ನಿಷ್ಫಲಗಳೇ ಸರಿ.)"

ಅನಂತರ ಶಿಶುಪಾಲನು ರಾಜರನ್ನುದ್ದೇಶಿಸಿ ಹೇಳಿದನು :

"ಎಲೈ ರಾಜರೇ! ನಮಗೇನೋ ಇದರಿಂದ ಸ್ವಲ್ಪ ಪ್ರಯೋಜನವೇ ಆದಂತಾಗಿದೆ. ಈ ಸಮಾರಂಭದಿಂದಾಗಿ ನಮಗೆ ಧರ್ಮರಾಜನ ಯೋಗ್ಯತೆಯೇನು? ಭೀಷ್ಮನ ಯೋಗ್ಯತೆ ಎಂತಹುದು? ವಾಸುದೇವನ ಯೋಗ್ಯತೆಯೇನು? – ಎಂಬುದು ಅತಿಸ್ಪಷ್ಟವಾಗಿ ತಿಳಿಯಿತು. ಇದೇ ನಮಗಿಂದು ಆಗಿರುವ ಪ್ರಯೋಜನ. ಮಹಾತ್ಮರೆನಿಸಿಕೊಂಡ ಇವರೆಲ್ಲರೂ ತಮ್ಮ ನೈಜ ಸ್ವರೂಪವೇನೆಂಬುದನ್ನು ಇಲ್ಲಿ ಪ್ರದರ್ಶಿಸಿಕೊಂಡಿದ್ದಾರೆ. ಇನ್ನು ನಾವಿಲ್ಲಿ ನಿಲ್ಲುವ ಕಾರಣವಿಲ್ಲ" – ಎಂದು ಹೇಳಿ ಶಿಶುಪಾಲನು ಸಿಂಹಾಸನದಿಂದೆದ್ದು ಕೆಲವು ರಾಜರೊಡನೆ ಸಭಾಮಂದಿರವನ್ನು ಬಿಟ್ಟು ಹೊರಟನು."

ಳ೦ನೆಯ ಅಧ್ಯಾಯವು ಮುಗಿಯಿತು.

ಳಲನೆಯ ಅಧ್ಯಾಯ ಅರ್ಘಾಭಿಹರಣಪರ್ವ (ಮುಂದುವರಿದಿದೆ.)

## ಶಿಶುಪಾಲನಿಗೆ ಯುಧಿಷ್ಠಿರನು ಸಮಾಧಾನ ಹೇಳಿದುದು : ಭೀಷ್ಮನು ಶಿಶುಪಾಲನ ಪ್ರಶ್ನೆಗಳಿಗೆ ಉತ್ತರಿಸಿದುದು

"ಜನಮೇಜಯ! ಧರ್ಮಾತ್ಮನಾದ ಯುಧಿಷ್ಠಿರನು ಒಡನೆಯೇ ಶಿಶುಪಾಲನ ಹಿಂದೆ ಹೋಗಿ ಅವನನ್ನು ನಿಲ್ಲಿಸಿ ಹಿತೋಕ್ತಿಗಳನ್ನು ಹೇಳತೊಡಗಿದನು.:

"ಶಿಶುಪಾಲ! ನಿನ್ನ ಬಾಯಿಂದ ಹೊರಟ ಮಾತುಗಳು ನಿನ್ನ ಘನತೆಗೆ ತಕ್ಕುದಲ್ಲ. ಪಿತಾಮಹನಾದ ಭೀಷ್ಮನನ್ನು ಧರ್ಮಸೂಕ್ಷ್ಮವನ್ನು ತಿಳಿದವನಲ್ಲವೆಂದು ಹೇಳಿರುವುದು ನಿಶ್ಚಯವಾಗಿಯೂ ಪಾಪಕರವೂ ಮತ್ತು ಕರ್ಣ

ಕಠೋರವೂ ಆಗಿದೆ. ಚೇದಿರಾಜ! ನಿನ್ನೊಡನಿರುವ ಇತರ ರಾಜರನ್ನಾದರೂ ನೋಡಿ ಸುಮ್ಮನಿರಬಾರದೇ? ಇವರಲ್ಲನೇಕರು ನಿನಗಿಂತಲೂ ಹಿರಿಯರಾಗಿದ್ದಾರೆ. ಇವರೆಲ್ಲರೂ ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಲು ಒಪ್ಪಿರುತ್ತಾರೆ. ನೀನೂ ಅವರಂತೆಯೇ ಶ್ರೀಕೃಷ್ಣನಿಗಿತ್ತಿರುವ ಅಗ್ರಪೂಜೆಯನ್ನು ಒಪ್ಪಿಕೊಳ್ಳುವುದು ಯುಕ್ತವಾಗಿದೆ. ಭೀಷ್ಮನು ನಿಶ್ಚಯವಾಗಿಯೂ ಶ್ರೀಕೃಷ್ಣನಾರೆಂಬುದನ್ನು ತತ್ತ್ವತಃ ತಿಳಿದಿರುತ್ತಾನೆ. ಶ್ರೀಕೃಷ್ಣನ ವಿಷಯದಲ್ಲಿ ಭೀಷ್ಮನಿಗೆ ತಿಳಿದಿರುವಷ್ಟು ನಿನಗೆ ತಿಳಿದಿರಲಾರದು."

ಶಠನ ವಿಷಯದಲ್ಲಿ ಧರ್ಮಜನು ಉಪಯೋಗಿಸಿದ ಸತ್ತ್ವಗುಣೈಕ ಪ್ರಧಾನವಾದ ವಚನಗಳು ಭೀಷ್ಮನಿಗೆ ಹಿಡಿಸದಾಯಿತು. ಧರ್ಮಜನ ಮಾತು ಮುಗಿಯುತ್ತಲೇ ಭೀಷ್ಮನು ಹೇಳಿದನು :

**ನಾಸ್ಮೈ ದೇಯೋ ಹ್ಯನುನಯೋ ನಾಯಮರ್ಹತಿ ಸಾನ್ತ್ವನಮ್ ।**
**ಲೋಕವೃದ್ಧತಮೇ ಕೃಷ್ಣೇ ಯೋಽರ್ಹಣಾಂ ನಾಭಿಮನ್ಯತೇ ॥೬॥**

"ಸನಾತನನಾದ, ಅಪ್ರಮೇಯನಾದ, ಲೋಕವೃದ್ಧನಾದ (ಪುರಾಣ ಪುರುಷನಾದ) ಶ್ರೀಕೃಷ್ಣನಿಗೆ ಸಲ್ಲಿಸಿದ ಅಗ್ರಪೂಜೆಗೆ ಪ್ರತಿಭಟನೆಯನ್ನು ತೋರಿದವನಿಗೆ ಸಾಮೋಪಾಯದ ಮಾತುಗಳು ಖಂಡಿತವಾಗಿಯೂ ಸಲ್ಲವು. ಮಹಾಪರಾಕ್ರಮಿಯಾದ ಕ್ಷತ್ರಿಯನೊಬ್ಬನು ಕ್ಷತ್ರಿಯರನ್ನು ಜಯಿಸಿ–ಸೋತ ಕ್ಷತ್ರಿಯರನ್ನು ಬಿಟ್ಟುಬಿಟ್ಟರೆ – ಜಯಶಾಲಿಯಾದ ಆ ಕ್ಷತ್ರಿಯನು ಕ್ಷತ್ರಿಯಕುಲಕ್ಕೆ 'ಗುರು' ಎನಿಸಿಕೊಳ್ಳುತ್ತಾನೆ.

ರಾಜಾಧಿರಾಜರು ಉಪಸ್ಥಿತರಾಗಿರುವ ಈ ಮಹಾಸಭೆಯಲ್ಲಿ ಸಾತ್ವತೀ ಪುತ್ರನಾದ ಶ್ರೀಕೃಷ್ಣನ ತೇಜಸ್ಸಿನಿಂದ ಪರಾಭವಹೊಂದದೇ ಇರುವ ರಾಜನೊಬ್ಬನನ್ನಾದರೂ ನಾನು ಕಾಣೆನು. ಈ ಮಹಾನುಭಾವನು ನಮ್ಮಿಂದ ಮಾತ್ರವೇ ಅರ್ಚನೀಯನಲ್ಲ! ಈ ಅಚ್ಯುತನು ಮೂರು ಲೋಕಗಳಲ್ಲೂ ವಂದ್ಯನಾಗಿರುವನು. ಅನೇಕಾನೇಕಕ್ಷತ್ರಿಯೋತ್ತಮರು ಶ್ರೀಕೃಷ್ಣನಿಂದ ಪರಾಜಿತರಾಗಿದ್ದಾರೆ. ಸಕಲವಾದ ಈ ಚತುರ್ದಶಭುವನಗಳೂ ಶ್ರೀಕೃಷ್ಣನಲ್ಲಿಯೇ ಪ್ರತಿಷ್ಠಿತವಾಗಿವೆ. ಈ ಕಾರಣದಿಂದಲೇ ನಾವು ಪರಮ ಶ್ರೇಷ್ಠನಾದ ಮತ್ತು ವೃದ್ಧರಲ್ಲಿ ವೃದ್ಧನಾದ ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು

ಅರ್ಪಿಸಿರುತ್ತೇವೆ. ಆದುದರಿಂದ, ಶಿಶುಪಾಲ! ಶ್ರೀಕೃಷ್ಣನು ಅಗ್ರಪೂಜೆಗೆ ಅನರ್ಹನೆಂದು ಹೇಳುವುದು ಸರ್ವಥಾ ಯುಕ್ತವಲ್ಲ. ನಿನ್ನ ಬುದ್ಧಿಯು ಇನ್ನು ಮುಂದಾದರೂ ಈ ದುರಭಿಪ್ರಾಯವನ್ನು ಹೊಂದದಿರಲಿ. ನಾನೂ ಕೂಡ ಅನೇಕಜ್ಞಾನವೃದ್ಧ-ವಯೋವೃದ್ಧರ ಸೇವೆಯನ್ನು ಮಾಡಿರುತ್ತೇನೆ. ಮಹಾನುಭಾವರೊಡನೆ ಮಾತನಾಡುವಾಗ ಶೌರಿಯು ಜನ್ಮಪ್ರಭೃತಿ ಮಾಡಿರುವ ಅನೇಕವಿಧವಾದ ಸಾಹಸಕಾರ್ಯಗಳನ್ನೂ ಕೇಳಿರುತ್ತೇನೆ. ನಾನಾದೇಶಗಳ ಜನರೆಲ್ಲರೂ ಶ್ರೀಕೃಷ್ಣನ ಗುಣಕಥನವನ್ನು ಮಾಡಿರುವುದನ್ನೂ ಕೇಳಿರುತ್ತೇನೆ. ಆದುದರಿಂದ ನಾನು ಶ್ರೀಕೃಷ್ಣನ ಅಪಾರವಾದ ಗುಣಗಳನ್ನು ತಿಳಿದು, ಅವನಿಗೇ ಅಗ್ರಪೂಜೆಯನ್ನು ಸಲ್ಲಿಸಬೇಕೆಂದು ಹೇಳಿದೆನೇ ಹೊರತು ಕಾರ್ಪಣ್ಯದಿಂದಾಗಲೀ, ಬಂಧುತ್ವದ ಕಾರಣದಿಂದಾಗಲೀ ಅಥವಾ ಶ್ರೀಕೃಷ್ಣನು ನನಗೇನಾದರೂ ಪ್ರತಿಫಲವನ್ನು ನೀಡುವನೆಂಬ ದುರಾಸೆಯಿಂದಾಗಲೀ– ಪ್ರಥಮಪೂಜೆಯನ್ನು ಅವನಿಗರ್ಪಿಸಲು ಹೇಳಲಿಲ್ಲ. ಸತ್ಪುರುಷರಿಂದ ಅನುದಿನವೂ ಪೂಜಿಸಲ್ಪಡುತ್ತಿರುವ ಶ್ರೀಕೃಷ್ಣನನ್ನು ಇಂದು ನಾವು ಪೂಜಿಸಿದ್ದೇವೆ. ಸಕಲಪ್ರಾಣಿಗಳಿಗೂ ಆನಂದದಾಯಕನಾದ ಜಗದಾನಂದ ಕಂದನನ್ನು ನಾವಿಂದು ಪೂಜಿಸಿದ್ದೇವೆ. ಅವನ ಶೌರ್ಯ-ಪರಾಕ್ರಮ-ಯಶಸ್ಸುಗಳು ಮತ್ತು ಎಲ್ಲೆಡೆಗಳಲ್ಲಿಯೂ ಅವನಿಗೆ ಲಭಿಸಿರುವ ವಿಜಯ– ಇವುಗಳನ್ನು ತಿಳಿದೇ ನಾವಿಂದು ಈ ಮಹಾನುಭಾವನಿಗೆ ಅಗ್ರಪೂಜೆಯನ್ನು ಸಲ್ಲಿಸಿದ್ದೇವೆ.

ಈ ಸಭೆಯಲ್ಲಿ ನಾವು ಒಬ್ಬ ಬಾಲಕನನ್ನಾದರೂ ಪರೀಕ್ಷಿಸದೇ ಉದಾಸೀನಮಾಡಿಲ್ಲ. ಇಲ್ಲಿ ಉಪಸ್ಥಿತರಾಗಿರುವ ಎಲ್ಲರನ್ನೂ ಕೂಲಂಕಷವಾಗಿ ಪರೀಕ್ಷಿಸಿದ ನಂತರವೇ ನಾವು ಶ್ರೀಕೃಷ್ಣನೇ ಅಗ್ರಪೂಜೆಗೆ ಅರ್ಹನೆಂಬುದನ್ನು ನಿರ್ಧರಿಸಿದ್ದೇವೆ.

**ಗುಣೈರ್ವೃದ್ಧಾನತಿಕ್ರಮ್ಯ ಹರಿರರ್ಚ್ಯತಮೋ ಮತಃ ॥೧೭॥**

ತನ್ನಲ್ಲಿರುವ ಗುಣಗಳಿಂದ ಹರಿಯು ವೃದ್ಧರನ್ನೂ ಅತಿಕ್ರಮಿಸಿರುವನೆಂಬುದು (ಮೀರಿಸಿರುವನೆಂಬುದು) ನಮ್ಮ ಅಭಿಪ್ರಾಯವಾಗಿದೆ. ಆದುದರಿಂದಲೇ ಇವನು ಪೂಜ್ಯತಮನಾಗಿದ್ದಾನೆ.

**ಜ್ಞಾನವೃದ್ಧೋ ದ್ವಿಜಾತೀನಾಂ ಕ್ಷತ್ರಿಯಾಣಾಂ ಬಲಾಧಿಕಃ ।**
**ವೈಶ್ಯಾನಾಂ ಧಾನ್ಯಧನವಾಞ್ಛೂದ್ರಾಣಾಮೇವ ಜನ್ಮತಃ ।**
**ಪೂಜ್ಯತಾಯಾಂ ಚ ಗೋವಿನ್ದೇ ಹೇತೂ ದ್ವಾವಪಿ ಸಂಸ್ಥಿತೌ ॥೧೮॥**

ಬ್ರಾಹ್ಮಣರಲ್ಲಿ ಜ್ಞಾನಿಯಾದವನು ಶ್ರೇಷ್ಠನೆನಿಸುವನು. ಕ್ಷತ್ರಿಯರಲ್ಲಿ ಬಲಿಷ್ಠನಾದವನು ಶ್ರೇಷ್ಠನೆನಿಸುವನು. ವೈಶ್ಯರಲ್ಲಿ ಧನ-ಧಾನ್ಯಸಮೃದ್ಧಿಯಿರುವವನು ಶ್ರೇಷ್ಠನೆನಿಸುವನು. ಶೂದ್ರರಲ್ಲಿ ವಯೋವೃದ್ಧನು ಪುರಸ್ಕೃತನಾಗುತ್ತಾನೆ. ಶ್ರುತಿ-ಸ್ಮೃತಿಗಳು ಹೀಗೆ ನಿರ್ಣಯಮಾಡಿವೆ. ಗೋವಿಂದನಿಗೆ ಅಗ್ರಪೂಜೆಯನ್ನು ಕೊಡಲು ನಿಶ್ಚಯಿಸಿದಾಗ ಈ ನಿಯಮವನ್ನೇ ನಾವೂ ಅನುಸರಿಸಿದ್ದೇವೆ. ಶ್ರೀಕೃಷ್ಣನಲ್ಲಿ ಎರಡು ವಿಧವಾದ ಶ್ರೇಷ್ಠತ್ವವಿರುವುದು.

**ವೇದವೇದಾಙ್ಗವಿಜ್ಞಾನಂ ಬಲಂ ಚಾಪ್ಯಧಿಕಂ ತಥಾ ।**
**ನೃಣಾಂ ಲೋಕೇ ಹಿ ಕೋಽನ್ಯೋಽಸ್ತಿ ವಿಶಿಷ್ಟಃ ಕೇಶವಾದೃತೇ ॥೧೯॥**

ಬ್ರಾಹ್ಮಣಶ್ರೇಷ್ಠರಂತೆ ವೇದ-ವೇದಾಂಗಪಾರಂಗತನಾಗಿ ಮಹಾಜ್ಞಾನಿಯಾಗಿರುವುದು ಮಾತ್ರವಲ್ಲದೇ – ಕ್ಷತ್ರಿಯಶ್ರೇಷ್ಠನಂತೆ ಭುಜಬಲ-ಪರಾಕ್ರಮವುಳ್ಳವನೂ ಆಗಿರುತ್ತಾನೆ. ಆದುದರಿಂದ ಈ ಕೇಶವನು ಎಲ್ಲರಿಗಿಂತಲೂ ಶ್ರೇಷ್ಠತಮನೆಂದು ನಿಶ್ಚಯಿಸಿಯೇ ಅಗ್ರಪೂಜೆಯನ್ನು ಮಾಡಿರುತ್ತೇವೆ.

ಶಿಶುಪಾಲ! ಅಖಂಡಬ್ರಹ್ಮಾಂಡದಲ್ಲಿ ಶ್ರೀಕೃಷ್ಣನಂತಹ ಪರಾಕ್ರಮಿಯೂ, ಜ್ಞಾನಿಯೂ ಬೇರೊಬ್ಬನಿದ್ದಾನೆಯೇ?

**ದಾನಂ ದಾಕ್ಷ್ಯಂ ಶ್ರುತಂ ಶೌರ್ಯಂ ಹ್ರೀಃ ಕೀರ್ತಿರ್ಬುದ್ಧಿರುತ್ತಮಾ ।**
**ಸನ್ನತಿಃ ಶ್ರೀರ್ಧೃತಿಸ್ತುಷ್ಟಿಃ ಪುಷ್ಟಿಶ್ಚ ನಿಯತಾಚ್ಯುತೇ ॥೨೦॥**
**ತಮಿಮಂ ಗುಣಸಮ್ಪನ್ನಮಾರ್ಯಂ ಚ ಪಿತರಂ ಗುರುಮ್ ।**
**ಅರ್ಘ್ಯಮರ್ಚಿತಮರ್ಚಾರ್ಹಂ ಸರ್ವೇ ಸಂಕ್ಷನ್ತುಮರ್ಹಥ ॥೨೧॥**

ದಾನ, ಸಾಮರ್ಥ್ಯ, ತತ್ತ್ವಜ್ಞಾನ, ಶೌರ್ಯ, ಮರ್ಯಾದೆ, ಕೀರ್ತಿ, ಸೂಕ್ಷ್ಮಬುದ್ಧಿ, ದಯೆ, ಸೌಂದರ್ಯ, ದೃಢತೆ, ಸಂತುಷ್ಟಿ, ಪುಷ್ಟಿ – ಇತ್ಯಾದಿ ಸಕಲಸದ್ಗುಣಗಳೂ ಅಚ್ಯುತನಲ್ಲಿ ಮೂರ್ತಿಮತ್ತಾಗಿ ನೆಲೆಸಿವೆ.

ಆದುದರಿಂದ ಇಲ್ಲಿ ನೆರೆದಿರುವ ರಾಜ-ಮಹಾರಾಜರೆಲ್ಲರೂ ಪರಾತ್ಪರನಾದ, ಜ್ಞಾನಸಂಪನ್ನನಾದ, ಆಚಾರ್ಯನಾದ, ಸರ್ವರಿಗೂ ಪಿತೃಸ್ವರೂಪನಾಗಿರುವ, ಗುರುರೂಪನಾಗಿರುವ ಶ್ರೀಕೃಷ್ಣನಿಗೆ ಸಮರ್ಪಿಸಿ ರುವ ಅಗ್ರಪೂಜೆಯನ್ನು ಒಪ್ಪಿಕೊಳ್ಳುವುದು ಸರ್ವಥಾ ಯೋಗ್ಯವಾಗಿದೆ.

ನಾನು ಹಿಂದೆಯೇ ಧರ್ಮರಾಜನೊಡನೆ ಹೇಳಿದಂತೆ :

**ಋತ್ವಿಗ್ಗುರುಸ್ತಥಾಚಾರ್ಯಃ ಸ್ನಾತಕೋ ನೃಪತಿಃ ಪ್ರಿಯಃ ।**

ಋತ್ವಿಜ, ಗುರು, ಆಚಾರ್ಯ, ಸ್ನಾತಕ, ರಾಜ, ಹಿತಚಿಂತಕ – ಇವರೆಲ್ಲರೂ ಅರ್ಘ್ಯಪ್ರದಾನಕ್ಕೆ ಯೋಗ್ಯರಾಗಿರುತ್ತಾರೆ.

ಶ್ರೀಕೃಷ್ಣನ ವಿಷಯವಾಗಿ ಹೇಳುವುದಾದರೆ :

**ಸರ್ವಮೇತದ್ಧೃಷೀಕೇಶಸ್ತಸ್ಮಾದಭ್ಯರ್ಚಿತೋಽಚ್ಯುತಃ ॥೨೨॥**

ಶ್ರೀಕೃಷ್ಣನು ಋತ್ವಿಜನೂ ಆಗಿರುತ್ತಾನೆ; ಗುರುವೂ ಆಗಿರುತ್ತಾನೆ; ಸ್ನಾತಕನೂ ಆಗಿರುತ್ತಾನೆ; ರಾಜನೂ ಆಗಿರುತ್ತಾನೆ ; ಪಾಂಡವರ ಹಿತಚಿಂತಕನೂ ಆಗಿರುತ್ತಾನೆ. ಆದುದರಿಂದಲೇ ನಾವು ಅಚ್ಯುತನಿಗೆ ಅಗ್ರಪೂಜೆಯನ್ನು ಮಾಡಿರುವೆವು.

**ಕೃಷ್ಣ ಏವ ಹಿ ಲೋಕಾನಾಮುತ್ಪತ್ತಿರಪಿ ಚಾವ್ಯಯಃ ।**
**ಕೃಷ್ಣಸ್ಯ ಹಿ ಕೃತೇ ವಿಶ್ವಮಿದಂ ಭೂತಂ ಚರಾಚರಮ್ ॥೨೩॥**

ಶ್ರೀಕೃಷ್ಣನ ವಿಷಯವಾಗಿ ಲೋಕದೃಷ್ಟಿಯಿಂದ ಇವಿಷ್ಟನ್ನೂ ಹೇಳಿದ್ದಾಯಿತು. ಶಾಸ್ತ್ರದೃಷ್ಟಿಯಿಂದ ನೋಡಿದರೂ ಶ್ರೀಕೃಷ್ಣನ ಮಹಿಮೆಯು ಇನ್ನೂ ಅಪರಿಮಿತವಾಗಿದೆ. ಶ್ರೀಕೃಷ್ಣನೇ ಲೋಕದ ಉತ್ಪತ್ತಿಗೆ ಕಾರಣನು. ಶ್ರೀಕೃಷ್ಣನೇ ಲಯಕರ್ತನು. ನಾಶರಹಿತನು. ಶ್ರೀಕೃಷ್ಣನಿಗಾಗಿಯೇ ಈ ಪ್ರಪಂಚವೂ, ಚರಾಚರಗಳೂ ಸೃಷ್ಟವಾಗಿವೆ.

**ಏಷ ಪ್ರಕೃತಿರವ್ಯಕ್ತಾ ಕರ್ತಾ ಚೈವ ಸನಾತನಃ ।**
**ಪರಶ್ಚ ಸರ್ವಭೂತೇಭ್ಯಸ್ತಸ್ಮಾತ್ಪೂಜ್ಯತಮೋಽಚ್ಯುತಃ ॥೨೪॥**

ಅವ್ಯಕ್ತವಾದ ಪ್ರಕೃತಿಯೂ ಇವನೇ ; ಕರ್ತೃವೂ ಇವನೇ ; ಕಾರಣನೂ ಇವನೇ ; ಆದ್ಯಂತರಹಿತನಾದ ಸನಾತನನೂ ಇವನೇ ಆಗಿರುತ್ತಾನೆ. ಆದುದ

ರಿಂದ ಸರ್ವಭೂತಗಳಿಗಿಂತಲೂ ಇವನೇ ಶ್ರೇಷ್ಠನಾಗಿರುತ್ತಾನೆ. ಈ ಕಾರಣದಿಂದಲೇ ನಾವು ಮಹಾನುಭಾವನಾದ ಶ್ರೀಕೃಷ್ಣನಿಗೇ ಅಗ್ರಪೂಜೆಯನ್ನು ಅರ್ಪಿಸಿರುತ್ತೇವೆ.

ಬುದ್ಧಿರ್ಮನೋ ಮಹದ್ವಾಯುಸ್ತೇಜೋಽಮ್ಭಃ ಖಂ ಮಹೀ ಚ ಯಾ ।
ಚತುರ್ವಿಧಂ ಚ ಯದ್ಭೂತಂ ಸರ್ವಂ ಕೃಷ್ಣೇ ಪ್ರತಿಷ್ಠಿತಮ್ ॥೨೫॥

ಬುದ್ಧಿ, ಮನಸ್ಸು, ಮಹತ್ತತ್ತ್ವ, ವಾಯು, ತೇಜಸ್ಸು, ನೀರು, ಆಕಾಶ, ಭೂಮಿ, ಜರಾಯುಜ-ಅಂಡಜ-ಉದ್ಭಿಜ್ಜ-ಸ್ವೇದಜರೂಪಗಳಾದ ಚತುರ್ವಿಧ ಗಳಾದ ಪ್ರಾಣಿಗಳು – ಇವುಗಳೆಲ್ಲವೂ ಶ್ರೀಕೃಷ್ಣನಲ್ಲಿಯೇ ಪ್ರತಿಷ್ಠಿತವಾಗಿವೆ.

ಆದಿತ್ಯಶ್ಚನ್ದ್ರಮಾಶ್ಚೈವ ನಕ್ಷತ್ರಾಣಿ ಗ್ರಹಾಶ್ಚ ಯೇ ।
ದಿಶಶ್ಚ ವಿದಿಶಶ್ಚೈವ ಸರ್ವಂ ಕೃಷ್ಣೇ ಪ್ರತಿಷ್ಠಿತಮ್ ॥೨೬॥

ಆದಿತ್ಯ, ಚಂದ್ರ, ನಕ್ಷತ್ರಗಳು, ಗ್ರಹಗಳು, ದಿಕ್ಕುಗಳು, ಉಪದಿಕ್ಕುಗಳು – ಇವೆಲ್ಲವೂ ಶ್ರೀಕೃಷ್ಣನಲ್ಲಿಯೇ ಪ್ರತಿಷ್ಠಿತವಾಗಿವೆ.

ಅಗ್ನಿಹೋತ್ರಮುಖಾ ವೇದಾ ಗಾಯತ್ರೀ ಛನ್ದಸಾಂ ಮುಖಮ್ ।
ರಾಜಾ ಮುಖಂ ಮನುಷ್ಯಾಣಾಂ ನದೀನಾಂ ಸಾಗರೋ
ಮುಖಮ್ ॥೨೭॥

ನಕ್ಷತ್ರಾಣಾಂ ಮುಖಂ ಚನ್ದ್ರ ಆದಿತ್ಯಸ್ತೇಜಸಾಂ ಮುಖಮ್ ।
ಪರ್ವತಾನಾಂ ಮುಖಂ ಮೇರುರ್ಗರುಡಃ ಪತತಾಂ ಮುಖಮ್ ॥

ಊರ್ಧ್ವಂ ತಿರ್ಯಗಧಶ್ಚೈವ ಯಾವತೀ ಜಗತೋ ಗತಿಃ ।
ಸದೇವಕೇಷು ಲೋಕೇಷು ಭಗವಾನ್ಕೇಶವೋ ಮುಖಮ್ ॥೨೯॥

ವೇದವಿಹಿತವಾದ ಪ್ರಕ್ರಿಯೆಗಳಲ್ಲಿ ಅಗ್ನಿಹೋತ್ರವೇ ಮುಖ್ಯವಾದುದು. ಛಂದಸ್ಸುಗಳಲ್ಲಿ ಗಾಯತ್ರೀಛಂದಸ್ಸೇ ಮುಖ್ಯವಾದುದು. ಮನುಷ್ಯರಲ್ಲಿ ರಾಜನೇ ಮುಖ್ಯನು. ನದಿಗಳಲ್ಲಿ ಸಮುದ್ರವೇ ಶ್ರೇಷ್ಠವು (ಗತಿಯು). ನಕ್ಷತ್ರಗಳಿಗೆ ಚಂದ್ರನು ಮುಖಪ್ರಾಯನಾಗಿರುತ್ತಾನೆ. ಸಕಲತೇಜೋ ರಾಶಿಗಳಿಗೂ ಆದಿತ್ಯನು ಮುಖ್ಯನು. ಪರ್ವತಗಳಲ್ಲೆಲ್ಲಾ ಮೇರುಪರ್ವತವೇ

ಶ್ರೇಷ್ಠವಾದುದು. ಹಾರುವ ಪಕ್ಷಿಗಳಲ್ಲಿ ಗರುಡನೇ ಮುಖ್ಯನು. ಇದೇ ರೀತಿಯಲ್ಲಿ ದೇವಲೋಕಸಹಿತವಾದ ಸಮಸ್ತಲೋಕಗಳಲ್ಲಿ ಮೇಲೆ-ಕೆಳಗೆ-ಪಕ್ಕಗಳಲ್ಲಿ – ಎಲ್ಲಿಯವರೆಗೆ ಜಗತ್ತಿನ ವ್ಯಾಪನೆಯಿರುವುದೋ ಅವೆಲ್ಲಕ್ಕೂ ಶ್ರೀಮಾಧವನೇ ಮುಖ್ಯನು.

ಆದರೆ ಈ ಶಿಶುಪಾಲನಿನ್ನೂ ಬುದ್ಧಿಯಲ್ಲಿ ಬಾಲನಾಗಿರುವುದರಿಂದ – ಶ್ರೀಕೃಷ್ಣನ ಮಾಹಾತ್ಮ್ಯವನ್ನು ಅರಿಯದೇ ಎಲ್ಲೆಡೆಗಳಲ್ಲಿಯೂ ಇದೇ ರೀತಿಯಲ್ಲಿ ಶ್ರೀಕೃಷ್ಣನನ್ನು ತೆಗಳುವನು.

**ಯೋ ಹಿ ಧರ್ಮಂ ವಿಚಿನುಯಾದುತ್ಕೃಷ್ಟಂ ಮತಿಮಾನ್ನರಃ ।**
**ಸ ವೈ ಪಶ್ಯೇದ್ಯಥಾ ಧರ್ಮಂ ನ ತಥಾ ಚೇದಿರಾಡಯಮ್ ॥೩೧॥**

ಬುದ್ಧಿವಂತನಾದ, ಆತ್ಮದರ್ಶನಾಕಾಂಕ್ಷಿಯಾದ ಪ್ರತಿಯೊಬ್ಬ ಮಾನವನೂ ಶ್ರೀಕೃಷ್ಣನ ವಿಷಯವಾಗಿ ನಾನು ಹೇಳಿದ ರೀತಿಯಲ್ಲಿಯೇ ಜಿಜ್ಞಾಸೆಮಾಡುತ್ತಾನೆ. ಆದರೆ ಚೇದಿರಾಜನು ಮಾತ್ರ ಇದಕ್ಕೆ ವ್ಯತಿರಿಕ್ತವಾಗಿ ವರ್ತಿಸುತ್ತಿದ್ದಾನೆ.

ಆಬಾಲವೃದ್ಧರಾಗಿ ಯಾರು ತಾನೇ ಶ್ರೀಕೃಷ್ಣನು ಅಗ್ರಪೂಜೆಗೆ ಅನರ್ಹನೆಂದು ಭಾವಿಸುತ್ತಾರೆ? ಈ ಮಹಾಸಭೆಯಲ್ಲಿ ನೆರೆದಿರುವ ರಾಜರಲ್ಲಿ ಯಾವನೊಬ್ಬನಾದರೂ ಶ್ರೀಕೇಶವನು ಅಗ್ರಪೂಜೆಗೆ ಅನರ್ಹನೆಂದು ಹೇಳುವವನಿದ್ದಾನೆಯೇ? ಸರ್ವಥಾ ಇಲ್ಲವೆಂದು ನಾನು ದೃಢವಿಶ್ವಾಸದಿಂದ ಹೇಳುತ್ತೇನೆ.

ಆದರೆ ಶಿಶುಪಾಲನು ಮಾತ್ರ ಈ ಪೂಜೆಯನ್ನು ದುಷ್ಕೃತವೆಂದು ಹೇಳುತ್ತಿದ್ದಾನೆ. ದುಷ್ಕೃತಪೂಜೆಯ ವಿಷಯದಲ್ಲಿ ಏನು ಮಾಡಬೇಕೆಂಬ ಅಭಿಪ್ರಾಯವಿದೆಯೋ ಆ ರೀತಿಯಲ್ಲಿ ವರ್ತಿಸಲು ಶಿಶುಪಾಲನು ಸ್ವತಂತ್ರನಾಗಿರುತ್ತಾನೆ."

(ಶ್ರೀಕೃಷ್ಣಲೀಲಾವಿಭಾಗವನ್ನು ಪರಿಶಿಷ್ಟದಲ್ಲಿ ನೋಡಿರಿ.)

ಒಲನೆಯ ಅಧ್ಯಾಯವು ಮುಗಿಯಿತು.

## ಸಹದೇವನ ಧಾರ್ಷ್ಟ್ಯದ ಮಾತು : ಶಿಶುಪಾಲಾದಿಗಳ ಯುದ್ಧಸಿದ್ಧತೆ

"ಪಾರಿಕ್ಷಿತ! ಭೀಷ್ಮನು ಮೌನತಾಳಿದನಂತರ ಸಹದೇವನೆದ್ದು ಶಿಶುಪಾಲನೇ ಮೊದಲಾದ ರಾಜರನ್ನು ಸಂಬೋಧಿಸಿ ಧಾರ್ಷ್ಟ್ಯದಿಂದ ಕೂಡಿದ ಈ ಮಾತುಗಳನ್ನು ಹೇಳಿದನು :

"ಎಲೈ ರಾಜರೇ! ನಿಮ್ಮಲ್ಲಿ ಯಾವೊಬ್ಬನಾದರೂ ಮೇಘಶ್ಯಾಮನಾದ, ಕೇಶಿಸೂದನನಾದ, ಅದ್ಭುತಚಾರಿತ್ರ್ಯನಾದ ಶ್ರೀಮಾಧವನಿಗೆ ನಾವು ಅರ್ಪಿಸಿದ ಪೂಜೆಯನ್ನು ಸಹಿಸಲಾರೆನೆಂದು ಹೇಳಿದರೆ – ಒಡನೆಯೇ ನನ್ನ ಕಾಲುಗಳು ಅವನ ತಲೆಯನ್ನು ಮೆಟ್ಟಿ ನಿಲ್ಲುತ್ತವೆ. ಅಸಹನೆಯಿರುವವರು ಒಡನೆಯೇ ಮೇಲೆದ್ದು ಉತ್ತರಿಸಲಿ ಅಥವಾ ಬುದ್ಧಿವಂತರಾದ ಈ ರಾಜರು–ಆಚಾರ್ಯನೂ, ತಂದೆಯೂ, ಗುರುವೂ ಆಗಿರುವ ಶ್ರೀಕೇಶವನಿಗೆ ನಮ್ಮಿಂದ ಅರ್ಪಿತವಾದ ಅಗ್ರಪೂಜೆಯನ್ನು ಒಪ್ಪಿಕೊಳ್ಳಲಿ."

ಹೀಗೆ ಹೇಳಿ ಸಹದೇವನು ತನ್ನ ಕಾಲನ್ನು ಮೇಲೆತ್ತಿದನು. ಬುದ್ಧಿವಂತರೂ, ಸತ್ಪುರುಷರೂ, ಅಭಿಮಾನಿಗಳೂ, ಬಲಿಷ್ಠರೂ ಆಗಿರುವ ರಾಜರ ಸಮೂಹದಲ್ಲಿ ಒಬ್ಬನಾದರೂ ಮೇಲೆದ್ದು ಸಹದೇವನನ್ನು ಎದುರಿಸುವ ಧೈರ್ಯಮಾಡಲಿಲ್ಲ. ಅದಕ್ಕೆ ಬದಲಾಗಿ ಅವನ ವೀರವಾಣಿಗೆ ಪ್ರೋತ್ಸಾಹಕವಾದ "ಸಾಧು-ಸಾಧು" ಎಂಬ ಅಶರೀರವಾಣಿಯು ಕೇಳಿತಲ್ಲದೇ, ಸಹದೇವನ ತಲೆಯ ಮೇಲೆ ಪುಷ್ಪವೃಷ್ಟಿಯೂ ಆಯಿತು.

ಅನಂತರ ಭೂತ-ಭವಿಷ್ಯದ್ವರ್ತಮಾನಗಳನ್ನು ತಿಳಿದಿದ್ದ (ತ್ರಿಕಾಲ ಜ್ಞಾನಿಗಳಾದ), ಸರ್ವಸಂಶಯನಿವಾರಕರಾದ, ಸರ್ವಲೋಕಜ್ಞರಾದ ನಾರದರು ಕೃಷ್ಣಾಜಿನವನ್ನು ಮೇಲೆತ್ತಿ ಆ ಸಭಾಮಧ್ಯದಲ್ಲಿ ಶ್ರೀಕೃಷ್ಣನ ವಿಷಯವಾಗಿ ತಮ್ಮ ನಿಶ್ಚಿತಾಭಿಪ್ರಾಯವನ್ನು ಸ್ಪಷ್ಟವಾಗಿ ಹೇಳತೊಡಗಿದರು :

**ಕೃಷ್ಣಂ ಕಮಲಪತ್ರಾಕ್ಷಂ ನಾರ್ಚಯಿಷ್ಯನ್ತಿ ಯೇ ನರಾಃ ।**
**ಜೀವನ್ಮೃತಾಸ್ತು ತೇ ಜ್ಞೇಯಾ ನ ಸಮ್ಭಾಷ್ಯಾಃ ಕದಾಚನ ॥೯॥**

"ಕಮಲದಳನೇತ್ರನಾದ, ಪರಮಪುರುಷನಾದ ಶ್ರೀಕೃಷ್ಣನನ್ನು ಯಾರು ಅರ್ಚಿಸುವುದಿಲ್ಲವೋ – ಅವರು ಬದುಕಿದ್ದರೂ ಸತ್ತಂತೆಯೇ ಸರಿ. ಅಂತಹವರು ಯಾವಾಗಲೂ ಸಂಭಾಷಣೆಗೂ ಯೋಗ್ಯರೆನಿಸುವುದಿಲ್ಲ. (ಅಂತಹವರೊಡನೆ ಮಾತನಾಡಲೂಬಾರದು.)"

ನಾರದರು ಹೀಗೆ ಹೇಳಿದನಂತರ ಮಾನವರಲ್ಲಿ ದೇವಪ್ರಾಯನಾದ ಬ್ರಹ್ಮ-ಕ್ಷತ್ರಗಳೆರಡರ ಧರ್ಮಸೂಕ್ಷ್ಮಗಳನ್ನೂ ತಿಳಿದಿದ್ದ ಸಹದೇವನು ಪೂಜ್ಯರನ್ನು ಯಥೋಚಿತವಾಗಿ ಸತ್ಕರಿಸಿ, ಯಾಗಕ್ಕೆ ಸಂಬಂಧಿಸಿದ ಅರ್ಘ್ಯಾಹರಣವೆಂಬ ಪ್ರಕ್ರಿಯೆಯನ್ನು ಮುಗಿಸಿದನು.

ಆದರೆ ಸಹದೇವನು ಶ್ರೀಕೃಷ್ಣನಿಗೆ ಅಗ್ರಪೂಜೆಮಾಡಿದುದು ಸರ್ವಥಾ ಅಪರಾಧವೆಂದೇ ಶಿಶುಪಾಲನು ಭಾವಿಸಿದನು. ಕ್ಷಣ-ಕ್ಷಣಕ್ಕೂ ಅವನ ಕೋಪವು ಉಕ್ಕೇರಿತು. ಸಹದೇವನ ಮಾತುಗಳು ಅವನ ಕೋಪವೆಂಬ ಅಗ್ನಿಗೆ ಮತ್ತಷ್ಟು ತುಪ್ಪವನ್ನು ಸುರಿದಂತಾಗಿ ಕಿಡಿ-ಕಿಡಿಯಾದನು. ತನ್ನ ಸುತ್ತಲೂ ಇದ್ದ ರಾಜರನ್ನು ಕುರಿತು ಹೇಳಿದನು :

"ಕ್ಷತ್ರಿಯರೇ! ನಿಮ್ಮೆಲ್ಲರಿಗೂ ನಾಯಕನಾಗಿ ನಾನಿರುವಾಗ ನೀವೇಕೆ ಯೋಚಿಸುತ್ತಿರುವಿರಿ? ನಾವೆಲ್ಲರೂ ಒಟ್ಟಾಗಿ ಪಾಂಡವರನ್ನೂ, ವೃಷ್ಣಿಗಳನ್ನೂ ಎದುರಿಸಿ ನಿಲ್ಲೋಣ" – ಹೀಗೆ ಹೇಳಿ ರಾಜರನ್ನು ಒಬ್ಬೊಬ್ಬರನ್ನಾಗಿ ಕರೆದು ಅವರೊಡನೆ ಸಂಧಾನಮಾಡಲು ತೊಡಗಿದನು. ಧರ್ಮಜನ ಯಾಗವು ಪರಿಸಮಾಪ್ತವಾಗದಂತೆ ಮಾಡುವುದು ಹೇಗೆಂಬುದೇ ಅವನ ದುರಾಲೋಚನೆಯ ವಿಷಯವಾಗಿದ್ದಿತು. ಅಲ್ಲಿಗೆ ಬಂದಿದ್ದ ಕೆಲವು ರಾಜರೂ ಶಿಶುಪಾಲನ ಪ್ರೇರಣೆಯಿಂದಾಗಿ ಪಾಂಡವರ ಮೇಲೆ ಕೋಪಗೊಂಡರು. ಸಹದೇವನಾಡಿದ ಮಾತು ಅವರ ಹೃದಯದಲ್ಲಿಯೂ ಅಂಕುಶದಂತೆ ಮೀಟುತ್ತಿದ್ದಿತು. ಅವರೆಲ್ಲರೂ ಸೇರಿ ಒಂದು ನಿಶ್ಚಯಕ್ಕೆ ಬಂದರು. "ಯುಧಿಷ್ಠಿರನ ರಾಜಸೂಯಯಾಗದ ಸಮಾಪ್ತಿಗೆ ಅರ್ಥಾತ್ ಯುಧಿಷ್ಠಿರನ ಸಾರ್ವಭೌಮತ್ವಕ್ಕೆ ಮತ್ತು ಈ ಸಂಬಂಧದಲ್ಲಿ ಕೇಶವನಿಗಿತ್ತ ಅಗ್ರಪೂಜೆಗೆ ನಮ್ಮ ಒಪ್ಪಿಗೆಯಿಲ್ಲವೆಂಬುದನ್ನು ನಾವು ಸ್ಪಷ್ಟಪಡಿಸಲು ಕಾರ್ಯಕ್ರಮವನ್ನು ಕೈಗೊಳ್ಳಬೇಕು."

ಅಂತಹ ನಿರ್ಣಯದಿಂದ ರಾಜರು ಯುದ್ಧಕ್ಕೆ ಸಿದ್ಧರಾದರೆಂದೇ ನಿಶ್ಚಯವಾಯಿತಲ್ಲವೇ?

ತಮಗಿದ್ದ ಶೌರ್ಯ-ಪರಾಕ್ರಮಗಳ ಮೇಲೆ ಹೆಚ್ಚಿನ ವಿಶ್ವಾಸವಿದ್ದ ರಾಜರಿಗೆ – ಕಾರ್ಯಾಕಾರ್ಯವಿವೇಚನೆಯಾಗಲೀ, ತಮ್ಮ ನಿಶ್ಚಯವು ನ್ಯಾಯಸಮ್ಮತವೇ ಎಂಬ ತಿಳಿವಳಿಕೆಯಾಗಲೀ – ಉಂಟಾಗಲಿಲ್ಲ. ಕೋಪಾವಿಷ್ಟರಾದ ರಾಜರು ಶಿಶುಪಾಲನ ನಾಯಕತ್ವದಲ್ಲಿ ಪಾಂಡವರ ಮತ್ತು ಶ್ರೀಕೇಶವನ ಅವನತಿಯ ಕನಸನ್ನೇ ಕಂಡರು. ಅವರ ಪಕ್ಕದಲ್ಲಿಯೇ ಇದ್ದ ವಿವೇಚನಾಶೀಲರಾದ ಕೆಲವು ರಾಜರು ಹೇಳಿದ ಹಿತವಚನಗಳೂ ಅವರಿಗೆ ಹಿಡಿಸದಾದುವು. ಆಹಾರವನ್ನು ಕಳೆದುಕೊಂಡ ಸಿಂಹಗಳಂತೆ– ಅಗ್ರಪೂಜೆಯನ್ನು ಕಳೆದುಕೊಂಡ ರಾಜರು ಕೋಪಾವಿಷ್ಟರಾಗಿ ಗರ್ಜಿಸಿದರು.

ಅಸಂಖ್ಯಾತರಾಜರು ತಮ್ಮ ಸೈನ್ಯಗಳೊಡನೆ ಪಾಂಡವರ ಮೇಲೆ ಯುದ್ಧಸನ್ನದ್ಧರಾಗಿ ಶಿಶುಪಾಲನ ನಾಯಕತ್ವದಲ್ಲಿ ಬರುವರೆಂಬ ಸುಳಿವು ಶ್ರೀಕೃಷ್ಣನಿಗೆ ತಿಳಿಯಿತು."

ಌನೆಯ ಅಧ್ಯಾಯವು ಮುಗಿಯಿತು.

೪೦ನೆಯ ಅಧ್ಯಾಯ ಶಿಶುಪಾಲವಧಪರ್ವ

## ಯುಧಿಷ್ಠಿರನ ಚಿಂತೆ : ಭೀಷ್ಮನು ಧರ್ಮಜನನ್ನು ಸಂತೈಸಿದುದು

"ಜನಮೇಜಯ! ಪ್ರಪಂಚದ ಪ್ರಳಯಕಾಲದಲ್ಲಿ ಚಂಡಮಾರುತವು ಬೀಸಿ ಸಮುದ್ರವು ಅಲ್ಲೋಲ-ಕಲ್ಲೋಲವಾಗುವಂತೆ – ಆ ಮಹಾಸಭೆಯಲ್ಲಿದ್ದ ರಾಜರ ಸಮೂಹದಲ್ಲಿ ಅದ್ಭುತವಾದ ಕೋಲಾಹಲವುಂಟಾಯಿತು. ಎಲ್ಲರೂ ಕುಪಿತರಾಗಿ ಗರ್ಜನೆಮಾಡುತ್ತಿದ್ದರು. ಅದನ್ನು ಕಂಡು ಯುಧಿಷ್ಠಿರನು ವಿಸ್ಮಿತನಾಗಿ ಮುಂದೇನು ಮಾಡಬೇಕೆಂದು ತಿಳಿಯದೇ, ಪಕ್ಕದಲ್ಲಿಯೇ ಇದ್ದ ಕುರುಪಿತಾಮಹನಾದ ಭೀಷ್ಮನನ್ನು–ಆಪತ್ಕಾಲದಲ್ಲಿ ಇಂದ್ರನು ಬೃಹಸ್ಪತಿಯನ್ನು ಕೇಳುವಂತೆ–ಕೇಳಿದನು :

"ಪಿತಾಮಹ! ಸಮುದ್ರದಂತಿರುವ ಈ ರಾಜರು ಕೋಪದಿಂದ ಉದ್ವಿಗ್ನರಾಗಿರುತ್ತಾರೆ. ಈ ಸಮಯದಲ್ಲಿ ನಾನೇನು ಮಾಡಬೇಕೆಂಬುದನ್ನು

ದಯಮಾಡಿ ತಿಳಿಸು. ನಾನು ಮಾಡಿರುವ ಯಾಗವು ಅಪೂರ್ಣವಾಗುವಂತಾಗಬಾರದು ಮತ್ತು ನನ್ನ ಪ್ರಜೆಗಳಿಗೆ ತೊಂದರೆಯೂ ಆಗಬಾರದು."

ಧರ್ಮಜ್ಞನಾದ ಯುಧಿಷ್ಠಿರನ ಮಾತುಗಳನ್ನು ಕೇಳಿ ಕುರುಕುಲ ಪಿತಾಮಹನಾದ ಭೀಷ್ಮನು ಉತ್ತರಿಸಿದನು :

"ಭಯಪಡಬೇಡ, ಯುಧಿಷ್ಠಿರ! ನಾಯಿಗೆ ಸಿಂಹವನ್ನು ಕೊಲ್ಲಲು ಸಾಧ್ಯವಾದೀತೇ? ಶ್ರೀಕೃಷ್ಣನ ಆಶ್ರಯವನ್ನು ಪಡೆದಿರುವ ನಮ್ಮ ಮಾರ್ಗವು ಸುಗಮವಾಗುತ್ತದೆ. ಈಗ ನಾವು ಅನುಸರಿಸಿರುವುದೇ ಸರಿಯಾದ ನೀತಿ. ಈ ವಿಷಯವನ್ನು ನಾನು ಈ ಹಿಂದೆಯೇ ನಿಶ್ಚಯಮಾಡಿರುತ್ತೇನೆ. ಸಿಂಹವು ಮಲಗಿ ನಿದ್ರಿಸುತ್ತಿರುವಾಗ ಹಲವು ನಾಯಿಗಳು ಅದರ ಸಮೀಪಕ್ಕೆ ಹೋಗಿ ಬೊಗಳುವಂತೆ–ಈ ರಾಜರೂ ಬೊಗಳುತ್ತಿದ್ದಾರೆ. ನಿಶ್ಚಯವಾಗಿಯೂ ನಾಯಿಗಳಂತಿರುವ ಈ ರಾಜರು ಸಿಂಹರೂಪಿಯಾದ ಶ್ರೀಕೇಶವನ ಮುಂದೆ ಬೊಗಳುತ್ತಿದ್ದಾರೆ. ಅಚ್ಯುತನನ್ನು ಈಗ ಮಲಗಿರುವ ಸಿಂಹವೆಂದು ಭಾವಿಸು. ಇವನು ಎಚ್ಚರಗೊಳ್ಳುವವರೆಗೂ ನರಪುಂಗವನಾದ ಚೇದಿರಾಜನು ಈ ರಾಜರಿಗೆ ತಾವು ರಾಜಸಿಂಹರೆಂಬ ಭಾವನೆಯುಂಟಾಗುವಂತೆ ಮಾಡಿದ್ದಾನೆ. ಮಂದಬುದ್ಧಿಯವನಾದ ಶಿಶುಪಾಲನು–ತನ್ನ ಕುಬುದ್ಧಿಯ ಕಾರಣದಿಂದಾಗಿ ರಾಜಸಮೂಹವನ್ನೇ ಯಮಾಲಯಕ್ಕೆ ತನ್ನೊಡನೆಯೇ ಕರೆದೊಯ್ಯಲು ಯತ್ನಿಸಿದ್ದಾನೆ.

ನಿಶ್ಚಯವಾಗಿಯೂ ಶ್ರೀಕೇಶವನು ಈ ಸಮಯದಲ್ಲಿ ಶಿಶುಪಾಲನಲ್ಲಿರುವ ತನ್ನ ತೇಜಸ್ಸನ್ನು ಹಿಂತೆಗೆದುಕೊಳ್ಳಲು ನಿಶ್ಚಯಿಸಿರುತ್ತಾನೆ. ಶಿಶುಪಾಲನ ಮತ್ತು ಅವನನ್ನೇ ಅನುಸರಿಸಿ ಹೊರಟಿರುವ ಈ ರಾಜರ ಬುದ್ಧಿಯು ವಿಪ್ಲವವಾಗಿದೆ. (ವಿನಾಶಕಾಲದಲ್ಲಿ ಬುದ್ಧಿವೈಪರೀತ್ಯ ವುಂಟಾಗುತ್ತದೆ). ಚತುರ್ವಿಧಪ್ರಾಣಿಗಳ ಸೃಷ್ಟಿ-ಸ್ಥಿತಿ-ಲಯಗಳಿಗೂ ಮಾಧವನೇ ಕಾರಣನು. ಯುಧಿಷ್ಠಿರ! ಅಂತಹವನೇ ನಿನಗೆ ಆಶ್ರಯದಾತನಾಗಿರುವಾಗ ನೀನು ಸ್ವಲ್ಪವಾದರೂ ಕಳವಳಪಡುವ ಕಾರಣವಿಲ್ಲ."

ಭೀಷ್ಮನ ಮಾತುಗಳನ್ನು ಕೇಳಿದನಂತರ ಯುಧಿಷ್ಠಿರನ ಮನಸ್ಸಿಗೆ

ನೆಮ್ಮದಿಯೂ, ಚೇದಿರಾಜನಿಗೆ ಮಹತ್ತರವಾದ ಕೋಪವೂ ಉಂಟಾಯಿತು. ಶಿಶುಪಾಲನು ಭೀಷ್ಮನನ್ನು ಬಹಳ ಕಟುವಾಗಿ ನಿಂದಿಸತೊಡಗಿದನು."

೪೦ನೆಯ ಅಧ್ಯಾಯವು ಮುಗಿಯಿತು.

೪೧ನೆಯ ಅಧ್ಯಾಯ ಶಿಶುಪಾಲವಧಪರ್ವ (ಮುಂದುವರಿದಿದೆ.)

## ಶಿಶುಪಾಲನು ಭೀಷ್ಮನನ್ನು ನಿಂದಿಸಿದುದು

"ಜನಮೇಜಯ! ಶಿಶುಪಾಲನು ಗರ್ಜಿಸುತ್ತಾ ಹೇಳತೊಡಗಿದನು :

"ಕುರುಕುಲಪಾಂಸನ! ಭೀಷ್ಮ! ವೃದ್ಧನೂ, ಕುರುಕುಲಕಳಂಕನೂ ಆಗಿರುವ ನಿನಗೆ–ಈ ಮಹಾಸಭೆಯಲ್ಲಿ ಉಪಸ್ಥಿತರಾಗಿರುವ ರಾಜಾಧಿರಾಜರನ್ನು ಅನೇಕವಿಧವಾದ ಭಯೋತ್ಪಾದಕಗಳಾದ ಮಿಥ್ಯಾವಾಕ್ಯಗಳಿಂದ ಭಯಪಡಿಸಲು ನಾಚಿಕೆಯೂ ಆಗುವುದಿಲ್ಲವೇ?

ಮೂರನೆಯ ಪ್ರಕೃತಿಯಲ್ಲಿರುವ (ನಪುಂಸಕನಂತಿರುವ) ನಿನಗೆ ನೀನಾಡಿರುವ ಧರ್ಮಭ್ರಷ್ಟವಾದ ಮಾತುಗಳು ಅನುರೂಪವಾಗಿಯೇ ಇವೆ.

ನಿನ್ನನ್ನು ಕುರುವಂಶದ ಅರಸರು ಮಾರ್ಗದರ್ಶಕನೆಂದು ಭ್ರಮಿಸಿದ್ದಾರೆ.

ಒಂದು ದೋಣಿಗೆ ಮತ್ತೊಂದು ದೋಣಿಯನ್ನು ಕಟ್ಟಿಬಿಡುವಂತೆ ಅಥವಾ ಕುರುಡನು ಮತ್ತೊಬ್ಬ ಕುರುಡನಿಗೆ ದಾರಿತೋರುವಂತೆ ನೀನು ಕುರುಗಳಿಗೆ ಅಗ್ರೇಸರನಾಗಿರುವೆ.

ಭೀಷ್ಮ! 'ಪೂತನಿಯ ಪ್ರಾಣಹಾರಕ', 'ಶಕಟಾಸುರಭಂಜನ' ಇತ್ಯಾದಿ ಅನೇಕಾನೇಕ ಗುಣವಾಚಕಗಳನ್ನು ಈ ಗೋಪಾಲನಿಗೆ ಸಮಾರೋಪಿಸಿ, ನಮ್ಮ ಮನಸ್ಸನ್ನು ಪುನಃ ನೀನು ನೋಯಿಸಿರುವೆ. ನಿನ್ನ ಪುನರಾವರ್ತಿತವಾದ ಮಾಧವನ ಕೀರ್ತನೆಯಿಂದಾಗಿ ನಮ್ಮ ಹೃದಯಗಳು ಬಹಳ ವ್ಯಾಕುಲಗೊಂಡಿವೆ.

ಪಿತಾಮಹ! ನೀನೊಬ್ಬ ಮೂರ್ಖ; ದುರಭಿಮಾನೀ. ಈ ಗೋಪಾಲನನ್ನು ಅನವರತವೂ ಸ್ತೋತ್ರಮಾಡುತ್ತಿರುವ ನಿನ್ನ ನಾಲಿಗೆಯು ನೂರು

ಚೂರುಗಳಾಗಿ ಸೀಳಿಹೋಗದೇಕೆ? ಶಿಶುಗಳಿಗಿಂತಲೂ ವಿವೇಕಶೂನ್ಯರಾದ ಜನರಿಗೂ ಇವನ ಕಾರ್ಯಗಳು ನಿಂದಾರ್ಹವಾಗಿರುವಾಗ ಈ ಗೋಪನನ್ನು ಜ್ಞಾನವೃದ್ಧನೆನಿಸಿಕೊಂಡ ನೀನು ಸ್ತೋತ್ರಮಾಡಲು ಇಚ್ಛಿಸುವೆಯಲ್ಲಾ! ಬಾಲ್ಯದಲ್ಲಿ ಈ ಮಾಧವನು ಒಂದು ಪಕ್ಷಿಯನ್ನು (ಬಕಾಸುರ) ಕೊಂದನೆಂದರೆ ಅದರಲ್ಲಿರುವ ಮಹತ್ತ್ವವೇನು? ಯುದ್ಧಕುಶಲತೆಯನ್ನೇ ಅರಿಯದ ಅಶ್ವ-ವೃಷಭಗಳನ್ನು ಕೊಂದಿದ್ದು ಅದ್ಭುತಕಾರ್ಯವೆನಿಸುವುದೇ? ಈ ನಿನ್ನ ಕೃಷ್ಣನು ಮರದ ಬಂಡಿಯೊಂದನ್ನು (ಶಕಟಾಸುರ) ಕಾಲಿನಿಂದ ಒದ್ದು ಬಿಟ್ಟನೆಂದರೆ ಆಶ್ಚರ್ಯಪಡಬೇಕೇ? ಗೆದ್ದಲುಹುಳುಗಳ ಹುತ್ತದಂತಿದ್ದ ದುರ್ಬಲವಾದ ಗೋವರ್ಧನಪರ್ವತವನ್ನು ಏಳು ದಿನಗಳ ಕಾಲ ಎತ್ತಿಹಿಡಿದ ಮಾತ್ರದಿಂದ ಅದೊಂದು ಪರಮಾದ್ಭುತವಾದ ಕಾರ್ಯವೆನಿಸುವುದೇ? ಇದೂ ಒಂದು ಅದ್ಭುತಕಾರ್ಯವೆಂದಾಗಲೀ, ಮಹಾಕಾರ್ಯವೆಂದಾಗಲೀ ನನಗನಿಸುವುದಿಲ್ಲ.

ಭೀಷ್ಮ! 'ಗೋವರ್ಧನಪರ್ವತದ ಶಿಖರದಲ್ಲಿ ಕ್ರೀಡಿಸುತ್ತಿದ್ದ ಶ್ರೀಕೃಷ್ಣನು ಯಥೇಚ್ಛವಾಗಿ ಭೋಜನಮಾಡಿದನು' – ಎಂದು ಹೇಳಿದ ನಿನ್ನ ಮಾತುಗಳು ಇಲ್ಲಿ ಅನೇಕ ರಾಜರಿಗೆ ಆಶ್ಚರ್ಯವನ್ನುಂಟುಮಾಡಿವೆ. ಇದಕ್ಕಿಂತಲೂ ಆಶ್ಚರ್ಯಕರವಾದ ವಿಷಯವನ್ನು ನಾನೇ ಹೇಳುವೆನು ಕೇಳು. ಮಹಾ ಮಹಿಮನಾದ ಕಂಸನ ಮನೆಗೆ ಕೃಷ್ಣನು ಹೋಗಿ, ಅವನ ಮನೆಯಲ್ಲಿಯೇ ಯಥೇಚ್ಛವಾಗಿ ಭೋಜನಮಾಡಿ, ಭೋಜನವಿಟ್ಟ ಕಂಸನನ್ನೇ ಕೊಂದನು. ಕುರುಕುಲಾಧಮನಾದ ನಿನಗೆ ಧರ್ಮಾಧರ್ಮಗಳ ವಿವೇಚನೆಯೇ ಇಲ್ಲ.

ಸತ್ಪುರುಷರಿಂದ ನೀನು ಇದುವರೆಗೆ ಕೇಳದಿರುವ ವಿಷಯವನ್ನು ನಾನಿಂದು ಹೇಳುತ್ತೇನೆ ಕೇಳು :

**ಸ್ತ್ರೀಷು ಗೋಷು ನ ಶಸ್ತ್ರಾಣಿ ಪಾತಯೇದ್ಬ್ರಾಹ್ಮಣೇಷು ಚ ।**
**ಯಸ್ಯ ಚಾನ್ನಾನಿ ಭುಞ್ಜೀತ ಯತ್ರ ಚ ಸ್ಯಾತ್ಪ್ರತಿಶ್ರಯಃ ॥೧೩॥**

ಸ್ತ್ರೀಯರ ಮೇಲೆ, ಹಸುಗಳ ಮೇಲೆ, ಬ್ರಾಹ್ಮಣರ ಮೇಲೆ, ಅನ್ನವಿಟ್ಟವರ ಮೇಲೆ, ಆಶ್ರಯವಿತ್ತವರ ಮೇಲೆ–ಆಯುಧಗಳನ್ನೆತ್ತಬಾರದೆಂದು ಧರ್ಮಸೂಕ್ಷ್ಮವನ್ನು ತಿಳಿದ ಸತ್ಪುರುಷರು ಅನುಶಾಸನಮಾಡಿದ್ದಾರೆ.

ಈ ಅನುಶಾಸನವು ನಿನ್ನ ಮೇಲೆ ಯಾವ ಪರಿಣಾಮವನ್ನೂ ಉಂಟು ಮಾಡಿಲ್ಲವೆಂದೇ ನನಗನಿಸುತ್ತದೆ. ಒಂದು ವೇಳೆ ಈ ತತ್ತ್ವವು ನಿನಗೆ ತಿಳಿದಿದ್ದರೂ ಇದು ನಿನ್ನಲ್ಲಿ ವ್ಯರ್ಥವಾಗಿಯೇ ಉಳಿದಿದೆ.

ಕುರುಕುಲಾಧಮ! ನಾನು ಕೃಷ್ಣನ ವಿಷಯವಾಗಿ ಏನೂ ತಿಳಿಯದವನೆಂದೂ, ನೀನೇ ಎಲ್ಲವನ್ನೂ ಅರಿತಿರುವನಂತೆಯೂ ಭ್ರಮಿಸಿ ಈ ಗೋಪನನ್ನು ವೃದ್ಧ, ಜ್ಞಾನವೃದ್ಧ–ಮುಂತಾಗಿ ಸ್ತೋತ್ರಮಾಡುತ್ತಿರುವೆ.

ನಿನ್ನ ಮಾತಿನಂತೆ ಗೋಹತ್ಯೆ (ವೃಷಭಾಸುರನ ವಧೆ), ಸ್ತ್ರೀಹತ್ಯೆ (ಪೂತನಿಯ ವಧೆ) ಗಳನ್ನು ಮಾಡಿದವನೂ ಪೂಜಾರ್ಹನಾಗುವುದಾದರೆ ಧರ್ಮದ ವಿಷಯವಾಗಿ ಹೇಳುವುದೇನಿದೆ? ನಿಶ್ಚಯವಾಗಿಯೂ ಗೋಹತ್ಯೆ-ಸ್ತ್ರೀಹತ್ಯೆಗಳನ್ನು ಮಾಡಿದವನು ಪೂಜಾರ್ಹನಾಗುವನೇ?

'ಇವನು ಬುದ್ಧಿವಂತರಲ್ಲೆಲ್ಲಾ ಬುದ್ಧಿವಂತನು' – ಎಂದು ನೀನು ಬಾರಿ-ಬಾರಿಗೂ ಹೇಳುತ್ತಿದ್ದರೆ ಈ ಜನಾರ್ದನನು ಅದೂ ನಿಶ್ಚಯವೆಂದೇ ನಂಬಿಬಿಡುತ್ತಾನೆ. ಆದರೆ, ಭೀಷ್ಮ! ನೀನು ಹೇಳುತ್ತಿರುವುದೆಲ್ಲವೂ ಮಿಥ್ಯೆ. ಜನಾರ್ದನನು ಸಕಲಭುವನಗಳಿಗೂ ತಾನೇ ಸ್ವಾಮಿಯೆಂಬ ಭ್ರಾಂತಿಯನ್ನು ತೊರೆಯಲಿ. ನೀನೆಷ್ಟೊಂದು ಬಾರಿ 'ಪ್ರಭು' ವೆಂದು ಹೇಳಿದರೂ ಅವನು ಪ್ರಭುವಾಗಲಾರನು.

**ನ ಗಾಥಾ ಗಾಥಿನಂ ಶಾಸ್ತಿ ಬಹುಚೇದಪಿ ಗಾಯತಿ ।**
**ಪ್ರಕೃತಿಂ ಯಾನ್ತಿ ಭೂತಾನಿ ಭೂಲಿಙ್ಗಶಕುನಿರ್ಯಥಾ ॥೧೮॥**

ಕಥೆಗಳನ್ನು ಹೇಳುವವನನ್ನು ಅವನು ಹೇಳುವ ಕಥೆಗಳಲ್ಲಿರುವ ತತ್ತ್ವಗಳು ನಿಯಂತ್ರಣಮಾಡಲಾರವು. ಅರ್ಥಾತ್ ಹರಿಕಥೆ ಮಾಡುವವರು, ಉಪನ್ಯಾಸ ಕೊಡುವವರು ಅನೇಕವಿಧವಾದ ತತ್ತ್ವಗಳನ್ನು ಶ್ರೋತೃಗಳಿಗೆ ಉಪದೇಶಿಸಿದರೂ ಆ ತತ್ತ್ವಗಳ ಅನುಷ್ಠಾನವನ್ನು ಅವರು ಮಾಡುತ್ತಿರುವರೆಂದು ಹೇಳಲಾಗುವುದಿಲ್ಲ.

ಹಾಗೆಯೇ ಒಬ್ಬನನ್ನು ಹಾಡಿ-ಹೊಗಳಲು ರಚಿಸಿರುವ ಹಾಡುಗಳು

ಸಾವಿರಾರು ಬಾರಿ ಹಾಡಲ್ಪಟ್ಟರೂ ಅವನಲ್ಲಿರುವ ಸ್ವಾಭಾವಿಕಗುಣಗಳನ್ನು ವ್ಯತ್ಯಾಸಮಾಡಲಾರವು. ದುಷ್ಟನೊಬ್ಬನನ್ನು ಸತ್ಪುರುಷನೆಂದು ನೂರಾರು ಬಾರಿ ಹೇಳಿದರೂ ಅವನು ಸ್ವಭಾವಜನ್ಯವಾಗಿ ಬಂದ ದೌಷ್ಟ್ಯವನ್ನು ಬಿಡಲಾರನು.

ಭೂಲಿಂಗಪಕ್ಷಿಯ ಕಥೆಯು ತಿಳಿದಿರುವುದೇ, ಭೀಷ್ಮ?

ಆ ಪಕ್ಷಿಯು ಯಾವಾಗಲೂ 'ಸಹನೆಯಿಂದಿರಬೇಕು', 'ದುಡುಕಬಾರದು', 'ಪೂರ್ಣವಿವೇಚನೆಯಿಲ್ಲದೇ ಸಾಹಸಕಾರ್ಯಕ್ಕೆ ಯತ್ನಿಸಬಾರದು' – ಎಂದು ಮುಂತಾಗಿ ಇತರ ಪಕ್ಷಿಗಳಿಗೆ ಉಪದೇಶಿಸುತ್ತಿರುತ್ತದೆ. ಆದರೆ ಅದೇ ಪಕ್ಷಿಯು–ಸಿಂಹವು ಬಾಯ್ದೆರೆದು ಮಲಗಿರುವಾಗ ಅದರ ಹಲ್ಲುಸಂದಿಗಳಲ್ಲಿ ಕಾಣುವ ಕೆಂಪಾದ ಭಾಗವನ್ನು ಮಾಂಸವೆಂದು ಭ್ರಮಿಸಿ, ತನ್ನ ಕೊಕ್ಕಿನಿಂದ ಕೀಳಲು ಹೋಗುತ್ತದೆ. ಆದುದರಿಂದ ಈ ಪ್ರಪಂಚದಲ್ಲಿರುವ ಸಕಲಪ್ರಾಣಿಗಳೂ ತಮ್ಮ ಸ್ವಭಾವಜನ್ಯವಾದ ಗುಣಗಳನ್ನು ಹೊಂದಿರುತ್ತವೆಯೇ ಹೊರತು ಯಾವ ಕಾರಣದಿಂದಲೂ ಪರಿವರ್ತನೆಹೊಂದುವ ಸಾಧ್ಯತೆಯಿಲ್ಲ ಅಥವಾ ಅವುಗಳ ಸ್ವಭಾವವನ್ನು ಅವುಗಳಾಡುವ ಮಾತುಗಳಿಂದ ಅಳೆಯುವ ಸಾಧ್ಯತೆಯೂ ಇಲ್ಲ. ಹಾಗೆಯೇ ಈ ಕೃಷ್ಣನ ವಿಷಯದಲ್ಲಿಯೂ ನೀನು ಎಷ್ಟೇ ಗುಣಗಾನಮಾಡಿದರೂ ಇವನ ಸ್ವಭಾವಜನ್ಯವಾದ ದುರ್ಗುಣಗಳು ಇವನನ್ನು ಬಿಟ್ಟುಹೋಗಲಾರವು.

ಭೀಷ್ಮ! ನಿಶ್ಚಯವಾಗಿಯೂ ನಿನ್ನ ಸ್ವಭಾವಜನ್ಯವಾದ ಗುಣವು ಬಹಳ ಹೀನವಾದುದು. ಇದರಲ್ಲಾವ ಸಂಶಯವೂ ಇರುವುದಿಲ್ಲ.

ಕೃಷ್ಣನು ಯಾರಿಗೆ ಮಹಾಪೂಜ್ಯನಾಗಿರುವನೋ ಮತ್ತು ನೀನು ಯಾರಿಗೆ ಮಾರ್ಗದರ್ಶಕನಾಗಿರುವೆಯೋ – ಆ ಪಾಂಡವರ ಸ್ವಭಾವಜನ್ಯವಾದ ಗುಣಗಳೂ ನಿಂದ್ಯವಾದುವುಗಳೇ ಆಗಿರುತ್ತವೆ.

ಧರ್ಮಾತ್ಮನೆಂಬ ಕೀರ್ತಿಯನ್ನು ಪಡೆದಿದ್ದ ನೀನಿಂದು ಧರ್ಮಭ್ರಷ್ಟನಾಗಿರುವೆ. ಸತ್ಪುರುಷರ ಮಾರ್ಗದಿಂದ ಪರಿಭ್ರಮಣ ಹೊಂದಿರುವೆ.

**ಕೋ ಹಿ ಧರ್ಮಿಣಮಾತ್ಮಾನಂ ಜಾನನ್ ಜ್ಞಾನವಿದಾಂ ವರಃ ।**
**ಕುರ್ಯಾದ್ಯಥಾ ತ್ವಯಾ ಭೀಷ್ಮ ಕೃತಂ ಧರ್ಮಮವೇಕ್ಷತಾ ॥೨೧॥**

**ಚೇತ್ತ್ವಂ ಧರ್ಮಂ ವಿಜಾನಾಸಿ ಯದಿ ಪ್ರಾಜ್ಞಾ ಮತಿಸ್ತವ ।**
**ಅನ್ಯಕಾಮಾ ಹಿ ಧರ್ಮಜ್ಞಾ ಕನ್ಯಕಾ ಪ್ರಾಜ್ಞಮಾನಿನಾ ।**
**ಅಮ್ಬಾ ನಾಮೇತಿ ಭದ್ರಂ ತೇ ಕಥಂ ಸಾಪಹೃತಾ ತ್ವಯಾ ॥೨೨॥**

**ತ್ವಾಂ ತ್ವಯಾಪಿ ಹೃತಾಂ ಭೀಷ್ಮ ಕನ್ಯಾಂ ನೈಷಿತವಾನ್ಯತಃ ।**
**ಭ್ರಾತಾ ವಿಚಿತ್ರವೀರ್ಯಸ್ತೇ ಸತಾಂ ಮಾರ್ಗಮನುಷ್ಠಿತಃ ॥೨೩॥**

ಜ್ಞಾನಿಗಳಲ್ಲಿ ಶ್ರೇಷ್ಠನೆಂದೂ ಮತ್ತು ತಾನೇ ಮಹಾಧರ್ಮಿಷ್ಠನೆಂದೂ ಭಾವಿಸಿರುವ ಯಾವನು ತಾನೇ ನಿನ್ನಂತೆ ಮಾಡಿಯಾನು? ನಿನಗೆ ಧರ್ಮ ಮಾರ್ಗವೇನೆಂಬುದು ತಿಳಿದಿದ್ದಿದ್ದರೆ–ಪ್ರಾಜ್ಞವಾದ ಬುದ್ಧಿಯೇ ಇದ್ದಿದ್ದರೆ–ಅನ್ಯರನ್ನು ಕಾಮಿಸಿದ್ದ ಅಂಬೆಯನ್ನೇಕೆ ಬಲಾತ್ಕಾರದಿಂದ ಕರೆತರುತ್ತಿದ್ದೆ? ಆದರೆ ಧರ್ಮಿಷ್ಠನಾದ ನಿನ್ನ ಅನುಜನಾದ ವಿಚಿತ್ರವೀರ್ಯನು ಅಂಬೆಯ ಇಚ್ಛೆಯೇನೆಂಬುದನ್ನು ತಿಳಿದವನಾಗಿ ನೀನು ಸೆಳೆದುತಂದ ಅವಳನ್ನು ಮದುವೆಯಾಗಲಿಲ್ಲ.

**ದಾರಯೋರ್ಯಸ್ಯ ಚಾನ್ಯೇನ ಮಿಷತಃ ಪ್ರಾಜ್ಞಮಾನಿನಃ ।**
**ತವ ಜಾತಾನ್ಯಪತ್ಯಾನಿ ಸಜ್ಜನಾಚರಿತೇ ಪಥಿ ॥೨೪॥**

ಭೀಷ್ಮ! ನೀನು ಮಹಾಧರ್ಮಾತ್ಮನೆಂದೂ, ಸಜ್ಜನರು ಅನುಸರಿಸುವ ಮಾರ್ಗದಲ್ಲಿಯೇ ಇರತಕ್ಕವನೆಂದೂ ಭಾವಿಸಿರುವೆ. ಆದರೆ ನಿನ್ನ ಸಮಕ್ಷದಲ್ಲಿಯೇ ನಿನ್ನ ಅನುಜರಿಬ್ಬರ ಪತ್ನಿಯರಲ್ಲಿಯೂ ಅನ್ಯರ ಸಮಾಗಮದಿಂದ ಮಕ್ಕಳು ಜನಿಸಿದರು.

**ಕೋ ಹಿ ಧರ್ಮೋಽಸ್ತಿ ತೇ ಭೀಷ್ಮ ಬ್ರಹ್ಮಚರ್ಯಮಿದಂ ವೃಥಾ ।**
**ಯದ್ಧಾರಯಸಿ ಮೋಹಾದ್ವಾ ಕ್ಲೀಬತ್ವಾದ್ವಾ ನ ಸಂಶಯಃ ॥೨೫॥**

**ನ ತ್ವಹಂ ತವ ಧರ್ಮಜ್ಞ ಪಶ್ಯಾಮ್ಯುಪಚಯಂ ಕ್ವಚಿತ್ ।**
**ನ ಹಿ ತೇ ಸೇವಿತಾ ವೃದ್ಧಾ ಯ ಏವಂ ಧರ್ಮಮಬ್ರವೀಃ ॥೨೬॥**

ಭೀಷ್ಮ! ನಿನಗೆ ಧರ್ಮವೆಂಬುದೆಲ್ಲಿದೆ? ಮೋಹದಿಂದಲೋ ಅಥವಾ ನಪುಂಸಕತ್ವದಿಂದಲೋ ನೀನು ಕೈಗೊಂಡಿರುವ ಬ್ರಹ್ಮಚರ್ಯವ್ರತವು ನಿಷ್ಪ್ರಯೋಜಕವಾಗಿದೆ. 'ನಾನೇ ಧರ್ಮಜ್ಞನು'– ಎಂಬ ಭ್ರಾಂತಿಯಿಂದಿರುವ

ನಿನಗೆ ಯಾವ ವಿಧವಾದ ಶ್ರೇಯಃ-ಪ್ರೇಯಗಳೂ ಉಂಟಾಗಲಾರವು. 'ಧರ್ಮಜ್ಞರಾದ ವೃದ್ಧರ ಸೇವೆಯನ್ನು ಮಾಡಿರುವೆನು' – ಎಂದು ಹೇಳುತ್ತಿರುವ ನಿನ್ನ ಮಾತುಗಳೂ ನಂಬಲು ಅನರ್ಹವಾಗಿವೆ.

**ಇಷ್ಟಂ ದತ್ತಮಧೀತಂ ಚ ಯಜ್ಞಾಶ್ಚ ಬಹುದಕ್ಷಿಣಾಃ ।**
**ಸರ್ವಮೇತದಪತ್ಯಸ್ಯ ಕಲಾಂ ನಾರ್ಹನ್ತಿ ಷೋಡಶೀಮ್ ॥೨೭॥**

ದಾನ-ಧರ್ಮಾದಿಗಳು, ಶಾಸ್ತ್ರಪ್ರವಚನ, ಬಹುದಕ್ಷಿಣೆಗಳನ್ನು ಬ್ರಾಹ್ಮಣರಿಗೆ ಕೊಟ್ಟು ಮಾಡಿರುವ ಮಹಾಯಾಗಗಳು–ಇವುಗಳೆಲ್ಲದರ ಫಲಗಳನ್ನೂ ಸೇರಿಸಿದರೂ ಪುತ್ರನ ಜನನದಿಂದ ಉಂಟಾಗುವ ಮಹಾಫಲದಲ್ಲಿ ಹದಿನಾರನೆಯ ಒಂದಂಶದ ಫಲಕ್ಕೂ ಸಮವೆನಿಸಲಾರದು. ವ್ರತೋಪವಾಸಾದಿಗಳಿಂದ ಎಷ್ಟೇ ಪುಣ್ಯಕರ್ಮಗಳನ್ನು ಮಾಡಿದ್ದರೂ ಮಕ್ಕಳಿಲ್ಲದವನಿಗೆ ಎಲ್ಲವೂ ವ್ಯರ್ಥವೇ ಆಗುತ್ತದೆ.

ಮಕ್ಕಳಿಲ್ಲದ, ವೃದ್ಧನಾದ, ಅಧರ್ಮೋಪದೇಶಕನಾದ ನೀನು–ನಾನು ಮುಂದೆ ಹೇಳಲಿರುವ ಕಥೆಯಲ್ಲಿನ ಹಂಸಪಕ್ಷಿಯಂತೆ ನಿನ್ನ ಬಾಂಧವರಿಂದಲೇ ಮರಣಹೊಂದುವುದೂ ನಿಶ್ಚಯ. ಆ ಹಂಸದ ಕಥೆಯನ್ನು ನನಗೆ ವಿವೇಕಿಗಳಾದ ವೃದ್ಧರು ಹೇಳಿರುತ್ತಾರೆ. ಆ ಕಥೆಯನ್ನೇ ನಿನಗೂ ಹೇಳುವೆನು, ಕೇಳು :

ಒಂದು ಮುದಿಹಂಸವು ಸಮುದ್ರತೀರದಲ್ಲಿ ವಾಸವಾಗಿದ್ದಿತು. ಅದು ಸ್ವಾನುಷ್ಠಾನದಲ್ಲಿ ಧರ್ಮಕ್ಕೆ ವಿರೋಧವಾಗಿ ನಡೆಯುತ್ತಿದ್ದರೂ ಪರ ಬೋಧನೆಯ ಸಮಯದಲ್ಲಿ ಧರ್ಮವನ್ನೇ ಮುಂದುಮಾಡಿ ಮಾತನಾಡುತ್ತಿದ್ದಿತು. **'ಧರ್ಮಂ ಚರತ', 'ಮಾಽಧರ್ಮಂ ಚರತ'** – ಈ ವಾಕ್ಯಗಳೇ ಆ ಮುದಿಹಂಸದ ಪಲ್ಲವಿಗಳಾಗಿದ್ದುವು. ಅದರ ಧರ್ಮ ಬೋಧಕವಾದ ಮಾತುಗಳನ್ನು ಇತರ ಪಕ್ಷಿಗಳೆಲ್ಲವೂ ಕೇಳುತ್ತಿದ್ದುವು. ಆ ಹಂಸಪಕ್ಷಿಗೆ ಗೌರವವನ್ನು ತೋರುವ ಸಲುವಾಗಿ ಉಳಿದ ಪಕ್ಷಿಗಳೆಲ್ಲವೂ ಆಹಾರವನ್ನು ತಂದು ಹಂಸಕ್ಕೆ ಕೊಡುತ್ತಿದ್ದುವು. ಹಂಸದ ಬಳಿಯಲ್ಲಿಯೇ ತಮ್ಮ ಮೊಟ್ಟೆಗಳನ್ನೂ–ಸುರಕ್ಷಿತವಾಗಿರುವುವೆಂಬ ಭಾವನೆಯಿಂದ ಇಟ್ಟು ನಿಶ್ಚಿಂತೆಯಿಂದ ಆಹಾರ-ವಿಹಾರಾದಿಗಳಿಗೆ ಸಮುದ್ರತೀರಕ್ಕೆ ಹೋಗುತ್ತಿ

ದ್ದುವು. ಆದರೆ ಹಂಸವು ಮಾತ್ರ ಸ್ವಭಾವಜನ್ಯವಾದ ದುರ್ಗುಣಕ್ಕೆ ಅನುಸಾರವಾಗಿ ಪಕ್ಷಿಗಳು ಹೋಗುವುದನ್ನೇ ಕಾದಿದ್ದು, ಅವುಗಳು ಇಟ್ಟಿದ್ದ ಮೊಟ್ಟೆಗಳನ್ನು ಒಂದೊಂದನ್ನಾಗಿ ಭಕ್ಷಿಸತೊಡಗಿತು. ತಾವಿಟ್ಟಿದ್ದ ಮೊಟ್ಟೆಗಳು ಕಡಿಮೆಯಾದಂತೆಲ್ಲಾ ಪಕ್ಷಿಗಳಿಗೆ ಹಂಸದ ಮೇಲೆ ಸಂಶಯವು ಮೂಡಿತು. ಪಕ್ಷಿಗಳ ಸಮೂಹದಲ್ಲಿ ಚತುರತೆಯುಳ್ಳ ಒಂದು ಪಕ್ಷಿಯು ಮೊಟ್ಟೆಗಳು ಕಡಿಮೆಯಾಗುತ್ತಿರುವುದಕ್ಕೆ ಕಾರಣವನ್ನು ಕಂಡುಹಿಡಿಯಲೋಸುಗ ಹೊಂಚು ಹಾಕಿ, ಒಂದು ದಿನ ಹಂಸವು ಮೊಟ್ಟೆಗಳನ್ನು ತಿನ್ನುತ್ತಿದ್ದುದನ್ನು ಪ್ರತ್ಯಕ್ಷವಾಗಿಯೇ ಕಂಡಿತು. ಒಡನೆಯೇ ಪಕ್ಷಿಗಳ ಸಭೆಯನ್ನು ಕರೆದು, ಹಂಸವು ಮಾಡುತ್ತಿರುವ ಪಾಪಕರ್ಮದ ವಿಷಯವನ್ನು ವಿವರವಾಗಿ ಅತಿದುಃಖದಿಂದ ತಿಳಿಯಪಡಿಸಿತು. ಪಕ್ಷಿಗಳೂ ಕೂಡ ತಮ್ಮ ಮೊಟ್ಟೆಗಳನ್ನು ಮುದಿಹಂಸವು ತಿನ್ನುತ್ತಿರುವುದನ್ನು ಕಣ್ಣಾರೆ ಕಂಡು, ಕೋಪವೂ–ದುಃಖವೂ ಉಲ್ಬಣಿಸಿ ಎಲ್ಲವೂ ಸೇರಿ ಕಪಟಿಯಾದ ಹಂಸವನ್ನು ಕೊಂದುಹಾಕಿದುವು.

ಭೀಷ್ಮ! ನಿನ್ನ ನಡವಳಿಕೆಯೂ ಸಹ ಆ ಮುದಿಹಂಸದ ರೀತಿಯಲ್ಲಿಯೇ ಇರುವುದು. ಪ್ರಪಂಚದ ರಾಜಸಮೂಹವು ಕೋಪದಿಂದ ಕೆರಳಿ–ಪಕ್ಷಿಸಮೂಹವು ಮುದಿಹಂಸವನ್ನು ಕೊಂದಂತೆ–ನಿನ್ನನ್ನೂ ಕೊಂದು ಬಿಡಬಹುದು. ಪುರಾಣಗಳನ್ನು ತಿಳಿದ ಪೌರಾಣಿಕರು ಇಂತಹ ಸಂದರ್ಭಗಳಿಗೆ ಹೊಂದಿಕೆಯಾಗುವಂತೆ ಒಂದು ಗಾಥೆಯನ್ನು ಹೇಳಿರುವರು. ಅದನ್ನೇ ಹೇಳುವೆನು, ಕೇಳು :

ಅನ್ತರಾತ್ಮನ್ಯಭಿಹತೇ ರೌಷಿ ಪತ್ರರಥಾಶುಚಿ ।
ಅಣ್ಡಭಕ್ಷಣಕರ್ಮೈತತ್ತವ ವಾಚಮತೀಯತೇ ॥೪೦॥

“ಎಲೈ ಪಕ್ಷಿಯೇ! ನಿನ್ನ ಅಂತರಾತ್ಮವು (ಮನಸ್ಸು) ಕಾಮ-ಕ್ರೋಧ-ಲೋಭ-ಮೋಹಾದಿಗಳಿಂದ ಮಲಿನವಾಗಿದ್ದರೂ ಬಾಯಲ್ಲಿ ಮಾತ್ರ ಧರ್ಮವನ್ನೇ ಹೇಳುತ್ತಿರುವೆ. ಆದರೆ ನೀನು ಕಾರ್ಯತಃ ಮಾಡಿರುವ ಅಂಡಭಕ್ಷಣವು ನಿನ್ನ ಧರ್ಮಬೋಧೆಗೆ ವಿರುದ್ಧವಾದ ಪಾಪಕರ್ಮವೇ ಆಗಿರುತ್ತದೆ. (ಆದುದರಿಂದ ನಿನ್ನ ಮಾತಿಗೆ ಯಾವ ಬೆಲೆಯೂ ಇಲ್ಲ.)”

೪೧ನೆಯ ಅಧ್ಯಾಯವು ಮುಗಿಯಿತು.

## ಶಿಶುಪಾಲನ ಮಾತನ್ನು ಕೇಳಿ ಭೀಮನು ಕುಪಿತನಾದುದು : ಭೀಷ್ಮನು ಭೀಮನನ್ನು ಸಾಂತ್ವನಗೊಳಿಸಿದುದು

ಜನಮೇಜಯ! ಶಿಶುಪಾಲನು ಮುಂದುವರಿದು ಹೇಳುತ್ತಾನೆ :

"ಗಾಂಗೇಯ! ಮಹಾಪರಾಕ್ರಮಿಯಾದ ಜರಾಸಂಧನು ಕೃಷ್ಣನನ್ನು ದಾಸನೆಂದೇ ಪರಿಗಣಿಸಿ ಇವನೊಡನೆ ಯುದ್ಧಮಾಡಲು ನಿರಾಕರಿಸಿದನು. ಈ ಕಾರಣದಿಂದಾಗಿ ಜರಾಸಂಧನನ್ನು ನಾನು ಬಹುವಾಗಿ ಗೌರವಿಸುತ್ತೇನೆ.

ಭೀಷ್ಮ! ಜರಾಸಂಧನನ್ನು ಸಂಹರಿಸುವ ಸಲುವಾಗಿ ಭೀಮಾರ್ಜುನ-ಕೇಶವರು ಅನುಸರಿಸಿದ ಮಾರ್ಗವನ್ನು ಯಾರು ತಾನೇ 'ಸಾಧು' ಎಂದು ಹೇಳುವರು? ಮಹಾದ್ವಾರದಲ್ಲಿ ಪ್ರವೇಶಿಸದೇ ಕುಮಾರ್ಗದಲ್ಲಿ ನಗರ ಪ್ರವೇಶಮಾಡಿ, ಬ್ರಾಹ್ಮಣರ ವೇಷಧರಿಸಿ ಜರಾಸಂಧನ ಅರಮನೆಯನ್ನು ಪ್ರವೇಶಿಸಿದರು. ವೇಷ-ಭೂಷಣಗಳಿಗಾದರೂ ಮರ್ಯಾದೆಯನ್ನು ಕೊಡಬೇಕೆಂಬ ಉದಾತ್ತಭಾವನೆಯಿಂದ ಜರಾಸಂಧನು ಬ್ರಾಹ್ಮಣವೇಷ ಧಾರಿಗಳಾದ ಇವರಿಗೆ ಅರ್ಘ್ಯ-ಪಾದ್ಯಾದಿಗಳನ್ನು ಕೊಡಲು ಹೋದಾಗ ಬ್ರಾಹ್ಮಣರಿಗೆ ಯೋಗ್ಯವಾದ ಪೂಜೆಯು ತಮಗೆ ಸಲ್ಲದೆಂದು ಅವನಿತ್ತ ಪೂಜೆಯನ್ನೂ ತಿರಸ್ಕರಿಸಿದರು. ಒಂದೆಡೆಯಲ್ಲಿ ಅಧರ್ಮಾಚರಣೆ ; ಮತ್ತೊಂದೆಡೆಯಲ್ಲಿ ಧರ್ಮಾಚರಣೆಯ ಸೋಗು.

ಮಹಾತ್ಮನಾದ ಜರಾಸಂಧನು ಇವರಿಗೆ ತಿನ್ನಲು ಉಪಾಹಾರಾದಿಗಳನ್ನು ತಂದಾಗ ಈ ನಿಮ್ಮ ಕೃಷ್ಣನು ನಿರಾಕರಿಸಿದನು.

ಭೀಷ್ಮ! ಈ ಕೃಷ್ಣನು ನಿಶ್ಚಯವಾಗಿಯೂ ಪ್ರಪಂಚಕ್ಕೆ ಒಡೆಯನೇ ಆಗಿದ್ದರೆ – ಈ ಹುಚ್ಚನು, ತಾನೇ ಸರ್ವಸ್ವವೂ ಎಂದು ಭಾವಿಸಿರುವ ಹಾಗೆ ಅಥವಾ 'ಎಲ್ಲವೂ ನಾನೇ' – 'ನಾನೇ ಎಲ್ಲದರಲ್ಲಿಯೂ ಇದ್ದೇನೆ' ಎಂಬ ಇವನ ಮಾತು ನಿಶ್ಚಯವಾಗಿದ್ದರೆ–ತಾನು ಬ್ರಾಹ್ಮಣನೆಂದೇ ಸಮರ್ಥಿಸಿಕೊಳ್ಳಲಿಲ್ಲವೇಕೆ? ಇವೇ ಮುಂತಾದ ಕಾರಣಗಳಿಂದ ಕೃಷ್ಣನು ಯಾವ ವಿಧವಾದ ಗೌರವಕ್ಕೂ ಅನರ್ಹನೆಂಬುದು ನಿಶ್ಚಯ.

ಆದರೆ ನನಗೆ ಹೆಚ್ಚಿನ ಆಶ್ಚರ್ಯವನ್ನುಂಟುಮಾಡುವ ವಿಷಯ ವೇನೆಂದರೆ : ನೀನು ಈ ಪಾಂಡವರನ್ನು ನಿಶ್ಚಯವಾಗಿಯೂ ಅಧರ್ಮಿಗಳ ಮಾರ್ಗಕ್ಕೆ ಒಯ್ಯುತ್ತಿದ್ದರೂ ನಿನ್ನ ಮಾತುಗಳನ್ನು ಇವರು 'ಸಾಧು' ಎನ್ನುತ್ತಿದ್ದಾರೆ. ಮತ್ತೊಮ್ಮೆ ಯೋಚಿಸಿದರೆ ಈ ವಿಷಯದಲ್ಲಿ ಆಶ್ಚರ್ಯಪಡುವ ಕಾರಣವೂ ಇಲ್ಲ. ಏಕೆಂದರೆ : ಸ್ತ್ರೀಯರಿಗೆ ಸಮಾನಧರ್ಮವುಳ್ಳವನು ನೀನು; ಹೆಣ್ಣಿಗ ; ಮೇಲಾಗಿ ಮುದುಕ. ಇಂತಹವನು ಪಾಂಡವರಿಗೆ ಸರ್ವವಿಷಯಗಳಲ್ಲಿಯೂ ಸಲಹೆಗಾರನಾಗಿರು ವುದರಿಂದ ಪಾಂಡವರ ಘನತೆಯು ಎಷ್ಟೆಂಬುದನ್ನು ಸುಲಭವಾಗಿಯೇ ಊಹಿಸಬಹುದಾಗಿದೆ. ಅಲ್ಲವೆ?"

ಶಿಶುಪಾಲನ ಕರ್ಣಕಠೋರವಾದ ಮಾತುಗಳನ್ನು ಕೇಳಿ ವೀರಶ್ರೇಷ್ಠನೆಂದು ಕೀರ್ತಿಯನ್ನು ಪಡೆದಿದ್ದ ಭೀಮನು ಕೋಪದಿಂದ ಕೆರಳಿದನು. ಮೊದಲೇ ಅಗಲವಾಗಿದ್ದ, ಕಮಲದಳಗಳಿಗೆ ಸಮಾನವಾಗಿದ್ದ ಅವನ ನೇತ್ರಗಳು ಮತ್ತಷ್ಟು ವಿಕಸಿತವಾಗಿ ಕೋಪದ ಕಾರಣದಿಂದ ತಾಮ್ರದ ಬಣ್ಣಕ್ಕೆ ತಿರುಗಿದುವು. ತ್ರಿಕೂಟಪರ್ವತದ ಶಿಖರಗಳಿಂದ ಗಂಗಾನದಿಯು ಹರಿದು ಬರುವ ರೀತಿಯಲ್ಲಿ–ಕೋಪಾವಿಷ್ಟನಾಗಿದ್ದ ಭೀಮನ ಹಣೆಯ ಮೇಲಿದ್ದ ತ್ರಿವಳಿಗಳನ್ನು ಅಲ್ಲಿ ನೆರೆದಿದ್ದ ರಾಜರೆಲ್ಲರೂ ವೀಕ್ಷಿಸಿದರು. ಕಟ-ಕಟನೆ ಹಲ್ಲುಗಳನ್ನು ಕಡಿಯುತ್ತಾ ಕೋಪದಿಂದ ಉದ್ರಿಕ್ತನಾಗಿದ್ದ ಭೀಮನ ಮುಖವು ಪ್ರಳಯಕಾಲದ ಕಾಲಪುರುಷನ ಸ್ಮರಣೆಯನ್ನು ಅಲ್ಲಿ ನೆರೆದಿದ್ದ ರಾಜರ ಸ್ಮೃತಿಪಥಕ್ಕೆ ತಂದಿತು.

ಮಹಾಪರಾಕ್ರಮಿಯಾದ ಭೀಮಸೇನನು ಕೋಪದಿಂದ ಹೂಂಕರಿಸುತ್ತಾ ಶಿಶುಪಾಲನ ಮೇಲೆ ಬೀಳುವ ಸಮಯಕ್ಕೆ ಸರಿಯಾಗಿ, ಭೀಷ್ಮನು-ಪೂರ್ವದಲ್ಲಿ ಮಹಾದೇವನು ಮಹಾಸೇನನನ್ನು ಹಿಡಿದು ನಿಲ್ಲಿಸಿದಂತೆ–ಭೀಮನನ್ನು ತಬ್ಬಿ ಹಿಡಿದು ಹಿಂದಕ್ಕೆ ನಿಲ್ಲಿಸಿದನು. ನಾನಾವಿಧವಾದ ಹಿತೋಕ್ತಿಗಳನ್ನು ಹೇಳಿ ಭೀಮನ ಕೋಪವನ್ನು ಶಾಂತಗೊಳಿಸಿದನು. ಮಳೆಗಾಲದಲ್ಲಿ ನದಿಯ ಮೂಲಕ ಎಷ್ಟೇ ಜಲಪ್ರವಾಹವು ಸಮುದ್ರಕ್ಕೆ ಬಂದು ಸೇರಿದರೂ ಮಳೆಗಾಲವು ಕಳೆದ ಮೇಲೆ ಸಮುದ್ರವು ತನ್ನ ಎಲ್ಲೆಯನ್ನು ಮೀರದಿರುವಂತೆ–ಭೀಮನಿಗೆ ಕೋಪವು ಉಕ್ಕಿಬರುತ್ತಿದ್ದರೂ ಭೀಷ್ಮನ ಮಾತನ್ನು ಅವನು ಉಲ್ಲಂಘಿಸಲಿಲ್ಲ.

ಇತ್ತಲಾಗಿ ಭೀಮನು ಕೋಪಾವಿಷ್ಟನಾಗಿ ಪ್ರಳಯಕಾಲದ ಕಾಲನಂತೆ ತನ್ನ ಮೇಲೆ ಬೀಳಲು ಬಂದರೂ ಶಿಶುಪಾಲನ ಮುಖದಲ್ಲಿ ಭಯದ ಕುರುಹೂ ಕಾಣುತ್ತಿರಲಿಲ್ಲ. ಕೋಪಗೊಂಡ ಸಿಂಹವು ತನ್ನ ಎದುರಾಗಿ ಬಂದ ಪ್ರಾಣಿಯನ್ನು ನಿರ್ಲಕ್ಷಿಸಿ ನಿಲ್ಲುವಂತೆ–ಭೀಮನು ಕೋಪಾವಿಷ್ಟನಾಗಿ ಮುನ್ನುಗ್ಗಿ ಬರುತ್ತಿದ್ದರೂ ಶಿಶುಪಾಲನು ನಿಶ್ಚಲನಾಗಿ ನಿಂತಿದ್ದನಲ್ಲದೇ ನಸುನಕ್ಕು ಭೀಷ್ಮನಿಗೆ ಹೇಳಿದನು.:

"ಭೀಷ್ಮ! ಅವನನ್ನು ನನ್ನ ಮೇಲೆ ಬೀಳಲು ಬಿಟ್ಟುಬಿಡು. ತಡೆಯಬೇಡ. ಅಗ್ನಿಯನ್ನು ಆಕ್ರಮಿಸಲು ಬಂದ ಪತಂಗದ ಹುಳುವಿನಂತೆ–ನನ್ನ ಪರಾಕ್ರಮವೆಂಬ ಅಗ್ನಿಗೆ ಸಿಕ್ಕಿ ಈ ಭೀಮನು ಭಸ್ಮವಾಗಿ ಹೋಗುವುದನ್ನು ಇಲ್ಲಿ ನೆರೆದಿರುವ ರಾಜರೆಲ್ಲರೂ ವೀಕ್ಷಿಸಲಿ."

ಚೇದಿರಾಜನ ಮಾತುಗಳು ನಿಶ್ಚಯವಾಗಿಯೂ ಭೀಮನ ಕೋಪವನ್ನು ನೂರ್ಮಡಿ ಹೆಚ್ಚಿಸಿತು.

ಕೋಪಾಗ್ನಿಯಿಂದ ಪರಿತಪಿಸುತ್ತಿದ್ದ ಭೀಮಸೇನನನ್ನು ಸಂತೈಸುತ್ತಾ ಭೀಷ್ಮನು ಹೇಳತೊಡಗಿದನು."

ಳ೨ನೆಯ ಅಧ್ಯಾಯವು ಮುಗಿಯಿತು.

ಳ೩ನೆಯ ಅಧ್ಯಾಯ ಶಿಶುಪಾಲವಧಪರ್ವ (ಮುಂದುವರಿದಿದೆ.)

## ಭೀಷ್ಮನಿಂದ ಶಿಶುಪಾಲನ ಜನ್ಮವೃತ್ತಾಂತ ಕಥನ

"ಪಾರಿಕ್ಷಿತ! ಭೀಷ್ಮನು ಶಿಶುಪಾಲನ ಜನ್ಮವೃತ್ತಾಂತವನ್ನು ಹೇಳಲು ಪ್ರಾರಂಭಿಸಿದನು :

"ಭೀಮಸೇನ! ಶಿಶುಪಾಲನಿಷ್ಟು ಪ್ರಮತ್ತನಾಗಲು ಕಾರಣವನ್ನೂ ಮತ್ತು ಇವನ ಜನ್ಮರಹಸ್ಯವನ್ನೂ ಹೇಳುವೆನು ಕೇಳು. ಇವನು ಚೇದಿವಂಶದಲ್ಲಿ ಜನ್ಮತಾಳಿದನು. ಹುಟ್ಟಿದಾಗ ಇವನಿಗೆ ಮೂರು ಕಣ್ಣುಗಳೂ ನಾಲ್ಕು ಕೈಗಳೂ ಇದ್ದುವು. ಇವನು ಹುಟ್ಟಿದೊಡನೆಯೇ ಕತ್ತೆಯಂತೆ ಗಟ್ಟಿಯಾಗಿ ಅರಚಿದನು. ಆ ಅಪಸ್ವರವನ್ನೂ ಮತ್ತು ಇವನ ಆಕೃತಿಯನ್ನೂ ಕಂಡು ಇವನ ತಾಯಿ-ತಂದೆಗಳೂ, ಬಂಧು - ಬಳಗದವರೂ ಭೀತ

ರಾದರು. ಇವನು ಹುಟ್ಟಿದ ಕಾಲದಲ್ಲಿ ಉಂಟಾದ ಇನ್ನೂ ಹಲವು ಅಪಶಕುನಗಳನ್ನೂ ವೀಕ್ಷಿಸಿ, ಇವನನ್ನು ಪರಿತ್ಯಾಗಮಾಡಲೆಂದೇ ನಿಶ್ಚಯಿಸಿದರು. ರಾಜ, ರಾಣಿ, ಮಂತ್ರಿ ಮತ್ತು ಪುರೋಹಿತರ ಹೃದಯಗಳು ಇಂತಹ ಶಿಶುವಿನ ಜನನದಿಂದುಂಟಾದ ಚಿಂತೆಯಲ್ಲಿ ಮಗ್ನವಾಗಿದ್ದುವು. ಆ ಸಮಯಕ್ಕೆ ಸರಿಯಾಗಿ ಅಶರೀರವಾಣಿಯು ಹೇಳಿತು :



"ಮಹಾರಾಜ! ಈಗ ಹುಟ್ಟಿರುವ ಈ ನಿನ್ನ ಶಿಶುವು ಮುಂದೆ ಅದೃಷ್ಟಶಾಲಿಯಾಗಿ ಬಾಳುತ್ತಾನೆ. ಮಹಾಪರಾಕ್ರಮಿಯಾಗುತ್ತಾನೆ. ಇವನಿಂದ ನಿಮಗಾವ ಭಯವೂ ಇರುವುದಿಲ್ಲ. ಭ್ರಾಂತಿಯನ್ನು ತೊರೆದು ಶಿಶುವನ್ನು ಸಂರಕ್ಷಿಸಿರಿ. ಬಾಲ್ಯದಲ್ಲಿ ಇವನಿಗೆ ಮೃತ್ಯುಭಯವಿಲ್ಲ. ಶಸ್ತ್ರದಿಂದ ಇವನಿಗೆ ಮೃತ್ಯುವು ಪ್ರಾಪ್ತವಾಗುತ್ತದೆ. ಇವನ ಹಂತಕನು ಬೇರೊಂದೆಡೆಯಲ್ಲಿ ಹುಟ್ಟಿದ್ದಾನೆ."

ಅಶರೀರವಾಣಿಯ ಆ ಮಾತುಗಳನ್ನು ಕೇಳಿ ಪುತ್ರಪ್ರೇಮದ ವ್ಯಾಮೋಹದಿಂದ ಉನ್ಮತ್ತಳಾಗಿದ್ದ ಇವನ ತಾಯಿಯು ಅಶರೀರವಾಣಿಯನ್ನೇ ಕೇಳಿದಳು : "ಈಗ ಕೇಳಿದ ಈ ವಾಣಿಯು ದೇವತೆಯಿಂದ ಬಂದಿರಲಿ ; ಅಥವಾ ಮತ್ತಾರಿಂದಲಾದರೂ ಬಂದಿರಲಿ. ಈ ವಾಣಿಯು ಯಾರಿಂದ ಹೊರಟಿತೋ ಆ ಮಹಾನುಭಾವನಿಗೆ ನನ್ನ ಎರಡು ಕೈಗಳನ್ನೂ ಜೋಡಿಸಿ ಅಂಜಲಿಪುಟಮಾಡಿ ದೈನ್ಯದಿಂದ ಕೇಳಿಕೊಳ್ಳುತ್ತೇನೆ. ನಾನು ತಿಳಿಯಲಿಚ್ಛಿಸಿರುವ ಇನ್ನೊಂದು ವಿಷಯವನ್ನೂ ಹೇಳಬೇಕು. ಅದೇನೆಂದರೆ : ಈ ಶಿಶುವಿನ ಹಂತಕನಾರು? ಯಾರಿಂದ ಇವನಿಗೆ ಮೃತ್ಯುವು ಸಂಭವಿಸುತ್ತದೆ?"



ತಾಯಿಯ ದೈನ್ಯಪೂರಿತವಾದ ಮಾತುಗಳನ್ನು ಕೇಳಿ ಅಶರೀರ ವಾಣಿಯು ಪುನಃ ಹೇಳಿತು.: "ಯಾರ ತೊಡೆಯ ಮೇಲೆ ಈ ಮಗುವು ಮಲಗಿದಾಗ ಐದು ಹೆಡೆಗಳುಳ್ಳ ಸರ್ಪಯುಗಳದಂತಿರುವ ಇವನ ಮೂರನೆಯ ಮತ್ತು ನಾಲ್ಕನೆಯ ಕೈಗಳು ಕಳಚಿ ಬೀಳುವುವೋ ಮತ್ತು ಇವನ

ಹಣೆಯಲ್ಲಿರುವ ಮೂರನೆಯ ಕಣ್ಣೂ ಇಂಗಿಹೋಗುವುದೋ– ಅವನೇ ಈ ಶಿಶುವಿನ ಹಂತಕನಾಗುತ್ತಾನೆ.”

ಚತುರ್ಭುಜಗಳಿಂದಲೂ, ತ್ರಿಣೇತ್ರಗಳಿಂದಲೂ ಯುಕ್ತವಾದ ಅಪೂರ್ವಶಿಶುವು ಚೇದಿರಾಜನಿಗೆ ಹುಟ್ಟಿರುವ ವಾರ್ತೆಯೂ ಮತ್ತು ಅಶರೀರವಾಣಿಯು ಆ ಶಿಶುವಿನ ಮರಣರಹಸ್ಯವನ್ನು ತಿಳಿಸಿದ ವಾರ್ತೆಯೂ ಕ್ಷಿಪ್ರದಲ್ಲಿಯೇ ದೇಶ-ವಿದೇಶಗಳಲ್ಲಿಯೂ ಹರಡಿತು.

ಅಂತೆಯೇ ಅನೇಕದೇಶಗಳ ರಾಜರು ಶಿಶುವಿನ ಸಂದರ್ಶನಕ್ಕಾಗಿ ಚೇದಿರಾಜ್ಯಕ್ಕೆ ಬರತೊಡಗಿದರು.

ಅಶರೀರವಾಣಿಯಿಂದಾಗಿ ತಂದೆ-ತಾಯಿಗಳಿಗೆ ತಾತ್ಕಾಲಿಕವಾಗಿ ಭೀತಿಯು ತಪ್ಪಿತಾದರೂ ತಮ್ಮ ಮಗನ ಸಂಹಾರಕನಾರೆಂಬುದನ್ನು ತಿಳಿಯಬೇಕೆನ್ನುವ ಕುತೂಹಲವು ಇದ್ದುದು ಸ್ವಾಭಾವಿಕವಲ್ಲವೇ?

ಚೇದಿರಾಜನು ಬಂದ ರಾಜರೆಲ್ಲರನ್ನೂ ಯಥೋಚಿತವಾಗಿ ಸತ್ಕರಿಸಿ, ಬಳಿಕ ತನ್ನ ಮುದ್ದುಮಗುವನ್ನು ಪ್ರತಿಯೊಬ್ಬ ರಾಜನ ತೊಡೆಯ ಮೇಲೆಯೂ ಮಲಗಿಸುತ್ತಿದ್ದನು. ಹಾಗೆ ಸಾವಿರಾರು ಮಂದಿ ರಾಜರ ತೊಡೆಯ ಮೇಲೆ ಮಗುವನ್ನು ಮಲಗಿಸಿದರೂ ಅಶರೀರವಾಣಿಯು ಹೇಳಿದ್ದಂತೆ ಶಿಶುವಿನ ತೋಳುಗಳೂ ಕಳಚಿ ಬೀಳಲಿಲ್ಲ.; ಮೂರನೆಯ ಕಣ್ಣೂ ಇಂಗಿಹೋಗಲಿಲ್ಲ.

ಕೆಲವು ದಿನಗಳಲ್ಲಿಯೇ ದ್ವಾರಕೆಯಲ್ಲಿದ್ದವರಿಗೂ ಆ ವಾರ್ತೆಯು ತಿಳಿಯಿತು. ಕೃಷ್ಣನ ಸೋದರತ್ತೆಯೇ ಚೇದಿರಾಜನ ಹೆಂಡತಿಯಾಗಿದ್ದಳು. ಸೋದರತ್ತೆಯನ್ನು ನೋಡುವ ಆಕಾಂಕ್ಷೆಯಿಂದಲೂ, ವಿಚಿತ್ರಜನ್ಮನಾದ ಸೋದರತ್ತೆಯ ಮಗನನ್ನು ಕಾಣುವ ಉತ್ಸುಕತೆಯಿಂದಲೂ ಕೃಷ್ಣ-ಬಲರಾಮರು ಚೇದಿರಾಜ್ಯಕ್ಕೆ ಬಂದರು.

ಚೇದಿರಾಜನ ಅರಮನೆಯೊಳಗೆ ಪ್ರವೇಶಿಸಿದನಂತರ ಬಂಧು-ಬಾಂಧವರ ಯೋಗ-ಕ್ಷೇಮಗಳೆಲ್ಲವನ್ನೂ ವಿವರವಾಗಿ ಪ್ರಶ್ನಿಸಿ, ಬಲರಾಮ-ಕೃಷ್ಣರಿಬ್ಬರೂ ಸುಖಾಸನಗಳಲ್ಲಿ ಉಪವಿಷ್ಟರಾದರು. ಇಬ್ಬರನ್ನೂ ಯಥೋಚಿತವಾಗಿ ಆದರದಿಂದ ಸತ್ಕರಿಸಿದನಂತರ ರಾಣಿಯೇ ಮುಂದೆಬಂದು ಹೆಚ್ಚಿನ

ಪ್ರೇಮಾದರಗಳಿಂದ ತನ್ನಣ್ಣನ ಮಗನಾದ ಶ್ರೀಕೃಷ್ಣನ ತೊಡೆಯ ಮೇಲೆ ತನ್ನ ಪ್ರೇಮದ ಪುತ್ಥಳಿಯನ್ನು ಮಲಗಿಸಿದಳು. ಮರುಕ್ಷಣದಲ್ಲಿಯೇ ಮಗುವಿಗಿದ್ದ ಹೆಚ್ಚಿನ ಎರಡು ತೋಳುಗಳೂ ಕೆಳಗುರುಳಿದುವು. ಮೂರನೆಯ ಕಣ್ಣೂ ಅದೃಶ್ಯವಾಯಿತು.

ರಾಣಿಯು ಭೀತಳಾಗಿ ಶ್ರೀಕೃಷ್ಣನ ಮುಂದೆ ನಿಂತು ಕಂಬನಿಸುರಿಸುತ್ತಾ ಗದ್ಗದಧ್ವನಿಯಿಂದ ಅವನನ್ನು ಪ್ರಾರ್ಥಿಸಿದಳು :

"ಆಜಾನುಬಾಹುವೇ! ಶ್ರೀಕೃಷ್ಣ! ನಾನು ಬಹಳ ಭೀತಳಾಗಿರುವೆನು. ಈ ಸಮಯದಲ್ಲಿ ನನಗುಂಟಾಗಿರುವ ಭಯವನ್ನು ದೂರಮಾಡಲು ನನಗೊಂದು ವರವನ್ನು ಕರುಣಿಸು. ನೀನು ಅಭಯಪ್ರದನೆಂದೂ, ಭಯನಾಶಕನೆಂದೂ ಕೀರ್ತಿಯನ್ನು ಪಡೆದಿರುವೆಯಲ್ಲವೇ?"

ಸೋದರತ್ತೆಯ ಕರುಣಾಪೂರಿತವಾದ ಮಾತುಗಳನ್ನು ಕೇಳಿ ಶ್ರೀಕೃಷ್ಣನು ಯಥೋಚಿತವಾಗಿ ಉತ್ತರಿಸಿದನು :

"ದೇವಿ! ಭಯಪಡಬೇಡ. ನೀನು ಧರ್ಮಜ್ಞಳಾಗಿರುವೆ. ನನ್ನಿಂದ ನಿನಗೆ ಯಾವ ವಿಧವಾದ ಭೀತಿಯೂ ಉಂಟಾಗಲಾರದು. ನಾನು ಯಾವ ವರವನ್ನು ನಿನಗೆ ಕೊಡಲಿ? ನಾನು ನಿನಗಾಗಿ ಏನು ಕಾರ್ಯಮಾಡಲಿ? ಅತ್ತೆ! ನಿಸ್ಸಂಕೋಚವಾಗಿ ಹೇಳು. ನೀನು ಕೇಳಲಿರುವ ವರವನ್ನು ನನಗೆ ನಡೆಸಿಕೊಡುವ ಶಕ್ತಿಯಿದ್ದರೂ ಅಥವಾ ಶಕ್ತಿಯಿಲ್ಲದಿದ್ದರೂ ನಡೆಸಿಯೇ ತೀರುವೆನು."

ಶ್ರೀಕೃಷ್ಣನ ಮಾತುಗಳನ್ನು ಕೇಳಿ ಶಿಶುಪಾಲನ ತಾಯಿಯು ಸಂತುಷ್ಟಳಾಗಿ ಹೇಳಿದಳು : "ಶ್ರೀಕೃಷ್ಣ! ಈ ನನ್ನ ಮಗನಾದ ಶಿಶುಪಾಲನು ನಿನ್ನ ವಿಷಯದಲ್ಲಿ ಮಾಡುವ ಅಪರಾಧಗಳೆಲ್ಲವನ್ನೂ ನನ್ನ ಸಲುವಾಗಿ ಕ್ಷಮಿಸಬೇಕು. ಇದೇ ನಾನು ನಿನ್ನಿಂದ ಅಪೇಕ್ಷಿಸುವ ವರ. ನಡೆಸಿಕೊಡುವೆಯಾ?"

"ಅತ್ತೆ! ಇವನು ಮಾಡಲಿರುವ ಅಪರಾಧಗಳಿಂದ ಕೊಲೆಗೆ ಅರ್ಹನಾಗಿದ್ದರೂ ನಾನು ಇವನನ್ನು ಸಂಹರಿಸುವುದಿಲ್ಲ. ಇವನ ಆ ವಿಧವಾದ ನೂರು ಅಪರಾಧಗಳನ್ನು ಮನ್ನಿಸುವೆನು. ದುಃಖಿಸಬೇಡ."

ಶಿಶುಪಾಲನ ತಾಯಿ-ತಂದೆಗಳು ಸಂತುಷ್ಟರಾದರು. ಶ್ರೀಕೃಷ್ಣನು ಬಲರಾಮನೊಡನೆ ದ್ವಾರವತಿಯನ್ನು ಸೇರಿದನು. ಭೀಮಸೇನ! ಈ ರೀತಿಯಾಗಿ ಶ್ರೀಕೃಷ್ಣನು ಇವನ ತಾಯಿಗಿತ್ತಿರುವ ವರದಿಂದ ಕೊಬ್ಬಿರುವ ಈ ಶಿಶುಪಾಲನು ನಿನ್ನನ್ನು ಯುದ್ಧಕ್ಕೆ ಕರೆಯುತ್ತಿದ್ದಾನೆ."

ಳ೩ನೆಯ ಅಧ್ಯಾಯವು ಮುಗಿಯಿತು.

ಳಳನೆಯ ಅಧ್ಯಾಯ ಶಿಶುಪಾಲವಧಪರ್ವ (ಮುಂದುವರಿದಿದೆ.)

## ಭೀಷ್ಮನ ಮಾತಿನಿಂದ ಶಿಶುಪಾಲನು ಮತ್ತಷ್ಟು ಕುಪಿತನಾದುದು : ಭೀಷ್ಮನನ್ನು ಕೊಲ್ಲಲು ಸಕಲರಾಜರ ಸನ್ನಾಹ : ಶ್ರೀಕೃಷ್ಣನೊಡನೆ ಯುದ್ಧಮಾಡಲು ಭೀಷ್ಮನಿಂದ ರಾಜರಿಗೆ ಆಹ್ವಾನ

ಮಹಾರಾಜ! ಭೀಷ್ಮನು ಮುಂದುವರಿದು ಹೇಳುತ್ತಾನೆ :

"ಭೀಮ! ಸೋಲಿನ ಸುಳಿವನ್ನೇ ಅರಿಯದ, ಮಹಾಪರಾಕ್ರಮಿಯಾದ ನಿನ್ನನ್ನು ಶಿಶುಪಾಲನಿಂದು ಯುದ್ಧಕ್ಕೆ ಕರೆಯುತ್ತಿರುವುದೂ ಶ್ರೀಕೃಷ್ಣನ ಪ್ರೇರಣೆಯಿಂದಲೇ. ಇದು ಇವನ ಸ್ವಭಾವಜನ್ಯವಾದ ಇಚ್ಛೆಯಲ್ಲ. ಈ ಪ್ರಪಂಚದಲ್ಲಿರುವ ಯಾವ ರಾಜನು ತಾನೇ ಈ ದುರುಳನು ನನ್ನನ್ನು ನಿಂದಿಸಿದಂತೆ ನಿರ್ಭಯವಾಗಿ ನಿಂದಿಸುತ್ತಾನೆ? ಇವನಾಗಲೇ ಮೃತ್ಯುವಶನಾಗಿರುತ್ತಾನೆ. ಇದರಲ್ಲಾವ ಸಂಶಯವೂ ಇಲ್ಲ. ಈ ಚೇದಿರಾಜನು–ನಾನು ಹಿಂದೆಯೇ ಹೇಳಿದಂತೆ–ಶ್ರೀಹರಿಯ ಅಂಶಸಂಭವನು. ನಿಶ್ಚಯವಾಗಿಯೂ ಇಂದು ಶ್ರೀಕೃಷ್ಣನು ತನ್ನ ತೇಜಸ್ಸನ್ನು ಇವನಿಂದ ಸೆಳೆದುಕೊಳ್ಳಲು ನಿಶ್ಚಯಿಸಿರುವನು. ಅದರಿಂದಲೇ ಇವನು ಹುಲಿಯಂತೆ ನಮ್ಮೆಲ್ಲರನ್ನೂ ತಿರಸ್ಕರಿಸಿ ಗರ್ಜನೆಯನ್ನು ಮಾಡುತ್ತಿದ್ದಾನೆ."

ಭೀಷ್ಮನ ಮಾತುಗಳು ಶಿಶುಪಾಲನಿಗೆ ಸಹ್ಯವಾಗಲಿಲ್ಲ. ಕೋಪವು ಮತ್ತಷ್ಟು ಉಲ್ಬಣಿಸಿತು. ಪುನಃ ತೆಗಳಲು ಪ್ರಾರಂಭಿಸಿದನು :

"ಭೀಷ್ಮ! ನೀನು ವಂದಿ-ಮಾಗಧನಂತೆ ಕ್ಷಣ-ಕ್ಷಣಕ್ಕೂ ನಿನ್ನ ಆಸನದಿಂದ ಮೇಲೆದ್ದು ಕೇಶವನ ಯಾವ ಪ್ರಭಾವವನ್ನು ಹಾಡಿ ಪಾಡುವೆಯೋ ಅಂತಹ ಪ್ರಭಾವವು ಶತ್ರುಗಳಾದ ನಮಗೂ ಇರಲಿ.

ಭೀಷ್ಮ! ಒಂದು ವೇಳೆ, ನಿನಗೆ ಇನ್ನೊಬ್ಬರನ್ನು ಹೊಗಳುವುದರಲ್ಲಿಯೇ ತೃಪ್ತಿಯಿರುವುದಾದರೆ ಇಲ್ಲಿರುವ ಇತರ ರಾಜರನ್ನೂ ಸ್ತೋತ್ರಮಾಡು. ಕೃಷ್ಣನೊಬ್ಬನನ್ನೇ ಸ್ತೋತ್ರಮಾಡುವುದನ್ನು ಸಾಕುಮಾಡು. ಇತ್ತ ನೋಡು, ಭೀಷ್ಮ! ಇವನು ದರದರಾಜ, ಬಾಹ್ಲಿಕಾಧಿಪತಿ–ಇವನನ್ನು ಸ್ತೋತ್ರಮಾಡು. ಇವನು ಮಹಾಪರಾಕ್ರಮಿಯು. ಹುಟ್ಟಿದೊಡನೆಯೇ ಇವನ ಶರೀರಭಾರ ದಿಂದ ಭೂಮಿಯೇ ಸೀಳಿಹೋಯಿತು. ಇವನ ಪಕ್ಕದಲ್ಲಿರುವವನು ಅಂಗ-ವಂಗಾಧಿಪತಿಯಾದ ಕರ್ಣ. ಇವನು ದೀರ್ಘಧನುರ್ಧರನು. ದೈವನಿರ್ಮಿತವಾದ ಕರ್ಣಕುಂಡಲಗಳಿಂದಲೂ-ವಜ್ರಕವಚದಿಂದಲೂ ಕೂಡಿ ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದಾನೆ. ಈ ಕರ್ಣಕುಂಡಲಗಳೂ ಮತ್ತು ಕವಚವೂ ಶರೀರದೊಡನೆಯೇ ಸೇರಿ ಬಂದಿವೆ. ಇದರಿಂದಲೇ ಇವನ ಪ್ರಭಾವವೆಷ್ಟೆಂಬುದನ್ನು ನೀನು ಊಹಿಸಬಹುದಾಗಿದೆ. ಇಂದ್ರನಿಗೆ ಸಮಾನವಾದ ಪರಾಕ್ರಮವಿದ್ದ ಜರಾಸಂಧನನ್ನೂ ಇವನು ಬಾಹುಯುದ್ಧದಲ್ಲಿ ಪರಾಜಯಗೊಳಿಸಿದ್ದನು ಮತ್ತು ಆ ರಾಜನನ್ನು ಅತಿಯಾಗಿ ಘಾಸಿಗೊಳಿಸಿದ್ದನು. ಇಂತಹವನು ಸ್ತೋತ್ರಾರ್ಹನಲ್ಲವೇ?”

ಶಿಶುಪಾಲನು ಮತ್ತೊಂದೆಡೆಗೆ ತಿರುಗಿ ದ್ರೋಣರನ್ನೂ ಮತ್ತು ಅಶ್ವತ್ಥಾಮನನ್ನೂ ನಿರ್ದೇಶಿಸಿ ಹೇಳಿದನು :

“ಭೀಷ್ಮ! ದ್ರೋಣರೂ ಮತ್ತು ಅಶ್ವತ್ಥಾಮನೂ ಅಪ್ರತಿಮಸಾಹಸಿಗಳಾದ ಪಿತಾ-ಪುತ್ರರು. ಇವರಲ್ಲಿ ಯಾರೊಬ್ಬರು ಕೋಪಾವಿಷ್ಟರಾಗಿ ನಿಂತರೂ ಚರಾಚರಪ್ರಾಣಿಗಳಿಂದ ಕೂಡಿರುವ ಈ ಪ್ರಪಂಚವನ್ನೇ ನಿರ್ಮೂಲಮಾಡಿಬಿಡಬಲ್ಲರು. ಪ್ರಪಂಚದ ರಾಜರಲ್ಲಿ ದ್ರೋಣರ ಅಥವಾ ಅಶ್ವತ್ಥಾಮನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವಿರುವ ಮತ್ತೊಬ್ಬ ರಾಜನನ್ನೇ ನಾನು ಕಂಡಿಲ್ಲ. ಇಂತಹವರನ್ನೇಕೆ ನೀನು ಸ್ತೋತ್ರಮಾಡುವುದಿಲ್ಲ?

ಪ್ರಪಂಚದಲ್ಲಿಯೇ ಅಸಮಾನಪರಾಕ್ರಮಿಯೆನಿಸಿರುವ ಈ ದುರ್ಯೋಧನನನ್ನೂ ನೀನು ನಿರ್ಲಕ್ಷಿಸಿರುವೆ. ಜಯದ್ರಥನೇನು ಸಾಮಾನ್ಯನೇ? ಶಸ್ತ್ರ ವಿದ್ಯಾಪ್ರವೀಣನೂ, ಮಹಾಪರಾಕ್ರಮಿಯೂ ಆಗಿರುತ್ತಾನೆ. ಕಿಂಪುರುಷರ ಆಚಾರ್ಯನಾದ ದ್ರುಮನು ಪ್ರಪಂಚದಲ್ಲಿಯೇ ಮಹಾಪರಾಕ್ರಮಿಯೆಂಬ

ಕೀರ್ತಿಯನ್ನು ಗಳಿಸಿರುತ್ತಾನೆ. ಶಾರದ್ವತನ ಪುತ್ರರಾದ ಕೃಪರೂ ಭರತಕುಲಕ್ಕೇ ಆಚಾರ್ಯರೆಂಬುದು ಸರ್ವವಿದಿತವಾಗಿದೆ. ಇಂತಹವರನ್ನು ಬಿಟ್ಟು ಕೃಷ್ಣನನ್ನೇಕೆ ಸ್ತೋತ್ರಮಾಡುವೆ?

ಧನುರ್ವಿದ್ಯಾಪ್ರವೀಣನಾದ ರುಕ್ಮಿ, ಮಹಾಪರಾಕ್ರಮಿಯಾದ ಭೀಷ್ಮಕ, ರಾಜನಾದ ದಂತವಕ್ತ್ರ, ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿ ಸುಪ್ರಸಿದ್ಧನಾಗಿರುವ ಭಗದತ್ತ, ಮಗಧರಾಜನಾದ ಜಯತ್ಸೇನ, ವಿರಾಟ, ದ್ರುಪದ, ಶಕುನಿ, ಬೃಹದ್ಬಲ, ಅವಂತಿದೇಶದ ವಿಂದಾನುವಿಂದರು, ಪಾಂಡ್ಯ, ಶ್ವೇತ, ಉತ್ತರ, ಶಂಖ, ವೃಷಸೇನ, ಏಕಲವ್ಯ, ಮಹಾರಥಿಕನೆಂದು ಸುಪ್ರಸಿದ್ಧನಾಗಿರುವ ಕಾಳಿಂಗ–ಇವರೆಲ್ಲರನ್ನೂ ನಿರ್ಲಕ್ಷಿಸಿ ಕೇಶವನನ್ನೇಕೆ ಸ್ತೋತ್ರ ಮಾಡುತ್ತಿರುವೆ?

ಭೀಷ್ಮ! ನಿನ್ನ ಮನಸ್ಸು ಯಾವಾಗಲೂ ಇತರರನ್ನು ಹೊಗಳುವುದರಲ್ಲಿಯೇ ಆಸಕ್ತವಾಗಿರುವುದಾದರೆ ರಾಜಾಧಿರಾಜನಾದ ಶಲ್ಯನನ್ನು ಸ್ತೋತ್ರಮಾಡು.

ನಿನ್ನ ಬುದ್ಧಿಗೆ ನಾನೇನನ್ನು ತಾನೇ ಮಾಡಲು ಸಾಧ್ಯವಾದೀತು? ವೃದ್ಧರ, ಧರ್ಮವಿದರ ಸೇವೆಯನ್ನು ನೀನು ಮಾಡಿಲ್ಲ.

**ಆತ್ಮನಿನ್ದಾತ್ಮಪೂಜಾ ಚ ಪರನಿನ್ದಾ ಪರಸ್ತವಃ ।**
**ಅನಾಚರಿತಮಾರ್ಯಾಣಾಂ ವೃತ್ತಮೇತಚ್ಚತುರ್ವಿಧಮ್ ॥೨೪॥**

ಆತ್ಮನಿಂದೆ-ಆತ್ಮಪ್ರಶಂಸೆ, ಪರನಿಂದೆ-ಪರಪ್ರಶಂಸೆ – ಈ ನಾಲ್ಕೂ ಆರ್ಯರಿಗೆ ಯೋಗ್ಯವಲ್ಲವೆಂಬ ವಿಷಯವನ್ನು ನೀನು ತಿಳಿದಂತಿಲ್ಲ. ಭೀಷ್ಮ! ತಿಳಿವಳಿಕೆಯಿಲ್ಲದೇ ಭಕ್ತಿಪುರಸ್ಸರವಾಗಿ ನೀನು ಮಾಡುತ್ತಿರುವ ಸ್ತೋತ್ರಕ್ಕೆ ಅನರ್ಹನಾದ ಈ ಕೇಶವನ ಹೊಗಳಿಕೆಯನ್ನು ಯಾರೂ ಅನುಮೋದಿಸಲಾರರು. ಕೇವಲ ನಿನ್ನ ಸ್ವಂತ ಇಚ್ಛೆಯಿಂದಲೇ ನೀನು ಈ ಸಕಲಭುವನವನ್ನೂ ಕಂಸನ ಮನೆಯ ದನಕಾಯುವ, ದುರುಳನಾದ ಈ ಕೃಷ್ಣನಲ್ಲಿ ಹೇಗೆ ತಾನೇ ಸಮಾವೇಶಮಾಡುವೆ? ಅಥವಾ ನಿನ್ನ ಈ ಕಾರ್ಯವು ನಿನ್ನ ಸ್ವಭಾವಜನ್ಯವಾದ ಗುಣದಿಂದ ಮಾಡಲ್ಪಡದಿರಬಹುದು. ಭೂಲಿಂಗವೆಂಬ ಪಕ್ಷಿಯ ಉದಾಹರಣೆಯನ್ನು ಈ ಹಿಂದೆಯೇ ಹೇಳಿದೆನಲ್ಲವೇ? ಮತ್ತೊಮ್ಮೆ ಹೇಳುವೆನು ಕೇಳು :

ಹಿಮವತ್ಪರ್ವತದ ಅತ್ತಕಡೆಯಲ್ಲಿ ಭೂಲಿಂಗವೆಂಬ ಪಕ್ಷಿಯಿರುತ್ತದೆ. ಆ ಪಕ್ಷಿಯು ಯಾವಾಗಲೂ 'ಸಾಹಸಂ ಮಾ ಕುರು' (ಪ್ರಾಣಾಪಾಯಕರವಾದ ಸಾಹಸಕಾರ್ಯಕ್ಕೆ ಯತ್ನಿಸಬೇಡ) ಎಂದು ಹೇಳುತ್ತಿರುತ್ತದೆ. ಆದರೆ ತಾನೇ ಯಾವಾಗಲೂ ಹೆಚ್ಚು ಅಪಾಯಕರವಾದ ಸಾಹಸಕಾರ್ಯವನ್ನು ಮಾಡುತ್ತಿರುವ ಅರಿವು ಆ ಪಕ್ಷಿಗಿರುವುದಿಲ್ಲ. ಮಂದಬುದ್ಧಿಯ ಆ ಪಕ್ಷಿಯು ಸಿಂಹವು ಆಹಾರವನ್ನು ತಿನ್ನುತ್ತಿರುವಾಗ ಅದರ ಬಾಯೊಳಗೆ ಹಲ್ಲುಗಳ ಸಂದಿಯಲ್ಲಿ ಸಿಕ್ಕಿಕೊಂಡಿರುವ ಮಾಂಸವನ್ನು ಕೊಕ್ಕಿನಿಂದ ಕುಕ್ಕಿ ತೆಗೆಯಲು ಯತ್ನಿಸುತ್ತಿರುತ್ತದೆ. ಇಲ್ಲಿ ಮತ್ತೊಂದು ವೈಚಿತ್ರ್ಯವೇನೆಂದರೆ : ಬಾಯೊಳಗಿನ ಮಾಂಸದ ತುಂಡನ್ನು ಕೀಳುವ ಆ ಪಕ್ಷಿಯನ್ನು ಸಿಂಹವು ಹಾಗೆಯೇ ನುಂಗಿಬಿಡಲು ಸಾಧ್ಯವಿದ್ದರೂ ಹಾಗೆ ಮಾಡುವುದಿಲ್ಲ. ಸಿಂಹದ ಉದಾಸೀನತೆಯಿಂದಾಗಿ ಭೂಲಿಂಗಪಕ್ಷಿಯು ಜೀವಿಸಿರುತ್ತದೆ.

ಭೀಷ್ಮ! ನೀನಾದರೂ ಭೂಲಿಂಗಪಕ್ಷಿಯಂತೆ–ಹೇಳುವುದೇ ಒಂದು ; ಮಾಡುವುದೇ ಮತ್ತೊಂದು. ನಿಶ್ಚಯವಾಗಿಯೂ ನೀನಿಂದು ಬದುಕಿರುವುದು ಈ ರಾಜರೆಲ್ಲರ ಉದಾಸೀನತೆಯಿಂದ. ನೀನು ಕೃಷ್ಣನ ಪೂಜೆಮಾಡಿ ಈ ರಾಜರೆಲ್ಲರನ್ನೂ ತಿರಸ್ಕರಿಸಿರುವುದರಿಂದ ಈ ರಾಜರು ಈ ವೇಳೆಗಾಗಲೇ ನಿನ್ನನ್ನು ಸಂಹರಿಸಬಹುದಾಗಿದ್ದಿತು. ಆದರೆ ಈ ರಾಜರ ಉದಾರತೆಯು ಅಥವಾ ಉದಾಸೀನತೆಯು ನಿನ್ನನ್ನು ಜೀವಸಹಿತವಾಗಿ ಉಳಿಸಲು ಅವಕಾಶವಿತ್ತಿದೆ. ಎಲ್ಲರ ಅಭಿಪ್ರಾಯಕ್ಕೂ ವಿರುದ್ಧವಾಗಿ ವರ್ತಿಸುವವನು ನಿನ್ನ ಹೊರತು ಮತ್ತಾರಿದ್ದಾರೆ?"

ಶಿಶುಪಾಲನ ಕಠಿನವಾದ ಮಾತುಗಳನ್ನು ಕೇಳಿ ಭೀಷ್ಮನು ಗಾಂಭೀರ್ಯದಿಂದಲೇ ಉತ್ತರಿಸಿದನು.

"ನಾನು ಈ ರಾಜರ–'ಭೀಷ್ಮನು ಬದುಕಿರಲಿ'–ಎಂಬ ಇಚ್ಛೆಯಿಂದಲೇ ಜೀವಿಸಿರುವೆನೆಂಬ ವಿಷಯವು ಹಾಗಿರಲಿ. ಆದರೆ, ಶಿಶುಪಾಲ! ಹಾಗೆ ಜೀವಿಸಿರುವ ನಾನು ಈ ರಾಜರೆಲ್ಲರನ್ನೂ ತೃಣಕ್ಕಿಂತಲೂ ಕಡೆಯಾಗಿ ಭಾವಿಸಿರುವೆನು. (ಇವರು ನನ್ನ ಮುಂದೆ ತೃಣಪ್ರಾಯರು.)"

ಭೀಷ್ಮನ ಮಾತುಗಳನ್ನು ಕೇಳಿದೊಡನೆಯೇ ಅಲ್ಲಿ ನೆರೆದಿದ್ದ ರಾಜ

ರೆಲ್ಲರೂ ಕೋಪದಿಂದ ಉದ್ರಿಕ್ತರಾದರು. ಅನೇಕರಾಜರು ಮೇಲೆದ್ದು ನಿಂತರು. ಮತ್ತೆ ಕೆಲವರು ಭೀಷ್ಮನನ್ನು ತೆಗಳಲು ಪ್ರಾರಂಭಿಸಿದರು :

"ಈ ಭೀಷ್ಮನು ಮುದಿಯನಾಗಿದ್ದರೂ ದುರಹಂಕಾರದಿಂದ ಮದಿಸಿರುತ್ತಾನೆ. ಇವನು ಖಂಡಿತವಾಗಿಯೂ ಕ್ಷಮಾರ್ಹನಲ್ಲ. ಪಶುವನ್ನು ಕೊಲ್ಲುವಂತೆ ಇವನನ್ನು ಕತ್ತುಹಿಸುಕಿ ಕೊಲ್ಲೋಣ. ಅಥವಾ ನಾವೆಲ್ಲರೂ ಸೇರಿ ಇವನನ್ನು ಹುಲ್ಲಿನಿಂದ ಸುತ್ತಿ ಸುಟ್ಟುಬಿಡೋಣ."

ರಾಜರ ಆ ಮಾತುಗಳನ್ನು ಕೇಳಿ ಮೇಧಾವಿಯಾದ ಭೀಷ್ಮನು ಪುನಃ ಹೇಳಿದನು :

"ಎಲೈ ರಾಜರೇ! ಈ ನಿಮ್ಮ ಮಾತುಗಳಿಗೆ ಕೊನೆಯೇ ಇಲ್ಲವಾಗಿದೆ. ಏಕೆಂದರೆ : ಮಾತಿಗೆ ಮಾತು ಬೆಳೆಯುವುದು ಸ್ವಾಭಾವಿಕ. ಆದುದರಿಂದ ನೀವೆಲ್ಲರೂ ನಾನು ಹೇಳಲಿರುವ ಈ ಕಡೆಯ ಮಾತುಗಳನ್ನು ಕೇಳಿರಿ. ನಿಮ್ಮ ಕೈಯಲ್ಲಿ ಸಾಧ್ಯವಿರುವುದಾದರೆ ನನ್ನನ್ನು ನೀವು ಪಶುವಿನಂತೆ ಕೊಲ್ಲಿರಿ ಅಥವಾ ಹುಲ್ಲಿನಿಂದ ದಹಿಸಿರಿ. ನಾನು ಮಾತ್ರ ನಿಶ್ಚಯವಾಗಿಯೂ ನಿಮ್ಮೆಲ್ಲರ ತಲೆಗಳನ್ನೂ ನನ್ನೀ ಕಾಲಿನಿಂದ ಮೆಟ್ಟುವೆನು. ಇದು ಮಾತ್ರ ನಿಶ್ಚಯ. ಇದಕ್ಕೆ ಮೊದಲು ಇದೋ ಇಲ್ಲಿ ನೋಡಿ ; ವಿನಾಶವೆಂಬುದನ್ನೇ ಅರಿಯದ ವಾಸುದೇವನಿದ್ದಾನೆ. ಇವನನ್ನು ನಾವು ಪೂಜಿಸಿರುತ್ತೇವೆ. ಇಲ್ಲಿರುವ ಯಾರಿಗಾದರೂ ಮರಣದ ಅಪೇಕ್ಷೆಯಿದ್ದರೆ–ಅವನು ಈ ಕೂಡಲೇ ಮೇಘಶ್ಯಾಮನಾದ, ಶಂಖ-ಚಕ್ರ-ಗದಾಪಾಣಿಯಾದ ಮಾಧವನನ್ನು ಯುದ್ಧಕ್ಕೆ ಆಹ್ವಾನಿಸಿ, ಅವನಿಂದ ಸಂಹರಿಸಲ್ಪಟ್ಟವನಾಗಿ ಅವನ ಭವ್ಯಶರೀರವನ್ನು ಸೇರಲಿ."

ನಲವತ್ತನಾಲ್ಕನೆಯ ಅಧ್ಯಾಯವು ಮುಗಿಯಿತು.

## ಶ್ರೀಕೃಷ್ಣನಿಂದ ಶಿಶುಪಾಲನ ವಧೆ: ಯಾಗದ ಪರಿಸಮಾಪ್ತಿ: ಬ್ರಾಹ್ಮಣರೇ ಆದಿಯಾಗಿ ಎಲ್ಲರೂ ತಮ್ಮ-ತಮ್ಮ ದೇಶಗಳಿಗೆ ಪ್ರಯಾಣಮಾಡಿದುದು

ಜನಮೇಜಯ! ಶ್ರೀಕೃಷ್ಣನನ್ನು ಕೇವಲ ಗೋಪಾಲಕನೆಂದು ತಿಳಿದಿದ್ದವನಿಗೆ ಶ್ರೀಕೃಷ್ಣನೊಡನೆ ಯುದ್ಧಮಾಡಲು ಅಂಜಿಕೆಯೇನಿದೆ? ಭೀಷ್ಮನ ಮಾತುಗಳನ್ನು ಕೇಳಿ ಚೇದಿರಾಜನು ಮತ್ತಷ್ಟು ಕುಪಿತನಾಗಿ, ಶ್ರೀಕೃಷ್ಣನೊಡನೆ ಯುದ್ಧಮಾಡಲು ನಿಶ್ಚಯಿಸಿ, ಹೇಳಿದನು :

"ಜನಾರ್ದನ! ನಾನು ನಿನ್ನನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದೇನೆ. ನನ್ನೊಡನೆ ಯುದ್ಧಮಾಡು. ಯುದ್ಧದಲ್ಲಿ ನಿನ್ನ ಜೊತೆಯಲ್ಲಿಯೇ ಈ ಪಾಂಡವರೆಲ್ಲರನ್ನೂ ಯಮಾಲಯಕ್ಕೆ ಕಳುಹಿಸಿಯೇ ವಿರಮಿಸುವೆನು. ಇಲ್ಲಿ ನೆರೆದಿರುವ ರಾಜರೆಲ್ಲರನ್ನೂ ನಿರ್ಲಕ್ಷಿಸಿ, ರಾಜನಲ್ಲದ-ದಾಸನಾದ ನಿನ್ನನ್ನು ಪೂಜಿಸಿರುವುದರಿಂದ ಪಾಂಡವರೆಂದಿಗೂ ಕ್ಷಮಾರ್ಹರಲ್ಲ. ಆದುದರಿಂದ ಇವರನ್ನೂ ನಿನ್ನೊಡನೆ ಯಮಾಲಯಕ್ಕೆ ಕಳುಹಿಸಿಯೇ ತೀರಬೇಕಾಗಿದೆ. ಪೂಜೆಗೆ ಅರ್ಹನಲ್ಲದ, ಕಂಸನಿಗೆ ದಾಸನಾಗಿದ್ದ ನಿನ್ನನ್ನು ಪಾಂಡವರು ಕೇವಲ ಬಾಲತ್ವದ ಕಾರಣದಿಂದ, ವಿವೇಚನೆಯಿಲ್ಲದೇ ಪೂಜಿಸಿರುವರೆಂದು ಭಾವಿಸಿದರೂ ಇವರ ವಧೆಯೂ ಅನಿವಾರ್ಯವೆಂದೇ ನಾನು ಅಭಿಪ್ರಾಯಪಡುತ್ತೇನೆ" – ಎಂದು ಮುಂತಾಗಿ ಹೇಳುತ್ತಾ ಶಿಶುಪಾಲನು ಗರ್ಜನೆಮಾಡುತ್ತಿದ್ದನು.

ಆ ಸಮಯದಲ್ಲಿ ಶ್ರೀಕೃಷ್ಣನು ಮೇಲೆದ್ದು ಪಾಂಡವರ ಸಮ್ಮುಖದಲ್ಲಿದ್ದ ರಾಜಾಧಿರಾಜರನ್ನು ಸಂಬೋಧಿಸಿ ಮೆದುನುಡಿಗಳಿಂದ ಈ ವಾಕ್ಯಗಳನ್ನು ಹೇಳಿದನು :

"ಎಲೈ ರಾಜರುಗಳೇ! ಯದುಕುಲಕನ್ಯೆಯಾದ ಶ್ರುತಶ್ರವಸಳ ಮಗನಾದ, ದುಷ್ಟಬುದ್ಧಿಯಿಂದ ಕೂಡಿರುವ ಈ ಶಿಶುಪಾಲನು ಸಾತ್ವತವಂಶದವರಾದ ನಮಗೇ ಅತ್ಯಂತವೈರಿಯಾಗಿದ್ದಾನೆ. ನಾವು ಇವನಿಗೆ ಯಾವಾಗಲೂ

ಕೇಡನ್ನು ಮಾಡದಿದ್ದರೂ ಇವನು ಯಾವಾಗಲೂ ನಮಗೆ ಕೇಡನ್ನುಂಟು ಮಾಡುವುದರಲ್ಲಿಯೇ ಹೆಚ್ಚಿನ ಆಸಕ್ತಿಯನ್ನು ಹೊಂದಿರುತ್ತಾನೆ. ಇವನು ನಮಗಿತ್ತ ತೊಂದರೆಗಳು ಅಷ್ಟಿಷ್ಟಲ್ಲ. ನಾವೊಮ್ಮೆ ಪ್ರಾಗ್ಜ್ಯೋತಿಷನಗರಿಗೆ ಹೋಗಿದ್ದ ಕಾಲದಲ್ಲಿ ಇವನು ದ್ವಾರವತಿಗೆ ಬಂದು ನಗರವನ್ನೇ ಸುಟ್ಟುಬಿಟ್ಟನು. ಇವನು ನಮ್ಮ ತಂದೆಯ ತಂಗಿಯ ಮಗನೂ ಆಗಿರುತ್ತಾನೆ.

ಉಗ್ರಸೇನನು ರೈವತಕಪರ್ವತದಲ್ಲಿ ವಿಹಾರಮಾಡುತ್ತಿದ್ದಾಗ, ಈ ದುಷ್ಟನೊಮ್ಮೆ ನಿರಾಯುಧರಾದ ಅವನ ಸೇವಕರ ಮೇಲೆ ಬಿದ್ದು, ಅನೇಕರನ್ನು ಕೊಂದು, ಮತ್ತೆ ಕೆಲವರನ್ನು ಬಂಧಿಸಿ ತನ್ನ ನಗರಿಗೆ ಸೆಳೆದುಕೊಂಡು ಹೋದನು. ಪಾಪಕಾರ್ಯಗಳಲ್ಲಿಯೇ ಹೆಚ್ಚಿನ ಆಸಕ್ತಿಯುಳ್ಳ ಇವನೊಮ್ಮೆ ನಮ್ಮ ತಂದೆಯು ಅಶ್ವಮೇಧಯಾಗಮಾಡಲು ಸೈನಿಕರೊಡನೆ ಕಳುಹಿಸಿದ್ದ ಯಜ್ಞಾಶ್ವವನ್ನು – ಯಜ್ಞಕ್ಕೆ ವಿಘ್ನವನ್ನುಂಟುಮಾಡಬೇಕೆಂಬ ದುರಭಿಪ್ರಾಯದಿಂದ–ಮುಚ್ಚಿಟ್ಟನು. ಕಾಮಚೋದಿತನಾದ ಇವನೇ ಸೌವೀರ ರಾಜ್ಯಕ್ಕೆ ಹೋಗುತ್ತಿದ್ದ, ತಪಸ್ವಿಯಾದ ಅಕ್ರೂರನ ಹೆಂಡತಿಯನ್ನು ಅಪಹರಿಸಿಕೊಂಡು ಹೋದನು. ಸೋದರಮಾವನಿಗೇ ಕೇಡನ್ನುಂಟು ಮಾಡಲು ಆಸಕ್ತನಾದ ಇವನು ಮತ್ತೊಮ್ಮೆ ಮಾಡಿದ ಕಾರ್ಯವು ಮತ್ತೂ ಹೇಯವಾದುದು.

ವಿಶಾಲದೇಶದ ರಾಜಕನ್ಯೆಯಾದ ಭದ್ರೆಯ ವಿವಾಹಪ್ರಯತ್ನಗಳು ನಡೆಯುತ್ತಿದ್ದುವು. ಚೆಲುವೆಯಾದ ಭದ್ರೆಯ ಮೇಲೆ ಈ ಪಾಪಿಯ ಕಣ್ಣುಗಳು ಬಿದ್ದುವು. ತನ್ನ ಮಿತ್ರನಾದ ಕರೂಷರಾಜನಿಗೋಸ್ಕರ ಅವನ ವೇಷವನ್ನೇ ಧರಿಸಿ ವಿಶಾಲದೇಶಕ್ಕೆ ಹೋಗಿ ಭದ್ರೆಯನ್ನು ಅಪಹರಿಸಿ ತಂದನು.

ಇವನ ಈ ವಿಧವಾದ ಅನೇಕಪಾಪಕಾರ್ಯಗಳೆಲ್ಲವನ್ನೂ ನಾನು ನನ್ನ ಸೋದರತ್ತೆಗಾಗಿ ಸಹಿಸಿಕೊಂಡೇ ಬಂದೆನು. ಇವನು ಇಂದು ನನಗೆ ಮಾಡುತ್ತಿರುವ ಅಪರಾಧವು ನಿಮ್ಮೆಲ್ಲರಿಗೂ ಪ್ರತ್ಯಕ್ಷವಾಗಿಯೇ ಗೋಚರವಾಗಿದೆ. ಇವನು ನನ್ನ ವಿಷಯದಲ್ಲಿ ಎಷ್ಟೊಂದು ದ್ವೇಷಬುದ್ಧಿಯಿಂದಿರುವನೆಂಬುದನ್ನು ನೀವು ನೋಡುತ್ತಿರುವಿರಿ. ಇವನು ಈ ಹಿಂದೆ ನನಗೆಷ್ಟು ತೊಂದರೆಯನ್ನಿತ್ತನೆಂಬ ವಿಷಯವೂ ನಿಮಗೆ ತಿಳಿದೇ ಇದೆ. ಇವನ ಈ ದುರಹಂಕಾರಕ್ಕೆ ಪ್ರತಿ

ಫಲವು ಇವನ ಸಂಹಾರವೇ ಆಗಿದೆ. ಇವನಿಂದು ತಾನು ಮಾಡಿರುವ ಮಿತಿಮೀರಿದ ಅಪರಾಧಕ್ಕಾಗಿ ವಧಾರ್ಹನಾಗಿದ್ದಾನೆ. ಇವನೀಗ ಎಸಗಿರುವ ಅಪರಾಧವನ್ನು ಕ್ಷಮಿಸಲು ಅಶಕ್ತನಾಗಿದ್ದೇನೆ. ಶೀಘ್ರಮರಣವನ್ನು ಬಯಸಿದ ಈ ಪಾಪಿಯು ರುಕ್ಮಿಣಿಯ ಮೇಲೆಯೂ ಕಣ್ಣಿಟ್ಟಿದ್ದನು. ಆದರೆ ನೀಚಜಾತಿಯವನಿಗೆ ವೇದಾಧಿಕಾರವು ಲಭಿಸದ ರೀತಿಯಲ್ಲಿ ಈ ನೀಚನಿಗೆ ರುಕ್ಮಿಣಿಯು ಲಭಿಸಲಿಲ್ಲ."

ವಾಸುದೇವನ ಮಾತುಗಳನ್ನು ಕೇಳಿ ಅಲ್ಲಿ ನೆರೆದಿದ್ದ ರಾಜರೆಲ್ಲರೂ ಶಿಶುಪಾಲನನ್ನೇ ಮೂದಲಿಸಲು ಪ್ರಾರಂಭಿಸಿದರು. ಆದರೆ ಶಿಶುಪಾಲನು ಮಾತ್ರ ಶ್ರೀಕೃಷ್ಣನ ಮಾತಿಗೆ ಗಹ-ಗಹಿಸಿ ನಕ್ಕು ಅಟ್ಟಹಾಸದಿಂದ ಹೇಳಿದನು :

"ಎಲವೋ ಕೃಷ್ಣ! ರುಕ್ಮಿಣಿಯ ತಂದೆ-ತಾಯಿಗಳು ಮೊದಲು ನನಗೇ ರುಕ್ಮಿಣಿಯನ್ನು ಕೊಟ್ಟು ಮದುವೆಮಾಡಬೇಕೆಂದಿದ್ದ ವಿಷಯವನ್ನು ಈ ಮಹಾಸಭೆಯಲ್ಲಿ, ಅದರಲ್ಲಿಯೂ ಈ ರಾಜ-ಮಹಾರಾಜರ ಸಮ್ಮುಖದಲ್ಲಿ ಬಹಿರಂಗಪಡಿಸಲು ನಾಚಿಕೆಯಾಗಲಿಲ್ಲವೇ? ಮಧುಸೂದನ! ಈ ಸಭೆಯಲ್ಲಿರುವ ಮರ್ಯಾದಸ್ಥರ ಮಧ್ಯದಲ್ಲಿ ಕುಳಿತು ತಾನೂ ಒಬ್ಬ ಮರ್ಯಾದಸ್ಥನಾದ ಮನುಷ್ಯನೆಂದು ಭಾವಿಸಿ– 'ನನ್ನ ಹೆಂಡತಿಯನ್ನು ಬೇರೆಯವರಿಗೆ ಕೊಟ್ಟು ಮದುವೆಮಾಡಬೇಕೆಂದು ನಿಶ್ಚಯವಾಗಿದ್ದಿತು' – ಎಂದು ಸ್ವಲ್ಪವಾದರೂ ಲಜ್ಜೆಯಿಲ್ಲದೇ ಹೇಳುವವನು ನೀನೊಬ್ಬನಲ್ಲದೇ ಮತ್ತಾರಿದ್ದಾರೆ? ಕೃಷ್ಣ! ನೀನು ನನ್ನನ್ನು ಕ್ಷಮಿಸು ; ಅಥವಾ ಕ್ಷಮಿಸದಿರು. ನೀನು ನನ್ನ ಮೇಲೆ ಕೋಪಗೊಂಡರೂ ಅಥವಾ ಕೋಪಗೊಳ್ಳದೇ ಮೈತ್ರಿಯಿಂದಿದ್ದರೂ ನೀನೇನು ತಾನೇ ನನಗೆ ಮಾಡಬಲ್ಲೆ?"

ಶಿಶುಪಾಲನು ಹೀಗೆ ಮಾತನಾಡುತ್ತಿರುವಾಗ ಶ್ರೀಕೃಷ್ಣನು ಅಸುರರ ದರ್ಪವನ್ನು ಮುರಿಯುವ ಸಾಮರ್ಥ್ಯವುಳ್ಳ ಚಕ್ರಾಯುಧವನ್ನು ಸ್ಮರಿಸಿದನು. ಕ್ಷಣಮಾತ್ರದಲ್ಲಿ ಚಕ್ರಾಯುಧವು ವೇಗವಾಗಿ ತಿರುಗುತ್ತಾ ಬಂದು ಶ್ರೀಕೃಷ್ಣನ ದಕ್ಷಿಣಹಸ್ತವನ್ನು ಅಲಂಕರಿಸಿತು.

ಚಕ್ರಾಯುಧವನ್ನು ಧರಿಸಿದ ಶ್ರೀಕೃಷ್ಣನು ಅಲ್ಲಿದ್ದ ರಾಜರೆಲ್ಲರನ್ನೂ ಕುರಿತು ಉಚ್ಚಧ್ವನಿಯಿಂದ ಹೇಳಿದನು :

"ಭೂಪಾಲರುಗಳಿರಾ! ನಾನು ಈ ದುಷ್ಟನನ್ನು ಇಲ್ಲಿಯವರೆಗೆ ಕ್ಷಮಿಸಿದ ಕಾರಣವನ್ನು ಹೇಳುವೆನು, ಕೇಳಿರಿ. ಇವನ ತಾಯಿಯಿಂದ ಪ್ರಾರ್ಥಿತನಾದ ನಾನು ಇವನು ಮಾಡಿದ ನೂರು ಅಪರಾಧಗಳನ್ನು ಕ್ಷಮಿಸಿದೆನು. ಇವನ ತಾಯಿಯೂ ಈ ವರವನ್ನೇ ಕೇಳಿದ್ದಳು. ನಾನೂ ಸಹ ಹಾಗೆಯೇ ವರವನ್ನಿತ್ತಿದ್ದೆನು. ನಾನಿತ್ತಿದ್ದ ವರದಂತೆ ಇವನ ಅಪರಾಧಗಳು ನೂರರಿಂದ ಪರಿಪೂರ್ತಿಯಾಗಿ ಮೀರಿಯೂ ಹೋಯಿತು. ನಾನು ನಿಮ್ಮ ಸಮ್ಮುಖದಲ್ಲಿಯೇ ಇವನನ್ನಿಂದು ಸಂಹಾರಮಾಡುತ್ತೇನೆ."



ಹೀಗೆಂದು ಹೇಳಿ ಶ್ರೀಕೃಷ್ಣನು ಚಕ್ರಾಯುಧವನ್ನು ಶಿಶುಪಾಲನ ಮೇಲೆ ಪ್ರಯೋಗಿಸಿದನು.

ರೆಪ್ಪೆಹೊಡೆಯುವುದರೊಳಗಾಗಿ–ಇಂದ್ರನ ವಜ್ರಾಯುಧದ ಆಘಾತಕ್ಕೆ

ಸಿಕ್ಕಿ ಪರ್ವತದ ಶಿಖರವು ಉರುಳಿದಂತೆ–ಶಿಶುಪಾಲನ ತಲೆಯು ಕೆಳಕ್ಕೆ ಉರುಳಿತು. ಶಿಶುಪಾಲನ ಶರೀರದಿಂದ ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸು ಹೊರಬರುತ್ತಿರುವುದನ್ನು ಅಲ್ಲಿ ನೆರೆದಿದ್ದ ರಾಜರೆಲ್ಲರೂ ವೀಕ್ಷಿಸಿದರು. ಆ ಮಹಾತೇಜಸ್ಸು ಪರಂಧಾಮನಾದ, ಕಮಲಾಕ್ಷನಾದ, ಲೋಕಪೂಜ್ಯನಾದ ಶ್ರೀಕೃಷ್ಣನನ್ನು ಪ್ರದಕ್ಷಿಣೆಮಾಡಿ ಅವನೊಳಗೇ ಸೇರಿಕೊಂಡಿತು. ಅದನ್ನು ಕಂಡ ಎಲ್ಲ ರಾಜರೂ ಆಶ್ಚರ್ಯಭರಿತರಾದರು. ಶಿಶುಪಾಲನ ವಧೆಯ ಕಾಲದಲ್ಲಿ ಆಕಾಶವು ಮೇಘರಹಿತವಾಗಿದ್ದರೂ ಮಳೆಯನ್ನು ಸುರಿಸಿತು. ಹಠಾತ್ತಾಗಿ ಗುಡುಗು-ಮಿಂಚು-ಸಿಡಿಲುಗಳು ಉಂಟಾದುವು. ಭೂಮಿಯೇ ನಡುಗಿತು.

ಆ ಸಮಯದಲ್ಲಿ ಶಿಶುಪಾಲನ ಪಕ್ಷದಲ್ಲಿದ್ದ ರಾಜರ ಅವಸ್ಥೆಯಂತೂ ಅವರ್ಣನೀಯವಾಗಿತ್ತು. ಪ್ರಾಣಹೋಗುವ ಮೊದಲು ಮಾತು ನಿಂತು ಹೋದಾಗ ಮಾನವನು ಇತರರನ್ನು ದಿಟ್ಟಿಸಿ ನೋಡುವಂತೆ–ಕೆಲವು ರಾಜರು ಮಾತನಾಡಲಾರದೇ ಶ್ರೀಕೃಷ್ಣನನ್ನೇ ದಿಟ್ಟಿಸಿನೋಡುತ್ತಾ ಕುಳಿತಿದ್ದರು. ಕೆಲವು ರಾಜರು ಕೋಪಾವಿಷ್ಟರಾಗಿ ತಮ್ಮ ಕೈಗಳಿಂದ ಕೈಗಳನ್ನು ಉಜ್ಜಿಕೊಳ್ಳುತ್ತಿದ್ದರು. ಮತ್ತೆ ಕೆಲವರು ಅವುಡುಗಳನ್ನು ಬಲವಾಗಿ ಕಚ್ಚುತ್ತಿದ್ದರು. ಅವರ ಮಧ್ಯದಲ್ಲಿದ್ದ ಕೆಲವರು ಶ್ರೀಕೃಷ್ಣನು ಮಾಡಿದ ಸಾಹಸಕಾರ್ಯವನ್ನು ಪ್ರಶಂಸಿಸುತ್ತಲೂ ಇದ್ದರು. ಮತ್ತೆ ಕೆಲವರು ಕೋಪಿಷ್ಠರಾಗಿದ್ದ ರಾಜರನ್ನು ಸಮಾಧಾನಪಡಿಸುವುದರಲ್ಲಿ ನಿರತರಾಗಿದ್ದರು. ಕೆಲವರು ಯಾವ ಪಕ್ಷವನ್ನೂ ಸೇರದೇ ತಟಸ್ಥರಾಗಿದ್ದರು.

ವಾಸುದೇವನಾರೆಂಬುದನ್ನು ತಿಳಿದಿದ್ದ ಋಷಿ-ಮಹರ್ಷಿಗಳೆಲ್ಲರೂ ಮಹಾನುಭಾವನಾದ ಶ್ರೀಕೃಷ್ಣನನ್ನು ಶ್ಲಾಘಿಸುತ್ತಾ ಹೊರಟುಹೋದರು. ಮಹಾತ್ಮರಾದ ಬ್ರಾಹ್ಮಣರೂ-ಪರಾಕ್ರಮಿಗಳಾದ ರಾಜರೂ ಶ್ರೀಕೃಷ್ಣನನ್ನು ಬಹುವಾಗಿ ಪ್ರಶಂಸಿಸಿದರು.

ಯುಧಿಷ್ಠಿರಸಾರ್ವಭೌಮನು ತನ್ನ ತಮ್ಮಂದಿರನ್ನು ಕರೆದು ಶಿಶುಪಾಲನ ಉತ್ತರಕ್ರಿಯೆಗಳನ್ನು ಯಥಾಶಾಸ್ತ್ರವಾಗಿ ನೆರವೇರಿಸುವಂತೆ ಆಜ್ಞಾಪಿಸಿದನು. ಭೀಮಾರ್ಜುನ-ನಕುಲ-ಸಹದೇವರು ಅಣ್ಣನ ಮಾತಿನಂತೆ ಶಿಶುಪಾಲನ ಉತ್ತರಕ್ರಿಯೆಗಳನ್ನು ನೆರವೇರಿಸಿದರು. ಅನಂತರದಲ್ಲಿ ಸಕಲ

ರಾಜರ ಸಮ್ಮುಖದಲ್ಲಿಯೇ ಯುಧಿಷ್ಠಿರನು ಶಿಶುಪಾಲನ ಮಗನಿಗೆ ಚೇದಿರಾಜ್ಯದ ಪಟ್ಟಾಭಿಷೇಕವನ್ನು ಮಾಡಿದನು.

ಕುಂತಿಯ ಪುತ್ರನಾದ, ವಿಪುಲವಾದ ಓಜಸ್ಸಿನಿಂದ ಕೂಡಿದ್ದ ಧರ್ಮರಾಜನು ಆರಂಭಿಸಿದ್ದ ಆ ಮಹಾಕ್ರತುವು ಸರ್ವಸಮೃದ್ಧವಾಗಿಯೂ, ಯುವಕರಿಗೆ ಪ್ರೀತಿಕರವಾಗಿಯೂ ಇದ್ದಿತು. ಶುಭಮುಹೂರ್ತದಲ್ಲಿ ಆರಂಭವಾದ ರಾಜಸೂಯಯಾಗವು ನಿರ್ವಿಘ್ನವಾಗಿ ಮುಗಿಯಿತು. ಸುವರ್ಣನಾಣ್ಯಗಳಿಂದಲೂ, ಧಾನ್ಯಗಳಿಂದಲೂ ಅದು ಸಮೃದ್ಧವಾಗಿದ್ದಿತು. ನಾನಾವಿಧವಾದ ಭಕ್ಷ್ಯ-ಭೋಜನಗಳೂ, ಆಹಾರಪದಾರ್ಥಗಳೂ ಸಮೃದ್ಧವಾಗಿ ಅದರ ಮೇಲ್ವಿಚಾರಕನು ಸಾಕ್ಷಾತ್ ಶ್ರೀಕೃಷ್ಣನೇ ಆಗಿದ್ದನು. ಶಿಶುಪಾಲನ ವಧೆಯ ನಂತರ ಉಳಿದಿದ್ದ ಕೆಲವು ಉಪಕರ್ಮಗಳನ್ನು ಮುಗಿಸಿ ಯುಧಿಷ್ಠಿರನು ರಾಜಸೂಯಯಾಗವನ್ನು ಸಮಾಪ್ತಿಗೊಳಿಸಿದನು. ಶಾರ್ಙ್ಗ-ಚಕ್ರ-ಗದಾಧರನಾದ, ಭಗವಂತನಾದ ಶೌರಿಯೇ ಕಡೆಯವರೆಗೂ ಆ ಯಾಗದ ರಕ್ಷಕನಾಗಿದ್ದನು.

ಯುಧಿಷ್ಠಿರನು ಅವಭೃಥಸ್ನಾನವನ್ನು ಮಾಡಿದನಂತರ ಕ್ಷತ್ರಿಯ ರಾಜರೆಲ್ಲರೂ ಯುಧಿಷ್ಠಿರನ ಸಮೀಪಕ್ಕೆ ಬಂದು ಹೇಳಿದರು :

"ಧರ್ಮಜ! ನೀನೀಗ ವಿಶೇಷವಾದ ಅಭಿವೃದ್ಧಿಯನ್ನು ಹೊಂದಿರುವೆ. ಚಕ್ರವರ್ತಿಯ ಪದವಿಯನ್ನು ಹೊಂದಿರುವೆ. ಅಜಮೀಢವಂಶದ ಕೀರ್ತಿಯು ನಿನ್ನಿಂದ ಸಂವರ್ಧಿತವಾಗಿದೆ. ನೀನು ಈ ರಾಜಸೂಯಯಾಗವನ್ನು ಮಾಡಿರುವುದರಿಂದ ಧರ್ಮಪಾಲನೆಯನ್ನು ಮಾಡಿದಂತಾಗಿದೆ. ಇದರಿಂದ ನಿನಗೆ ಅಪಾರವಾದ ಕೀರ್ತಿ-ಯಶಸ್ಸುಗಳು ಲಭಿಸಿವೆ. ಅತಿಥಿಗಳಾಗಿ ಬಂದ ನಮ್ಮನ್ನು ಮನಸ್ತೃಪ್ತಿಯಾಗುವಂತೆ ನೀನು ಸತ್ಕರಿಸಿರುವೆ. ನಾವಿನ್ನು ನಮ್ಮ ದೇಶಗಳಿಗೆ ತೆರಳುತ್ತೇವೆ. ನಮಗೆ ಅನುಜ್ಞೆಯನ್ನು ಕೊಡು."

ಧರ್ಮಜನು ಹೀಗೆ ಹೇಳಿದ ರಾಜರನ್ನು ಪುನಃ ವಸ್ತ್ರಾಭರಣ-ಪಾರಿತೋಷಕಗಳನ್ನು ಕೊಟ್ಟು ಪುರಸ್ಕರಿಸಿ, ತನ್ನ ಅನುಜರನ್ನು ಕರೆದು ಹೇಳಿದನು :

"ನಮ್ಮ ಮೇಲಿನ ಪ್ರೀತಿ-ವಿಶ್ವಾಸಗಳಿಂದ ರಾಜಸೂಯಯಾಗಕ್ಕೆ

ದಯಮಾಡಿಸಿರುವ ಈ ರಾಜರು ಈಗ ತಮ್ಮ-ತಮ್ಮ ದೇಶಗಳಿಗೆ ಹೊರಡುವ ಇಚ್ಛೆಯುಳ್ಳವರಾಗಿದ್ದಾರೆ. ಇವರೆಲ್ಲರನ್ನೂ ನಮ್ಮ ದೇಶದ ಗಡಿಯವರೆಗೂ ಬೀಳ್ಕೊಟ್ಟು ಬನ್ನಿರಿ."

ಧರ್ಮಜನ ಆಜ್ಞೆಯಂತೆ ಭೀಮಾರ್ಜುನಾದಿಗಳಲ್ಲಿ ಒಬ್ಬೊಬ್ಬರೂ ಒಬ್ಬೊಬ್ಬ ರಾಜನನ್ನು ಹಿಂಬಾಲಿಸಿ ಹೊರಟರು. ಧೃಷ್ಟದ್ಯುಮ್ನನು ವಿರಾಟನನ್ನೂ, ಧನಂಜಯನು ಯಜ್ಞಸೇನನನ್ನೂ, ಭೀಮಸೇನನು ಭೀಷ್ಮ-ಧೃತರಾಷ್ಟ್ರರನ್ನೂ, ಸಹದೇವನು ದ್ರೋಣಾಶ್ವತ್ಥಾಮರನ್ನೂ, ನಕುಲನು ಸಪುತ್ರನಾದ ಸುಬಲನನ್ನೂ, ದ್ರೌಪದಿಯ ಮತ್ತು ಸುಭದ್ರೆಯ ಮಕ್ಕಳು ಪರ್ವತೀಯ ಮಹಾರಥರನ್ನೂ ಹಿಂಬಾಲಿಸಿ ಹೊರಟರು. ಯಜ್ಞಕ್ಕೆ ಆಗಮಿಸಿದ ಸಾವಿರಾರು ಬ್ರಾಹ್ಮಣರೂ ಸತ್ಕಾರವನ್ನು ಹೊಂದಿ ತಮ್ಮ-ತಮ್ಮ ಗ್ರಾಮಗಳಿಗೆ ಹೊರಟರು.

ರಾಜಸೂಯಯಾಗಕ್ಕೆ ಬಂದಿದ್ದವರೆಲ್ಲರೂ ತಮ್ಮ-ತಮ್ಮ ದೇಶಗಳಿಗೆ ತೆರಳಿದನಂತರ, ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೇಳಿದನು :

"ಕುರುಕುಲಾವತಂಸ! ನಿನ್ನ ಅನುಜ್ಞೆಯನ್ನು ಪಡೆದು ನಾನೂ ದ್ವಾರವತಿಗೆ ತೆರಳಲು ಇಚ್ಛಿಸಿರುವೆನು. ಅದೃಷ್ಟಬಲದಿಂದ ನೀನು ಮಹಾಕ್ರತುವೆನಿಸಿದ ರಾಜಸೂಯಯಾಗವನ್ನು ನಿರ್ವಿಘ್ನವಾಗಿ ಪೂರೈಸಿದೆ."

ಹೀಗೆ ಹೇಳಿದ ಶ್ರೀಕೃಷ್ಣನಿಗೆ ಯುಧಿಷ್ಠಿರನು ದೈನ್ಯಭಾವದಿಂದ ಉತ್ತರಿಸಿದನು :

"ಕೃಷ್ಣ! ನಿನ್ನ ಕರುಣೆಯಿಂದಾಗಿ ನಾನೀ ಯಾಗವನ್ನು ಪೂರೈಸಿದೆನು. ನಿನ್ನ ಅನುಗ್ರಹದ ಕಾರಣದಿಂದಲೇ ಈ ಭೂಮಂಡಲದ ರಾಜರು ನನ್ನ ಸಾರ್ವಭೌಮತ್ವವನ್ನು ಒಪ್ಪಿ, ಈ ಯಾಗಕ್ಕೆ ಕಪ್ಪ-ಕಾಣಿಕೆಗಳ ಸಮೇತರಾಗಿ ಬಂದರು. ಮಾಧವ! ನಿನ್ನ ಸನ್ನಿಧಾನವಿಲ್ಲದಿದ್ದರೆ ನನ್ನ ಹೃದಯವು ವಿಕಸಿತವಾಗುವುದಿಲ್ಲ. ಹೀಗಿರುವಾಗ ನೀನು ನನ್ನನ್ನು ಬಿಟ್ಟು ಹೊರಡಲು ನಾನು ಹೇಗೆ ತಾನೇ ಅನುಮತಿಯನ್ನೀಯಲಿ? ಆದರೆ ನೀನು ದ್ವಾರವತಿಗೆ ಹೋಗಿಯೇ ತೀರಬೇಕಾಗಿದೆ. ಅದನ್ನೂ ನಾನು ಇಲ್ಲವೆನ್ನಲಾರೆ ; ಕೇಶವ!"

ಯುಧಿಷ್ಠಿರನು ಹೀಗೆ ಹೇಳಿದನಂತರ ಶ್ರೀಕೃಷ್ಣನು ಕುಂತಿಯ ಸಮೀಪಕ್ಕೆ ತೆರಳಿ ನಮಸ್ಕರಿಸಿ ಹೇಳಿದನು :

"ಅತ್ತೆ! ನಿನ್ನ ಮಕ್ಕಳೀಗ ಸಾರ್ವಭೌಮತ್ವವನ್ನು ಪಡೆದಿರುತ್ತಾರೆ. ಇವರು ಅಪಾರವಾದ ಐಶ್ವರ್ಯವನ್ನೂ ಪಡೆದಿರುವರಲ್ಲದೇ – ಎಲ್ಲೆಡೆಗಳಲ್ಲಿಯೂ ವಿಜಯಿಗಳಾಗಿಯೂ ಬಂದಿರುತ್ತಾರೆ. ಇದರಿಂದ ನೀನು ಸಂತುಷ್ಟಳಾಗು. ತಾಯೇ! ನಿನ್ನ ಆಜ್ಞೆಯನ್ನು ಪಡೆದು ನಾನು ದ್ವಾರವತಿಗೆ ಹೋಗಿಬರಲು ಇಚ್ಛಿಸುತ್ತೇನೆ."

ಕುಂತಿಯ ಅನುಜ್ಞೆಯನ್ನು ಪಡೆದು ಶ್ರೀಕೃಷ್ಣನು ದ್ರೌಪದೀ-ಸುಭದ್ರೆಯರನ್ನೂ ಕಂಡು ಅವರಿಂದಲೂ ಬೀಳ್ಕೊಂಡವನಾಗಿ, ಅಂತಃಪುರದಿಂದ ಹೊರಕ್ಕೆ ಬಂದು, ತನ್ನ ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಬ್ರಾಹ್ಮಣರಿಗೆ ನಮಿಸಿ, ಆಶೀರ್ವಾದಗಳನ್ನು ಪಡೆದು ಪ್ರಯಾಣಕ್ಕೆ ಸಿದ್ಧನಾದನು.

ಆ ಸಮಯಕ್ಕೆ ಸರಿಯಾಗಿ ಶ್ರೀಕೃಷ್ಣನ ಸಾರಥಿಯಾದ ದಾರುಕನು ಮೇಘವರ್ಣದ, ನಾನಾವಿಧವಾದ ಕಲಾಕೃತಿಗಳಿಂದ ಕೂಡಿದ್ದ ದಿವ್ಯರಥದೊಡನೆ ಬಂದನು. ಗರುಡಧ್ವಜಯುಕ್ತವಾದ ರಥವು ಬಂದೊಡನೆಯೇ ಶ್ರೀಕೃಷ್ಣನು ರಥವನ್ನು ಪ್ರದಕ್ಷಿಣೆಮಾಡಿ ಆರೋಹಣ ಮಾಡಿದನು. ಮಂಗಳಾಶಾಸನಗಳೊಡನೆ ರಥವು ಹೊರಟಿತು. ಧರ್ಮಜನು ತನ್ನ ಅನುಜರಿಂದೊಡಗೂಡಿ ಕಾಲ್ನಡಿಗೆಯಲ್ಲಿಯೇ ರಥವನ್ನು ಹಿಂಬಾಲಿಸಿ ಹೊರಟನು. ಸ್ವಲ್ಪ ದೂರ ಪ್ರಯಾಣಮಾಡಿದನಂತರ ಶ್ರೀಕೃಷ್ಣನು ರಥವನ್ನು ನಿಲ್ಲಿಸಿ ಯುಧಿಷ್ಠಿರನಿಗೆ ಹೇಳಿದನು :

**ಅಪ್ರಮತ್ತಃ ಸ್ಥಿತೋ ನಿತ್ಯಂ ಪ್ರಜಾಃ ಪಾಹಿ ವಿಶಾಮ್ಪತೇ ।**
**ಪರ್ಜನ್ಯಮಿವ ಭೂತಾನಿ ಮಹಾದ್ರುಮಮಿವ ದ್ವಿಜಾಃ ।**
**ಬಾನ್ಧವಾಸ್ತ್ವೋಪಜೀವನ್ತು ಸಹಸ್ರಾಕ್ಷಮಿವಾಮರಾಃ ॥೬೫॥**

"ಯುಧಿಷ್ಠಿರ! ಪ್ರಮತ್ತನಾಗದೇ, ಮೋಹವಶನಾಗದೇ ಪ್ರಜೆಗಳನ್ನು ಸಂರಕ್ಷಣೆಮಾಡು. ಪ್ರಜೆಗಳ ಹಿತವೇ ರಾಜನ ಹಿತ. ಸಕಲಚರಾಚರ ಪ್ರಾಣಿಗಳೂ ಪರ್ಜನ್ಯನನ್ನು (ಮಳೆಯನ್ನು) ಆಶ್ರಯಿಸಿ ಬಾಳುವಂತೆ– ಹಕ್ಕಿಗಳು ದೊಡ್ಡ ಮರಗಳನ್ನಾಶ್ರಯಿಸಿ ಸುಖದಿಂದಿರುವಂತೆ–ಸಹಸ್ರಾಕ್ಷ

ನನ್ನು ಆಶ್ರಯಿಸಿ ದೇವತೆಗಳು ಸುಖವಾಗಿರುವಂತೆ–ನಿನ್ನನ್ನೇ ಆಶ್ರಯಿಸಿರುವ ನಿನ್ನ ಬಂಧುಗಳೂ ಪ್ರಜೆಗಳೂ ಸುಖದಿಂದಿರಲಿ."

ವಾಸುದೇವನು ಇವೇ ಮುಂತಾಗಿ ಹಿತವಚನಗಳನ್ನು ಹೇಳಿದನಂತರ ಯುಧಿಷ್ಠಿರನನ್ನು ಇಂದ್ರಪ್ರಸ್ಥಕ್ಕೆ ಹಿಂದಿರುಗುವಂತೆ ಹೇಳಿ, ತಾನು ದ್ವಾರವತಿಗೆ ತೆರಳಿದನು. ಯುಧಿಷ್ಠಿರನು ವಾಸುದೇವನನ್ನೂ, ವಾಸುದೇವನ ಹಿತವಚನಗಳನ್ನೂ ಬಾರಿ-ಬಾರಿಗೂ ಸ್ಮರಿಸುತ್ತಾ ಅನುಜರೊಡನೆ ಅರಮನೆಯನ್ನು ಸೇರಿದನು."

ರಾಜಸೂಯಯಾಗಕ್ಕೆ ಬಂದ ಅತಿಥಿಗಳೆಲ್ಲರೂ ಹೊರಟುಹೋದ ನಂತರ ದುರ್ಯೋಧನ ಮತ್ತು ಅವನ ಸೋದರಮಾವ ಶಕುನಿ–ಇಬ್ಬರು ಮಾತ್ರ ಯುಧಿಷ್ಠಿರನ ಅರಮನೆಯಲ್ಲಿಯೇ ಇದ್ದರು."

ಳಃನೆಯ ಅಧ್ಯಾಯವು ಮುಗಿಯಿತು.

ಳ೬ನೆಯ ಅಧ್ಯಾಯ ದ್ಯೂತಪರ್ವ

## ವ್ಯಾಸರ ಭವಿಷ್ಯವಾಣಿಯಿಂದ ಯುಧಿಷ್ಠಿರನ ಚಿಂತೆ : ಸಮತ್ವಪೂರ್ವಕವಾದ ರಾಜ್ಯಭಾರಮಾಡಲು ಪ್ರತಿಜ್ಞೆ

"ಪಾರಿಕ್ಷಿತ! ಕಷ್ಟಸಾಧ್ಯವಾದ ರಾಜಸೂಯಯಾಗವು ಮುಗಿದನಂತರ ಶಿಷ್ಯಸಮೇತರಾದ ವ್ಯಾಸರು ಹೋಗಿಬರುವೆನೆಂದು ಹೇಳಲು ಯುಧಿಷ್ಠಿರನ ಬಳಿಗೆ ಬಂದರು. ವ್ಯಾಸರನ್ನು ನೋಡಿದೊಡನೆಯೇ ಯುಧಿಷ್ಠಿರನು ಆಸನದಿಂದ ಮೇಲೆದ್ದು, ತನ್ನ ತಮ್ಮಂದಿರೊಡನೆ ಮುನಿಗಳನ್ನು ಸ್ವಾಗತಿಸಿ, ಅರ್ಘ್ಯ-ಪಾದ್ಯಾದಿಗಳಿಂದ ಸತ್ಕರಿಸಿ, ಸ್ವರ್ಣಮಯವಾದ ಆಸನದಲ್ಲಿ ಮಹರ್ಷಿಗಳನ್ನು ಕುಳ್ಳಿರಿಸಿದನು.

ವ್ಯಾಸರು ಸುಖಾಸನದಲ್ಲಿ ಶಿಷ್ಯರೊಡನೆ ಉಪವಿಷ್ಟರಾದನಂತರ, ಯುಧಿಷ್ಠಿರನನ್ನೂ, ಅವನ ಸಹೋದರರನ್ನೂ ಕುಳಿತುಕೊಳ್ಳುವಂತೆ ಹೇಳಿದರು. ಮುತ್ತಾತನ ಮಾತಿನಂತೆ ಪಾಂಡವರು ಕುಳಿತನಂತರ ವ್ಯಾಸರು ಯುಧಿಷ್ಠಿರನನ್ನು ಉದ್ದೇಶಿಸಿ ಹೇಳಿದರು : "ಕುಂತೀಪುತ್ರ! ನೀನು ಅದೃಷ್ಟಶಾಲಿಯಪ್ಪಾ, ಬಹಳ ಕಷ್ಟಸಾಧ್ಯವಾದ ಸಾರ್ವಭೌಮಪದವಿಯನ್ನು ಪಡೆದಿರುವೆ. ಕುರುವಂಶದ ಅರಸರೆಲ್ಲರೂ ನಿನ್ನಿಂದ ಕೀರ್ತಿವಂತರಾದರು.

ಸಾರ್ವಭೌಮ! ರಾಜಸೂಯಯಾಗಕ್ಕಾಗಿ ಬಂದ ನಾನು ನಿನ್ನಿಂದ ವಿಶೇಷವಾಗಿ ಸತ್ಕರಿಸಲ್ಪಟ್ಟು ಸಂತುಷ್ಟನಾಗಿರುವೆನು. ನಾನಿನ್ನು ನಿನ್ನ ಅನುಜ್ಞೆಯನ್ನು ಪಡೆದು ಹೊರಡಲಿಚ್ಛಿಸಿರುವೆನು."

ಹೀಗೆ ಹೇಳಿದ ಶ್ಯಾಮಲವರ್ಣದ ಕೃಷ್ಣದ್ವೈಪಾಯನರ ಪಾದಗಳಿಗೆ ಯುಧಿಷ್ಠಿರನು ನಮಿಸಿ ಹೇಳಿದನು :



"ಮಹರ್ಷಿಗಳೇ! ನನಗೊಂದು ಸಂಶಯವು ಮೂಡಿದೆ. ಈ ಸಂಶಯದ ನಿವಾರಣಾಸಾಮರ್ಥ್ಯವು ನಿಮಗೊಬ್ಬರಿಗಲ್ಲದೇ ಮತ್ತಾರಿಗೂ ಇರುವುದಿಲ್ಲ. ಭೂತ-ಭವಿಷ್ಯದ್ವರ್ತಮಾನಗಳನ್ನೂ ತಿಳಿದಿರುವ ಮಹಾನುಭಾವರಾದ ನೀವು ನನಗುಂಟಾಗಿರುವ ಸಂಶಯವನ್ನು ನಿವಾರಣೆಮಾಡುವಿರೆಂಬ ಭರವಸೆಯಿಂದ ಕೇಳುತ್ತಿದ್ದೇನೆ.

ಹಿಂದೊಮ್ಮೆ ಮಹರ್ಷಿಗಳಾದ ನಾರದರು ರಾಜಸೂಯಯಾಗದ ಶುಭಾಶುಭಗಳನ್ನು ಪ್ರಸ್ತಾಪಮಾಡುತ್ತಾ, ರಾಜಸೂಯಯಾಗದ ಫಲವಾಗಿ

ಪೃಥ್ವಿಗೆ ಸಂಬಂಧಿಸಿದ, ಅಂತರಿಕ್ಷಕ್ಕೆ ಸಂಬಂಧಿಸಿದ ಮತ್ತು ದೇವಲೋಕಕ್ಕೆ ಸಂಬಂಧಿಸಿದ ಮೂರು ವಿಧವಾದ ಉತ್ಪಾತಗಳುಂಟಾಗುತ್ತವೆಯೆಂದು ಹೇಳಿದ್ದರು. ಈಗ ನಡೆದ ಶಿಶುಪಾಲನ ವಧೆಯಿಂದಾಗಿ ಒಂದು ಉತ್ಪಾತವು ಮುಗಿಯಿತೆಂದು ಭಾವಿಸಬಹುದೇ?"

ಜನಮೇಜಯ! ಧರ್ಮರಾಜನ ಆ ಮಾತುಗಳನ್ನು ಕೇಳಿ ಪ್ರಭುಗಳಾದ, ಪರಾಶರರ ಮಕ್ಕಳಾದ, ವೇದಗಳನ್ನು ವಿಭಾಗಿಸಿ ವ್ಯಾಸರೆಂದು ಪ್ರಸಿದ್ಧರಾದ ಕೃಷ್ಣದ್ವೈಪಾಯನರು ರಾಜನಿಗೆ ಹೇಳಿದರು :

**ತ್ರಯೋದಶ ಸಮಾ ರಾಜನ್ನುತ್ಪಾತಾನಾಂ ಫಲಂ ಮಹತ್ ।**
**ಸರ್ವಕ್ಷತ್ರವಿನಾಶಾಯ ಭವಿಷ್ಯತಿ ವಿಶಾಮ್ಪತೇ ॥೧೧॥**

**ತ್ವಾಮೇಕಂ ಕಾರಣಂ ಕೃತ್ವಾ ಕಾಲೇನ ಭರತರ್ಷಭ ।**
**ಸಮೇತಂ ಪಾರ್ಥಿವಂ ಕ್ಷತ್ರಂ ಕ್ಷಯಂ ಯಾಸ್ಯತಿ ಭಾರತ ।**
**ದುರ್ಯೋಧನಾಪರಾಧೇನ ಭೀಮಾರ್ಜುನಬಲೇನ ಚ ॥೧೨॥**

"ಧರ್ಮಜ! ಉತ್ಪಾತಗಳು ಯಾವಾಗಲೂ ಹದಿಮೂರು ವರ್ಷಗಳ ಕಾಲ ನಾನಾವಿಧವಾದ ದುಷ್ಫಲಗಳನ್ನು ಕೊಡುತ್ತವೆ. ಕ್ಷತ್ರಿಯವಂಶದ ವಿನಾಶಕ್ಕೂ ಇದೇ ಕಾರಣವಾಗುತ್ತದೆ. ಮುಂದೆ ಕೆಲವು ದಿನಗಳಲ್ಲಿ ಅಥವಾ ವರ್ಷಗಳಲ್ಲಿ ಮೇದಿನಿಯ ರಾಜರು ನಿನ್ನನ್ನೇ ನಿಮಿತ್ತಮಾಡಿಕೊಂಡು ಪರಸ್ಪರವಾಗಿ ಕಾದಾಡಿ ವಿನಾಶಹೊಂದುವರು. ಇದಕ್ಕೆ ದುರ್ಯೋಧನನ ಪಾಪಬುದ್ಧಿಯೂ ಕಾರಣವಾಗುವುದು. ಭೀಮಾರ್ಜುನರ ಬಾಹುಬಲವೂ ಕ್ಷತ್ರಿಯರ ವಿಧ್ವಂಸನಕ್ಕೆ ಕಾರಣವಾಗುವುದು.

ಧರ್ಮಜ! ಇಂದಿನ ರಾತ್ರಿಯ ಕಡೆಯ ಯಾಮದಲ್ಲಿ ನೀನೊಂದು ಕನಸನ್ನು ಕಾಣುವೆ. ಆ ಕನಸಿನಲ್ಲಿ ನೀಲಕಂಠನಾದ, ತ್ರಿಪುರಧ್ವಂಸಿಯಾದ ಭವನು ಧ್ಯಾನಾಸಕ್ತನಾಗಿರುವುದನ್ನು ಕಾಣುವೆ. ಪರಶಿವನು ವೃಷಭಾರೂಢನಾಗಿರುವನು. ಕೈಯಲ್ಲಿ ಕಪಾಲವಿರುವುದು. ನೋಡಲು ಭಯಂಕರನಾಗಿರುವನು. ದೇವದೇವನಾದ, ಉಮಾಪತಿಯಾದ, ಶೂಲೀ, ಶರ್ವ, ಹರ, ವೃಷ–ಮುಂತಾಗಿ ಅಭಿಧಾನಗಳನ್ನು ಹೊಂದಿರುವ ಪರಮೇಶ್ವರನು ತ್ರಿಶೂಲವನ್ನೂ–ಪಿನಾಕವನ್ನೂ ಧರಿಸಿರುವನು. ಕೃತ್ತಿವಾಸನಾದ, ಕೈಲಾಸಪರ್ವತದ

ಶಿಖರದಂತೆ ಶರೀರಕಾಂತಿಯನ್ನು ಹೊಂದಿರುವ, ವೃಷಭಾರೂಢನಾದ ಶಿವನು ಯಮರಾಜನ ದಿಕ್ಕಾದ ದಕ್ಷಿಣದಿಕ್ಕಿನ ಕಡೆಗೇ ನೆಟ್ಟ ದೃಷ್ಟಿಯುಳ್ಳವನಾಗಿರುವನು.

ಈ ಸ್ವಪ್ನವೂ ಮುಂದೆ ಉಂಟಾಗಬಹುದಾದ ಮಹೋತ್ಪಾತಗಳ ಸೂಚಕವಾಗಿರುವುದು.

**ಮಾ ತತ್ಕೃತೇ ಹ್ಯನುಧ್ಯಾಹಿ ಕಾಲೋ ಹಿ ದುರತಿಕ್ರಮಃ ॥೧೬॥**

ಧರ್ಮಜ! ಇಂತಹ ದುಃಸ್ವಪ್ನವನ್ನು ಕಂಡು ನೀನು ಆತಂಕಗೊಳ್ಳುವ ಅಥವಾ ಭಯಪಡುವ ಕಾರಣವಿಲ್ಲ. ಕಾಲವು ದುರತಿಕ್ರಮವಾದುದು. ಆಗಬೇಕಾದುದು ಆಗಿಯೇ ತೀರುವುದು.

ನಿನಗೆ ಮಂಗಳವಾಗಲಿ. ನಾನಿನ್ನು ಕೈಲಾಸಕ್ಕೆ ಹೋಗಿಬರುವೆನು. ಅಪ್ರಮತ್ತನಾಗಿ ಸ್ಥೈರ್ಯದಿಂದಲೂ ಸಹನೆಯಿಂದಲೂ ರಾಜ್ಯಪಾಲನೆ ಮಾಡು" – ಹೀಗೆಂದು ಹೇಳಿ ವ್ಯಾಸರು ಸಶಿಷ್ಯರಾಗಿ ಕೈಲಾಸಪರ್ವತದ ಕಡೆಗೆ ಪ್ರಯಾಣಮಾಡಿದರು.

ವ್ಯಾಸರು ರಾಜಸೂಯಯಾಗದ ಫಲವೇನೆಂಬುದರ ವಿಷಯವಾಗಿ ಭವಿಷ್ಯವನ್ನು ನುಡಿದರು. ಅವರ ಭವಿಷ್ಯವು ಸುಳ್ಳೇ? ನಿಜವೇ? – ಎಂಬ ಸಂಶಯಕ್ಕೆ ಅವಕಾಶವೇ ಇರಲಿಲ್ಲ. ಧರ್ಮಜನೂ ಮಹರ್ಷಿಗಳ ಮಾತು ನಡೆದೇ ತೀರುವುದೆಂದು ನಿಶ್ಚಯಿಸಿದನು. ಆದರೂ ಉತ್ತಮಪುರುಷನ ಸ್ವಭಾವಕ್ಕೆ ಅನುಗುಣವಾಗಿ ಮುಂದೆ ಸಂಭವಿಸಲಿರುವ ಮಹೋತ್ಪಾತಗಳನ್ನು ತಪ್ಪಿಸಲು ಪ್ರಯತ್ನಿಸಬೇಕೆಂಬ ಇಚ್ಛೆಯುಂಟಾಯಿತು. ಮಹರ್ಷಿಗಳು ಹೇಳಿದ ಮಾತುಗಳನ್ನೇ ಧರ್ಮಜನು ಬಾರಿ-ಬಾರಿಗೂ ಸ್ಮರಿಸಿಕೊಳ್ಳುತ್ತಿದ್ದನು. ದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದನು. ತನ್ನಲ್ಲಿಯೇ ತಾನು ಮಾತನಾಡಿಕೊಳ್ಳುತ್ತಿದ್ದನು :

**ಕಥಂ ತು ದೈವಂ ಶಕ್ಯೇತ ಪೌರುಷೇಣ ಪ್ರಬಾಧಿತುಮ್ ।**
**ಅವಶ್ಯಮೇವ ಭವಿತಾ ಯದುಕ್ತಂ ಪರಮರ್ಷಿಣಾ ॥೨೦॥**

"ಮಹರ್ಷಿಗಳು ಹೇಳಿದ ಮಾತುಗಳು ಕಾರ್ಯರೂಪಕ್ಕೆ ಬಂದೇ

ತೀರುವುವು. ಮನುಷ್ಯಪ್ರಯತ್ನದಿಂದ ದೈವಿಕವಾದ ದುರ್ವಿಧಿಯನ್ನು ತಪ್ಪಿಸುವ ಸಾಮರ್ಥ್ಯವು ಯಾರಿಗೆ ತಾನೇ ಇರುವುದು? ಆದರೂ...."

ಮನಸ್ಸಿನಲ್ಲಿ ಏನನ್ನೋ ನಿಶ್ಚಯಿಸಿ ತನ್ನ ಸಹೋದರರನ್ನು ಕರೆಯಿಸಿ ಹೇಳಿದನು:

"ಸೋದರರೇ! ಕೃಷ್ಣದ್ವೈಪಾಯನರು ರಾಜಸೂಯಯಾಗದ ಫಲದ ವಿಷಯವಾಗಿ ಏನು ಹೇಳಿದರೆಂಬುದನ್ನು ನೀವೆಲ್ಲರೂ ಕೇಳಿಯೇ ಇದ್ದೀರಿ. ಅವರ ಮಾತುಗಳನ್ನು ಕೇಳಿದನಂತರ ನಾನು ಈ ರೀತಿಯಾಗಿ ನಿಶ್ಚಯ ಮಾಡಿರುತ್ತೇನೆ. ಮುಂದೆ ಕ್ಷತ್ರಿಯರೆಲ್ಲರ ವಿನಾಶಕ್ಕೆ ಕಾರಣನಾಗಲಿರುವ ನಾನು ಇಂದೇ ಅಸುವನ್ನು ತೊರೆಯುತ್ತೇನೆ. ನನ್ನನ್ನೇ ಕಾರಣವನ್ನಾಗಿ ಮಾಡಿ ಕ್ಷತ್ರಿಯರೆಲ್ಲರ ಧ್ವಂಸವಾಗಬೇಕೆಂದು ದೈವವು ನಿಶ್ಚಯಿಸಿದೆಯಾದರೆ ನಾನೇಕಿನ್ನು ಉಳಿಯಬೇಕು?"

ಧರ್ಮಜನ ಮಾತುಗಳನ್ನು ಕೇಳಿ ಅರ್ಜುನನು ಹೇಳಿದನು:

"ಮಹಾರಾಜ! ಬುದ್ಧಿನಾಶಕವಾದ, ಕಲ್ಮಷದಿಂದ ಕೂಡಿದ, ಮಹಾಪಾಪಕರವಾದ ನಿನ್ನೀ ನಿಶ್ಚಯವನ್ನು ದೂರಮಾಡು. ಅಧೀರನಾಗ ಬೇಡ. ಸ್ಥೈರ್ಯದಿಂದಿದ್ದು ಇಂತಹ ಸಮಯದಲ್ಲಿ ಯೋಗ್ಯಮಾರ್ಗವಾವು ದೆಂಬುದನ್ನು ವಿವೇಕದಿಂದ ಪರಿಶೀಲಿಸಿ, ಆ ಮಾರ್ಗದಲ್ಲಿ ನಡೆಯುವುದು ಸೂಕ್ತವಾಗಿದೆ. ಆತ್ಮಹತ್ಯವು ಮಹಾಪಾಪಕರವಾದುದು."

ಧರ್ಮಜನು ಅರ್ಜುನನ ಮಾತುಗಳನ್ನು ಕೇಳಿದವನಾಗಿ ಪುನಃ ಕೆಲವು ಕ್ಷಣಗಳು ಯೋಚಿಸಿ ಅನುಜರನ್ನು ಕುರಿತು ಹೇಳಿದನು:

"ಅರ್ಜುನ! ಹಾಗಾದರೆ ನನ್ನೀ ಪ್ರತಿಜ್ಞೆಯನ್ನು ಕೇಳಿರಿ. ಇನ್ನು ಮುಂದೆ ಹದಿಮೂರು ವರ್ಷಗಳ ಕಾಲ ನಾನು ಯಾವ ಕಾರಣಕ್ಕಾಗಿ ಜೀವಿಸಿರಬೇಕಾಗಿದೆಯೋ ತಿಳಿಯದು. ಆದರೂ ಜೀವಿಸಿರಬೇಕಾದುದು ಅನಿವಾರ್ಯ.

ನ ಪ್ರವಕ್ಷ್ಯಾಮಿ ಪರುಷಂ ಭ್ರಾತೄನನ್ಯಾಂಶ್ಚ ಪಾರ್ಥಿವಾನ್ ।
ಸ್ಥಿತೋ ನಿದೇಶೇ ಜ್ಞಾತೀನಾಂ ಯೋಕ್ಷ್ಯೇ ತತ್ಸಮುದಾಹರನ್ ॥೨೭॥

ಏವಂ ಮೇ ವರ್ತಮಾನಸ್ಯ ಸ್ವಸುತೇಷ್ವಿತರೇಷು ಚ ।
ಭೇದೋ ನ ಭವಿತಾ ಲೋಕೇ ಭೇದಮೂಲೋ ಹಿ ವಿಗ್ರಹಃ ॥೨೮॥

ವಿಗ್ರಹಂ ದೂರತೋ ರಕ್ಷನ್ಪ್ರಿಯಾಣ್ಯೇವ ಸಮಾಚರನ್ ।
ವಾಚ್ಯತಾಂ ನ ಗಮಿಷ್ಯಾಮಿ ಲೋಕೇಷು ಮನುಜರ್ಷಭಾಃ ॥೨೯॥

ಮನುಜಶ್ರೇಷ್ಠರೇ! ನಾನಿನ್ನು ಮುಂದೆ ಸೋದರರಾದ ನಿಮ್ಮ ವಿಷಯದಲ್ಲಿಯೂ–ಮತ್ತಾರ ವಿಷಯದಲ್ಲಿಯೂ ಕಟುವಾದ ಮಾತುಗಳನ್ನಾಡುವುದಿಲ್ಲ. ಪ್ರಪಂಚದ ಯಾವ ರಾಜರನ್ನೂ ನಿಷ್ಠುರಮಾಡುವುದಿಲ್ಲ. ನನ್ನ ಬಂಧು-ಬಾಂಧವರ ಆಜ್ಞಾನುಸಾರವಾಗಿದ್ದುಕೊಂಡು ಧರ್ಮದಿಂದ ರಾಜ್ಯಶಾಸನವನ್ನು ಮಾಡುವೆನು. ನನ್ನ ಮಕ್ಕಳಲ್ಲಿಯೂ, ಬೇರೆಯವರ ಮಕ್ಕಳಲ್ಲಿಯೂ ಭೇದವೆನ್ನೆಣಿಸದೇ ರಾಜ್ಯಪಾಲನೆಯನ್ನು ಮಾಡುತ್ತಿದ್ದರೆ ಯಾರೊಡನೆಯೂ ಯಾವ ವಿಧವಾದ ವೈಮನಸ್ಯಕ್ಕೂ ಅವಕಾಶ ವುಂಟಾಗಲಾರದು. ಎಂತಹ ಸಮಯದಲ್ಲಿಯೂ ಕ್ಷತ್ರಿಯನಾಶಕವಾದ ಯುದ್ಧಕ್ಕೆ ಅವಕಾಶವನ್ನೀಯದೇ ಇತರರಿಗೆ ಹಿತವನ್ನೇ ಮಾಡುತ್ತಿರುವೆನು. ಹೀಗಿರುವುದರಿಂದಲಾದರೂ– 'ಧರ್ಮಜನು ಯುದ್ಧಕ್ಕೆ ಕಾರಣನಾದನೆಂಬ'–ಅಪವಾದವಾದರೂ ತಪ್ಪುವುದು."

ಹಿರಿಯಣ್ಣನ ಮನಸ್ಸಂತೋಷದಲ್ಲಿಯೇ ಆಸಕ್ತರಾಗಿದ್ದ ಭೀಮಾರ್ಜುನಾದಿಗಳು ಧರ್ಮಜನ ಮಾತನ್ನು ಒಪ್ಪಿದರು.

ಧರ್ಮಜನು ಅನುಜರ ಎದುರಿನಲ್ಲಿ ಮೇಲೆ ಹೇಳಿದಂತೆ ಪ್ರತಿಜ್ಞೆಯನ್ನು ಮಾಡಿದನಂತರ ಪಿತೃದೇವತೆಗಳನ್ನೂ, ಇತರ ದೇವತೆಗಳನ್ನೂ ಯಥಾಶಾಸ್ತ್ರವಾಗಿ ಪೂಜಿಸಿದನು. ಅನಂತರ ಐವರೂ ತಮ್ಮ-ತಮ್ಮ ಸೌಧಗಳಿಗೆ ತೆರಳಿದರು.

ಜನಮೇಜಯ! ನಾನು ಹಿಂದೆಯೇ ಹೇಳಿದಂತೆ ರಾಜಸೂಯಯಾಗವು ಮುಗಿದ ಬಳಿಕ ಯಾಗಕ್ಕೆ ಬಂದಿದ್ದ ಸಕಲರಾಜರೂ ಧರ್ಮಜನ ಸತ್ಕಾರವನ್ನು ಸ್ವೀಕರಿಸಿ, ಅವನ ಅನುಮತಿಯನ್ನು ಪಡೆದು ತಮ್ಮ-ತಮ್ಮ ನಗರಗಳಿಗೆ ತೆರಳಿದರು. ಆದರೆ ದುರ್ಯೋಧನ-ಶಕುನಿಗಳು ಮಾತ್ರ ಆ ಭವ್ಯವಾದ

ಸಭಾಮಂದಿರದಲ್ಲಿಯೇ ಇನ್ನೂ ಕೆಲವು ದಿನಗಳು ಅದರ ಸೊಬಗನ್ನು ವೀಕ್ಷಿಸುತ್ತಾ ಕಾಲಕಳೆದರು."

೪೬ನೆಯ ಅಧ್ಯಾಯವು ಮುಗಿಯಿತು.

೪೭ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ದುರ್ಯೋಧನನು ಮಯನಿರ್ಮಿತವಾದ ಸಭಾಭವನವನ್ನು ಸಂದರ್ಶಿಸಿದುದು : ಕೆಲವು ಕಡೆಗಳಲ್ಲಿ ಭ್ರಮೆಯಿಂದ ಅಪಹಾಸ್ಯಕ್ಕೀಡಾದುದು : ಯುಧಿಷ್ಠಿರನ ವೈಭವವನ್ನು ಕಂಡು ದುರ್ಯೋಧನನ ಚಿಂತೆ

"ಜನಮೇಜಯ! ದುರ್ಯೋಧನನು ಮಯನಿರ್ಮಿತವಾದ ಆ ಸಭಾಭವನದಲ್ಲಿಯೇ ಇದ್ದುಕೊಂಡು ಶಕುನಿಯಿಂದ ಕೂಡಿದವನಾಗಿ ಆ ಸುಂದರ ಸಭೆಯ ಒಂದೊಂದು ವಿಭಾಗದ ಸೊಬಗನ್ನೂ ಸಾವಕಾಶ ವಾಗಿಯೂ – ಬಹುಸೂಕ್ಷ್ಮವಾಗಿಯೂ ನೋಡುತ್ತಿದ್ದನು. ಆ ಸಭೆಯಲ್ಲಿದ್ದ ಶಿಲ್ಪಿಯ ದಿವ್ಯವಾದ ಶಿಲ್ಪಚಮತ್ಕಾರಗಳನ್ನು ದುರ್ಯೋಧನನು ನೋಡಿ ಅಚ್ಚರಿಗೊಂಡನು. ಹಾಸ್ತಿನಪುರದಲ್ಲಿ ಅಂತಹ ಸೊಬಗಿನ ಸಭಾಮಂದಿರ ವನ್ನು ದುರ್ಯೋಧನನು ಹಿಂದೆಂದೂ ನೋಡಿರಲಿಲ್ಲ. ಹೀಗೆಯೇ ಮಯನಿರ್ಮಿತವಾದ ಸಭಾಮಂದಿರದ ಸೊಬಗನ್ನು ನೋಡುತ್ತಾ ಬರುತ್ತಿದ್ದಾಗ–ಮಹೀಪತಿಯಾದ, ಧೃತರಾಷ್ಟ್ರನ ಮಗನಾದ ದುರ್ಯೋಧ ನನು ಸಭಾಮಂದಿರದ ಮಧ್ಯಭಾಗದಲ್ಲಿದ್ದ ಸ್ಫಟಿಕಮಯವಾದ ಸ್ಥಳಕ್ಕೆ ಆಗಮಿಸಿ, ಚಚ್ಚೌಕವಾಗಿದ್ದ ಅದು ಸಣ್ಣಕೊಳವೆಂದೂ, ಅಲ್ಲಿ ನೀರಿದೆ ಯೆಂದೂ ಭ್ರಮಿಸಿ, ತನ್ನ ಧೋತ್ರವನ್ನು ಮೇಲೆತ್ತಿ ಕಟ್ಟಿದನು. ಅಲ್ಲಿ ಕಾಲಿಟ್ಟೊಡನೆಯೇ ನೀರಿನಲ್ಲಿ ಮುಖವು ಕಾಣುವಂತೆ ಥಳ-ಥಳಿಸುತ್ತಿದ್ದ ಕಲ್ಲಿನಲ್ಲಿ ಭ್ರಾಂತಿಯಿಂದ ಕೂಡಿದ್ದ ಅವನ ಮುಖದ ಪ್ರತಿಬಿಂಬವು ಕಂಡಿತೇ ಹೊರತು ಅಲ್ಲಿ ನೀರಿರಲಿಲ್ಲ. ಅಂತಹ ಅದ್ಭುತವಾದ ಶಿಲ್ಪಚಾತುರ್ಯವನ್ನು ಕಂಡು ದುರ್ಯೋಧನನಿಗೆ ಸಂತೋಷವಾಗಲಿಲ್ಲ. ತನ್ನ ಅಜ್ಞಾನವನ್ನೂ, ಪಾಂಡವರ ವೈಭವವನ್ನೂ ನೆನೆದು ಬಹಳ ಸಂಕಟ ವಾಯಿತು. ಖಿನ್ನವದನನಾಗಿ ಮುಂದೆ ಹೋಗುತ್ತಿದ್ದಾಗ–ಹಿಂದಿನಂತೆಯೇ

ಮತ್ತೊಂದು ತಟಾಕದ ದೃಶ್ಯವನ್ನು ಕಂಡನು. ರತ್ನಖಚಿತವಾದ ಸ್ಥಳವನ್ನು ನೀರೆಂದು ಒಂದು ಕ್ಷಣದ ಹಿಂದೆ ಭ್ರಮಿಸಿದ ಅನುಭವವಿರುವಾಗ ಆ ತಟಾಕವು ನೀರಿನ ತಟಾಕವೆಂದು ನಿರ್ಧರಿಸಲು ಹೇಗೆತಾನೇ ಸಾಧ್ಯವಾಗುವುದು?



ಧೋತ್ರವನ್ನೂ ಮೇಲಕ್ಕೆ ಕಟ್ಟದೆಯೇ ಅದೂ ರತ್ನಖಚಿತವಾದ ಪ್ರದೇಶವೆಂದೇ ಭಾವಿಸಿ ಕಾಲಿಟ್ಟೊಡನೆಯೇ, ಅದು ನಿಶ್ಚಯವಾದ ಕಮಲ ಪುಷ್ಪಗಳಿಂದ ಕೂಡಿದ ಸರೋವರವಾಗಿದ್ದು–ದುರ್ಯೋಧನನು ಮುಗ್ಗರಿಸಿ ಸರೋವರದೊಳಗೆ ಬಿದ್ದನು. ವಸ್ತ್ರಗಳೆಲ್ಲವೂ ತೋಯ್ದುಹೋದುವು. ಅವನ ದುರವಸ್ಥೆಯನ್ನು ಕಂಡು ಅನತಿದೂರದಲ್ಲಿಯೇ ನಿಂತಿದ್ದ ಭೀಮಾರ್ಜುನ-ನಕುಲ-ಸಹದೇವರೂ ಮತ್ತು ಅಲ್ಲಲ್ಲಿ ನಿಂತಿದ್ದ ಸೇವಕರೂ ಗಟ್ಟಿಯಾಗಿ

ನಗತೊಡಗಿದರು. ರಾಜನ ಆಜ್ಞೆಯಂತೆ ಒಡನೆಯೇ ನೂತನವಸ್ತ್ರಗಳನ್ನು ತಂದು ದುರ್ಯೋಧನನಿಗಿತ್ತರು.

ದುರ್ಯೋಧನನ ಆಗಿನ ಪರಿಸ್ಥಿತಿಯನ್ನು ವಿವರಿಸಲು ಸಾಧ್ಯವೇ ಇಲ್ಲ. ಅವರ ನಗೆಯು ದುರ್ಯೋಧನನ ಮನಸ್ಸಿನ ಉದ್ವೇಗವನ್ನು ಹೆಚ್ಚುಮಾಡಿತು. ತಾತ್ಕಾಲಿಕವಾಗಿ ತನ್ನ ಮನಸ್ಸಿನ ಉದ್ವೇಗವನ್ನು ಹುದುಗಿಸಿಟ್ಟುಕೊಂಡುದು ಮಾತ್ರವಲ್ಲದೇ–ತನ್ನ ದೃಷ್ಟಿಯನ್ನೂ ಅವರ ಕಡೆಗೆ  ಹೊರಳಿಸಲಿಲ್ಲ.

ಸೇವಕರು ತಂದ ನೂತನವಸ್ತ್ರಗಳನ್ನು ಧರಿಸಿ ಮುಂದೆ ನಡೆದಾಗ ದುರ್ಯೋಧನನು ಪುನಃ ಪೇಚಿನಲ್ಲಿ ಸಿಕ್ಕಿದನು. ಅಲ್ಲಿ ಮತ್ತೊಂದು ಸರೋವರವಿದ್ದಿತು. ಅದೂ ನೀರಿನ ಸರೋವರವಿರಬಹುದೆಂದು ಭಾವಿಸಿ ಧೋತ್ರವನ್ನು ಮೇಲೆ ಕಟ್ಟಿ ಜೋಪಾನವಾಗಿ ಕಾಲಿಟ್ಟನು. ಆದರೆ ಅದು ಸರೋವರವಾಗಿರದೇ ನೆಲವಾಗಿದ್ದಿತು. ದುರ್ಯೋಧನನ ಭ್ರಾಂತಿಯನ್ನು ಕಂಡು ಭೀಮಾದಿಗಳು ಪುನಃ 'ಘೊಳ್' ಎಂದು ನಕ್ಕರು.

ಮಾನಧನನಾದ ಸುಯೋಧನನಿಗೆ ಅಂತಹ ಅಪಹಾಸ್ಯವನ್ನು ಸಹಿಸಲಾಗಲಿಲ್ಲ. ಬಹಳ ಸಂಕಟವಾಯಿತು. ಅಲ್ಲಿ ಒಂದು ಕ್ಷಣವೂ ನಿಲ್ಲದೇ ಹೊರಟುಹೋಗಬೇಕೆಂದು ನಿಶ್ಚಯಿಸಿದನು. ಒಡನೆಯೇ ಸಮೀಪದಲ್ಲಿದ್ದ ಬಾಗಿಲಿನ ಕಡೆಗೆ ರಭಸದಿಂದ ನುಗ್ಗಿದನು. 'ಕುರುವಿನ ಮೇಲೆ ಬರೆಯೆಳೆದರೆಂಬ' ನಾಣ್ಣುಡಿಯಂತೆ ಅವನು ಬಾಗಿಲೆಂದು ಭಾವಿಸಿದ್ದುದು ನಿಜವಾದ ಬಾಗಿಲಾಗಿರದೇ ರತ್ನರಾಶಿಗಳಿಂದ ಕೆತ್ತಲ್ಪಟ್ಟ, ಬಾಗಿಲಿನಂತೆಯೇ ತೋರುವ ಗೋಡೆಯಾಗಿದ್ದಿತು. ಕೃತಕವಾದ ಬಾಗಿಲಿಗೆ ಅವನ ತಲೆಯು ಹೊಡೆದು ದುರ್ಯೋಧನನು ಒಂದೆರಡು ಕ್ಷಣಗಳು ಪರಿಭ್ರಮಣ ಹೊಂದಿದನು.

ಖಿನ್ನಮನಸ್ಕನಾಗಿ ಕುಂದಿದ ಮುಖದಿಂದ ಮುಂದೆ ನಡೆದ ದುರ್ಯೋಧನನು ಅದರ ಪಕ್ಕದಲ್ಲಿಯೇ ಇದ್ದ ನಿಜವಾದ ಬಾಗಿಲನ್ನೂ ಕೃತಕವಾದುದೆಂದೇ ಭ್ರಮಿಸಿದನು. ಅದೇ ರೀತಿಯಲ್ಲಿ ಇನ್ನೂ ಅನೇಕ ಕೆತ್ತನೆಯ ಕೆಲಸಗಳನ್ನು ಕಂಡು ದುರ್ಯೋಧನನು ಭ್ರಾಂತನಾದನು. ಮಯನ ಅದ್ಭುತವಾದ ಶಿಲ್ಪಕಲೆಯ ಜಾಲಕ್ಕೆ ದುರ್ಯೋಧನನು ಸಿಕ್ಕಿಬಿದ್ದನು.

ರಾಜಸೂಯಯಾಗದಲ್ಲಿ ಪಾಂಡವರಿಗೆ ಬಂದ ಅತುಲೈಶ್ವರ್ಯವನ್ನೂ, ಸಭಾಮಂದಿರದ ದಿವ್ಯವಾದ ಸೊಬಗನ್ನೂ ನೋಡಿದನಂತರ ಕುರುರಾಜನು ಪಾಂಡವರ ಅನುಮತಿಯನ್ನು ಪಡೆದು ಭಾರವಾದ ಹೃದಯದಿಂದಲೇ ಹಸ್ತಿನೆಯ ಕಡೆಗೆ ಹೊರಟನು."

ವೈಶಂಪಾಯನರು ಕಥೆಯನ್ನು ಮುಂದುವರಿಸುತ್ತಾ ಹೇಳುತ್ತಾರೆ :

"ಜನಮೇಜಯ! ಪಾಂಡವರ ಅಭ್ಯುದಯವನ್ನೂ ಮತ್ತು ಸಭಾಮಂದಿರದಲ್ಲಿ ತನಗುಂಟಾದ ಅಪಮಾನವನ್ನೂ ನೆನೆದು ದುರ್ಯೋಧನನ ಮನಸ್ಸು ಪಾಪಭೂಯಿಷ್ಠವಾಯಿತು. ಪಾಂಡವರು ಆನಂದದಿಂದ ಕಾಲಕಳೆಯುತ್ತಿದ್ದುದು ; ರಾಜರೆಲ್ಲರೂ ವಿನೀತರಾಗಿ ಬಂದು ಪಾಂಡವರಿಗೆ ಕಪ್ಪ-ಕಾಣಿಕೆಗಳನ್ನು ಅರ್ಪಿಸುತ್ತಿದ್ದುದು : ಆಬಾಲವೃದ್ಧ ರಾದಿಯಾಗಿ ಪ್ರಜೆಗಳೆಲ್ಲರೂ ಪಾಂಡವರ ಹಿತದಲ್ಲಿಯೇ ಆಸಕ್ತ ರಾಗಿದ್ದುದು–ಇವೇ ಮುಂತಾದ ತಾನು ಕಂಡ ದೃಶ್ಯಗಳೆಲ್ಲವೂ ದುರ್ಯೋ ಧನನ ಸ್ಮೃತಿಪಥಕ್ಕೆ ಒಂದಾದ ಮೇಲೊಂದು ಬರುತ್ತಿದ್ದುವು. ಅವುಗಳನ್ನು ನೆನೆದಂತೆಲ್ಲಾ ದುರ್ಯೋಧನನ ಮುಖವು ಬಾಡಿ ಬಿಳುಪಾಗುವುದು. ಪಾಂಡವರ ಅತುಲೈಶ್ವರ್ಯ ಮತ್ತು ಸಭಾಮಂದಿರದ ಸೊಬಗು– ಇವುಗಳನ್ನುಳಿದು ಬೇರಾವ ವಿಷಯವೂ ಅವನ ಮನವನ್ನು ಹೊಗಲು ಸಮರ್ಥವಾಗಲಿಲ್ಲ. ಆ ಎರಡು ವಿಷಯಗಳೂ ದುರ್ಯೋಧನನ ಮನಸ್ಸನ್ನು ಯಾವ ರೀತಿಯಲ್ಲಿ ಆವರಿಸಿತ್ತೆಂದರೆ : ಶಕುನಿಯು ಹತ್ತಾರು ಬಾರಿ ದುರ್ಯೋಧನನನ್ನು ಸಂಬೋಧಿಸಿದರೂ ಅದರ ಅರಿವೇ ಅವನಿಗಾಗಲಿಲ್ಲ. ಪಕ್ಕದಲ್ಲಿಯೇ ಇದ್ದ ಶಕುನಿಯೊಡನೆ ಒಂದು ಮಾತನ್ನೂ ಆಡದೇ ಕೌರವನು ಮುಂದೆ ನಡೆದನು. ಹೀಗೆ ಮನೋವಿಕಾರವನ್ನು ಹೊಂದಿದ್ದ ದುರ್ಯೋಧನನನ್ನು ಸಂಬೋಧಿಸಿ ಶಕುನಿಯು ಪುನಃ ಹೇಳಿದನು :

"ದುರ್ಯೋಧನ! ಕೂಗಿದರೂ ಮಾತನಾಡದೇ ಪದೇ-ಪದೇ ನಿಟ್ಟುಸಿರುಬಿಡುತ್ತಾ ಹೋಗುತ್ತಿರುವೆಯೇಕೆ? ಇದಕ್ಕೆ ಕಾರಣವಾದರೂ ಏನು?"

"ಮಾತುಲ! ಅರ್ಜುನನ ಭುಜಬಲ-ಪರಾಕ್ರಮಗಳ ಕಾರಣ

ದಿಂದಾಗಿ ಈ ಅಖಂಡಭೂಮಂಡಲವೂ ಧರ್ಮಜನ ಸಾರ್ವಭೌಮತ್ವಕ್ಕೆ ಒಳಪಟ್ಟಿರುವುದನ್ನೂ–ಧರ್ಮಜನು ಮಾಡಿದ, ಇಂದ್ರನ ಕ್ರತುವಿಗೆ ಸಮನಾದ, ಪರಮಾದ್ಭುತವಾದ ರಾಜಸೂಯಯಾಗವನ್ನೂ ಕಂಡು ಮಾತ್ಸರ್ಯವೆಂಬ ಅಗ್ನಿಯಿಂದ ಅಹರ್ನಿಶಿ ದಹಿಸಲ್ಪಡುತ್ತಿದ್ದೇನೆ. ಬೇಸಿಗೆಯಲ್ಲಿ ಸಣ್ಣ ಕೆರೆಯೊಂದು ಬತ್ತಿಹೋಗುವಂತೆ – ನಾನು ಮಾತ್ಸರ್ಯವೆಂಬ ಸೂರ್ಯನ ತೇಜಸ್ಸಿನಿಂದ ಶೋಷಿತನಾಗುತ್ತಿದ್ದೇನೆ. ಸೌಬಲ! ಶಿಶುಪಾಲನು ಕೃಷ್ಣನಿಂದ ವಧಿಸಲ್ಪಟ್ಟಾಗ ಆ ಮಹಾಸಭೆಯಲ್ಲಿ ಯಾವನೊಬ್ಬನೂ



ಶಿಶುಪಾಲನಿಗೆ ಬೆಂಬಲವಾಗಿ ನಿಲ್ಲಲು ಸಮರ್ಥನಾಗಲಿಲ್ಲ. ಪಾಂಡವರ ಬಲವೆಂಬ ದಾವಾಗ್ನಿಯಿಂದ ತಪ್ತರಾದ ರಾಜರೆಲ್ಲರೂ ಕೃಷ್ಣನು ಮಾಡಿದ ಮಹಾಪರಾಧವನ್ನೂ ಕ್ಷಮಿಸಿಬಿಟ್ಟರು. ಹಾಗಿಲ್ಲದಿದ್ದರೆ ಕೃಷ್ಣನನ್ನು ಸುಮ್ಮನೇ ಬಿಟ್ಟುಬಿಡುತ್ತಿದ್ದರೆ? ವಾಸುದೇವನು ಮಾಡಿದ ಅಯುಕ್ತವಾದ ಆ ಕಾರ್ಯವು ಪಾಂಡುಪುತ್ರರ ಪರಾಕ್ರಮದ ದೆಸೆಯಿಂದಾಗಿ ಸಾಧ್ಯವಾಯಿತು. ಮತ್ತೊಂದು ವಿಷಯವನ್ನು ಗಮನಿಸಿದೆಯಾ? ಮಾತುಲ! ವಿಶ್ವದ ರಾಜರೆಲ್ಲರೂ

ವೈಶ್ಯರಂತೆ ಧರ್ಮಜನಿಗೆ ಅಗಣಿತವಾದ ಕಪ್ಪ-ಕಾಣಿಕೆಗಳನ್ನು ತಂದುಕೊಡುತ್ತಿದ್ದರು. ಧರ್ಮಜನ ಅಂತಹ ರಾಜ್ಯಶ್ರೀಯನ್ನು ಕಂಡು ಮಾತ್ಸರ್ಯದಿಂದ ನನ್ನ ಹೃದಯವು ಬೆಂದುಹೋಗುತ್ತಿದೆ. ದುಃಖಾರ್ಹನಲ್ಲದ ನಾನು ದುಃಖಕ್ಕೆ ಗುರಿಯಾಗಿದ್ದೇನೆ.”

ಒಬ್ಬನ ಅಂಗಾಂಗಗಳು ಬೆಂಕಿಯಿಂದ ಸುಡುತ್ತಿದ್ದರೆ ಎಷ್ಟು ಸಂಕಟವನ್ನು ಅನುಭವಿಸುವನೋ–ಅದಕ್ಕಿಂತಲೂ ಹೆಚ್ಚಿನ ಸಂಕಟವನ್ನು ದುರ್ಯೋಧನನು ಅನುಭವಿಸುತ್ತಿದ್ದನು. ಕ್ಷಣ-ಕ್ಷಣಕ್ಕೂ ದೀರ್ಘವಾದ, ಬಿಸಿಯಾದ ನಿಟ್ಟುಸಿರುಬಿಡುತ್ತಿದ್ದನು. ಅವುಡುಗಳನ್ನು ಕಚ್ಚುತ್ತಿದ್ದನು. ಮಾತ್ಸರ್ಯವೆಂಬ ಅಗ್ನಿಯಿಂದ ಉದ್ಭೂತವಾದ ಹೃದಯವೇದನೆಯನ್ನು ತಾಳಲಾರದೇ ಪುನಃ ಶಕುನಿಯೊಡನೆ ಹೇಳತೊಡಗಿದನು : “ಮಾತುಲ! ನಾನಿನ್ನು ಬದುಕಿರಲಾರೆನು. ಬೆಂಕಿಗೆ ಬಿದ್ದೋ, ವಿಷವನ್ನು ಸೇವಿಸಿಯೋ ಅಥವಾ ಮಡುವಿಗಾದರೂ ಧುಮುಕಿಯೋ ಪ್ರಾಣತ್ಯಾಗಮಾಡುವೆನು.”

ದುರ್ಯೋಧನನು ಮುಂದುವರಿಸಿ ಹೇಳಿದನು :

“ಪ್ರಪಂಚದಲ್ಲಿ ಶೂರನಾದ ಯಾವನು ತಾನೇ ಶತ್ರುವಿನ ಅಭ್ಯುದಯವನ್ನು ನೋಡುತ್ತಾ, ತಾನು ದಾರಿದ್ರ್ಯವನ್ನು ಅನುಭವಿಸುತ್ತಾ ಜೀವಿಸಿರುವನು? ಮಾವ! ನನ್ನ ಶತ್ರುಗಳಲ್ಲಿರುವ ಐಶ್ವರ್ಯವನ್ನು ಕಂಡು ಮಾತ್ಸರ್ಯಪಡುತ್ತಿರುವ ನಾನು ಸ್ತ್ರೀಯೂ ಅಲ್ಲ; ಅಸ್ತ್ರ-ಶಸ್ತ್ರ ಗಳಿಲ್ಲದಿರುವುದರಿಂದ ಪುರುಷನೂ ಅಲ್ಲ. ಸ್ತ್ರೀಯಾಗಿದ್ದರೆ ಸವತಿಯ ಅಭ್ಯುದಯವನ್ನು ಸಹಿಸುವ ಶಕ್ತಿಯಾದರೂ ಇರಬೇಕಾಗಿದ್ದಿತು. ಎಷ್ಟೋ ಸ್ತ್ರೀಯರು ಸಪತ್ನಿಯರ ವಿಷಯದಲ್ಲಿ ಮಾತ್ಸರ್ಯಪಡುವುದಿಲ್ಲ. ಪುರುಷ ನಾಗಿದ್ದಿದ್ದರೆ ಯುದ್ಧಮಾಡಿಯಾದರೂ ಪಾಂಡವರನ್ನು ಪರಾಜಯ ಗೊಳಿಸಬೇಕಾಗಿದ್ದಿತು. ನಪುಂಸಕನೆಂದೂ ಹೇಳಲಾರೆ. ಯುಧಿಷ್ಠಿರನ ಸಾರ್ವಭೌಮತ್ವ, ಅವನಿಗಿರುವ ಅತುಲೈಶ್ವರ್ಯ ಮತ್ತು ಅವನು ಮಾಡಿದ ರಾಜಸೂಯಯಾಗ–ಇವೆಲ್ಲವನ್ನೂ ಕಂಡು ಅಸೂಯೆಪಡದವನು ಯಾವನಿ ದ್ದಾನೆ? ನಾನೊಬ್ಬನೇ ಏಕಾಕಿಯಾಗಿ ನಿಂತು ಯುದ್ಧಮಾಡಿ ಸಾರ್ವಭೌಮತ್ವ ವನ್ನು ಸಂಪಾದಿಸುವ ಪರಾಕ್ರಮವು ನನಗಿಲ್ಲ ಅಥವಾ ನನಗೆ ದಿಗ್ವಿಜಯದಲ್ಲಿ

ನೆರವಾಗುವ ಮಿತ್ರರನ್ನೂ ಕಾಣೆನು. ಈ ಕಾರಣದಿಂದಲೇ ನಾನು ಆತ್ಮಹತ್ಯೆಯನ್ನು ಮಾಡಿಕೊಳ್ಳಲು ನಿಶ್ಚಯಿಸಿದ್ದೇನೆ.

**ದೈವಮೇವ ಪರಂ ಮನ್ಯೇ ಪೌರುಷಂ ಚ ನಿರರ್ಥಕಮ್ ।**
**ದೃಷ್ಟ್ವಾ ಕುನ್ತೀಸುತೇ ಶುದ್ಧಾಂ ಶ್ರಿಯಂ ತಾಮಹತಾಂ ತಥಾ ॥೩೬॥**

ಮಾತುಲ! ಇಂದು ಕುಂತೀಪುತ್ರರು ಪಡೆದಿರುವ ಅಕ್ಷಯವಾದ ವಿಶುದ್ಧವಾದ ಐಶ್ವರ್ಯವನ್ನೂ – ಸಾರ್ವಭೌಮತ್ವವನ್ನೂ ನೋಡಿದರೆ ವಿಧಿಯೇ ದೊಡ್ಡದೆಂದೂ – ಮನುಷ್ಯಪ್ರಯತ್ನಗಳೆಲ್ಲವೂ ನಿರರ್ಥಕವೆಂದೂ ನನಗನ್ನಿಸುತ್ತದೆ. ನಿನಗೆ ತಿಳಿದಿರುವಂತೆಯೇ ಈ ಹಿಂದೆ ನಾನು ಹಲವು ಬಾರಿ ಪಾಂಡವರನ್ನು ವಿನಾಶಮಾಡಲು ಪ್ರಯತ್ನಿಸಿದೆನು. ನನ್ನ ಪ್ರಯತ್ನಗಳೆಲ್ಲವನ್ನೂ ವ್ಯರ್ಥಗೊಳಿಸಿ ಆ ಪಾಂಡುಪುತ್ರರು – ಕಾಸಾರದಲ್ಲಿರುವ ಕಮಲಪುಷ್ಪಗಳಂತೆ – ಅಭಿವೃದ್ಧಿಯನ್ನೇ ಹೊಂದಿದರು.

**ತೇನ ದೈವಂ ಪರಂ ಮನ್ಯೇ ಪೌರುಷಂ ಚ ನಿರರ್ಥಕಮ್ ।**
**ಧಾರ್ತರಾಷ್ಟ್ರಾಶ್ಚ ಹೀಯನ್ತೇ ಪಾರ್ಥಾ ವರ್ಧನ್ತಿ ನಿತ್ಯಶಃ ॥೩೭॥**

ಈ ಕಾರಣದಿಂದಾಗಿ ನಾನು ವಿಧಿಯೇ ಪ್ರಬಲವೆಂಬ – ಪುರುಷ ಪ್ರಯತ್ನವು ನಿರರ್ಥಕವೆಂಬ ನಿಶ್ಚಯಕ್ಕೆ ಬಂದಿರುತ್ತೇನೆ. ಶಕುನಿಯೇ! ಇತ್ತ ಕಡೆಯಲ್ಲಿ ಧೃತರಾಷ್ಟ್ರನ ಮಕ್ಕಳು ದಿನ-ದಿನಕ್ಕೂ ದುರ್ಬಲರಾಗುತ್ತಿದ್ದಾರೆ. ಅತ್ತ ಕಡೆಯಲ್ಲಿ ಪಾಂಡುವಿನ ಮಕ್ಕಳು ದಿನ-ದಿನಕ್ಕೂ ಪ್ರಬಲರಾಗುತ್ತಿದ್ದಾರೆ. ಅವರ ಅಭ್ಯುದಯ, ಆ ಭವ್ಯವಾದ ಸಭಾಮಂದಿರ, ಸಭಾಮಂದಿರದಲ್ಲಿರುವ ಸೇವಕರು ನನ್ನನ್ನು ನೋಡಿ ಪರಿಹಾಸ್ಯಮಾಡಿ ನಗುತ್ತಿದ್ದುದು-ಇವುಗಳೆಲ್ಲವೂ ನನ್ನ ಹೃದಯವನ್ನು ಬೆಂಕಿಯಂತೆ ಸುಡುತ್ತಿವೆ. ಆದುದರಿಂದ ನಾನಿಂದು ಬಹಳ ದುಃಖಿತನಾಗಿದ್ದೇನೆ. ಪಾಂಡವರ ವಿಷಯದಲ್ಲಿ ಹೆಚ್ಚಿನ ಮಾತ್ಸರ್ಯವು ನನ್ನ ಹೃದಯದಲ್ಲಿ ಉದ್ಭೂತವಾಗಿದೆ. ಈ ವಿಷಯವನ್ನೇ ನೀನು ಧೃತರಾಷ್ಟ್ರನಿಗೂ ತಿಳಿಸು."

ಳ೭ನೆಯ ಅಧ್ಯಾಯವು ಮುಗಿಯಿತು.

೪೮ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಪಾಂಡವರನ್ನು ಜಯಿಸಲು ಶಕುನಿ-ದುರ್ಯೋಧನರ ಸಮಾಲೋಚನೆ

ಜನಮೇಜಯ! ಶಕುನಿಯು ದುರ್ಯೋಧನನನ್ನು ಕುರಿತು ಹೇಳುತ್ತಾನೆ:

“ದುರ್ಯೋಧನ! ಯುಧಿಷ್ಠಿರನ ವಿಷಯದಲ್ಲಿ ನೀನು ಈ ರೀತಿಯಾಗಿ ಮಾತ್ಸರ್ಯಪಡಕೂಡದು. ಅದೃಷ್ಟಾಯತ್ತವಾದ ಐಶ್ವರ್ಯವನ್ನು ಪಡೆದು ಅವರಿಂದು ಸುಖಿಗಳಾಗಿದ್ದಾರೆ. ಅವರು ಚಿಕ್ಕವರಾಗಿದ್ದಾಗಲೇ ಅವರ ವಿನಾಶಕ್ಕಾಗಿ ನೀನು ಅನೇಕ ವಿಧವಾದ ಕುಟಿಲೋಪಾಯಗಳನ್ನು ಮಾಡಿದರೂ ನಿನ್ನ ಕಾರ್ಯಸಾಧನೆಯಾಗಲಿಲ್ಲ. ನೀನು ಮಾಡಿದ ಕೃತ್ರಿಮಗಳಿಂದ ಅದೃಷ್ಟವಶದಿಂದಲೇ ಅವರು ಪಾರಾದರು. ದ್ರೌಪದಿಯನ್ನು ವಿವಾಹಮಾಡಿಕೊಂಡು ದ್ರುಪದನನ್ನೂ, ಅವನ ಮಕ್ಕಳನ್ನೂ ತಮ್ಮ ಮಿತ್ರರನ್ನಾಗಿ ಮಾಡಿಕೊಂಡರು. ಮಹಾನುಭಾವನಾದ, ಮಹಾಪರಾಕ್ರಮಿಯಾದ ವಾಸುದೇವನು ಪಾಂಡವರಿಗೆ ಮಿತ್ರನಾಗಿದ್ದಾನೆ. ಅವರೆಲ್ಲರ ಸಹಕಾರಗಳಿಂದ ಅವರು ದಿಗ್ವಿಜಯವನ್ನು ಮಾಡಿದರು. ತಮ್ಮ ಕುಲಕ್ರಮಾಗತವಾದ ಹಕ್ಕಿನ ರಾಜ್ಯವನ್ನು ಪಡೆದು ತಮ್ಮ ಭುಜಬಲ-ಪರಾಕ್ರಮಗಳಿಂದ ರಾಜ್ಯವನ್ನು ವಿಸ್ತಾರಗೊಳಿಸಿದರು. ಈ ವಿಷಯಗಳಲ್ಲಿ ನಿನ್ನ ಪರಿತಾಪಕ್ಕೆ ಕಾರಣವಾದರೂ ಏನಿದೆ? ದುರ್ಯೋಧನ!”

ದುರ್ಯೋಧನನು ಉತ್ತರಿಸದಿರಲು ಶಕುನಿಯೇ ಮುಂದುವರಿದು ಹೇಳಿದನು :

“ಧನಂಜಯನು ಯಜ್ಞೇಶ್ವರನನ್ನು ಸಂತುಷ್ಟಿಗೊಳಿಸಿ, ಗಾಂಡೀವ ಧನುಸ್ಸನ್ನೂ, ಅಕ್ಷಯತೂಣೀರಗಳನ್ನೂ ಮತ್ತು ಇನ್ನೂ ಅನೇಕ ದಿವ್ಯಾಯುಧಗಳನ್ನೂ ಬಹುಮಾನರೂಪವಾಗಿ ಪಡೆದನು. ಗಾಂಡೀವದ ಪ್ರಭಾವದಿಂದಲೂ ಮತ್ತು ಸ್ವಭುಜಬಲ-ಪರಾಕ್ರಮಗಳಿಂದಲೂ ಅರ್ಜುನನು ಸಕಲರಾಜರನ್ನೂ ಪರಾಜಯಗೊಳಿಸಿ, ಆಶ್ರಿತರನ್ನಾಗಿ ಮಾಡಿಕೊಂಡನು. ಇದರಲ್ಲಿ ನಿನ್ನ ಸಂಕಟಕ್ಕೆ ಕಾರಣವೇನಿದೆ?

ಖಾಂಡವವನದ ದಹನವಾಗುತ್ತಿದ್ದಾಗ ಸವ್ಯಸಾಚಿಯಾದ ಅರ್ಜುನನು ಮಯನನ್ನು ಸಂರಕ್ಷಿಸಿ, ಅವನಿಂದ ಸಭಾಮಂದಿರವನ್ನು ಕಟ್ಟಿಸಿದನು. ಮಯನ ಕಿಂಕರರು ಈಗಲೂ ಅವನ ಆಜ್ಞಾನುಸಾರವಾಗಿ ಆ ಭವ್ಯಸಭಾಮಂದಿರವನ್ನು ಹೊತ್ತು ನಿಂತಿದ್ದಾರೆ.

ಇದಕ್ಕಾಗಿ ನೀನು ಪರಿತಾಪಪಡಬೇಕೆ?

'ನನಗೆ ಮಿತ್ರರೇ ಇಲ್ಲ' ಎಂದು ಹೇಳಿದೆಯಲ್ಲವೇ? ದುರ್ಯೋಧನ! ಈ ನಿನ್ನ ಮಾತುಗಳನ್ನು ನಾನು ಸರ್ವಥಾ ಒಪ್ಪುವುದಿಲ್ಲ. ನೀನು ಹೇಳಿದುದು ಸತ್ಯವೂ ಅಲ್ಲ. ಮಹಾಪರಾಕ್ರಮಿಗಳಾದ ತೊಂಬತ್ತೊಂಬತ್ತು ಮಂದಿ ಅನುಜರು ನಿನಗೆ ಅತ್ಯಂತವಿಧೇಯರಾಗಿರುತ್ತಾರೆ. ಮಹಾಧನುಸ್ಸುಗಳನ್ನು ಹೊಂದಿರುವ ಪರಾಕ್ರಮಿಗಳಾದ ದ್ರೋಣಾಚಾರ್ಯರು, ಅವರ ಮಗ ಅಶ್ವತ್ಥಾಮಾ, ಕರ್ಣ, ಕೃಪ, ನಾನು, ನನ್ನ ಸಹೋದರರು ಮತ್ತು ಸೌಮದತ್ತಿ – ಇವರೆಲ್ಲರೂ ನಿನ್ನ ಪರಮಮಿತ್ರರೇ ಅಲ್ಲವೇ? ಇವರೊಡನೆ ಕೂಡಿಕೊಂಡು ನೀನೂ ದಿಗ್ವಿಜಯವನ್ನು ಮಾಡು, ದುರ್ಯೋಧನ!"

ದುರ್ಯೋಧನನ ಮುಖವು ಸ್ವಲ್ಪ ಕಾಂತಿಯುಕ್ತವಾಯಿತು. ಒಡನೆಯೇ ಹೇಳಿದನು :

"ಮಾತುಲ! ನಿನಗೆ ವಿಹಿತವೆನಿಸುವುದಾದರೆ ಈ ನನ್ನ ಮಿತ್ರರೊಡನೆ ಈಗಲೇ ಹೋಗಿ ಪಾಂಡವರೊಡನೆ ಯುದ್ಧಮಾಡಿ ಅವರನ್ನು ಸೋಲಿಸಿಬಿಡುವೆನು. ಈಗ ಸಾರ್ವಭೌಮತ್ವವನ್ನು ಪಡೆದಿರುವ ಪಾಂಡವರನ್ನು ಸೋಲಿಸಿಬಿಟ್ಟರೆ ಅಖಂಡಸಾಮ್ರಾಜ್ಯವೂ ನನ್ನದಾದಂತೆಯೇ ಅಲ್ಲವೇ? ನಾನು ಪ್ರತ್ಯೇಕ-ಪ್ರತ್ಯೇಕವಾಗಿ ಹೋಗಿ ಪ್ರತಿಯೊಬ್ಬ ರಾಜನನ್ನೂ ಜಯಿಸುವ ಕಾರಣವೇ ಇಲ್ಲ. ಆ ಭವ್ಯಸಭಾಮಂದಿರವೂ, ಪಾಂಡವರಿಗಿರುವ ಅತುಲೈಶ್ವರ್ಯವೂ ನನ್ನದೇ ಆಗುವುದು."

"ದುರ್ಯೋಧನ! ಪಾರ್ಥ-ಶ್ರೀಕೃಷ್ಣರನ್ನೂ, ಭೀಮ-ಯುಧಿಷ್ಠಿರ-ನಕುಲ-ಸಹದೇವರನ್ನೂ, ದ್ರುಪದ ಮತ್ತು ಅವನ ಮಕ್ಕಳನ್ನೂ ಯುದ್ಧದಲ್ಲಿ ಸೋಲಿಸುವ ಸಾಧ್ಯತೆಯೇ ಇಲ್ಲ. ದೇವತೆಗಳೇ ಎದುರಾಗಿ ನಿಂತರೂ ಮಹಾಪರಾಕ್ರಮಿಗಳಾದ, ಮಹಾಧನುಸ್ಸುಗಳನ್ನೂ – ಅನೇಕಾನೇಕ ದಿವ್ಯಾ

ಯುಧಗಳನ್ನೂ ಪಡೆದಿರುವ, ಯುದ್ಧಪ್ರಿಯರಾದ ಅವರನ್ನು ಖಂಡಿತವಾಗಿಯೂ ಸೋಲಿಸಲಾರರು."

ಶಕುನಿಯ ಮಾತುಗಳನ್ನು ಕೇಳಿ ದುರ್ಯೋಧನನ ಮುಖವು ಪುನಃ ಕಳೆಗುಂದಿತು. ದೀರ್ಘವಾಗಿ ನಿಟ್ಟುಸಿರುಬಿಟ್ಟನು.

ಶಕುನಿಯು ತನ್ನ ಮಾತನ್ನು ಮುಂದುವರಿಸಿದನು :

"ಆದರೂ ಅಧೀರನಾಗಬೇಡ. ದುರ್ಯೋಧನ! ಯುಧಿಷ್ಠಿರನನ್ನು ಸೋಲಿಸುವುದು ಹೇಗೆಂಬುದನ್ನು ನಾನು ತಿಳಿದಿರುತ್ತೇನೆ. ಅದನ್ನು ಕೇಳಿ, ಅದರಂತೆ ಮಾಡು."

ದುರ್ಯೋಧನನಿಗೆ ನವಚೇತನವೇ ಬಂದಂತಾಯಿತು. ಮುಖವರಳಿತು. ಶಕುನಿಯನ್ನು ಆತುರದಿಂದ ಕೇಳಿದನು :

"ಮಾತುಲ! ನನಗೆ ಯಾವ ವಿಧವಾದ ಅಪಾಯವೂ ಉಂಟಾಗದಂತೆ ಮತ್ತು ನಮ್ಮ ಮಿತ್ರರಿಗೂ, ಮಹಾತ್ಮರಿಗೂ ತೊಂದರೆಯಾಗದಂತೆ ಧರ್ಮಜನನ್ನು ಸೋಲಿಸುವ ಸಾಧ್ಯತೆಯು ನಿಶ್ಚಯವಾಗಿಯೂ ಇದೆಯೇ? ಒಡನೆಯೇ ಹೇಳು, ಮಾತುಲ!"

"ದುರ್ಯೋಧನ! ಕುಂತಿಯ ಮಗನಿಗೆ ಜೂಜಾಡುವುದರಲ್ಲಿ ಬಹಳ ಆಸಕ್ತಿಯಿದೆ. ಆದರೆ ಜೂಜಾಟದಲ್ಲಿ ಅಷ್ಟು ನೈಪುಣ್ಯವಿಲ್ಲ. ಧರ್ಮಜನಿಗೆ ಜೂಜಾಟಕ್ಕೆ ಆಹ್ವಾನವನ್ನಿತ್ತರೆ – ಆ ಆಹ್ವಾನವನ್ನು ಪುರಸ್ಕರಿಸದೇ ಇರಲಾರನು.

ನಾನು ಪಗಡೆಯಾಟದಲ್ಲಿ ನಿಷ್ಣಾತನಾಗಿದ್ದೇನೆ. ಈ ಪ್ರಪಂಚದಲ್ಲಿ ಏಕೆ, ತ್ರಿಭುವನಗಳಲ್ಲಿಯೇ ನನ್ನ ಸಮಾನರು ಯಾರೂ ಇರುವುದಿಲ್ಲ. ಆದುದರಿಂದ ಕುಂತಿಯ ಪುತ್ರನನ್ನು ಪಗಡೆಯಾಟಕ್ಕೆ ಆಹ್ವಾನಿಸು. ನಾನು ನಿನ್ನ ಪರವಾಗಿ ಆಟವಾಡಿ, ಅವನಲ್ಲಿರುವ ರಾಜ್ಯ-ಕೋಶಾದಿ ಸಮಸ್ತವನ್ನೂ ನಿನಗೆ ಗೆದ್ದುಕೊಡುತ್ತೇನೆ.

ಆದರೆ ಮೊದಲು ನೀನೀ ವಿಷಯವನ್ನು ಧೃತರಾಷ್ಟ್ರನಿಗೆ ತಿಳಿಸಬೇಕು. ನಿಮ್ಮ ತಂದೆಯ ಆಜ್ಞೆಯಾಯಿತೆಂದರೆ ಖಂಡಿತವಾಗಿಯೂ ನಾನು ಪಾಂಡವ

ರಲ್ಲಿರುವ ರಾಜ್ಯ-ಕೋಶಾದಿಗಳೆಲ್ಲವನ್ನೂ ನಿಸ್ಸಂಶಯವಾಗಿಯೂ ನಿನಗೆ ಗೆದ್ದುಕೊಡುತ್ತೇನೆ."

"ಮಾತುಲ! ನೀನೇ ಇವೆಲ್ಲವನ್ನೂ ಸೂಕ್ತವಾದ ರೀತಿಯಲ್ಲಿ ನಮ್ಮ ತಂದೆಯವರಿಗೆ ತಿಳಿಸು. ನನಗಿದನ್ನು ಯುಕ್ತಿಯುಕ್ತವಾಗಿ ತಿಳಿಸುವ ಸಾಮರ್ಥ್ಯವೂ ಇಲ್ಲವಾಗಿದೆ."

ಳ೮ನೆಯ ಅಧ್ಯಾಯವು ಮುಗಿಯಿತು.

ಳ೯ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ಪ್ರಶ್ನೆಗೆ ದುರ್ಯೋಧನನು ತನ್ನ ಚಿಂತೆಯನ್ನು ತಂದೆಯೊಡನೆ ಹೇಳಿದುದು: ದ್ಯೂತಕ್ಕಾಗಿ ಧೃತರಾಷ್ಟ್ರನ ಅನುಮತಿ : ಇಂದ್ರಪ್ರಸ್ಥಕ್ಕೆ ವಿದುರನ ಪ್ರಯಾಣ

"ಜನಮೇಜಯ! ಧರ್ಮಜನ ಪರಮಾದ್ಭುತವಾದ ರಾಜಸೂಯ ಯಾಗವನ್ನು ನೋಡಿ ಅದರಿಂದ ದುರ್ಯೋಧನನ ಮನಸ್ಸಿನಲ್ಲುಂಟಾದ ಆಂದೋಳನವನ್ನು ಗ್ರಹಿಸಿದ ಶಕುನಿಯು ದುರ್ಯೋಧನನಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ಅವನೊಡನೆ ಧೃತರಾಷ್ಟ್ರನ ಸಮೀಪಕ್ಕೆ ಹೋದನು.

ಆ ಸಮಯಕ್ಕೆ ಸರಿಯಾಗಿ ಮಹಾಪ್ರಾಜ್ಞನಾದ ಧೃತರಾಷ್ಟ್ರನು ಸಿಂಹಾಸನಾರೂಢನಾಗಿ ಕುಳಿತಿದ್ದನು. ಶಕುನಿಯು ರಾಜನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಹೇಳಿದನು : "ಮಹಾರಾಜ! ನಿನ್ನ ಪ್ರೇಮದ ಪುತ್ರನಾದ ದುರ್ಯೋಧನನಿಂದು ನಿಸ್ತೇಜನಾಗಿದ್ದಾನೆ. ಕೃಶನಾಗಿರುತ್ತಾನೆ. ಮುಖವು ವಿವರ್ಣವಾಗಿದೆ. ಬಿಳುಪಾಗಿದೆ. ಇವನು ದೀನನಾಗಿರುತ್ತಾನೆ. ಯಾವಾಗಲೂ ಚಿಂತೆಯಲ್ಲಿಯೇ ಮಗ್ನನಾಗಿರುತ್ತಾನೆ. ಶತ್ರುಗಳಿಂದ ಉತ್ಪನ್ನವಾಗಿರುವ ಈ ನಿನ್ನ ಹಿರಿಯ ಮಗನ ಚಿಂತೆಗೆ ಕಾರಣವೇನೆಂಬುದನ್ನು ತಿಳಿಯುವುದು ನಿನ್ನ ಕರ್ತವ್ಯವಲ್ಲವೇ?"

"ದುರ್ಯೋಧನ! ನಿನ್ನೀ ಚಿಂತೆಗೆ ಕಾರಣವಾದರೂ ಏನು?" ಧೃತರಾಷ್ಟ್ರನು ಒಡನೆಯೇ ಕೇಳಿದನು.

"ನಿನ್ನ ಚಿಂತೆಗೆ ಕಾರಣವನ್ನು ನನಗೆ ಹೇಳಬಹುದಾಗಿದ್ದರೆ

ಒಡನೆಯೇ ಹೇಳು. ನೀನು ಕೃಶನಾಗಿರುವೆಯೆಂದೂ, ನಿಸ್ತೇಜನಾಗಿರುವೆಯೆಂದೂ, ನಿನ್ನ ಮುಖಕಮಲವು ಮ್ಲಾನಿಹೊಂದಿರುವುದೆಂದೂ ಶಕುನಿಯು ಹೇಳುತ್ತಿದ್ದಾನೆ. ನಾನೆಷ್ಟೇ ಯೋಚಿಸಿದರೂ ನಿನ್ನ ಚಿಂತೆಗೆ ಕಾರಣವನ್ನು ತಿಳಿಯಲು ಅಸಮರ್ಥನಾಗಿದ್ದೇನೆ. ನಮಗಿರುವ ಅಪಾರವಾದ ಐಶ್ವರ್ಯವೆಲ್ಲವೂ ನಿನ್ನ ಅಧೀನದಲ್ಲಿಯೇ ಇದೆ. ನಿನ್ನ ಅನುಜರಾಗಲೀ, ಬಂಧು-ಬಾಂಧವರೇ ಆಗಲೀ ನಿನಗೆ ಅಪ್ರಿಯವಾದುದನ್ನು ಹೇಳುತ್ತಲೂ ಇಲ್ಲ; ಮಾಡುತ್ತಲೂ ಇಲ್ಲ. ನಿನಗೆ ಅಮೂಲ್ಯವಾದ ಪೀತಾಂಬರಗಳಿವೆ.



ತೊಡಲು ಅಮೂಲ್ಯವಾದ ರತ್ನಾಭರಣಗಳಿವೆ. ಉತ್ತಮವಾದ ಮತ್ತು ಪರಿಶುದ್ಧವಾದ ಭೋಜನವನ್ನು ಭುಂಜಿಸುವೆ. ಸಂಚಾರಕ್ಕೆ ಶ್ರೇಷ್ಠವಾದ ಕುದುರೆಗಳಿವೆ. ಇವಿಷ್ಟೂ ಇರುವಾಗ ಚಿಂತೆಗೆ ಕಾರಣವೇನೆಂಬುದನ್ನು ನಾನು

ಹೇಗೆತಾನೇ ಊಹಿಸಲಿ? ಹಂಸತೂಲಿಕಾತಲ್ಪ, ಸುಂದರವನಿತೆಯರು, ಸಕಲಸಂಭಾರಗಳಿಂದಲೂ ಸಜ್ಜಾದ ಅರಮನೆ, ವಿಹರಿಸಲು ಉದ್ಯಾನವನಗಳು–ಇವೆಲ್ಲವೂ ದೇವಾಧಿಪತಿಯಾದ ಇಂದ್ರನಿಗಿರುವಂತೆಯೇ ನಿನಗೂ ಇವೆ. ಹೀಗಿರುವಾಗ ದರಿದ್ರನು ಚಿಂತಿಸುವಂತೆ ನೀನು ಚಿಂತಿಸುವೆಯೇಕೆ? ದುರ್ಯೋಧನ!"

"ನಿಜ, ತಂದೆಯೇ! ಕಾಪುರುಷನಂತೆ ನಾನು ಯಥೇಚ್ಛವಾಗಿ ತಿಂದು, ಬೇಕುಬೇಕಾದ ಉಡುಪುಗಳನ್ನು ಧರಿಸುವೆನು. ಕಾಲಪರಿವರ್ತನೆಯನ್ನು ನಿರೀಕ್ಷಿಸುತ್ತಾ-ಮನಸ್ಸಿನಲ್ಲಿರುವ ಉಗ್ರವಾದ ಈರ್ಷ್ಯೆಯನ್ನು ಸಹಿಸಿಕೊಂಡಿದ್ದೇನೆ.

**ಅಮರ್ಷಣಃ ಸ್ವಾಃ ಪ್ರಕೃತೀರಭಿಭೂಯ ಪರಂ ಸ್ಥಿತಃ ।**
**ಕ್ಲೇಶಾನ್ಮುಮುಕ್ಷುಃ ಪರಜಾನ್ಸ ವೈ ಪುರುಷ ಉಚ್ಯತೇ ॥೧೩॥**

ತಂದೆಯೇ! ನನ್ನ ಅಭಿಪ್ರಾಯದಲ್ಲಿ, ಶತ್ರುಗಳನ್ನು ನಿಗ್ರಹಮಾಡುತ್ತಾ, ಪ್ರಜೆಗಳನ್ನು ಶತ್ರುಬಾಧೆಯಿಂದ ನಿವೃತ್ತಿಮಾಡುವವನೇ ಪುರುಷನೆನಿಸಿಕೊಳ್ಳುತ್ತಾನೆ. (ಶತ್ರುಗಳನ್ನು ಸೋಲಿಸಿ ತನ್ನ ದೇಶವನ್ನೂ ಅಧೀನದಲ್ಲಿಟ್ಟುಕೊಂಡಿರುವವನೇ ಪುರುಷನು.)

**ಸಂತೋಷೋ ವೈ ಶ್ರಿಯಂ ಹನ್ತಿ ಹ್ಯಭಿಮಾನಂ ಚ ಭಾರತ ।**
**ಅನುಕ್ರೋಶಭಯೇ ಚೋಭೇ ಯೈರ್ವೃತೋ ನಾಶ್ನುತೇ ಮಹತ್ ॥**

ಸಂತುಷ್ಟಿಯು ಸಂಪತ್ತನ್ನೂ ಮತ್ತು ಆತ್ಮಾಭಿಮಾನವನ್ನೂ ಹಾಳುಮಾಡುತ್ತದೆ. ದಯೆ ಮತ್ತು ಭಯ – ಈ ಎರಡು ಗುಣಗಳೂ ರಾಜನಾದವನಿಗೆ ಇರಕೂಡದು. ಈ ಗುಣಗಳನ್ನು ಪಡೆದವರಿಗೆ ಅಭ್ಯುದಯದ ಸಾಧನೆಯಾಗಲಾರದು.

ಧರ್ಮಜನ ರಾಜ್ಯಲಕ್ಷ್ಮಿಯನ್ನು ನೋಡಿದನಂತರ ಭೋಗವಸ್ತುಗಳಾವುವೂ ನನಗೆ ಪ್ರಿಯವನ್ನುಂಟುಮಾಡುತ್ತಿಲ್ಲ. ಅವನ ಅತುಲೈಶ್ವರ್ಯವು ನನ್ನ ಮುಖದಲ್ಲಿ ವಿವರ್ಣತೆಯನ್ನುಂಟುಮಾಡಿದೆ. ಶತ್ರುವಿನ ಐಶ್ವರ್ಯವು ಅಭಿವೃದ್ಧಿಹೊಂದುತ್ತಿರುವುದನ್ನೂ – ನನ್ನ ಐಶ್ವರ್ಯವು ಕ್ಷೀಣಿಸುತ್ತಿರುವುದನ್ನೂ ನಾನು ಕೇಳಿರುವುದು ಮಾತ್ರವಲ್ಲ; ಶತ್ರುವಿನ ಅತುಲೈಶ್ವರ್ಯ

ವನ್ನು ಪ್ರತ್ಯಕ್ಷವಾಗಿಯೇ ಕಂಡುಬಂದಿದ್ದೇನೆ. ಅದು ಈಗಲೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ಈ ಕಾರಣದಿಂದಲೇ ನಾನು ಕೃಶನಾಗಿ, ನಿಸ್ತೇಜನಾಗಿ ಯೋಚನಾಪರನಾಗಿದ್ದೇನೆ.

ಮಹಾರಾಜ! ಧರ್ಮಜನು ಎಂಬತ್ತೆಂಟು ಸಾವಿರ ಸ್ನಾತಕರಿಗೆ ಆಶ್ರಯವನ್ನಿತ್ತಿದ್ದಾನೆ. ಪ್ರತಿಯೊಬ್ಬ ಸ್ನಾತಕನ ಸೇವೆಮಾಡಲು ಮೂವತ್ತು ಮಂದಿ ದಾಸಿಯರಿರುತ್ತಾರೆ. ಅಷ್ಟೇ ಅಲ್ಲದೇ ಇನ್ನೂ ಸಾವಿರಾರು ಮಂದಿ ಬ್ರಾಹ್ಮಣರು ಅವನ ಅರಮನೆಯಲ್ಲಿ ಸ್ವರ್ಣಮಯವಾದ ಪರಾತಗಳಲ್ಲಿ ಮೃಷ್ಟಾನ್ನವನ್ನು ಊಟಮಾಡುತ್ತಿರುತ್ತಾರೆ. ಕಾಂಭೋಜರಾಜನು ಧರ್ಮಜನಿಗೆ 'ಕದಲೀ' ಎಂಬ ಜಿಂಕೆಗಳಿಂದ ಸಿದ್ಧವಾದ ಕಪ್ಪು, ಎಣೆಗೆಂಪು, ನೀಲವರ್ಣಗಳ ಸಾವಿರಾರು ಕೃಷ್ಣಾಜಿನಗಳನ್ನೂ – ಉತ್ತಮವಾಗಿ ನೇಯಲ್ಪಟ್ಟ ಕಂಬಳಿಗಳನ್ನೂ ಕಾಣಿಕೆಯ ರೂಪದಲ್ಲಿ ಕಳುಹಿಸಿರುತ್ತಾನೆ. ನೂರಾರು ಹೆಣ್ಣಾನೆಗಳೂ, ಸಾವಿರಾರು ಕುದುರೆಗಳೂ, ಹಸುಗಳೂ, ಮೂವತ್ತು ಸಾವಿರ ಒಂಟೆಗಳೂ ಧರ್ಮಜನ ಅರಮನೆಯ ಪ್ರಾಂಗಣದಲ್ಲಿ ವಿಹರಿಸುತ್ತಿವೆ. ಇವೆಲ್ಲವನ್ನೂ ಭೂಪಾಲರು ಕಪ್ಪ-ಕಾಣಿಕೆಗಳ ರೂಪದಲ್ಲಿ ಧರ್ಮಜನಿಗೆ ಕೊಟ್ಟಿರುತ್ತಾರೆ. ಇಷ್ಟು ಮಾತ್ರವಲ್ಲದೇ ಆ ರಾಜರು ರಾಶಿ-ರಾಶಿಯಾಗಿ ವಜ್ರ-ವೈಡೂರ್ಯಗಳನ್ನೂ, ಸುವರ್ಣನಾಣ್ಯಗಳನ್ನೂ ತಂದು ಕುಂತೀಪುತ್ರನಿಗೆ ಅರ್ಪಿಸಿರುತ್ತಾರೆ. ಅವನ ರಾಜಸೂಯಯಾಗಕ್ಕೆ ರಾಜರು ತಂದ ಐಶ್ವರ್ಯವು ಅಪಾರವಾಗಿತ್ತು. ಹಿಂದೆಂದೂ ನಾನು ಅಷ್ಟು ಅತುಲೈಶ್ವರ್ಯವನ್ನು ಕಂಡೂ ಇರಲಿಲ್ಲ; ಕೇಳಿಯೂ ಇರಲಿಲ್ಲ. ಶತ್ರುವಿನ ಅಪಾರವಾದ ಆ ಐಶ್ವರ್ಯವನ್ನು ಪ್ರತ್ಯಕ್ಷವಾಗಿ ನೋಡಿದನಂತರ ನನ್ನ ಮನಸ್ಸಿನಲ್ಲಿ ಶಾಂತಿಯೇ ಉಳಿಯಲಿಲ್ಲ.

ಸಾವಿರಾರು ಬ್ರಾಹ್ಮಣರು, ಕ್ಷೇತ್ರಪಾಲರು, ಗೋಪಾಲರು–ಮೂರು ಶತಕೋಟಿ ಸುವರ್ಣನಾಣ್ಯಗಳನ್ನು ಕಾಣಿಕೆಯಾಗಿ ತಂದು ಧರ್ಮಜನ ಅರಮನೆಯ ಮಹಾದ್ವಾರದಲ್ಲಿ ದ್ವಾರಪಾಲಕರಿಂದ ತಡೆಯಲ್ಪಟ್ಟವರಾಗಿ ಕಾಣಿಕೆಯನ್ನೊಪ್ಪಿಸಲು ತಮ್ಮ ಸರದಿಯನ್ನು ಕಾಯುತ್ತಾ ನಿಂತಿರುತ್ತಿದ್ದರು.

ರಾಜಸೂಯಯಾಗಕ್ಕೆಂದು ಸ್ವರ್ಣಮಯವಾದ ಸಾವಿರಾರು ಕಲಶ

ಗಳನ್ನೂ ಅಪಾರಧನವನ್ನೂ ತಂದಿದ್ದ ನೂರಾರು ಮಂದಿಗೂ ಅರಮನೆಯನ್ನು ಒಡನೆಯೇ ಪ್ರವೇಶಿಸಲು ಅವಕಾಶವು ಸಿಕ್ಕದಾಯಿತು.

ದೇವತೆಗಳು ದೇವೇಂದ್ರನಿಗೆ ಮಧುವನ್ನು ಸಮರ್ಪಿಸುವಂತೆ–ಸಮುದ್ರರಾಜನು ವರುಣನಿಂದ ಕೊಡಲ್ಪಟ್ಟ ಮಧುವನ್ನು ಕಂಚಿನ ಕುಂಭಗಳಲ್ಲಿ ಹೊತ್ತುತಂದು ಧರ್ಮಜನಿಗೆ ಅರ್ಪಿಸಿದನು.

ಸಾವಿರಾರು ಸ್ವರ್ಣಕುಂಭಗಳಲ್ಲಿ ತಂದ ಸಮುದ್ರಜಲವನ್ನು ಶಂಖದಲ್ಲಿ ತುಂಬಿ ಶ್ರೀಕೃಷ್ಣನೇ ಧರ್ಮಜನಿಗೆ ಅಭಿಷೇಕಮಾಡಿದನು. ಅದೆಲ್ಲವನ್ನೂ ಪ್ರತ್ಯಕ್ಷವಾಗಿ ನೋಡಿ ನಾನು ಮಾತ್ಸರ್ಯವೆಂಬ ಅಗ್ನಿಗೆ ಆಹುತಿಯಾದೆನು. ಶ್ರೀಕೃಷ್ಣನು ಧರ್ಮಜನನ್ನು ಅಭಿಷೇಚಿಸಿದ ಸ್ವರ್ಣಕುಂಭಗಳು ಪೂರ್ವ, ದಕ್ಷಿಣ ಮತ್ತು ಪಶ್ಚಿಮಸಮುದ್ರಗಳಿಂದ ಮನುಷ್ಯರ ಭುಜಗಳ ಮೇಲೆ ಅಡ್ಡೆಗಳಲ್ಲಿ ಹೊತ್ತು ತರಲ್ಪಟ್ಟಿದ್ದುವು.

ತಾತ! ಉತ್ತರದಿಕ್ಕು, ಪಕ್ಷಿಗಳ ಪ್ರಯಾಣಕ್ಕೆ ಮಾತ್ರವೇ ಯೋಗ್ಯವಾಗಿರುವುದೆಂದೂ, ಅಲ್ಲಿ ಮಾನವರ ಸಂಚಾರವೇ ಇಲ್ಲವೆಂದೂ – ಕೇಳಿರುತ್ತೇನೆ. ಆದರೆ ಅರ್ಜುನನು ಆ ದಿಕ್ಕಿಗೂ ಹೋಗಿ, ಅಲ್ಲಿಂದಲೂ ಯಥೇಚ್ಛವಾಗಿ ಕಪ್ಪ-ಕಾಣಿಕೆಗಳನ್ನು ತಂದಿರುತ್ತಾನೆ.

ಮತ್ತೊಂದು ಅತ್ಯಾಶ್ಚರ್ಯಕರವಾದ ವಿಷಯವನ್ನು ಹೇಳುವೆನು ಕೇಳು, ಮಹಾರಾಜ! ಒಂದು ಲಕ್ಷ ಜನ ಬ್ರಾಹ್ಮಣರು ಊಟಮಾಡಿದನಂತರ ಅದರ ಸಂಕೇತವಾಗಿ ಒಮ್ಮೆ ಶಂಖವನ್ನೂದಲೇಬೇಕೆಂಬ ನಿಯಮವಿದ್ದಿತು. ಆ ಶಂಖದ ನಾದವು ಕ್ಷಣ-ಕ್ಷಣಕ್ಕೂ ಕೇಳಿಬರುತ್ತಿದ್ದಿತು. ಅದನ್ನು ಕೇಳಿದಂತೆಲ್ಲಾ ನನಗೆ ರೋಮಾಂಚನವಾಗುತ್ತಿತ್ತು.

ನಿರ್ಮಲಾಕಾಶದಲ್ಲಿ ತಾರೆಗಳು ಥಳ-ಥಳಿಸುವಂತೆ ಸಾವಿರಾರು ರಾಜರು ಪ್ರೇಕ್ಷಕರಾಗಿ ಆ ಭವ್ಯವಾದ ಸಭಾಮಂದಿರದಲ್ಲಿ ಉಪವಿಷ್ಟರಾಗಿದ್ದರು. ಆ ದೃಶ್ಯವು ನೋಡಲು ನಯನಮನೋಹರವಾಗಿದ್ದಿತು. ಧೀಮಂತನಾದ ಪಾಂಡುಪುತ್ರನ ಯಾಗಕ್ಕೆ ಬಂದವರೆಲ್ಲರೂ ನಾನಾವಿಧವಾದ ರತ್ನಾಭರಣಗಳನ್ನು ಕಾಣಿಕೆಯಾಗಿ ತಂದಿದ್ದರು. ವೈಶ್ಯರಂತೆ ರಾಜರೂ ಕೂಡ ಧರ್ಮಜ

ನನ್ನು ತೃಪ್ತಿಪಡಿಸಲು ಬ್ರಾಹ್ಮಣರ ಸೇವೆಯಲ್ಲಿ ನಿರತರಾಗಿರುತ್ತಿದ್ದರು. ನಿಶ್ಚಯವಾಗಿ ಹೇಳುವುದಾದರೆ ಧರ್ಮಜನಲ್ಲಿ ನಾನು ನೋಡಿದ ಅತುಲೈಶ್ವರ್ಯವು ಇಂದ್ರನಲ್ಲಿಯೇ ಆಗಲೀ, ಯಮನಲ್ಲಿಯೇ ಆಗಲೀ, ವರುಣನಲ್ಲಿಯೇ ಆಗಲೀ, ಧನಾಧಿಪನೆಂದು ಪ್ರಸಿದ್ಧಿಹೊಂದಿರುವ ಕುಬೇರನಲ್ಲಿಯೇ ಆಗಲೀ–ಇರುವುದಿಲ್ಲ. ಧರ್ಮಜನಲ್ಲಿರುವ ಆ ಅತುಲೈಶ್ವರ್ಯವನ್ನು ನೋಡಿ ನನ್ನ ಹೃದಯವು ಪರಿತಪಿಸುತ್ತಿದೆ. 'ಶಾಂತಿ' ಎಂಬುದನ್ನೇ ಕಾಣದವನಾಗಿದ್ದೇನೆ."

ದುರ್ಯೋಧನನು ತನ್ನ ಮನಸ್ಸಿನಲ್ಲಿರುವುದನ್ನು ರಾಜನ ಮುಂದೆ ಸ್ಪಷ್ಟಪಡಿಸಿದನಂತರ, ಮೊದಲೇ ನಿಶ್ಚಯಿಸಿದ್ದಂತೆ ಶಕುನಿಯು ಮಾತನಾಡಲು ಉಪಕ್ರಮಿಸಿದನು :

"ಸತ್ಯಪರಾಕ್ರಮನೇ! ನೀನು ಪಾಂಡುಪುತ್ರನಲ್ಲಿ ನೋಡಿದ ಅತುಲೈಶ್ವರ್ಯವನ್ನು ನೀನು ಪಡೆಯುವುದು ಹೇಗೆಂಬುದನ್ನು ಹೇಳುವೆನು, ಕೇಳು : ನಾನು ಪಗಡೆಯಾಟದಲ್ಲಿ ನಿಷ್ಣಾತನಾಗಿದ್ದೇನೆ. ಆ ಆಟದಲ್ಲಿ ನನಗೆ ಸಮಾನರೆನಿಸಿದವರು ಈ ಪೃಥ್ವಿಯಲ್ಲೇ ಯಾರೂ ಇರುವುದಿಲ್ಲ.

ಒಂದು ಬಾರಿ ದಾಳ ಹಾಕುತ್ತಲೇ ನಮ್ಮ ಸೋಲು-ಗೆಲುವುಗಳನ್ನು ನಿರ್ಧರಿಸಲು ನಾನು ಸಮರ್ಥನಿದ್ದೇನೆ. ಇದರಿಂದ ಯಾವ ಆಟದಲ್ಲಿ ಪಣವನ್ನು ಕಟ್ಟಬಹುದು ; ಯಾವ ಆಟದಲ್ಲಿ ಪಣವನ್ನು ಕಟ್ಟ ಬಾರದು–ಎಂದು ಹೇಳಲು ನನಗೆ ಸಾಧ್ಯವಿದೆ. ನನಗೆ ಆ ಆಟದಲ್ಲಿ ವಿಶೇಷವಾದ ಪಾಂಡಿತ್ಯವಿದೆ. ಕುಂತಿಯ ಮಗನಾದ ಧರ್ಮಜನಿಗೆ ಆ ಆಟದಲ್ಲಿ ಹೆಚ್ಚಿನ ಅಭಿರುಚಿಯಿದೆ. ಆದರೆ ಅವನಿಗೆ ಹೆಚ್ಚಿನ ಪರಿಶ್ರಮವಿಲ್ಲ. ಜೂಜಿಗಾಗಲೀ, ಯುದ್ಧಕ್ಕಾಗಲೀ ಕರೆದರೆ ಪಾಂಡುಪುತ್ರನು ಬರುವುದಿಲ್ಲವೆಂದು ಹೇಳಲಾರನು. ನೀನವನನ್ನು ಜೂಜಾಟಕ್ಕೆ ಆಹ್ವಾನಿಸಿದೆಯಾದರೆ – ಪ್ರತಿಯೊಂದು ಆಟದಲ್ಲಿಯೂ ಕಪಟದ ಮೂಲಕವಾಗಿ ಅವನನ್ನು ಸೋಲಿಸಿಬಿಡುವೆನು. ನಾನವನ ಐಶ್ವರ್ಯವನ್ನೆಲ್ಲಾ ನಿನಗೆ ಪಗಡೆಯಾಟದಲ್ಲಿ ನಿಶ್ಚಯವಾಗಿಯೂ ಗೆದ್ದುಕೊಡುತ್ತೇನೆ. ನೀನು ಆ ಅತುಲೈಶ್ವರ್ಯವನ್ನೂ ಅನುಭವಿಸಬಹುದು, ಸುಯೋಧನ!"

ಶಕುನಿಯು ಮಾತನ್ನು ಮುಗಿಸಿದೊಡನೆಯೇ ದುರ್ಯೋಧನನು

ಧೃತರಾಷ್ಟ್ರನಿಗೆ ಸಮಾಲೋಚಿಸಲು ಅವಕಾಶವನ್ನೇ ಕೊಡದೇ ಒತ್ತಾಯ ಮಾಡಿ ಹೇಳಿದನು :

"ಮಹಾರಾಜ! ಮಾವನಾದ ಶಕುನಿಯು ನಿಶ್ಚಯವಾಗಿಯೂ ಪಗಡೆಯಾಟದಲ್ಲಿ ಬಹುನಿಷ್ಣಾತನಾಗಿದ್ದಾನೆ ಮತ್ತು ಪಗಡೆಯಾಟದಲ್ಲಿ ಧರ್ಮಜನಿಗಿರುವ ಅತುಲೈಶ್ವರ್ಯವನ್ನೂ ನನಗೆ ಗೆದ್ದುಕೊಡಲೂ ಸಿದ್ಧನಾಗಿದ್ದಾನೆ. ಪಗಡೆಯಾಟಕ್ಕೆ ಒಡನೆಯೇ ಅನುಮತಿಯನ್ನು ದಯಪಾಲಿಸು, ಮಹಾರಾಜ!"

"ಮಗು! ನಿನಗೆ ತಿಳಿದಿರುವಂತೆಯೇ ನಾನು ಯಾವಾಗಲೂ ಮಹಾಮೇಧಾವಿಯಾದ ವಿದುರನ ಸಲಹೆಯಂತೆಯೇ ರಾಜಕಾರ್ಯಗಳನ್ನು ನಡೆಸುತ್ತಿರುತ್ತೇನೆ. ಅವನೊಡನೆ ಸಮಾಲೋಚಿಸಿದನಂತರ ಈ ವಿಷಯದಲ್ಲಿ ನನ್ನ ನಿರ್ಧಾರವೇನೆಂಬುದನ್ನು ನಿನಗೆ ತಿಳಿಯಪಡಿಸುತ್ತೇನೆ. ದೂರಾಲೋಚನೆಯುಳ್ಳ, ಧರ್ಮೈಕದೃಷ್ಟಿಯುಳ್ಳ ವಿದುರನು – 'ಯಾವುದು ಒಳ್ಳೆಯದು? ಯಾವ ಕಾರ್ಯದಿಂದ ಉಭಯತ್ರರಿಗೂ ಹಿತವುಂಟಾಗುತ್ತದೆ? ಮತ್ತು ಯಾವ ಕಾರ್ಯವನ್ನು ಯಾವಾಗ ಮಾಡಬೇಕು?' – ಎಂಬುದನ್ನೂ ಹೇಳುತ್ತಾನೆ."

ವಿದುರನ ಹೆಸರನ್ನೆತ್ತಿದೊಡನೆಯೇ ದುರ್ಯೋಧನನ ಮುಖಾರವಿಂದವು ಕುಂದಿಹೋಯಿತು. ದುಗುಡದಿಂದಲೇ ಹೇಳಿದನು : "ತಾತ! ನೀನು ವಿದುರನ ಸಲಹೆಯನ್ನು ಕೇಳಿದೆಯಾದರೆ – ಅವನು ಇದಕ್ಕೆ ಖಂಡಿತವಾಗಿಯೂ ಒಪ್ಪಲಾರನು. ಅವನ ಸಲಹೆಯಂತೆ ನೀನು ಪಗಡೆಯಾಟಕ್ಕೆ ಅನುಮತಿಯನ್ನು ಕೊಡದಿದ್ದರೆ ನಾನು ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಂತೂ ನಿಶ್ಚಯ. ನಾನು ಸತ್ತನಂತರ ನೀನು ವಿದುರನೊಡನೆ ಸುಖವಾಗಿ ಬಾಳಬಹುದಾಗಿದೆ. ಈ ಪ್ರಪಂಚವೆಲ್ಲವೂ ನಿನ್ನದೇ ಆಗುವುದು. ನನ್ನಿಂದ ನಿನಗೇನಾಗಬೇಕಾಗಿದೆ?"

ಧೃತರಾಷ್ಟ್ರರಾಜನಿಗೆ – ದುರ್ಯೋಧನನ ಇಚ್ಛೆಗೆ ವಿರುದ್ಧವಾಗಿ ವರ್ತಿಸುವ ಮತ್ತು ಧರ್ಮಸಮ್ಮತವಾದ ರೀತಿಯಲ್ಲಿ ನಡೆಯುವ ಸಾಮರ್ಥ್ಯ

ವಿರಲಿಲ್ಲ. ಪುತ್ರವ್ಯಾಮೋಹಕ್ಕೆ ಒಳಗಾದನು. ದುರ್ಯೋಧನನ ದುಗುಡದಿಂದ ಕೂಡಿದ ಮತ್ತು ಕರ್ಕಶವಾದ ಮಾತುಗಳನ್ನು ಕೇಳಿದೊಡನೆಯೇ ವಿದುರನ ಸಲಹೆಯನ್ನು ಕೇಳಬೇಕೆಂಬ ನಿಶ್ಚಯವನ್ನೂ ಬದಿಗೊತ್ತಿ – ದುರ್ಯೋಧನನ ನಿರ್ದೇಶನದಂತೆಯೇ ಧರ್ಮಜನನ್ನು ದ್ಯೂತಕ್ಕೆ ಆಹ್ವಾನಿಸಬೇಕೆಂದು ನಿಶ್ಚಯಿಸಿ, ಸೇವಕರನ್ನು ಕರೆಯಿಸಿ ಹೇಳಿದನು: "ಒಡನೆಯೇ ವಾಸ್ತುಶಿಲ್ಪವನ್ನು ತಿಳಿದಿರುವ ತಜ್ಞರನ್ನು ಕರೆತನ್ನಿರಿ. ಅವರು ಈ ಕೂಡಲೇ ನೂರು ಬಾಗಿಲುಗಳುಳ್ಳ, ಸಾವಿರಾರು ಕಂಬಗಳುಳ್ಳ, ಅತಿಸುಂದರವಾದ, ವಿಶಾಲವಾದ ಸಭಾಮಂದಿರವನ್ನು ನಿರ್ಮಿಸಲಿ. ಕುಶಲರಾದ ಬಡಗಿಗಳನ್ನೂ ಕರೆತನ್ನಿರಿ. ಒಳ್ಳೊಳ್ಳೆಯ ವಜ್ರ-ವೈಡೂರ್ಯಾದಿಗಳು ಗೋಡೆಗಳಲ್ಲಿ ಮೆಟ್ಟಲ್ಪಡಲಿ. ಇಂತಹ ಅದ್ಭುತವಾದ ಸಭಾಮಂದಿರದ ರಚನೆಯಾದೊಡನೆಯೇ ನನಗೆ ತಿಳಿಯಪಡಿಸಿರಿ."

ದುರ್ಯೋಧನನನ್ನು ಸಂತೈಸುವ ಸಲುವಾಗಿ ಹೀಗೆ ನಿಶ್ಚಯಿಸಿದ ಧೃತರಾಷ್ಟ್ರನು ಒಡನೆಯೇ ವಿದುರನಿಗೂ ಹೇಳಿಕಳುಹಿಸಿದನು.

ಜನಮೇಜಯ! ನಿಶ್ಚಯವಾಗಿಯೂ ಧೃತರಾಷ್ಟ್ರನು ಯಾವ ಕಾರ್ಯವನ್ನಾದರೂ ವಿದುರನ ಸಲಹೆಯನ್ನು ಪಡೆಯದೇ ಮಾಡುತ್ತಿರಲಿಲ್ಲ. ಆದರೆ ಈ ಒಂದು ಕಾರ್ಯವನ್ನು ಮಾತ್ರ–ದೋಷವಿದೆಯೆಂಬುದನ್ನು ತಿಳಿದಿದ್ದರೂ ಧೃತರಾಷ್ಟ್ರನು ವಿದುರನ ಅಭಿಪ್ರಾಯವನ್ನು ಕೇಳದೆಯೇ ಮಾಡಲು ನಿಶ್ಚಯಿಸಿದನು.

ಮಹಾತ್ಮನಾದ ವಿದುರನಿಗೆ ದ್ಯೂತದ ವಿಷಯವು ತಿಳಿದೊಡನೆಯೇ ಕಲಿಯ ಪ್ರವೇಶವಾಯಿತೆಂದೇ ಭಾವಿಸಿದನು. ಸರ್ವವಿನಾಶದ ಕಾರ್ಯವು ಪ್ರಾರಂಭವಾಯಿತೆಂದು ತಿಳಿದು, ಒಡನೆಯೇ ಧೃತರಾಷ್ಟ್ರನ ಬಳಿಗೆ ಬಂದು ಅಣ್ಣನಿಗೆ ನಮಿಸಿ ಹೇಳಿದನು :

"ಮಹಾರಾಜ! ನೀನು ಈಗ ಮಾಡಿರುವ ನಿಶ್ಚಯವನ್ನು ನಾನು ಖಂಡಿತವಾಗಿಯೂ ಒಪ್ಪುವುದಿಲ್ಲ. ಈ ದ್ಯೂತದ ಕಾರಣದಿಂದಾಗಿ ಮಕ್ಕಳಲ್ಲಿ ಪರಸ್ಪರವಾಗಿ ದ್ವೇಷವುಂಟಾಗದಿರುವಂತೆ ಮಾಡುವುದೇ ನಿನ್ನ ಇಂದಿನ ಮುಖ್ಯ ಕರ್ತವ್ಯವಾಗಿದೆ."

“ವಿದುರ! ಆತಂಕಪಡಬೇಡ. ದೈವವು ನಮ್ಮ ಮೇಲೆ ಕರುಣೆ ತೋರಿದಲ್ಲಿ ನಿಶ್ಚಯವಾಗಿಯೂ ಈ ದ್ಯೂತದಿಂದ ನಮ್ಮ ಮಕ್ಕಳಲ್ಲಿ ಯಾವ ವಿಧವಾದ ಕಲಹವೂ ಉಂಟಾಗುವುದಿಲ್ಲ. ಶುಭವಾಗಲೀ-ಅಶುಭವಾಗಲೀ, ಹಿತವಾಗಲೀ-ಅಹಿತವಾಗಲೀ ಯಾವ ವಿವೇಚನೆಯೂ ಇಲ್ಲದೇ ಈ ದ್ಯೂತವು ನಡೆದುಹೋಗಲಿ. ಇದು ನಿಶ್ಚಯವಾಗಿಯೂ ದೈವಸಂಕಲ್ಪದಂತೆಯೇ ನಡೆಯುವುದಾಗಿದೆ.

ವಿದುರ! ನಾನು ಇಲ್ಲಿಯೇ ಇರುವಾಗ, ಭೀಷ್ಮ-ದ್ರೋಣರೂ ಮತ್ತು ನೀನೂ ದ್ಯೂತದ ಆಗು-ಹೋಗುಗಳೇನೆಂಬುದನ್ನು ನೋಡುತ್ತಾ ಕುಳಿತುಕೊಳ್ಳುವಾಗ – ಒಂದು ವೇಳೆ ವಿಧಿಯೇ ಈ ದ್ಯೂತದ ಮೂಲಕ ಕಲಹದ ಪ್ರಾದುರ್ಭಾವವನ್ನು ನಿಶ್ಚಯಮಾಡಿದ್ದರೂ – ಕಲಹವಾಗಲಾರದೆಂದೂ, ದ್ಯೂತದಿಂದ ಯಾವ ವಿಧವಾದ ದುಷ್ಪರಿಣಾಮವೂ ಆಗದೆಂದೂ ನನ್ನ ದೃಢ ನಿಶ್ಚಯವಾಗಿದೆ. ಆದುದರಿಂದ ನೀನೀಗಲೇ ಉತ್ತಮವಾದ ವಾಜಿಗಳಿಂದ ಯುಕ್ತವಾದ ರಥವನ್ನೇರಿ ಖಾಂಡವಪ್ರಸ್ಥಕ್ಕೆ ಹೋಗಿ, ಧರ್ಮಜನನ್ನು ನಿನ್ನ ಸಂಗಡ ಕರೆದುಕೊಂಡು ಬಾ. ಇದೇ ನನ್ನ ನಿಶ್ಚಯ, ವಿದುರ! ಇದಕ್ಕೆ ಪ್ರತಿಯಾಗಿ ಏನನ್ನೂ ಹೇಳಬೇಡ. ದೈವಚಿಂತನೆಯೇ ಹೆಚ್ಚಿನದೆಂದೂ, ಆ ದೈವವೇ ಈ ಪ್ರಕರಣಗಳೆಲ್ಲವನ್ನೂ ಉಂಟುಮಾಡಿದೆಯೆಂಬುದೂ–ನನ್ನ ಅಭಿಪ್ರಾಯವಾಗಿದೆ.”

ಧೃತರಾಷ್ಟ್ರನ ಮಾತುಗಳನ್ನು ಕೇಳಿ ವಿದುರನು ಕುರುವಂಶಕ್ಕೆ ವಿನಾಶ ಕಾಲವು ಸನ್ನಿಹಿತವಾಯಿತೆಂದೇ ನಿಶ್ಚಯಿಸಿ, ಬಹಳ ದುಃಖಿತನಾಗಿ, ಮಹಾತ್ಮನಾದ ಭೀಷ್ಮನ ಬಳಿಗೆ ಹೋದನು.”

ಳ೯ನೆಯ ಅಧ್ಯಾಯವು ಮುಗಿಯಿತು.

೫೦ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ದುರ್ಯೋಧನನು ಧೃತರಾಷ್ಟ್ರನಿಗೆ ತನ್ನ ದುಃಖದ ಕಾರಣವನ್ನು ವಿವರಿಸಿ ಹೇಳಿದುದು

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

“ವೇದ-ವೇದಾಂಗಪಾರಂಗತರಾದ ವೈಶಂಪಾಯನರೇ! ಅಷ್ಟೊಂದು

ದುಷ್ಟಪರಿಣಾಮವನ್ನುಂಟುಮಾಡಿದ, ವಂಶವಿನಾಶಕವಾದ, ನನ್ನ ತಾತಂದಿರನ್ನು ನಾನಾಕಷ್ಟಗಳಿಗೆ ಗುರಿಪಡಿಸಿದ ಪಗಡೆಯಾಟವು ಹೇಗೆ ಪ್ರಾರಂಭವಾಯಿತು? ಯಾವ-ಯಾವ ರಾಜರು ಪಗಡೆಯಾಟದ ಪ್ರೇಕ್ಷಕರಾಗಿದ್ದರು? ಅವರಲ್ಲಿ ಪಗಡೆಯಾಟಕ್ಕೆ ಸಮ್ಮತಿಸಿದವರು ಯಾರು? ಅಸಮ್ಮತಿಯನ್ನು ಯಾರು ವ್ಯಕ್ತಪಡಿಸಿದರು? ಸಕಲಕ್ಷತ್ರಿಯರ ವಿನಾಶಕ್ಕೆ ಕಾರಣಭೂತವಾದ ಆ ಪಗಡೆಯಾಟದ ವಿಷಯವನ್ನು ಆಮೂಲಾಗ್ರವಾಗಿ ತಿಳಿಯಬೇಕೆಂಬ ಅಭಿಲಾಷೆಯಿದೆ. ದಯವಿಟ್ಟು ವಿಶದವಾಗಿ ಹೇಳಿರಿ."

ಉಗ್ರಶ್ರವಸೌತಿಗಳು ಶೌನಕರಿಗೆ ಹೇಳುತ್ತಾರೆ :

"ಹೀಗೆ ಪ್ರಶ್ನಿಸಿದ ಜನಮೇಜಯನನ್ನು ಕುರಿತು ಮಹರ್ಷಿಗಳಾದ ವೇದತತ್ತ್ವವಿದರಾದ ವೈಶಂಪಾಯನರು ನಡೆದುದೆಲ್ಲವನ್ನೂ ವಿಶದವಾಗಿಯೇ ಹೇಳಲು ಉಪಕ್ರಮಿಸಿದರು :

"ಭಾರತಸತ್ತಮನೇ! ಜನಮೇಜಯ! ನಿನಗೆ ಆ ದಿವ್ಯಕಥೆಯನ್ನು ಯಥಾವತ್ತಾಗಿಯೇ ಕೇಳಬೇಕೆಂಬ ಮನಸ್ಸಿರುವುದಾದರೆ ಅದನ್ನು ಸವಿಸ್ತರವಾಗಿಯೇ ಹೇಳುವೆನು. ಅನನ್ಯಚಿತ್ತನಾಗಿ ಕೇಳು.

ವಿದುರನಾಡಿದ ಮಾತು ಧೃತರಾಷ್ಟ್ರನ ಮನಸ್ಸಿನ ಕಳವಳವನ್ನು ಹೆಚ್ಚಿಸಿತು. ವಿದುರನ ಮಾತು ನಿಶ್ಚಯವೆಂದೂ, ದ್ಯೂತದಿಂದ ಅನೇಕವಿಧವಾದ ದುಷ್ಪರಿಣಾಮಗಳು ಸಂಭವಿಸುವುದೆಂಬುದೂ ಧೃತರಾಷ್ಟ್ರನಿಗೆ ನಿಶ್ಚಿತವಾಯಿತು. ದ್ಯೂತದಿಂದ ಮಗನನ್ನು ವಿಮುಖನನ್ನಾಗಿ ಮಾಡಬೇಕೆಂಬ ಇಚ್ಛೆಯಿಂದ ಮತ್ತೊಮ್ಮೆ ಮಗನನ್ನು ಕರೆಯಿಸಿ ಏಕಾಂತದಲ್ಲಿ ಹೇಳಿದನು :

**ಅಲಂ ದ್ಯೂತೇನ ಗಾನ್ಧಾರೇ ವಿದುರೋ ನ ಪ್ರಶಂಸತಿ ।**
**ನ ಹ್ಯಸೌ ಸುಮಹಾಬುದ್ಧಿರಹಿತಂ ನೋ ವದಿಷ್ಯತಿ ॥೭॥**

"ಗಾಂಧಾರೀಪುತ್ರನೇ! ದ್ಯೂತದಿಂದ ಏನೂ ಪ್ರಯೋಜನವಿಲ್ಲ. ಈ ಬುದ್ಧಿಯನ್ನು ಬಿಡು. ವಿದುರನು ದ್ಯೂತದ ವಿಷಯವಾಗಿ ಸದಭಿಪ್ರಾಯವುಳ್ಳವನಾಗಿಲ್ಲ. ಮಹಾಬುದ್ಧಿವಂತನಾಗಿರುವ ವಿದುರನು ಯಾವಾಗಲೂ ನಮಗೆ ಅಹಿತವಾದ ಸಲಹೆಯನ್ನು ಕೊಡತಕ್ಕವನಲ್ಲ. ಆದುದರಿಂದ ವಿದುರನು ಹೇಳುವುದೆಲ್ಲವೂ ನಮ್ಮ ಹಿತಕ್ಕೆಂದೇ ನಾನು

ಭಾವಿಸಿರುತ್ತೇನೆ. ಅವನು ಹೇಳುವುದನ್ನೇ ನೀನೂ ಕೇಳಿ ಅದರಂತೆ ನಡೆದೆಯಾದರೆ ಅದರಿಂದ ನಿನಗೂ ಒಳ್ಳೆಯದಾಗುವುದು. ದೇವೇಂದ್ರನ ಗುರುವಾದ ಬೃಹಸ್ಪತಿಯು ತಿಳಿದಿರುವ ಶಾಸ್ತ್ರಗಳನ್ನೂ ರಹಸ್ಯಗಳೊಡನೆ ವಿದುರನು ತಿಳಿದಿರುತ್ತಾನೆ. ಆದುದರಿಂದ ನಾನು ಯಾವಾಗಲೂ ವಿದುರನ ಸಲಹೆಯಂತೆಯೇ ನಡೆಯುತ್ತೇನೆ. ದುರ್ಯೋಧನ! ವೃಷ್ಣಿಗಳ ವಂಶಕ್ಕೆ ಸಕಲನೀತಿವಿಶಾರದನಾದ ಉದ್ಧವನು ಸಲಹೆಗಾರನಾಗಿರುವಂತೆ – ಕುರುವಂಶಕ್ಕೆ ವಿದುರನು ಸಲಹೆಗಾರನಾಗಿರುವನು. ಆದುದರಿಂದ ವಿದುರನ ಸಲಹೆಯಂತೆ ಜೂಜಿನಿಂದ ಪರಾಙ್ಮುಖನಾಗು. ದ್ಯೂತದಿಂದ ಪರಸ್ಪರವಾಗಿ ವೈಮನಸ್ಯವು ಉತ್ಪನ್ನವಾಗುವುದಂತೂ ನಿಶ್ಚಯ. ರಾಜರಲ್ಲಿ ಪರಸ್ಪರ ವೈಮನಸ್ಯವು ರಾಜ್ಯವಿನಾಶಕ್ಕೇ ಕಾರಣವಾಗುತ್ತದೆ. ಆದುದರಿಂದ ಖಂಡಿತ ವಾಗಿಯೂ ಪಾಂಡವರೊಡನೆ ದ್ಯೂತವಾಡಬೇಕೆಂದಿರುವ ನಿನ್ನ ಇಚ್ಛೆಯನ್ನು ಪರಿತ್ಯಜಿಸು.

ನೀನೇನೂ ತಿಳಿಯದವನಲ್ಲ. ಅವಿದ್ಯಾವಂತನೂ ಅಲ್ಲ. ಸಕಲಶಾಸ್ತ್ರಗಳಲ್ಲಿಯೂ ನಿನಗೆ ಪಾಂಡಿತ್ಯವಿದೆ. ನಿನ್ನನ್ನು ನಾವು ಬಹಳ ಅಕ್ಕರೆಯಿಂದ ಪೋಷಿಸಿದ್ದೇವೆ. ಜ್ಯೇಷ್ಠಪುತ್ರನಾಗಿ ಹುಟ್ಟಿ ರಾಜಪದವಿಯನ್ನು ಪಡೆದಿದ್ದರೂ 'ನಾನು ಸುಖಿಯಲ್ಲ' ಎಂದು ಭ್ರಾಂತನಾಗಿರುವೆಯಲ್ಲಾ! ಸಾಧಾರಣಮನುಷ್ಯರು ಧರಿಸಲಾಗದ ಅಮೂಲ್ಯವಾದ ವಸ್ತ್ರಗಳನ್ನುಡುವೆ. ಷಡ್ರಸೋಪೇತವಾದ ಭೋಜನವನ್ನು ಉಪಭುಂಜಿಸುವೆ. ಹೀಗಿದ್ದರೂ ನೀನು ದುಃಖಿಸುವೆಯೇಕೆ?

ವಂಶಪಾರಂಪರ್ಯವಾಗಿ ಬಂದಿರುವ, ಜನನಿಬಿಡವಾದ, ಐಶ್ವರ್ಯ ಸಮೃದ್ಧವಾಗಿರುವ ರಾಜ್ಯದಲ್ಲಿ ರಾಜನಾಗಿರುವ ನೀನು–ದೇವೇಂದ್ರನು ಸ್ವರ್ಗಲೋಕದಲ್ಲಿ ಶೋಭಿಸುವಂತೆ–ಶೋಭಿಸುತ್ತಿರುವೆ.

ಪ್ರಾಜ್ಞನೇ! ಇಷ್ಟೊಂದು ಭೋಗಸಾಮಗ್ರಿಗಳನ್ನು ಪಡೆದು ಸರ್ವದಾ ಸಂತೋಷದಿಂದಿರಬೇಕಾಗಿರುವ ನೀನು ಚಿಂತಿಸುತ್ತಿರುವೆಯೇಕೆ? ನಿನ್ನ ದುಃಖಕ್ಕೆ ಕಾರಣವಾದರೂ ಏನು? ಯಾವ ವಿಷಯವು ನಿನ್ನನ್ನು ಇಷ್ಟೊಂದು ನಿಸ್ತೇಜನನ್ನಾಗಿ ಮಾಡಿಬಿಟ್ಟಿದೆ? ಹೇಳು, ಕಂದ!"

ದುರ್ಯೋಧನನೊಮ್ಮೆ ದೀರ್ಘವಾಗಿ ನಿಟ್ಟುಸಿರುಬಿಟ್ಟು ಹೇಳ ತೊಡಗಿದನು :

"ತಂದೆಯೇ! ಶತ್ರುವಿನ ಅತುಲೈಶ್ವರ್ಯವನ್ನು ಪ್ರತ್ಯಕ್ಷವಾಗಿ ನೋಡಿದನಂತರವೂ ನಾನು ಉಡುಗೆ-ತೊಡುಗೆಗಳನ್ನೂ ಮತ್ತು ಅನ್ನಾಹಾರಗಳನ್ನೂ ವರ್ಜಿಸದೇ ಉಪಭೋಗಿಸುತ್ತಿರುವೆನಲ್ಲಾ! ನಾನು ನಿಶ್ಚಯವಾಗಿಯೂ ಮಹಾಪಾಪಿಷ್ಠನೇ ಸರಿ.

**ನಾಮರ್ಷಂ ಕುರುತೇ ಯಸ್ತು ಪುರುಷಃ ಸೋऽಧಮಃ ಸ್ಮೃತಃ ॥**

ಇತರರಾಜರ ಐಶ್ವರ್ಯವನ್ನು ಕಂಡೂ ಮಾತ್ಸರ್ಯಹೊಂದದ ರಾಜನನ್ನು ಪುರುಷಾಧಮನೆಂದೇ ಹೇಳುತ್ತಾರೆ.

ಮಹಾರಾಜ! ಈಗ ನಮ್ಮಲ್ಲಿರುವ ಸಾಧಾರಣವಾದ ಐಶ್ವರ್ಯವು ನನಗೆ ತೃಪ್ತಿಯನ್ನುಂಟುಮಾಡುವುದಾಗಿಲ್ಲ. ಕುಂತೀಪುತ್ರನ ಜಾಜ್ವಲ್ಯಮಾನವಾದ ಐಶ್ವರ್ಯವನ್ನು ನೋಡಿದನಂತರ ನಾನು ಬಹಳ ಸಂಕಟಕ್ಕೀಡಾಗಿದ್ದೇನೆ. ನಿಶ್ಚಯವಾಗಿ ಹೇಳುವುದಾದರೆ–ನನ್ನಲ್ಲಿರುವ ಸತ್ತ್ವವೂ ಅಚಲವಾದುದೆಂದೇ ಹೇಳಬೇಕು. ಏಕೆಂದರೆ : ಪ್ರಪಂಚದ ಎಲ್ಲ ರಾಜ್ಯ-ಕೋಶಗಳೂ ಧರ್ಮಜನ ಸಾರ್ವಭೌಮತ್ವಕ್ಕೆ ಸೇರಿಹೋದ ಮೇಲೆಯೂ ನಾನು ಇನ್ನೂ ಜೀವಂತನಾಗಿ ಉಳಿದಿರುವೆನಲ್ಲವೇ?

ನೀಪರು, ಚಿತ್ರಕರು, ಕೌಕುರರು, ಕಾರಸ್ಕರರು, ಲೋಹಜಂಘರು – ಇವರೆಲ್ಲರೂ ಧರ್ಮಜನ ಅರಮನೆಯಲ್ಲಿ ದಾಸಾನುದಾಸರಂತೆ ಸೇವಾವೃತ್ತಿಯನ್ನು ಮಾಡುತ್ತಿರುತ್ತಾರೆ.

ವಜ್ರ-ವೈಡೂರ್ಯಾದಿಗಳಿಗೆ ಆಶ್ರಯಭೂತನಾದ ಹಿಮವಂತ, ರತ್ನಾಕರನೆಂದು ಪ್ರಸಿದ್ಧನಾದ ಸಮುದ್ರರಾಜ, ಸಮುದ್ರದ ತೀರಪ್ರದೇಶಗಳಲ್ಲಿರುವ ಮತ್ತು ಉಳಿದ ಕಡೆಗಳಲ್ಲಿರುವ ಮಣಿ-ಮಾಣಿಕ್ಯಗಳ ಗಣಿಗಳ ಅಧಿಪತಿಗಳು, ಎಲ್ಲರೂ ಧರ್ಮಜನ ಭವ್ಯವಾದ ರತ್ನಮಯವಾದ ಸಭಾಮಂದಿರವನ್ನು ಕಂಡು ನಾಚಿ ತಲೆತಗ್ಗಿಸಿಬಿಟ್ಟರು.

ನಾನು ಕುರುವಂಶಕ್ಕೆ ಹಿರಿಯಮಗನಾಗಿರುವುದರಿಂದ ನನ್ನನ್ನು ಪುರಸ್ಕರಿಸುವ ಉದ್ದೇಶದಿಂದಲೇ ಧರ್ಮಜನು ಕಪ್ಪ-ಕಾಣಿಕೆಗಳನ್ನು ಸ್ವೀಕರಿಸುವ ಅಧಿಕಾರಿಯನ್ನಾಗಿ ನನ್ನನ್ನೇ ನಿಯಮಿಸಿದ್ದನು. ಮಹಾರಾಜ! ನಿಶ್ಚಯವಾಗಿಯೂ ಅಷ್ಟೊಂದು ಅಪರಿಮಿತವಾದ ಮತ್ತು ಅಮೋಘವಾದ

ರತ್ನರಾಶಿಯನ್ನು ನಾನು ನೋಡುವುದಂತಿರಲಿ, ಕೇಳಿಯೂ ಇರಲಿಲ್ಲ. ರಾಜರೆಲ್ಲರೂ ಕೊಡುತ್ತಿದ್ದ ರತ್ನಾಭರಣಗಳನ್ನೂ, ಸುವರ್ಣನಾಣ್ಯಗಳನ್ನೂ ಸ್ವೀಕರಿಸಲು ನನ್ನೀ ಕೈಗಳು ಹೆಚ್ಚುಕಾಲ ಸಮರ್ಥವಾಗಲಿಲ್ಲ. ಸೋತು-ಸೊಪ್ಪಾಗಿ ಹೋದೆನು. ನಾನು ಸ್ವಲ್ಪಕಾಲ ವಿಶ್ರಾಂತಿಯನ್ನು ಪಡೆದು ಪುನಃ ಕಪ್ಪ-ಕಾಣಿಕೆಗಳನ್ನು ತೆಗೆದುಕೊಳ್ಳಲು ಹೋಗುವವರೆಗೂ ಅನೇಕ ಯೋಜನಗಳ ದೂರದಿಂದ ಬಂದಿದ್ದ ರಾಜರೆಲ್ಲರೂ ಕಾದಿರುತ್ತಿದ್ದರು.

ಅಪ್ಪ! ಆ ಸಭಾಮಂದಿರದ ಸೊಬಗನ್ನು ವರ್ಣಿಸುವುದಂತೂ ಅಸದಳ. ಶಿಲ್ಪವಿಶಾರದನಾದ ಮಯನು ಆ ಸಭಾಭವನವನ್ನು ನಿರ್ಮಿಸಲು ಬಿಂದುಸರೋವರದಿಂದ ರತ್ನರಾಶಿಯನ್ನೇ ತಂದಿದ್ದನು. ಆ ಸಭಾಮಂದಿರದ ಒಂದೆಡೆಯಲ್ಲಿ ರತ್ನಗಳಿಂದ ಸರೋವರದ ಮೇಲ್ಭಾಗದಂತೆ ಕೆತ್ತಿರುವನು. ನಿಶ್ಚಯವಾಗಿಯೂ ಮಹಾರಾಜ! ಕೃತಕಸರೋವರವನ್ನು ಕೃತಕವಾದುದೆಂದು ಹೇಳಲು ಸಾಧ್ಯವೇ ಇಲ್ಲ. ಕಮಲಗಳು, ಹಂಸಗಳು, ಸೋಪಾನಗಳು, ನೀರು ಎಲ್ಲವೂ ನೈಜವಾಗಿರುವಂತೆಯೇ ಕಾಣುತ್ತವೆ. ಅದನ್ನು ನಾನೂ ನಿಜವಾದ ಸರೋವರವಿರಬಹುದೆಂದೇ ಭ್ರಮಿಸಿ ಅದನ್ನು ದಾಟಿಹೋಗಲು ವಸ್ತ್ರವನ್ನು ಮೇಲೆ ಕಟ್ಟಿದೆನು. ಅದನ್ನು ಕಂಡ ಭೀಮಸೇನನು– ದರಿದ್ರನನ್ನು ಕಂಡಾಗ ಅಪಹಾಸ್ಯಮಾಡುವಂತೆ ಗಟ್ಟಿಯಾಗಿ ನಕ್ಕನು. ತಂದೆಯೇ! ನನ್ನಲ್ಲಿ ನಿಶ್ಚಯವಾಗಿಯೂ ಪರಾಕ್ರಮವೇ ಇದ್ದಿದ್ದರೆ – ಭೀಮಸೇನನನ್ನು ಅಂದೇ ಮುಗಿಸಿಬಿಡುತ್ತಿದ್ದೆನು. ಆದರೆ ನಾನೇನಾದರೂ ಭೀಮನ ಸಂಹಾರಕ್ಕೆ ಯತ್ನಿಸಿದ್ದರೆ ನನ್ನ ಗತಿಯೂ ಶಿಶುಪಾಲನ ಗತಿಯೇ ಆಗುತ್ತಿದ್ದಿತು. ನಮ್ಮ ಶತ್ರುವು ಮಾಡಿದ ಆ ಅಪಹಾಸ್ಯವು ನನ್ನನ್ನು ಅಗ್ನಿಯಂತೆ ಈಗಲೂ ಸುಡುತ್ತಲಿದೆ, ಮಹಾರಾಜ!

ಸಭಾಮಂದಿರದ ಸೊಬಗನ್ನು ಹಾಗೆಯೇ ನೋಡುತ್ತ ಮುಂದೆ ಬರುತ್ತಿದ್ದಾಗ ಪುನಃ ಮತ್ತೊಂದು ಸರೋವರವು ಸಿಕ್ಕಿತು. ಅದಾದರೂ ಹಿಂದಿನ ಕೃತಕಸರೋವರದಂತೆಯೇ ಇದ್ದಿತು. ಹಿಂದಿನಂತೆ ಅಪಹಾಸ್ಯಕ್ಕೀಡಾಗ ಬಾರದೆಂದು ಯೋಚಿಸಿ, ಧೋತ್ರವನ್ನು ಮೇಲೆ ಕಟ್ಟದೆಯೇ ಆ ಸ್ಥಳದಲ್ಲಿ ಕಾಲಿಟ್ಟೆನು. ಆದರೆ ಅದು ನಿಶ್ಚಯವಾದ ಸರೋವರವೇ ಆಗಿದ್ದಿತು.

ಒಡನೆಯೇ ಸರೋವರದೊಳಕ್ಕೆ ಬಿದ್ದೆನು. ವಸ್ತ್ರಗಳೆಲ್ಲವೂ ತೋಯ್ದು ಹೋದುವು.

ಅದನ್ನು ನೋಡಿದ ಕೃಷ್ಣಾರ್ಜುನರು ಗಹಗಹಿಸಿ ನಕ್ಕರು. ದಾಸಿಯರೊಡನೆ ಸೇರಿ ದ್ರೌಪದಿಯೂ ನಕ್ಕಳು. ಆ ನಗುವು ನನ್ನ ಹೃದಯದಲ್ಲಿ ಶೂಲದಂತೆ ನಾಟಿ, ಈಗಲೂ ಅಪಾರವಾದ ಯಾತನೆಯನ್ನುಂಟುಮಾಡುತ್ತಿದೆ, ಮಹಾರಾಜ!

ನನ್ನ ವಸ್ತ್ರಗಳೆಲ್ಲವೂ ತೋಯ್ದುಹೋಗಲಾಗಿ ಧರ್ಮರಾಜನ ಆಜ್ಞೆಯಂತೆ ಸೇವಕರು ಬೇರೆಯ ವಸ್ತ್ರಗಳನ್ನು ತಂದುಕೊಟ್ಟರು. ಅದೂ ನನ್ನ ಮನಸ್ಸಿಗೆ ಬಹಳ ನೋವನ್ನುಂಟುಮಾಡಿತು.

ಧರ್ಮರಾಜನ ಸಭಾಮಂದಿರದಲ್ಲಿ ನಾನು ಅನುಭವಿಸಿದ ಮತ್ತೊಂದು ದಾರುಣವಾದ ಕಥೆಯನ್ನು ಹೇಳುವೆನು, ಕೇಳಪ್ಪಾ!

ಭೀಮಾದಿಗಳಿಂದ ಅಪಹಾಸ್ಯಕ್ಕೀಡಾದ ನಾನು ಬಹಳ ದುಃಖಿತನಾಗಿ ಸಭಾಮಂದಿರದಿಂದ ಹೊರಕ್ಕೆ ಬರಲು ಹೊರಟೆನು. ನನ್ನ ಎದುರಿನಲ್ಲಿ ಒಂದು ಬಾಗಿಲಿದ್ದಿತು. ಅದರ ಮೂಲಕ ಹೋಗಬೇಕೆಂದು ಯತ್ನಿಸಿದಾಗ ಅದು ನಿಜವಾದ ಬಾಗಿಲಾಗಿರದೇ – ಕೃತ್ರಿಮವಾದ, ರತ್ನಖಚಿತವಾದ ಗೋಡೆಯಾಗಿದ್ದಿತು. ನನ್ನ ತಲೆಯು ಅದಕ್ಕೆ ಬಡಿದು ಬಹಳ ಯಾತನೆಯಾಯಿತು. ಆಗ ನನ್ನ ದುಃಸ್ಥಿತಿಯನ್ನು ದೂರದಿಂದ ನೋಡಿದ ಯಮಳರು ಒಡನೆಯೇ ನನ್ನ ಬಳಿಗೆ ಬಂದು, ಇಬ್ಬರೂ ನನ್ನ ಎಡ-ಬಲಪಕ್ಕಗಳಲ್ಲಿ ನಿಂತು, ಮಸ್ತಕಾಘಾತದಿಂದ ಪರಿಭ್ರಮಣಹೊಂದಿದ್ದ ನನಗೆ ಅವಲಂಬನೆಯನ್ನಿತ್ತು ತಮ್ಮ ವಿಷಾದವನ್ನು ವ್ಯಕ್ತಪಡಿಸಿದರು. ಸಹದೇವನು ಮುಗುಳ್ನಗೆಯಿಂದ ಹಾಸ್ಯಮಾಡಿ ಹೇಳಿದನು :

"ಮಹಾರಾಜ! ಬಾಗಿಲು ಈ ಕಡೆ ಇರುವುದು. ಇದರ ಮೂಲಕ ಹೋಗಬಹುದಾಗಿತ್ತು."

ತಾತ! ಆ ಸಮಯದಲ್ಲಿ ಭೀಮನಾಡಿದ ಮಾತು ನಿಶ್ಚಯವಾಗಿಯೂ ಹೃದಯಭೇದಕವಾಗಿದ್ದಿತು.

"ಓ ಧೃತರಾಷ್ಟ್ರಪುತ್ರ! (ಕುರುಡನ ಮಗನೇ! ಎಂಬರ್ಥದಲ್ಲಿ)

ಇದೇ ಬಾಗಿಲು" – ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಇವೆಲ್ಲವೂ ನನ್ನ ಇಂದಿನ ದುಃಖಕ್ಕೆ-ಮಾತ್ಸರ್ಯಕ್ಕೆ ಕಾರಣಗಳಾಗಿವೆ. ಅಂತಹ ಸಭಾಮಂದಿರವನ್ನು ಪಡೆಯುವುದಂತಿರಲಿ ; ಅದರ ನಿರ್ಮಾಣಕ್ಕೆ ಉಪಯೋಗಿಸಿರುವ ರತ್ನಗಳ ಹೆಸರುಗಳೂ ನನಗೆ ತಿಳಿಯದು, ಮಹಾರಾಜ! ಈ ಕಾರಣಗಳಿಂದಾಗಿ ನನ್ನ ಹೃದಯವು ಬೆಂದುಹೋಗುತ್ತಿದೆ."

೫೦ನೆಯ ಅಧ್ಯಾಯವು ಮುಗಿಯಿತು.

೫೧ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ರಾಜರಿಂದ ಯುಧಿಷ್ಠಿರನಿಗೆ ಬಂದ ಅಪೂರ್ವವಸ್ತುಗಳ ವರ್ಣನೆ

ಜನಮೇಜಯ! ದುರ್ಯೋಧನನು ಮುಂದುವರಿದು ಹೇಳುತ್ತಾನೆ :

"ತಾತ! ಧರ್ಮಜನ ರಾಜಸೂಯಯಾಗಕ್ಕೆ ದೇಶ-ವಿದೇಶಗಳಿಂದ ಅನೇಕರಾಜರು ತಂದ ಅಮೂಲ್ಯವಾದ ವಸ್ತುಗಳ ವಿವರಣೆಯನ್ನು ಹೇಳುವೆನು, ಕೇಳು. ಅವೆಲ್ಲವನ್ನೂ ನೋಡಿ ನನ್ನನ್ನು ನಾನೇ ಮರೆತುಹೋದೆನು. ಆ ವಸ್ತುಗಳನ್ನು ಭೂಮಿಯಲ್ಲಿ ಉತ್ಪನ್ನವಾದ ವಸ್ತುಗಳು ಮತ್ತು ಉತ್ಪನ್ನವಸ್ತುಗಳಿಂದ ತಯಾರಿಸಿದುವುಗಳು – ಎಂದು ಎರಡು ಭಾಗವಾಗಿ ವಿಂಗಡಿಸಬಹುದಾಗಿದೆ.

ಕಾಂಭೋಜರಾಜನು ಅತ್ಯುತ್ತಮವಾದ ಮತ್ತು ಹದಮಾಡಿದ ಚರ್ಮಗಳನ್ನು ತಂದುಕೊಟ್ಟನು. ಉಣ್ಣೆಯಿಂದ ತಯಾರಾದ ಬಟ್ಟೆಗಳನ್ನೂ ಮತ್ತು ಇಲಿಯ ಕೂದಲುಗಳಿಂದಲೂ, ಬೆಕ್ಕಿನ ಕೂದಲುಗಳಿಂದಲೂ ತಯಾರಾದ ಅತಿನುಣುಪಾದ ಬಟ್ಟೆಗಳನ್ನೂ ತಂದಿದ್ದನು. ಆ ಬಟ್ಟೆಗಳ ಅಂಚುಗಳು ಚಿನ್ನದ ದಾರಗಳಿಂದ ನೇಯಲ್ಪಟ್ಟಿದ್ದುವು. ಅವುಗಳಲ್ಲದೇ ಕಾಂಬೋಜರಾಜನು ತಿತ್ತಿರಿ-ಕಲ್ಮಾಷಗಳೆಂಬ ಉತ್ತಮಜಾತಿಯ, ಗಿಳಿಗಳ ಕೊಕ್ಕುಗಳಂತೆ ಉದ್ದವಾದ ಮುಖಗಳುಳ್ಳ ಮುನ್ನೂರು ಕುದುರೆಗಳನ್ನೂ, ಮುನ್ನೂರು ಒಂಟೆಗಳನ್ನೂ, ಅಷ್ಟೇ ಸಂಖ್ಯೆಯ ಹೇಸರಗತ್ತೆಗಳನ್ನೂ ಕೊಟ್ಟನು.

ಗೋವುಗಳನ್ನೂ–ಎತ್ತುಗಳನ್ನೂ ಪೋಷಿಸುವ ವೈಶ್ಯರನ್ನೂ, ಬ್ರಾಹ್ಮಣ ರನ್ನೂ, ಸೇವಾಕರ್ಮಕ್ಕೆ ಯೋಗ್ಯರಾದ ಶೂದ್ರರನ್ನೂ ಮಹಾತ್ಮರಾದ

ಯುಧಿಷ್ಠಿರನ ಪ್ರೀತ್ಯರ್ಥವಾಗಿ ಮೂರು ಖರ್ವಸಂಖ್ಯೆಯಲ್ಲಿ ತೆಗೆದುಕೊಂಡು ಬಂದ ರಾಜರು–ಯುಧಿಷ್ಠಿರನ ಸೇವಕರಿಂದ ತಡೆಯಲ್ಪಟ್ಟವರಾಗಿ, ಒಳಕ್ಕೆ ಪ್ರವೇಶಿಸಲು ತಮ್ಮ ಸರದಿಯನ್ನು ಕಾಯುತ್ತಾ ನಿಂತಿದ್ದರು. ಬ್ರಾಹ್ಮಣರು, ವಾಟಧನರೆಂಬುವರು (ಬ್ರಹ್ಮಬಂಧುಗಳು), ಕೃಷಿ-ಗೋರಕ್ಷಕರಾದ ವೈಶ್ಯರು ನೂರು-ನೂರು ಮಂದಿ ಗುಂಪು-ಗುಂಪಾಗಿ ಸ್ವರ್ಣಮಯವಾದ ಶುಭಪ್ರದವಾದ ಕಮಂಡಲುಗಳನ್ನು ಕಾಣಿಕೆಯಾಗಿ ತೆಗೆದುಕೊಂಡು ಬಂದು ಮಹಾದ್ವಾರದಲ್ಲಿ ತಮ್ಮ ಸರದಿಯನ್ನು ಕಾಯುತ್ತಾ ನಿಂತಿದ್ದರೇ ಹೊರತು ಅವರಿಗೂ ಒಡನೆಯೇ ಪ್ರವೇಶಾವಕಾಶವು ಸಿಗಲಿಲ್ಲ.

ಸಮುದ್ರತೀರದಲ್ಲಿ ರಾಜ್ಯವಾಳುತ್ತಿರುವ ಶೂದ್ರರಾಜರು, ಕಾರ್ಪಾಸಿಕ ನಿವಾಸಿಗಳಾದ ಸಾವಿರಾರು ದಾಸಿಯರನ್ನು ಧರ್ಮರಾಜನಿಗೆ ತಂದೊಪ್ಪಿಸಿದರು. ಅವರೆಲ್ಲರೂ ಕಡುಚೆಲುವೆಯರಾಗಿಯೂ, ಲತೆಯಂತೆ ಬಳುಕುವ ಶರೀರವುಳ್ಳವರಾಗಿಯೂ, ದೀರ್ಘವಾದ ಕೇಶರಾಶಿ ಯುಳ್ಳವರಾಗಿಯೂ, ಸುವರ್ಣಾಭರಣಗಳಿಂದ ಭೂಷಿತೆಯರಾಗಿಯೂ ಇದ್ದರು. ಆ ರಾಜರು ಬ್ರಾಹ್ಮಣರು ಕುಳಿತುಕೊಳ್ಳಲು ಯೋಗ್ಯವಾದ ರಾಂಕವವೆಂಬ ಜಿಂಕೆಗಳ ಅಜಿನಗಳನ್ನೂ ತಂದುಕೊಟ್ಟರು.

ವೈರಾಮರೆಂಬುವವರು, ಪಾರದರೆಂಬುವವರು, ಆಭೀರರು, ಕಿತವರು– ಇವರೆಲ್ಲರೂ ಉತ್ತಮವಾದ ಸಾವಿರಾರು ಆಡುಗಳನ್ನೂ, ಗೋವುಗಳನ್ನೂ, ಜೇನುತುಪ್ಪ, ರತ್ನಗಂಬಳಿಗಳು, ಅನೇಕ ವಿಧವಾದ ಕಾಯಿಪಲ್ಯೆಗಳು, ವಜ್ರ-ವೈಡೂರ್ಯ–ಇವುಗಳೆಲ್ಲವನ್ನೂ ತಂದು ಧರ್ಮಜನಿಗೆ ಅರ್ಪಿಸಲು ಮಹಾದ್ವಾರದಲ್ಲಿ ಕಾದಿರುತ್ತಿದ್ದರು.

ಪ್ರಾಗ್ಜ್ಯೋತಿಷನಗರಿಗೆ ಅಧಿಪತಿಯಾದ ಭಗದತ್ತನು ಅನೇಕ ಯವನ ರಾಜರೊಡನೆ ಬಂದು ಮಹಾದ್ವಾರದಲ್ಲಿ ಕಾದಿದ್ದನು. ಅವನು ತಂದ ಕಪ್ಪ-ಕಾಣಿಕೆಗಳು ಅಸಂಖ್ಯಾತವಾಗಿದ್ದುವು. ವಾಯುವೇಗಗಮನವುಳ್ಳ ಉತ್ತಮವಾದ ಕುದುರೆಗಳನ್ನೂ, ಆನೆಯ ದಂತದಿಂದ ಮಾಡಿದ ಹಿಡಿಗಳುಳ್ಳ ಸಾವಿರಾರು ಕತ್ತಿಗಳನ್ನೂ ಧರ್ಮಜನಿಗೆ ಮಹಾದ್ವಾರದಲ್ಲಿಯೇ ಅರ್ಪಿಸಿ ಒಳಗೆ ಪ್ರವೇಶಮಾಡಲು ಕೂಡ ಸಾಧ್ಯವಾಗದೇ ಹಿಂದಿರುಗಿದನು.

ಅನೇಕ ರಾಜ್ಯಗಳಿಂದ ಬಂದಿದ್ದವರಲ್ಲಿ ಕೆಲವರು ಏಕಾಕ್ಷಿಗಳು. ಕೆಲವ

ರಿಗೆ ಮೂರು ಕಣ್ಣುಗಳಿದ್ದುವು. ಕೆಲವರಿಗೆ ಹಣೆಗಳ ಮೇಲೆ ಕಣ್ಣುಗಳಿದ್ದುವು. ಅವರಿಗೆ ಉಷ್ಣೀಕರೆಂದೂ, ನಿಷಾದರೆಂದೂ, ರೋಮಕರೆಂದೂ ಹೆಸರು. ಮತ್ತೆ ಕೆಲವರು ಮನುಷ್ಯಭಕ್ಷಕರು. ಕೆಲವರಿಗೆ ಒಂದೇ ಕಾಲಿದ್ದಿತು. ಅವರೆಲ್ಲರೂ ಧರ್ಮಜನ ದ್ವಾರಪಾಲಕರಿಂದ ತಡೆಯಲ್ಪಟ್ಟವರಾಗಿ ಮಹಾದ್ವಾರದ ಬಳಿಯಲ್ಲಿ ನಿಂತಿದ್ದರು. ಕೆಲವು ರಾಜರು ತಂದ ಹೇಸರಗತ್ತೆಗಳು ವಿಚಿತ್ರವಾಗಿದ್ದುವು. ಕತ್ತುಗಳು ಕಪ್ಪಾಗಿದ್ದು ದೊಡ್ಡ ಶರೀರವುಳ್ಳವುಗಳಾಗಿದ್ದುವು. ಅವುಗಳು ಬಹಳ ವೇಗಗಾಮಿಗಳಾಗಿದ್ದುವು. ಅವುಗಳೆಲ್ಲವೂ ವಂಕ್ಷು ಎಂಬ ತೀರಪ್ರದೇಶದಲ್ಲಿ ಹುಟ್ಟಿದುವುಗಳು.

ಕೆಲವು ರಾಜರು ಧರ್ಮಜನಿಗೆ ಅಸಂಖ್ಯಾತವಾದ ಚಿನ್ನದ ನಾಣ್ಯಗಳನ್ನೂ, ಬೆಳ್ಳಿಯ ನಾಣ್ಯಗಳನ್ನೂ ಕಪ್ಪವಾಗಿ ಕೊಟ್ಟರು. ಅವರೆಲ್ಲರಿಗೂ ಅರಮನೆಯೊಳಗೆ ಬರಲು ಪ್ರವೇಶಾವಕಾಶವು ಸಿಕ್ಕಿತು.

ಏಕಪಾದರು ಧರ್ಮಜನಿಗೆ ಅರ್ಪಿಸಿದ ಕುದುರೆಗಳು ಅತಿವಿಚಿತ್ರವಾಗಿದ್ದುವು. ಕೆಲವು ಕಾಮನಬಿಲ್ಲಿನ ಬಣ್ಣದಲ್ಲಿದ್ದುವು. ಮತ್ತೆ ಕೆಲವು ಕೆಂಪಾಗಿಯೂ, ಕೆಲವು ಗಿಳಿಯ ಬಣ್ಣದುವುಗಳಾಗಿಯೂ, ಬಿಳಿಯ ಬಣ್ಣದುವುಗಳಾಗಿಯೂ, ಆಕಾಶದ ಬಣ್ಣದುವುಗಳಾಗಿಯೂ ಇದ್ದುವು. ಏಕಪಾದರು ಕುದುರೆಗಳನ್ನು ಮಾತ್ರವಲ್ಲದೇ – ಉತ್ತಮವಾದ ಸ್ವರ್ಣವನ್ನೂ ಧರ್ಮಜನಿಗರ್ಪಿಸಿದರು.

ಚೀನರು, ಶಕರು, ಓಢ್ರರು, ಬರ್ಬರರು, ವಾರ್ಷ್ಣೇಯರು, ಹಾರಹೂಣರು, ಕಪ್ಪುಬಣ್ಣದ ಹೈಮವತರು, ನೀಪರು, ಅನೂಪರು–ಇವರೆಲ್ಲರನ್ನೂ ಧರ್ಮಜನ ಅರಮನೆಯ ಮಹಾದ್ವಾರದಲ್ಲಿ ನೋಡಿದೆನು. ಅವರುಗಳಿಗೆ ಒಡನೆಯೇ ಪ್ರವೇಶಾವಕಾಶವು ಸಿಕ್ಕಲಿಲ್ಲ.

ಬಾಹ್ಲಿಕದೇಶದ ಪ್ರಜೆಗಳು ಧರ್ಮಜನಿಗೆ ಒಳ್ಳೆಯ ಜಾತಿಯ ಮತ್ತು ದಿನಕ್ಕೆ ಇನ್ನೂರು ಮೈಲಿಗಳು ಪ್ರಯಾಣಮಾಡುವ ಸಾಮರ್ಥ್ಯವುಳ್ಳ ಹತ್ತು ಸಾವಿರ ಹೇಸರಗತ್ತೆಗಳನ್ನು ಕಾಣಿಕೆಯಾಗಿ ಕಳುಹಿಸಿದ್ದರು. ಅವುಗಳಲ್ಲದೇ ಅನೇಕ ಸಾವಿರ ರತ್ನಗಂಬಳಿಗಳನ್ನೂ, ಉಣ್ಣೆಯ ಬಟ್ಟೆಗಳನ್ನೂ, ಚೀನಾದೇಶ ದಲ್ಲಿ ತಯಾರಾದ ಬಟ್ಟೆಗಳನ್ನೂ, ನಾರುಮಡಿಗಳನ್ನೂ, ರೇಷ್ಮೆಯಬಟ್ಟೆ

ಗಳನ್ನೂ, ಕೃಷ್ಣಾಜಿನಗಳನ್ನೂ, ಕಮಲದ ವರ್ಣವುಳ್ಳ ಅಮೂಲ್ಯವಾದ ಇನ್ನೂ ಅನೇಕ ವಸ್ತುಗಳನ್ನೂ ಕಾಣಿಕೆಯಾಗಿ ಅರ್ಪಿಸಿದರು.

ಅವುಗಳಲ್ಲದೇ ತೀಕ್ಷ್ಣವಾದ ಅಲಗುಗಳುಳ್ಳ ಕತ್ತಿಗಳನ್ನೂ, ಪಾಶ್ಚಾತ್ಯ ದೇಶಗಳಲ್ಲಿ ತಯಾರಾದ ಪರಶುಗಳನ್ನೂ ಬಾಹ್ಲಿಕದೇಶದ ಜನರು ಕಳುಹಿಸಿದ್ದರು. ನಾನಾವಿಧವಾದ ಸುಗಂಧದ್ರವ್ಯಗಳನ್ನೂ, ರತ್ನಾಭರಣಗಳನ್ನೂ ಸಹಸ್ರಸಂಖ್ಯೆಯಲ್ಲಿ ತಂದು ಮಹಾದ್ವಾರದ ಬಳಿ ಕಾದಿದ್ದ ಅವರಿಗೂ ಒಡನೆಯೇ ಪ್ರವೇಶಾವಕಾಶವು ಸಿಗಲಿಲ್ಲ.

ಶಕರು, ತುಷಾರರು, ಕಂಕರು, ರೋಮಶರು, ಶೃಂಗಿಗಳು – ಇವರೆಲ್ಲರೂ ಅನೇಕ ಮಹಾಗಜಗಳನ್ನೂ, ಅರ್ಬುದಸಂಖ್ಯೆಯಲ್ಲಿ ಕುದುರೆಗಳನ್ನೂ, ಅಷ್ಟೇ ಸಂಖ್ಯೆಯ ಸುವರ್ಣನಾಣ್ಯಗಳನ್ನೂ ತಂದು ಮಹಾದ್ವಾರದಲ್ಲಿ ಕಾದಿದ್ದರು.

ಪೂರ್ವದೇಶದ ರಾಜರು ಉತ್ತಮವಾದ ರತ್ನಗಂಬಳಿಗಳನ್ನೂ, ಹಂಸತೂಲಿಕಾತಲ್ಪಗಳನ್ನೂ, ಕವಚಗಳನ್ನೂ, ಅನೇಕವಿಧವಾದ ಆಯುಧಗಳನ್ನೂ ಉತ್ತಮಾಶ್ವಯುಕ್ತವಾದ–ವ್ಯಾಘ್ರಚರ್ಮಾಸ್ತರಣವುಳ್ಳ ಚಿನ್ನದ ತಗಡಿನಿಂದ ಅಲಂಕರಿಸಲ್ಪಟ್ಟ ರಥವನ್ನೂ, ಆನೆಗಳಿಗೆ ಹೊದಿಸಲು ಉಪಯೋಗಿಸುವ ರತ್ನಗಂಬಳಿಗಳನ್ನೂ, ನಾನಾವಿಧವಾದ ರತ್ನಗಳನ್ನೂ, ದೀರ್ಘವಾದ ಮತ್ತು ಸಣ್ಣದಾದ ಬಾಣಗಳನ್ನೂ ಮತ್ತು ಅವುಗಳನ್ನಿಡುವ ಬತ್ತಳಿಕೆಗಳನ್ನೂ ಧರ್ಮಜನಿಗೆ ಕಾಣಿಕೆಯಾಗಿ ತಂದು ಅರ್ಪಿಸಿದರು.

ಅವರೆಲ್ಲರಿಗೂ ಅನುಕ್ರಮವಾಗಿ ಧರ್ಮಜನ ಯಾಗಮಂಟಪಕ್ಕೆ ಪ್ರವೇಶಾವಕಾಶವು ಸಿಕ್ಕಿತು."

ಐಂನೆಯ ಅಧ್ಯಾಯವು ಮುಗಿಯಿತು.

೫೨ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಯುಧಿಷ್ಠಿರನಿಗೆ ತಂದೊಪ್ಪಿಸಿದ ಕಪ್ಪ-ಕಾಣಿಕೆಗಳ ವರ್ಣನೆ

ಜನಮೇಜಯ! ದುರ್ಯೋಧನನು ಮುಂದುವರಿಸಿ ಹೇಳುತ್ತಾನೆ :
"ಅಪ್ಪ! ಧರ್ಮಜನಿಗೆ ನಾನಾದೇಶಗಳ ರಾಜರು ಕಾಣಿಕೆಯ

ರೂಪದಲ್ಲಿ ಸಮರ್ಪಿಸಿದ ಐಶ್ವರ್ಯದ ರಾಶಿಯೆಷ್ಟೆಂಬುದನ್ನು ಇನ್ನೂ ವಿವರಿಸುವೆನು, ಕೇಳು : ಮೇರುಪರ್ವತಕ್ಕೂ-ಮಂದರಪರ್ವತಕ್ಕೂ ಮಧ್ಯದಲ್ಲಿ ಹರಿಯುವ ಶೈಲೋದನದಿಯ ತೀರದಲ್ಲಿ ವಾಸವಾಗಿರುವ– ಬಿದಿರುಮೆಳೆಗಳ ಆವರಣವನ್ನು ಹೊಂದಿರುವ ಖಸರು, ಏಕಾಸನರು, ಅರ್ಹರು, ಪ್ರದರರು, ದೀರ್ಘವೇಣುಗಳು, ಪಾರದರು, ಕುಲಿಂದರು, ತಂಗಣರು, ಪರತಂಗಣರು – ಇವರೆಲ್ಲರೂ ಪಿಪೀಲಕವೆಂಬ ಇರುವೆ ಗಳಿಂದಲೇ ಭೂಗರ್ಭದಿಂದ ಮೇಲೆ ತರಲ್ಪಟ್ಟ ಸುವರ್ಣವನ್ನು ತಂದು ದ್ರೋಣವೆಂಬ ಬಳ್ಳದಲ್ಲಿ ಅಳೆದುಕೊಟ್ಟರು. ಮಹಾಬಲಿಷ್ಠರಾದ ಪರ್ವತ ವಾಸಿಗಳು ಬಹಳ ನುಣುಪಾದ, ಚಂದ್ರನ ಬೆಳದಿಂಗಳಿನಂತೆ ಬಿಳುಪಾದ ಹಲವು ಸಾವಿರ ಚಾಮರಗಳನ್ನೂ, ಹಿಮವತ್ಪರ್ವತದ ತಪ್ಪಲಿನಲ್ಲಿರುವ ಕುಸುಮಗಳಿಂದ ತೆಗೆದ ಅತಿಮಧುರವಾದ ಜೇನುತುಪ್ಪವನ್ನೂ ತಂದು, ಮಲ್ಲಿಗೆ ಮತ್ತು ಸಂಪಿಗೆ ಹೂವುಗಳಿಂದ ಕಟ್ಟಿದ ದಿವ್ಯಮಾಲಿಕೆಗಳನ್ನೂ ಕೈಗಳಲ್ಲಿ ಹಿಡಿದು ಧರ್ಮಜನ ಅರಮನೆಯ ಮಹಾದ್ವಾರದ ಬಳಿಯಲ್ಲಿ ನಿಂತಿದ್ದರು. ಉತ್ತರಕುರುಗಳೂ ಮತ್ತು ಕೈಲಾಸವಾಸಿಗಳೂ ಓಷಧೀಲತೆಗಳನ್ನೂ, ಪುಷ್ಪಮಾಲಿಕೆಗಳನ್ನೂ ತಂದು ಮಹಾದ್ವಾರದಲ್ಲಿ ಕಾದಿದ್ದರು. ಅವರಿಗೂ ಒಡನೆಯೇ ಪ್ರವೇಶಾವಕಾಶವು ಸಿಗಲಿಲ್ಲ.

ಕ್ರೂರಕರ್ಮಿಗಳಾದ, ಭರ್ಜಿ-ಈಟಿ ಮೊದಲಾದ ಆಯುಧಗಳನ್ನು ಹೊಂದಿದ್ದ, ಕಂದ-ಮೂಲ-ಫಲಗಳೇ ಆಹಾರವಾಗಿ ಉಳ್ಳ, ಚರ್ಮದ ಉಡುಗೆ-ತೊಡುಗೆಗಳನ್ನು ಧರಿಸಿದ್ದ, ಹಿಮವತ್ಪರ್ವತದ ಉತ್ತರದಲ್ಲಿಯೂ, ಪೂರ್ವಪರ್ವತದಲ್ಲಿಯೂ, ಕಾರೂಷವೆಂಬ ಪ್ರದೇಶದಲ್ಲಿಯೂ, ಸಮುದ್ರದ ತೀರಪ್ರದೇಶಗಳಲ್ಲಿಯೂ, ಲೋಹಿತ್ಯಪರ್ವತದ ಎರಡು ಕಡೆಗಳಲ್ಲಿಯೂ ವಾಸವಿರುವ ಬೇಡರನ್ನು ನಾನು ಆ ಸಮೂಹದಲ್ಲಿ ಕಂಡೆನು.

ಅವರು ತಂದ ವಸ್ತುಗಳು ಹೇರಳವಾಗಿದ್ದುವು. ನೂರಾರು ಬಂಡಿ ಗಳಲ್ಲಿ ಚಂದನವನ್ನೂ, ಅಗುರುಗಳನ್ನೂ ತಂದಿದ್ದರು. ಹಲವಾರು ಬಂಡಿಗಳಲ್ಲಿ ಹದಮಾಡಿದ ಬಹುಮೌಲ್ಯದ ಚರ್ಮವನ್ನೂ, ಸುವರ್ಣ ನಾಣ್ಯಗಳನ್ನೂ, ಸುಗಂಧದ್ರವ್ಯಗಳನ್ನೂ ತಂದಿದ್ದರು. ಅವರು ತಮ್ಮ ಜನಾಂಗದ ಹತ್ತು ಸಾವಿರ ದಾಸಿಯರನ್ನೂ ಕರೆತಂದಿದ್ದರು. ತಮ್ಮ ಪ್ರಾಂತದ

ಸುಂದರವಾದ ಮೃಗಗಳನ್ನೂ, ಪಕ್ಷಿಗಳನ್ನೂ ಕಾಣಿಕೆಯಾಗಿ ತಂದಿದ್ದರು. ಪರ್ವತಗಳಲ್ಲಿ ಸಿಕ್ಕುವ ಸುವರ್ಣರಾಶಿಯನ್ನೇ ಅವರು ಧರ್ಮಜನಿಗೆ ಕಾಣಿಕೆಯಾಗಿ ತಂದಿದ್ದರು. ಅವರಿಗೂ ಮಹಾದ್ವಾರದಲ್ಲಿ ಒಡನೆಯೇ ಪ್ರವೇಶಾವಕಾಶವು ಸಿಕ್ಕದೇ ಕಾದು ನಿಲ್ಲಬೇಕಾಯಿತು.

ಕೈರಾತರು, ದರದರು, ಶೂರರಾದ ದರ್ವರು, ಯಮಕರು, ಔದುಂಬರರು, ದುರ್ವಿಭಾಗರು, ಬಾಹ್ಲಿಕರಿಂದೊಡಗೂಡಿದ ಪಾರದರು, ಕಾಶ್ಮೀರಿಗಳು, ಕುಮಾರರು, ಘೋರಕರು, ಹಂಸಕಾಯನರು, ಶಿಬಿಗಳು, ತ್ರಿಗರ್ತರು, ಯೌಧೇಯರು, ಭದ್ರಕೇಕಯರು, ಅಂಬಷ್ಠರು, ಕೌಕುರರು,



ತಾರ್ಕ್ಷ್ಯರು, ವಸ್ತ್ರಪರು, ಪಹ್ಲವರು, ವಶಾತಲರು, ಮೌಲೇಯರು, ಕ್ಷುದ್ರಕರು, ಮಾಲವರು, ಶೌಂಡಿಕರು, ಕುಕುರರು, ಶಕರು, ಅಂಗರು, ವಂಗರು, ಪುಂಡ್ರರು, ಶಾಣವತರು, ಗಯರು–ಇವರೇ ಮುಂತಾದ ಸದ್ವಂಶೀಯರಾದ ಕ್ಷತ್ರಿಯರು ಧರ್ಮಜನಿಗೆ ಸಾವಿರಾರು ಸಂಖ್ಯೆಯಲ್ಲಿ ಕಾಣಿಕೆಗಳನ್ನು ತಂದು ಅರ್ಪಿಸಿದರು.

ವಂಗರು, ಕಲಿಂಗರು, ಮಗಧರು, ತಾಮ್ರಲಿಪ್ತರು, ಸಪುಂಡ್ರಕರು,

ದೌವಾಲಿಕರು, ಸಾಗರಕರು, ಪತ್ರೋರ್ಣರು, ಶೈಶವರು, ಕರ್ಣಪ್ರಾವಣರು ಮುಂತಾದವರಿಗೆ ದ್ವಾರಪಾಲಕರು ಧರ್ಮಜನ ಆಜ್ಞಾನುಸಾರವಾಗಿ – "ನೀವು ಸ್ವಲ್ಪಕಾಲ ಮಹಾದ್ವಾರದ ಬಳಿಯಲ್ಲಿಯೇ ನಿಂತಿರಬೇಕು ಮತ್ತು ಇನ್ನೂ ಹೆಚ್ಚಿನ ಕಪ್ಪ-ಕಾಣಿಕೆಗಳನ್ನು ತರಬೇಕು. ಆಗ ನಿಮಗೆ ಪ್ರವೇಶಾವಕಾಶವು ಸಿಕ್ಕುವುದು" – ಎಂದು ಹೇಳಿದುದನ್ನು ನಾನೇ ಕೇಳಿದೆನು.

ದ್ವಾರಪಾಲಕರ ಮಾತುಗಳನ್ನು ಕೇಳಿ ಆ ರಾಜರು ಶೋಭಿಸುತ್ತಿದ್ದ ನೇಗಿಲಿನಂತೆ ದಂತವುಳ್ಳ, ಶ್ರೇಷ್ಠವಾದ, ಸುವರ್ಣಖಚಿತವಾದ ಜಮಖಾನದ ಗಾದಿಯಿಂದ ಕೂಡಿದ ಒಂದು ಸಾವಿರ ಆನೆಗಳನ್ನು ಕಾಣಿಕೆಯಾಗಿ ಅರ್ಪಿಸಿದರು. ಆ ಆನೆಗಳೆಲ್ಲವೂ ಬಂಡೆಗಳಂತೆ ಕಪ್ಪಾಗಿದ್ದುವಲ್ಲದೇ – ಮದಿಸಿದುವುಗಳಾಗಿ, ಯುದ್ಧೋಪಯೋಗಿಯಾದ ಕವಚಗಳಿಂದ ಆಚ್ಛಾದಿಸಲ್ಪಟ್ಟಿದ್ದುವು. ಅವುಗಳನ್ನು ಕಾಮ್ಯಕವೆಂಬ ಸರೋವರದ ಸಮೀಪದಿಂದ ಹಿಡಿದುತಂದಿದ್ದರು. ಅಂತಹ ಒಂದೊಂದು ಸಾವಿರ ಆನೆಗಳನ್ನು ಒಬ್ಬೊಬ್ಬ ರಾಜನೂ ಸಮರ್ಪಿಸಿದನಂತರ, ಕ್ಷಮಾವಂತರಾದ, ಕುಲೀನರಾದ ಆ ರಾಜರಿಗೆ ಯಜ್ಞಶಾಲೆಗೆ ಪ್ರವೇಶಾವಕಾಶವು ಲಭಿಸಿತು.

ಅದೇ ರೀತಿಯಲ್ಲಿ ನಾನಾದೇಶಗಳಿಂದ ಬಂದ ಅಸಂಖ್ಯಾತರಾಜರೂ ಪ್ರಜೆಗಳೂ ಧರ್ಮಜನಿಗೆ ಅತ್ಯಮೂಲ್ಯವಾದ ಕಪ್ಪ-ಕಾಣಿಕೆಗಳನ್ನು ಅರ್ಪಿಸಿದರು.

ಮಹಾರಾಜ! ಧರ್ಮಜನಿಗೆ ಮನುಷ್ಯರು ಮಾತ್ರವೇ ಕಪ್ಪಗಳನ್ನು ಅರ್ಪಿಸಲಿಲ್ಲ. ಗಂಧರ್ವರೂ ಬಹುಮಾನರೂಪವಾಗಿ ನಾನಾವಸ್ತುಗಳನ್ನು ಕೊಟ್ಟು ಧರ್ಮಜನನ್ನು ಗೌರವಿಸಿದರು.

ಗಂಧರ್ವಾಧಿಪತಿಯಾದ, ಇಂದ್ರಮಿತ್ರನಾದ ಚಿತ್ರಸೇನನು ವಾಯು ವೇಗಕ್ಕೆ ಸಮಾನವೇಗವುಳ್ಳ ನಾಲ್ಕು ನೂರು ಕುದುರೆಗಳನ್ನು ಬಹುಮಾನವಾಗಿ ಕೊಟ್ಟನು. ತುಂಬುರು ಎಂಬ ಗಂಧರ್ವನು ಮಾವಿನ ಎಲೆಗೆ ಸಮನಾದ ಬಣ್ಣವುಳ್ಳ, ಉತ್ತಮಜಾತಿಯ, ಸ್ವರ್ಣಮಯವಾದ ಕಡಿವಾಣಗಳಿಂದ ಕೂಡಿದ್ದ ನೂರು ಕುದುರೆಗಳನ್ನು ಬಹುಮಾನವಾಗಿ ಕೊಟ್ಟನು. ಪುಣ್ಯಾತ್ಮನಾದ ಶೂಕರರಾಜನು ನೂರಾರು ಆನೆಗಳನ್ನು ಕಾಣಿಕೆಯಾಗಿ ಕೊಟ್ಟನು.

ಮತ್ಸ್ಯದೇಶಾಧಿಪತಿಯಾದ ವಿರಾಟನು ಎರಡು ಸಾವಿರ ಆನೆಗಳನ್ನು ಕಾಣಿಕೆಯಾಗಿ ಅರ್ಪಿಸಿದನು.

ಪಾಂಶುರಾಷ್ಟ್ರಾಧಿಪತಿಯಾದ ವಸುದಾನನೆಂಬುವನು ಇಪ್ಪತ್ತಾರು ಆನೆಗಳನ್ನೂ, ದಷ್ಟ-ಪುಷ್ಟವಾದ, ಸುವರ್ಣಮಾಲೆಗಳನ್ನು ಧರಿಸಿದ್ದ ಎರಡು ಸಾವಿರ ಕುದುರೆಗಳನ್ನೂ, ಇನ್ನೂ ಅನೇಕವಸ್ತುಗಳನ್ನೂ ಕಾಣಿಕೆಯಾಗಿ ಕೊಟ್ಟನು. ಯಜ್ಞಸೇನನು ಯುಧಿಷ್ಠಿರನ ಯಾಗಕ್ಕೆ ಪರಿಚಾರಿಕೆಯರಾಗಿ ಹದಿನಾಲ್ಕು ಸಾವಿರ ದಾಸಿಯರನ್ನೂ, ಪರಿಚಾರಕರುಗಳಾಗಿ ಹತ್ತು ಸಾವಿರ ಸಕುಟುಂಬರಾದ ಪುರುಷರನ್ನೂ, ನೂರಾರು ಆನೆಗಳನ್ನೂ, ಇಪ್ಪತ್ತಾರು ಆನೆಗಳಿಂದ ಎಳೆಯಲ್ಪಡುವ ಇಪ್ಪತ್ತಾರು ಮಹಾರಥಗಳನ್ನೂ ಮತ್ತು ಔಪಚಾರಿಕವಾಗಿ ತನ್ನ ರಾಜ್ಯವನ್ನೂ ಯುಧಿಷ್ಠಿರನಿಗೆ ಅರ್ಪಿಸಿದನು.

ಅರ್ಜುನನ ಕೀರ್ತಿಯನ್ನು ಹೆಚ್ಚಿಸಲು ವೃಷ್ಣಿಕುಲಾವತಂಸನಾದ ವಾಸುದೇವನು ಹದಿನಾಲ್ಕು ಸಾವಿರ ಆನೆಗಳನ್ನು ಯುಧಿಷ್ಠಿರನಿಗೆ ಬಹುಮಾನವಾಗಿ ಕೊಟ್ಟನು. ಮಹಾರಾಜ! ನಿಶ್ಚಯವಾಗಿ ಹೇಳುವುದಾದರೆ–

**ಆತ್ಮಾ ಹಿ ಕೃಷ್ಣಃ ಪಾರ್ಥಸ್ಯ ಕೃಷ್ಣಸ್ಯಾತ್ಮಾ ಧನಂಜಯಃ ।**
**ಯದ್ಬ್ರೂಯಾದರ್ಜುನಃ ಕೃಷ್ಣಂ ಸರ್ವಂ ಕುರ್ಯಾದಸಂಶಯಂ ॥೩೧॥**

**ಕೃಷ್ಣೋ ಧನಂಜಯಸ್ಯಾರ್ಥೇ ಸ್ವರ್ಗಲೋಕಮಪಿ ತ್ಯಜೇತ್ ।**
**ತಥೈವ ಪಾರ್ಥಃ ಕೃಷ್ಣಾರ್ಥೇ ಪ್ರಾಣಾನಪಿ ಪರಿತ್ಯಜೇತ್ ॥೩೨॥**

ಪಾರ್ಥನಿಗೆ ಕೃಷ್ಣನು ಆತ್ಮಪ್ರಾಯನಾಗಿದ್ದಾನೆ. ಕೃಷ್ಣನಿಗೆ ಪಾರ್ಥನೇ ಆತ್ಮನು. ಪಾರ್ಥನು ಏನು ಹೇಳಿದರೂ ಕೃಷ್ಣನದನ್ನು ಕಾರ್ಯಗತಮಾಡಿ ಬಿಡುವನು. ಶ್ರೀಕೃಷ್ಣನು ಪಾರ್ಥನ ಸಲುವಾಗಿ ಸ್ವರ್ಗವನ್ನಾದರೂ ಪರಿತ್ಯಜಿಸುವನು. ಅಂತೆಯೇ ಪಾರ್ಥನೂ ಶ್ರೀಕೃಷ್ಣನ ಸಲುವಾಗಿ ಪ್ರಾಣವನ್ನಾದರೂ ಪರಿತ್ಯಜಿಸುವನು. ಅವರಿಬ್ಬರ ಪರಸ್ಪರ ಮೈತ್ರಿಯು ಅಷ್ಟೊಂದು ಪ್ರೇಮದಿಂದ ಕೂಡಿರುವುದು, ಮಹಾರಾಜ!

ಚೋಲ ಮತ್ತು ಪಾಂಡ್ಯರಾಜರು ಅನೇಕಸುವರ್ಣಭಾಂಡಗಳಲ್ಲಿ ಮಲಯಪರ್ವತಗಳಲ್ಲಿ ಉತ್ಪನ್ನವಾಗುವ ಚಂದನವನ್ನೂ, ದರ್ದುರ ಪರ್ವತದಲ್ಲಿ ಉತ್ಪನ್ನವಾಗುವ ಅಗುರುಗಳನ್ನೂ ಮತ್ತು ಥಳ-ಥಳಿಸುವ

ಅನೇಕ ಜಾತಿಯ ರತ್ನಗಳನ್ನೂ ಮತ್ತು ಸುವರ್ಣದ ದಾರಗಳಿಂದ ನೇಯ್ದ ಉತ್ತಮವಾದ ಪೀತಾಂಬರಗಳನ್ನೂ ತಂದಿದ್ದರೂ ಯಜ್ಞಶಾಲೆಗೆ ಪ್ರವೇಶಾವಕಾಶವು ಸಿಗಲಿಲ್ಲ.

ಸಿಂಹಲದೇಶದ ರಾಜರು ಸಮುದ್ರದಲ್ಲಿ ಸಿಕ್ಕುವ ವೈಡೂರ್ಯಗಳನ್ನೂ, ಅಮೋಘವಾದ ಮುತ್ತುಗಳನ್ನೂ ಯುಧಿಷ್ಠಿರನಿಗೆ ಕಾಣಿಕೆಯಾಗಿ ತಂದಿದ್ದರು. ಅವರು ಕಪ್ಪುಬಣ್ಣವುಳ್ಳವರಾಗಿಯೂ, ಕೆಂಪಾದ ಕಟಾಕ್ಷವುಳ್ಳವರಾಗಿಯೂ, ರತ್ನಖಚಿತವಾದ ವಸ್ತ್ರಗಳನ್ನು ಧರಿಸಿದವರಾಗಿಯೂ ಇದ್ದರು.



ಪಾಂಡವರಿಂದ ಪರಾಜಿತರಾದ ಅನೇಕರಾಜರೂ, ಬ್ರಾಹ್ಮಣರೂ, ವೈಶ್ಯ-ಶೂದ್ರರೂ ಯುಧಿಷ್ಠಿರನ ಮೇಲಿನ ಪ್ರೇಮದಿಂದ ಅನೇಕವಿಧವಾದ ಕಾಣಿಕೆಗಳನ್ನು ತಂದರ್ಪಿಸಿದರು.

ಮ್ಲೇಚ್ಛರಾಜರೂ ಕೂಡ ಯುಧಿಷ್ಠಿರನ ಮೇಲಿನ ಪ್ರೇಮ-ವಿಶ್ವಾಸ ಗಳಿಂದ ಕಪ್ಪ-ಕಾಣಿಕೆಗಳನ್ನಿತ್ತು ಕುಂತೀಪುತ್ರನನ್ನು ಗೌರವಿಸಿದರು.

ಹೆಚ್ಚೇನು ಹೇಳಲಿ, ಮಹಾರಾಜ! ಮ್ಲೇಚ್ಛರೇ ಮೊದಲಾದ ಎಲ್ಲ ವರ್ಣಗಳ, ಎಲ್ಲ ಮತಗಳ ಉತ್ತಮ-ಮಧ್ಯಮಾಧಮವರ್ಗಗಳ ಪ್ರಜೆಗಳೆಲ್ಲರೂ ಸ್ವರ್ಗಲೋಕಸದೃಶವಾದ ಯುಧಿಷ್ಠಿರನ ಆವಾಸವನ್ನು ಸಂದರ್ಶಿಸಲು ಬಂದಿದ್ದರು. (ಯುಧಿಷ್ಠಿರನ ಆವಾಸದಲ್ಲಿ ಇಡೀ ಲೋಕವೇ ಸೇರಿದಂತಿದ್ದಿತು.)

ಅಪ್ಪ! ನಮ್ಮ ಶತ್ರುಗಳಿಗೆ ಭೂಮಂಡಲದ ಸಕಲರಾಜರೂ ಒಪ್ಪಿಸುತ್ತಿದ್ದ ಅಸಂಖ್ಯಾತವಾದ ಬಗೆಬಗೆಯ ಪಾರಿತೋಷಕಗಳನ್ನು ಕಂಡ ನಾನು ಬಹಳ ದುಃಖಿತನಾಗಿ ಒಡನೆಯೇ ಮರಣವನ್ನೇ ಅಪೇಕ್ಷಿಸಿದೆನು.

ಮಹಾರಾಜ! ಯುಧಿಷ್ಠಿರನ ಭೃತ್ಯವರ್ಗವೆಷ್ಟೆಂಬುದನ್ನು ಹೇಳುವೆನು ; ಕೇಳು. ಅವರೆಲ್ಲರಿಗೂ ಯುಧಿಷ್ಠಿರನು ಪಕ್ವವಾದ ಮತ್ತು ಹಸಿಯಾದ ಆಹಾರವನ್ನು ಒದಗಿಸುತ್ತಿದ್ದನು. ಮೂರು ಪದ್ಮ ಮತ್ತು ಹತ್ತು ಸಾವಿರ ಸಂಖ್ಯಾತವಾದ ಗಜಾರೋಹಿಗಳೂ–ಅಶ್ವಾರೋಹಿಗಳೂ ಇದ್ದರು.

ಒಂದು ಅರ್ಬುದಸಂಖ್ಯಾತರಾದ (ಹತ್ತುಕೋಟಿ) ರಥಿಕರಿದ್ದರು. ಅಸಂಖ್ಯಾತರಾದ ಭೂಸೈನಿಕರಿದ್ದರು (ಪದಾತಿಗಳಿದ್ದರು). ಅವರೆಲ್ಲರಿಗೂ ಆಹಾರವನ್ನು ಒಂದೆಡೆಯಲ್ಲಿ ಅಳೆದು ಮತ್ತೊಂದೆಡೆಯಲ್ಲಿ ಪಕ್ವಮಾಡುವ ವ್ಯವಸ್ಥೆಯಿದ್ದಿತು. ಪಕ್ವವಾದ ಆಹಾರವನ್ನು ಬೇರೊಂದೆಡೆಯಲ್ಲಿ ವ್ಯವಸ್ಥಿತ ವಾಗಿ ಎಲ್ಲರಿಗೂ ಬಡಿಸುತ್ತಿದ್ದರು. ಉತ್ಸವದ ಸಂಭ್ರಮಗಳು ಎಲ್ಲೆಲ್ಲಿಯೂ ಕಾಣುತ್ತಿದ್ದುವು. ಹರ್ಷೋತ್ಸಾಹಗಳ ನಿನಾದಗಳು ಬಾರಿ-ಬಾರಿಗೂ ಕೇಳಿಬರುತ್ತಿದ್ದುವು. ಯುಧಿಷ್ಠಿರನ ಆ ಯಾಗದಲ್ಲಿ ಸರ್ವವರ್ಣಗಳಲ್ಲಿಯೂ ಯಾವೊಬ್ಬನಾದರೂ ಯಾವ ಕಾರಣದಿಂದಲೂ ಆಹಾರವಿಲ್ಲದೇ, ಉಡುಗೆ-ತೊಡುಗೆಗಳಿಲ್ಲದೇ, ಆಭರಣಗಳಿಲ್ಲದೇ ಇರಲಿಲ್ಲ.

ಎಂಬತ್ತೆಂಟು ಸಾವಿರಮಂದಿ ಸ್ನಾತಕರೂ, ಗೃಹಸ್ಥರೂ ಯುಧಿಷ್ಠಿರನ ಆಶ್ರಯದಲ್ಲಿದ್ದರು. ಅವರಲ್ಲಿ ಪ್ರತಿಯೊಬ್ಬರಿಗೂ ಮೂವತ್ತು ಮಂದಿ ಸೇವಕಿಯರಿದ್ದರು. ಉತ್ತಮವಾದ ಸೇವೆಯಿಂದ ಸಂತುಷ್ಟರಾದ ಗೃಹಸ್ಥರೆಲ್ಲ ಸರ್ವದಾ ಯುಧಿಷ್ಠಿರನ ಯೋಗ-ಕ್ಷೇಮಗಳನ್ನೇ ಬಯಸುತ್ತಾ ಅವನ ಶತ್ರುಗಳ ವಿನಾಶವನ್ನು ಕೋರುತ್ತಿದ್ದರು. ಅವರಲ್ಲದೇ ಹತ್ತು ಸಾವಿರ ಮಂದಿ

ಜಿತೇಂದ್ರಿಯರಾದ, ಊರ್ಧ್ವರೇತಸ್ಕರಾದ ತಪಸ್ವಿಗಳು ಯುಧಿಷ್ಠಿರನ ಅರಮನೆಯಲ್ಲಿ ಚಿನ್ನದ ತಟ್ಟೆಗಳಲ್ಲಿ ಭೋಜನಮಾಡುತ್ತಿದ್ದರು.



**ಅಭುಕ್ತಂ ಭುಕ್ತವದ್ವಾಪಿ ಸರ್ವಮಾಕುಬ್ಜವಾಮನಮ್ ।**
**ಅಭುಞ್ಜಾನಾ ಯಾಜ್ಞಸೇನೀ ಪ್ರತ್ಯವೈಕ್ಷದ್ವಿಶಾಂಪತೇ ॥೪೮॥**

ಯಾಜ್ಞಸೇನಿಯು ತಾನು ಬಹಳ ಹೊತ್ತಿನವರೆಗೂ ಊಟ ಮಾಡದೆಯೇ – ಕಿವುಡರು, ಕುಂಟರು, ಹೆಳವರು, ಮೂಗರು, ಕುಳ್ಳರು–ಎಲ್ಲರಿಗೂ ಭೋಜನವಾದನಂತರ–ಯಾರು ಊಟಮಾಡಿದರು? ಯಾರು ಊಟಮಾಡಲಿಲ್ಲ?–ಎಂಬುದನ್ನು ಪ್ರತ್ಯಕ್ಷವಾಗಿ ನೋಡಿಕೊಳ್ಳುತ್ತಿದ್ದಳು. ಊಟಮಾಡದಿರುವವರು ಮತ್ತಾರೂ ಇಲ್ಲವೆಂಬುದನ್ನು ನಿಶ್ಚಯಮಾಡಿಕೊಂಡು ತಾನೂ ಊಟ ಮಾಡುತ್ತಿದ್ದಳು.

ಮಹಾರಾಜ! ಇಬ್ಬರು ಮಾತ್ರ ಆ ಸಮಯದಲ್ಲಿ ಯುಧಿಷ್ಠಿರನಿಗೆ ಕಪ್ಪ-ಕಾಣಿಕೆಗಳನ್ನು ಕೊಡಲಿಲ್ಲ.

**ದ್ವೌ ಕರೌ ನ ಪ್ರಯಚ್ಛೇತಾಂ ಕುನ್ತೀಪುತ್ರಾಯ ಭಾರತ ।**
**ಸಮ್ಬನ್ಧಿಕೇನ ಪಞ್ಚಾಲಾಃ ಸಖ್ಯೇನಾನ್ಧಕವೃಷ್ಣಯಃ ॥೪೯॥**

ಬಂಧುತ್ವದ ಕಾರಣದಿಂದಾಗಿ ಪಾಂಚಾಲರು, ಮಿತ್ರತ್ವದ ಕಾರಣದಿಂದಾಗಿ ಅಂಧಕ-ವೃಷ್ಣಿಗಳು – ಇವರಿಬ್ಬರು ಕಪ್ಪವನ್ನು ಕೊಡಲಿಲ್ಲ. ಪ್ರಪಂಚದ ಉಳಿದ ಎಲ್ಲ ರಾಜರೂ ಯುಧಿಷ್ಠಿರನಿಗೆ ಕಪ್ಪ-ಕಾಣಿಕೆಗಳನ್ನರ್ಪಿಸಿದರು."

೫೨ನೆಯ ಅಧ್ಯಾಯವು ಮುಗಿಯಿತು.

೫೩ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ)

## ದುರ್ಯೋಧನನಿಂದ ಯುಧಿಷ್ಠಿರನ ಸಾಮ್ರಾಜ್ಯ ಪಟ್ಟಾಭಿಷೇಕದ ವರ್ಣನೆ

"ತಂದೆಯೇ! ಸರ್ವರ ಮನ್ನಣೆಗೂ ಪಾತ್ರರಾದ, ಸತ್ಯಸಂಧರಾದ, ಮಹಾವ್ರತರಾದ, ಚತುರ್ದಶವಿದ್ಯೆಗಳಲ್ಲಿಯೂ ಪರಿಣತರಾದ, ವಾಗ್ಮಿಗಳಾದ, ವೇದೋಕ್ತಕರ್ಮಗಳಲ್ಲಿ ಅವಭೃಥಸ್ನಾನಮಾಡಿರುವ, ಧೃತಿಮಂತರಾದ, ಲಜ್ಜಾವಂತರಾದ, ಧರ್ಮಾತ್ಮರಾದ, ಯಶೋವಂತರಾದ, ಮೂರ್ಧಾಭಿಷಿಕ್ತರಾದ ಸಾವಿರಾರು ರಾಜರು ಯುಧಿಷ್ಠಿರನ ಸೇವೆಮಾಡಲು ಸಿದ್ಧರಾಗಿ ನಿಂತಿರುತ್ತಿದ್ದರು.

ಸಾವಿರಾರು ಧೇನುಗಳನ್ನೂ, ಹಾಲುಕರೆಯಲು ಕಂಚಿನ ಪಾತ್ರೆಗಳನ್ನೂ ರಾಜರು ಋತ್ವಿಜರಿಗೆ ದಾನಮಾಡಲೋಸುಗ ಧರ್ಮಜನಿಗೆ ತಂದು ಕೊಡುತ್ತಿದ್ದರು. ಧರ್ಮರಾಜನನ್ನು ಮೂರ್ಧಾಭಿಷಿಕ್ತನನ್ನಾಗಿ ಮಾಡಲು ಅನೇಕ ರಾಜರು ತಾವಾಗಿಯೇ ಸುವರ್ಣಕುಂಭಗಳಲ್ಲಿ ತೀರ್ಥಗಳನ್ನು ತಂದಿದ್ದರು. ಚಕ್ರವರ್ತಿಗೆ ಅರ್ಪಿಸಲು ಬಾಹ್ಲಿಕನು ಸುವರ್ಣಮಯವಾದ ರಥವನ್ನು ತಂದಿದ್ದನು. ಸುದಕ್ಷಿಣನು ಕಾಂಬೋಜದೇಶದ ನಾಲ್ಕು ಬಿಳಿಯ ಕುದುರೆಗಳನ್ನು ರಥಕ್ಕೆ ಹೂಡಿದನು. ಸುನೀಥನು ಕುದುರೆಗಳಿಗೆ ಕಡಿವಾಣಗಳನ್ನು ಬಿಗಿದನು. ಚೇದಿರಾಜನು ರಥದ ಮೇಲೆ ಧ್ವಜವನ್ನು ಹಾರಿಸಿದನು. ದಾಕ್ಷಿಣಾತ್ಯರಾಜನು ಧರ್ಮಜನಿಗೆ ತೊಡಿಸಲು ಕವಚವನ್ನು ಹಿಡಿದು ನಿಂತಿದ್ದನು. ಮಗಧರಾಜನು ಪುಷ್ಪಮಾಲಿಕೆಯನ್ನೂ–ಕಿರೀಟವನ್ನೂ

ಹಿಡಿದುನಿಂತಿದ್ದನು. ವಸುದಾನನು ಧರ್ಮಜನನ್ನು ಗೌರವಿಸುವ ಸಲುವಾಗಿ ಅರವತ್ತು ವರ್ಷ ವಯಸ್ಸಿನ ಆನೆಯನ್ನು ಸಿದ್ಧಪಡಿಸಿ ನಿಂತಿದ್ದನು. * ಮತ್ಸ್ಯರಾಜನಾದ ವಿರಾಟನು ಚಿನ್ನದ ಕಟ್ಟುಗಳುಳ್ಳ ದಾಳಗಳನ್ನೂ, ಏಕಲವ್ಯನು ಪಾದರಕ್ಷೆಗಳನ್ನೂ, ಅವಂತೀದೇಶಾಧಿಪತಿಯು ಅಭಿಷೇಕಾರ್ಥವಾಗಿ ಬಗೆ-ಬಗೆಯ ತೀರ್ಥೋದಕಗಳನ್ನೂ ತಂದರು. ಚೇಕಿತಾನನು ಬತ್ತಳಿಕೆಯನ್ನೂ, ಕಾಶೀರಾಜನು ಧನುಸ್ಸನ್ನೂ ಚಕ್ರವರ್ತಿಗೆ ಅರ್ಪಿಸಲು ಆನಂದದಿಂದ ಕಾದಿದ್ದರು. ಶಲ್ಯನು ಚಿನ್ನದ ಹಿಡಿಯಿಂದ ಕೂಡಿದ್ದ ಕತ್ತಿಯನ್ನು ಅರ್ಪಿಸಿದನು.

ಆ ರಾಜರೆಲ್ಲರೂ ಪ್ರೀತಿಪುರಸ್ಸರರಾಗಿ ಅರ್ಪಿಸಿದ ವಸ್ತುಗಳನ್ನು ಯುಧಿಷ್ಠಿರನು ಸ್ವೀಕರಿಸಿದನಂತರ ದೇವರ್ಷಿಗಳಾದ ನಾರದರನ್ನೂ, ದೇವಲರನ್ನೂ, ಅಸಿತರನ್ನೂ ಮುಂದುಮಾಡಿಕೊಂಡು ವ್ಯಾಸರೂ ಮತ್ತು ಧೌಮ್ಯರೂ ಯುಧಿಷ್ಠಿರನನ್ನು ಅಭಿಷೇಚಿಸಿದರು. ಸಪ್ತರ್ಷಿಗಳು ಇಂದ್ರನನ್ನು ಮಂತ್ರಪುರಸ್ಸರವಾಗಿ ಆಶೀರ್ವದಿಸುವಂತೆ – ಭಗವಾನ್ ಜಾಮದಗ್ನ್ಯರಾಮನೇ ಮೊದಲಾದ ವೇದಪಾರಂಗತರಾದ, ಮಹಾತ್ಮರಾದ ಮಹರ್ಷಿಗಳು ಯುಧಿಷ್ಠಿರನ ಸುತ್ತಲೂ ನಿಂತು ಮಂತ್ರಘೋಷಗಳನ್ನು ಮಾಡಿ ಆಶೀರ್ವದಿಸುತ್ತಿದ್ದರು.

ಮಹಾಪರಾಕ್ರಮಿಯಾದ ಸಾತ್ಯಕಿಯು ಯುಧಿಷ್ಠಿರನಿಗೆ ಶ್ವೇತಚ್ಛತ್ರಿಯನ್ನು ಹಿಡಿದನು. ಧನಂಜಯನೂ, ಭೀಮನೂ ಧರ್ಮಜನನ್ನು ಬೀಸಣಿಗೆಗಳಿಂದ ಬೀಸುತ್ತಿದ್ದರು. ಯಮಳರು ಚಾಮರಗಳನ್ನು ಹಿಡಿದು ನಿಂತಿದ್ದರು.

ಆ ಸಮಯಕ್ಕೆ ಸರಿಯಾಗಿ ಸಮುದ್ರರಾಜನು ಸ್ವತಃ ಸಶರೀರನಾಗಿ ಬಂದು, ತನ್ನಲ್ಲಿದ್ದ ಒಂದು ಸಾವಿರ ನಿಷ್ಕಗಳಿಂದ (ಸುವರ್ಣನಾಣ್ಯಗಳಿಂದ) ಶಿಲ್ಪಾಚಾರ್ಯನಾದ ವಿಶ್ವಕರ್ಮನಿಂದ ಅಲಂಕರಿಸಲ್ಪಟ್ಟಿದ್ದ ಅಮೂಲ್ಯವಾದ ವಾರುಣವೆಂಬ ಶಂಖವನ್ನು ಯುಧಿಷ್ಠಿರನ ಅಭಿಷೇಕಕ್ಕಾಗಿ ತಂದು ಅರ್ಪಿಸಿದನು. ಆ ಮಹಾಶಂಖವು ಹಿಂದೆ ಪ್ರಜಾಪತಿಬ್ರಹ್ಮನಿಂದ ಇಂದ್ರನಿಗೆ ಪಾರಿತೋಷಕರೂಪವಾಗಿ ಕೊಡಲ್ಪಟ್ಟಿದ್ದಿತು. ಅಂತಹ ಪರಮಪವಿತ್ರವಾದ

*ರಾಜಸೂಯದಲ್ಲಿ–'ಪಂಚಾಕ್ಷಾನ್ ಪ್ರಯಚ್ಛತಿ' 'ವಾರಾಹೀ ಉಪಾನಹಾವುಪ ಮುಂಚತೇ'–ಎಂಬ ವಿಧಿಗಳಿಂದ ದಾಳಗಳನ್ನು ಕೊಡುವುದೂ, ಕಾಡುಹಂದಿಯ ಪಾದುಕೆಗಳನ್ನು ಮೆಟ್ಟುವುದೂ ಹೇಳಲ್ಪಟ್ಟಿದೆ.

ಅತಿಸುಂದರವಾದ ಮಹಾಶಂಖದಿಂದ ಶ್ರೀಕೃಷ್ಣನು ಸ್ವರ್ಣಕುಂಭಗಳಲ್ಲಿದ್ದ ಪವಿತ್ರೋದಕಗಳನ್ನು ತುಂಬಿ ಧರ್ಮಜನನ್ನು ಅಭಿಷೇಚಿಸಿದನು. ಆ ದೃಶ್ಯವನ್ನು ನೋಡುತ್ತಿದ್ದಂತೆಯೇ ನಾನು ಪ್ರಜ್ಞಾಹೀನನಾದೆನು.

ತಂದೆಯೇ! ನಾನು ಹಿಂದೆಯೇ ಹೇಳಿದಂತೆ ಪೂರ್ವ, ಪಶ್ಚಿಮ ಮತ್ತು ದಕ್ಷಿಣದಿಕ್ಕುಗಳ ಕಡೆಗೆ ಪ್ರಯಾಣಮಾಡಲು ಜನರಿಗೆ ಶಕ್ಯವಿದೆ. ಆದರೆ ಉತ್ತರದಿಕ್ಕಿನಲ್ಲಿ ಹಕ್ಕಿಗಳಲ್ಲದೇ ಬೇರೆಯವರು ಪ್ರವೇಶಿಸಲು ಕೂಡ ಸಾಧ್ಯವಾಗದ ಪ್ರದೇಶಗಳಿವೆ. ಪಾಂಡವರು ಅಲ್ಲಿಯೂ ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸಿದ್ದಾರೆ. ರಾಜಸೂಯಯಾಗದ ಅವಭೃಥ ಸಮಯದಲ್ಲಿ ಸಂತೋಷದ ಸೂಚನೆಗಾಗಿ ಉತ್ತರದಿಕ್ಕಿನಿಂದ ತಂದಿದ್ದ ಶಂಖಗಳನ್ನು ಬಾರಿ-ಬಾರಿಗೂ ಊದುತ್ತಿದ್ದರು. ಆ ಶಂಖನಿನಾದವನ್ನು ಕೇಳಿದೊಡನೆಯೇ ನನ್ನ ಶರೀರದ ರೋಮಕೋಟಿಗಳೂ ನಿಮಿರಿ ನಿಲ್ಲುತ್ತಿದ್ದುವು. ದುರ್ಬಲರಾದ ರಾಜರು ಆ ನಾದವನ್ನು ಕೇಳಿ ಮೂರ್ಛೆಹೊಂದುತ್ತಿದ್ದರು. ಧೃಷ್ಟದ್ಯುಮ್ನ, ಸಾತ್ಯಕಿ, ಪಾಂಡವರು ಮತ್ತು ಶ್ರೀಕೃಷ್ಣ – ಈ ಎಂಟು ಮಂದಿಯೂ ಸತ್ವಸಂಪನ್ನರಾಗಿಯೂ, ವೀರ್ಯ ಸಂಪನ್ನರಾಗಿಯೂ, ಪರಸ್ಪರಪ್ರಿಯವಾದ ಕಾರ್ಯಗಳನ್ನು ಮಾಡುವವ ರಾಗಿಯೂ ಇದ್ದರು. ರಾಜರ ಮತ್ತು ನನ್ನ ಅವಸ್ಥೆಯನ್ನು ಕಂಡು ಅವರು ಅಪಹಾಸ್ಯಮಾಡಿದರು.

ಯಾಗದ ಪರಿಸಮಾಪ್ತಿಯಾದನಂತರ ಅರ್ಜುನನು ಬ್ರಾಹ್ಮಣ ಶ್ರೇಷ್ಠರಿಗೆ ಸುವರ್ಣಮಯವಾದ ಶೃಂಗಗಳಿಂದ ಅಲಂಕರಿಸಲ್ಪಟ್ಟಿದ್ದ ಐದುನೂರು ಎತ್ತುಗಳನ್ನು ದಾನವಾಗಿ ಕೊಟ್ಟನು.

ಯುಧಿಷ್ಠಿರನು ರಾಜಸೂಯಯಾಗವನ್ನು ಪೂರ್ಣಮಾಡಿ ಹರಿಶ್ಚಂದ್ರ ನಂತೆಯೇ ಕೀರ್ತಿಮಂತನಾದನು. ಅಂತಹ ಕೀರ್ತಿಯು ಮಹಾತ್ಮರಾದ ರಂತಿದೇವನಿಗಾಗಲೀ, ನಾಭಾಗನಿಗಾಗಲೀ, ಯೌವನಾಶ್ವನಿಗಾಗಲೀ, ಮನುವಿಗಾಗಲೀ, ಪೃಥುವಿಗಾಗಲೀ, ಭಗೀರಥನಿಗಾಗಲೀ, ಯಯಾತಿ ಗಾಗಲೀ, ನಹುಷನಿಗಾಗಲೀ–ಪ್ರಾಪ್ತವಾಗಿರಲಿಲ್ಲ.

ಹರಿಶ್ಚಂದ್ರನ ಕೀರ್ತಿಗೆ ಸಮಾನವಾದ ಕೀರ್ತಿಯನ್ನು ಯುಧಿಷ್ಠಿರನು ಪಡೆದನಂತರ ಅದನ್ನು ಪ್ರತ್ಯಕ್ಷವಾಗಿ ನೋಡಿಕೊಂಡೂ ನಾನು ಬದುಕಿರುವುದರಲ್ಲಿ ಯಾವ ಪ್ರಯೋಜನವನ್ನು ನೀನು ಕಾಣುತ್ತಿರುವೆ?

**ಅನ್ಧೇನೇವ ಯುಗಂ ನದ್ಧಂ ವಿಪರ್ಯಸ್ತಂ ನರಾಧಿಪ ।**
**ಕನೀಯಾಂಸೋ ವಿವರ್ಧನ್ತೇ ಜ್ಯೇಷ್ಠಾ ಹೀಯನ್ತ ಏವ ಚ ॥೨೫॥**

ಕುರುಡನೊಬ್ಬನು ನೊಗಕ್ಕೆ ಎತ್ತುಗಳನ್ನು ಅದಲು-ಬದಲಾಗಿ ಕಟ್ಟುವಂತೆ—ವಿಧಿಯು ನಮ್ಮ ಅದೃಷ್ಟವನ್ನು ಅದಲು-ಬದಲು ಮಾಡಿಬಿಟ್ಟಿದೆ.



ನಮ್ಮ ವಂಶದಲ್ಲಿ ಯಾವುದಾದರೂ ಕಾರಣದಿಂದ ಕನಿಷ್ಠರು ಉಚ್ಛ್ರಾಯಸ್ಥಿತಿಗೆ ಬರುತ್ತಲಿದ್ದಾರೆ. ಜ್ಯೇಷ್ಠರು ಹೀನಸ್ಥಿತಿಗೆ ಬರುತ್ತಲಿದ್ದಾರೆ. (ತಮ್ಮನಾದ ಪಾಂಡುವಿನ ಮಕ್ಕಳು ಉಚ್ಛ್ರಾಯಸ್ಥಿತಿಗೆ ಬರುತ್ತಿದ್ದಾರೆ. ಅಣ್ಣನಾದ ಧೃತರಾಷ್ಟ್ರನ ಮಕ್ಕಳು ಹೀನಸ್ಥಿತಿಗೆ ಬರುತ್ತಿದ್ದಾರೆ.) ಇವೆಲ್ಲವೂ ನನ್ನ ಕಣ್ಣುಮುಂದೆಯೇ ನಡೆಯುತ್ತಿರುವಾಗ ನನಗೆ 'ಶಾಂತಿ' ಎಂಬುದೆಲ್ಲಿದೆ? ಮಾನಸಿಕಸೌಖ್ಯವನ್ನು ಕ್ಷಣಕಾಲ ಕೂಡ ಪಡೆಯಲು ಅಸಮರ್ಥನಾಗಿದ್ದೇನೆ. ಈ ಕಾರಣದಿಂದಲೇ ನಾನು ಯೋಚನಾಪರನಾಗಿ ಕೃಶನಾಗಿದ್ದೇನೆ, ಮಹಾರಾಜ!"

ಊಬನೆಯ ಅಧ್ಯಾಯವು ಮುಗಿಯಿತು.

೫೪ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನು ದುರ್ಯೋಧನನಿಗೆ ಸಮಾಧಾನ ಹೇಳಿದುದು

"ಜನಮೇಜಯ! ಮಗನ ಮಾತ್ಸರ್ಯಪೂರಿತವಾದ ವಾಕ್ಸರಣಿಯನ್ನು ಕೇಳಿದ ಧೃತರಾಷ್ಟ್ರನು ದುರ್ಯೋಧನನಿಗೆ ಹೇಳತೊಡಗಿದನು :

"ವತ್ಸ! ನೀನು ನನ್ನ ಹಿರಿಯ ಹೆಂಡತಿಯಲ್ಲಿ ಹುಟ್ಟಿರುವ ಹಿರಿಯಮಗನು. ಸಾಮಾನ್ಯವಾಗಿ ಹಿರಿಯಣ್ಣನ ಮಾರ್ಗವನ್ನೇ ಕಿರಿಯರೂ ಅನುಸರಿಸುತ್ತಾರೆ. ಆದುದರಿಂದ ನೀನು ಪಾಂಡವರ ವಿಷಯವಾಗಿ ಮಾತ್ಸರ್ಯಪಡಬೇಡ. ಅವರನ್ನು ದ್ವೇಷಿಸಬೇಡ. ಇತರರನ್ನು ದ್ವೇಷಿಸುವವನು ಯಾವಾಗಲೂ ಅಸುಖಿಯೇ. ಅವನಿಗೆ ಮನಸ್ಸಿನಲ್ಲಿ ಶಾಂತಿಯಿರುವುದಿಲ್ಲ. ದ್ವೇಷವು ಉಲ್ಬಣವಾದಂತೆಲ್ಲಾ ಮರಣ ಯಾತನೆಯನ್ನು ಅನುಭವಿಸುತ್ತಾನೆ. ಮೇಲಾಗಿ ಯುಧಿಷ್ಠಿರನು ಮೋಸವೆಂಬುದನ್ನೇ ಅರಿಯದವನು. ಅವನಲ್ಲಿರುವಷ್ಟೇ ಐಶ್ವರ್ಯವು ನಿನ್ನಲ್ಲಿಯೂ ಇದೆ. ಅವನಿಗಿರುವಂತೆಯೇ ನಿನಗೂ ಅನೇಕರಾಜರು ಮಿತ್ರರಾಗಿದ್ದಾರೆ. ನಿನ್ನ ವಿಷಯದಲ್ಲಿ ಅವನೆಂದೂ ದ್ವೇಷವನ್ನೆಣಿಸುವುದಿಲ್ಲ. ಹೀಗಿರುವಾಗ ನೀನೇಕೆ ಅವನನ್ನು ದ್ವೇಷಿಸುವೆ? ಪರಾಕ್ರಮದಲ್ಲಿಯೂ ನೀನು ಅವನಿಗೆ ಸಮಾನನೇ ಆಗಿರುವೆ. ಮಿತ್ರರೂ- ಆಶ್ರಿತರಾಜರೂ ಅವನಿಗಿರುವಂತೆಯೇ ನಿನಗೂ ಇರುವರು. ಹೀಗಿದ್ದರೂ ಮೂರ್ಖತ್ವದಿಂದ ಭ್ರಾತೃವಿನ ಸಂಪತ್ತನ್ನೇಕೆ ಅಭಿಲಾಷಿಸುವೆ? ಆಸೆಗೆ ದಾಸನಾಗಬೇಡ ದುರ್ಯೋಧನ! ಧರ್ಮಜನ ಮೇಲಿರುವ ದ್ವೇಷವನ್ನು ಸಾಕುಮಾಡು. ಅವನ ಐಶ್ವರ್ಯವನ್ನೂ, ಕೀರ್ತಿಯನ್ನೂ ನೆನೆದು ದುಃಖಿಸಬೇಡ. ಧರ್ಮಜನು ರಾಜಸೂಯಯಾಗವನ್ನು ಮಾಡಿ ಕೀರ್ತಿಮಂತನಾದನೆಂದೂ, ಅಪಾರವಾದ ಐಶ್ವರ್ಯವನ್ನು ಪಡೆದನೆಂದೂ ನೀನು ಭಾವಿಸುವೆಯಾದರೆ – ನೀನೂ ಒಂದು ಮಹಾಯಾಗವನ್ನು ಮಾಡು. ನಮ್ಮ ಪುರೋಹಿತರು ಈಗಲೇ ಸಪ್ತತಂತುವೆಂಬ ಮಹಾಯಾಗಕ್ಕೆ ಉಪಕರಣಗಳನ್ನು ಸಿದ್ಧಪಡಿಸಲಿ. ಭೂವಲಯದ ರಾಜರೆಲ್ಲರನ್ನೂ ಆ ಮಹಾಯಾಗಕ್ಕೆ ಆಹ್ವಾನಿಸು. ಧರ್ಮಜನ ರಾಜಸೂಯಯಾಗಕ್ಕೆ ಅವರು ತಂದಂತೆಯೇ ಯಥೇಚ್ಛವಾದ

ವಜ್ರ-ವೈಡೂರ್ಯಗಳನ್ನೂ, ರತ್ನಾಭರಣಗಳನ್ನೂ ಕಾಣಿಕೆಯ ರೂಪವಾಗಿ ನಿನ್ನ ಯಾಗಕ್ಕೂ ತಂದುಕೊಡುವರು. ಇದರಲ್ಲಾವ ಸಂಶಯವೂ ಇಲ್ಲ.

**ಅನಾರ್ಯಚರಿತಂ ತಾತ ಪರಸ್ವಸ್ಪೃಹಣಂ ಭೃಶಮ್ ।**
**ಸ್ವಸಂತುಷ್ಟಃ ಸ್ವಧರ್ಮಸ್ಥೋ ಯಃ ಸ ವೈ ಸುಖಮೇಧತೇ ॥೬॥**

ಇತರರ ಐಶ್ವರ್ಯವನ್ನು ನೋಡಿ ಕರುಬುವುದು ಅನಾರ್ಯವಾದ ನಡತೆ ಎನಿಸಿಕೊಳ್ಳುತ್ತದೆ. ತನ್ನಲ್ಲಿರುವ ಐಶ್ವರ್ಯದಲ್ಲಿಯೇ ತೃಪ್ತಿಹೊಂದುವವನೂ, ಸ್ವಧರ್ಮದಲ್ಲಿಯೇ ನಿರತನಾಗಿರುವವನೂ ಸುಖಿಯಾಗಿರುತ್ತಾನೆ.

**ಅವ್ಯಾಪಾರಃ ಪರಾರ್ಥೇಷು ನಿತ್ಯೋದ್ಯೋಗಃ ಸ್ವಕರ್ಮಸು ।**
**ರಕ್ಷಣಂ ಸಮುಪಾತ್ತಾನಾಮೇತದ್ವೈಭವಲಕ್ಷಣಮ್ ॥೭॥**

ಪರಸ್ವತ್ತನ್ನು ಅಪಹರಿಸಲು ಯತ್ನಿಸದೇ, ತನ್ನ ದೈನಂದಿನ ಕಾರ್ಯಗಳನ್ನು ಶ್ರದ್ಧೆಯಿಂದ ಮಾಡುತ್ತಾ, ಸಂಪಾದಿಸಿದುದನ್ನು ಅಪವ್ಯಯಮಾಡದೇ ರಕ್ಷಿಸಿಕೊಂಡಿರುವುದು ವೈಭವದ ಲಕ್ಷಣವಾಗಿರುತ್ತದೆ.

**ವಿಪತ್ತಿಷ್ವವ್ಯಥೋ ದಕ್ಷೋ ನಿತ್ಯಮುತ್ಥಾನವಾನ್ನರಃ ।**
**ಅಪ್ರಮತ್ತೋ ವಿನೀತಾತ್ಮಾ ನಿತ್ಯಂ ಭದ್ರಾಣಿ ಪಶ್ಯತಿ ॥೮॥**

ವಿಪತ್ತು ಬಂದೊದಗಿದ ಸಮಯದಲ್ಲಿ ವ್ಯಥೆಪಡದೇ ಸ್ವಧರ್ಮವಿಹಿತವಾದ ಕರ್ಮದಲ್ಲಿ ನಿರತನಾಗಿದ್ದುಕೊಂಡು, ಮದ-ಮೋಹಾದಿಗಳಿಂದ ಪ್ರಮತ್ತನಾಗದೇ, ಸರ್ವದಾ ವಿನೀತಾತ್ಮನಾಗಿರುವವನು ಶ್ರೇಯೋವಂತನಾಗಿ ಸನ್ಮಂಗಳಗಳನ್ನು ಪಡೆಯುತ್ತಾನೆ.

**ಬಾಹೂನಿವೈತಾನ್ಮಾ ಛೇತ್ಸೀಃ ಪಾಣ್ಡುಪುತ್ರಾಸ್ತಥೈವ ತೇ ।**
**ಭ್ರಾತೄಣಾಂ ತದ್ಧನಾರ್ಥಂ ವೈ ಮಿತ್ರದ್ರೋಹಂ ಚ ಮಾ ಕುರು ॥೯॥**

ನಿಜವಾಗಿ ಹೇಳುವುದಾದರೆ ಪಾಂಡುವಿನ ಮಕ್ಕಳು ನಿನಗೆ ಭುಜಪ್ರಾಯರಾಗಿರುತ್ತಾರೆ. ನಿನ್ನ ಭುಜಗಳನ್ನೇ ನೀನು ಕತ್ತರಿಸಿಕೊಳ್ಳಲು ಯತ್ನಿಸಬೇಡ. ನಿನ್ನ ಭ್ರಾತೃಗಳಲ್ಲಿರುವ ಐಶ್ವರ್ಯದ ಕಾರಣಕ್ಕಾಗಿ ಪರಸ್ಪರ ಅಂತಃಕಲಹವನ್ನು ಆರಂಭಿಸಬೇಡ. ದುರ್ಯೋಧನ! ಪಾಂಡುವಿನ ಮಕ್ಕಳನ್ನು ಖಂಡಿತವಾಗಿಯೂ ದ್ವೇಷಿಸಬೇಡ. ಅವರಿಗಿರುವಷ್ಟೇ ಅಪಾರ

ವಾದ ಐಶ್ವರ್ಯವು ನಿನಗೂ ಇದೆ. ಬಂಧು-ಮಿತ್ರರೊಡನೆ ಜಗಳ ವಾಡುವುದು ಧರ್ಮವಲ್ಲ. ಮೇಲಾಗಿ ನಿನಗೆ ಯಾರು ಪಿತಾಮಹರೋ-ಪಾಂಡವರಿಗೂ ಅವರೇ ಪಿತಾಮಹರು. ಈ ವಿಷಯವನ್ನು ಚೆನ್ನಾಗಿ ಪರ್ಯಾಲೋಚಿಸು. ಅವರ ಮೇಲಿನ ದ್ವೇಷವನ್ನು ದೂರೀಕರಿಸು. ಯಜ್ಞ-ಯಾಗಾದಿಗಳನ್ನು ಮಾಡಿ ಆ ಸಮಯದಲ್ಲಿ ನೀನೂ ಯಥೇಚ್ಛವಾಗಿ ದಾನಮಾಡು. ನಿನ್ನ ಸಮಸ್ತವಾದ ಇಚ್ಛೆಗಳನ್ನೂ ಪೂರ್ಣಗೊಳಿಸು. ಅಂತಃಪುರದ ಸ್ತ್ರೀಯರೊಡನೆ ಯಥೇಚ್ಛವಾಗಿ ವಿಹರಿಸು. ಶಾಂತನಾಗಿರು."

೫೪ನೆಯ ಅಧ್ಯಾಯವು ಮುಗಿಯಿತು.

೫೫ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ಹಿತೋಕ್ತಿಗೆ ದುರ್ಯೋಧನನ ತಿರಸ್ಕಾರ

ಪಾರಿಕ್ಷಿತ! ಈ ವಿಧವಾದ ಧೃತರಾಷ್ಟ್ರನ ಸದ್ಬೋಧನೆಗಳು ದುರ್ಯೋಧನನಿಗೆ ಹಿಡಿಸದಾದುವು. ತನ್ನ ವಿವೇಚನೆಯೇ ಶ್ರೇಷ್ಠವೆಂಬುದನ್ನು ಸಮರ್ಥಿಸಲು ದುರ್ಯೋಧನನು ಪುನಃ ಮಾತನಾಡಲು ಉಪಕ್ರಮಿಸಿದನು.

**ಯಸ್ಯ ನಾಸ್ತಿ ನಿಜಾ ಪ್ರಜ್ಞಾ ಕೇವಲಂ ತು ಬಹುಶ್ರುತಃ ।**
**ನ ಸ ಜಾನಾತಿ ಶಾಸ್ತ್ರಾರ್ಥಂ ದರ್ವೀ ಸೂಪರಸಾನಿವ ॥೧॥**

"ಮಹಾರಾಜ! ಸ್ವಂತವಾದ ವಿವೇಚನೆಯಿಲ್ಲದೇ ಅವರಿವರಿಂದ ಶಾಸ್ತ್ರಗಳನ್ನು ಕೇಳುವವನಿಗೆ ಶಾಸ್ತ್ರಾರ್ಥಗಳ ರಹಸ್ಯವು ಹೇಗೆತಾನೇ ತಿಳಿದೀತು? ಸಾರನ್ನು ಬಡಿಸುವ ಸಟ್ಟುಗಕ್ಕೆ ಸಾರಿನ ರುಚಿಯೇನಾದರೂ ತಿಳಿಯುವುದೇ? ನೀನು ಎಲ್ಲವನ್ನೂ ತಿಳಿದಿದ್ದರೂ ನನ್ನನ್ನು ಭ್ರಾಂತನನ್ನಾಗಿ ಮಾಡುತ್ತಿರುವೆ. ನಾವಿಬ್ಬರೂ ಪರಸ್ಪರ ಆಸರೆಗಾಗಿ ಒಂದಕ್ಕೊಂದು ಕಟ್ಟಲ್ಪಟ್ಟ ಎರಡು ದೋಣಿಗಳಂತಿದ್ದೇವೆ. ಸ್ವಾರ್ಥದ ವಿಷಯದಲ್ಲಿ ನಿನಗೆ ಸ್ವಲ್ಪವೂ ಆಸಕ್ತಿಯೇ ಇಲ್ಲವೆಂದು ನಾನು ಭಾವಿಸಬೇಕಾಗಿದೆ. ಅಥವಾ ನನ್ನನ್ನು ನೀನೂ ದ್ವೇಷಿಸುತ್ತಿರುವೆಯೋ–ಎಂದೇ ಅನುಮಾನಿಸಬೇಕಾಗಿದೆ.

ನಿನ್ನನ್ನು ರಾಜನನ್ನಾಗಿ ಮಾಡಿಕೊಂಡಿರುವ ನಿನ್ನ ಮಕ್ಕಳೂ, ಬಂಧುಗಳೂ ಮತ್ತು ಆಶ್ರಿತರೂ ನಿನ್ನ ಅನುಶಾಸನದ ಕಾರಣದಿಂದಾಗಿ ಹೆಚ್ಚು ಕಾಲ

ಉಳಿಯಲಾರರು. ಏಕೆಂದರೆ : ನೀನು ಇಂದು ಸಾಧಿಸಬೇಕಾಗಿರುವುದನ್ನು ಕಾಲಾನುಕ್ರಮದಲ್ಲಿ ಸಾಧಿಸಬಹುದೆಂಬ ಔದಾಸೀನ್ಯವನ್ನು ಹೊಂದಿರುವುದೇ ಇದಕ್ಕೆ ಕಾರಣವಾಗಿದೆ.

**ಪರನೇಯೋಽಗ್ರಣೀರ್ಯಸ್ಯ ಸ ಮಾರ್ಗಾನ್ಪ್ರತಿ ಮುಹ್ಯತಿ ।**
**ಪನ್ಥಾನಮನುಗಚ್ಛೇಯುಃ ಕಥಂ ತಸ್ಯ ಪದಾನುಗಾಃ ॥೪॥**

ನಿನಗೆ ಸಲಹೆನೀಡುವವರು ಬೇರೆಯವರ ಇಚ್ಛೆಯನ್ನೇ ಅನುಸರಿಸಿ ಸಲಹೆನೀಡುತ್ತಾರೆ. ಅಂತಹವರ ಸಲಹೆಯಂತೆ ನಡೆದರೆ ನಮಗೆ ಒಳ್ಳೆಯ ಮಾರ್ಗವು ಸಿಕ್ಕುವುದೇ?

ಮಹಾರಾಜ! ನಿನಗೆ ಪರಿಪಕ್ವವಾದ ಜ್ಞಾನವಿದೆ. ನೀನು ವೃದ್ಧರ ಸೇವೆಯನ್ನು ಮಾಡಿ ಅನೇಕ ವಿಷಯಗಳನ್ನು ತಿಳಿದಿರುವೆ ಮತ್ತು ಜಿತೇಂದ್ರಿಯನೂ ಆಗಿರುವೆ. ನಮ್ಮೆಲ್ಲರ ಹಿತಚಿಂತನೆಯ ದೃಷ್ಟಿಯಿಂದ ಕಾರ್ಯಪ್ರವೃತ್ತರಾಗಿರುವ ನಮ್ಮನ್ನು ಭ್ರಾಂತರನ್ನಾಗಿ ಮಾಡುತ್ತಿರುವೆ.

**ಲೋಕವೃತ್ತಾದ್ರಾಜವೃತ್ತಮನ್ಯದಾಹ ಬೃಹಸ್ಪತಿಃ ।**
**ತಸ್ಮಾದ್ರಾಜ್ಞಾಪ್ರಮತ್ತೇನ ಸ್ವಾರ್ಥಶ್ಚಿನ್ತ್ಯಃ ಸದೈವ ಹಿ ॥೬॥**

**ಕ್ಷತ್ರಿಯಸ್ಯ ಮಹಾರಾಜ ಜಯೇ ವೃತ್ತಿಃ ಸಮಾಹಿತಾ ।**
**ಸ ವೈ ಧರ್ಮಸ್ತ್ವಧರ್ಮೋ ವಾ ಸ್ವವೃತ್ತೌ ಕಾ ಪರೀಕ್ಷಣಾ ॥೭॥**

ಸಾಮಾನ್ಯಜನರು ಅನುಸರಿಸಬೇಕಾದ ನೀತಿಗಿಂತಲೂ ರಾಜರು ಅನುಸರಿಸಬೇಕಾದ ನೀತಿಯು ಭಿನ್ನವಾಗಿರುವುದೆಂದು ದೇವಗುರುವಾದ ಬೃಹಸ್ಪತಿಯೇ ಹೇಳಿದ್ದಾನೆ. ನೀನು ಹೇಳುವುದೆಲ್ಲವೂ ನಮ್ಮ ಪ್ರಜೆಗಳು ಅನುಸರಿಸತಕ್ಕ ನೀತಿಗಳಾಗಿವೆ. ರಾಜರು ಯಾವಾಗಲೂ ತಮ್ಮ ಸ್ವಾರ್ಥ ಸಾಧನೆಗೆ ಸಮಯವನ್ನು ಕಾಯುತ್ತಿರಬೇಕು. ಕ್ಷತ್ರಿಯನ ಪ್ರೌಢಿಮೆಯು ಅವನು ಗಳಿಸುವ ವಿಜಯವನ್ನೇ ಅವಲಂಬಿಸಿರುತ್ತದೆ. ಧರ್ಮಸಮ್ಮತ ವಾಗಿರಲಿ ; ಇಲ್ಲದಿರಲಿ – ಸ್ವಕಾರ್ಯಮಾಡುವುದರಲ್ಲಿ ದೋಷವೇನಿದೆ?

**ಪ್ರಕಾಲಯೇದ್ದಿಶಃ ಸರ್ವಾಃ ಪ್ರತೋದೇನೇವ ಸಾರಥಿಃ ।**
**ಪ್ರತ್ಯಮಿತ್ರಶ್ರಿಯಂ ದೀಪ್ತಾಂ ಜಿಘೃಕ್ಷುರ್ಭರತರ್ಷಭ ॥೮॥**

ಭರತಶ್ರೇಷ್ಠನೇ! ಕುಶಲನಾದ ಸಾರಥಿಯು ಶತ್ರುಜಯಕ್ಕಾಗಿ ಚಾವಟಿಯಿಂದ ಕುದುರೆಗಳನ್ನು ನಡೆಸುತ್ತಾ ಎಲ್ಲ ದಿಕ್ಕುಗಳಲ್ಲಿಯೂ ರಥವನ್ನು ನಡೆಸುವಂತೆ ಶತ್ರುಗಳ ಐಶ್ವರ್ಯವನ್ನು ಅಪಹರಿಸಲು ಎಲ್ಲ ವಿಧವಾದ ಉಪಾಯಗಳನ್ನೂ ಅನುಸರಿಸಬೇಕು.

**ಪ್ರಚ್ಛನ್ನೋ ವಾ ಪ್ರಕಾಶೋ ವಾ ಯೋಗೋ ಯೋಽರಿಂ ಪ್ರಬಾಧತೇ ।**
**ತದ್ವೈ ಶಸ್ತ್ರಂ ಶಸ್ತ್ರವಿದಾಂ ನ ಶಸ್ತ್ರಂ ಛೇದನಂ ಸ್ಮೃತಮ್ ॥೯॥**

ಪ್ರತ್ಯಕ್ಷವಾಗಿಯೇ ಆಗಲೀ, ಪರೋಕ್ಷವಾಗಿಯೇ ಆಗಲೀ– ಶತ್ರುಗಳನ್ನು ನಿರ್ಮೂಲಮಾಡುವುದಕ್ಕೆ ಯೋಗ್ಯವೆನಿಸುವುದನ್ನು ಶಸ್ತ್ರವೆಂದು ಕರೆಯಬೇಕೇ ಹೊರತು, ಕೇವಲ ಕತ್ತರಿಸುವ ಗುಣವಿರುವುದೇ ಶಸ್ತ್ರವಾಗಲಾರದೆಂದು ಶಸ್ತ್ರಾಸ್ತ್ರಪರಿಣತರು ಅಭಿಪ್ರಾಯಪಡುತ್ತಾರೆ.

**ಶತ್ರುಶ್ಚೈವ ಹಿ ಮಿತ್ರಂ ಚ ನ ಲೇಖ್ಯಂ ನ ಚ ಮಾತೃಕಾ ।**
**ಯೋ ವೈ ಸಂತಾಪಯತಿ ಯಂ ಸ ಶತ್ರುಃ ಪ್ರೋಚ್ಯತೇ ನೃಪ ॥೧೦॥**

ಶತ್ರುವಿನ ಮತ್ತು ಮಿತ್ರನ ಲಕ್ಷಣಗಳನ್ನೂ, ಸ್ವರೂಪಗಳನ್ನೂ ಬರೆಯಲು ಸಾಧ್ಯವಾಗುವುದಿಲ್ಲ. ಅದಕ್ಕೆ ಅಕ್ಷರಗಳೂ ಇಲ್ಲ. ಯಾವನು ಯಾರನ್ನು ಸಂತಾಪಪಡಿಸುತ್ತಾನೆಯೋ – ಅವನೇ ಶತ್ರುವಾಗುತ್ತಾನೆ. (ನಮಗೆ ಯಾರಿಂದ ಸಂತಾಪವುಂಟಾಗುವುದೋ ಅವರೇ ನಮಗೆ ಶತ್ರುಗಳು.)

**ಅಸಂತೋಷಃ ಶ್ರಿಯೋ ಮೂಲಂ ತಸ್ಮಾತ್ತಂ ಕಾಮಯಾಮ್ಯಹಮ್ ।**
**ಸಮುಚ್ಛ್ರಯೇ ಯೋ ಯತತೇ ಸ ರಾಜನ್ಪರಮೋ ನಯಃ ॥೧೧॥**

ಐಶ್ವರ್ಯಪ್ರಾಪ್ತಿಗೆ ಅಸಂತೋಷವೇ ಕಾರಣವಾಗುವುದೆಂದು ನಾನು ಅಭಿಪ್ರಾಯಪಡುತ್ತೇನೆ. ಆದುದರಿಂದಲೇ ನಾನು ಅಸಂತುಷ್ಟನು. ಯಾರು ತಮ್ಮ ಹೆಚ್ಚಿನ ಅಭಿವೃದ್ಧಿಗಾಗಿ ಸರ್ವದಾ ಯತ್ನಿಸುತ್ತಾರೆಯೋ – ಅವರೇ ಪುರುಷಶ್ರೇಷ್ಠರು. (ಅಭಿವೃದ್ಧಿಗೆ ತಕ್ಕ ಉಪಾಯವೇ ಶ್ರೇಷ್ಠವಾದ ನೀತಿ.)

**ಮಮತ್ವಂ ಹಿ ನ ಕರ್ತವ್ಯಮೈಶ್ವರ್ಯೇ ವಾ ಧನೇಽಪಿ ವಾ ।**
**ಪೂರ್ವಾವಾಪ್ತಂ ಹರನ್ತ್ಯನ್ಯೇ ರಾಜಧರ್ಮಂ ಹಿ ತಂ ವಿದುಃ ॥೧೨॥**

ಐಶ್ವರ್ಯದ ಅಥವಾ ಧನದ ವಿಷಯದಲ್ಲಿ ನನ್ನದೆಂಬ ಭಾವನೆಯಿರು

ವುದು ಸರಿಯಲ್ಲ. ಏಕೆಂದರೆ : ಸಂಪಾದಿಸಿಟ್ಟ ಧನವನ್ನು ಇತರರು ಅಪಹರಿಸುವುದು ಸ್ವಾಭಾವಿಕವಾಗಿಯೇ ಇದೆ. ಅದು ರಾಜಧರ್ಮ.

**ಅದ್ರೋಹಸಮಯಂ ಕೃತ್ವಾ ಚಿಚ್ಛೇದ ನಮುಚೇಃ ಶಿರಃ ।**
**ಶಕ್ರಃ ಸಾಭಿಮತಾ ತಸ್ಯ ರಿಪೌ ವೃತ್ತಿಃ ಸನಾತನೀ ॥೧೩॥**

ದ್ರೋಹಮಾಡುವುದಿಲ್ಲವೆಂದು ಹೇಳಿ ನಂಬಿಕೆಯನ್ನು ಹುಟ್ಟಿಸಿ ಇಂದ್ರನು ನಮುಚಿಯ ಶಿರಸ್ಸನ್ನು ತುಂಡರಿಸಿದನು. ನಮುಚಿಯ ವಧೆಗೆ ಅದೇ ಸರಿಯಾದ ಸಮಯವೆಂದು ಇಂದ್ರನು ಭಾವಿಸಿದನು. ಶತ್ರುವನ್ನು ಹೀಗೆ ನಿರ್ಮೂಲಮಾಡಬೇಕೆಂಬ ಪದ್ಧತಿಯು ಬಹಳ ಕಾಲದಿಂದಲೂ ನಡೆದು ಬಂದಿದೆ ಮತ್ತು ಅದೇ ಧರ್ಮವೆಂದು ಎಲ್ಲರಿಂದಲೂ ಅಂಗೀಕೃತವೂ ಆಗಿದೆ.

**ದ್ವಾವೇತೌ ಗ್ರಸತೆ ಭೂಮಿಃ ಸರ್ಪೋ ಬಿಲಶಯಾನಿವ ।**
**ರಾಜಾನಾಂ ಚಾವಿರೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಂ ॥೧೪॥**

ಸರ್ಪವು ಬಿಲಗಳಲ್ಲಿ ವಾಸಮಾಡುವ ಕಪ್ಪೆಗಳನ್ನೂ ಮತ್ತು ಇತರ ಪ್ರಾಣಿಗಳನ್ನೂ ನುಂಗುವಂತೆ – ಈ ಪೃಥ್ವಿಯು ಶತ್ರುವನ್ನು ವಿರೋಧಿಸದಿರುವ ರಾಜನನ್ನೂ, ಪ್ರಪಂಚಪರ್ಯಟನವನ್ನು ಮಾಡದಿರುವ ಬ್ರಾಹ್ಮಣನನ್ನೂ ನುಂಗಿಬಿಡುತ್ತದೆ.

**ನಾಸ್ತಿ ವೈ ಜಾತಿತಃ ಶತ್ರುಃ ಪುರುಷಸ್ಯ ವಿಶಾಂಪತೇ ।**
**ಯೇನ ಸಾಧಾರಣೀ ವೃತ್ತಿಃ ಸ ಶತ್ರುರ್ನೇತರೋ ಜನಃ ॥೧೫॥**

ಯಾವನೂ ಕೂಡ ಕೇವಲ ಜನ್ಮದಿಂದಲೇ ಮತ್ತೊಬ್ಬನಿಗೆ ಶತ್ರುವಾಗಿ ಬಿಡುವುದಿಲ್ಲ. ಯಾರಿಬ್ಬರಲ್ಲಿ ಪರಸ್ಪರವಾಗಿ ಒಂದೇ ಸಮನಾದ ವೃತ್ತಿಯಿರುವುದೋ– ಅವರಿಬ್ಬರಲ್ಲಿ ಪರಸ್ಪರವಾಗಿ ಶತ್ರುತ್ವವುಂಟಾಗುತ್ತದೆ.

**ಶತ್ರುಪಕ್ಷಂ ಸಮೃದ್ಧ್ಯಂತಂ ಯೋ ಮೋಹಾತ್ಸಮುಪೇಕ್ಷತೇ ।**
**ವ್ಯಾಧಿರಾಪ್ಯಾಯಿತ ಇವ ತಸ್ಯ ಮೂಲಂ ಛಿನತ್ತಿ ಸಃ ॥೧೬॥**

ದಿನ-ದಿನಕ್ಕೂ ಉಲ್ಬಣಿಸುತ್ತಿರುವ ವ್ಯಾಧಿಗೆ ಸರಿಯಾದ ಔಷಧಿಯನ್ನು ತೆಗೆದುಕೊಂಡು ನಿವಾರಣೆಮಾಡಿಕೊಳ್ಳದಿದ್ದರೆ ಕಾಲಾಂತರದಲ್ಲಿ ವ್ಯಾಧಿಯು ಮಾನವನನ್ನು ಹೇಗೆ ಆಹುತಿತೆಗೆದುಕೊಳ್ಳುವುದೋ – ಹಾಗೆಯೇ ಅಭಿವೃದ್ಧಿಹೊಂದುತ್ತಿರುವ ಶತ್ರುವಿನ ವಿಷಯದಲ್ಲಿ ಔದಾಸೀನ್ಯವನ್ನು ತಾಳಿದರೆ ಆ ಶತ್ರುವು ನಮ್ಮನ್ನೇ ಮೂಲೋತ್ಪಾಟನೆಮಾಡುತ್ತಾನೆ.

**ಅಲ್ಪೋಽಪಿ ಹ್ಯರಿರತ್ಯರ್ಥಂ ವರ್ಧಮಾನಃ ಪರಾಕ್ರಮೈಃ ।**
**ವಲ್ಮೀಕೋ ಮೂಲಜ ಇವ ಗ್ರಸತೇ ವೃಕ್ಷಮನ್ತಿಕಾತ್ ॥೧೭॥**

ಶತ್ರುವು ಅಲ್ಪನೆಂದು ಔದಾಸೀನ್ಯದಿಂದ ಅವನ ಪ್ರಾದುರ್ಭಾವಕ್ಕೆ ಎಡೆಕೊಟ್ಟರೆ – ಮರದ ಬುಡದಲ್ಲಿ ಹತ್ತಿದ ಗೆದ್ದಲುಹುಳುವಿನ ಹುತ್ತವು ಕಾಲಾಂತರದಲ್ಲಿ ವೃಕ್ಷವನ್ನೆಲ್ಲಾ ಆಕ್ರಮಿಸಿ ವೃಕ್ಷವನ್ನೇ ನಿರ್ಮೂಲಮಾಡಿ ಬಿಡುವಂತೆ–ನಮ್ಮ ವಂಶವೃಕ್ಷವನ್ನೇ ನಿರ್ಮೂಲಮಾಡಲು ಸಮರ್ಥನಾಗುತ್ತಾನೆ.

ಮಹಾರಾಜ! ಈ ಕಾರಣಗಳಿಂದ ಶತ್ರುಗಳಲ್ಲಿರುವ ಸಮೃದ್ಧಿಯು ನಿನಗೆ ಸಹ್ಯವಾಗದಿರಲಿ. ಯಾವಾಗಲೂ ನೀತಿಯನ್ನೇ ತಲೆಯ ಮೇಲಿಟ್ಟುಕೊಂಡಿರುವ (ಪುರಸ್ಕರಿಸುವ) ಸತ್ತ್ವಶಾಲಿಗಳಿಗೂ ಶತ್ರುಸಮೃದ್ಧಿಯು ಭಾರವೇ ಆಗುತ್ತದೆ. (ಸಾಮಾನ್ಯನೀತಿಯು ಸತ್ತ್ವಶಾಲಿಗಳ ತಲೆಯಮೇಲೆ ಹೊರಿಸುವ ಭಾರವಾಗಿದೆ.)

**ಜನ್ಮವೃದ್ಧಿಮಿವಾರ್ಥಾನಾಂ ಯೋ ವೃದ್ಧಿಮಭಿಕಾಂಕ್ಷತೇ ।**
**ಏಧತೇ ಜ್ಞಾತಿಷು ಸ ವೈ ಸದ್ಯೋ ವೃದ್ಧಿರ್ಹಿ ವಿಕ್ರಮಃ ॥೧೮॥**

ತನ್ನ ಐಶ್ವರ್ಯವನ್ನು ಹೆಚ್ಚಿಸಿಕೊಳ್ಳಬೇಕೆಂದು ಸತತವಾಗಿ ಯತ್ನಿಸುವ ರಾಜನು–ತನ್ನ ಬಂಧು-ಬಾಂಧವರ ಮಧ್ಯದಲ್ಲಿ ಹುಟ್ಟಿದ ಶಿಶುವು ಕ್ಷಣ-ಕ್ಷಣಕ್ಕೂ ಪುಷ್ಟಿಯನ್ನು ಹೊಂದುವಂತೆ – ಅಭಿವೃದ್ಧಿಯನ್ನು ಹೊಂದುತ್ತಾನೆ. ಶೀಘ್ರವಾಗಿ ಅಭಿವೃದ್ಧಿಹೊಂದುವುದೇ ಪರಾಕ್ರಮದ ಲಕ್ಷಣ.

ಪಾಂಡವರಲ್ಲಿರುವ ಐಶ್ವರ್ಯವನ್ನು ನನ್ನದನ್ನಾಗಿ ಮಾಡಿಕೊಳ್ಳಬೇಕೆಂಬ ಅಪೇಕ್ಷೆಯಿಂದ ನಾನು ಕೂಡಿರುವೆನೇ ಹೊರತು ಅವರ ಐಶ್ವರ್ಯವು ಈಗಲೇ ನನ್ನದಾಗಿರುವುದಿಲ್ಲ. ಅವರ ಐಶ್ವರ್ಯವನ್ನು ನನ್ನದನ್ನಾಗಿ ಮಾಡಿಕೊಳ್ಳದಿದ್ದರೆ ನನ್ನ ಬದುಕಿನಲ್ಲಿ ಸಂಶಯವೇ ಉಂಟಾಗುತ್ತದೆ. ನನಗೀಗ ಉಳಿದಿರುವುದು ಎರಡೇ ಮಾರ್ಗಗಳು. ಅವರ ಅತುಲೈಶ್ವರ್ಯವನ್ನೂ ಪಡೆದು ನಾನು ಸುಖಿಯಾಗುವುದೊಂದು; ಅವರೊಡನೆ ಯುದ್ಧಮಾಡಿ ಅಸುವನ್ನು ನೀಗಿಕೊಳ್ಳುವುದು ಮತ್ತೊಂದು. ನನ್ನ ಮನೋನಿಶ್ಚಯವು ಹೀಗಿರು ವಾಗ–ಪಾಂಡವರು ದಿನ-ದಿನಕ್ಕೂ ಅಭಿವೃದ್ಧಿಯನ್ನು ಹೊಂದುತ್ತಿರುವಾಗ

ಮತ್ತು ನಮ್ಮ ಐಶ್ವರ್ಯವು ಸ್ಥಗಿತವಾಗಿರುವಾಗ–ನಾನು ನನ್ನ ಜೀವಿತದ ಕಡೆಗೆ ಹೇಗೆತಾನೇ ಲಕ್ಷ್ಯಕೊಡಲಿ?"

೪೫ನೆಯ ಅಧ್ಯಾಯವು ಮುಗಿಯಿತು.

೪೬ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರ-ದುರ್ಯೋಧನರ ಸಂಭಾಷಣೆ : ದ್ಯೂತಸಭಾ ನಿರ್ಮಾಣ : ಯುಧಿಷ್ಠಿರನನ್ನು ಕರೆತರಲು ವಿದುರನಿಗೆ ಧೃತರಾಷ್ಟ್ರನ ಆಜ್ಞೆ

"ಜನಮೇಜಯಮಹಾರಾಜ! ಆ ಸಮಯಕ್ಕೆ ಸರಿಯಾಗಿ ಶಕುನಿಯು ದುರ್ಯೋಧನನ ಮಾತುಗಳನ್ನು ಪುಷ್ಟೀಕರಿಸುತ್ತಾ ಹೇಳತೊಡಗಿದನು :

"ದುರ್ಯೋಧನ! ನೀನು ಚಿಂತಿಸಬೇಡ. ಪಾಂಡವರ ಯಾವ ಐಶ್ವರ್ಯವನ್ನು ನೋಡಿ ನೀನಿಷ್ಟು ದುಃಖಿತನಾಗಿರುವೆಯೋ – ಆ ಅತುಲೈಶ್ವರ್ಯವನ್ನೂ ನಿನಗೆ ಕ್ಷಣಮಾತ್ರದಲ್ಲಿ ಗೆದ್ದುಕೊಡುವೆನು. ಯುಧಿಷ್ಠಿರನು ಈಗಲೇ ಹಸ್ತಿನೆಗೆ ಆಹ್ವಾನಿಸಲ್ಪಡಲಿ. ಕುಶಲಿಯಾದ ಆಟಗಾರನಾದ ನಾನು ಸಂಶಯಕ್ಕೆ ಎಡೆಗೊಡದೇ, ಯುದ್ಧಮಾಡದೇ, ನಮಗೆ ಸ್ವಲ್ಪವೂ ಘಾತವಾಗದ ರೀತಿಯಲ್ಲಿ ಪಗಡೆಯಾಟದ ದಾಳಗಳನ್ನು ಬಿಟ್ಟು ಅಕುಶಲನಾದ ಯುಧಿಷ್ಠಿರನನ್ನು ಕ್ಷಣಮಾತ್ರದಲ್ಲಿ ಗೆಲ್ಲುತ್ತೇನೆ.

**ಗ್ಲಹಾನ್ಧನೂಂಷಿ ಮೇ ವಿದ್ಧಿ ಶರಾನಕ್ಷಾಂಶ್ಚ ಭಾರತ ।**
**ಅಕ್ಷಾಣಾಂ ಹೃದಯಂ ಮೇ ಜ್ಯಾಂ ರಥಂ ವಿದ್ಧಿ ಮಮಾಸ್ತರಮ್ ॥**

ದುರ್ಯೋಧನ! ಪಗಡೆಯ ಕಾಯಿಗಳೇ ನನ್ನ ಧನುಸ್ಸು. ದಾಳಗಳೇ ನನ್ನ ಬಾಣಗಳು. ದಾಳಗಳ ಮೇಲಿರುವ ಚಿಹ್ನೆಗಳೇ ನನ್ನ ಧನುಸ್ಸಿನ ಮೌರ್ವೀ. ಪಗಡೆಯಾಟದ ಹಾಸೇ ನನ್ನ ರಥ. ಇವುಗಳ ಸಹಾಯದಿಂದ ಪ್ರಪಂಚವನ್ನೇ ಗೆಲ್ಲುವ ಸಾಮರ್ಥ್ಯವು ನನಗಿರುವುದು, ಮಹಾರಾಜ!"

ದುರ್ಯೋಧನನು ಶಕುನಿಯ ಮಾತನ್ನು ಶ್ಲಾಘಿಸುತ್ತಾ ಧೃತರಾಷ್ಟ್ರನಿಗೆ ಹೇಳಿದನು : "ತಾತ! ಪಗಡೆಯಾಟದಲ್ಲಿ ನಿಷ್ಣಾತನಾಗಿರುವ ಶಕುನಿಯು ಪಗಡೆಯಾಟದ ಮೂಲಕ ಪಾಂಡವರ ಅತುಲೈಶ್ವರ್ಯವನ್ನೂ ನಮಗಾಗಿ

ಗೆದ್ದುಕೊಡಲು ಸಿದ್ಧನಾಗಿರುವನು. ಅವನಿಗೆ ನೀನು ಅನುಮತಿಯನ್ನು ಕೊಡುವವನಾಗು."

"ಮಗು! ನಾನು ನನ್ನ ಅನುಜನಾದ ವಿದುರನ ಸಲಹೆಯಂತೆ ನಡೆಯತಕ್ಕವನು. ಅವನೊಡನೆ ಪರ್ಯಾಲೋಚಿಸಿ ಈ ವಿಷಯದಲ್ಲಿ ಏನು ಮಾಡಬೇಕೆಂಬ ನಿರ್ಧಾರವನ್ನು ನಿನಗೆ ತಿಳಿಯಪಡಿಸುವೆನು."



"ಅಪ್ಪ! ವಿದುರನು ಯಾವಾಗಲೂ ಪಾಂಡವರ ಹಿತರಕ್ಷಣೆಯಲ್ಲಿಯೇ ಆಸಕ್ತನಾಗಿರುವನು. ನನ್ನ ವಿಷಯದಲ್ಲಿ ಅವನಿಗೆ ಹೆಚ್ಚಿನ ಅಭಿಮಾನವಿರುವುದಿಲ್ಲ. ಆದುದರಿಂದ ಅವನು ಖಂಡಿತವಾಗಿಯೂ ನಿನ್ನ ಬುದ್ಧಿಯನ್ನು ಬದಲಿಸಿಬಿಡುವನು.

**ನಾರಭೇತಾನ್ಯಸಾಮರ್ಥ್ಯಾತ್ಪುರುಷಃ ಕಾರ್ಯಮಾತ್ಮನಃ ।**
**ಮತಿಸಾಮ್ಯಂ ದ್ವಯೋರ್ನಾಸ್ತಿ ಕಾರ್ಯೇಷು ಕುರುನನ್ದನ ॥೮॥**

ಮಹಾರಾಜ! ಯಾವ ಮನುಷ್ಯನೇ ಆಗಲೀ–ಇತರರ ಸಲಹೆಯನ್ನೇ ಅವಲಂಬಿಸಿ ಕಾರ್ಯಮಾಡುವುದು ಯೋಗ್ಯವೆನಿಸುವುದಿಲ್ಲ. ಏಕೆಂದರೆ :

ಪ್ರಪಂಚದಲ್ಲಿ ಯಾವ ಇಬ್ಬರೂ ಏಕಮನಸ್ಸಿನಿಂದ ಒಂದೇ ಕಾರ್ಯದಲ್ಲಿ ಪ್ರವರ್ತಿಸುವ ಸಾಧ್ಯತೆಯಿರುವುದಿಲ್ಲ.

**ಭಯಂ ಪರಿಹರನ್ಮಂದ ಆತ್ಮಾನಂ ಪರಿಪಾಲಯನ್ ।**
**ವರ್ಷಾಸು ಕ್ಲಿನ್ನಕಟವತ್ತಿಷ್ಠನ್ನೇವಾವಸೀದತಿ ॥೯॥**

ಮಂದಬುದ್ಧಿಯುಳ್ಳವನು ಮಾತ್ರ ತನ್ನ ಔನ್ನತ್ಯಕ್ಕೆ ಸಾಧಕಗಳಾದ ಕಾರ್ಯಗಳನ್ನು ಭಯದಿಂದ ಕೈಗೊಳ್ಳದೇ–ಮಳೆಯಲ್ಲಿ ತೋಯ್ದುಹೋದ ಗೊರಗಿನಂತೆ– ನಿಷ್ಪ್ರಯೋಜಕನಾಗಿ ತನ್ನ ಜೀವನವನ್ನೇ ವ್ಯರ್ಥಮಾಡಿ ಕೊಳ್ಳುತ್ತಾನೆ.

**ನ ವ್ಯಾಧಯೋ ನಾಪಿ ಯಮಃ ಪ್ರಾಪ್ತುಂ ಶ್ರೇಯಃ ಪ್ರತೀಕ್ಷತೇ ।**
**ಯಾವದೇವ ಭವೇತ್ಕಲ್ಪಸ್ತಾವಚ್ಛ್ರೇಯಃ ಸಮಾಚರೇತ್ ॥೧೦॥**

ವ್ಯಾಧಿಯೇ ಆಗಲೀ, ಯಮನೇ ಆಗಲೀ–ಒಬ್ಬ ಮನುಷ್ಯನು ಉಚ್ಚ್ರಾಯಸ್ಥಿತಿಗೆ ಬರುವವರೆಗೂ ಕಾದು ಕುಳಿತಿರುವುದಿಲ್ಲ. ಆದುದರಿಂದ ಮನುಷ್ಯನು ಶ್ರೇಯಃ-ಪ್ರೇಯಗಳು ದೈವಾಯತ್ತವಾಗಿ ಬರಲೆಂದು ಕಾದುಕುಳಿತುಕೊಳ್ಳದೇ ದೃಢಕಾಯನಾಗಿರುವಾಗಲೇ ಸತತವಾಗಿ ಪ್ರಯತ್ನಮಾಡಿ ತನ್ನ ಇಚ್ಛೆಯನ್ನು ಪೂರೈಸಿಕೊಳ್ಳಬೇಕು."

ಮಗನ ಮಾತುಗಳನ್ನು ಕೇಳಿ ಧೃತರಾಷ್ಟ್ರನು ಹೇಳುತ್ತಾನೆ :

**ಸರ್ವಥಾ ಪುತ್ರ ಬಲಿಭಿರ್ವಿಗ್ರಹೋ ಮೇ ನ ರೋಚತೇ ।**
**ವೈರಂ ವಿಕಾರಂ ಸೃಜತಿ ತದ್ವೈ ಶಸ್ತ್ರಮನಾಯಸಮ್ ॥೧೧॥**

"ಮಗು! ಬಲಿಷ್ಠರಾಗಿರುವವರೊಡನೆ ವೈರವು ನನಗೆ 'ಸರಿ' ಎನಿಸುವುದಿಲ್ಲ. ವೈರವು ಪರಸ್ಪರ ಮನೋಭಾವನೆಗಳಲ್ಲಿ ವಿಪರ್ಯಾಸವನ್ನುಂಟುಮಾಡುತ್ತದೆ. ಮನಸ್ಸಿನ ವಿರಸಭಾವವೇ ಉಕ್ಕಿನಿಂದ ಮಾಡಲ್ಪಡದಿರುವ ಒಂದು ತೀಕ್ಷ್ಣವಾದ ಆಯುಧವಾಗಿ ಪರಿಣಮಿಸುತ್ತದೆ.

**ಅನರ್ಥಮರ್ಥಂ ಮನ್ಯಸೇ ರಾಜಪುತ್ರ**
**ಸಂಗ್ರನ್ಥನಂ ಕಲಹಸ್ಯಾತಿಘೋರಮ್ ।**
**ತದ್ವೈ ಪ್ರವೃತ್ತಂ ತು ಯಥಾಕಥಂಚಿ-**
**ತ್ಸೃಜೇದಸೀನ್ನಿಶಿತಾನ್ಸಾಯಕಾಂಶ್ಚ ॥೧೨॥**

ದುರ್ಯೋಧನ! ಯಾವುದರ ಕಾರಣದಿಂದ ಅನರ್ಥಕಾರಿಯಾದ ಯುದ್ಧವು ಅನಿವಾರ್ಯವಾಗುವುದೋ ಮತ್ತು ಯಾವುದು ಕಲಹಕ್ಕೆ ಮೂಲ ಕಾರಣವೋ–ಅಂತಹುದನ್ನು ನೀನು ಅರ್ಥಪ್ರದವಾದುದೆಂದೂ ಸೌಭಾಗ್ಯದಾಯಕವಾದುದೆಂದೂ ಭಾವಿಸಿರುವೆ. ಒಮ್ಮೆ ಪರಸ್ಪರವೈರವು ಯಾವ ಕಾರಣದಿಂದಲಾದರೂ ಪ್ರಾರಂಭವಾಯಿತೆಂದರೆ ಆ ವೈರವೇ ತೀಕ್ಷ್ಣವಾದ ಅಲಗುಗಳುಳ್ಳ ಕತ್ತಿಗಳನ್ನೂ, ಮೊನಚಾದ ಬಾಣಗಳನ್ನೂ ಉತ್ಪತ್ತಿಮಾಡಲು (ಎಸೆಯಲು) ಸಮರ್ಥವಾಗುತ್ತದೆ. (ಯುದ್ಧದಲ್ಲಿ ಪರ್ಯವಸಾನವಾಗುತ್ತದೆ.)"

"ತಾತ! ನೀನೇಕಿಷ್ಟು ಭ್ರಾಂತನಾಗಿರುವೆಯೋ ತಿಳಿಯದಾಗಿದೆ. ನಮ್ಮ ಪೂರ್ವಜರು ಈ ಪಗಡೆಯಾಟವನ್ನು ಕಂಡುಹಿಡಿದರು. ಈ ದ್ಯೂತದಿಂದ ಯಾವ ವಿನಾಶವೂ ಉಂಟಾಗುವುದಿಲ್ಲ ಅಥವಾ ಆಯುಧಗಳ ಘರ್ಷಣೆಗೂ ಅವಕಾಶವಿರುವುದಿಲ್ಲ. ಆದುದರಿಂದ ಶಕುನಿಯ ಮಾತುಗಳನ್ನು ನೀನೀಗಲೇ ಅಂಗೀಕರಿಸು. ಪಗಡೆಯಾಟಕ್ಕಾಗಿ ಭವ್ಯಮಂದಿರವು ಒಡನೆಯೇ ನಿರ್ಮಿತವಾಗಲಿ. ನಮಗೆ ಈ ಜೂಜಿನ ಮೂಲಕ ಸ್ವರ್ಗಸುಖದ ಮಹಾದ್ವಾರವು ತೆರೆದಂತಾಗುತ್ತದೆ. ಜೂಜಾಡುವವರು ನಿಷ್ಣಾತರಾದ ಸಲಹೆಗಾರರೊಡನೆ ಸೇರಿ ನಿಶ್ಚಯವಾಗಿಯೂ ಅದೃಷ್ಟಶಾಲಿಗಳಾಗುತ್ತಾರೆ. ಪಾಂಡವರೊಡನೆ ಜೂಜಾಡಿ, ಅವರ ಐಶ್ವರ್ಯವನ್ನು ಅಪಹರಣಮಾಡಿದ ನಂತರವೇ ನಾವು ಅವರಿಗೆ ಸಮಾನರಾಗುತ್ತೇವೆ. ಆದುದರಿಂದ ಪಾಂಡವರೊಡನೆ ಜೂಜಾಟಕ್ಕೆ ವ್ಯವಸ್ಥೆಯನ್ನು ಒಡನೆಯೇ ಏರ್ಪಡಿಸು, ಮಹಾರಾಜ!"

"ದುರ್ಯೋಧನ! ನೀನೆಷ್ಟೇ ಯುಕ್ತಿಯುಕ್ತವಾಗಿ ಹೇಳಿದರೂ ನಿನ್ನ ಮಾತುಗಳು ನನಗೆ ರುಚಿಸುವುದಿಲ್ಲ. ಇದೇ ರೀತಿಯಲ್ಲಿ ನನ್ನ ಹಿತೋಕ್ತಿಗಳೂ ನಿನಗೆ ರುಚಿಸುವುದಿಲ್ಲ. ಆದುದರಿಂದ ನಿನ್ನ ಇಚ್ಛೆಯಿದ್ದಂತೆಯೇ ಮಾಡು. ಆದರೆ ನಿನ್ನ ಈ ಅಕಾರ್ಯಕ್ಕೆ ಮುಂದೆ ನೀನೇ ಪಶ್ಚಾತ್ತಾಪಪಡಬೇಕಾಗುವುದು. ಏಕೆಂದರೆ: ಅಧರ್ಮೋಕ್ತಿಗಳೂ ಮತ್ತು ಅಧರ್ಮಕಾರ್ಯಗಳೂ ಖಂಡಿತ ವಾಗಿಯೂ ಮುಂದೆ ಶ್ರೇಯಸ್ಸನ್ನುಂಟುಮಾಡಲಾರವು. ವಿದ್ವಾಂಸನಾದ, ಮಹಾಬುದ್ಧಿಮಂತನಾದ ವಿದುರನಿಗೆ ಈ ವಿಷಯಗಳೆಲ್ಲವೂ ಬಹಳ

ಹಿಂದೆಯೇ ತಿಳಿದಿದ್ದುವು. ಮಹಾಭಯಂಕರವಾದ, ಕ್ಷತ್ರಿಯಜೀವಘಾತಿಯಾದ ಕಾಲವು ದೈವೇಚ್ಛೆಯಂತೆ ಸಮೀಪವಾಗುತ್ತಲಿದೆ. ಇದು ಅನಿವಾರ್ಯ"– ಎಂದು ಹೇಳುತ್ತಾ ಧೃತರಾಷ್ಟ್ರನೊಮ್ಮೆ ನಿಟ್ಟುಸಿರುಬಿಟ್ಟನು.

ಜನಮೇಜಯ! ದುರ್ಬಲಮನಸ್ಸಿನ ಧೃತರಾಷ್ಟ್ರನು ವಿಧಿಯ ಕೈವಾಡವೇ ಬಲವತ್ತರವೆಂದೂ - ಅದು ಅನಿವಾರ್ಯವೆಂದೂ ನಿಶ್ಚಯಿಸಿ, ಯುಕ್ತಾಯುಕ್ತತೆಯ ವಿವೇಚನೆಯನ್ನೂ ಬದಿಗೊತ್ತಿ, ಮಗನ ಮಾತಿಗೆ ಮನಸ್ಸೋತು, ಸೇವಕರನ್ನು ಕರೆದು ಉಚ್ಚಸ್ವರದಿಂದ ಹೇಳಿದನು :

"ಹೆಚ್ಚು ಕಾಲವನ್ನು ತೆಗೆದುಕೊಳ್ಳದೇ ಜಾಗರೂಕತೆಯಿಂದ ಒಂದು ಭವ್ಯಸಭಾಮಂದಿರವನ್ನು ಕೂಡಲೇ ನಿರ್ಮಿಸಿರಿ. ಸಹಸ್ರಸ್ತಂಭಗಳಿಂದಲೂ ಸ್ವರ್ಣ ಮತ್ತು ವೈಡೂರ್ಯಗಳಿಂದ ಕೆತ್ತಲ್ಪಟ್ಟ ನೂರು ಬಾಗಿಲುಗಳಿಂದಲೂ ಕೂಡಿರುವ ಆ ಸಭಾಮಂದಿರವು – 'ತೋರಣಸ್ಫಾಟಿಕಾ' – ಎಂದು ಕರೆಯಲ್ಪಡಲಿ. ಆ ಮಂದಿರವು ಎರಡು ಚದುರಮೈಲಿಗಳ ಸುತ್ತಳತೆಯಲ್ಲಿ ಕಟ್ಟಲ್ಪಡಲಿ."

ರಾಜನ ಆಜ್ಞೆಯಾದೊಡನೆಯೇ ಸಾವಿರಾರು ನಿಷ್ಣಾತಶಿಲ್ಪಿಗಳು ನಿರ್ಮಾಣಕಾರ್ಯವನ್ನು ಆರಂಭಿಸಿದರು. ಕೆಲವು ದಿನಗಳಲ್ಲಿಯೇ ನಯನಮನೋಹರವಾದ, ಬಹುರತ್ನಯುಕ್ತವಾದ, ವಿಚಿತ್ರವಾದ ಮತ್ತು ಸುವರ್ಣಮಯವಾದ ಚಿತ್ರಾಸನಗಳಿಂದ ಸಜ್ಜಾಗಿದ್ದ ಭವ್ಯಸಭಾಮಂದಿರವು ನಿರ್ಮಾಣವಾಯಿತು. ರಾಜಭಟರು ಒಡನೆಯೇ ಆ ವಿಷಯವನ್ನು ಧೃತರಾಷ್ಟ್ರನಿಗೆ ತಿಳಿಯಪಡಿಸಿದರು.

ಅನಂತರ ಧೃತರಾಷ್ಟ್ರನು ವಿದುರನನ್ನು ಕರೆಯಿಸಿ, ಒಡನೆಯೇ ಇಂದ್ರಪ್ರಸ್ಥಕ್ಕೆ ಹೋಗಿ ಪಾಂಡವರನ್ನು ಹಸ್ತಿನಾವತಿಗೆ ಬರುವಂತೆಯೂ, ಅವರು ಬಂದನಂತರ ವಜ್ರ-ವೈಡೂರ್ಯಗಳಿಂದ ನಿರ್ಮಿತವಾಗಿರುವ– ಹಂಸತೂಲಿಕಾತಲ್ಪಗಳಿಂದಲೂ, ಚಿನ್ನದ ದಾರಗಳುಳ್ಳ ರತ್ನಗಂಬಳಿಗಳಿಂದಲೂ, ಉಪಭೋಗಯೋಗ್ಯಗಳಾದ ಸಕಲಸಂಭಾರಗಳಿಂದಲೂ ಸಜ್ಜಾಗಿರುವ ಭವ್ಯಸಭಾಮಂದಿರವನ್ನು ಸಂದರ್ಶಿಸಿ, ದುರ್ಯೋಧನಾದಿಗಳೊಡನೆ ಸ್ನೇಹದ ಪಗಡೆಯಾಟವನ್ನು ಆಡುವಂತೆಯೂ ಹೇಳಿ ಕರೆತರಲು ಆಜ್ಞಾಪಿಸಿದನು."

ಶ೬ನೆಯ ಅಧ್ಯಾಯವು ಮುಗಿಯಿತು.

೫೭ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ವಿದುರ-ಧೃತರಾಷ್ಟ್ರರ ಸಂಭಾಷಣೆ

"ಜನಮೇಜಯ! ಮಗನ ಸ್ಪಷ್ಟವಾದ ಅಭಿಪ್ರಾಯವನ್ನು ತಿಳಿದವನಾಗಿ ವಿಧಿಯು ದುಸ್ತರವೆಂದು ಭಾವಿಸಿದ್ದ ಧೃತರಾಷ್ಟ್ರನ ನ್ಯಾಯಸಮ್ಮತವಲ್ಲದ ಮಾತುಗಳನ್ನು ವಿದುರನು ಮೊದಲು ಒಪ್ಪಲಿಲ್ಲ.

"ಮಹಾರಾಜ! ನಾನು ನಿನ್ನ ಮಾತುಗಳನ್ನು ಒಪ್ಪಲಾರೆನು. ನೀನು ಹೇಳಿದಂತೆಯೂ ನಡೆಯಲಾರೆನು. ನೀನು ಹೀಗೆ ಮಾಡುವುದು ಸರ್ವಥಾ ಯುಕ್ತವಲ್ಲ. ಇದು ನಮ್ಮ ವಂಶದ ವಿನಾಶಕ್ಕೇ ಕಾರಣವಾಗಬಹುದೆಂದು ನನಗೆ ಭಯವಾಗಿದೆ. ನಿನ್ನ ಮಕ್ಕಳಲ್ಲಿ ಐಕ್ಯವು ಒಡೆದೊಡನೆಯೇ ಪರಸ್ಪರವಾಗಿ ಕಲಹವುಂಟಾಗುತ್ತದೆ. ಖಂಡಿತವಾಗಿಯೂ ಪಗಡೆಯಾಟದಿಂದ ಈ ಅನಿಷ್ಟಗಳೆಲ್ಲವೂ ಆರಂಭವಾಗುವುವು" – ಎಂದು ಮುಂತಾಗಿ ಅನೇಕ ಹಿತೋಕ್ತಿಗಳನ್ನು ವಿದುರನು ಹೇಳಿದರೂ ಮಗನ ಮಾತಿಗೆ ವಿರುದ್ಧವಾಗಿ ವರ್ತಿಸುವ ಸಾಮರ್ಥ್ಯವು ಧೃತರಾಷ್ಟ್ರನಿಗಿರಲಿಲ್ಲ. ಪುತ್ರವ್ಯಾಮೋಹವು ರಾಜನನ್ನು ವಿಮೋಹಗೊಳಿಸಿತ್ತು. ವಿದುರನಿಗೆ ಸ್ಪಷ್ಟವಾಗಿಯೇ ಹೇಳಿದನು :

**ನೇಹ ಕ್ಷತ್ತಃ ಕಲಹಸ್ತಪ್ಸ್ಯತೇ ಮಾಂ**
**ನ ಚೇದ್ದೈವಂ ಪ್ರತಿಲೋಮಂ ಭವಿಷ್ಯತ್ ।**
**ಧಾತ್ರಾ ತು ದಿಷ್ಟಸ್ಯ ವಶೇ ಕಿಲೇದಂ**
**ಸರ್ವಂ ಜಗಚ್ಚೇಷ್ಟತಿ ನ ಸ್ವತನ್ತ್ರಮ್ ॥೪॥**

"ವಿದುರ! ವಿಧಿಯು ಪ್ರತಿಕೂಲವಾಗದಿದ್ದರೆ ಈ ಅಂತಃಕಲಹವು ನನ್ನನ್ನು ದುಃಖಗೊಳಿಸುವುದಿಲ್ಲ. (ವಿಧಿಯು ಅನುಕೂಲವಾಗಿದ್ದರೆ ಕಲಹವು ಸಂಭವಿಸದೇ ಇರಬಹುದು.) ಈ ಪ್ರಪಂಚವೇ ವಿಧಿಯ ನಿಯಮಾನುಸಾರವಾಗಿ ಪರಿಭ್ರಮಣವಾಗುತ್ತಲಿದೆ. ವಿಧಿಯ ನಿಯಮವನ್ನು ವಿರೋಧಿಸಿ ನಡೆಯಲು ಯಾರಿಂದಲೂ ಸಾಧ್ಯವಾಗಲಾರದು. ಈ ವಿಷಯದಲ್ಲಿ ಯಾರೂ ಸ್ವತಂತ್ರರಲ್ಲ. ಆದುದರಿಂದ ನೀನೀಗಲೇ ಹೋಗಿ ನನ್ನ ಅಪ್ಪಣೆಯಂತೆ ದುರ್ಜಯನಾದ, ಮಹಾನುಭಾವನಾದ ಕುಂತೀಪುತ್ರನನ್ನು ಕರೆತರುವವನಾಗು."

ಧೃತರಾಷ್ಟ್ರನು ಹೀಗೆ ಹೇಳಿ ಸೇವಕರ ಅವಲಂಬನೆಯಿಂದ ಅಂತಃಪುರಕ್ಕೆ ತೆರಳಿದನು."

ವೈಶಂಪಾಯನರು 'ಓಂ ತತ್ಸತ್' ಎಂದು ಹೇಳಿ ಅಂದಿನ ಕಥೆಯನ್ನು ಮುಗಿಸಿದರು."

೫೭ನೆಯ ಅಧ್ಯಾಯವು ಮುಗಿಯಿತು.

೫೮ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ವಿದುರ-ಯುಧಿಷ್ಠಿರರ ಸಂಭಾಷಣೆ : ವಿದುರನ ಜೊತೆಯಲ್ಲಿ ಹಸ್ತಿನಾಪುರಕ್ಕೆ ಧರ್ಮಾದಿಗಳ ಆಗಮನ

ವೈಶಂಪಾಯನರು ಕಥೆಯನ್ನು ಮುಂದುವರಿಸುತ್ತಾ ಹೇಳುತ್ತಾರೆ :

"ಜನಮೇಜಯ! ವಿದುರನು ತನ್ನ ಇಚ್ಛೆಗೆ ಅತಿವಿರೋಧವೆನಿಸಿದ ಆಜ್ಞೆಯನ್ನು ಧೃತರಾಷ್ಟ್ರನಿಂದ ಪಡೆದವನಾಗಿ ಮಹಾವೇಗವುಳ್ಳ, ಬಲಶಾಲಿಗಳಾದ, ಸಾತ್ತ್ವಿಕ ಮತ್ತು ಶಾಂತಸ್ವಭಾವಗಳಿಂದ ಕೂಡಿದ್ದ ಕುದುರೆಗಳಿಂದ ಯುಕ್ತವಾದ ರಥದಲ್ಲಿ ಕುಳಿತು ಇಂದ್ರಪ್ರಸ್ಥಕ್ಕೆ ಪ್ರಯಾಣ ಮಾಡಿದನು. ಮಹಾಮೇಧಾವಿಯಾದ ವಿದುರನು ಇಂದ್ರಪ್ರಸ್ಥವನ್ನು ಸೇರಿ, ಪಾಂಡವರ ಅರಮನೆಯ ಮುಂದೆ ರಥದಿಂದಿಳಿದು, ಬ್ರಾಹ್ಮಣರಿಂದ ಸ್ವಾಗತವನ್ನು ಪಡೆದು, ಕುಬೇರನ ಅರಮನೆಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಯುಧಿಷ್ಠಿರನ ಅರಮನೆಯನ್ನು ಪ್ರವೇಶಿಸಿ, ಸಿಂಹಾಸನಾರೂಢನಾಗಿ ಕುಳಿತಿದ್ದ, ಸತ್ಯಸಂಧನಾದ, ಅಜಾತಶತ್ರುವಾದ ಧರ್ಮಜನ ಬಳಿಗೆ ಧಾವಿಸಿದನು. ವಿದುರನನ್ನು ಕಂಡೊಡನೆಯೇ ಮಹಾತ್ಮನಾದ ಯುಧಿಷ್ಠಿರನು ಮೇಲೆದ್ದು ನಾಲ್ಕಡಿಗಳನ್ನು ಮುಂದಿಟ್ಟು ವಿದುರನನ್ನು ಆದರದಿಂದ ಸ್ವಾಗತಿಸಿ, ಪಕ್ಕದಲ್ಲಿದ್ದ ಸಿಂಹಾಸನದಲ್ಲಿ ಕುಳ್ಳಿರಿಸಿ, ಯಥೋಚಿತವಾಗಿ ಸಂಪೂಜಿಸಿ ಹೇಳಿದನು :

"ವಿದುರ! ನಮ್ಮ ದೊಡ್ಡಪ್ಪನಾದ ಧೃತರಾಷ್ಟ್ರನು ಪುತ್ರ-ಪೌತ್ರ-ಬಂಧುಗಳೊಡನೆ ಸುಖದಿಂದಿರುವನೇ? ನಿನ್ನ ಮುಖಾರವಿಂದವು ಮ್ಲಾನಿ ಹೊಂದಿರುವಂತೆ ಕಾಣುತ್ತಿದೆ. ನೀನಿಲ್ಲಿಗೆ ಸೌಖ್ಯದಿಂದಲೂ-ಶಾಂತಿಯಿಂದಲೂ ಬಂದಿರುವೆಯಲ್ಲವೇ? ಧೃತರಾಷ್ಟ್ರನ ಮಕ್ಕಳು ತಂದೆಗೆ

ವಿಧೇಯರಾಗಿ ವರ್ತಿಸುತ್ತಿರುವರಲ್ಲವೇ? ದೇಶದ ಪ್ರಜೆಗಳೆಲ್ಲರೂ ಧೃತರಾಷ್ಟ್ರ ಮಹಾರಾಜನ ಆಜ್ಞೆಯನ್ನು ನಿಷ್ಠೆಯಿಂದ ಪಾಲಿಸುತ್ತಿರುವರಲ್ಲವೇ?"

ವಿದುರನು ಉತ್ತರಿಸಿದನು.:

"ಧರ್ಮಜ! ಧೃತರಾಷ್ಟ್ರನು ಮಕ್ಕಳು-ಮೊಮ್ಮಕ್ಕಳೊಡನೆ ಸೌಖ್ಯದಿಂದಿರುವನು. ರಾಜನಿಷ್ಠೆಯಿಂದ ಕೂಡಿರುವ ಪ್ರಜೆಗಳಿಂದಲೂ, ಅನುರಾಗದಿಂದಿರುವ ಬಾಂಧವರಿಂದಲೂ ಪರಿವೃತನಾಗಿರುವ ಧೃತರಾಷ್ಟ್ರರಾಜನು ಸಾಕ್ಷಾತ್ ಇಂದ್ರನಂತೆಯೇ ರಾಜ್ಯಭಾರವನ್ನು ಮಾಡುತ್ತಲಿರುವನು. ಅವನ ಮಕ್ಕಳೂ ಅವನಿಗೆ ವಿಧೇಯರಾಗಿಯೇ ಇರುತ್ತಾರೆ. ಈ ಕಾರಣಗಳಿಂದಾಗಿ ಅವನಿಗೆ ಯಾವ ವಿಧವಾದ ಶೋಕಕ್ಕೂ ಎಡೆಯಿಲ್ಲ. ಮೇಲಾಗಿ ಧೃತರಾಷ್ಟ್ರನು ಯಾವಾಗಲೂ ತನ್ನ ಅಭಿವೃದ್ಧಿಯಲ್ಲಿಯೇ ಹೆಚ್ಚಿನ ಆಸಕ್ತಿಯನ್ನೂ ಹೊಂದಿರುತ್ತಾನೆ.

ಕುರುಪ್ರಮುಖನು ನಿನ್ನ ಕುಶಲದ ವಿಷಯವಾಗಿಯೂ ಮತ್ತು ನಿನ್ನ ಸಂಪತ್ತಿನ ಅಭಿವೃದ್ಧಿಯ ವಿಷಯವಾಗಿಯೂ ಮೊಟ್ಟಮೊದಲು ಪ್ರಸ್ತಾಪಿಸುವಂತೆಯೂ ಹೇಳಿರುತ್ತಾನೆ.

ಯುಧಿಷ್ಠಿರ! ಧೃತರಾಷ್ಟ್ರನಿಂದ ನಿನಗೊಂದು ಆಹ್ವಾನವನ್ನೂ ನಾನು ತಂದಿರುತ್ತೇನೆ. ನೀನೀಗಲೇ ನಿನ್ನ ಅನುಜರಿಂದ ಕೂಡಿದವನಾಗಿ ಹಸ್ತಿನಾಪುರಕ್ಕೆ ಬರಬೇಕು. ಧೃತರಾಷ್ಟ್ರನು ನೂತನವಾದ ಮತ್ತು ಭವ್ಯವಾದ ಸಭಾಮಂದಿರವನ್ನು ನಿರ್ಮಿಸಿರುತ್ತಾನೆ. ಅದೂ ನಿನ್ನ ಸಭಾಮಂದಿರದಂತೆಯೇ ಇದೆ. ಅದನ್ನು ನೋಡುವ ಸಲುವಾಗಿ ನೀವು ಬರಬೇಕು. ನಿಮ್ಮ ಆಗಮನದ ಸಂತೋಷ ಸಮಾರಂಭದಲ್ಲಿ ಒಂದು ದ್ಯೂತವನ್ನು ಏರ್ಪಡಿಸಲಾಗಿದೆ. ನೀವೆಲ್ಲರೂ ಅಲ್ಲಿಗೆ ಬಂದು ಆ ಭವ್ಯಭವನದ ಸುಂದರವಾದ ಸೊಬಗನ್ನು ನೋಡಿ ಕುರುರಾಜನೊಡನೆ ಅಕ್ಷಕ್ರೀಡೆಯನ್ನಾಡಬೇಕು. ನೀನು ಹೀಗೆ ಮಾಡುವುದರಿಂದ ಧೃತರಾಷ್ಟ್ರನಿಗೆ ಹೆಚ್ಚಿನ ಸಂತೋಷವುಂಟಾಗುತ್ತದೆ. ನಿನ್ನ ಆಗಮನವನ್ನು ನಿರೀಕ್ಷಿಸಿ ಈಗಾಗಲೇ ಅನೇಕ ರಾಜರು ಆಗಮಿಸಿರುತ್ತಾರೆ. ಇನ್ನೂ ಅನೇಕ ದ್ಯೂತನಿಷ್ಣಾತರೂ ಧೃತರಾಷ್ಟ್ರನ ಆಹ್ವಾನದ ಮೇಲೆ ಬರುವವರಿದ್ದಾರೆ. ಈ ಆಹ್ವಾನವನ್ನೀಯುವ ಸಲುವಾಗಿಯೇ ನಾನು

ಹಾಸ್ತಿನೆಯಿಂದ ಬಂದಿರುವೆನು. ಯುಧಿಷ್ಠಿರ! ರಾಜನ ಈ ಆಹ್ವಾನವನ್ನು ನೀನು ಅಂಗೀಕರಿಸುವವನಾಗು.”

ಧರ್ಮರಾಜನು ಹೇಳುತ್ತಾನೆ :

**ದ್ಯೂತೇ ಕ್ಷತ್ತಃ ಕಲಹೋ ವಿದ್ಯತೇ ನಃ**
**ಕೋ ವೈ ದ್ಯೂತಂ ರೋಚಯೇದ್ಬುಧ್ಯಮಾನಃ ।**
**ಕಿಂ ವಾ ಭವಾನ್ಮನ್ಯತೇ ಯುಕ್ತರೂಪಂ**
**ಭವದ್ವಾಕ್ಯೇ ಸರ್ವ ಏವ ಸ್ಥಿತಾಃ ಸ್ಮ ॥೧೦॥**

“ವಿದುರ! ಪಗಡೆಯಾಟಕ್ಕೆ ಕುಳಿತರೆ ಆ ಆಟವು ಕಲಹದಲ್ಲಿಯೇ ಪರ್ಯವಸಾನವಾಗಬಹುದು. ಇದನ್ನು ತಿಳಿದೂ ದ್ಯೂತಕ್ಕೆ ಯಾರು ತಾನೇ ಒಪ್ಪುವರು? ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು? ವಿದುರ! ಈ ಸಮಯದಲ್ಲಿ ನಾವೇನು ಮಾಡಬೇಕೆಂಬುದನ್ನು ನೀನೇ ತಿಳಿಯಹೇಳು. ನಾವೆಲ್ಲರೂ ನಿನ್ನ ಸಲಹೆಯಂತೆಯೇ ನಡೆಯಲು ಸಿದ್ಧರಾಗಿದ್ದೇವೆ.”

**ಜಾನಾಮ್ಯಹಂ ದ್ಯೂತಮನರ್ಥಮೂಲಂ**
**ಕೃತಶ್ಚ ಯತ್ನೋಽಸ್ಯ ಮಯಾ ನಿವಾರಣೇ ।**
**ರಾಜಾ ಚ ಮಾಂ ಪ್ರಾಹಿಣೋತ್ತ್ವತ್ಸಕಾಶಂ**
**ಶ್ರುತ್ವಾ ವಿದ್ವಞ್ಶ್ರೇಯ ಇಹಾಚರಸ್ವ ॥೧೧॥**

“ವಿದ್ವಾಂಸನೇ! ದ್ಯೂತವು ದುಃಖಕ್ಕೆ ಮೂಲವೆಂಬುದನ್ನು ನಾನೂ ಬಲ್ಲೆನು. ಈ ದ್ಯೂತವನ್ನು ತಪ್ಪಿಸಲು ನಾನು ಬಹಳವಾಗಿ ಯತ್ನಿಸಿದೆನು. ಧೃತರಾಷ್ಟ್ರನಿಗೆ ದ್ಯೂತದ ಪರಿಣಾಮವೇನೆಂಬುದನ್ನು ವಿವರಿಸಿಯೂ ಹೇಳಿದೆನು. ಆದರೂ ನನ್ನ ಪ್ರಯತ್ನಗಳೆಲ್ಲವೂ ವಿಫಲವಾದುವು. ನಿಮ್ಮನ್ನು ಆಹ್ವಾನಿಸಿ ಕರೆತರಲೆಂದೇ ರಾಜನು ನನ್ನನ್ನು ನಿಯೋಜಿಸಿರುವನು. ಇವೆಲ್ಲವನ್ನೂ ಪರಿಶೀಲಿಸಿ ಯಾವುದು ಶ್ರೇಯಸ್ಕರವೋ ಅದನ್ನು ಮಾಡು. ಯುಧಿಷ್ಠಿರ! ಬಹುಶ್ರುತನಾದ ನಿನಗೆ ನಾನು ಹೆಚ್ಚು ಹೇಳುವ ಕಾರಣವಿಲ್ಲ.”

“ವಿದುರ! ಧೃತರಾಷ್ಟ್ರನ ಮಕ್ಕಳನ್ನು ಬಿಟ್ಟು ಮತ್ತಾವ ಮೋಸಗಾರರು, ಜೂಜುಗಾರರು ಆಟಕ್ಕೆ ಆಹ್ವಾನಿತರಾಗಿದ್ದಾರೆ? ಅಥವಾ ಆಟವಾಡಲು ಸಿದ್ಧರಾಗಿರುತ್ತಾರೆ? – ಎಂಬುದನ್ನು ದಯೆಯಿಟ್ಟು ಹೇಳು. ಅವರು

ಯಾರು? ನಮ್ಮಲ್ಲಿರುವ ಅಸಂಖ್ಯಾತವಾದ ಐಶ್ವರ್ಯವನ್ನು ಪಣವನ್ನಾಗಿಟ್ಟು ನಾವು ಯಾರೊಡನೆ ಆಟವಾಡಬೇಕಾಗಬಹುದು?"

"ಧರ್ಮಜ! ಪಗಡೆಯಾಟದಲ್ಲಿ ಅತಿನಿಷ್ಣಾತನಾದ, ಸೊಗಸಾದ ಕೈಚಳಕವುಳ್ಳ ಮತ್ತು ವಿವೇಚನೆಯೇ ಇಲ್ಲದೇ ಪಂದ್ಯಕಟ್ಟುವ ಸ್ವಭಾವವುಳ್ಳ ಗಾಂಧಾರದೇಶದ ಶಕುನಿಯಿದ್ದಾನೆ. ಅವನ ಜೊತೆಗೆ ವಿವಿಂಶತಿ, ಚಿತ್ರಸೇನ, ಸತ್ಯವ್ರತ, ಪುರುಮಿತ್ರ, ಮತ್ತು ಜಯ–ಇವರೂ ಇದ್ದಾರೆ."

**ಮಹಾಭಯಾಃ ಕಿತವಾಃ ಸಂನಿವಿಷ್ಟಾ**
**ಮಾಯೋಪಧಾ ದೇವಿತಾರೋಽತ್ರ ಸನ್ತಿ ।**
**ಧಾತ್ರಾ ತು ದಿಷ್ಟಸ್ಯ ವಶೇ ಕಿಲೇದಂ**
**ಸರ್ವಂ ಜಗತ್ತಿಷ್ಠತಿ ನ ಸ್ವತನ್ತ್ರಮ್ ॥೧೪॥**

"ವಿದುರ! ಹಾಗಾದರೆ ಮಹಾಭಯಂಕರರಾದ, ಮೋಸಗಾರರಾದ ಜೂಜುಗಾರರೇ ಅಲ್ಲಿದ್ದಾರೆಂಬುದು ಸ್ಪಷ್ಟವಾಯಿತು. ಇದರ ಹಿನ್ನೆಲೆ ಮತ್ತು ಮುಂದೆ ಇದರಿಂದಾಗುವ ಫಲ–ಇವೆಲ್ಲವೂ ಸ್ಪಷ್ಟವಾಗಿಯೇ ಇದೆ. ನಿಜ, ಬ್ರಹ್ಮಸೃಷ್ಟವಾದ ಈ ಪ್ರಪಂಚವೆಲ್ಲವೂ ವಿಧಿನಿಯಮದಂತೆಯೇ ಸಾಗುತ್ತಿದೆ. ನಾವೆಲ್ಲರೂ ವಿಧಿಗೆ ಅಧೀನರು. ಈ ವಿಷಯದಲ್ಲಿ ಯಾರೂ ಸ್ವತಂತ್ರರಲ್ಲ.

ವಿದುರ! ಧೃತರಾಷ್ಟ್ರನ ಆಜ್ಞೆಯಂತೆ ದ್ಯೂತವಾಡಲು ನನಗೆ ಇಚ್ಛೆಯಿಲ್ಲದಿದ್ದರೂ ಆತನ ಮಾತನ್ನು ನಿರಾಕರಿಸಲಾರೆನು. ಏಕೆಂದರೆ : ಮಗನು ತಂದೆಗೆ ಯಾವಾಗಲೂ ಇಷ್ಟನೇ. ಅವನು ತನ್ನ ಪುತ್ರರ ಹಿತಾಕಾಂಕ್ಷೆಯಿಂದ ದ್ಯೂತಕ್ಕೆ ಆಹ್ವಾನವನ್ನಿತ್ತಿರುವುದು ನಿಶ್ಚಯ. ವಿದುರ! ನೀನೇ ನಮ್ಮ ಸ್ವಾಮೀ. ನೀನು ಹೇಳಿದಂತೆಯೇ ನಾನು ಮಾಡುವೆನು.

ನನಗೆ ದ್ಯೂತದಲ್ಲಿ ಆಸಕ್ತಿಯಿಲ್ಲದಿರುವುದರಿಂದ ಸಭಾಮಂದಿರದಲ್ಲಿ ದ್ಯೂತಕ್ಕೆ ಶಕುನಿಯಿಂದ ಆಹ್ವಾನಿತನಾಗದಿದ್ದರೆ ಖಂಡಿತವಾಗಿಯೂ ನಾನು ಆಟವಾಡುವುದಿಲ್ಲ. ಆದರೆ ಅವನೊಂದು ವೇಳೆ ಜೂಜಾಟಕ್ಕೆ ಕರೆದರೆ ಸಾಧ್ಯವಿಲ್ಲವೆಂದೂ ನಾನು ಹೇಳಲಾರೆ. ಅದರಿಂದ ಯಾವ ವಿಧವಾದ ದುಷ್ಟ ಪರಿಣಾಮಗಳೇ ಉಂಟಾದರೂ ಆಹ್ವಾನವನ್ನು ಅಂಗೀಕರಿಸಿ ಆಟವಾಡಿಯೇ

ತೀರುವೆನು. ನನ್ನ ಹಿಂದಿನ ಪ್ರತಿಜ್ಞಾನುಸಾರವಾಗಿ ಹೀಗೆ ನಡೆಯಲೇಬೇಕಾಗಿದೆ.”

ಯುಧಿಷ್ಠಿರನು ಹೀಗೆ ಹೇಳಿ ಸೇವಕರನ್ನು ಕರೆದು ಪ್ರಯಾಣಕ್ಕೆ ಒಡನೆಯೇ ಸಿದ್ಧಮಾಡುವಂತೆ ಹೇಳಿದನು. ಮರುದಿನವೇ ದ್ರೌಪದಿಯೇ ಮೊದಲಾದ ಬಂಧು-ಮಿತ್ರ-ಕಳತ್ರ-ದಾಸ-ದಾಸಿಯರಿಂದ ಸಮೇತನಾಗಿ ಹಸ್ತಿನೆಗೆ ಪ್ರಯಾಣಹೊರಟನು. ಹೊರಡುವ ಕಾಲದಲ್ಲಿ ಅವನ ಮುಖಾರವಿಂದದಿಂದ ಈ ಮಾತುಗಳು ನಿಟ್ಟುಸಿರಿನೊಡನೆ ಹೊರಬಂದುವು.:

**ದೈವಂ ಹಿ ಪ್ರಜ್ಞಾಂ ಮುಷ್ಣಾತಿ ಚಕ್ಷುಸ್ತೇಜ ಇವಾಪತತ್ ।**
**ಧಾತುಶ್ಚ ವಶಮನ್ವೇತಿ ಪಾಶೈರಿವ ನರಃ ಸಿತಃ ॥೧೮॥**

“ಅದ್ಭುತಪ್ರಕಾಶವುಳ್ಳ ವಸ್ತುವೊಂದು ನಮ್ಮೆದುರಾದರೆ ಕಣ್ಣುಗಳನ್ನು ಮಂಜುಗೊಳಿಸುವಂತೆ – ಅಪಾರವಾದ ಶಕ್ತಿ ಇರುವ ದೈವವು ಅಥವಾ ವಿಧಿಯು ನಮ್ಮ ಪ್ರಜ್ಞೆಯನ್ನು ಅಪಹರಿಸಿಬಿಡುತ್ತದೆ. ಮಾನವನು ಹಗ್ಗದಿಂದ ಕಟ್ಟಿ ಸೆಳೆಯಲ್ಪಟ್ಟವನಂತೆ – ವಿಧಿಗೆ ವಶನಾಗುತ್ತಾನೆ.”

ಹೀಗೆಂದು ಹೇಳುತ್ತಾ ಯುಧಿಷ್ಠಿರನು ಧೃತರಾಷ್ಟ್ರನ ಆಹ್ವಾನದ ವಿಷಯವನ್ನಾಗಲೀ, ಕರ್ತವ್ಯಾಕರ್ತವ್ಯಗಳ ವಿಷಯವನ್ನಾಗಲೀ–ಪುನಃ ಸ್ಮರಣೆಗೂ ತಂದುಕೊಳ್ಳದೇ ವಿದುರನೊಡನೆ ಇಂದ್ರಪ್ರಸ್ಥದಿಂದ ಹೊರಟನು.

ರಾಜಯೋಗ್ಯವಾದ, ಅಮೂಲ್ಯವಾದ ವಸ್ತ್ರಾಭರಣಗಳನ್ನು ಧರಿಸಿ, ಬಾಹ್ಲಿಕಾಧಿಪತಿಯಿಂದ ಪಾರಿತೋಷಕವಾಗಿ ಕೊಡಲ್ಪಟ್ಟಿದ್ದ ರಥದಲ್ಲಿ ಕುಳಿತು, ಅನುಜರೊಡನೆ ಹಸ್ತಿನಾಪುರಕ್ಕೆ ಯುಧಿಷ್ಠಿರನು ಹೊರಟನು.

ಜನಮೇಜಯ! ರಾಜಶ್ರೀಯಿಂದ ದೇದೀಪ್ಯಮಾನನಾಗಿ, ಬ್ರಾಹ್ಮಣ ಪುರಸ್ಸರನಾಗಿ, ಧೃತರಾಷ್ಟ್ರನಿಂದ ಆಹ್ವಾನಿಸಲ್ಪಟ್ಟ ಯುಧಿಷ್ಠಿರನು ಹಸ್ತಿನೆಗೆ ಹೊರಟನು. ಇದು ವಿಧಿಪ್ರಚೋದನೆಯೇ ಹೊರತು ಬೇರೇನೂ ಅಲ್ಲ. ಮಹಾರಾಜ!

ಹಸ್ತಿನಾಪಟ್ಟಣವನ್ನು ಸೇರಿ ಅರಮನೆಯ ಮುಂದೆ ರಥವನ್ನು ನಿಲ್ಲಿಸಿ, ರಥದಿಂದಿಳಿದು ಒಡನೆಯೇ ಧೃತರಾಷ್ಟ್ರನಿದ್ದೆಡೆಗೆ ಹೋಗಿ ನಮಸ್ಕರಿಸಿ, ಅನಂತರದಲ್ಲಿ ಭೀಷ್ಮ - ದ್ರೋಣ - ಕೃಪ - ಕರ್ಣ - ಅಶ್ವತ್ಥಾಮಾದಿಗಳನ್ನೂ

ಕಂಡನು. ಭೀಷ್ಮ-ದ್ರೋಣರು ಧರ್ಮಮೂರ್ತಿಯಾದ ಯುಧಿಷ್ಠಿರನನ್ನು ಕಂಡೊಡನೆಯೇ ಆನಂದಬಾಷ್ಪಗಳನ್ನು ಸುರಿಸುತ್ತಾ ಬಿಗಿದಪ್ಪಿದರು.

ಅನಂತರ ಧರ್ಮಜನು ಸೋಮದತ್ತ-ದುರ್ಯೋಧನ-ಶಲ್ಯ-ಸುಬಲರನ್ನೂ, ದ್ಯೂತಕ್ಕಾಗಿ ಆಗಮಿಸಿದ್ದ ಇತರರಾಜರನ್ನೂ ಕಂಡು ಯಥೋಚಿತವಾಗಿ ಕುಶಲಪ್ರಶ್ನೆಗಳನ್ನು ಮಾಡಿದನು.

ದುಃಶಾಸನನೇ ಮೊದಲಾದ ನೂರು ಮಂದಿ ದಾಯಾದರನ್ನೂ ಜಯದ್ರಥನನ್ನೂ ಒಬ್ಬೊಬ್ಬರನ್ನಾಗಿ ಸಂಧಿಸಿ, ಆದರಪೂರ್ವಕವಾಗಿ ಮಾತನಾಡಿಸಿದನು. ಅನಂತರ ಅನುಜಸಮೇತನಾಗಿ ಧೃತರಾಷ್ಟ್ರನ ಅಂತಃಪುರಕ್ಕೆ ಹೋಗಿ ಅಲ್ಲಿ–ನಕ್ಷತ್ರಗಳಿಂದ ಸುತ್ತುವರಿಯಲ್ಪಟ್ಟ ರೋಹಿಣಿ ನಕ್ಷತ್ರದಂತೆ ಪ್ರಕಾಶಿಸುತ್ತಿದ್ದ–ಪತಿಪರಾಯಣೆಯಾದ ಗಾಂಧಾರಿಯನ್ನು ಕಂಡನು. ತಮ್ಮಂದಿರೊಡನೆ ಗಾಂಧಾರಿಗೆ ನಮಸ್ಕರಿಸಿ, ಅವಳಿಂದ ಆಶೀರ್ವಾದವನ್ನು ಪಡೆದು ಪುನಃ ಧೃತರಾಷ್ಟ್ರನ ಬಳಿಗೆ ಬಂದು ವಿನೀತನಾಗಿ ನಮಸ್ಕರಿಸಿದನು. ಧೃತರಾಷ್ಟ್ರನು ಪಾಂಡುಪುತ್ರನನ್ನು ಮೇಲೆತ್ತಿ ಬಿಗಿದಪ್ಪಿ, ಅವನ ನೆತ್ತಿಯನ್ನು ಆಘ್ರಾಣಿಸಿದನು. ಅಣ್ಣನು ಮಾಡಿದ ರೀತಿಯಲ್ಲಿಯೇ ಭೀಮಾದಿಗಳೂ ಧೃತರಾಷ್ಟ್ರನಿಗೆ ನಮಸ್ಕರಿಸಿದರು. ಪುರುಷವ್ಯಾಘ್ರರಾದ, ಸ್ಫುರದ್ರೂಪಿಗಳಾದ ಪಾಂಡವರನ್ನು ಕಂಡು ಕುರುಗಳೆಲ್ಲರೂ ಸಂತೋಷಪಟ್ಟರು.

ಯುಧಿಷ್ಠಿರನು ಧೃತರಾಷ್ಟ್ರನ ಅನುಜ್ಞೆಯನ್ನು ಪಡೆದು, ತಮಗಾಗಿಯೇ ಸಕಲಸಂಭಾರಗಳಿಂದ ಸಜ್ಜುಗೊಳಿಸಿದ್ದ ಭವನಕ್ಕೆ ಅನುಜರೊಡನೆ ಹೊರಟುಹೋದನು.

ಆ ಭವ್ಯಭವನದಲ್ಲಿ ಪಾಂಡವರು ಸ್ವಲ್ಪಕಾಲ ವಿಶ್ರಾಂತಿಸುಖವನ್ನು ಅನುಭವಿಸಿದರು. ಆ ವೇಳೆಗೆ ಸರಿಯಾಗಿ ಧೃತರಾಷ್ಟ್ರನ ರಾಣೀವಾಸದಲ್ಲಿದ್ದ ದುಶ್ಶಲೆಯೇ ಮೊದಲಾದ ಸ್ತ್ರೀಯರು ದ್ರೌಪದಿಯನ್ನು ನೋಡಲು ಪಾಂಡವರ ಬಿಡಾರಕ್ಕೆ ಆಗಮಿಸಿದರು. ಸಾಕ್ಷಾತ್ ಲಕ್ಷ್ಮೀದೇವಿಗೆ ಸಮಾನವಾಗಿ ವಿರಾಜಿಸುತ್ತಿದ್ದ ಯಾಜ್ಞಸೇನಿಯ ತೇಜೋರಾಶಿಯನ್ನೂ, ಅವಳ ವೈಭವವನ್ನೂ ಕಂಡು ಧೃತರಾಷ್ಟ್ರನ ಸೊಸೆಯರ ಹೃದಯಗಳಲ್ಲಿ ಮಾತ್ಸರ್ಯವು ಅಂಕುರಿಸಿತು.

ದ್ರೌಪದಿಯು ಆಗಮಿಸಿದ ರಾಜಮಹಿಳೆಯರನ್ನು ಆದರದಿಂದ

ಸ್ವಾಗತಿಸಿ, ಯಥೋಚಿತವಾಗಿ ಸತ್ಕರಿಸಿ, ಸವಿಮಾತುಗಳನ್ನಾಡಿ ಬೀಳ್ಕೊಟ್ಟಳು.

ಅವರೆಲ್ಲರೂ ತೆರಳಿದನಂತರ ಪಾಂಡವರು ತಮ್ಮ ದೈನಂದಿನ ವ್ಯಾಯಾಮವನ್ನೂ, ಸಂಧ್ಯಾಕಾರ್ಯಗಳನ್ನೂ ಮುಗಿಸಿದವರಾಗಿ, ಶರೀರ ಗಳನ್ನು ಚಂದನಾಗುರುಲೇಪನಗಳಿಂದಲೂ, ದಿವ್ಯವಾದ ವಸ್ತ್ರಾಭರಣ ಗಳಿಂದಲೂ ಸಿಂಗರಿಸಿಕೊಂಡರು. ಶ್ರೇಯೋಭಿಲಾಷೆಯಿಂದ ಬ್ರಾಹ್ಮಣರಿಗೆ ನಮಸ್ಕರಿಸಿ ಆಶೀರ್ವಾದಗಳನ್ನು ಪಡೆದರು. ಮನಸ್ಸಿಗೆ ಹಿತವೆನಿಸುವಂತೆ ಭೋಜನಮಾಡಿ, ತಮಗಾಗಿ ಸಿದ್ಧಪಡಿಸಿದ್ದ ಶಯ್ಯಾಗಾರಗಳನ್ನು ಪ್ರವೇಶಿಸಿದರು. ಅಲ್ಲಿ ಚೆಲುವೆಯರಾದ ಗಾಯಕಿಯರು ರಾಜಕುಮಾರರಿಗೆ ಆಹ್ಲಾದವನ್ನುಂಟುಮಾಡಲು ಸುಮಧುರವಾದ ಕಂಠಗಳಿಂದ ಹಾಡುತ್ತಿದ್ದರು. ಪುಣ್ಯಮಯವಾದ ಆ ರಾತ್ರಿಯು ರತಿವಿಲಾಸಪ್ರಿಯರಾದ ಪಾಂಡವರಿಗೆ ಸುಖಮಯವಾಗಿ ಕಳೆಯಿತು.

ಬ್ರಾಹ್ಮಮುಹೂರ್ತದಲ್ಲಿ ಹೊಗಳುಭಟರಿಂದ ಜಾಗ್ರತರಾದ ಪಾಂಡವರು ಮೇಲೆದ್ದು ಶೌಚ-ಸ್ನಾನಾದಿಗಳನ್ನೂ, ಸಂಧ್ಯಾದಿ ನಿತ್ಯಕರ್ಮ ಗಳನ್ನೂ ಮುಗಿಸಿಕೊಂಡು ಜೂಜುಗಾರರ ಸುಸ್ವಾಗತದೊಡನೆ ರಮಣೀಯ ವಾದ ಸಭಾಮಂದಿರವನ್ನು ಪ್ರವೇಶಿಸಿದರು."

ಀ೫೮ನೆಯ ಅಧ್ಯಾಯವು ಮುಗಿಯಿತು.

೫೯ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ.)

## ಜೂಜಿನ ವಿಷಯವಾಗಿ ಶಕುನಿ-ಯುಧಿಷ್ಠಿರರ ಸಂವಾದ

"ಜನಮೇಜಯ! ಐವರು ಪಾಂಡವರೂ ಭವ್ಯಸಭಾಮಂದಿರವನ್ನು ಪ್ರವೇಶಿಸಿ, ಅಲ್ಲಿ ಆಗಮಿಸಿದ್ದ ರಾಜರನ್ನು ಒಬ್ಬೊಬ್ಬರನ್ನಾಗಿ ಸಂದರ್ಶಿಸಿ, ಅವರೆಲ್ಲರನ್ನೂ ಅವರವರ ಮರ್ಯಾದೆಗಳಿಗೆ ಅನುಸಾರವಾಗಿ ಪುರಸ್ಕರಿಸಿದ ನಂತರ ಹೆಚ್ಚು ಬೆಲೆಬಾಳುವ ವಿಚಿತ್ರತರವಾಗಿದ್ದ ಸುಖಾಸನಗಳಲ್ಲಿ ಉಪವಿಷ್ಟರಾದರು. ಆಹೂತರಾಗಿದ್ದ ರಾಜರೆಲ್ಲರೂ ತಮ್ಮ-ತಮ್ಮ ಆಸನಗಳಲ್ಲಿ ಉಪವಿಷ್ಟರಾದನಂತರ ಶಕುನಿಯು ಯುಧಿಷ್ಠಿರನಿಗೆ ಹೇಳಿದನು :

"ಯುಧಿಷ್ಠಿರ! ನೀನು ನೋಡುತ್ತಿರುವಂತೆಯೇ ಈ ಭವ್ಯಸಭಾ

ಮಂದಿರವು ಪ್ರೇಕ್ಷಕರಿಂದ ತುಂಬಿಹೋಗಿದೆ. ಎಲ್ಲರೂ ನಿನಗಾಗಿ ಕಾದುಕುಳಿತಿದ್ದಾರೆ. ಇನ್ನು ಹೆಚ್ಚು ಕಾಲ ವಿಳಂಬಮಾಡುವುದು ಬೇಡ. ಪಗಡೆಯಾಟದ ರೀತಿ-ನಿಯಮಗಳನ್ನು ನಿರ್ಧರಿಸಿ ಈ ಕೂಡಲೇ ಆಟವನ್ನು ಆರಂಭಿಸಬಹುದಲ್ಲವೇ?"

ಧರ್ಮಜನು ಹೇಳಿದನು :

**ನಿಕೃತಿರ್ದೇವನಂ ಪಾಪಂ ನ ಕ್ಷಾತ್ರೋಽತ್ರ ಪರಾಕ್ರಮಃ ।**
**ನ ಚ ನೀತಿರ್ಧ್ರುವಾ ರಾಜನ್ಕಿಂ ತ್ವಂ ದ್ಯೂತಂ ಪ್ರಶಂಸಸಿ ॥೫॥**

**ನ ಹಿ ಮಾನಂ ಪ್ರಶಂಸನ್ತಿ ನಿಕೃತೌ ಕಿತವಸ್ಯ ಹಿ ।**
**ಶಕುನೇ ಮೈವ ನೋ ಜೈಷೀರಮಾರ್ಗೇಣ ನೃಶಂಸವತ್ ॥೬॥**

"ಶಕುನಿಯೇ! ಮೋಸದಿಂದ ಕೂಡಿರುವ ಪಗಡೆಯಾಟವು ಮಹಾಪಾಪಕರವಾದುದು. ಈ ಪಗಡೆಯಾಟದಲ್ಲಿ ಕ್ಷತ್ರಿಯನಿಗೆ ಅತಿಮುಖ್ಯವೆನಿಸಿದ ಸಾಮರ್ಥ್ಯಪ್ರದರ್ಶನಕ್ಕೆ ಅವಕಾಶವೇ ಇಲ್ಲ. ಸೌಬಲ! ಹೀಗಿದ್ದರೂ ನೀನೇಕೆ ಪಗಡೆಯಾಟವನ್ನು ಇಷ್ಟೊಂದು ಪ್ರಶಂಸಿಸುವೆ? ಜೂಜುಗಾರನು ಮೋಸದಿಂದಲೇ ಜಯಗಳಿಸುತ್ತಾನೆ. ಮೋಸಮಾಡುವುದರಿಂದ ಮಾತ್ರವೇ ಜೂಜುಗಾರನಿಗೆ ಮರ್ಯಾದೆಯು ಉಳಿಯುತ್ತದೆ. ಆದರೆ ಅಂತಹ ಮರ್ಯಾದೆಯನ್ನು ಸತ್ಪುರುಷರು ಪ್ರಶಂಸೆ ಮಾಡುವುದಿಲ್ಲ. ಆದುದರಿಂದ ನೀನು ಪರದ್ರೋಹಕಾರಿಯಂತೆ ನಮ್ಮನ್ನು ಕುತ್ಸಿತರೀತಿಯಲ್ಲಿ ಪಗಡೆಯಾಡಿ ಸೋಲಿಸಲು ಯತ್ನಿಸಬೇಡ."

"ಯುಧಿಷ್ಠಿರ! ಪಗಡೆಯಾಟವು ಸಂಖ್ಯಾಪ್ರಧಾನವಾದ ಆಟ. ಪಣವನ್ನು ಕಟ್ಟಿ ಆಡುವಾಗ ವಿಧಿಯ ವಿಲಾಸದಂತೆ ಸಂಖ್ಯೆಗಳು ಬೀಳುತ್ತಿರುತ್ತವೆ. ಜೂಜುಗಾರನು ದಾಳಗಳಿಂದ ತಾನೇತಾನಾಗಿ ಬೀಳುವ ಸಂಖ್ಯೆಗಳ ವಿಷಯದಲ್ಲಿ ಖಿನ್ನನಾಗಬಾರದು. ಇದರಲ್ಲಿ ಕಪಟವಾಗಲೀ, ಮೋಸವಾಗಲೀ ಇರುವುದಿಲ್ಲ. ಈ ರಹಸ್ಯವನ್ನು ತಿಳಿದಿರುವ ಮಹಾನುಭಾವನು ದ್ಯೂತದಿಂದುಂಟಾಗುವ ಜಯಾಪಜಯಗಳನ್ನು ಸಹಿಸಿಕೊಳ್ಳಲು ಸಮರ್ಥನಾಗುತ್ತಾನೆ.

ಪಗಡೆಯಾಟದಲ್ಲಿ ಪಣವನ್ನಿಡುವುದು ದೋಷವೆಂದು

ಭಾವಿಸುವೆಯಾ? ಒಮ್ಮೆ ಒಬ್ಬರು ಪಣವನ್ನು ಗೆಲ್ಲಲೂಬಹುದು.; ಪುನಃ ಸೋಲಲೂಬಹುದು. ಇದರಲ್ಲಾವ ದೋಷವೂ ಕಂಡುಬರುವುದಿಲ್ಲ. ಆದುದರಿಂದ ನಿನಗುಂಟಾಗಿರುವ ಸಂಶಯಗಳೆಲ್ಲವನ್ನೂ ದೂರೀಕರಿಸಿ ಪಗಡೆಯಾಟಕ್ಕೆ ಸಿದ್ಧನಾಗು. ಪ್ರತ್ಯಕ್ಷಪಣವನ್ನಾಗಲೀ–ಪರೋಕ್ಷಪಣವನ್ನಾಗಲೀ ಘೋಷಿಸು. ವೃಥಾ ಕಾಲಯಾಪನೆಯನ್ನು ಮಾಡಬೇಡ."

"ಶಕುನಿಯೇ! ಅಸಿತರ ಮಕ್ಕಳಾದ, ಮಹರ್ಷಿಗಳಾದ ದೇವಲರು– ಸ್ವರ್ಗಪ್ರಾಪ್ತಿಗೆ ಅನುಸರಿಸಬೇಕಾದ ಕರ್ಮಗಳಾವುವು? ನರಕಪ್ರಾಪ್ತಿಯು ಯಾವ ದುಷ್ಕರ್ಮಗಳಿಂದ ಉಂಟಾಗುತ್ತದೆ? ಯಾವ ಯಾವ ಕರ್ಮಗಳನ್ನು ಮಾಡಿದರೆ ಇನ್ನೂ ಅನೇಕಲೋಕಗಳನ್ನು ಪಡೆಯಬಹುದು? – ಇವುಗಳ ವಿಷಯವಾಗಿ ಲೋಕದ್ವಾರಗಳಲ್ಲಿ ಸಂಚರಿಸುತ್ತಾ, ಸಲಹೆನೀಡುತ್ತಿರುತ್ತಾರೆ. ಅವರು ದ್ಯೂತದ ವಿಷಯವಾಗಿ ಹೇಳಿರುವುದೇನೆಂದರೆ :

**ಇದಂ ವೈ ದೇವನಂ ಪಾಪಂ ನಿಕೃತ್ಯಾ ಕಿತವೈಃ ಸಹ ।**
**ಧರ್ಮೇಣ ತು ಜಯೋ ಯುದ್ಧೇ ತತ್ಪರಂ ನ ತು ದೇವನಮ್ ॥**

'ವಂಚಕರಾದ ಜೂಜುಗಾರರೊಡನೆ ಪಣವನ್ನಿಟ್ಟು ದ್ಯೂತವಾಡುವುದು ಮಹಾಪಾಪ. ಧರ್ಮಯುದ್ಧವನ್ನು ಮಾಡಿ ಜಯಗಳಿಸುವುದು ಉತ್ತಮ ಮಾರ್ಗ' – ಎಂದು ಸ್ಪಷ್ಟವಾಗಿ ಹೇಳಿರುತ್ತಾರೆ.

**ನಾರ್ಯಾ ಮ್ಲೇಚ್ಛನ್ತಿ ಭಾಷಾಭಿರ್ಮಾಯಯಾ ನ ಚರನ್ತ್ಯುತ ।**
**ಅಜಿಹ್ಮಮಶಠಂ ಯುದ್ಧಮೇತತ್ಸತ್ಪುರುಷವ್ರತಮ್ ॥೧೧॥**

ಸತ್ಪುರುಷರು ಮ್ಲೇಚ್ಛಭಾಷೆಯನ್ನು ಎಂದರೆ ಅನುಚಿತವಾದ ಶಬ್ದಗಳನ್ನು ಆಡುವುದಿಲ್ಲ. ಕೌಟಿಲ್ಯದಿಂದಲೂ ವರ್ತಿಸುವುದಿಲ್ಲ. ಮೋಸವಿಲ್ಲದ ಅಧರ್ಮರಹಿತವಾದ ಯುದ್ಧವನ್ನು ಆರ್ಯರು ಪ್ರಶಂಸಿಸುತ್ತಾರೆ. ನೀನು ಪಣವನ್ನಿಡಬೇಕೆಂದು ಹೇಳುತ್ತಿರುವೆ. ಈ ಐಶ್ವರ್ಯವನ್ನು ಬ್ರಾಹ್ಮಣರ ಉಪಯೋಗಕ್ಕೆ ಬಳಸುವುದು ಹೇಗೆಂಬುದನ್ನು ಕಲಿಯೋಣ. ಆದರೆ ನೀನು ನಮ್ಮನ್ನು ವಿವೇಚನಾರಹಿತರನ್ನಾಗಿ ಮಾಡಿ ಪಣವನ್ನಿಡಿಸಿ ಗೆದ್ದುಕೊಳ್ಳಲು ಯತ್ನಿಸಬೇಡ. ಶತ್ರುಗಳನ್ನೂ ದ್ಯೂತವಾಡಲು ಕರೆದು, ವಂಚನೆಯಿಂದ ಆಟವಾಡಿ, ಅವರನ್ನು ಸೋಲಿಸಿ, ಅವರ ಐಶ್ವರ್ಯವನ್ನು ಅಪಹರಿಸಬಾರದು.

ಐಶ್ವರ್ಯವನ್ನಾಗಲೀ, ಸೌಖ್ಯವನ್ನಾಗಲೀ–ವಂಚನೆಯಿಂದ ಪಡೆಯುವುದನ್ನು ನಾನು ಇಚ್ಛಿಸುವುದಿಲ್ಲ. ಜೂಜುಗಾರನು ವಂಚನೆಯ ಆಟವಾಡದಿದ್ದರೂ ಅವನ ಗುಣಗಳು ಪ್ರಶಂಸನೀಯವಲ್ಲ."

**ಕ್ಷತ್ರಿಯಃ ಕ್ಷತ್ರಿಯಾನೇತಿ ನಿಕೃತ್ಯೈವ ಯುಧಿಷ್ಠಿರ ।**
**ವಿದ್ವಾನವಿದುಷೋಽಭ್ಯೇತಿ ನಾಹುಸ್ತಾಂ ನಿಕೃತಿಂ ಜನಾಃ ॥೧೪॥**

**ಅಕ್ಷೈರ್ಹಿ ಶಿಕ್ಷಿತೋಽಭ್ಯೇತಿ ನಿಕೃತ್ಯೈವ ಯುಧಿಷ್ಠಿರ ।**
**ವಿದ್ವಾನವಿದುಷೋಽಭ್ಯೇತಿ ನಾಹುಸ್ತಾಂ ನಿಕೃತಿಂ ಜನಾಃ ॥೧೫॥**

**ಅಕೃತಾಸ್ತ್ರಂ ಕೃತಾಸ್ತ್ರಶ್ಚ ದುರ್ಬಲಂ ಬಲವತ್ತರಃ ।**
**ಏವಂ ಕರ್ಮಸು ಸರ್ವೇಷು ನಿಕೃತ್ಯೈವ ಯುಧಿಷ್ಠಿರ ।**
**ವಿದ್ವಾನವಿದುಷೋಽಭ್ಯೇತಿ ನಾಹುಸ್ತಾಂ ನಿಕೃತಿಂ ಜನಾಃ ॥೧೬॥**

"ಯುಧಿಷ್ಠಿರ! ಯುದ್ಧವಾಗಲೀ, ಜೂಜಾಟವಾಗಲೀ–ಒಬ್ಬನು ಮತ್ತೊಬ್ಬನನ್ನು ಸೋಲಿಸಬೇಕೆಂಬ ಉದ್ದೇಶದಿಂದಲೇ ಕೂಡಿರುತ್ತಾರೆಂಬುದು ನನ್ನ ಅಭಿಪ್ರಾಯವಾಗಿದೆ. ಬಲಿಷ್ಠನಾದ ಕ್ಷತ್ರಿಯನು ದುರ್ಬಲನನ್ನು ಯುದ್ಧದಲ್ಲಿ ಗೆಲ್ಲಲು ಆಶಿಸುತ್ತಾನೆ. ಪಂಡಿತನಾದವನು ಅಪಂಡಿತನನ್ನು ವಾದದಲ್ಲಿ ಗೆಲ್ಲಲು ಆಶಿಸುತ್ತಾನೆ. ನಿನ್ನ ಅಭಿಪ್ರಾಯದಂತೆ ಈ ಎರಡೂ ದುರುದ್ದೇಶಪೂರಿತವೆಂಬುದನ್ನು ಯಾರೂ ಪರಿಗಣಿಸುವುದಿಲ್ಲ. ಅವುಗಳಂತೆಯೇ ಪಗಡೆಯಾಟದಲ್ಲಿ ನಿಷ್ಣಾತನಾದವನು ಆಟದ ರಹಸ್ಯವನ್ನು ತಿಳಿಯದವನನ್ನು ಆಟಕ್ಕೆ ಕರೆಯುವುದು ಸ್ವಾಭಾವಿಕವಾಗಿಯೇ ಇದೆ. ಇದರಲ್ಲಾವ ದೋಷವನ್ನೂ ನಾನು ಕಾಣೆನು. ಜ್ಞಾನಿಯಾದವನು ಅಜ್ಞಾನಿಯನ್ನೇ ಸ್ಪರ್ಧೆಗೆ ಆರಿಸಿಕೊಳ್ಳುತ್ತಾನೆ. ಇದರಲ್ಲಿ ವಿಜಯವೇ ಅವನ ಗುರಿಯಾಗಿರುತ್ತದೆ. ಶಸ್ತ್ರಯುದ್ಧನೈಪುಣ್ಯವುಳ್ಳವನು ನೈಪುಣ್ಯವಿಲ್ಲದವನ ಮೇಲೆ ಬೀಳುತ್ತಾನೆ. ಬಲಿಷ್ಠನು ಬಲಹೀನನ ಮೇಲೆ ಕೈಮಾಡುತ್ತಾನೆ. ಪ್ರತಿಯೊಂದು ಸ್ಪರ್ಧೆಯ ರಹಸ್ಯವೇ ಇದಾಗಿರುವುದು. ಸ್ಪರ್ಧೆಗೆ ಕರೆಯುವವನು ವಿಜಯವನ್ನೇ ತನ್ನ ಮುಖ್ಯಧ್ಯೇಯವನ್ನಾಗಿಟ್ಟುಕೊಂಡಿರುತ್ತಾನೆ. ಆದುದರಿಂದ ನಾನಾದರೂ ನಿನ್ನನ್ನು ಜೂಜಾಟಕ್ಕೆ ಆಹ್ವಾನಿಸುವುದರಲ್ಲಿ ಯಾವ ದೋಷವೂ ಕಂಡುಬರುವುದಿಲ್ಲ. ಹೀಗಿದ್ದರೂ ನೀನು ನನ್ನನ್ನು ದುರುದ್ದೇಶದಿಂದ

ಕೂಡಿರುವವನೆಂದು ಭಾವಿಸುವೆಯಾದರೆ ಅಥವಾ ನನ್ನೊಡನೆ ಆಟವಾಡಲು ಭೀತನಾಗಿರುವುದಾದರೆ ಆಟವನ್ನೇ ನಿಲ್ಲಿಸಬಹುದಾಗಿದೆ."

**ಆಹೂತೋ ನ ನಿವರ್ತೇಯಮಿತಿ ಮೇ ವ್ರತಮಾಹಿತಮ್ ।**
**ವಿಧಿಶ್ಚ ಬಲವಾನ್ರಾಜನ್ದಿಷ್ಟಸ್ಯಾಸ್ಮಿ ವಶೇ ಸ್ಥಿತಃ ॥೧೮॥**

"ದ್ಯೂತಕ್ಕೆ ಆಹ್ವಾನಿತನಾದರೆ ನಾನು ಯಾವ ಕಾರಣದಿಂದಲೂ ನಿವೃತ್ತನಾಗುವುದಿಲ್ಲ. ಇದೇ ನನ್ನ ಪ್ರತಿಜ್ಞೆಯಾಗಿರುತ್ತದೆ. ನಿಜ! ವಿಧಿಯು ಬಲವತ್ತರವಾದುದು. ನಾನು ವಿಧಿಗೆ ವಶವಾಗಿರುತ್ತೇನೆ. ಆಗಲಿ, ಈ ಸಭಾಮಂದಿರದಲ್ಲಿ ನಾನು ಯಾರೊಡನೆ ಆಟವಾಡಬೇಕು? ನನಗೆ ಸಮನಾಗಿ ಪಣವಿಡುವವರು ಯಾರಿದ್ದಾರೆ? – ಕೂಡಲೇ ಸಿದ್ಧರಾಗಲಿ. ಆಟವು ಪ್ರಾರಂಭವಾಗಲಿ."

ಯುಧಿಷ್ಠಿರನ ಮಾತುಗಳನ್ನು ಕೇಳಿದೊಡನೆಯೇ ಸಂತುಷ್ಟನಾದ ದುರ್ಯೋಧನನು ಹೇಳಿದನು :

"ಯುಧಿಷ್ಠಿರ! ನಾನು ಪಣವನ್ನಾಗಿಡಲು ವಜ್ರ-ವೈಡೂರ್ಯಗಳನ್ನೂ ರತ್ನಾಭರಣಗಳನ್ನೂ ಒದಗಿಸುತ್ತೇನೆ. ನನ್ನ ಪರವಾಗಿ ಮಾವನಾದ ಶಕುನಿಯು ನಿನ್ನೊಡನೆ ಆಡುತ್ತಾನೆ."

**ಅನ್ಯೇನಾನ್ಯಸ್ಯ ವೈ ದ್ಯೂತಂ ವಿಷಮಂ ಪ್ರತಿಭಾತಿ ಮೇ ।**
**ಏತದ್ವಿದ್ವನ್ನುಪಾಧತ್ಸ್ವ ಕಾಮಮೇವಂ ಪ್ರವರ್ತತಾಮ್ ॥೨೧॥**

"ದುರ್ಯೋಧನ! ಒಬ್ಬನಿಗೆ ಬದಲಾಗಿ ಮತ್ತೊಬ್ಬನು ಆಟವಾಡುವುದು ಅನೂಚಾನವಾಗಿ ಬಂದ ಆಟದ ನಿಯಮಗಳಿಗೆ ಅತಿವಿರುದ್ಧವಾಗಿರುತ್ತದೆ. ಇದನ್ನು ನೀನೂ ಒಪ್ಪಲೇಬೇಕು. ಒಂದು ವೇಳೆ ನೀನು ಹೀಗೆಯೇ ನಡೆಯಬೇಕೆಂದು ಪ್ರತಿಪಾದಿಸುವೆಯಾದರೆ ನಿನ್ನ ಇಚ್ಛೆಯಂತೆಯೇ ಆಟವು ಪ್ರಾರಂಭವಾಗಲಿ."

ಕ೯ನೆಯ ಅಧ್ಯಾಯವು ಮುಗಿಯಿತು.

೬೦ನೆಯ ಅಧ್ಯಾಯ ದ್ಯೂತಪರ್ವ (ಮುಂದುವರಿದಿದೆ)

## ದ್ಯೂತಕ್ರೀಡೆಯ ಆರಂಭ

"ಜನಮೇಜಯ! ದ್ಯೂತವನ್ನು ನೋಡುವ ಸಲುವಾಗಿ ಧೃತರಾಷ್ಟ್ರ

ಸಮೇತರಾದ ಸಕಲರಾಜರೂ ಸಭಾಮಂದಿರವನ್ನು ಪ್ರವೇಶಿಸಿ ದಿವ್ಯಾಸನಗಳಲ್ಲಿ ಮಂಡಿಸಿದರು. ಭೀಷ್ಮ-ದ್ರೋಣ-ಕೃಪ-ವಿದುರರೂ ಕೂಡ ಖಿನ್ನಮನಸ್ಕರಾಗಿಯೇ ಧೃತರಾಷ್ಟ್ರರಾಜನ ಹಿಂಬದಿಯಲ್ಲಿ ಕುಳಿತರು. ಕನಕಾಂಗದ-ಕೇಯೂರಾದಿಗಳಿಂದ ಅಲಂಕೃತವಾಗಿದ್ದ ರಾಜರ ಸಮೂಹದಿಂದ ಬೆಳಗುತ್ತಿದ್ದ ಆ ಭವ್ಯಸಭಾಮಂದಿರವು ಸ್ವರ್ಗದ ದೇವಸಭೆಯನ್ನು ಅನುಕರಿಸುತ್ತಿದ್ದಿತು. ರಾಜರೆಲ್ಲರೂ ವೇದ-ವೇದಾಂಗ ಗಳನ್ನು ತಿಳಿದವರಾಗಿಯೂ–ಧೀರರಾಗಿಯೂ ಇದ್ದು ಅಮಿತವಾದ



ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದರು. ಅವರೆಲ್ಲರೂ ಯಥಾಯೋಗ್ಯವಾದ ಆಸನಗಳಲ್ಲಿ ಕುಳಿತನಂತರ ದ್ಯೂತವು ಪ್ರಾರಂಭವಾಯಿತು. ಆಟವು ಆರಂಭವಾಗುವ ಮೊದಲು ಪಣವನ್ನಿಡಬೇಕಲ್ಲವೇ? ಯುಧಿಷ್ಠಿರನು ತನ್ನ ಕತ್ತಿನಲ್ಲಿದ್ದ ಅಮೂಲ್ಯವಾದ ರತ್ನದ ಹಾರವನ್ನು ತೆಗೆದು ಹೇಳಿದನು :

“ದುರ್ಯೋಧನ! ಈ ರತ್ನಹಾರವು ಅಮೋಘವಾದ ವಜ್ರ-ವೈಡೂರ್ಯಾದಿಗಳಿಂದ ನಿರ್ಮಿತವಾಗಿದೆ. ಈ ಹಾರವು ಸಮುದ್ರಮಥನಕಾಲದಲ್ಲಿ ಪ್ರಾಪ್ತವಾದುದು. ಇದು ಅಪರಿಮಿತಮೌಲ್ಯದ ರತ್ನಹಾರ. ಈ ಹಾರವು ಬಹಳ ಸುಂದರವಾಗಿರುವುದು. ಇದನ್ನೇ ನಾನು ಈ ಆಟಕ್ಕೆ ಪಣವನ್ನಾಗಿಡುತ್ತೇನೆ. ಇದಕ್ಕೆ ಸಮವಾದ ಬೆಲೆಯ ಪಣವನ್ನು ನೀನೂ ಇಡುವವನಾಗು.”

“ಯುಧಿಷ್ಠಿರ! ನನ್ನಲ್ಲಿಯೂ ಅನೇಕವಾದ ರತ್ನಾಭರಣಗಳಿವೆ. ಅತುಲವಾದ ಐಶ್ವರ್ಯವಿದೆ. ಇವುಗಳ ವಿಷಯದಲ್ಲಿ ನನಗೆ ಹೆಚ್ಚಿನ ಆಸೆಯಿಲ್ಲ. ಇವೆಲ್ಲವನ್ನೂ ನಾನು ಪಣವನ್ನಾಗಿಡುತ್ತೇನೆ. ಆಟದಲ್ಲಿ ಎಲ್ಲವನ್ನೂ ಗೆದ್ದು ನಿನ್ನದನ್ನಾಗಿ ಮಾಡಿಕೋ.”

ಆಟವು ಪ್ರಾರಂಭವಾಯಿತು. ಶಕುನಿಯು ದುರ್ಯೋಧನನಿಗಾಗಿ ಆಟವಾಡುತ್ತಿದ್ದನು. ಶಕುನಿಯು ಇಚ್ಛೆಸಿದ ರೀತಿಯಲ್ಲಿ ದಾಳಗಳಲ್ಲಿನ ಸಂಖ್ಯೆಗಳು ಬೀಳುತ್ತಿದ್ದುವು. ಅದೇ ಶಕುನಿಯ ಚಾತುರ್ಯ. ದಾಳಗಳನ್ನು ಅವನು ಸ್ವಾಧೀನಮಾಡಿಕೊಂಡಿದ್ದನು. ಸೇವಕರು ಯಜಮಾನನ ಆಜ್ಞಾಧಾರಕರಾಗಿರುವಂತೆ – ಪಗಡೆಯಾಟದ ದಾಳಗಳು ಶಕುನಿಯ ಆಜ್ಞಾಧಾರಕವಾಗಿದ್ದುವು. ಹೀಗೆಂದಮೇಲೆ ಋಜುಮಾರ್ಗಿಯಾದ ಯುಧಿಷ್ಠಿರನಿಗೆ ಗೆಲುವುಂಟೇ? ಕೆಲವೇ ನಿಮಿಷಗಳೊಳಗಾಗಿ ಯುಧಿಷ್ಠಿರನು ಪರಾಜಿತನಾದನು.

ಶಕುನಿಯು ‘ಜಿತಂ–ಗೆದ್ದುಬಿಟ್ಟೆನು’–ಎಂದು ಗಟ್ಟಿಯಾಗಿ ಕೂಗಿದನು.”

೬೦ನೆಯ ಅಧ್ಯಾಯವು ಮುಗಿಯಿತು.

**ಮೂರನೆಯ ಸಂಪುಟವು ಮುಗಿಯಿತು.**

ಓಂ ತತ್ಸತ್ ಶ್ರೀಕೃಷ್ಣಾರ್ಪಣಮಸ್ತು
ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು

# ಪರಿಶಿಷ್ಟ

## ಸಭಾಪರ್ವದಲ್ಲಿ ಶ್ರೀಕೃಷ್ಣಲೀಲಾಪ್ರಸಂಗ

ಸಭಾಪರ್ವದ ೪೧ನೆಯ ಅಧ್ಯಾಯದಲ್ಲಿ ಶಿಶುಪಾಲನು ಶ್ರೀಕೃಷ್ಣನನ್ನು ಹಳಿಯುವ ಕೆಲವು ಶ್ಲೋಕಗಳಿವೆ. **'ಪೂತನಾಘಾತಪೂರ್ವಾಣಿ' 'ಯದ್ಯನೇನ ಹತೋ ಬಾಲ್ಯೇ'** ಇತ್ಯಾದಿ.

ಶ್ರೀಕೃಷ್ಣನು ಬಾಲ್ಯದಲ್ಲಿಯೇ ತೋರಿದ ಅನೇಕ ಸಾಹಸಪ್ರಕರಣಗಳನ್ನು ಭೀಷ್ಮನು ಉಲ್ಲೇಖಿಸಿ ಹೊಗಳಿದನೆಂಬ ಕಾರಣದಿಂದ– **'ಪೂತನಾಘಾತಪೂರ್ವಾಣಿ'**–ಮುಂತಾದ ಶ್ಲೋಕಗಳಿಂದ ಅವುಗಳೆಲ್ಲವನ್ನೂ ಶಿಶುಪಾಲನು ಖಂಡಿಸುತ್ತಾನೆ. ಇದರ ಪೂರ್ಣಪಾಠವು ೪೧ನೆಯ ಅಧ್ಯಾಯದಲ್ಲಿದೆ. ಆದರೆ ಭೀಷ್ಮನು ಶ್ರೀಕೃಷ್ಣನ ಬಾಲಲೀಲೆಗಳ ವಿಷಯವಾಗಿ ಮಾಡಿರುವ ಉಲ್ಲೇಖನವು ಮಹಾಭಾರತದ ಅನೇಕ ಪ್ರತಿಗಳಲ್ಲಿರುವುದಿಲ್ಲ. ಭೀಷ್ಮನು ಶ್ರೀಕೃಷ್ಣನ ಲೀಲಾಪ್ರಸಂಗಗಳನ್ನು ಉಲ್ಲೇಖಿಸದಿದ್ದರೂ ಶಿಶುಪಾಲನು–'ನೀನೇ ಹೇಳಿರುವೆಯೆಂದು' – ಹೇಳಿ ಭೀಷ್ಮನನ್ನು ಖಂಡಿಸಿದ್ದೇಕೆಂಬ ಪ್ರಶ್ನೆಯು ಉದ್ಭವಿಸುತ್ತದೆ.

**ಪೂತನಾಘಾತಪೂರ್ವಾಣಿ ಕರ್ಮಾಣ್ಯಸ್ಯ ವಿಶೇಷತಃ ।**
**ತ್ವಯಾ ಕೀರ್ತಯತಾಸ್ಮಾಕಂ ಭೂಯಃ ಪ್ರವ್ಯಥಿತಂ ಮನಃ ॥೪॥**

"ಭೀಷ್ಮ! 'ಪೂತನೆಯ ಪ್ರಾಣಹಾರಕ, ಶಕಟಾಸುರಭಂಜಕ' ಮುಂತಾದ ಅನೇಕಾನೇಕ ಗುಣವಾಚಕಗಳನ್ನು ಈ ಗೋಪಾಲನಲ್ಲಿ ಸಮಾರೋಪಿಸಿ ನಮ್ಮ ಮನಸ್ಸನ್ನು ಪುನಃ ನೀನು ನೋಯಿಸಿರುವೆ. ನಿನ್ನ ಪುನರಾವರ್ತಿತವಾದ ಮಾಧವನ ಕೀರ್ತನೆಯಿಂದಾಗಿ ನಮ್ಮ ಹೃದಯಗಳು ಬಹಳ ವ್ಯಾಕುಲಗೊಂಡಿವೆ."

ಈ ಶ್ಲೋಕದಿಂದ, ಭೀಷ್ಮನು ಈ ವಿಷಯವನ್ನು ಹೇಳಿರಲೇಬೇಕೆಂದು ಊಹಿಸಬಹುದಾಗಿದೆ. ದಾಕ್ಷಿಣಾತ್ಯಪಾಠದ ಒಂದೇ ಒಂದು ಪ್ರತಿಯಲ್ಲಿ ಮಾತ್ರ ಪೂತನಾಘಾತದ ವಿಷಯದ ಉಲ್ಲೇಖವಿದೆ. ಆದರೆ ಆ ಪಾಠವು

ಇಷ್ಟು ಮಾತ್ರಕ್ಕೇ ಸೀಮಿತವಾಗಿರುವುದಿಲ್ಲ. ನಾವು ೩೮ನೆಯ ಅಧ್ಯಾಯವನ್ನು ೩೩ ಶ್ಲೋಕಗಳಲ್ಲೇ ಮುಗಿಸಿದ್ದೇವೆ. ದಾಕ್ಷಿಣಾತ್ಯಪಾಠದ ಪ್ರಕಾರ ೩೮ನೆಯ ಅಧ್ಯಾಯವು ಅಲ್ಲಿಗೇ ಮುಗಿಯುವುದಿಲ್ಲ. 'ತತೋ ಭೀಷ್ಮಸ್ಯ ತಚ್ಛ್ರುತ್ವಾ' – ಎಂದು ವೈಶಂಪಾಯನರ ಮಾತಿನಿಂದ ಮುಂದುವರಿಯುತ್ತದೆ. "ಪಿತಾಮಹ! ಭಗವಂತನಾದ ಈ ನನ್ನ ಪ್ರಭುವಿನ ಕಾರ್ಯಗಳೆಲ್ಲವನ್ನೂ ಮೊದಲಿನಿಂದಲೂ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ. ನನ್ನ ಪ್ರಭುವು ಅನುಕ್ರಮವಾಗಿ ಮಾಡಿದ ಮಹಾಕಾರ್ಯಗಳು, ಅವತಾರವಿಶೇಷಗಳು – ಈ ಎಲ್ಲವನ್ನೂ ನನಗೆ ವಿಸ್ತಾರವಾಗಿಯೇ ಹೇಳು" – ಎಂಬ ಯುಧಿಷ್ಠಿರನ ಪ್ರಾರ್ಥನೆಯಂತೆ ಭೀಷ್ಮನು ೭೨೮ ಶ್ಲೋಕಗಳಲ್ಲಿ ಪರಮಾತ್ಮನ ದಶಾವತಾರಗಳು ಮತ್ತು ಶ್ರೀಕೃಷ್ಣನ ಅದುವರೆಗಿನ ಸಾಹಸಕಾರ್ಯಗಳು – ಈ ಎಲ್ಲವನ್ನೂ ಅನುಕ್ರಮವಾಗಿ ಹೇಳುತ್ತಾನೆ. ಆ ಎಲ್ಲ ಶ್ಲೋಕಗಳೂ ಅನುಷ್ಟುಪ್ ಛಂದಸ್ಸಿನಲ್ಲಿಯೇ ಇದ್ದರೂ ಕಥಾಸಂವಿಧಾನದಲ್ಲಿ ವ್ಯತ್ಯಾಸವು ಸ್ವಾಭಾವಿಕವಾಗಿಯೇ ಕಂಡುಬರುತ್ತದೆ. ಆದರೂ ಅಲ್ಲಿ ಶಿಶುಪಾಲನು ಖಂಡಿಸಿದ ಶ್ರೀಕೃಷ್ಣಲೀಲಾಪ್ರಸಂಗದ ಸಂದರ್ಭವನ್ನು ಮಾತ್ರ ಉದ್ಧರಿಸಲಾಗಿದೆ. ಭೀಷ್ಮನು ಪರಮಾತ್ಮನ ದಶಾವತಾರಗಳನ್ನು ಸಂಕ್ಷೇಪವಾಗಿ ಹೇಳಿದನಂತರ ಯುಧಿಷ್ಠಿರನು ಭೀಷ್ಮನನ್ನು ಕುರಿತು ಪುನಃ ಹೇಳುತ್ತಾನೆ :

"ಮನುಷ್ಯೇಂದ್ರನೇ! ಯಶೋವಂತನಾದ ಮಹಾವಿಷ್ಣುವು ವೃಷ್ಣಿವಂಶದಲ್ಲಿ ಅವತಾರಮಾಡಿದ ಕಥೆಯನ್ನು ಕೇಳಲಿಚ್ಛಿಸಿದ್ದೇನೆ. ಯಾವ ರೀತಿಯಲ್ಲಿ ಭಗವಂತನಾದ ಮಹಾಬುದ್ಧಿವಂತನಾದ ಜನಾರ್ದನನು ಮಧು ವಂಶದಲ್ಲಿ ಜನ್ಮತಾಳಿದನೆಂಬ ವಿಷಯವನ್ನು ಹೇಳು. ಪಿತಾಮಹ! ಯಾವ ಯಾವ ರೀತಿಯಲ್ಲಿ ಮಹಾತೇಜಸ್ವಿಯಾದ, ಮಹಾತ್ಮನಾದ, ವೃಷಭೇಕ್ಷಣನಾದ (ಎತ್ತಿನ ಕಣ್ಣಿನಂತೆ ವಿಶಾಲನೇತ್ರನಾದ) ಶ್ರೀಕೃಷ್ಣನು ಕಂಸನ ಉಪಟಳದಿಂದ ಗೋವುಗಳನ್ನೂ ಮತ್ತು ಲೋಕಗಳನ್ನೂ ಸಂರಕ್ಷಿಸಿದನು? ಅವನಿನ್ನೂ ಚಿಕ್ಕ ಬಾಲಕನಾಗಿದ್ದಾಗಲೇ ಯಾವ ಯಾವ ಕ್ರೀಡೆಗಳನ್ನಾಡಿದನು? ಮತಿಮಂತರಲ್ಲಿ ಶ್ರೇಷ್ಠನಾದ ಪಿತಾಮಹನೇ! ಈ ಎಲ್ಲ ವಿಷಯಗಳನ್ನೂ ನನಗೆ ವಿವರಿಸಿ ಹೇಳು."

ಜನಮೇಜಯ! ಯುಧಿಷ್ಠಿರನಿಂದ ಹೀಗೆಂದು ಕೇಳಲ್ಪಟ್ಟ ಭೀಷ್ಮನು,

ಮಹಾಮಹಿಮನಾದ, ಮಧುವಂಶದಲ್ಲಿ ಮಹಾತ್ಮನಾದ ಶ್ರೀಕೇಶವನು ಜನ್ಮತಾಳಿದ ವೃತ್ತಾಂತವನ್ನು ಹೇಳತೊಡಗಿದನು :

"ಯುಧಿಷ್ಠಿರ! ಬಹಳ ಸಂತೋಷದಿಂದಲೇ ನಾನು ವೃಷ್ಣಿವಂಶದಲ್ಲಿ ಅವತರಿಸಿದ ಶ್ರೀಮನ್ನಾರಾಯಣನ ಜನ್ಮಕಥೆಯನ್ನು ಹೇಳುತ್ತೇನೆ. ಭರತ ಕುಲಭೂಷಣನಾದ ಅಜಾತಶತ್ರುವೇ! ಪ್ರಪಂಚದ ಸಂರಕ್ಷಕನಾದ ಭಗವಂತನು ಭೂಮಿಯಲ್ಲಿ ಹೇಗೆ ಹುಟ್ಟಿದನು? – ಎಂಬ ವಿಷಯವನ್ನು ಹೇಳುತ್ತೇನೆ. ಅನನ್ಯಚಿತ್ತನಾಗಿ ಕೇಳು. ಜನಾರ್ದನನು ಭೂಮಿಯಲ್ಲಿ ಅವತರಿಸುತ್ತಿರುವಾಗ ಸಮುದ್ರಗಳು ಆನಂದಾತಿಶಯದಿಂದ ಉಕ್ಕಿಬಂದುವು. ಪರ್ವತಗಳು ಚಲಿಸತೊಡಗಿದುವು. ಅಗ್ನಿಗಳು ಹೊಗೆಯಿಲ್ಲದೇ ಪ್ರಜ್ವಲಿಸತೊಡಗಿದುವು. ಜನಾರ್ದನನು ಭೂಮಿಯಲ್ಲಿ ಅವತರಿಸುತ್ತಿರಲಾಗಿ ವಾತಾವರಣವು ಪ್ರಶಾಂತವಾಯಿತು. ಧೂಳು ಉಡುಗಿತು. ನಕ್ಷತ್ರಗಳು ಜಾಜ್ವಲ್ಯಮಾನವಾಗಿ ಪ್ರಕಾಶಿಸಿದುವು. ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು. ದೇವತೆಗಳು ಆಕಾಶದಲ್ಲಿ ನಿಂತು ಪುಷ್ಪವೃಷ್ಟಿಯನ್ನು ಸುರಿಸಿದರು. ಗಂಧರ್ವರು ಮಂಗಳಯುಕ್ತವಾದ ಗೀತೆಗಳಿಂದ ಮಧುಸೂದನನನ್ನು ಸ್ತೋತ್ರಮಾಡಿದರು. ಮಹರ್ಷಿಗಳು ಸುಪ್ರೀತರಾಗಿ ಶ್ರೀಕೃಷ್ಣನ ಜನ್ಮಸ್ಥಾನಕ್ಕೆ ಆಗಮಿಸಿದರು. ನಾರದಪ್ರಮುಖರಾದ ಋಷಿ-ಮಹರ್ಷಿಗಳು ಆಗಮಿಸಿದುದನ್ನು ಕಂಡು ಗಂಧರ್ವಾಪ್ಸರೆಯರು ನೃತ್ಯಮಾಡುತ್ತಾ, ಗೀತೆಗಳನ್ನು ಹಾಡುತ್ತಾ ಜನಾರ್ದನನ ಬಳಿಗೆ ಬಂದರು. ಆ ಸಮಯದಲ್ಲಿ ಸಹಸ್ರಾಕ್ಷನಾದ ಶಚೀಪತಿಯೂ ಅಲ್ಲಿಗೆ ಆಗಮಿಸಿ ತನಗಿಂತಲೂ ಮುಂದಾಗಿ ಆಗಮಿಸಿದ್ದ ಋಷಿ-ಮಹರ್ಷಿಗಳನ್ನು ಯಥೋಚಿತವಾಗಿ ಗೌರವಿಸಿ ಜನಾರ್ದನನನ್ನು ಕುರಿತು ಹೇಳಿದನು :

"ದೇವ! ಜಗತ್ಸೃಷ್ಟಿಕಾರಕನೇ! ಲೋಕದ ಹಿತಾರ್ಥವಾಗಿ ಮಾಡಬೇಕಾಗಿರುವ ದೇವಕಾರ್ಯಗಳನ್ನು ಮಾಡಿ ಮುಗಿಸಿ ನಿನ್ನ ಪೂರ್ಣತೇಜಸ್ಸಿನೊಡನೆ ಪುನಃ ವೈಕುಂಠಕ್ಕೆ ಆಗಮಿಸು."

ಯುಧಿಷ್ಠಿರ! ಈ ಪ್ರಕಾರ ಜನಾರ್ದನನನ್ನು ಪ್ರಾರ್ಥಿಸಿದ ಇಂದ್ರನು ಋಷಿ-ಮಹರ್ಷಿಗಳೊಡನೆಯೂ, ಗಂಧರ್ವಾಪ್ಸರೆಯರೊಡನೆಯೂ ಹೊರಟುಹೋದನು.

ಸೂರ್ಯಸದೃಶನಾಗಿ ಹುಟ್ಟಿದ ಬಾಲಕನನ್ನು ಎತ್ತಿಕೊಂಡು ಕಂಸನ ಭಯದ ಕಾರಣದಿಂದ ವಸುದೇವನು ನಂದಗೋಕುಲದಲ್ಲಿ ಬಚ್ಚಿಟ್ಟನು. ನಂದಗೋಕುಲದಲ್ಲಿ ಶ್ರೀಕೃಷ್ಣನು ಅನೇಕವರ್ಷಗಳ ಪರ್ಯಂತವಾಗಿ ವಾಸವಾಗಿದ್ದನು. ಒಮ್ಮೆ ಗಾಡಿಯ ಕೆಳಭಾಗದಲ್ಲಿ ಮಲಗಿ ನಿದ್ರಿಸುತ್ತಿದ್ದ ಶ್ರೀಕೃಷ್ಣನನ್ನು ಅಲ್ಲಿಯೇ ಬಿಟ್ಟು ಯಶೋದಾದೇವಿಯು ಯಮುನಾನದಿಗೆ ಹೋಗಿದ್ದಳು. ಆ ಸಮಯದಲ್ಲಿ ಶ್ರೀಕೃಷ್ಣನು ತನ್ನ ಬಾಲಲೀಲೆಗಳನ್ನು ತೋರಿಸಲುದ್ಯುಕ್ತನಾಗಿ ಕೈಕಾಲುಗಳನ್ನು ಪಟ-ಪಟನೆ ನೆಲಕ್ಕೆ ಬಡಿಯುತ್ತಾ ಕರ್ಣಾನಂದಕರವಾಗಿ ರೋದನಮಾಡುತ್ತಾ ಕಾಲುಗಳೆರಡನ್ನೂ ಮೇಲಕ್ಕೆತ್ತಿದನು.

**ಪಾದಾಂಗುಷ್ಠೇನ ಶಕಟಂ ಧಾರಯನ್ನಥ ಕೇಶವಃ ।**
**ತತ್ರಾಥೈಕೇನ ಪಾದೇನ ಪಾತಯಿತ್ವಾ ತಥಾ ಶಿಶುಃ ।**
**ನ್ಯುಬ್ಜಃ ಪಯೋಧರಾಕಾಂಕ್ಷೀ ಚಕಾರ ಚ ರುರೋದ ಚ ॥**

ಪಾದಾಂಗುಷ್ಠದಿಂದ ಗಾಡಿಯನ್ನು ಎತ್ತಿಹಿಡಿದು ಮತ್ತೊಂದು ಕಾಲಿನಿಂದ ಗಾಡಿಯನ್ನು ಕೆಳಕ್ಕೆ ಕೆಡಹಿ ಅನಂತರ ಸ್ತನ್ಯವನ್ನು ಬಯಸಿದ ಶ್ರೀಕೇಶವನು ಗಟ್ಟಿಯಾಗಿ ಅಳಲು ಪ್ರಾರಂಭಿಸಿದನು.

ಬಂಡಿಯು ಮುರಿದು ಬಿದ್ದಿರುವುದನ್ನೂ, ಅದರ ಚಕ್ರಗಳೂ ಚೂರುಚೂರಾಗಿ ಬಿದ್ದಿರುವುದನ್ನೂ ನೋಡಿ ಜನರು ಶಿಶುವಿನ ಆ ವಿಸ್ಮಯಕಾರಕವಾದ ಸಾಹಸಕಾರ್ಯವನ್ನು ಕಂಡು ಆಶ್ಚರ್ಯಚಕಿತರಾದರು.

ಶೂರಸೇನರು ನೋಡುತ್ತಿದ್ದಂತೆಯೇ ಶ್ರೀಕೃಷ್ಣನ ಬಾಲಲೀಲೆಗಳಲ್ಲಿ ಪರಮಾದ್ಭುತವಾದ ಮತ್ತೊಂದು ದೃಶ್ಯವೂ ಕಂಡಿತು.

**ಪೂತನಾ ಚಾಪಿ ನಿಹತಾ ಮಹಾಮಾಯಾ ಮಹಾಸ್ತನೀ ।**
**ಪಶ್ಯತಾಂ ಸರ್ವದೇವಾನಾಂ ವಾಸುದೇವೇನ ಭಾರತ ॥**

ಸರ್ವದೇವತೆಗಳೂ ನೋಡುತ್ತಿರುವಂತೆಯೇ (ಸರ್ವದೇವತೆಗಳ ಸಮಕ್ಷದಲ್ಲಿಯೇ) ಮಹಾಸ್ತನಿಯಾದ, ಮಹಾಮಾಯಾವತಿಯಾದ ಪೂತನೆಯೂ ವಾಸುದೇವನಿಂದ ಹತಳಾದಳು.

ಮತ್ತೊಂದು ಸಮಯದಲ್ಲಿ ವಿಷ್ಣು-ಸಂಕರ್ಷಣರ ಅಂಶಸಂಭೂತರಾದ

ಬಲರಾಮ-ಶ್ರೀಕೃಷ್ಣರು ಒಂದೆಡೆಯಲ್ಲಿ ಆಟವಾಡತೊಡಗಿದರು. ಒಬ್ಬರ ದೇಹಪ್ರಕಾಶವು ಮತ್ತೊಬ್ಬರ ದೇಹಪ್ರಕಾಶದಲ್ಲಿ ವಿಲೀನವಾಗಿ ಆಕಾಶದಲ್ಲಿರುವ ಸೂರ್ಯ-ಚಂದ್ರರಂತೆಯೇ ಪ್ರಕಾಶಿಸುತ್ತಿದ್ದರು. ಹೆಡೆಗಳಿಂದ ಕೂಡಿದ ಸರ್ಪಗಳಂತೆ ನೀಳವಾದ ತೋಳುಗಳನ್ನು ಹೊಂದಿ ಶೋಭಾಯಮಾನರಾಗಿ ಕಾಣುತ್ತಿದ್ದರು. ಮಣ್ಣಿನಲ್ಲಿ ಆಟವಾಡುತ್ತಿದ್ದ ಅವರು ಧೂಳಿನಿಂದ ಧೂಸರಿತವಾದ ಶರೀರಗಳಿಂದ ಶೋಭಿಸುತ್ತಿದ್ದರು. ಆಟವಾಡುತ್ತಿದ್ದಾಗ ಕೆಲವು ವೇಳೆ ಅವರು ಮಂಡಿಗಳಲ್ಲಿ ಪೆಟ್ಟುಮಾಡಿಕೊಳ್ಳುತ್ತಿದ್ದರು. ಕಡೆಯುವ ಸಲುವಾಗಿ ಮೊಸರಿನ ಗಡಿಗೆಗಳನ್ನು ಗೋಪಿಕಾಸ್ತ್ರೀಯರಿಟ್ಟುಕೊಂಡಿದ್ದ ಸಮಯದಲ್ಲಿ ಯಾರಿಗೂ ತಿಳಿಯದಂತೆ ಹೋಗಿ ಗೋಪಿಕಾಸ್ತ್ರೀಯರ ಕಣ್ಣು ಮರೆಸಿ ಮೊಸರನ್ನೆಲ್ಲಾ ಕುಡಿದುಬಿಡುತ್ತಿದ್ದರು. ಗೋಪಿಕಾಸ್ತ್ರೀಯರ ಮನೆಗಳಲ್ಲಿ ಗೋವಿಂದನು ಬೆಣ್ಣೆಯನ್ನು ಕದ್ದು ತಿನ್ನುತ್ತಿದ್ದಾಗ ಒಮ್ಮೆ ಅವರ ಕೈಗೆ ಸಿಕ್ಕಿಕೊಳ್ಳುತ್ತಿದ್ದನು. ಒಡನೆಯೇ ಅವರು ಶ್ರೀಕೃಷ್ಣನನ್ನು ಹಿಡಿದು ಹಗ್ಗದಿಂದ ಕಡೆಗೋಲಿಗೆ ಬಂಧಿಸಿಬಿಡುತ್ತಿದ್ದರು. ಅದರಿಂದ ಬಿಡಿಸಿಕೊಳ್ಳುವುದು ಶ್ರೀಕೃಷ್ಣನಿಗೆ ಸ್ವಲ್ಪವೂ ಪ್ರಯಾಸವಾಗುತ್ತಿರಲಿಲ್ಲ. ಬಲರಾಮನು ಯಾರಿಗೂ ತಿಳಿಯದಂತೆ ಶ್ರೀಕೃಷ್ಣನನ್ನು ಬಚ್ಚಿಟ್ಟುಬಿಡುತ್ತಿದ್ದನು. ಒಮ್ಮೆ ಕೋಪಗೊಂಡು ಗೋಪಿಕಾಸ್ತ್ರೀಯರು ಶ್ರೀಕೃಷ್ಣನನ್ನು ಒರಳುಕಲ್ಲಿಗೆ ಕಟ್ಟಿಹಾಕಿದರು. ಅದನ್ನೂ ಎಳೆದುಕೊಂಡು ಮತ್ತಿಯ ಮರಗಳ ನಡುವೆ ಹಾಯ್ದು ಒರಳನ್ನು ಎಳೆದಾಗ ಆ ಎರಡೂ ವೃಕ್ಷಗಳೂ ಬೇರುಸಹಿತವಾಗಿ ಕೆಳಗುರುಳಿದುವು. ಇದು ಅವರಿಗೆ ಪರಮಾದ್ಭುತವೆನಿಸಿತು. ನಿಶ್ಚಯವಾಗಿಯೂ ಆ ವೃಕ್ಷಗಳು ನಿಜವಾದ ವೃಕ್ಷಗಳಾಗಿರಲಿಲ್ಲ. ವೃಕ್ಷರೂಪವನ್ನು ಧರಿಸಿ ಶ್ರೀಕೃಷ್ಣ-ಬಲರಾಮರನ್ನು ಕೊಲ್ಲುವ ಸಲುವಾಗಿ ಇಬ್ಬರು ರಾಕ್ಷಸರು ಅಲ್ಲಿದ್ದರು. ಒಡನೆಯೇ ಅವರು ವೃಕ್ಷರೂಪವನ್ನು ತೊರೆದು ರಾಕ್ಷಸರೂಪವನ್ನು ಧರಿಸಿ ಗತಪ್ರಾಣರಾಗಿಬಿದ್ದರು.

ಶ್ರೀಕೃಷ್ಣ-ಬಲರಾಮರಿಗೆ ಬಾಲ್ಯಾವಸ್ಥೆಯು ವ್ರಜಸ್ಥಾನದಲ್ಲಿಯೇ ಕಳೆಯಿತು. ಇಬ್ಬರಿಗೂ ಏಳು ವರ್ಷಗಳು ತುಂಬಿದುವು. ಬಲರಾಮನು ನೀಲಾಂಬರವನ್ನೂ, ಶ್ರೀಕೃಷ್ಣನು ಪೀತಾಂಬರವನ್ನೂ ಧರಿಸುತ್ತಿದ್ದರು. ಬಲರಾಮನಿಗೆ ಹೊಂಬಣ್ಣದ ಅಂಗರಾಗವಿದ್ದಿತು. ಶ್ರೀಕೃಷ್ಣನಿಗೆ ಬಿಳು

ಪಾದ ಅಂಗರಾಗವಿದ್ದಿತು. ಇಬ್ಬರೂ ಗುಂಗುರುಕೂದಲನ್ನು ಹೊಂದಿದವರಾಗಿದ್ದರು. ಈ ರೀತಿಯಾಗಿ ಅಲಂಕೃತರಾಗಿದ್ದ ಶ್ರೀಕೃಷ್ಣ-ಬಲರಾಮರು ಗೋವುಗಳ ಸಂರಕ್ಷಣೆಯನ್ನು ಮಾಡುತ್ತಿದ್ದರು. ಅವರ ಮುಖಕಾಂತಿಯು ದೇದೀಪ್ಯಮಾನವಾಗಿದ್ದಿತು. ಎಲೆಗಳಲ್ಲಿಯೇ ವಾದ್ಯಗಳನ್ನು (ಪೀಪಿಯನ್ನು) ಮಾಡಿಕೊಂಡು ಕರ್ಣಾನಂದಕರವಾಗಿ ಊದುತ್ತಿದ್ದರು. ಅರಣ್ಯದಲ್ಲಿ ಪೀಪಿಗಳನ್ನೂದುತ್ತಿದ್ದ ಅವರು ನಾಗಕುಮಾರರಂತೆಯೇ ಪ್ರಕಾಶಿಸುತ್ತಿದ್ದರು. ಬಲರಾಮ-ಶ್ರೀಕೃಷ್ಣರು ಕಿವಿಗಳ ಮೇಲ್ಭಾಗದಲ್ಲಿ ನವಿಲಿನ ಗರಿಗಳನ್ನು ಸಿಕ್ಕಿಸಿಕೊಂಡಿದ್ದರು. ತಲೆಯ ಮೇಲೆ ಮೊಗ್ಗಿನ ದಂಡೆಗಳನ್ನು ಧರಿಸಿದ್ದರು. ವನಕುಸುಮಗಳ ಮಾಲೆಗಳನ್ನು ಧರಿಸಿದ್ದರು. ಹೀಗೆ ಅಲಂಕೃತರಾದ ಅವರು ಚಿಕ್ಕ ಸಾಲವೃಕ್ಷಗಳಂತೆಯೇ ಪ್ರಕಾಶಿಸುತ್ತಿದ್ದರು. ಅವರು ಯಾವಾಗಲೂ ಕಮಲದ ಪುಷ್ಪಗಳನ್ನು ಧರಿಸಿರುತ್ತಿದ್ದರು. ಹಗ್ಗವನ್ನೇ ಯಜ್ಞೋಪವೀತದಂತೆ ಹಾಕಿಕೊಳ್ಳುತ್ತಿದ್ದರು. ಗೋಪಾಲಕರು ಊದುವ ಕೊಳಲನ್ನು ಬಾರಿಸುತ್ತಾ ಶ್ರೀಕೃಷ್ಣ-ಬಲರಾಮರು ಅರಣ್ಯದಲ್ಲಿ ಸಂಚರಿಸುತ್ತಿದ್ದರು.

ಶ್ರೀಕೃಷ್ಣ-ಬಲರಾಮರು ಜೊತೆಯಲ್ಲಿಯೇ ಅನೇಕ ದಿನಗಳವರೆಗೆ ಇದ್ದುಬಿಡುತ್ತಿದ್ದರು. ಹೀಗಿರುವಾಗ ಇಬ್ಬರೂ ಒಟ್ಟಾಗಿ ಅನೇಕಾನೇಕ ಆಟಗಳನ್ನಾಡುವರು. ಎಲೆಗಳಿಂದ ಸಿದ್ಧವಾದ ಹಾಸಿಗೆಯಲ್ಲಿಯೇ ಇಬ್ಬರೂ ಮಲಗುತ್ತಿದ್ದರು. ಕೆಲವೊಂದು ಸಮಯದಲ್ಲಿ ಹಾಗೆಯೇ ನಿದ್ರಿಸಿಯೂ ಬಿಡುತ್ತಿದ್ದರು.

ಈ ರೀತಿಯಲ್ಲಿ ಶ್ರೀಕೃಷ್ಣ-ಬಲರಾಮರು ಗೋವುಗಳ ಸಂರಕ್ಷಣೆ ಮಾಡುತ್ತಾ, ಸುತ್ತಲೂ ತಿರುಗಾಡಿ ಆ ಮಹಾವನವನ್ನು ತಮ್ಮ ಕಾಂತಿಯಿಂದ ಬೆಳಗುತ್ತಾ ಕಾಲಕಳೆಯುತ್ತಿದ್ದರು. ಅನಂತರದಲ್ಲಿ ವಸುದೇವನ ಮಕ್ಕಳಾದ ಶ್ರೀಕೃಷ್ಣ-ಬಲರಾಮರು ಬೃಂದಾವನಕ್ಕೆ ಹೋಗಿ ಅಲ್ಲಿ ಹಸುಗಳನ್ನು ಮೇಯಿಸುತ್ತಾ ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದರು.

ಒಮ್ಮೆ ಜ್ಯೇಷ್ಠನಾದ ಸಂಕರ್ಷಣನನ್ನು ಬಿಟ್ಟು, ಶ್ರೇಷ್ಠವಾದ ಮುಖವನ್ನೂ ಮತ್ತು ಕಡುಚೆಲುವಾದ ರೂಪವನ್ನೂ ಹೊಂದಿದ್ದ ಗೋವಿಂದನು ಆ ಮಹಾವನದಲ್ಲಿ ಏಕಾಕಿಯಾಗಿ ಸಂಚಾರಮಾಡುತ್ತಿದ್ದನು. ಗುಂಗುರು ಕೂದಲಿನಿಂದ ಕೂಡಿದ್ದ, ಶ್ಯಾಮಲವರ್ಣನಾದ, ಪದ್ಮಸದೃಶವಾದ

ಮುಖವನ್ನು ಹೊಂದಿದ್ದ, ಶ್ರೀವತ್ಸಾಂಕಿತನಾಗಿದ್ದ, ಚಂದ್ರನಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಶ್ರೀಕೃಷ್ಣನು ಅರಣ್ಯದಲ್ಲಿ ಸಂಚರಿಸುತ್ತಿದ್ದನು. ಕರುಗಳನ್ನು ಕಟ್ಟುವ ಹಗ್ಗವನ್ನೇ ಯಜ್ಞೋಪವೀತವನ್ನಾಗಿ ಧರಿಸಿದ್ದನು. ಪೀತಾಂಬರಧರನಾಗಿದ್ದನು. ಬಿಳಿಯದಾದ ಗಂಧವನ್ನು ಲೇಪಿಸಿ ಕೊಂಡಿದ್ದನು. ನೀಳವಾದ ಮತ್ತು ಗುಂಗುರುಕೂದಲಿನಿಂದ ಕಂಗೊಳಿಸುತ್ತಿದ್ದನು. ಅವನು ತಲೆಯಲ್ಲಿ ನವಿಲುಗರಿಯನ್ನು ಧರಿಸಿದ್ದನು. ಅದು ಮಂದಮಾರುತದಿಂದ ಸ್ಪಂದನವಾಗುತ್ತಿದ್ದಿತು. ಶ್ರೀಕೃಷ್ಣನೊಮ್ಮೆ ಹಾಡುತ್ತಿದ್ದನು ; ಮತ್ತೊಮ್ಮೆ ಆಡುತ್ತಿದ್ದನು. ಮತ್ತೊಂದೆಡೆಯಲ್ಲಿ ನೃತ್ಯವಾಡುತ್ತಿದ್ದನು. ಬೇರೊಂದೆಡೆಯಲ್ಲಿ ಗೆಳೆಯರೊಡನೆ ಸೇರಿ ಹಾಸ್ಯ ಮಾಡುತ್ತಿದ್ದನು. ಗೋಪಾಲಕರ ವೇಷಧರಿಸಿ ಗೋವುಗಳ ಆಹ್ಲಾದನಾರ್ಥ ವಾಗಿ ಸುಮಧುರವಾಗಿ ವೇಣುನಾದವನ್ನು ಮಾಡುತ್ತಿದ್ದನು. ಅತ್ಯಂತದ್ಯುತಿ ಮಂತನಾದ ಭಗವಾನ್ ಶ್ರೀಕೃಷ್ಣನು ವರ್ಷಾಕಾಲದಲ್ಲಿ ಗೋಕುಲದಲ್ಲಿದ್ದು ಕೊಂಡು ಅತಿರಮಣೀಯವಾದ ವನಪ್ರದೇಶದಲ್ಲಿ ಸಂಚರಿಸುತ್ತಿದ್ದನು. ಈ ವಿಧವಾದ ಆಟಗಳಿಂದಲೇ ಶ್ರೀಕೃಷ್ಣನಿಗೆ ಮಹಾನಂದವಾಗುತ್ತಿದ್ದಿತು. ಒಮ್ಮೆ ಇದೇ ರೀತಿಯಲ್ಲಿ ಶ್ರೀಕೃಷ್ಣನು ಗೋವುಗಳೊಡನೆ ಸಂಚರಿಸುತ್ತಿದ್ದಾಗ ಭಾಂಡೀರವೆಂಬ ವಟವೃಕ್ಷವನ್ನು ನೋಡಿದನು. ಅದರ ಛಾಯೆಯಲ್ಲಿ ವಿಶ್ರಮಿಸಿಕೊಳ್ಳಲು ಪ್ರಭುವಾದ ಶ್ರೀಕೃಷ್ಣನು ಇಚ್ಛಿಸಿದನು. ಅಲ್ಲವನು ತನ್ನ ಸಮಾನವಯಸ್ಕರಾದ ಗೆಳೆಯರೊಡನೆಯೂ, ಹಸುಗಳೊಡನೆಯೂ ಕೂಡಿಕೊಂಡು ಹಿಂದೆ ಸ್ವರ್ಗಲೋಕದಲ್ಲಿ ಸುಖವಾಗಿದ್ದಂತೆ ಅನೇಕದಿವಸ ಗಳವರೆಗೆ ಆ ವಟವೃಕ್ಷದ ನೆರಳಿನಲ್ಲಿ ವಿಹರಿಸಿದನು.

ಈ ರೀತಿಯಲ್ಲಿ ಆಟವಾಡುತ್ತಿದ್ದ ಶ್ರೀಕೃಷ್ಣನಿಗೆ ಭಾಂಡೀರವಟವೃಕ್ಷ ನಿವಾಸಿಗಳಾಗಿದ್ದ ಗೋಪಾಲಕರು ಅನೇಕವಿಧವಾದ ಆಟದ ಸಾಮಾನುಗಳನ್ನು ತಂದುಕೊಟ್ಟು ಅವನನ್ನು ಸಂತೋಷಗೊಳಿಸುತ್ತಿದ್ದರು. ಕೆಲವು ಗೋಪಾಲಕರು ಸಂಪ್ರಹೃಷ್ಟವಾದ ಮನಸ್ಸಿನಿಂದ ಹೃದಯಾನಂದಕರ ವಾಗಿ ಗಾನಮಾಡುತ್ತಿದ್ದರು. ಕೆಲವರು ಶ್ರೀಕೃಷ್ಣನ ಗುಣಗಾನವನ್ನು ಮಾಡುತ್ತಾ ಅವನನ್ನೇ ಪರಿ-ಪರಿಯಾಗಿ ಸ್ತೋತ್ರಮಾಡುತ್ತಿದ್ದರು. ಅವರು ಹಾಡು

ತ್ತಿದ್ದಂತೆ ಕೇಶವನು ಎಲೆಯ ಪೀಪಿಯನ್ನೂ, ಮಧ್ಯ-ಮಧ್ಯದಲ್ಲಿ ಕೊಳಲನ್ನೂ, ತುಂಬುರವನ್ನೂ, ವೀಣೆಯನ್ನೂ ಹೃದಯಂಗಮವಾಗಿ ಬಾರಿಸುತ್ತಾ ಗೋಪಾಲಕರೊಡನೆ ವಿಹರಿಸುತ್ತಿದ್ದನು. ಆ ಸಮಯದಲ್ಲಿ ಬಾಲಕೃಷ್ಣನಿಂದ ಲೋಕಹಿತಕರವಾದ ಒಂದು ಅದ್ಭುತಕಾರ್ಯವು ಎಲ್ಲರೂ ನೋಡುತ್ತಿರುವಾಗಲೇ ಮಾಡಲ್ಪಟ್ಟಿತು.

**ಹ್ರದೇ ನೀಪವನೇ ತತ್ರ ಕ್ರೀಡಿತಂ ನಾಗಮೂರ್ಧನಿ ।**
**ಕಾಲಿಯಂ ಶಾಸಯಿತ್ವಾ ತು ಸರ್ವಲೋಕಸ್ಯ ಪಶ್ಯತಃ ।**
**ವಿಜಹಾರ ತತಃ ಕೃಷ್ಣೋ ಬಲದೇವಸಹಾಯವಾನ್ ॥**

ಬೃಂದಾವನದಲ್ಲಿ ಕದಂಬವನದ ಸಮೀಪದಲ್ಲಿದ್ದ ಒಂದು ಮಡುವನ್ನು ಪ್ರವೇಶಿಸಿ ಅಲ್ಲಿದ್ದ ಕಾಲಿಯ ಎಂಬ ಹೆಸರಿನ ಸರ್ಪದ ಹೆಡೆಯ ಮೇಲೆ ಕ್ರೀಡಿಸುತ್ತಿದ್ದು, ಆ ಸರ್ಪಕ್ಕೆ ಬೇರೆಯೆಡೆಗೆ ಹೋಗುವಂತೆ ಬಲದೇವ ಸಹಾಯಕನಾದ ಶ್ರೀಕೃಷ್ಣನು ಎಲ್ಲರ ಸಮಕ್ಷದಲ್ಲಿಯೇ ನಿರ್ದೇಶಿಸಿದನು.

ಕತ್ತೆಯ ರೂಪವನ್ನು ಧರಿಸಿದ್ದ, ತಾಲವನದಲ್ಲಿ ಸಂಚರಿಸುತ್ತಿದ್ದ ದೇವಕನೆಂಬ ರಾಕ್ಷಸನು ಬಲದೇವನಿಂದ ಹತನಾದನು.

ಒಮ್ಮೆ ಬಲರಾಮ-ಶ್ರೀಕೃಷ್ಣರು ಅರಣ್ಯಕ್ಕೆ ಹೋಗಿ ಗೋವುಗಳನ್ನು ಮೇಯಿಸುತ್ತಾ ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದರು. ಅರಣ್ಯವೆಲ್ಲವನ್ನೂ ಸಂದರ್ಶಿಸುತ್ತಾ ಅಲ್ಲಿದ್ದ ವೃಕ್ಷಗಳನ್ನು ಇಂತಿಂತಹ ವೃಕ್ಷಗಳೆಂದು ಗುರುತಿಸುತ್ತಾ ಹಾಡುತ್ತಾ ಕುಣಿಯುತ್ತಾ ವಿಹರಿಸುತ್ತಿದ್ದರು. ಹಸುಗಳನ್ನೂ ಮತ್ತು ಕರುಗಳನ್ನೂ ಹೆಸರು ಹಿಡಿದು ಕೂಗುತ್ತಾ, ಅವುಗಳು ಬಾಲಗಳನ್ನೆತ್ತಿಕೊಂಡು ತಮ್ಮ ಸಮೀಪಕ್ಕೆ ಬಂದೊಡನೆಯೇ ಅವುಗಳನ್ನು ಮುದ್ದಿಡುತ್ತಾ, ಲೋಕಪ್ರಸಿದ್ಧವಾದ ಬಾಲಕ್ರೀಡೆಗಳನ್ನಾಡುತ್ತಿದ್ದರು. ಶ್ರೀಕೃಷ್ಣ-ಬಲರಾಮರು ಯದ್ಯಪಿ ದೇವತೆಗಳೇ ಆಗಿದ್ದರೂ, ದೇವತೆಗಳಿಂದ ಸಂಪೂಜಿತರಾಗಿದ್ದರೂ ಮಾನವರಾಗಿ ಜನಿಸಿದ್ದರಿಂದ ಮಾನವಸಹಜವಾದ ಗುಣಗಳನ್ನೇ ಹೊಂದಿದವರಾಗಿ ಮಾನವಸಹಜವಾದ ಬಾಲಕ್ರೀಡೆಗಳನ್ನೇ ಆಡುತ್ತಿದ್ದರು.

**ತತಃ ಕೃಷ್ಣೋ ಮಹಾತೇಜಾಸ್ತದಾ ಗತ್ವಾ ತು ಗೋವ್ರಜಮ್ ।**

**ಗಿರಿಯಜ್ಞಂ ತಮೇವೈಷ ಪ್ರಕೃತಂ ಗೋಪದಾರಕೈಃ ।**
**ಬುಭುಜೇ ಪಾಯಸಂ ಶೌರಿರೀಶ್ವರಃ ಸರ್ವಭೂತಕೃತ್ ॥**

ಬಳಿಕ ಮಹಾತೇಜಸ್ವಿಯಾದ ಶ್ರೀಕೃಷ್ಣನು ಗೋವುಗಳ ಸಮೂಹವಿದ್ದಲ್ಲಿಗೆ ಹೋಗಿ ಗೋಪಾಲಕರಿಂದ ಆಚರಿಸಲ್ಪಡುತ್ತಿದ್ದ ಗಿರಿಯಜ್ಞದಲ್ಲಿ ಭಾಗವಹಿಸಿದುದಲ್ಲದೇ–ಸರ್ವಭೂತಗಳ ಸೃಷ್ಟಿಕರ್ತನಾದ, ಈಶ್ವರನಾದ ಶೌರಿಯು ಗಿರಿರಾಜನಿಗಾಗಿ ಸಮರ್ಪಿಸಿದ್ದ ಪಾಯಸವನ್ನು ಭಕ್ಷಿಸಿದನು. (೧೬೩೬ನೇ ಪುಟದಲ್ಲಿ 'ನಾಗಮೂರ್ಧನಿ' ಎಂಬ ಪಾಠಾಂತರದ ಪ್ರಕಾರ ಪರ್ವತದ ಶಿಖರದ ಮೇಲೆ ಕ್ರೀಡೆಯಾಡುತ್ತಿದ್ದ ಶ್ರೀಕೃಷ್ಣನು ಯಥೇಚ್ಛವಾಗಿ ಭೋಜನಮಾಡಿದನು–ಎಂದು ಸಂದರ್ಭಾನುಸಾರವಾಗಿ ಅರ್ಥಮಾಡಿಕೊಳ್ಳಬಹುದಾಗಿದೆ.)

ಪರ್ವತಕ್ಕೆ ಅರ್ಪಿಸಿದ ಪಾಯಸವನ್ನು ಶ್ರೀಕೃಷ್ಣನು ಭಕ್ಷಿಸಿದುದನ್ನು ಕಂಡು ಗೋಪಾಲಕರು ಶ್ರೀಕೃಷ್ಣನನ್ನೇ ಪೂಜಿಸಿದರು. ಗೋಪಾಲಕರಿಂದ ಅರ್ಚಿತನಾದ ಶ್ರೀಕೃಷ್ಣನು ದಿವ್ಯಶರೀರವನ್ನೇ ಧರಿಸಿದನು.

ಆಟವಾಡುತ್ತಿದ್ದ ಶ್ರೀಕೃಷ್ಣನು ಬೃಹತ್ತಾದ ಗೋವರ್ಧನಪರ್ವತವನ್ನೆತ್ತಿ ಅತಿದುಷ್ಕರವಾದ ಸಾಹಸಕಾರ್ಯವನ್ನೇ ಮಾಡಿದನು. ಶ್ರೀಕೃಷ್ಣನು ಮಾಡಿದ ಆ ಮಹಾಕಾರ್ಯವು ಸರ್ವಲೋಕಗಳಿಗೂ ಪರಮಾದ್ಭುತವೆನಿಸಿತು. ಆ ಸಮಯದಲ್ಲಿಯೇ ದೇವದೇವನಾದ ಪುರಂದರನು ಭೂಮಿಗೆ ಬಂದು ಸಂತುಷ್ಟನಾಗಿ, ಶ್ರೀಕೃಷ್ಣನನ್ನು ನೋಡಿ, ಅವನಿಗೆ ಗೋವಿಂದನೆಂಬ ನಾಮಧೇಯವನ್ನೂ ಮಾಡಿ, ಗೋವಿಂದಪದವಿಯಲ್ಲಿ ಅವನನ್ನು ಅಭಿಷೇಚಿಸಿ ಶ್ರೀಕೃಷ್ಣನನ್ನು ಗಾಢಾಲಿಂಗನಮಾಡಿಕೊಂಡು ಸ್ವರ್ಗಲೋಕಕ್ಕೆ ಹೊರಟುಹೋದನು.

**ಧೃತೋ ಗೋವರ್ಧನೋ ನಾಮ ಸಪ್ತಾಹಂ ಪರ್ವತಸ್ತದಾ ।**
**ಶಿಶುನಾ ವಾಸುದೇವೇನ ಗವಾರ್ಥಮರಿಮರ್ದನ ॥**

ಗೋವರ್ಧನವೆಂಬ ಪರ್ವತವು ಹಸುಗಳ ಸಂರಕ್ಷಣೆಯ ಸಲುವಾಗಿ ಏಳು ದಿವಸಗಳ ಪರ್ಯಂತವಾಗಿ ಬಾಲನಾದ ವಾಸುದೇವನಿಂದ ಧರಿಸಲ್ಪಟ್ಟಿದ್ದಿತು.

**ಅಥಾರಿಷ್ಟ ಇತಿ ಖ್ಯಾತಂ ದೈತ್ಯಂ ವೃಷಭವಿಗ್ರಹಮ್ ।**
**ಜಘಾನ ತರಸಾ ಕೃಷ್ಣಃ ಪಶೂನಾಂ ಹಿತಕಾಮ್ಯಯಾ ॥**

ಪಶುಗಳಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ಶ್ರೀಕೃಷ್ಣನು ಗೂಳಿಯ ಆಕಾರವನ್ನು ಹೊಂದಿದ್ದ ಅರಿಷ್ಟನೆಂದು ವಿಖ್ಯಾತನಾಗಿದ್ದ ದೈತ್ಯನನ್ನು ಸಂಹರಿಸಿದನು.

**ಕೇಶಿನಂ ನಾಮ ದೈತೇಯಂ ರಾಜನ್ನೈ ಹಯವಿಗ್ರಹಮ್ ।**
**ತಥಾ ವನಗತಂ ಪಾರ್ಥ ಗಜಾಯುತಬಲಂ ಹಯಮ್ ।**
**ಪ್ರಹಿತಂ ಭೋಜಪುತ್ರೇಣ ಜಘಾನ ಪುರುಷೋತ್ತಮಃ ॥**

ಶ್ರೀಕೃಷ್ಣನಿದ್ದ ವನಕ್ಕೆ ಆಗಮಿಸಿದ, ಭೋಜಕುಲೋತ್ಪನ್ನನಾದ ಕಂಸನಿಂದ ಪ್ರೇಷಿತನಾಗಿದ್ದ, ಹತ್ತುಸಾವಿರ ಆನೆಗಳ ಬಲವನ್ನು ಹೊಂದಿದ್ದ, ಕುದುರೆಯ ರೂಪದಲ್ಲಿದ್ದ ಕೇಶೀ ಎಂಬ ಹೆಸರಿನ ರಾಕ್ಷಸನನ್ನು ಪುರುಷೋತ್ತಮನಾದ ಶ್ರೀಕೃಷ್ಣನು ಸಂಹರಿಸಿದನು.

ಆಂಧ್ರನೆಂಬ ರಾಕ್ಷಸನನ್ನೂ, ಮಲ್ಲ ಮತ್ತು ಚಾಣೂರರೆಂಬ ಮಹಾಸುರರನ್ನೂ ಶ್ರೀಕೃಷ್ಣನು ಸಂಹರಿಸಿದನು.

ಶತ್ರುನಾಶಕನಾದ ಕಂಸನ ಸರ್ವಸೈನ್ಯಗಳಿಗೂ ಸೇನಾಪತಿಯಾದ ಸುನಾಮಾನನೆಂಬುವನನ್ನೂ ಬಾಲನಾದ ಶ್ರೀಕೃಷ್ಣನೇ ಸಂಹರಿಸಿದನು. ಕುಸ್ತಿಯ ಅಖಾಡದಲ್ಲಿ ಮುಷ್ಟಿಕನೆಂಬ ರಾಕ್ಷಸನನ್ನು ಬಲರಾಮನು ಸಂಹರಿಸಿದನು. ಶ್ರೀಕೃಷ್ಣನ ಎಲ್ಲ ಸಾಹಸಕಾರ್ಯಗಳಿಂದಾಗಿ ಕಂಸನು ಹೆಚ್ಚು ವ್ಯಥಿತನಾದನು. (ಕಂಸನ ಅನುಯಾಯಿಗಳನ್ನು ವಧೆಮಾಡಿ ಶ್ರೀಕೃಷ್ಣನು ಅವನಿಗೆ ತ್ರಾಸಕೊಟ್ಟನು.) ಶ್ರೀಕೃಷ್ಣನೊಡನೆ ಯುದ್ಧಮಾಡಲು ಬಹುರಭಸ ದಿಂದ ಬಂದ, ಐರಾವತವಂಶದಲ್ಲಿ ಹುಟ್ಟಿದ ಕುವಲಯಾಪೀಡವೆಂಬ ಆನೆಯನ್ನು ಶ್ರೀಕೃಷ್ಣನು ಕಂಸನ ಎದುರಿನಲ್ಲಿಯೇ ಸಂಹರಿಸಿದನು. ಶತ್ರುಗಳ ಧ್ವಂಸಕನಾದ ಶ್ರೀಕೃಷ್ಣನು, ಸಕಲಪ್ರಜೆಗಳೂ ಮತ್ತು ಬಂಧುಗಳೂ ನೋಡುತ್ತಿದ್ದಂತೆಯೇ ಕಂಸನನ್ನೂ ಸಂಹರಿಸಿ, ಉಗ್ರಸೇನನಿಗೆ ಪಟ್ಟಗಟ್ಟಿ, ಬಂಧನದಲ್ಲಿದ್ದ ತನ್ನ ತಾಯಿ-ತಂದೆಗಳಾದ ದೇವಕೀ-ವಸುದೇವರನ್ನು ಬಂಧನದಿಂದ ವಿಮುಕ್ತಿಗೊಳಿಸಿ ಅವರ ಪಾದಗಳಿಗೆ ಅಭಿವಂದಿಸಿದನು.

**ಏವಮಾದೀನಿ ಕರ್ಮಾಣಿ ಕೃತವಾನ್ ವೈ ಜನಾರ್ದನಃ ।**

ಇವೇ ಮೊದಲಾದ ಸಾಹಸಕಾರ್ಯಗಳನ್ನು ಶ್ರೀಕೃಷ್ಣನು ಮಾಡಿರುವನು."–ಇಲ್ಲಿಗೆ ಶ್ರೀಕೃಷ್ಣನ ಬಾಲಲೀಲಾಪ್ರಕರಣವು ಮುಗಿಯುತ್ತದೆ.

**ಯದ್ಯನೇನ ಹತೋ ಬಾಲ್ಯೇ ಶಕುನಿಶ್ಚಿತ್ರಮತ್ರ ಕಿಮ್ ।**

"ಬಾಲ್ಯದಲ್ಲಿ ಮಾಧವನು ಒಂದು ಪಕ್ಷಿಯನ್ನು (ಬಕಾಸುರನನ್ನು) ಕೊಂದನೆಂದರೆ ಅದರಲ್ಲಿ ಮಹತ್ತ್ವವೇನು ?" – ಎಂದು ಹೇಳಿ ಶಿಶುಪಾಲನು ಬಕಾಸುರವಧೆಯನ್ನು ಉದ್ಧರಿಸುತ್ತಾನೆ. ದಾಕ್ಷಿಣಾತ್ಯಪಾಠದಲ್ಲಿಯೂ ಬಕಾಸುರವಧೆಯ ವಿಷಯವು ಬಿಟ್ಟುಹೋಗಿದೆ. ಇದಕ್ಕೆ ಕಾರಣವು ತಿಳಿಯದಾಗಿದೆ. ಬಕಾಸುರವಧೆಯ ವಿಷಯವಾಗಿ ಭಾಗವತದಲ್ಲಿ ಹೀಗೆ ಹೇಳಿದೆ :

**ಸ ವೈ ಬಕೋ ನಾಮ ಮಹಾನಸುರೋ ಬಕರೂಪಧೃತ್ ।**
**ಆಗತ್ಯ ಸಹಸಾ ಕೃಷ್ಣಂ ತೀಕ್ಷ್ಣತುಂಡೋಽಗ್ರಸದ್ಬಲೀ ॥೫೫॥**
**ಕೃಷ್ಣಂ ಮಹಾಬಕಗ್ರಸ್ತಂ ದೃಷ್ಟ್ವಾ ರಾಮಾದಯೋಽರ್ಭಕಾಃ ।**
**ಬಭೂವುರಿನ್ದ್ರಿಯಾಣೀವ ವಿನಾ ಪ್ರಾಣೈರ್ವಿಚೇತಸಃ ॥೫೬॥**

**ತಂ ತಾಲುಮೂಲಂ ಪ್ರದಹನ್ತಮಗ್ನಿ-**
**ವದ್ಗೋಪಾಲಸೂನುಂ ಪಿತರಂ ಜಗದ್ಗುರೋಃ ।**
**ಚಚ್ಛರ್ದ ಸದ್ಯೋಽತಿರುಷಾಕ್ಷತಂ ಬಕ-**
**ಸ್ತುಣ್ಡೇನ ಹನ್ತುಂ ಪುನರಭ್ಯಪದ್ಯತ ॥೫೭॥**
**ತಮಾಪತನ್ತಂ ವಿನಿಗೃಹ್ಯ ತುಣ್ಡಯೋ-**
**ರ್ದೋರ್ಭ್ಯಾಂ ಬಕಂ ಕಂಸಸಖಂ ಸತಾಂ ಗತಿಃ ।**
**ಪಶ್ಯತ್ಸು ಬಾಲೇಷು ದದಾರ ಲೀಲಯಾ**
**ಮುದಾವಹೋ ವೀರಣವದ್ದಿವೌಕಸಾಮ್ ॥೫೮॥**

"ತೀಕ್ಷ್ಣವಾದ ಕೊಕ್ಕಿನಿಂದ ಕೂಡಿದ್ದ, ಬಕಪಕ್ಷಿಯ ರೂಪವನ್ನು ಧರಿಸಿದ್ದ, ಬಕಾಸುರನೆಂಬ ಹೆಸರಿನ ರಾಕ್ಷಸನು ವೇಗವಾಗಿ ಹಾರುತ್ತಾ ಬಂದು ಶ್ರೀಕೃಷ್ಣನನ್ನು ನುಂಗಿಬಿಟ್ಟನು. ಮಹಾಬಕನಿಂದ ನುಂಗಲ್ಪಟ್ಟ ಶ್ರೀಕೃಷ್ಣನನ್ನು ನೋಡಿ ಸುತ್ತಲೂ ಇದ್ದ ಬಲರಾಮನೇ ಮೊದಲಾದ ಬಾಲಕರು– ಪ್ರಾಣಗಳಿಂದ ರಹಿತವಾದ ಶರೀರದಲ್ಲಿರುವ ಇಂದ್ರಿಯಗಳಂತೆ –ಚೇತನಾ

ಹೀನರಾದರು. ಸೃಷ್ಟಿಕರ್ತನಾದ ಬ್ರಹ್ಮನಿಗೂ ಗುರುವಾದ ಶ್ರೀಕೃಷ್ಣನನ್ನು ನುಂಗಿದ ಕೂಡಲೇ ಆತನು ಅಗ್ನಿಯಂತೆ ಬಕನ ತಾಲುಮೂಲವನ್ನು (ಗಂಟಲನ್ನು) ಸುಡತೊಡಗಲು, ಅದನ್ನು ತಾಳಲಾರದೇ ಬಕಾಸುರನು ಶ್ರೀಕೃಷ್ಣನನ್ನು ಹೊರಕ್ಕುಗುಳಿದನು. ಗಾಯಗೊಳ್ಳದೇ ಕೆಳಗೆ ಬಿದ್ದ ಶ್ರೀಕೃಷ್ಣನನ್ನು ಕಂಡು ಬಕಾಸುರನು ಬಹಳ ಕೋಪಗೊಂಡವನಾಗಿ ಅವನನ್ನು ಕೊಕ್ಕಿನಿಂದಲೇ ಕುಕ್ಕಿ ಕೊಲ್ಲಬೇಕೆಂದು ನಿರ್ಧರಿಸಿ, ಶ್ರೀಕೃಷ್ಣನ ಮೇಲೆ ರಭಸದಿಂದ ಪುನಃ ಬಿದ್ದನು. ಅನಂತರದಲ್ಲಿ ಸಾಧುರಕ್ಷಕನಾದ ಶ್ರೀಕೃಷ್ಣನು–ನುಗ್ಗಿಬರುತ್ತಿದ್ದ ಕಂಸಸಖನಾದ ಬಕಾಸುರನನ್ನು ತಡೆದು–ಜೊತೆಗಾರರಾದ ಗೊಲ್ಲರು ನೋಡುತ್ತಿರುವಂತೆಯೇ–ಎರಡು ಕೈಗಳಿಂದಲೂ ಬಕಾಸುರನ ಕೊಕ್ಕಿನ ಎರಡು ಭಾಗಗಳನ್ನೂ ಬಲವಾಗಿ ಹಿಡಿದು ಜೊಂಡುಹುಲ್ಲನ್ನು ಸೀಳುವಂತೆ ವಿನೋದದಿಂದಲೇ ಸೀಳಿ, ತನ್ನ ಸಾಹಸಕಾರ್ಯದಿಂದ ದೇವತೆಗಳನ್ನು ಸಂತೋಷಗೊಳಿಸಿದನು.

* * * *

## ಇಷ್ಟಾಪೂರ್ತಗಳು

ಇಚ್ಛಯಾ ಬ್ರೂಹಿ ತತ್ಸತ್ಯಂ ಸತ್ಯಂ ರಾಜಸು ಶೋಭತೇ ।
ಇಷ್ಟಾಪೂರ್ತೇನ ಚ ತಥಾ ವಕ್ತವ್ಯಮನೃತಂ ನ ತು ॥
ಆದಿಪರ್ವ–ಅಧ್ಯಾಯ ೧೯೪, ಶ್ಲೋಕ ೬

ಅಗ್ನಿಹೋತ್ರಂ ತಪಃ ಸತ್ಯಂ ವೇದಾನಾಂ ಚಾನುಪಾಲನಮ್ ।
ಆತಿಥ್ಯಂ ವೈಶ್ವದೇವಂ ಚ ಇಷ್ಟಮಿತ್ಯಭಿಧೀಯತೇ ॥

ವಾಪೀಕೂಪತಟಾಕಾದಿ ದೇವತಾಯತನಾನಿ ಚ ।
ಅನ್ನಪ್ರದಾನಮಾರಾಮಃ ಪೂರ್ತಮಿತ್ಯಭಿಧೀಯತೇ ॥

ಅಗ್ನಿಹೋತ್ರ, ತಪಸ್ಸು, ಸತ್ಯನಿಷ್ಠೆ, ವೇದಾನುಪಾಲನೆ, ಆತಿಥ್ಯ, ವೈಶ್ವದೇವ–ಮುಂತಾದುವುಗಳಿಗೆ ಇಷ್ಟವೆಂದು ಹೆಸರು. ಬಾವಿ-ಕೆರೆ, ದೇವಾಲಯ, ಅನ್ನಸತ್ರ, ಉಪವನ–ಮುಂತಾದುವುಗಳ ನಿರ್ಮಾಣಕ್ಕೆ ಪೂರ್ತವೆಂದು ಹೇಳುತ್ತಾರೆ.

* * * *

## ಧನುರ್ವೇದದ ನಾಲ್ಕು ಪಾದಗಳು

**ಚತುಷ್ಪಾದಂ ದಶವಿಧಂ ಧನುರ್ವೇದಮರಿಂದಮಃ ।**
**ಅರ್ಜುನಾದ್ವೇದ ವೇದಜ್ಞಃ ಸಕಲಂ ದಿವ್ಯಮಾನುಷಮ್ ॥**

ಆದಿಪರ್ವ–ಅಧ್ಯಾಯ ೨೨೧ ಶ್ಲೋಕ ೭೨

**ಮನ್ತ್ರಮುಕ್ತಂ ಪಾಣಿಮುಕ್ತಂ ಮುಕ್ತಾಮುಕ್ತಂ ತಥೈವ ಚ ।**
**ಅಮುಕ್ತಂ ಚ ಧನುರ್ವೇದೇ ಚತುಷ್ಪಾಚ್ಛಸ್ತ್ರಮೀರಿತಮ್ ॥**

ಮಂತ್ರಮುಕ್ತ, ಪಾಣಿಮುಕ್ತ, ಮುಕ್ತಾಮುಕ್ತ, ಅಮುಕ್ತ–ಈ ನಾಲ್ಕು ಧನುರ್ವೇದದಲ್ಲಿನ ಅಸ್ತ್ರಪ್ರಯೋಗದ ನಾಲ್ಕು ಪಾದಗಳು.

ಉಪಸಂಹಾರವಿಲ್ಲದೇ ಮಂತ್ರಪೂರ್ವಕವಾಗಿ ಮಾಡುವ ಬಾಣಪ್ರಯೋಗಕ್ಕೆ ಮಂತ್ರಮುಕ್ತವೆಂದು ಹೆಸರು. ಧನುಸ್ಸಿಗೆ ಬಾಣವನ್ನು ಯೋಜಿಸಿ ಕೈಚಳಕದಿಂದ ಮಾಡುವ ಬಾಣಪ್ರಯೋಗಕ್ಕೆ ಪಾಣಿಮುಕ್ತವೆಂದು ಹೆಸರು. ಪ್ರಯೋಗ ಮತ್ತು ಉಪಸಂಹಾರಗಳೆರಡೂ ಇರುವುದಕ್ಕೆ ಮುಕ್ತಾ ಮುಕ್ತವೆಂದು ಹೆಸರು. ಪ್ರಯೋಗಮಾಡದೇ ಕೇವಲ ಮಂತ್ರಶಕ್ತಿಯಿಂದಲೇ ಸ್ಥಾಪಿತವಾಗಿರುವ ಧ್ವಜಾದಿಗಳಿಗೆ, ಕತ್ತಿ ಮುಂತಾದುವುಗಳಿಗೆ ಅಮುಕ್ತವೆಂದು ಹೆಸರು. ಸೂತ್ರ, ಶಿಕ್ಷಾ, ಪ್ರಯೋಗ ಮತ್ತು ರಹಸ್ಯ–ಇವುಗಳನ್ನೂ ಧನುರ್ವೇದದ ಚತುಷ್ಪಾದಗಳೆಂದು ಹೇಳುತ್ತಾರೆ.

## ಧನುರ್ವೇದದ ಹತ್ತು ಅಂಗಗಳು

**ಆದಾನಮಥ ಸಂಧಾನಂ ಮೋಕ್ಷಣಂ ವಿನಿವರ್ತನಮ್ ।**
**ಸ್ಥಾನಂ ಮುಷ್ಟಿಃ ಪ್ರಯೋಗಶ್ಚ ಪ್ರಾಯಶ್ಚಿತ್ತಾನಿ ಮಣ್ಡಲಮ್ ।**
**ರಹಸ್ಯಂ ಚೇತಿ ದಶಧಾ ಧನುರ್ವೇದಾಙ್ಗಮಿಷ್ಯತೇ ॥**

ಬತ್ತಳಿಕೆಯಿಂದ ಬಾಣವನ್ನು ತೆಗೆಯುವುದು ಆದಾನ. ತೆಗೆದ ಬಾಣವನ್ನು ಧನುಸ್ಸಿನಲ್ಲಿ ಯೋಜಿಸುವುದು ಸಂಧಾನ. ಬಿಲ್ಲಿನ ಶಿಂಜಿನಿಯನ್ನು ಸೆಳೆದು ಬಾಣಬಿಡುವುದು ಮೋಕ್ಷಣ. ಎದುರಾಳಿಯು ದುರ್ಬಲನಾಗಿದ್ದಲ್ಲಿ, ಶಸ್ತ್ರರಹಿತನಾಗಿದ್ದ ಪಕ್ಷದಲ್ಲಿ ಬಿಟ್ಟ ಬಾಣವನ್ನು ಹಿಂದಕ್ಕೆ ತೆಗೆದುಕೊಳ್ಳುವುದು

ವಿನಿವರ್ತನ. ಶರಸಂಧಾನಮಾಡುವ ಧನುಸ್ಸಿನ ಮಧ್ಯಭಾಗಕ್ಕೆ ಸ್ಥಾನವೆಂದು ಹೆಸರು. ಮೂರು ಅಥವಾ ನಾಲ್ಕು ಬೆರಳುಗಳ ಸಹಯೋಗಕ್ಕೆ ಮುಷ್ಟಿ ಎಂದು ಹೆಸರು. ಮಧ್ಯಮ ಮತ್ತು ಅಂಗುಷ್ಠಗಳಿಂದ ಬಾಣವನ್ನು ಸೆಳೆದುಬಿಡುವುದಕ್ಕೆ ಪ್ರಯೋಗವೆಂದು ಹೆಸರು. ಬಾಣಗಳ ಆಘಾತವನ್ನು ತಪ್ಪಿಸಿಕೊಳ್ಳಲು ಬಿಡುವ ಬಾಣಪ್ರಯೋಗಕ್ಕೆ ಪ್ರಾಯಶ್ಚಿತ್ತವೆಂದು ಹೆಸರು. ಚಕ್ರಾಕಾರವಾಗಿ ರಥವನ್ನು ತಿರುಗಿಸುತ್ತಾ ಬಾಣಪ್ರಯೋಗಮಾಡುವುದಕ್ಕೆ ಮಂಡಲವೆಂದು ಹೆಸರು. ಶಬ್ದವು ಬರುವ ಕಡೆಗೇ ಲಕ್ಷ್ಯವಿಟ್ಟು ಬಾಣಪ್ರಯೋಗಮಾಡುವುದಕ್ಕೆ ಅಥವಾ ಒಂದೇ ಕಾಲದಲ್ಲಿ ಅನೇಕರ ಮೇಲೆ ಬಾಣಪ್ರಯೋಗಮಾಡುವುದಕ್ಕೆ ರಹಸ್ಯವೆಂದು ಹೆಸರು.

* * * *

## ದ್ರೌಪದಿಯ ಪೂರ್ವಜನ್ಮದ ಮತ್ತೊಂದು ಕಥೆ

ನಾರಾಯಣೀ ಅಥವಾ ನಾಲಾಯನಿಯು ಮೌದ್ಗಲ್ಯರ ಪತ್ನಿಯು. ಆಕೆಯು ತನ್ನ ಪತಿಯನ್ನು ಅನನ್ಯಭಾವದಿಂದ ಸೇವಿಸಿ ಪತಿಯ ಅನುಗ್ರಹವನ್ನು ಪಡೆಯಲಾಗಿ ಮೌದ್ಗಲ್ಯರು ಐದು ದೇಹಗಳನ್ನು ಧರಿಸಿ ನಾಲಾಯನಿಯೊಂದಿಗೆ ಕ್ರೀಡಿಸಿ ಅವಳನ್ನು ಸಂತೋಷಪಡಿಸಿದರು. ಆಕೆಯೇ ಮತ್ತೊಂದು ಜನ್ಮದಲ್ಲಿ ದ್ರೌಪದಿಯಾಗಿ ಜನಿಸಿ ಐವರು ಪತಿಗಳನ್ನು ಮದುವೆಯಾದಳು.

* * * *

## ರಾಜಸೂಯಯಾಗ

'ರಾಜಾ ರಾಜಸೂಯೇನ ಸ್ವಾರಾಜ್ಯಕಾಮೋ ಯಜೇತ' ಎಂಬ ವಿಧಿವಾಕ್ಯವು 'ಸ್ವಾರಾಜ್ಯಕಾಮನೆಯುಳ್ಳವನು (ಮತ್ತೊಬ್ಬರಿಗೆ ಅಧೀನನಾಗದೆ ಚಕ್ರವರ್ತಿಯಾಗಬೇಕೆಂಬ ಕಾಮನೆಯುಳ್ಳವನು) ರಾಜಸೂಯಯಾಗವನ್ನು ಮಾಡಬೇಕು'–ಎಂದು ಬೋಧಿಸುತ್ತದೆ. 'ರಾಜಾ ಸೂಯತೇ ಅತ್ರ ಇತಿ ರಾಜಸೂಯಃ' ಎಂದರೆ 'ಸೋಮಾಭಿಷವವು ಇರುವ ಯಾಗ' ಅಥವಾ 'ರಾಜನು ಅಭಿಷೇಚಿಸಲ್ಪಡುವ ಯಾಗ' ರಾಜಸೂಯಯಾಗವೆನಿಸಿ ಕೊಳ್ಳುತ್ತದೆ. ಇದು ಬಹುಸಂಖ್ಯೆಯ ಇಷ್ಟಿ-ಪಶುಯಾಗಗಳಿಂದ ಕೂಡಿದ ಸೋಮಯಾಗವಾಗಿದೆ. ಇದರ ಕ್ರಮವು ಹೀಗಿದೆ :

ಮೊದಲು ಪವಿತ್ರಸಂಜ್ಞಕವಾದ ಅಗ್ನಿಷ್ಟೋಮ (ಸೋಮಯಾಗ.) ಅನಂತರ ದಿನಕ್ಕೆ ಒಂದರಂತೆ ಮಾಡುವ 'ಅನುಮತಿ' ಮೊದಲಾದ ಎಂಟು ಅಷ್ಟಯಾಗಗಳು. ಅನಂತರ ವೈಶ್ವದೇವ, ವರುಣಪ್ರಘಾಸ, ಸಾಕಮೇಧ, ಪಿತೃಯಜ್ಞ, ತ್ರ್ಯಂಬಕಹೋಮ ಮತ್ತು ಶುನಾಸೀರೀಯಗಳೆಂಬ ಹೆಸರುಳ್ಳ ಚಾತುರ್ಮಾಸ್ಯಯಾಗಗಳನ್ನು ಮಾಡಬೇಕು. ಅನಂತರ ಪೂರ್ಣಿಮೆಯಲ್ಲಿ ಇಂದ್ರತುರೀಯಯಾಗ, ಪಂಚೇಧ್ಮೀಯಹೋಮಗಳನ್ನು ಮಾಡಬೇಕು. ಅನಂತರ ದೇವಿಕಾಹವಿರ್ಯಾಗ, ಆಗ್ನಾವೈಷ್ಣವಾದಿಯಾಗಗಳು, ಅನಂತರ ಬ್ರಹ್ಮನೇ ಮೊದಲಾದವರ ಶಾಲೆಗಳಲ್ಲಿ ಮಾಡಬೇಕಾದ ರತ್ನಿಹವಿರ್ಯಾಗಗಳು. ಬಳಿಕ ಇಂದ್ರಯಾಗ, ಅಭಿಷೇಚನೀಯಾಗವಾದ ದೀಕ್ಷಣೀಯೇಷ್ಟಿ ; ಅನಂತರ ದೇವಸುವಹವಿರ್ಯಾಗ ; ಅನಂತರ ರಾಜನ ಅಭಿಷೇಕಾರ್ಥವಾಗಿ ವಿವಿಧಜಲಗ್ರಹಣ, ಜಲಸಂಸ್ಕಾರ, ದಿಗ್ವ್ಯಧ್ಯಾನ, ಮಾರುತಯಾಗ–ಇವುಗಳನ್ನು ಮಾಡಬೇಕು. ಬಳಿಕ ಹುಲಿಯ ಚರ್ಮದ ಮೇಲೆ ರಾಜನನ್ನು ಕುಳ್ಳಿರಿಸಿ, ಅಧ್ವರ್ಯುವು – 'ಸೋಮಸ್ಯ ತ್ವಾ ದ್ಯುಮ್ನೇನಾಭಿಷಿಂಚಾಮಿ'–ಮೊದಲಾದ ಮಂತ್ರಗಳಿಂದ ಅಭಿಷೇಚಿಸಬೇಕು. ಅನಂತರ ಪ್ರೇರಕಹೋಮ, ಪ್ರಾಜಾಪತ್ಯಹೋಮಗಳು. ಅನಂತರ ರಥಾರೋಹಣ, ಬಳಿಕ ವೈಶ್ವದೇವ್ಯಾಮಿಕ್ಷಾಯಾಗ, ಅವಭೃಥ. 'ಅಪಾಂ ನಪ್ತ್ರೇ' ಮುಂತಾದ ಮಂತ್ರಗಳಿಂದ ಮಾಡಬೇಕಾದ ಹೋಮಗಳು. ಅನಂತರ ಸಂಸೃಪಹವಿಸ್ಸುಗಳ ಯಾಗಗಳು, ದಶಪೇಯಸೋಮಯಾಗ, ಆಗ್ನೇಯಾದಿ ಪಂಚಹವಿರ್ಯಾಗಗಳು, ಆದಿತ್ಯಮಾರುತಪಶುಯಾಗಗಳು, ಆಶ್ವಿನಾದಿ ಯಾಗಗಳು, ಪ್ರಯುಜಹವಿಸ್ಸುಗಳು. ಬಳಿಕ ಕೇಶವಪನೀಯಾತಿರಾತ್ರ, ವ್ಯುಷ್ಟಿದ್ವಿರಾತ್ರ, ಅಗ್ನಿಷ್ಟೋಮಾತಿರಾತ್ರ, ಕ್ಷತ್ರಧೃತಿ ಮತ್ತು ತ್ರಿಷ್ಟೋಮಾಗ್ನಿಷ್ಟೋಮಸೋಮಯಾಗಗಳು. ಅನಂತರ ರಾಜಸೂಯಾಂಗ ವಾದ ಸೌತ್ರಾಮಣಿಯಾಗ–ಹೀಗೆ ಅನೇಕಯಾಗಗಳಿಂದ ಕೂಡಿರುವ ರಾಜಸೂಯವು ಸರ್ವೋತ್ಕೃಷ್ಟವಾಗಿದೆ.

## ಮಹಾಭಾರತದ ಪಠನ ಮತ್ತು ಶ್ರವಣಗಳ ಮಹಿಮೆ

ದ್ವೈಪಾಯನೋಷ್ಠಪುಟನಿಃಸೃತಮಪ್ರಮೇಯಂ
ಪುಣ್ಯಂ ಪವಿತ್ರಮಥ ಪಾಪಹರಂ ಶಿವಂ ಚ ।
ಯೋ ಭಾರತಂ ಸಮಧಿಗಚ್ಛತಿ ವಾಚ್ಯಮಾನಂ
ಕಿಂ ತಸ್ಯ ಪುಷ್ಕರಜಲೈರಭಿಷೇಚನೇನ ॥೧॥

ಭಗವಾನ್ ಕೃಷ್ಣದ್ವೈಪಾಯನರ ಮುಖಾರವಿಂದದಿಂದ ಹೊರಟಿರುವ ಈ ಮಹಾಭಾರತವು ಅಪ್ರಮೇಯವಾದುದು, ಪುಣ್ಯಪ್ರದವಾದುದು, ಪವಿತ್ರತಮವಾದುದು. ಸಕಲಪಾಪಗಳನ್ನೂ ಹೋಗಲಾಡಿಸುವ ಪ್ರಭಾವವುಳ್ಳದು ಮತ್ತು ಮಂಗಳಕರವಾದುದು. ಯಾರು ಈ ಮಹಾಭಾರತದ ಕಥೆಯನ್ನು ಕೇಳಿ ಅದನ್ನು ಮನನಮಾಡುತ್ತಾರೆಯೋ–ಅಂತಹವರಿಗೆ ಪುಷ್ಕರಾದಿ ತೀರ್ಥಸ್ನಾನಾದಿಗಳ ಆವಶ್ಯಕತೆಯೇನಿದೆ?

ಯೋ ಗೋಶತಂ ಕನಕಶೃಙ್ಗಮಯಂ ದದಾತಿ
ವಿಪ್ರಾಯ ವೇದವಿದುಷೇ ಸುಬಹುಶ್ರುತಾಯ ।
ಪುಣ್ಯಾಂ ಚ ಭಾರತಕಥಾಂ ಸತತಂ ಶೃಣೋತಿ
ತುಲ್ಯಂ ಫಲಂ ಭವತಿ ತಸ್ಯ ಚ ತಸ್ಯ ಚೈವ ॥೨॥

ಬಹುಶ್ರುತನಾದ, ವೇದ-ವೇದಾಂಗಪಾರಂಗತನಾದ ಬ್ರಾಹ್ಮಣನಿಗೆ ಸ್ವರ್ಣದ ಆವರಣವುಳ್ಳ ಶೃಂಗಗಳಿಂದ ಕೂಡಿರುವ ನೂರು ಗೋವುಗಳನ್ನು ದಾನಮಾಡುವವನಿಗೆ ಯಾವ ಪುಣ್ಯವು ಲಭ್ಯವಾಗುತ್ತದೆಯೋ– ತತ್ಸಮವಾದ ಪುಣ್ಯವು ಸತತವಾಗಿ ಮಹಾಭಾರತಕಥೆಯನ್ನು ಶ್ರವಣ ಮಾಡುವವನಿಗೂ ಲಭಿಸುತ್ತದೆ.

(ಮಹಾಭಾರತದ ಸ್ವರ್ಗಾರೋಹಣಪರ್ವದಿಂದ ಉದ್ಧೃತವಾದುದು.)

